# ಬೆಳಗಾವಿ : ಸಾಂಸ್ಕೃತಿಕ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯದ ಭಾಷಾನಿಕಾಯ(ಕನ್ನಡ)ಕ್ಕೆ ಸಾದರಪಡಿಸಿದ
ಪಿಎಚ್.ಡಿ. ಮಹಾಪ್ರಬಂಧ

ಸಂಶೋಧಕರು
ರವೀಂದ್ರ ವ್ಹಿ. ಚಿಕ್ಕಮಠ

ಮಾರ್ಗದರ್ಶಕರು
ಡಾ. ಶ್ರೀರಾಮ ಇಟ್ಟಣ್ಣವರ





ಬಿ.ಎಲ್.ಡಿ.ಇ. ಸಂಸ್ಥೆಯ
ವಚನಪಿತಾಮಹ ಡಾ. ಫ.ಗು. ಹಳಕಟ್ಟಿ
ಸಂಶೋಧನ ಕೇಂದ್ರ, ವಿಜಾಪುರ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬

೨೦೧೨

# ಬೆಳಗಾವಿ : ಸಾಂಸ್ಕೃತಿಕ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯದ ಭಾಷಾನಿಕಾಯ(ಕನ್ನಡ)ಕ್ಕೆ ಸಾದರಪಡಿಸಿದ
ಪಿಎಚ್.ಡಿ. ಮಹಾಪ್ರಬಂಧ

ಸಂಶೋಧಕರು
ರವೀಂದ್ರ ವ್ಹಿ. ಚಿಕ್ಕಮಠ

ಮಾರ್ಗದರ್ಶಕರು
ಡಾ. ಶ್ರೀರಾಮ ಇಟ್ಟಣ್ಣವರ




ಬಿ.ಎಲ್.ಡಿ.ಇ. ಸಂಸ್ಥೆಯ
ವಚನಪಿತಾಮಹ ಡಾ. ಫ.ಗು. ಹಳಕಟ್ಟಿ
ಸಂಶೋಧನ ಕೇಂದ್ರ, ವಿಜಾಪುರ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬

೨೦೧೨

# ದೃಢೀಕರಣ ಪತ್ರ

ಶ್ರೀ ರವೀಂದ್ರ ವ್ಹಿ. ಚಿಕ್ಕಮಠ ಅವರು ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ **"ಬೆಳಗಾವಿ: ಸಾಂಸ್ಕೃತಿಕ ಅಧ್ಯಯನ"** ಎಂಬ ಮಹಾಪ್ರಬಂಧವು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಒಂದು ಮೂಲ ಸಂಶೋಧನ ಮಹಾಪ್ರಬಂಧವಾಗಿದೆ.

ಈ ಮಹಾಪ್ರಬಂಧವು ಇಡಿಯಾಗಿ ಇಲ್ಲವೇ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತಿದ್ದೇನೆ.

ಸ್ಥಳ: ಬೀಳಗಿ

ದಿನಾಂಕ: ೨೫-೨-೨೦೧೨

ಮಾರ್ಗದರ್ಶಕರು

ಡಾ. ಶ್ರೀರಾಮ ಇಟ್ಟಣ್ಣವರ

# ಪ್ರಮಾಣ ಪತ್ರ

**"ಬೆಳಗಾವಿ : ಸಾಂಸ್ಕೃತಿಕ ಅಧ್ಯಯನ"** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಡಾ. ಶ್ರೀರಾಮ ಇಟ್ಟಣ್ಣವರ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದ್ದು, ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಡಾ. ಫ.ಗು. ಹಳಕಟ್ಟಿ ಸಂಶೋಧನ ಕೇಂದ್ರ, ವಿಜಾಪುರದಿಂದ ಪಿಎಚ್.ಡಿ ಪದವಿಗಾಗಿ ಸಲ್ಲಿಸಲಾಗಿದೆ.

ಈ ಮಹಾಪ್ರಬಂಧವು ಇಡಿಯಾಗಿ ಇಲ್ಲವೇ ಇದರಲ್ಲಿನ ಯಾವುದೇ ಭಾಗವಾಗಲಿ ಎಲ್ಲಿಯೂ ಪ್ರಕಟವಾಗಿಲ್ಲವೆಂದು ಘೋಷಿಸುತ್ತೇನೆ.

**ಸಂಶೋಧಕರು**

**ರವೀಂದ್ರ ವ್ಹಿ. ಚಿಕ್ಕಮಠ**

**ಸ್ಥಳ:** ವಿಜಾಪುರ

**ದಿನಾಂಕ:** ೨೮-೦೨-೨೦೧೨

# ನಿವೇದನೆ

'ಬೆಳಗಾವಿ ಸಾಂಸ್ಕೃತಿಕ ಅಧ್ಯಯನ' ಸಂಶೋಧನ ಮಹಾಪ್ರಬಂಧವನ್ನು ವಿಜಾಪುರದ ಬಿ.ಎಲ್.ಡಿ. ಸಂಸ್ಥೆಯ ಡಾ. ಫ.ಗು. ಹಳಕಟ್ಟಿ ಸಂಶೋಧನ ಕೇಂದ್ರದ ಮೂಲಕ ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಲ್ಲಿಸುತ್ತಿರುವ ಈ ಸಂದರ್ಭದಲ್ಲಿ ನನ್ನ ಅಧ್ಯಯನ ಸರಿಯಾದ ದಾರಿಯಲ್ಲಿ ನಡೆಯುವಂತೆ ಪ್ರೇರಣೆ, ಪ್ರೋತ್ಸಾಹ, ಮಾರ್ಗದರ್ಶನ ನೀಡಿದ ಹಲವಾರು ಮಹನೀಯರನ್ನು ನೆನೆಯುವುದು ನನ್ನ ಆದ್ಯ ಕರ್ತವ್ಯವಾಗಿದೆ.

ನನ್ನ ಅಧ್ಯಯನಕ್ಕೆ ಮಾರ್ಗದರ್ಶಕರಾಗಿ ಡಾ. ಶ್ರೀರಾಮ ಇಟ್ಟಣ್ಣವರ ಗುರುಗಳು ದೊರೆತದ್ದು ನನಗೆ ಅಭಿಮಾನದ ವಿಷಯ. ಅವರು ನೀಡಿದ ಮಾರ್ಗದರ್ಶನಕ್ಕಾಗಿ ಅವರಿಗೆ ಕೃತಜ್ಞನಾಗಿದ್ದೇನೆ. ಅವರ ಪ್ರೋತ್ಸಾಹ ಅವಿಸ್ಮರಣೀಯ. ಬೆಳಗಾವಿ ಮೇಲಿನ ಅವರ ಪ್ರೀತಿಯೇ ನನಗೆ ಸ್ಫೂರ್ತಿ. ಅವರ ಜ್ಞಾನವೇ ಮಾರ್ಗಸೂಚಿಯಾಯಿತು. ಹೆಜ್ಜೆ ಹೆಜ್ಜೆಗೂ ಸೂಕ್ತ ಸಲಹೆಗಳನ್ನು ನೀಡಿ ತಮ್ಮ ಬಹುಪಾಲು ವೇಳೆಯನ್ನು ಇದಕ್ಕಾಗಿ ವಿನಿಯೋಗಿಸಿದ್ದಾರೆ. ಒಂದೊಂದು ವಿಷಯಗಳನ್ನು ದಿನಗಟ್ಟಲೆ ಚರ್ಚಿಸಿ ನನಗೆ ಮನವರಿಕೆ ಮಾಡಿದ್ದಾರೆ. ಅವರಿಗೆ ಎಷ್ಟು ಕೃತಜ್ಞತೆಗಳನ್ನು ಅರ್ಪಿಸಿದರು ಕಡಿಮೆಯೇ.

ನನ್ನ ಸಂಶೋಧನೆಗೆ ಅವಕಾಶವನ್ನು ಕಲ್ಪಿಸಿದ ಬಿ.ಎಲ್.ಡಿ. ಸಂಸ್ಥೆಯ ಡಾ. ಫ.ಗು. ಹಳಕಟ್ಟಿ ಸಂಶೋಧನ ಕೇಂದ್ರದ ಎಲ್ಲ ಪದಾಧಿಕಾರಿಗಳಿಗೆ ನಾನು ಚಿರಋಣಿಯಾಗಿದ್ದೇನೆ. ಬಿ.ಎಲ್.ಡಿ. ಸಂಸ್ಥೆಯ ಅಧ್ಯಕ್ಷರಾದ ಸನ್ಮಾನ್ಯ ಶ್ರೀ ಎಂ. ಬಿ. ಪಾಟೀಲರು ವಿದ್ಯಾರ್ಥಿಗಳಿಗೆ ಯಾವುದೇ ಅಡೆತಡೆಗಳು ಬರದ ಹಾಗೆ ಅಲ್ಪ ಅವಧಿಯಲ್ಲಿಯೇ ಎಲ್ಲ ಸೌಲಭ್ಯಗಳನ್ನು ಒದಗಿಸಿ ಅಧ್ಯಯನಕ್ಕೆ ಸಹಕಾರ ಒದಗಿಸಿದರು. ಅವರ ಶಿಕ್ಷಣ ಪ್ರೇಮಕ್ಕೆ ನಾನು ಚಿರಋಣಿಯಾಗಿದ್ದೇನೆ. ಶೈಕ್ಷಣಿಕ ಸಲಹಾ ಸಮಿತಿಯ ಅಧ್ಯಕ್ಷರಾದ ಸನ್ಮಾನ್ಯ ಶ್ರೀ ಶಿವಯೋಗಿ ಸಿ. ತಂಬಾಕಿ ಅವರಿಗೆ, ಹಿರಿಯ ವಿದ್ವಾಂಸರಾದ ಶ್ರೀ ಹಿಪ್ಪರಗಿ ಗುರುಗಳಿಗೆ, ಸಂಶೋಧನ ಕೇಂದ್ರದ ಸಂಯೋಜನಾಧಿಕಾರಿಗಳಾದ ಡಾ. ಎಂ.ಎಸ್. ಮದಬಾವಿ ಗುರುಗಳಿಗೆ ಹಾಗೂ ಅಧ್ಯಯನ ಕೇಂದ್ರದ ಎಲ್ಲ ಹಿರಿಯ ಮಾರ್ಗದರ್ಶಕರಿಗೆ ನನ್ನ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಹಂಪಿ ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳು ಹಾಗೂ ನನ್ನ ವಿದ್ಯಾಗುರುಗಳಾದ ಸನ್ಮಾನ್ಯ ಡಾ. ಎ. ಮುರಿಗೆಪ್ಪ ಅವರು ನೀಡಿದ ಸಲಹೆ–ಸಹಕಾರಕ್ಕೆ ನಾನು ಕೃತಜ್ಞನಾಗಿದ್ದೇನೆ. ಅಧ್ಯಯನಾಂಗದ ನಿರ್ದೇಶಕರಾದ ಡಾ. ಎಫ್.ಟಿ. ಹಳ್ಳಿಕೇರಿಯವರು ಮೇಲಿಂದ ಮೇಲೆ ವಿಜಾಪುರಕ್ಕೆ ಬಂದು ನೀಡುತ್ತಿದ್ದ ಸಲಹೆ–ಸೂಚನೆ–ಮಾರ್ಗದರ್ಶನವು ನನ್ನ ಸಂಶೋಧನಕಾರ್ಯಕ್ಕೆ ತೃಪ್ತಿಯನ್ನು ನೀಡಿದೆ. ಅವರಿಗೆ ನನ್ನ ಕೃತಜ್ಞತೆಗಳನ್ನು ಅರ್ಪಿಸುತ್ತಿದ್ದೇನೆ.

ನನ್ನ ಸಂಶೋಧನ ಕಾರ್ಯದಲ್ಲಿ ನೆರವಾದ ಆತ್ಮೀಯರಾದ ನನ್ನ ಸಹೋದ್ಯೋಗಿಗಳೂ ಆದ ಡಾ. ಹನುಮಂತ ಮೇಲಿನಮನಿ ಅವರನ್ನು ನಾನೆಂದು ಮರೆಯುವುದಿಲ್ಲ. ಅವರ ಸಹಕಾರ, ಸ್ಫೂರ್ತಿ, ಸಲಹೆಗಳು ನನ್ನ ಸಂಶೋಧನ ಕಾರ್ಯವನ್ನು ಪೂರ್ಣಗೊಳಿಸಿದವು. ಸಂದರ್ಶನ, ಛಾಯಾಚಿತ್ರ ಮುಂತಾದ ಕಾರ್ಯದಲ್ಲಿ ನನಗೆ ಬೆಂಬಲವಾಗಿ ನಿಂತರು. ಜೊತೆಗೆ ಆತ್ಮೀಯರಾದ ಡಾ. ಸರಸ್ವತಿದೇವಿ ಶಂ. ಭಗವತಿಯವರು ಸಹಕಾರ ನೀಡಿದ್ದು ನನ್ನ ಮಹಾಪ್ರಬಂಧ ಅಚ್ಚುಕಟ್ಟಾಗಿ ಮೂಡಿಬರಲು ಕಾರಣವಾಯಿತು. ಅವರಿಗೆ ನನ್ನ ಅನಂತ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ನನ್ನ ಸಂಶೋಧನೆಗೆ ಬೇಕಾದ ಆಕರ ಗ್ರಂಥಗಳನ್ನೆಲ್ಲ ಪೂರೈಸಿ, ನನಗೆ ಸದಾ ಸ್ಫೂರ್ತಿಯನ್ನು ತುಂಬಿದ ಲಿಂಗರಾಜ ಮಹಾವಿದ್ಯಾಲಯದ ಗ್ರಂಥಪಾಲಕರಾದ ಶ್ರೀ ಎಸ್.ಕೆ. ಅಂಗಡಿ ಅವರಿಗೆ ನನ್ನ ಅನಂತ ಕೃತಜ್ಞತೆಗಳು.

ನಾನು ಮಾರ್ಗದರ್ಶಕರ ಹತ್ತಿರ ಬೀಳಗಿಗೆ ಹೋದಾಗಲೆಲ್ಲ ನನ್ನನ್ನು ತಮ್ಮ ಕುಟುಂಬದ ಸದಸ್ಯರಂತೆ ಪ್ರೀತಿಯ ಆದರ ಅಥಿತ್ಯವನ್ನು ನೀಡಿದ ಶ್ರೀಮತಿ ಸರೋಜ ಇಟ್ಟಣ್ಣವರ ಹಾಗೂ ಸಹೋದರಿ ವಿಜಯಶ್ರೀ ಅವರಿಗೆ ನನ್ನ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಬಾಲ್ಯದಿಂದಲೂ ನನ್ನನ್ನು ಪೋಷಿಸಿ ವಿದ್ಯೆ ನೀಡಿದ ನನ್ನ ಹಿರಿಯ ಸಹೋದರನಾದ ಶ್ರೀ ಮಹಾಂತೇಶ ಅಣ್ಣ ಹಾಗೂ ಅತ್ತಿಗೆ ಶಿವಲೀಲಾ ಅವರಿಗೆ, ನನಗೆ ಆರ್ಶಿರ್ವಾದ ನೀಡಿ ಬೆಂಬಲಾಗಿ ನಿಂತ ನನ್ನ ತಾಯಿ, ತಾಳ್ಮೆಯಿಂದಲೆ ಸಹಕಾರ ನೀಡಿದ ನನ್ನ ಮಡದಿ ಸುನಂದಾ ಹಾಗೂ ಮಗಳು ಶ್ರೀಗೌರಿ, ಮಗ ವೀರೇಶನಿಗೆ ನಾನು ಚಿರಋಣಿಯಾಗಿದ್ದೇನೆ.

ಸಂದರ್ಶನ ನೀಡಿದ ಎಲ್ಲ ಮಹನೀಯರಿಗೆ, ಮಾಹಿತಿ ಒದಗಿಸಿದ ಪತ್ರಿಕೆಗಳ ಸಂಪಾದಕರಿಗೆ, ಸ್ಫೂರ್ತಿ ಸಹಕಾರ ನೀಡಿದ ಲಿಂಗರಾಜ ಮಹಾವಿದ್ಯಾಲಯದ ಕನ್ನಡ ವಿಭಾಗದ ಮುಖ್ಯಸ್ಥರಾದ ಮತ್ತು ಗುರುಮಾತೆಯರಾದ ಡಾ. ಕೆ.ಆರ್. ಸಿದ್ದಗಂಗಮ್ಮ ಅವರಿಗೆ, ನನಗೆ ಸ್ಫೂರ್ತಿ ಆಶೀರ್ವಾದ ನೀಡಿದ ಹಿರಿಯ ಪ್ರಾಧ್ಯಾಪಕರಾದ ಶ್ರೀ ಎಂ.ವ್ಹಿ. ಬಾಗಿ ಗುರುಗಳಿಗೆ, ಡಾ. ಶಿವಾನಂದ ಮೂಲಿಮನಿ ಗುರುಗಳಿಗೆ, ಸಹೋದ್ಯೋಗಿ ಡಾ. ಮಹೇಶ ಗುರನಗೌಡರ, ಡಾ. ಸಾವುಕಾರ ಕಾಂಬಳೆ, ಎಸ್.ಬಿ. ಬನ್ನಿಮಟ್ಟಿ, ಶಶಿ ತಾರದಾಳೆ, ಶ್ರೀ ಶಶಿಧರ ಹೊಸಕೋಟೆ, ಆತ್ಮೀಯನಾದ ವಿನಾಯಕ, ಹಳಕಟ್ಟಿ ಸಂಶೋಧನ ಕೇಂದ್ರದ ಶ್ರೀಮತಿ ಕುಲಕರ್ಣಿ, ಶ್ರೀಮತಿ ಉಮಾ ಅಕ್ಕಿ, ಪ್ರೊ. ನಾಲ್ವತ್ವಾಡ, ಅವರಿಲ್ಲರ ಸಹಾಯ ಸಹಕಾರದಿಂದ ನನ್ನ ಸಂಶೋಧನ ಕಾರ್ಯವು ಪೂರ್ಣಗೊಳ್ಳಲು ಸಾಧ್ಯವಾಯಿತು. ಇವರೆಲ್ಲರಿಗೂ ನಾನು ಚಿರಋಣಿಯಾಗಿದ್ದೇನೆ. ಅಲ್ಲದೆ ಸಂಶೋಧನ ಕಾರ್ಯಕ್ಕೆ ನೆರವಾದ ಎಲ್ಲ ಆತ್ಮೀಯರಿಗೂ, ಗುರು ಹಿರಿಯರಿಗೂ ನನ್ನ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

**ರವೀಂದ್ರ ವ್ಹಿ. ಚಿಕ್ಕಮಠ**

# ಪರಿವಿಡಿ


ಅಧ್ಯಾಯ : ಒಂದು

ಅಧ್ಯಯನದ ಉದ್ದೇಶ–ಸ್ವರೂಪ–ವ್ಯಾಪ್ತಿ ೧

ಅಧ್ಯಾಯ : ಎರಡು

ಇತಿಹಾಸ ಮತ್ತು ಆಡಳಿತ ೮

೧. ಪ್ರಾಕೃತಿಕ ಹಿನ್ನೆಲೆ

೨. ನಾಮ ವಿವೇಚನೆ

೩. ಪ್ರಾಗೈತಿಹಾಸಿಕ

೪. ಪ್ರಾಚೀನ ಇತಿಹಾಸ

೫. ಮಧ್ಯಕಾಲೀನ ಇತಿಹಾಸ

೬. ಆಧುನಿಕ ಇತಿಹಾಸ(ಬ್ರಿಟಿಷರಿಂದ ನಗರಸಭೆಯವರೆಗೆ)

೭. ಮಿಲಿಟರಿ ನೆಲೆ

ಅಧ್ಯಾಯ : ಮೂರು ೫೨

ಬೆಳಗಾವಿ : ಸ್ವಾತಂತ್ರ್ಯ ಹೋರಾಟ ಹಾಗೂ ಏಕೀಕರಣ ಚಳುವಳಿ

೧. ಸ್ವಾತಂತ್ರ್ಯ ಹೋರಾಟ

೨. ಏಕೀಕರಣ ಚಳುವಳಿ

ಅಧ್ಯಾಯ : ನಾಲ್ಕು ೧೧೬
**ಬೆಳಗಾವಿ ನಗರ ರಚನೆ**
೧. ನಿರ್ಮಾಣದ ಹಂತ
೨. ಬೆಳವಣಿಗೆಯ ಹಂತ
ಅಧ್ಯಾಯ : ಐದು ೧೪೦
**ಕಲೆಗಳು**
೧. ವಾಸ್ತುಶಿಲ್ಪ
೨. ಚಿತ್ರಕಲೆ
೩. ಸಂಗೀತ
ಅಧ್ಯಾಯ : ಆರು ೧೮೮
**ಧಾರ್ಮಿಕ ಪರಂಪರೆ**
೧. ಧರ್ಮ-ಜಾತಿ-ಜನಾಂಗ
೨. ಮಠ-ಬಸದಿ-ಮಸೀದಿ-ಚರ್ಚ್
೩. ಸಂಪ್ರದಾಯ-ಆಚರಣೆಗಳು
೪. ಜಾತ್ರೆ-ಮಹೋತ್ಸವಗಳು
ಅಧ್ಯಾಯ : ಏಳು ೨೫೦
**ಸಾಮಾಜಿಕ ವ್ಯವಸ್ಥೆ**
೧. ಮನೆ, ಬಾವಿಗಳು
೨. ವೇಷ-ಭೂಷಣ
೩. ಊಟ-ಉಪಚಾರ
೪. ವಾಣಿಜ್ಯ ಉದ್ಯಮ
೫. ಸಂಕರ ಸಂಸ್ಕೃತಿ
೬. ನಗರ ಜಾನಪದ

ಅಧ್ಯಾಯ : ಎಂಟು ೩೦೩

ಭಾಷೆ–ಸಾಹಿತ್ಯ–ಸಂವಹನ

ಅ. ಭಾಷೆ :

೧. ಸಾಮರಸ್ಯ

೨. ಸಮಸ್ಯೆ(ಗಡಿ ಸಮಸ್ಯೆ: ಮಹಾಜನ ಆಯೋಗ)

ಆ. ಸಾಹಿತ್ಯ:

೧. ಪ್ರಾಚೀನ ಸಾಹಿತ್ಯ

೨. ಜನಪದ ಸಾಹಿತ್ಯ

೩. ಹೊಸಗನ್ನಡ ಸಾಹಿತ್ಯ

ಇ. ಸಂವಹನ:

೧. ಮುದ್ರಣಾಲಯಗಳು

೨. ಪ್ರಕಾಶನ ಸಂಸ್ಥೆಗಳು

೩. ಪತ್ರಿಕೆಗಳು

೪. ಸಂಘ–ಸಂಸ್ಥೆಗಳು

೫. ಸಾಹಿತ್ಯ ಸಮ್ಮೇಳನಗಳು

ಅಧ್ಯಾಯ : ಒಂಬತ್ತು ೪೩೨

ಶಿಕ್ಷಣ

೧. ಪ್ರಾಚೀನ ಕಾಲದ ಶಿಕ್ಷಣ

೨. ಬ್ರಿಟಿಷ್ ಕಾಲದ ಶಿಕ್ಷಣ

೩. ಆಧುನಿಕ ಕಾಲದ ಶಿಕ್ಷಣ

ಅಧ್ಯಾಯ : ಹತ್ತು ೪೭೪

ರಂಗಭೂಮಿ

೧. ಜನಪದ ರಂಗಭೂಮಿ

೨. ವೃತ್ತಿ ರಂಗಭೂಮಿ

೩. ಹವ್ಯಾಸಿ ರಂಗಭೂಮಿ

ಅಧ್ಯಾಯ : ಹನ್ನೊಂದು ೫೦೫

ಸಮಾರೋಪ

ಅನುಬಂಧ ೫೧೫

೧. ಛಾಯಾಚಿತ್ರಗಳು

೨. ನಕ್ಷೆಗಳು

೩. ವಕ್ಷ್ರಗಳು

೪. ಗ್ರಂಥಋಣ



## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ-ಸ್ವರೂಪ-ವ್ಯಾಪ್ತಿ

ಒಂದು ಪ್ರದೇಶದ ಚರಿತ್ರೆಯು ಅಲ್ಲಿಯ ಜನಸಮಷ್ಠಿಯ ಚರಿತ್ರೆಯಾಗಿರುತ್ತದೆ. ಅಲ್ಲಿ ಆಳ್ವಿಕೆ ನಡೆಸಿದ ರಾಜರ ಇತಿಹಾಸ, ಆ ನೆಲೆಯ ಜನಪದರ ಆಶೋತ್ತರಗಳು, ಧಾರ್ಮಿಕ ಆಚರಣೆಗಳು, ಸಂಪ್ರದಾಯಗಳು, ವೇಷಭೂಷಣ, ಊಟ-ಉಪಚಾರ ಮುಂತಾದವುಗಳನ್ನು ಒಳಗೊಂಡ ಒಂದು ವಿಶಿಷ್ಟವಾದ ಸಂಸ್ಕೃತಿ ನಿರ್ಮಾಣಗೊಂಡಿರುತ್ತದೆ. ಇಂತಹ ಸಂಸ್ಕೃತಿಯನ್ನು ದೇಶದ ಬೇರೆ ಬೇರೆ ಭಾಗಗಳಲ್ಲಿ ಗುರುತಿಸಬಹುದಾಗಿದೆ. ಅಂತಹುಗಳಲ್ಲಿ ಬೆಳಗಾವಿಯ ಸಂಸ್ಕೃತಿಯು ವಿಶ್ಠಿಷ್ಟವಾಗಿ ಗುರುತಿಸಲ್ಪಡುತ್ತದೆ. ಕರ್ನಾಟಕದ ಸಂಸ್ಕೃತಿಯನ್ನು ರೂಪಿಸಿದ ಕೆಲವು ಪ್ರಮುಖ ಪಟ್ಟಣಗಳ ಸಾಲಿನಲ್ಲಿ ಬೆಳಗಾವಿಯೂ ಒಂದಾಗಿದೆ. ಗಡಿಭಾಗದ ಮರಾಠಿ, ಕೊಂಕಣಿ ಸಂಸ್ಕೃತಿಯ ಪ್ರಭಾವದಿಂದ ಇದು ವೈಶಿಷ್ಟ್ಯಯನ್ನು ಪಡೆದುಕೊಂಡಿದೆ. ಇದನ್ನೆಲ್ಲ ಪ್ರಸ್ತುತ 'ಬೆಳಗಾವಿ : ಸಾಂಸ್ಕೃತಿಕ ಅಧ್ಯಯನ' ಎಂಬ ಮಹಾಪ್ರಬಂಧದಲ್ಲಿ ವಿಶ್ಲೇಷಿಸಲಾಗಿದೆ.

**ಅಧ್ಯಯನದ ಉದ್ದೇಶ:** ಬೆಳಗಾವಿ ಪ್ರಾಚೀನ ಕಾಲದಿಂದಲೂ ಐತಿಹಾಸಿಕ ಮಹತ್ವವನ್ನು ಪಡೆದುಕೊಂಡ ನಗರ. ಈ ಪ್ರಾಚೀನತೆಯ ಜೊತೆಗೆ ಬಹುಸಂಸ್ಕೃತಿಯನ್ನೂ ಹೊಂದಿ ಸುಂದರ ಸಾಂಸ್ಕೃತಿಕ ನಗರವಾಗಿದೆ. ಹಲವಾರು ಭಾಷೆಗಳು, ಹತ್ತಾರು ಧರ್ಮಗಳು, ನೂರಾರು ಸಂಪ್ರದಾಯ-ಆಚರಣೆಗಳು ಈ ನೆಲವನ್ನು ಸಾಂಸ್ಕೃತಿಕವಾಗಿ ಗಟ್ಟಿಗೊಳಿಸಿವೆ. ಗೋವಾ-ಕರ್ನಾಟಕ-ಮಹಾರಾಷ್ಟ್ರ ಈ ಮೂರು ರಾಜ್ಯಗಳ ಸಾಂಸ್ಕೃತಿಕ 'ಆದಾನ-ಪ್ರಧಾನ' ಬೆಳಗಾವಿಯ ಮೂಲಕ ನಡೆಯುತ್ತಿದೆ. ಕ್ರಿ.ಶ. ಪೂರ್ವ ೨ನೆಯ ಶತಮಾನದ ಶಾತವಾಹನರ ಕಾಲದಿಂದ ಬ್ರಿಟಿಷರ ವರೆಗಿನ ರಾಜರ ಆಳ್ವಿಕೆ, ದೇಶದ ಗಮನವನ್ನು ಸೆಳೆದ ಸ್ವಾತಂತ್ರ್ಯ ಹೋರಾಟ ಏಕೀಕರಣ ಚಳುವಳಿ, ಕಲೆ ವಾಸ್ತುಶಿಲ್ಪದ ಉತ್ಕೃಷ್ಟ ಕಲಾಕೃತಿಗಳು, ವಿಶಿಷ್ಟವಾದ ಮನೆಗಳು, ವಿಭಿನ್ನವಾದ ವೇಷ-ಭೂಷಣಗಳು, ತರತರಹದ ತಿಂಡಿ ತಿನಸುಗಳು, ವಾಣಿಜ್ಯ ಉದ್ಯಮಗಳು, ಸಂಘ-ಸಂಸ್ಥೆಗಳು ಮುಂತಾದವುಗಳಿಂದ ಬೆಳಗಾವಿಯು ಪ್ರತ್ಯೇಕವಾಗಿ ಎದ್ದುಕಾಣುತ್ತದೆ. ಈ ಹಿನ್ನಲೆಯಲ್ಲಿ ಬೆಳಗಾವಿಯ ಸಾಂಸ್ಕೃತಿಕ ಅಧ್ಯಯನವು ಒಂದು ವಿಶಿಷ್ಟ ಸಂಸ್ಕೃತಿಯ ಪರಿಚಯಕ್ಕೆ

ಕಾರಣವಾಗುತ್ತದೆಂಬ ಉದ್ದೇಶವನ್ನಿಟ್ಟುಕೊಂಡು ಈ ಸಂಶೋಧನ ಕಾರ್ಯವನ್ನು ಕೈಕೊಳ್ಳಲಾಗಿದೆ. ಎರಡನೆಯದಾಗಿ ಸ್ವಾತಂತ್ರ್ಯ ಚಳುವಳಿ, ಕರ್ನಾಟ ಏಕೀಕರಣ ಹೋರಾಟಗಳಲ್ಲಿ ಈ ನೆಲದವರು ಕೊಟ್ಟ ಕಾಣಿಕೆ ಬಹುದೊಡ್ಡದು; ಸಂಗಡವೇ ಬೆಳಗಾವಿಯ ಮುದ್ರಣಾಲಯಗಳು, ಪ್ರಕಾಶನ ಸಂಸ್ಥೆಗಳು, ಪತ್ರಿಕೆಗಳು ಕರ್ನಾಟಕ ಸಂಸ್ಕೃತಿಯನ್ನು ರೂಪಿಸುವಲ್ಲಿ ಎಷ್ಟೋ ಸಹಾಯಕವಾಗಿವೆ. ಇವುಗಳನ್ನೆಲ್ಲ ವಿಶ್ಲೇಷಿಸುವ ಮೂಲಕವಾಗಿ ಬೆಳಗಾವಿ ಕರ್ನಾಟಕ ಸಂಸ್ಕೃತಿಯಲ್ಲಿ ದಾಖಲುಗೊಳ್ಳಬೇಕು ಎಂದು ಉದ್ದೇಶದಿಂದಲೂ ಈ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.

**ಅಧ್ಯಯನದ ಸ್ವರೂಪ:** ಪ್ರಸ್ತುತ ಅಧ್ಯಯನದಲ್ಲಿ ಪ್ರಧಾನವಾಗಿ ಬೆಳಗಾವಿಯ ಇತಿಹಾಸ, ನಗರ ರಚನೆ, ಕಲೆ, ವಾಸ್ತುಶಿಲ್ಪ, ಭಾಷೆ, ಸಾಹಿತ್ಯ ಶಿಕ್ಷಣ, ಮುದ್ರಣಾಲಯಗಳು, ಪತ್ರಿಕೆಗಳು, ರಂಗಭೂಮಿ, ಸಂಘ–ಸಂಸ್ಥೆ ಮುಂತಾದ ವಿಷಯುಗಳನ್ನು ಕುರಿತು ಸಂಶೋಧನೆಯನ್ನು ಕೈಕೊಳ್ಳಲಾಗಿದೆ. ಈ ಅಧ್ಯಯನದಲ್ಲಿ ಕ್ಷೇತ್ರಕಾರ್ಯ, ಶಾಸನ, ಆಕರ ಕೃತಿಗಳ ಅಧ್ಯಯನದ ಮೂಲಕ ವಿಷಯವನ್ನು ಸಂಗ್ರಹಿಸಲಾಗಿದೆ. ದೇವಾಲಯಗಳು, ಸಂಪ್ರದಾಯ–ಆಚರಣೆಗಳು, ವೇಷ–ಭೂಷಣಗಳು, ಊಟ–ಉಪಚಾರ ಮೊದಲಾದ ವಿಷಯಗಳನ್ನು ಕ್ಷೇತ್ರಕಾರ್ಯ, ಸಂದರ್ಶನದ ಮೂಲಕ ಅಧ್ಯಯನ ಮಾಡಲಾಗಿದೆ. ಹೀಗೆ ಹಲವು ಮೂಲಗಳಿಂದ ದೊರೆತ ವಿಷಯವನ್ನು ಸಂಗ್ರಹಿಸಲು ಪಟ್ಟಿಕೆಯ ವಿಧಾನವನ್ನು ಅನುಸರಿಸಲಾಗಿದೆ. ಈ ಪ್ರಯತ್ನವನ್ನು ಪೂರೈಸುವ ಸಲುವಾಗಿ ಇದರಲ್ಲಿ ಹತ್ತು ಅಧ್ಯಾಯಗಳನ್ನು ಹಾಗೂ ಪ್ರತಿ ಅಧ್ಯಾಯದಲ್ಲಯೂ ಮತ್ತೆ ಒಳಭಾಗಗಳನ್ನಾಗಿ ವಿಭಾಗಿಸಿ ವಿಶ್ಲೇಷಣಾತ್ಮಕ ವಿಧಾನದಿಂದ ವಿವರಿಸಲಾಗಿದೆ.

ನಾಗರಿಕತೆಗಳ ಕಾಲದ ಬೆಳಗಾವಿಯ ನೆಲೆಯನ್ನು ಹಿನ್ನೆಲೆಯಾಗಿಟ್ಟುಕೊಂಡು ಕ್ರಿ.ಶ.ಪೂ. ೨ನೆಯ ಶತಮಾನದ ಮೌರ್ಯ, ಶಾತವಾಹನರ ಆಳ್ವಿಕೆಯಿಂದ ಪ್ರಸ್ತುತ ಕಾಲದವರೆಗಿನ ಸಾಂಸ್ಕೃತಿಕ ಬದಲಾವಣೆಗಳಿಗೆ ಕಾರಣವಾದ ಇತಿಹಾಸ, ಧರ್ಮ, ಸಮಾಜ, ಭಾಷೆ, ಸಾಹಿತ್ಯ, ಶಿಕ್ಷಣ ಮುಂತಾದ ವಲಯಗಳನ್ನು ಸಂಶೋಧನೆಯ ವಿಷಯ ವ್ಯಾಪ್ತಿಯ ಒಳಪಡಿಸಿಕೊಳ್ಳಲಾಗಿದೆ. ಕೆಲವು ಸಲ ಸಾಂದರ್ಭಿಕವಾಗಿ ಬೇರೆ ಪ್ರದೇಶಗಳ ವ್ಯಕ್ತಿಗಳ ವಿಷಯಗಳ ಮೇಲೆ ದೃಷ್ಟಿ ಹರಿಸಲಾಗಿದೆ. ಸ್ವಾಂತಂತ್ರ್ಯ ಹೋರಾಟ, ಏಕೀಕರಣ ಚಳುವಳಿ, ಸಾಹಿತ್ಯ, ಶಿಕ್ಷಣ, ರಂಗಭೂಮಿ ಮುಂತಾದ ವಲಯಗಳ ಮೇಲೆ ರಾಜ್ಯ, ರಾಷ್ಟ್ರದ ಪ್ರಭಾವ, ಪ್ರೇರಣೆಯನ್ನು ಗುರುತಿಸಲಾಗಿದೆ. ಈ ಎಲ್ಲ ಅಧ್ಯಯನದ ಮೂಲಕ ಬೆಳಗಾವಿಯ ಸಾಂಸ್ಕೃತಿಕ ಬದಲಾವಣೆ, ಬೆಳವಣಿಗೆಯ ಸ್ವರೂಪವನ್ನು ಹಾಗೂ ಗ್ರಾಮವಾಗಿ ನೆಲೆಗೊಂಡ ಬೆಳಗಾವಿಯು ನಗರವಾಗಿ ರೂಪಗೊಂಡಿರುವುದನ್ನು ಪ್ರಸ್ತುತ ಮಹಾಪ್ರಬಂಧದಲ್ಲಿ ವಿಶ್ಲೇಷಿಸಲಾಗಿದೆ.

**ಅಧ್ಯಯನದ ವ್ಯಾಪ್ತಿ:** ಕ್ರಿ.ಶ.ಪೂ. ೨ನೆಯ ಶತಮಾನದ ಶಾತವಾಹನರ ಆಳ್ವಿಕೆಯಿಂದ ಪ್ರಸ್ತುತ ಕಾಲದ ವರೆಗಿನ ಸಾಂಸ್ಕೃತಿಕ ಬದಲಾವಣೆ ಮತ್ತು ಮಹಾನಗರ ವ್ಯಾಪ್ತಿಯ ಪ್ರದೇಶಗಳಿಗೆ ಅಧ್ಯಯನವನ್ನು ಸೀಮಿತಗೊಳಿಸಿಕೊಳ್ಳಲಾಗಿದೆ. ಇದರಿಂದ ಗ್ರಾಮವಾಗಿ ನೆಲೆಗೊಂಡ ಬೆಳಗಾವಿಯು ನಗರವಾಗಿ, ಮಹಾನಗರವಾಗಿ ಮಾರ್ಪಟ್ಟ ಬಗೆಯನ್ನು ಹಾಗೂ ಸಾಂಸ್ಕೃತಿಕ ಬದಲಾವಣೆಗಳ ಸ್ವರೂಪವನ್ನು ಅರಿಯಲು ಸಹಾಯಕವಾಗುತ್ತದೆಂದು ಭಾವಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಬೆಳಗಾವಿಯ ಇತಿಹಾಸ-ಆಡಳಿತವನ್ನು ಕುರಿತು ವಿವರಿಸಲಾಗಿದೆ. ಪ್ರಾಕೃತಿಕ ಹಿನ್ನೆಲೆಯಲ್ಲಿ ಭೌಗೋಳಿಕ, ಭೂರಚನೆ, ಮಣ್ಣು, ಮಳೆ, ಹವಾಮಾನ, ಸಸ್ಯವರ್ಗಗಳನ್ನು ಗುರುತಿಸಿ ತರುವಾಯ ಬೆಳಗಾವಿಯ ನಾಮ ವಿವೇಚನೆಯಲ್ಲಿ ಬೆಳಗಾವಿ ಹೆಸರಿನಲ್ಲಾದ ಬದಲಾವಣೆಗಳನ್ನು ವಿವರಿಸಲಾಗಿದೆ. ಮುಂದೆ ಪ್ರಾಗೈತಿಹಾಸಿಕ ಕಾಲದ ಬೆಳಗಾವಿಯನ್ನು ಪರಿಚಯಿಸಲಾಗಿದೆ. ಬೆಳಗಾವಿಯಲ್ಲಿ ಆಳ್ವಿಕೆ ನಡೆಸಿದ ರಾಜರನ್ನು ಪ್ರಾಚೀನ, ಮಧ್ಯಕಾಲೀನ, ಆಧುನಿಕ ಎಂದು ಮೂರು ಉಪ ಭಾಗಗಳಲ್ಲಿ ಗುರುತಿಸಿ ವಿವರಿಸಲಾಗಿದೆ. ಪ್ರಾಚೀನ ಕಾಲದಲ್ಲಿ ಮೌರ್ಯರು, ಶಾತವಾಹನರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಗೋವೆಯ ಕದಂಬರು, ರಟ್ಟರ ಕಾಲದವರೆಗಿನ ಇತಿಹಾಸವನ್ನು ಕುರಿತು ವಿವರಿಸಲಾಗಿದೆ. ಮಧ್ಯಕಾಲೀನ ಇತಿಹಾಸದಲ್ಲಿ ಸೇವುಣರು, ವಿಜಯನಗರ ಅರಸರು, ಬಹಮನಿ ಸುಲ್ತಾನರು, ವಿಜಾಪುರದ ಆದಿಲಶಾಹಿಗಳು, ಮೊಘಲರು, ಸವಣೂರ ನವಾಬರು ಮುಂತಾದವರನ್ನು ಕುರಿತು ಹಾಗೂ ಆಧುನಿಕ ಇತಿಹಾಸದಲ್ಲಿ ಪೇಶ್ವೆಗಳು, ಕಿತ್ತೂರಿನ ಹೋರಾಟ, ಬ್ರಿಟಿಷರ ಆಳ್ವಿಕೆಯ ಕಾಲದಂತಯೇ ಬೆಳಗಾವಿಯಲ್ಲಿ ನೆಲಗೊಂಡ ಮಿಲಿಟರಿಯು ಮಹತ್ವದ್ದಾಗಿದ್ದು ಸ್ವಾತಂತ್ರ್ಯ ನಂತರವೂ ಅದು ದೇಶದಲ್ಲಿಯೇ ಪ್ರಾಮುಖ್ಯತೆಯನ್ನು ಪಡೆದುಕೊಂಡಿರುತ್ತದೆ. ಬೆಳಗಾವಿಯ ಸಾಂಸ್ಕೃತಿಕ ವಲಯದ ಮೇಲೂ ಮಿಲಿಟರಿ ನೆಲೆಯು ಮಹತ್ವದ ಪರಿಣಾಮವನ್ನು ಬೀರಿದೆ. ಇದನ್ನು ಇಲ್ಲಿ ಗಮನಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಬೆಳಗಾವಿಯಲ್ಲಿ ನಡೆದ ದೇಶದ ಸ್ವಾತಂತ್ರ್ಯ ಹೋರಾಟ ಹಾಗೂ ನಾಡಿನ ಏಕೀಕರಣ ಚಳುವಳಿಯನ್ನು ಕುರಿತು ವಿವರಿಸಲಾಗಿದೆ. ಬ್ರಿಟಿಷರ ಆಳ್ವಿಕೆಯ ಅವಧಿಯಲ್ಲಿಯೇ ದೇಶವ್ಯಾಪ್ತಿ ನಡೆದ ಸ್ವಾತಂತ್ರ್ಯ ಹೋರಾಟವು ಇತಿಹಾಸದ ಒಂದು ಭಾಗವೇ ಆಗಿದೆ. ಅದರಂತೆ ಬೆಳಗಾವಿಯಲ್ಲಿಯೂ ಸ್ವಾತಂತ್ರ್ಯ ಹೋರಾಟ ತೀವ್ರವಾಗಿ ಸಾಗಿ, ಅದು ನಾಡಿನ ಏಕೀರಕಣ ಚಳುವಳಿಯ ಸ್ವರೂಪದಲ್ಲಿ ಮುಂದುವರೆದು ಕರ್ನಾಟಕ ಏಕೀಕರಣಗೊಳ್ಳುವಲ್ಲಿ ಮುಕ್ತಾಯಗೊಳ್ಳುತ್ತದೆ. ಟಿಳಕ, ಗಾಂಧೀಜಿ ಮುಂತಾದ ರಾಷ್ಟ್ರೀಯ ನಾಯಕರ ಆಗಮನ, ಸ್ಫೂರ್ತಿಗಳ ಹಿನ್ನೆಲೆಯಲ್ಲಿ ಬೆಳಗಾವಿ ರಾಷ್ಟ್ರದಲ್ಲಿಯೇ ಗಮನ ಸೆಳೆದ ಬಗೆ, ೧೯೨೪ರಲ್ಲಿ ಮಹಾತ್ಮಾ ಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ಜರುಗಿದ ಬೆಳಗಾವಿ ಅಧಿವೇಶನದ ಹಿನ್ನೆಲೆ ಪರಿಣಾಮಗಳು, ಏಕೀಕರಣ ಚಳುವಳಿಯ ಹಿನ್ನೆಲೆಯಲ್ಲಿ ಬೆಳಗಾವಿ ಹೋರಾಟಗಾರರು ಎದುರಿಸಿದ ಸಂದಿಗ್ಧತೆ ಮುಂತಾದ ವಿಷಯಗಳನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಬೆಳಗಾವಿ ನಗರ ರಚನೆಯನ್ನು ಕುರಿತು ವಿವರಿಸಲಾಗಿದೆ. ಬೆಳಗಾವಿ ನಗರವು ಕ್ರಿ.ಪೂರ್ವದಿಂದಲೂ ಅಸ್ತಿತ್ವದಲ್ಲಿರುವ ಪುರಾತನ ನಗರ. ಅಂದಿನ ನಗರ ರಚನೆಯ ಹಂತಗಳನ್ನು ಗುರುತಿಸಿ, ಪ್ರಾಚೀನ ವಡಗಾವಿ-ಮಾಧವಪುರ ಪ್ರದೇಶದಲಿದ್ದ ಸುಸಜ್ಜಿತ ಪಟ್ಟಣದ ವಿವರಣೆಯನ್ನು ನೀಡಲಾಗಿದೆ. ಪ್ರಾಚೀನ ಭಾರತದಲ್ಲಿದ್ದ ಪ್ರಮುಖ ಪಟ್ಟಣಗಳಲ್ಲಿ ವಡಗಾವ-ಮಾಧವಪುರ ಪ್ರದೇಶದ ಪಟ್ಟಣವೂ ಒಂದಾಗಿತ್ತು. ಅಂದಿನ ಕಾಲದ ಮನೆಗಳು, ಬೀದಿಗಳು ಬಳಸಿದ ವಸ್ತುಗಳು, ಬಾವಿಗಳು ಮುಂತಾದ ವಿಷಯಗಳನ್ನು ಇಲ್ಲಿ ವಿವೇಚಿಸಲಾಗಿದೆ.

ಬೆಳಗಾವಿ ನಗರದಲ್ಲಿ ಸುಮಾರು ೮ ಹಳ್ಳಿಗಳು ಕೂಡಿಕೊಂಡಿವೆ. ಈಗಲೂ ಈ ಹಳ್ಳಿಗಳು ಇರುವಿಕೆಯ ಕೆಲವು ಸಾಂಸ್ಕೃತಿಕ ಕುರುಹುಗಳನ್ನು ಗುರುತಿಸಿಕೊಂಡು ಬೆಳಗಾವಿ ನಗರ ರಚನೆಯ ಹಂತಗಳನ್ನು ಇಲ್ಲಿ ಗುರುತಿಸಲಾಗಿದೆ. ಬೆಳಗಾವಿ, ಶಹಾಪೂರ, ವಡಗಾವಿ, ಆನಿಗೋಳ, ಹೊಸೂರು ಮುಂತಾದ ಪ್ರದೇಶಗಳ ಕ್ಷೇತ್ರಕಾರ್ಯ ಕೈಗೊಂಡು ಕೆಲವೊಂದು ಪ್ರಮುಖ ವಿಷಯಗಳನ್ನು ಗುರುತಿಸಿಕೊಳ್ಳಲಾಗಿದೆ. ಹಳ್ಳಿಯು ಪಟ್ಟಣವಾಗುವ ಹಂತವನ್ನು ಗುರುತಿಸಿಕೊಂಡು ಮೂರು ನಗರಗಳು ಸೇರಿಕೊಂಡು ಬೆಳಗಾವಿ ಮಹಾನಗರವಾಗಿರುವುದನ್ನು ಸ್ಪಷ್ಟೀಕರಿಸಲಾಗಿದೆ. ಶಹಪೂರ, ಆನಿಗೋಳ ಮತ್ತು ಬೆಳಗಾವಿ ಈ ಮೂರೂ ನಗರಗಳು ಮೊದಲು ಪ್ರತ್ಯೇಕವಾದ ನಗರದ ಅಸ್ತಿತ್ವವನ್ನೇ ಪಡೆದುಕೊಂಡು ಬ್ರಿಟಿಷರ ಆಳ್ವಿಕೆಯ ಅವಧಿಯಲ್ಲಿ ಕೂಡಿಕೊಂಡು ಬೆಳಗಾವಿ ನಗರವಾಗಿರುವುದು ಸ್ಪಷ್ಟಗೊಳ್ಳುತ್ತದೆ.

ಐದನೆಯ ಅಧ್ಯಾಯದಲ್ಲಿ ಕಲೆ–ವಾಸ್ತುಶಿಲ್ಪ–ಚಿತ್ರಕಲೆ–ಸಂಗೀತವನ್ನು ಕುರಿತು ವಿವರಿಸಲಾಗಿದೆ. ಬೆಳಗಾವಿಯಲ್ಲಿ ಆಳ್ವಿಕೆ ನಡೆಸಿದ ರಾಜಮನೆತನಗಳ ಮಹತ್ವದ ಕೊಡುಗೆಗಳಲ್ಲಿ ವಾಸ್ತುಶಿಲ್ಪಕಲೆಯು ಮುಖ್ಯವಾದುದಾಗಿದೆ. ಈ ಅಧ್ಯಯನವು ಬೆಳಗಾವಿಯಲ್ಲಿ ಸಂಸ್ಕೃತಿಯ ವಿಕಾಸದ ಹಂತವನ್ನು ಗುರುತಿಸಲು ಸಹಕಾರಿಯಾಗುತ್ತದೆ. ಶಾತವಾಹನರ ಕಾಲದ ವಾಸ್ತುಶಿಲ್ಪಕಲೆಯನ್ನು ಮೊಟ್ಟಮೊದಲ ಬಾರಿಗೆ ಡಾ. ಅ. ಸುಂದರ ಅವರು ಉತ್ಖನದ ಮೂಲಕ ಗುರುತಿಸಿದ್ದಾರೆ. ಈ ವಿಷಯವನ್ನು ಆಧಾರವಾಗಿಟ್ಟುಕೊಂಡು ಅಧ್ಯಯನ ಕೈಕೊಂಡು ಪ್ರಾಚೀನ ವಾಸ್ತುಶಿಲ್ಪಕಲೆಯನ್ನು ಗುರುತಿಸಲಾಗಿದೆ. ವಿವಿಧ ಧರ್ಮಗಳ ಹಿನ್ನೆಲೆಯಲ್ಲಿ ವಾಸ್ತುಶಿಲ್ಪಕಲೆಯನ್ನು ವಿವೇಚಿಸಲಾಗಿದೆ.

ಚಿತ್ರಕಲೆಗೆ ಬೆಳಗಾವಿಯ ಕೊಡುಗೆ ಮಹತ್ವದ್ದಾಗಿದೆ. ಪ್ರಾಚೀನ ಕಾಲದಿಂದಲೂ ಚಿತ್ರಕಲೆಯನ್ನು ಬೆಳೆಸಿಕೊಂಡು ಬಂದಿರುವ ಬೆಳಗಾವಿಯ ಕಲಾವಿದರು ವಿಶಿಷ್ಟವಾದ ಕಲಾಕೃತಿಗಳನ್ನು ಬಿಡಿಸಿ ಪ್ರಾದೇಶಿಕ ಸಂಸ್ಕೃತಿಯನ್ನು ಅಭಿವ್ಯಕ್ತಗೊಳಿಸಿರುವುದು ಕಂಡುಬರುತ್ತದೆ. ಕಲಾಕೃತಿಗಳು ಬೆಳಗಾವಿಗೆ ವಿಶಿಷ್ಟವಾದ ಸ್ಥಾನ ಮಾನಗಳನ್ನು ತಂದುಕೊಟ್ಟಿರುತ್ತವೆ. ನಗರದಲ್ಲಿರುವ ಹಲವಾರು ಚಿತ್ರಕಲಾವಿದರ, ಕಲಾ ಸಂಸ್ಥೆಗಳ, ಶಿಕ್ಷಣ ಸಂಸ್ಥೆಗಳ ಸಂದರ್ಶನವನ್ನು ಕೈಕೊಂಡು ಕೆಲವೊಂದು ಲೇಖನ, ಕೃತಿಗಳನ್ನು ಆಕರವಾಗಿರಿಸಿಕೊಂಡು ಈ ಕಲೆಯ ಮಹತ್ವದ ವಿಷಯಗಳನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಸಂಗೀತ ಕ್ರೇತ್ರದಲ್ಲಿಯೂ ಬೆಳಗಾವಿಯ ಕಲಾವಿದರು ಮಹತ್ವದ ಸಾಧನೆಯನ್ನು ಮಾಡಿದ್ದಾರೆ. ೧೯ನೆಯ ಶತಮಾನದ ಹೊತ್ತಿಗೆ ಬೆಳಗಾವಿಯ ಗಲ್ಲಿಗಲ್ಲಿಗಳಲ್ಲಿ ಸಂಗೀತದ ಸ್ವರ, ನಾದ ಕೇಳಿ ಬರುತ್ತಿತ್ತು. ದೇಶದ ಪ್ರಸಿದ್ಧ ಸಂಗೀತಗಾರರು ಬೆಳಗಾವಿಯಲ್ಲಿ ನೆಲೆ ನಿಂತಿದ್ದರು. ಕಲೆ ಸಾಹಿತ್ಯ, ಸಂಗೀತಕ್ಕೆ ಭಾಷೆ, ಗಡಿ, ಜಾತಿ, ಧರ್ಮಗಳು ಅಡ್ಡಿಬರಲಾರವು ಎನ್ನುವುದನ್ನು ಬೆಳಗಾವಿಯ ಸಂಗೀತ ಪರಂಪರೆ ತಿಳಿಸಿಕೊಡುತ್ತದೆ. ಈ ಎಲ್ಲ ವಿಷಯವನ್ನು ಮಹಾಪ್ರಬಂಧದಲ್ಲಿ ಗುರುತಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ ಬೆಳಗಾವಿಯ ಧಾರ್ಮಿಕ ಪಂಪರೆಯನ್ನು ಕುರಿತು ವಿವರಣೆ ನೀಡಲಾಗಿದೆ. ಈ ಅಧ್ಯಾಯದಲ್ಲಿ ೧. ಧರ್ಮ ಜಾತಿ–ಜನಾಂಗ, ೨. ಮಠ–ಬಸದಿ–ಮಸೀದಿ–ಚರ್ಚಗಳು ೩. ಸಂಪದ್ರಾಯ–ಆಚರಣೆಗಳು ೪. ಜಾತ್ರೆ–ಮಹೋತ್ಸವಗಳೆಂದು ವಿಭಾಗಿಸಿಕೊಂಡು ಬೆಳಗಾವಿಯ ಧಾರ್ಮಿಕ ಪರಂಪರೆಯನ್ನು ಅಧ್ಯಯನ ಮಾಡಿಲಾಗಿದೆ. ಧರ್ಮ, ಜಾತಿ, ಜನಾಂಗವನ್ನು ಕುರಿತು ಪ್ರಾಚೀನ ಕಾಲದ ಪ್ರಮುಖ ಧರ್ಮಗಳಾದ ಬೌದ್ಧ, ಶೈವ, ವೈಷ್ಣವ, ಜೈನ ಮೊದಲಾದ ಧರ್ಮಗಳ ಅಸ್ತಿತ್ವವನ್ನು ಕುರಿತು ಆಧಾರ ಸಹಿತ ವಿವೇಚಿಸಲಾಗಿದೆ. ಧರ್ಮದ ಅಂಗಸಂಸ್ಥೆಗಳಾದ ಮಠ–ಬಸದಿ–ಮಸೀದಿ–ಚರ್ಚಗಳ ಪ್ರಾಚೀನತೆ, ಅಲ್ಲಿಯ ಆಚರಣೆ, ಸಂಪ್ರದಾಯಗಳನ್ನು ಕುರಿತು ವಿವರಿಸಲಾಗಿದೆ. ಪ್ರಾಚೀನ ಕಾಲದಿಂದಲೂ ಬೆಳಗಾವಿ ಧರ್ಮ ಸಹಿಷ್ಣತೆಯ ನೆಲೆಯಾಗಿದ್ದುದರ ಮೇಲೆ ಇಲ್ಲಿ ಬೆಳಕು ಚೆಲ್ಲಲಾಗಿದೆ.

ಏಳನೆಯ ಅಧ್ಯಾಯದಲ್ಲಿ ಬೆಳಗಾವಿಯ ಸಾಮಾಜಿಕ ವ್ಯವಸ್ಥೆಯನ್ನು ಕುರಿತು ವಿವರಿಸಲಾಗಿದೆ. ಬೆಳಗಾವಿಯ ಸಾಮಾಜಿಕ ವ್ಯವಸ್ಥೆಯನ್ನು ಕುರಿತು ಐದು ಭಾಗಗಳಲ್ಲಿ ವಿಂಗಡಣೆ ಮಾಡಿಕೊಂಡು ಮುಂದುವರಿಯಲಾಗಿದೆ. ಅವುಗಳೆಂದರೆ ೧. ಮನೆ–ಬಾವಿಗಳು ೨. ವೇಷ–ಭೂಷಣಗಳು ೩. ಊಟ–ಉಪಚಾರ ೪. ವಾಣಿಜ್ಯ ಉದ್ಯಮ ೫. ಸಂಕರ ಸಂಸ್ಕೃತಿ ೬. ನಗರ ಜನಪದ ಈ ಮೂಲಕ ಒಟ್ಟು ಸಾಮಾಜಿಕ ವ್ಯವಸ್ಥೆಯನ್ನು ಕುರಿತು ವಿವರಿಸಲಾಗಿದೆ. ಮುಖ್ಯವಾಗಿ ಕ್ಷೇತ್ರಕಾರ್ಯ, ಸಂದರ್ಶನ ಮತ್ತು ಆಕರ ಗ್ರಂಥಗಳನ್ನು ಬಳಸಿ ಈ ವಿಷಯದ ಅಧ್ಯಯನ ಮಾಡಲಾಗಿದೆ.

ಬೆಳಗಾವಿಯ ಮನೆಗಳು ವಿಶಿಷ್ಟವಾಗಿವೆ. ಪೇಶ್ವೆಗಳ ಕಾಲದ ಮನೆಗಳು, ಬ್ರಿಟಿಷರ ಕಾಲದ ಮನೆಗಳು, ಆಧುನಿಕ ಕಾಂಕ್ರಿಟ್ ಕಟ್ಟಡಗಳು ಇವುಗಳ ರಚನೆ, ವಿನ್ಯಾಸ, ಹಿನ್ನೆಲೆ ಮುಂತಾದವುಗಳನ್ನು, ಹಾಗೂ ಕೆಲವು ಪಾರಂಪರಿಕ ಕಟ್ಟಡಗಳನ್ನು ಕುರಿತು ವಿವರಿಸಲಾಗಿದೆ.

ವೇಷ–ಭೂಷಣಗಳು ಧರ್ಮ, ಜಾತಿ, ಪ್ರದೇಶಗಳಿಗನುಗುಣವಾಗಿ ಕಂಡುಬರುತ್ತವೆ. ಆಧುನಿಕ ಕಾಲದ ಫ್ಯಾಶನ್ ಪರಂಪರೆ ಬೆಳಗಾವಿಯಲ್ಲಿ ಹೆಚ್ಚಾಗಿ ಕಂಡುಬರಲು ಕಾರಣಗಳನ್ನು ಗುರುತಿಸಲಾಗಿದೆ. ಸಂಪ್ರದಾಯ–ಆಧುನಿಕತೆಗಳ ಮುಖಾಮುಖಿಯ ಸಂದರ್ಭವನ್ನು ವಿವರಣೆಯನ್ನು ನೀಡಲಾಗಿದೆ. ಬೆಳಗಾವಿಯ ವಿಶಿಷ್ಟ ಊಟದ ಪ್ರಕಾರಗಳನ್ನು, ಪ್ರಸಿದ್ಧ ತಿಂಡಿ–ತಿನಿಸುಗಳನ್ನು ಊಟದಲ್ಲಿಯ ಸಂಪ್ರದಾಯ ಆಚರಣೆ, ಪದ್ಧತಿ, ನಂಬಿಕೆ, ಮಹತ್ವವನ್ನು ಕುರಿತು ವಿವರಿಸಲಾಗಿದೆ. ಸಂದರ್ಶನ ಮೂಲಕ ಆಹಾರ ಪದ್ಧತಿಯ ವೈವಿಧ್ಯತೆಯನ್ನು ತಿಳಿದುಕೊಂಡು ವಿವರಿಸಲಾಗಿದೆ.

ಬೆಳಗಾವಿಯು ವಾಣಿಜ್ಯ ಉದ್ಯಮದಲ್ಲಿ ಪ್ರಸಿದ್ದಿಯನ್ನು ಹೊಂದಿದೆ. ಶಹಪುರದ ಸೀರೆಗಳು, ಮಾಣಿಕಭಾಗದ ವಾಹನ ಬಿಡಿಭಾಗಗಳ ತಯಾರಿಕೆ, ವಾಹನಗಳ ಬಾಡಿ ತಯಾರಿಕೆ, ಹೆಲ್ಮೆಟ್ ತಯಾರಿಕೆ, ಬೆಲ್ಲ, ಅಕ್ಕಿ ಮುಂತಾದವುಗಳ ವ್ಯಾಪಾರ, ಉಪ್ಪಿನಕಾಯಿ ತಯಾರಿಕೆ, ಚರ್ಮೋದ್ಯಮ, ಅಲ್ಯುಮಿನಿಯಂ ತಯಾರಿಕೆ ಮುಂತಾದ ಉದ್ಯಮಗಳ ಬೆಳವಣಿಗೆಯನ್ನು ಕುರಿತು ವಿವರಿಸಲಾಗಿದೆ.

ಸಂಕರ ಸಂಸ್ಕೃತಿಯು ಬೆಳಗಾವಿಯ ವೈಶಿಷ್ಟ್ಯ. ಕನ್ನಡ–ಮರಾಠಿ–ಕೊಂಕಣಿ–ಮುಸ್ಲಿಂ–ಕ್ರೈಸ್ತ ಸಂಸ್ಕೃತಿಗಳು ಸಂಗಮಗೊಂಡು ಅದು ಆಚರಣೆ–ಸಂಪ್ರದಾಯ ಮುಂತಾದವುಗಳಲ್ಲಿ ಕಂಡುಬರುತ್ತದೆ. ಗಣೇಶೋತ್ಸವ, ದೀಪಾವಳಿ, ಶಿವರಾತ್ರಿ, ಹೋಳಿ, ಸಂಕ್ರಾಂತಿ, ಮೊಹರಂ, ಕ್ರಿಸಮಸ್ ಮುಂತಾದ ಹಬ್ಬ–ಉತ್ಸವಗಳ ಹಿನ್ನೆಲೆಯಲ್ಲಿ ನಗರ ಜನಪದವನ್ನು ವಿವರಿಸಲಾಗಿದೆ.

ಬೆಳಗಾವಿಯು ಮೂಲತಃ ಗ್ರಾಮೀಣ ಸಂಸ್ಕೃತಿಯನ್ನು ಹೊಂದಿದ್ದಲ್ಲದೆ ಸುತ್ತಮುತ್ತಲೆಲ್ಲ ಹಳ್ಳಿಗಳಿಂದ ಆವೃತವಾಗಿದೆ. ಹೀಗಾಗಿ ಬೆಳಗಾವಿ ನಗರದ ಧರ್ಮ, ಆಚರಣೆ, ವೇಷ–ಭೂಷಣ, ಆಹಾರ ಭಾಷೆಗಳ ಮೇಲೆ ಹಳ್ಳಿಗಾಡಿನ ಪ್ರಭಾವ ಕಂಡುಬಂದಿರುವುದನ್ನು ವಿವರಿಸಲಾಗಿದೆ. ಇದು ನಗರ ಜಾನಪದವೆಂಬ ಉಪಶೀರ್ಷಿಕೆಯಡಿಯಲ್ಲಿದೆ.

ಎಂಟನೆಯ ಅಧ್ಯಾಯದಲ್ಲಿ ಭಾಷೆ–ಸಾಹಿತ್ಯ–ಸಂವಹನವೆಂದು ಒಟ್ಟು ಮೂರು ಭಾಗಗಳನ್ನು ಮಾಡಿಕೊಂಡು ಪ್ರತಿಯೊಂದು ಭಾಗದಲ್ಲಿ ಉಪವಿಭಾಗಗಳನ್ನು ಕಲ್ಪಿಸಿಕೊಳ್ಳಲಾಗಿದೆ.

ಅ. ಭಾಷೆ — ೧. ಸಾಮರಸ್ಯ ೨. ಸಮಸ್ಯೆ (ಗಡಿ ಸಮಸ್ಯೆ: ಮಹಾಜನ ಆಯೋಗ)

ಆ. ಸಾಹಿತ್ಯ — ೧. ಪ್ರಾಚೀನ ೨. ಜನಪದ ೩. ಆಧುನಿಕ

ಇ. ಸಂವಹನ — ೧. ಮುದ್ರಣಾಲಯಗಳು ೨. ಪ್ರಕಾಶನ ಸಂಸ್ಥೆಗಳು ೩. ಪತ್ರಿಕೆಗಳು ೪. ಸಂಘ–ಸಂಸ್ಥೆಗಳು ೫. ಸಾಹಿತ್ಯ ಸಮ್ಮೇಳನಗಳು

ಗಡಿ ಪ್ರದೇಶವಾದ ಬೆಳಗಾವಿಯಲ್ಲಿ ಮೂಲ ಕನ್ನಡ ಭಾಷೆಯ ಮೇಲೆ ಮರಾಠಿ ಭಾಷೆಯ ಪ್ರಭಾವ ಉಂಟಾಗಿದ್ದರಿಂದ ಇಲ್ಲಿಯ ಭಾಷೆ ವಿಶಿಷ್ಟವಾಗಿ ಬಳಕೆಗೊಳ್ಳುತ್ತದೆ. ಎರಡೂ ಭಾಷೆಗಳ ಬೆಸುಗೆಯಿಂದ ಇಲ್ಲಿ ಭಾಷಾ ಸಾಮರಸ್ಯತೆ ಕಂಡು ಬರುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ ಗಡಿತಂಟೆಯಿಂದಾಗಿ ಭಾಷಾ ಸಮಸ್ಯೆಯೂ ಇಲ್ಲಿ ಹುಟ್ಟಿಕೊಂಡಿದೆ. ಮಹಾಜನ ವರದಿಯು ಬೆಳಗಾವಿಯನ್ನು ಕರ್ನಾಟಕದಲ್ಲಿಯೇ ಇರಿಸಿದೆ. ಇದರಿಂದ ಹುಟ್ಟಿಕೊಂಡ ಗಡಿತಂಟೆ ಮತ್ತು ಅದರ ಪರಿಣಾಮಗಳನ್ನು ಇಲ್ಲಿ ವಿವರಿಸಲಾಗಿದೆ.

ಬೆಳಗಾವಿ ಪ್ರಾಚೀನ ಕಾಲದಿಂದಲೂ ಸಾಹಿತ್ಯ ವಲಯದಲ್ಲಿ ಮಹತ್ವವನ್ನು ಹೊಂದಿದೆ. ರಟ್ಟರ ಕಾಲದಲ್ಲಿ ಶ್ರೇಷ್ಠವಾದ ಸಾಹಿತ್ಯ ಬೆಳಗಾವಿಯಲ್ಲಿ ರಚನೆಗೊಂಡಿದ್ದು ಗಮನಾರ್ಹವಾದುದಾಗಿದೆ. ರಟ್ಟರ ಕಾಲದ ಸಾಹಿತ್ಯವನ್ನು ಕುರಿತು ವಿವರಿಸಲಾಗಿದೆ. ಅದರಂತೆ ಜನಪದ ಸಾಹಿತ್ಯಕ್ಕೆ ಬೆಳಗಾವಿಯ ಕೊಡುಗೆಯನ್ನು ಆಧುನಿಕ ಸಾಹಿತ್ಯದವರು ನೀಡಿದ ಮಹತ್ವದ ಕೊಡುಗೆಯನ್ನು ಕುರಿತು ವಿಶ್ಲೇಷಿಸಲಾಗಿದೆ.

ಸಂವಹನ ಭಾಗದಲ್ಲಿ ಬೆಳಗಾವಿಯಲ್ಲಿ ಪ್ರಾರಂಭಗೊಂಡ ಮುದ್ರಣಾಲಯಗಳ ಇತಿಹಾಸ ಬೆಳವಣಿಗೆ ಕುರಿತು ಈ ಹಿನ್ನೆಲ್ಲೆಯಲ್ಲಿ ಹುಟ್ಟಿಕೊಂಡ ಪ್ರಕಾಶನ ಸಂಸ್ಥೆಗಳು, ಪತ್ರಿಕೆಗಳನ್ನು ಕುರಿತು ಹಾಗೂ ಸಂಘ–ಸಂಸ್ಥೆಗಳ

ಹುಟ್ಟು, ಬೆಳವಣಿಗೆ, ಮಹತ್ವದ ಕಾರ್ಯಗಳನ್ನು ಕುರಿತು ಅಲ್ಲದೆ ಬೆಳಗಾವಿಯಲ್ಲಿ ಜರುಗಿದ ವಿವಿಧ ಸಾಹಿತ್ಯ ಸಮ್ಮೇಳನವನ್ನು ಕುರಿತು ವಿವರಿಸಲಾಗಿದೆ.

ಒಂಬತ್ತನೆಯ ಅಧ್ಯಾಯದಲ್ಲಿ ಶಿಕ್ಷಣವನ್ನು ಕುರಿತು ವಿವರಿಸಲಾಗಿದೆ. ಈ ಅಧ್ಯಾಯದಲ್ಲಿ ಪ್ರಾಚೀನ ಕಾಲ, ಬ್ರಿಟಿಷರ ಕಾಲ, ಆಧುನಿಕ ಕಾಲವೆಂದು ವಿಭಾಗಗಳನ್ನು ಮಾಡಿಕೊಂಡು ಬೆಳಗಾವಿಯ ಶಿಕ್ಷಣ ವಲಯದ ಅಧ್ಯಯನವನ್ನು ಕೈಕೊಂಡು ಮುಂದುವರಿಯಲಾಗಿದೆ. ಈ ಅಧ್ಯಯನದಿಂದ ಬೆಳಗಾವಿಯ ಸಾಂಸ್ಕೃತಿಕ ವಲಯದ ಸ್ಪಷ್ಟ ಚಿತ್ರಣ ದೊರೆಯುತ್ತದೆ. ಪ್ರಾಚೀನಕಾಲದ ಶಿಕ್ಷಣ ಪದ್ಧತಿ, ಕಲಿಕಾ ಕೇಂದ್ರಗಳು, ಶಿಕ್ಷಣದ ವಿಷಯ ಮುಂತಾದವುಗಳನ್ನು ವಿವರಿಸಲಾಗಿದೆ. ಬ್ರಿಟಿಷರ ಕಾಲದಲ್ಲಿ ಶಿಕ್ಷಣದಲ್ಲಾದ ಬದಲಾವಣೆಗಳು, ಅದರಿಂದ ಹುಟ್ಟಿಕೊಂಡ ಶಿಕ್ಷಣ ಸಂಸ್ಥೆಗಳು, ಶಾಲೆ ಕಾಲೇಜುಗಳು, ಬೋಧಿಸುವ ವಿಷಯ, ಪಠ್ಯಪುಸ್ತಕ ಮುಂತಾದವುಗಳನ್ನು ಕುರಿತು ಹಾಗೂ ಆಧುನಿಕ ಶಿಕ್ಷಣ ಪದ್ಧತಿಯಲ್ಲಿ ಹೊಸದಾಗಿ ಹುಟ್ಟಿಕೊಂಡ ಶಿಕ್ಷಣ ಸಂಸ್ಥೆಗಳು, ಕಾಲೇಜುಗಳು, ಶಿಕ್ಷಣದ ವಿಷಯ, ಮುಂತಾದವುಗಳನ್ನು ತಿಳಿಸಿಕೊಡುವುದರ ಜೊತೆಗೆ ಶಿಕ್ಷಣದಿಂದ ಉಂಟಾದ ಸಾಮಾಜಿಕ ಬದಲಾವಣೆಗಳು, ಆರ್ಥಿಕ ಸುಧಾರಣೆಗಳು, ಸಾಂಸ್ಕೃತಿಕ ಕೊಡುಗೆಗಳನ್ನು ಕುರಿತು ತೌಲನಿಕವಾಗಿ ವಿಶ್ಲೇಷಿಸಲಾಗಿದೆ. ಕ್ಷೇತ್ರಕಾರ್ಯ, ಸಂದರ್ಶನ ಮತ್ತು ಆಕರ ಗ್ರಂಥಗಳ ಸಹಾಯದಿಂದ ಬೆಳಗಾವಿಯ ಶೈಕ್ಷಣಿಕ ವಲಯದ ಬಗೆಗೆ ಅಧ್ಯಯನ ಕೈಕೊಂಡು ವಿವರಿಸಲಾಗಿದೆ.

ಹತ್ತನೆಯ ಅಧ್ಯಾಯದಲ್ಲಿ ರಂಗಭೂಮಿಯನ್ನು ಕುರಿತು ವಿವರಿಸಲಾಗಿದೆ. ಜಾನಪದ ರಂಗಭೂಮಿ, ವೃತ್ತಿರಂಗಭೂಮಿ, ಹವ್ಯಾಸಿ ರಂಗಭೂಮಿಯೆಂದು ವಿಭಾಗಮಾಡಿಕೊಂಡು ಆಕರ ಗ್ರಂಥಗಳು, ಸಂದರ್ಶನದ ಮೂಲಕ ಅಧ್ಯಯನವನ್ನು ಕೈಕೊಳ್ಳಲಾಗಿದೆ. ಜಾನಪದ ರಂಗಭೂಮಿಯ ವಿವಿಧ ಪ್ರಕಾರಗಳನ್ನು ಗುರುತಿಸಿಕೊಂಡು ಬೆಳಗಾವಿಯಲ್ಲಿ ಅವು ಕಂಡುಬಂದ ಬಗೆಯನ್ನು, ಅವುಗಳ ಪರಿಣಾಮಗಳನ್ನು ಕುರಿತು ವಿವರಣೆಯನ್ನು ನೀಡಿದ್ದೇನೆ.

ಹನ್ನೊಂದನೆಯ ಅಧ್ಯಾಯ ಸಮಾರೋಪ. ಇದುವರೆಗೆ ನಡೆದ ಸಂಶೋಧನೆಯನ್ನು ಕುರಿತು ಹಾಗೂ ಸಂಶೋಧನೆಯಲ್ಲಿ ಕಂಡು ಬಂದ ಹೊಸ ವಿಷಯಗಳನ್ನು ಕುರಿತು ಮತ್ತು ಇನ್ನು ಹೆಚ್ಚಿನ ಸಂಶೋಧನೆಯನ್ನು ಬಯಸುವ ವಲಯಗಳ ಸಂಶೋಧನೆಯ ಸಾಧ್ಯತೆಗಳನ್ನು ಕುರಿತು ತಿಳಿಸಲಾಗಿದೆ.

ಹೀಗೆ ಹನ್ನೊಂದು ಅಧ್ಯಾಯಗಳಲ್ಲಿ ಚೆಲ್ಲುವರಿದ ಪ್ರಸ್ತುತ ಅಧ್ಯಯನದ ವ್ಯಾಪ್ತಿ ಬೆಳಗಾವಿ ನಗರದ ಒಟ್ಟು ಸಂಸ್ಕೃತಿಯನ್ನು ಕಟ್ಟಿಕೊಡುತ್ತದೆಂದು ಭಾವಿಸಲಾಗಿದೆ. ಅಧ್ಯಯನಕ್ಕೆ ಪೂರಕವಾಗಿ ಛಾಯಾಚಿತ್ರಗಳು, ನಕ್ಷೆಗಳು, ವಕ್ತೃರ ಸಂದರ್ಶನಗಳು, ಗ್ರಂಥಋಣಗಳು ಸಹಾಯಕವಾಗಿನಿಂತಿವೆ.



## ಅಧ್ಯಾಯ : ಎರಡು

# ಇತಿಹಾಸ ಮತ್ತು ಆಡಳಿತ

**ಪೀಠಿಕೆ :**

ಒಂದು ಪ್ರದೇಶದ ಜನತೆ ಬದುಕಿದ ರೀತಿ-ನೀತಿ, ಅನುಸರಿಸಿದ ಮತ-ಧರ್ಮ, ಕಟ್ಟಿದ ಕಲೆ-ಸಾಹಿತ್ಯ, ಅವರ ಜೀವನ ಸಮಸ್ಯೆ-ಹೋರಾಟ ಮುಂತಾದವುಗಳ ಒಂದು ಸುಸಂಗತ ಅರ್ಥವಿವರಣೆ ಇತಿಹಾಸವಾಗುತ್ತದೆ. ಈ ಹಿನ್ನೆಲೆಯಲ್ಲಿ ಬೆಳಗಾವಿಯ ಇತಿಹಾಸವು ವೈಶಿಷ್ಟ್ಯಪೂರ್ಣವಾಗಿದೆ. ಶಿಲಾಯುಗದ ಕಾಲದಿಂದಲೂ ಮಾನವನ ಪ್ರಮುಖ ನೆಲೆಯಾದ ಬೆಳಗಾವಿಯು ಕರ್ನಾಟಕದ ಚರಿತ್ರೆಯಲ್ಲಿ ಮಹತ್ವದ ಅಧ್ಯಾಯವಾಗಿದೆ. ಸುಮಾರು ಎರಡು ಸಾವಿರ ವರ್ಷಗಳ ಇತಿಹಾಸವನ್ನು ಸ್ಪಷ್ಟವಾಗಿ ಕಟ್ಟಿಕೊಡುವ ಇಲ್ಲಿಯ ಹಲವಾರು ಸ್ಮಾರಕಗಳು, ಶಾಸನಗಳು, ಮಠ, ಮಂದಿರ, ಕೋಟೆ ಮುಂತಾದವುಗಳು ರಾಜಕೀಯ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತವೆ.

ಮೌರ್ಯರಿಂದ-ಬ್ರಿಟಿಷರವರೆಗಿನ ಕಾಲಾವಧಿಯಲ್ಲಿ ಹಲವಾರು ರಾಜಕೀಯ ಸ್ಥಿತ್ಯಂತರಗಳನ್ನು ಎದುರಿಸಿ ರಾಜರಿಂದ-ರಾಜರಿಗೆ ಸಿಂಹಾಸನ ಸ್ಥಾನಪಲ್ಲಟಗೊಂಡು, ಜೊತೆಗೆ ಬೆಳಗಾವಿಯ ಹೆಸರಿನಲ್ಲಿಯೂ ಬದಲಾವಣೆ ಹೊಂದಿ, ಪ್ರಮುಖ ವ್ಯಾಪಾರಿಕೇಂದ್ರವಾಗಿ, ಆಡಳಿತ ವಿಭಾಗವಾಗಿ, ರಾಜಧಾನಿಯಾಗಿ, ಹಲವಾರು ಯುದ್ಧಗಳಿಗೆ ಯುದ್ಧಭೂಮಿಯಾಗಿಯೂ ಬೆಳಗಾವಿ ನೆಲ ಸಾಕ್ಷಿಯಾಗಿದೆ. ಬೆಳಗಾವಿ ವಿವಿಧ ಮತ-ಧರ್ಮದವರ ಆಳ್ವಿಕೆಗೆ ಒಳಪಟ್ಟರೂ ಸಾಮರಸ್ಯದ ಬದುಕನ್ನು ನಿರಂತರ ಸಾಗಿಸಿಕೊಂಡು ಬಂದಿದೆ.

ದೇಶದ ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ಸ್ವತಂತ್ರ ಭಾರತ-ಅಖಂಡ ಕರ್ನಾಟಕ ಎಂಬ ಎರಡು ವಿಭಿನ್ನ ಹೋರಾಟಗಳ ನೆಲೆಯಾಗಿ, ಬ್ರಿಟಿಷರ ಪ್ರಮುಖ ಸೇನಾ ನೆಲೆಯಾಗಿ ಬೆಳಗಾವಿ ಇಡೀ ದೇಶದ ಗಮನವನ್ನು ಸೆಳೆಯಿತು.

ಭೌಗೋಳಿಕವಾಗಿಯೂ ಅತ್ಯಂತ ಸುವ್ಯವಸ್ಥಿತ ಪ್ರದೇಶದಲ್ಲಿ ನೆಲೆಗೊಂಡಿರುವ ಬೆಳಗಾವಿಯು ಮಹಾರಾಷ್ಟ್ರ-ಕರ್ನಾಟಕ-ಗೋವಾ ಈ ಮೂರು ರಾಜ್ಯಗಳ ನಡುವಿನ ರಾಯಭಾರಿಯಂತೆ ಕಾರ್ಯನಿರ್ವಹಿಸುತ್ತಿದೆ.

ಸಾಮಾನ್ಯ ಹಳ್ಳಿಯಾಗಿ ಹುಟ್ಟಿಕೊಂಡು, ನಗರವಾಗಿ ಬೆಳೆದು, ಇಂದು ರಾಜ್ಯದ ಪ್ರಮುಖ ಮಹಾನಗರಗಳಲ್ಲಿ ಬೆಳಗಾವಿ ಒಂದಾಗಿದೆ. ಒಂದು ವಿಶಿಷ್ಟ ನಗರವಾಗಿ ರೂಪಗೊಳ್ಳುವಲ್ಲಿ ಇಲ್ಲಿ ಆಳ್ವಿಕೆ ನಡೆಸಿದ ಪ್ರತಿಯೊಬ್ಬ ರಾಜನ ಆಡಳಿತ ಮಹತ್ವದ್ದಾಗಿದೆ. ಈ ಇತಿಹಾಸವನ್ನು ಪ್ರಸ್ತುತ ಅಧ್ಯಾಯದಲ್ಲಿ ವಿವರಿಸಲಾಗಿದೆ.

**೧. ಪ್ರಾಕೃತಿಕ ಹಿನ್ನೆಲೆ:**

**ಭೌಗೋಳಿಕ ನೆಲೆ** : ಪ್ರತಿಯೊಂದು ಪ್ರದೇಶ ತನ್ನದೇ ಆದ ಭೌಗೋಳಿಕ ವೈಶಿಷ್ಟ್ಯಗಳಿಂದ ಕೂಡಿರುತ್ತದೆ. ಅದು ಜನಜೀವನದ ಮೇಲೆ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕವಾಗಿ-ತನ್ನ ಪ್ರಭಾವವನ್ನು ಬೀರುತ್ತದೆ. ಈ ಹಿನ್ನೆಲೆಯಲ್ಲಿ ಬೆಳಗಾವಿಯ ಪರಿಸರವನ್ನು ತಿಳಿದುಕೊಳ್ಳುವುದು ಮಹತ್ವದ್ದಾಗಿದೆ.

ಬೆಳಗಾವಿಯು ಉತ್ತರ ೧೫° ೫೨`ಅಕ್ಷಾಂಶ, ಪೂರ್ವ ೭೪. ೪೨` ಅಕ್ಷಾಂಶಗಳ ಮಧ್ಯದಲ್ಲಿದೆ. ಸಮುದ್ರಮಟ್ಟದಿಂದ ಎರಡು ಸಾವಿರದಾ ಎರಡು ನೂರು ಅಡಿ ಎತ್ತರದಲ್ಲಿ ಹಾಗೂ ಸಮುದ್ರ ತೀರದಿಂದ ಸುಮಾರು ೫೦ ಮೈಲು ದೂರದಲ್ಲಿದೆ. ರಾಜ್ಯದ ವಾಯವ್ಯ ಭಾಗದಲ್ಲಿರುವ ಬೆಳಗಾವಿಯು ಸಮಶೀತೋಷ್ಣ ಹವಾಮಾನವನ್ನು ಹೊಂದಿದೆ.

**ಭೂರಚನೆ:** ನಗರದ ಸುತ್ತಮುತ್ತ ೧-೧೦ ಮೀ. ದಪ್ಪದಾದ ಕಂದುಬಣ್ಣದ ಅಗ್ನಿಜನ್ಯ ಲಾವಾ (ಬೆಸಾಲ್ಟ್) ಶಿಲೆಗಳು ಕಂಡುಬರುತ್ತವೆ. ಇವು ಆರುಕೋಟಿ ವರ್ಷಗಳ ಪೂರ್ವದ ದಖ್ಖನ್ ಟ್ರಾಪ್ಸ್ ಶಿಲಾ ಸಮುದಾಯಕ್ಕೆ ಸೇರಿದವುಗಳಾಗಿವೆ ಎಂದು ಭೂಗೋಳಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ.[೧]

ಅತಿ ಪ್ರಾಚೀನ ಆದಿ ಜೀವಕಲ್ಪದ ಅಗ್ನಿಜನ್ಯ ಮೂಲದ ರೂಪಾಂತರ ಶಿಲೆಗಳಾದ ಗ್ರಾನೈಟ್-ನೈಸ್ ಹಾಗೂ ಜಲಜ ಮೂಲದ ಅಲ್ಪರೂಪಾಂತರ ಶಿಲೆಗಳಾದ ಮರಳು ಶಿಲೆ (Sand stone) ಹಾಗೂ ಸುಣ್ಣ ಶಿಲೆ (Lime stone) ಗಳನ್ನು, ಮರಳು ನಿಕ್ಷೇಪಗಳನ್ನು, ಲಾವಾಶಿಲೆ (Be sale) ಗಳನ್ನು ಬೆಳಗಾವಿಯ ಸುತ್ತಮುತ್ತಲಿನ ಪ್ರದೇಶವು ಹೊಂದಿದೆ. ಅಲ್ಲದೆ ಬೆಳಗಾವಿಯಿಂದ ಚಂದಗಡದವರೆಗೆ ದೊರೆಯುವ ವಿಫುಲವಾದ ಬಾಕಾಯಟ್ (ಅಲ್ಯುಮಿನಿಯಂ ಉತ್ಪಾದನೆಗೆ ಬೇಕಾದ ಕಚ್ಚಾವಸ್ತು) ಬೃಹತ್ ಪ್ರಮಾಣದಲ್ಲಿ ದೊರೆಯುತ್ತದೆ.[೨]

**ಮಣ್ಣು** : ಅತ್ಯಂತ ಫಲವತ್ತಾದ ಮಣ್ಣಿನ ಪಂಜಿಕೆ ಬೆಳಗಾವಿಯಲ್ಲಿದೆ. ಹೀಗಾಗಿ ಬೆಳಗಾವಿಯಲ್ಲಿ ಕೃಷಿ ಭೂಮಿ ಹೆಚ್ಚಾಗಿದ್ದು ಸುಮಾರು ಶೇಕಡಾ ೪೫ ರಿಂದ ೭೦ ರಷ್ಟು ಇದೆ. ಅದಕ್ಕಾಗಿಯೇ ಬೆಳಗಾವಿಯನ್ನು ದೊಡ್ಡಹಳ್ಳಿ ಎಂದು ಕರೆಯುತ್ತಾರೆ. ಇಲ್ಲಿ ಕಪ್ಪುಮಣ್ಣಿನ ಪ್ರದೇಶ ಹೆಚ್ಚಾಗಿದ್ದು, ಕೆಲವು ಕಡೆ ಕೆಂಪುಮಣ್ಣು ಹರಡಿಕೊಂಡಿದೆ.

**ಮಳೆ :** ಬೆಳಗಾವಿಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಮಳೆ ಕಂಡುಬರುತ್ತದೆ. ಸುತ್ತಮುತ್ತಲು ಕಣಿವೆ, ಗುಡ್ಡ, ಕಾಡನ್ನು ಹೊಂದಿದ್ದರಿಂದ ಸಹಜವಾಗಿ ಮಳೆಯ ಪ್ರಮಾಣ ಹೆಚ್ಚಾಗಿದೆ. ಎಪ್ರಿಲ್–ಮೇ ತಿಂಗಳಿನಲ್ಲಿ ಸಾಧಾರಣವಾಗಿ ಪ್ರಾರಂಭವಾದ ಮಳೆಯು ಜೂನ್‌ದಿಂದ ಅಕ್ಟೋಬರದವರೆಗೆ ಹೆಚ್ಚಿನ ಪ್ರಮಾಣದಲ್ಲಾಗುತ್ತದೆ. ಆಗಾಗ ಸಮುದ್ರದ ಹವಾಮಾನ ವೈಪರಿತ್ಯದಿಂದಾಗುವ ಮಳೆಯು ಬೆಳಗಾವಿಯಲ್ಲಿಯೂ ಕಂಡುಬರುತ್ತದೆ. ವರ್ಷದಲ್ಲಿ ಸುಮಾರು ೫೦ ಸೆಂ. ಮೀ. ದಿಂದ ೮೦ ಸೆಂ. ಮೀ. ವರೆಗೆ ಮಳೆ ಆಗಿರುವ ದಾಖಲೆಗಳಿವೆ.

**ಹವಾಮಾನ :** ಮಳೆಯ ಪ್ರಮಾಣ ಹೆಚ್ಚಾಗಿರುವುದರಿಂದ ಸಹಜವಾಗಿ ತಂಪಾದ ವಾತಾವರಣವಿಲ್ಲಿದ್ದು ಅಂತೆಯೆ ಬೆಳಗಾವಿಯನ್ನು 'ದಕ್ಷಿಣದ ಕಾಶ್ಮೀರ' ಎಂದೇ ಕರೆಯಲಾಗುತ್ತದೆ. ಇತ್ತೀಚಿನ ದಿನಗಳಲ್ಲಿ ಬಿಸಿಲಿನ ತಾಪಮಾನ ಹೆಚ್ಚಾಗುತ್ತಿದೆ. ಸುಮಾರು ೪೦–೪೨ ಡಿಗ್ರಿ ಸೆಲ್ಸಿಯಸ್‌ನಷ್ಟು ತಾಪಮಾನ ದಾಖಲಾಗಿದ್ದು ಕಂಡುಬರುತ್ತದೆ.

**ಸಸ್ಯವರ್ಗ :** ಸದಾ ಹಚ್ಚಹಸರಿನ ಮರ–ಗಿಡಗಳಿಂದ ಕಂಗೊಳಿಸುವ ಬೆಳಗಾವಿನಗರವು ಸ್ವಾಭಾವಿಕ ಸಸ್ಯವರ್ಗದ ಹಂಚಿಕೆಯಿಂದ ವಿವಿಧ ಜಾತಿಯ ಸಸ್ಯಸಂಕುಲವನ್ನು ಹೊಂದಿದೆ. ಬಿದಿರು, ಸಾಗವಾನಿ, ಶಿವನಿ, ಮತ್ತಿ, ನಂದಿ, ಹೊನ್ನೆ, ತೇಗ, ತೆಂಗು, ಬೀಟೆ, ಕರಿಮರ, ನೇರಳೆ, ಜಾಲಿ, ದಿಂಡಲ, ಹುಣಸೆ, ಶ್ರೀಗಂಧ, ಮಾವು, ಹಲಸು–ಹೀಗೆ ನೂರಾರು ಬಗೆಯ ಗಿಡ–ಮರಗಳನ್ನು ಬೆಳಗಾವಿಯಲ್ಲಿ ಕಾಣಬಹುದಾಗಿದೆ.

ನಗರದ ವಡಗಾವಿ ಪ್ರದೇಶದ ವ್ಯಾಕ್ಸಿನ ಡೀಪೋದಲ್ಲಿ ವನಸ್ಪತಿ ಔಷಧಕ್ಕೆ ಉಪಯುಕ್ತವಾದ ಔಷಧ ಸಸ್ಯಗಳು ಹೆಚ್ಚಿನ ಪ್ರಮಾಣದಲ್ಲಿವೆ. ನಗರದ ಸುತ್ತಮುತ್ತಲಿನ ಗುಡ್ಡ–ಕಾಡುಗಳಲ್ಲಿಯೂ ವನಸ್ಪತಿ ಸಸ್ಯಗಳು ಹೇರಳವಾಗಿ ಕಂಡುಬರುತ್ತವೆ.

**೨. ನಾಮ ವಿವೇಚನೆ:**

ನಾಮ ನಿಷ್ಪತ್ತಿಯು ಜನತೆಯ ಆಡುನುಡಿಯಲ್ಲಿ ನಿರಂತರ ಬದಲಾವಣೆಯ ಪ್ರಕ್ರಿಯೆಗೆ ಒಳಪಟ್ಟ ಅಂಶ. ಯಾವುದೇ ಒಂದು ಹೆಸರು ಒಂದೇ ಸ್ಥಿತಿಯಲ್ಲಿ ಮುಂದುವರೆಯುವುದು ದುರ್ಲಭ. ಇದಕ್ಕನುಗುಣವಾಗಿ ನಮ್ಮ ದೇಶದ ಬಹಳಷ್ಟು ಊರುಗಳ ಪಟ್ಟಣಗಳ ಪ್ರಾಚೀನ ಹೆಸರು ಬದಲಾವಣೆಗೊಂಡಿರುವದನ್ನು ಕಾಣಬಹುದು. ಬೆಳಗಾವಿಯು ಕೂಡ ಈ ಬದಲಾವಣೆಯ ಪ್ರಕ್ರಿಯೆಯಿಂದ ಹೊರಗುಳಿದಿಲ್ಲ. ಕ್ರಿ.ಶ. ಪೂರ್ವದಿಂದಲೇ ಜನವಸತಿ ಕೇಂದ್ರವಾಗಿದ್ದ ಬೆಳಗಾವಿಯ ಹೆಸರು ಕಾಲದಿಂದ ಕಾಲಕ್ಕೆ ಬದಲಾವಣೆಗೊಂಡಿರುವುದು ಕಂಡುಬರುತ್ತದೆ.

**ಯದುಗ್ರಾಮ :** ಕೆಲವು ಐತಿಹ್ಯಗಳ ಪ್ರಕಾರ ಇಂದಿನ ವಡಗಾಂವಿ ಭಾಗವನ್ನು ಹಿಂದೆ ಪುರಾಣಕಾಲದಲ್ಲಿ 'ಯದುಗ್ರಾಮ' ವೆಂದು ಕರೆಯುತ್ತಿದ್ದರು.[೩] ಈ ಪ್ರದೇಶದಲ್ಲಿ ನಡೆದ ಉತ್ಖನನದಿಂದ ಸುಮಾರು ಎರಡು ಸಾವಿರ ವರ್ಷಗಳ ಹಿಂದಿನ ಅವಶೇಷಗಳು ದೊರೆತು ಅಂದಿನ ನಾಗರಿಕತೆಯ ಮೇಲೆ ಹೊಸ ಬೆಳಕು ಚೆಲ್ಲಿವೆ. ಈ

ಭಾಗವನ್ನು ಶಾತವಾಹನರು ಆಳುತ್ತಿದ್ದರೆಂದು ಡಾ. ಅ. ಸುಂದರ ಅಭಿಪ್ರಾಯಪಟ್ಟಿದ್ದಾರೆ.[೪] ಕ್ರಿ. ಶ. ಪೂರ್ವ ಒಂದನೆಯ ಶತಮಾನದ ಬ್ರಾಹ್ಮೀ ಲಿಪಿಯ ಶಾಸನ ಇಲ್ಲಿ ದೊರೆತಿದ್ದು ಈ ಶಾಸನದಲ್ಲಿ 'ಯದುಗ್ರಾಮ' ವೆಂಬ ಸ್ಥಳವಾಚಕದ ಉಲ್ಲೇಖವಿರುವುದರಿಂದ ಬೆಳಗಾವಿಗೆ ಎರಡು ಸಾವಿರ ವರ್ಷಗಳ ಹಿಂದೆ ಅದೇ ಹೆಸರು ಇರಬಹುದೆಂದು ಡಾ. ಎಂ. ಬಿ. ನೇಗಿನಹಾಳ ಅವರು ಉಲ್ಲೇಖಿಸಿದ್ದಾರೆ.[೫]

**ಬೆಳಗಣವಿ :** ಶಾತವಾಹನರ ಕಾಲದಲ್ಲಿ ಕುಂತಲರಾಜ್ಯದ ಭಾಗವಾಗಿದ್ದ ಬೆಳಗಾವಿಗೆ 'ಬೆಳಗಣವಿ' ಎಂದು ಕರೆಯಲಾಗುತ್ತಿತ್ತೆಂದು ಎಸ್. ಮರುಳಪ್ಪನವರು ಅಭಿಪ್ರಾಯಪಟ್ಟಿದ್ದಾರೆ.[೬] ಆದರೆ ಇದಕ್ಕೆ ಯಾವುದೇ ಆಧಾರಗಳು ಲಭ್ಯವಾಗಿಲ್ಲ.

**ಇಕ್ಷುಗ್ರಾಮ :** ರಾಷ್ಟ್ರಕೂಟರ (ಕ್ರಿ.ಶ.೭೫೩–೯೭೩) ಕಾಲದಲ್ಲಿ ಬೆಳಗಾವಿಗೆ 'ಇಕ್ಷುಗ್ರಾಮ' ವೆಂದು ಕರೆಯುತ್ತಿದ್ದರೆಂದು ಹಲವಾರು ಶಾಸನಗಳಿಂದ ತಿಳಿದುಬರುತ್ತದೆ. ಮುಮ್ಮಡಿ ಗೋವಿಂದನ (ಕ್ರಿ.ಶ.೮೦೫) ಕಾಲದ ನೇಸ್ರಿ (ನೇಸರಗಿ) ತಾಮ್ರಪಟಶಾಸನದಲ್ಲಿ ಚಂದಗಡ ವಿಷಯದ ನೇಸರಿಕೆ (ನೇಸ್ರಿ) ಯ ಭೂಮಿಯನ್ನು 'ಇಕ್ಷುಗ್ರಾಮ'ದ ತ್ರಿವೇದಿ ನಾಗಭಟ್ಟನಿಗೆ (ಕ್ರಿ. ಶ. ೮೦೫ರಲ್ಲಿ) ದತ್ತಿ ನೀಡಲಾಗಿದೆ ಎಂಬ ಉಲ್ಲೇಖವಿದೆ.[೭]

ಸೇವುಣರ ಜಗದೇವನು ಮನೋಲಿಯಲ್ಲಿ ಶಿವಪುರವೆಂಬ ಒಂದು ಅಗ್ರಹಾರವನ್ನು ಸ್ಥಾಪಿಸಿ ಅದನ್ನು ಕ್ರಿ.ಶ. ೧೨೪೯ರಲ್ಲಿ ೧೧೦ ಬ್ರಾಹ್ಮಣರಿಗೆ 'ಇಕ್ಷುಗ್ರಾಮ'ವನ್ನು ಮಹಾಜನರಿಗೆ ದತ್ತಿ ನೀಡಿಲಾಯಿತು. ಮತ್ತು ಆ ಸಂದರ್ಭದಲ್ಲಿ ಈ ಅಗ್ರಹಾರದ ಮುಖ್ಯಸ್ಥನು ಬಸವರಸನಾಗಿದ್ದನು ಎಂದು ಡಾ. ಆರ್. ಎಂ. ಷಡಕ್ಷರಯ್ಯ ಅಭಿಪ್ರಾಯ ಪಟ್ಟಿದ್ದಾರೆ.[೮]

ಕ್ರಿ. ಶ. ೧೨೦೪ ರ ಬೆಳಗಾವಿಯ ಸೋಫಾ ಮಸೀದಿಯಲ್ಲಿರುವ ಶಾಸನದಲ್ಲಿ 'ಇಕ್ಷುಗ್ರಾಮ'ದ ಉಲ್ಲೇಖವಿದೆ.[೭] ಇಕ್ಷು ಚಕ್ರವರ್ತಿಯು ಅಶ್ವಮೇಧಯಾಗ ಮಾಡಿದಾಗ ದಕ್ಷಿಣೆಯಾಗಿ ಈ ಗ್ರಾಮವನ್ನು ಹದಿನಾರು ಋತ್ವಿಕ ಗಣಗಳಿಗೆ ದಾನ ಮಾಡಿದನೆಂದು ಇನ್ನೊಂದು ಶಾಸನ ಹೇಳುತ್ತದೆ. ಈ ಶಾಸನದ ಕವಿಯು ಬಾಳಚಂದ್ರ ಎನ್ನುವ ಉಲ್ಲೇಖವೂ ಅದರಲ್ಲಿದೆ.[೯]

ಡಾ. ಆರ್. ಎಂ. ಷಡಕ್ಷರಯ್ಯನವರು ಬೆಳಗಾವಿಯ ಪ್ರಾಚೀನ ಹೆಸರುಗಳನ್ನು ಉಲ್ಲೇಖಿಸುತ್ತ 'ಇಕ್ಷುಗ್ರಾಮ' ಎಂಬ ಹೆಸರನ್ನು ಸೂಚಿಸಿದ್ದಾರೆ.[೧೦]

'ಇಕ್ಷುಗ್ರಾಮ' ಎಂಬುದು ಇಲ್ಲಿ ಕಬ್ಬು ಹೆಚ್ಚಿನ ಪ್ರಮಾಣದಲ್ಲಿ ಬೆಳೆಯುವುದರಿಂದ (ಸಂಸ್ಕೃತದಲ್ಲಿ 'ಇಕ್ಷು' ಎಂದರೆ ಕಬ್ಬು) ಇದಕ್ಕೆ ಈ ಹೆಸರು ಬಂದಿದೆ ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೧೧]

**ವೇಣುಗ್ರಾಮ :** ಬೆಳಗಾವಿಯ ಮೂಲ ಹೆಸರು 'ವೇಣುಗ್ರಾಮ'. ಸಂಸ್ಕೃತದಲ್ಲಿ 'ವೇಣು' ಎಂದರೆ ಬಿದಿರು ಎಂದರ್ಥ. ಮಲೆನಾಡಿನ ಸಹ್ಯಾದ್ರಿ ಬೆಟ್ಟದ ಅಂಚಿನಲ್ಲಿರುವ ಬೆಳಗಾವಿಯ ಸುತ್ತ ಮುತ್ತ ಬಿದಿರು ಹೇರಳವಾಗಿರುವುದರಿಂದ ಇದಕ್ಕೆ ಈ ಹೆಸರು ಬಂದಿದೆ ಎಂದು ತಿಳಿದುಬರುತ್ತದೆ. ಕಬ್ಬು ಹೆಚ್ಚಿಗೆ ಬೆಳೆಯುತ್ತಿದ್ದುದರಿಂದ 'ಇಕ್ಷುಗ್ರಾಮ'ವಾದಂತೆ ಬಿದಿರು ಹೆಚ್ಚಿನ ಪ್ರಮಾಣದಲ್ಲಿ ದೊರೆಯುವುದರಿಂದ 'ವೇಣುಗ್ರಾಮ' ಎಂದಾಗಿರಬಹುದು.

ಗೋವಾ ಕದಂಬರ ಇಮ್ಮಡಿ ಜಯಕೇಶಿಯು ವೇಣುಗ್ರಾಮ-೭೦ನ್ನು ಆಡಳಿತ ವಿಭಾಗವನ್ನಾಗಿ ಮಾಡಿಕೊಂಡು ಆಡಳಿತ ನಡೆಸುತ್ತಿದ್ದುದು ನರೇಂದ್ರ ಶಾಸನದಿಂದ ತಿಳಿದುಬರುತ್ತದೆಂದು ಡಾ. ಆರ್. ಎಂ. ಷಡಕ್ಷರಯ್ಯ ತಿಳಿಸಿದ್ದಾರೆ.[೨] ರಟ್ಟರ ಪ್ರಸಿದ್ಧ ದೊರೆ ಒಂದನೆಯ ಲಕ್ಷ್ಮೀದೇವನು 'ವೇಣುಗ್ರಾಮ'ವನ್ನು ಗೋವೆಯ ಕದಂಬರಿಂದ ಗೆದ್ದು (ಕ್ರಿ.ಶ.ಸು.೧೧೮೪ರಲ್ಲಿ) ತನ್ನ ರಾಜಧಾನಿಯನ್ನು ಸುಗಂಧವರ್ತಿಯಿಂದ ವೇಣುಗ್ರಾಮಕ್ಕೆ ಬದಲಾಯಿಸಿಕೊಂಡಿರುವುದು ತಿಳಿದುಬರುತ್ತದೆ.[೩]

ರಟ್ಟರ ನಾಲ್ಕನೆಯ ಕಾರ್ತವೀರ್ಯನ ಕಾಲದಲ್ಲಿ ಪಾರ್ಶ್ವಪಂಡಿತನೆಂಬ ಕವಿಯು ರಚಿಸಿದ ಕಲ್ಲೋಳಿ ಶಾಸನದಲ್ಲಿ ವೇಣುಗ್ರಾಮದ ಉಲ್ಲೇಖ ಕಂಡುಬರುತ್ತದೆ.

ಕ್ರಿ. ಶ. ಸು. ೧೨೨೮ರಲ್ಲಿ ಆಡಳಿತ ನಡೆಸಿದ ರಟ್ಟರ ವಂಶದ ಇಮ್ಮಡಿ ಲಕ್ಷ್ಮೀದೇವನು ೧೪ ಆಡಳಿತ ವಿಭಾಗಗಳನ್ನು ಮಾಡಿಕೊಂಡು ಆಳ್ವಿಕೆ ನಡೆಸುತ್ತಿದ್ದು ಅವುಗಳಲ್ಲಿ ವೇಳುಗ್ರಾಮ-೭೦ ಎಂಬುದು ಒಂದು ವಿಭಾಗವಾಗಿತ್ತು ಎಂದು ಡಾ. ಶಿ. ಬಾ. ಪಾಟೀಲರು ತಿಳಿಸಿದ್ದಾರೆ.[೪]

**ಮುಸ್ತಫಾಬಾದ್ :** ಬಹಮನಿ ಸುಲ್ತಾನರ ಕಾಲದಲ್ಲಿ 'ಮುಸ್ತಫಾ' ಎಂಬ ಸರದಾರನ ಆಳ್ವಿಕೆಗೆ ಒಳಪಟ್ಟಿದ್ದ ಬೆಳಗಾವಿಯು 'ಮುಸ್ತಫಾಬಾದ್' ಎಂಬ ಹೆಸರಿನಿಂದ ಕರೆಯಲ್ಪಡುತ್ತಿತ್ತು ಎಂದು ಡಾ. ಎಸ್.ಎಂ. ಹರದಗಟ್ಟಿ ಅಭಿಪ್ರಾಯಪಟ್ಟಿದ್ದಾರೆ.[೫]

**ಅಜಂನಗರ :** ಮೊಘಲರ ಕಾಲದಲ್ಲಿ ಔರಂಗಜೇಬನ ಎರಡನೆಯ ಮಗ 'ಅಜಂ' ಬೆಳಗಾವಿಯಲ್ಲಿ ಆಡಳಿತವನ್ನು ನಡೆಸುತ್ತಿದ್ದನು. ಸಂದರ್ಭದಲ್ಲಿ 'ಅಜಂನಗರ' ಎಂಬ ಹೆಸರು ಬೆಳಗಾವಿಗೆ ಬಂದಿದೆ ಎಂದು ಡಾ. ಸ್ಮಿತಾ ಸುರೇಬಾನಕರ ಉಲ್ಲೇಖಿಸಿದ್ದಾರೆ.[೬]

**ಬೆಳ್ಳಗ್ರಾಮ:** ಬೆಳಗಾವಿಯ ಪ್ರಾಚೀನ ಹೆಸರು 'ಬೆಳ್ಳಗ್ರಾಮ' ಎಂದು ಕೆಲವರು ಅಭಿಪ್ರಾಯಪಡುತ್ತಾರೆ.[೭] ಬೆಳ್ಳ ಎಂದರೆ, ಶಿವ. ಇಲ್ಲಿ ಪ್ರಾಚೀನ ಕಾಲದಲ್ಲಿ ಪ್ರಸಿದ್ಧ ಶಿವನ ದೇವಾಲಯವಿದ್ದುದರಿಂದ ಇದಕ್ಕೆ ಬೆಳ್ಳಗ್ರಾಮ ಎಂದು ಹೆಸರಾಯಿತು. ಈ ದೇವಾಲಯ ಈಗಲೂ ಹಳೆ ಬೆಳಗಾವಿಯ ಶಹಪೂರ ಪ್ರದೇಶದಲ್ಲಿದೆ. ಇದಕ್ಕೆ ಬೆಳ್ಳ ದೇವಸ್ಥಾನವೆಂದೇ ಕರೆಯುತ್ತಾರೆ. ಈ ಬೆಳ್ಳಗ್ರಾಮವು ಬೆಳ್ಳಗ್ರಾಮ-ಬಳ್ಳಗಾವ-ಬೆಳಗಾವಿ ಎಂದಾಯಿತೆಂದು ಆರ್.ಎಸ್.

ಚಾಪಗಾವಿಯವರು ಅಭಿಪ್ರಾಯ ಪಡುತ್ತಾರೆ. ಈ ದೇವಾಲಯದ ಹತ್ತಿರ ಹರಿಯುವ ನಾಲೆಗೆ ಬೆಳ್ಳಹರಿ ಎನ್ನುತ್ತಿದ್ದರು. ಬ್ರಿಟಿಷ ಅಧಿಕಾರಿಗಳಿಗೆ 'ಬಳ್ಳಹರಿ' ಎನ್ನುವ ಉಚ್ಚಾರ ಸರಿಯಾಗದಕ್ಕೆ ಅದನ್ನು 'ಬಳ್ಳಾರಿ' ಎಂದರು. ಹೀಗಾಗಿ ಅದಕ್ಕೆ 'ಬಳ್ಳಾರಿ ನಾಲಾ' ಎಂಬ ಹೆಸರು ಬಂದಿತು. ಈಗ ನಗರದ ಮಧ್ಯದಲ್ಲಿ ಹಾಯ್ದು ಹೋದ ಈ ನಾಲೆಗೆ ಬಳ್ಳಾರಿ ನಾಲಾ ಎಂಬ ಹೆಸರಿದೆ.

**ಬೆಳಗಾವಿ :** ಇಂದಿನ 'ಬೆಳಗಾವಿ' ಎನ್ನುವ ಹೆಸರಿನ ಮೂಲರೂಪ 'ವೇಣುಗ್ರಾಮ.' ಕ್ರಮೇಣ ಬದಲಾವಣೆಯನ್ನು ಪಡೆದುಕೊಂಡು ಬೆಳಗಾವಿ ಆಗಿರುವುದನ್ನು ಈ ರೀತಿ ಗುರುತಿಸಬಹುದು.

ವೇಣುಗ್ರಾಮದಲ್ಲಿರುವ ವೇ>ಬೆ ಯಾಗಿ ಣು>ಳಾ ಆಗಿ ಮಾರ್ಪಾಡು ಹೊಂದಿ ಬೇಳು ಗ್ರಾಮವಾಯಿತು. ಮರಾಠಿ ಭಾಷೆಯ ಪ್ರಭಾವದಿಂದಾಗಿ ಈ ಬದಲಾವಣೆ ಆಗಿರುವುದು ಕಂಡುಬರುತ್ತದೆ.

**ಬೆಳಗಾಂವ :** ಬೆಳಗಾವಿ ಪ್ರದೇಶವು ಮರಾಠರ ವಶವಾದ ಮೇಲೆ ಈ ಭಾಗದಲ್ಲಿ ಮರಾಠಿಗರ ಪ್ರಭಾವ ಹೆಚ್ಚಾಗಿ ಭಾಷೆ, ಸಂಸ್ಕೃತಿ, ಧರ್ಮ, ಆಚರಣೆಗಳಲ್ಲಿ ಅದು ಕಂಡುಬರತೊಡಗಿತು. ಹೀಗಾಗಿ ಬೆಳಗಾವಿ ಎಂಬ ಹೆಸರು ಬೆಳಗಾಂವ ಎಂದು ಬದಲಾಣೆಗೊಂಡಿತು.

ದೇವನಾಗರಿ(ಮರಾಠಿ) ಲಿಪಿಯಲ್ಲಿ ಹ್ರಸ್ವ 'ಬೆ' ಉಚ್ಚಾರವಿಲ್ಲ. ಹೀಗಾಗಿ ಅವರು ಬೇಳಗಾವ್ ಎಂದು ಉಚ್ಚರಿಸಬೇಕಾಗುತ್ತದೆ. ಆದರೆ ಕನ್ನಡ–ಮರಾಠಿ ಎರಡೂ ಭಾಷೆಗಳ ಸಮ್ಮಿಳನದಿಂದ ಬೆಳಗಾವಿ ಎಂದು ಬರೆಯದೆ **'ಬೆಳಗಾವ್'** ಅಥವಾ **'ಬೆಳಗಾಂವ'** ಎಂದು ಬರೆಯುತ್ತಾರೆ.

'ಗ್ರಾಮ' ಎಂಬ ಕನ್ನಡ ಶಬ್ದದ ಅರ್ಥವು ಮರಾಠಿಯಲ್ಲಿ 'ಗಾಂವ್' ಎಂದಾಗುತ್ತದೆ. ಹೀಗಾಗಿ 'ವೇಣುಗ್ರಾಮ'ವು 'ವೇಣುಗಾಂವ್' ಎಂದಾಗಿ ಮುಂದೆ ಬೆಳಗಾವಿ ಎಂದು ಕನ್ನಡದಲ್ಲಿ ಮಾರ್ಪಾಟು ಹೊಂದಿದಾಗ ಅದು ಮರಾಠಿಯಲ್ಲಿ 'ಬೆಳಗಾಂವ' ಎಂದು ಬದಲಾವಣೆಗೊಂಡಿರಬಹುದೆಂದು ಡಾ. ಸರಜೂ ಕಾಟ್ಕರ ಅವರು ಅಭಿಪ್ರಾಯ ಪಟ್ಟಿದ್ದಾರೆ.[೧೮]

**ಬೆಲ್‌ಗಮ್ :** ಬ್ರಿಟಿಷರ ಆಡಳಿತಕ್ಕೆ ಬೆಳಗಾವಿ ಒಳಪಟ್ಟ ನಂತರ ಬೆಳಗಾವಿಯು ಬೆಲಗಮ್ ಆಗಿಯೂ ಬದಲಾವಣೆಗೊಂಡಿತು. ಈಗಲೂ ಅದು ಮುಂದುವರೆದುಕೊಂಡು ಬಂದಿದೆ.

ಒಟ್ಟಿನಲ್ಲಿ ಬೆಳಗಾವಿಯು ಪ್ರಾಚೀನಕಾಲದಿಂದಲೂ ಬೇರೆ ಬೇರೆ ಹೆಸರುಗಳಿಂದ ಅಸ್ತಿತ್ವದಲ್ಲಿದ್ದುದು ಕಂಡುಬರುತ್ತದೆ. ಯದುಗ್ರಾಮ–ಇಕ್ಷುಗ್ರಾಮ–ವೇಣುಗ್ರಾಮ ಎಂಬ ಹೆಸರುಗಳು ಪ್ರಾಚೀನಕಾಲದಲ್ಲಿ ಕಂಡುಬಂದು ಮಧ್ಯಕಾಲದಲ್ಲಿ ಮುಸ್ತಾಪಾಬಾದ–ಅಜಂನಗರ ಎಂದು ಕೆಲವು ವರ್ಷಗಳವರೆಗೆ ದಾಖಲೆಗಳಲ್ಲಿ ಉಳಿದು ಮುಂದೆ ಬೆಳಗಾವಿ ಎಂದು ಮುಂದುವರೆದಿದ್ದು ಕಂಡುಬರುತ್ತದೆ.

ಯದುಗ್ರಾಮ, ಇಕ್ಷುಗ್ರಾಮ ಹೆಸರುಗಳು 'ವೇಣುಗ್ರಾಮ' ಎಂಬ ಹೆಸರಿಗಿಂತ ಮೊದಲಿನವುಗಳಾಗಿರಬಹುದು ಅಥವಾ 'ಯದುಗ್ರಾಮ' ಮೂಲ ಹೆಸರಾಗಿ ಶಾತವಾಹನರ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಬೆಳಗಾವಿ ಆಗಿರಬಹುದು.

'ಇಕ್ಷುಗ್ರಾಮ'ವೆಂಬ ಹೆಸರು ಕಬ್ಬು ಹೆಚ್ಚಿಗೆ ಬೆಳೆಯುತ್ತಿದ್ದುದರಿಂದ ಪರ್ಯಾಯವಾಗಿ ಬಂದಿರಬಹುದು. ಮುಂದೆ 'ವೇಣುಗ್ರಾಮ' ಹೊಸದಾಗಿ ನಿರ್ಮಾಣವಾಗಿರಬಹುದು.

ಒಟ್ಟಿನಲ್ಲಿ ಬೆಳಗಾವಿ ನಾಮ ನಿಷ್ಪತ್ತಿಯ ಹಿಂದೆ ಈ ಕೆಳಗಿನ ಬದಲಾವಣೆಯನ್ನು ಕಾಣಬಹುದು.

ವೇಣುಗ್ರಾಮ>ವೇಳುಗ್ರಾಮ>ಬೇಳುಗ್ರಾಮ>ಬೆಳುಗ್ರಾಮ>ಬೆಳಗಾಮ>ಬೆಳಗಾವಿ>ಬೆಳಗಾವ್>ಬೆಲಗಮ್

'ಬೆಳಗಾವಿ' ಎಂಬ ಹೆಸರಿನ ಬದಲಾವಣೆಯ ಹಿಂದೆ ಬೆಳಗಾವಿ ನಗರದ ನಿರ್ಮಾಣ, ಸಂಸ್ಕೃತಿಯ ಇತಿಹಾಸ ಅಡಗಿರುವುದು ಒಂದು ವೈಶಿಷ್ಟ್ಯ (ಈ ವಿಷಯವನ್ನು ಬೆಳಗಾವಿ ನಗರ ರಚನೆ ಎಂಬ ಅಧ್ಯಾಯದಲ್ಲಿ ವಿವರಿಸಲಾಗಿದೆ).

**೩. ಪ್ರಾಗೈತಿಹಾಸಿಕ :**

ಶಿಲಾಯುಗದ ಕಾಲವನ್ನು ಪ್ರಾಗೈತಿಹಾಸಿಕ ಕಾಲವೆಂದು ಗುರುತಿಸಬಹುದು. ಬೆಳಗಾವಿ ಪ್ರದೇಶವು ಆದಿ ಹಳೆಶಿಲಾಯುಗದ ಕಾಲದಿಂದಲೂ ಪ್ರಮುಖವಾದ ಮಾನವ ವಾಸ್ತವ್ಯದ ನೆಲೆಯಾದದ್ದು ಸಂಶೋಧನೆಗಳಿಂದ ದೃಢಪಟ್ಟಿದೆ. ಹಳೆಶಿಲಾಯುಗದ ಸಂಸ್ಕೃತಿಯ ವಿವಿಧ ಕಾಲಘಟ್ಟಗಳಲ್ಲಿ ಬಳಸಿದ ಶಿಲಾ ಉಪಕರಣಗಳ ತಂತ್ರಗಾರಿಕೆಗಳನ್ನು ಸಂಶೋಧನೆಯ ಮೂಲಕ ಡಾ. ಅ. ಸುಂದರ ಗುರುತಿಸಿದ್ದಾರೆ.[೧೯]

ಕ್ರಿ.ಪೂ. ೨೦೦೦–೧೦೦೦ ರ ಅವಧಿಗೆ ಸಂಬಂಧಿಸಿದ ವಿಶಿಷ್ಟ ಪ್ರಕಾರದ ಒಂದು ಕೊಡಲಿ ಬೆಳಗಾವಿ ನಗರದ ಆಗ್ನೇಯಕ್ಕೆ ಸುಮಾರು ೫ ಕಿ.ಮೀ ದೂರದಲ್ಲಿ ಒಂದು ಹಳ್ಳದ ಬದಿಯಲ್ಲಿ ಸಿಕ್ಕಿರುವುದನ್ನು ಡಾ. ಅ.ಸುಂದರ ನಮೂದಿಸಿದ್ದಾರೆ. ಈ ರೀತಿಯ ಕೈಕೊಡಲಿಗಳು ಆದಿ ಹಳೆಶಿಲಾಯುಗದಲ್ಲಿ ಬಳಕೆಯಾಗುತ್ತಿರುವುದು ತಿಳಿದುಬರುತ್ತದೆ. ಬಾದಾಮಿಯ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಕೈಕೊಡಲಿ, ಮಚ್ಚುಗಳು ದೊರೆತಿದ್ದು ಇವು ಆದಿ ಹಳೆಶಿಲಾಯುಗದ ಕಾಲದ್ದಾಗಿವೆ. ಇಂತಹ ಆಯುಧಗಳು ಫ್ರಾನ್ಸ್ ದೇಶದ ಸೋಮ್ ನದಿಯ ಸೇಂಟ ಅಶೂಲದಲ್ಲಿಯ ಆಯುಧಗಳನ್ನು ಹೋಲುತ್ತಿದ್ದುದ್ದರಿಂದ ಇಲ್ಲಿಯ ಆಯುಧದ ಕೈಗಾರಿಕಾ ತಂತ್ರವನ್ನು ಅಶೂಲಿಯನ್ ತಂತ್ರವೆಂದು ಕರೆಯಲಾಗಿದೆ. ಬೆಳಗಾವಿ ಪ್ರದೇಶದ ಆದಿಮಾನವನು ಕ್ಲ್ಯಾಕ್ಟೋನಿಯನ್ ತಂತ್ರವನ್ನು ಕೂಡ ಬಳಸಿರುವುದನ್ನು ಡಾ. ಶೀಲಾಕಾಂತ ಪತ್ತಾರ ತಮ್ಮ ಸಂಶೋಧನ ಪ್ರಬಂಧದಲ್ಲಿ ಸೂಚಿಸಿದ್ದಾರೆ.[೨೦]

ಬೆಳಗಾವಿಯ ವಡಗಾಂವ–ಮಾಧವಪುರ ಪ್ರದೇಶಗಳಲ್ಲಿ ಮಾನವ ವಾಸ್ತವ್ಯದ ನೆಲೆಯನ್ನು ಪುರಾತತ್ವಶಾಸ್ತ್ರಜ್ಞರು ಗುರುತಿಸಿದ್ದಾರೆ. ಇಲ್ಲಿ ಉತ್ಖನನ ಕಾರ್ಯವನ್ನು ನಡೆಸಿ ಮಹತ್ವದ ಅಂಶಗಳನ್ನು ಬೆಳಕಿಗೆ ತಂದಿದ್ದಾರೆ. ಇಲ್ಲಿ

ದೊರೆತ ಮೃತ್ ಪಾತ್ರೆಗಳು ವಿಶೇಷವಾಗಿವೆ. ಅಗಲವಾದ ಬಾಯಿ ಮತ್ತು ಸಣ್ಣದಾದ ಸಮತಟ್ಟಿನ ಬುಡವುಳ್ಳ ಒರಟಾದ ಮೈಯುಳ್ಳ ಲೋಟಗಳು, ಬಾನಿಗಳು, ಕೊಡಗಳು, ಹೊಳಪಾದ ಕೆಂಪುಬಣ್ಣದ ನಯವಾದ ಮಣ್ಣಿನ ಉದ್ದನೆ ಮೂತಿಯ ಹೂಜಿಗಳು ಮುಂತಾದವುಗಳನ್ನು ಗಮನಿಸಿ ಇವು ಬೃಹತ್ ಶಿಲಾಸಂಸ್ಕೃತಿಯ ಮೃತ್ ಪಾತ್ರೆಗಳಿಗೆ ಹೋಲುತ್ತವೆ ಎಂದು ಡಾ. ಅ. ಸುಂದರ ಅಭಿಪ್ರಾಯಪಟ್ಟಿದ್ದಾರೆ. ಈ ರೀತಿಯಾಗಿ ಮಣ್ಣಿನ ಪಾತ್ರೆಗಳಿಗೆ ಕಲೆಯ ಸಂಸ್ಕಾರ ನೀಡುವುದನ್ನು ನವಶಿಲಾಯುಗದ ಕಾಲದಲ್ಲಿ ಕಾಣಬಹುದಾಗಿದೆ.

ಇಲ್ಲಿ ದೊರೆತ ಮೃತ್ ಪಾತ್ರೆಗಳ ಮೇಲಿನ ಚಿತ್ರಗಳು ವಿಶೇಷವಾಗಿವೆ. ಈ ಚಿತ್ರಗಳನ್ನು ಮೂಡಿಸಲು ತಗ್ಗು ಚಿತ್ರದ ಉರುಳು ಮುದ್ರಿಕೆಯನ್ನು ಬಳಸಿರಬಹುದಾಗಿದೆ. ಇಂತಹ ಚಿತ್ರಗಳಲ್ಲಿ ಮಹತ್ವದ್ದೆಂದರೆ ಆನೆಯನ್ನು ನಡೆಸಿಕೊಂಡು ಹೋಗುತ್ತಿರುವ ಮನುಷ್ಯನ ಚಿತ್ರ. ಈ ಚಿತ್ರದಲ್ಲಿರುವ ಮನುಷ್ಯನ ಲಕ್ಷಣಗಳು ಪ್ರಾಚೀನ ಸುಮೇರಿಯಾ ಜನಾಂಗದವರ ಲಕ್ಷಣಕ್ಕೆ ಸ್ವಲ್ಪ ಮಟ್ಟಿಗೆ ಹೋಲಿಕೆಯಾಗುವುದರಿಂದ ಪಶ್ಚಿಮ ಏಷ್ಯಾದ ಪ್ರಾಚೀನ ನಾಗರಿಕತೆಗಳಿಗೂ ಹಾಗೂ ಭಾರತದ ಸಮಕಾಲೀನ ಹರಪ್ಪಾ ಮತ್ತು ಇತರ ಸಂಸ್ಕೃತಿಗಳಿಗೂ ಪರಸ್ಪರ ವ್ಯಾಪಾರ ಸಂಬಂಧವಿದ್ದುದರಿಂದ ಈ ಮುದ್ರಿಕೆ ಶಿಲಾ-ತಾಮ್ರಯುಗ ಸಂಸ್ಕೃತಿಯ ಕಾಲದ್ದಾಗಿರಬಹುದೆಂದು ಡಾ. ಅ. ಸುಂದರ ತರ್ಕಿಸಿದ್ದಾರೆ.

ಬೆಳಗಾವಿ ನಗರವನ್ನು ಹೊರತುಪಡಿಸಿ ಬೆಳಗಾವಿ ಜಿಲ್ಲೆಯ ಬೇರೆ ಬೇರೆ ಭಾಗಗಳಲ್ಲಿಯೂ ಪ್ರಾಗೈತಿಹಾಸಿಕ ನೆಲೆಗಳು ಕಂಡುಬರುತ್ತವೆ. ಈ ನೆಲೆಗಳು ಮಲಪ್ರಭಾ, ಘಟಪ್ರಭಾ ಮತ್ತು ಕೃಷ್ಣಾ ನದಿಗಳ ಬಯಲು ಪ್ರದೇಶಗಳಲ್ಲಿರುವುದು ಸಂಶೋಧನೆಗಳಿಂದ ತಿಳಿದುಬರುತ್ತದೆ. ಇವು ಆದಿ ಹಳೆ ಶಿಲಾಯುಗದ ಕಾಲದಿಂದ ಆದಿ ಇತಿಹಾಸ ಕಾಲದ ಸಂಸ್ಕೃತಿಯವರೆಗೆ ಇದ್ದಂತಹುಗಳಾಗಿವೆ.

ಆದಿ ಹಳೆ ಶಿಲಾಯುಗದ ಕಾಲದ ಸಂಸ್ಕೃತಿಯು ತೊರಗಲ್, ಸುತಗಟ್ಟಿ, ಮಂಗಸೂಳಿ ಮುಂತಾದ ಪ್ರದೇಶಗಳಲ್ಲಿದ್ದರೆ, ಮಧ್ಯ ಹಳೆ ಶಿಲಾಯುಗದ ಕಾಲದ ಸಂಸ್ಕೃತಿಯು ಯಾದವಾಡದಲ್ಲಿ, ನೂತನ ಶಿಲಾ ತಾಮ್ರಯುಗದ ಸಂಸ್ಕೃತಿಯು ಜೋಗಿ ಬೂದಿಹಾಳ, ಕೊಣ್ಣೂರ, ಕಡೋಳಿ, ಎಕ್ಸಂಬಿ, ಸತ್ತಿ, ಕುಡಚಿ, ಮಂಗಸೂಳಿಗಳಲ್ಲಿ, ಕಬ್ಬಿಣಯುಗದ ಬೃಹತ್ ಶಿಲಾ ಸಂಸ್ಕೃತಿಯು ಹಲಸಿ, ಸೌಂದತ್ತಿ, ನವಿಲುತೀರ್ಥ, ಸಿಂದೋಗಿ, ತಲ್ಲೂರು, ಹಿಡಕಲ್, ಗೊಡಚನಮಲ್ಕಿ, ಗುಡಗೇರಿ, ಗುಮಚಿಮರಡಿ ಮುಂತಾದವುಗಳಲ್ಲಿ ಕಂಡುಬರುತ್ತದೆ.[೨೧] ಈ ಎಲ್ಲ ನೆಲೆಗಳಿಗೂ ಹಾಗೂ ಬೆಳಗಾವಿಯ ಮಾಧವಪುರ-ವಡಗಾವಿ ಪ್ರದೇಶದ ನೆಲೆಗಳಿಗೂ ಜೀವನ ಶೈಲಿಯಲ್ಲಿ ವ್ಯತ್ಯಾಸವಿರುವುದು ಕಂಡುಬರುತ್ತದೆ.

ಬೆಳಗಾವಿ ನಗರದಲ್ಲಿ ಪ್ರಾಗೈತಿಹಾಸಿಕ ಕಾಲದ ಮತ್ತೊಂದು ನೆಲೆಯನ್ನು ಈಗಿನ ರೇಲ್ವೆ ಸ್ಟೇಶನ್ನಿನ ಉತ್ತರದ ಬದಿಯಲ್ಲಿ ಗುರುತಿಸಬಹುದು. ಇಲ್ಲಿರುವ ಕೆಲವು ಅವಶೇಷಗಳಿಂದ ಇದು ನಾಗರ ಸಂಸ್ಕೃತಿಗೆ ಸಂಬಂಧಿಸಿದವುಗಳಾಗಿವೆ. ಈ ಪ್ರದೇಶದಲ್ಲಿ ಪುರಾತನ ಬಾವಿಯ ಅವಶೇಷಗಳು ಕಂಡುಬರುತ್ತವೆ. 'ನಾಗರ ಕೆರೆ' ಎಂಬ ಹೆಸರಿನ ಸಣ್ಣ

ಕೆರೆಯು ಈಗಲೂ ಇಲ್ಲಿದೆ. ಈ ಪ್ರದೇಶದಲ್ಲಿ 'ಶಾತವಾಹನ'ರ ಕಾಲಕ್ಕಿಂತ ಪೂರ್ವದಲ್ಲಿ ಜನವಸತಿ ಇದ್ದಿರಬಹುದು. ಬಹುಶಃ ಇದು ನಾಗರ ಸಂಸ್ಕೃತಿಗೆ ಸಂಬಂಧಪಟ್ಟಿರಬಹುದೆಂದು ಡಾ. ಎಂ. ಬಿ. ನೇಗಿನಹಾಳರು ಅಭಿಪ್ರಾಯಪಟ್ಟಿದ್ದಾರೆ.[೨೨]

ಮಾನವನ ಜೀವನ ಶೈಲಿ ಮತ್ತು ಸಂಸ್ಕೃತಿ ವಿಕಸನದ ಹಂತದಲ್ಲಿ ಕಬ್ಬಿನದ ಬೃಹತ್ ಶಿಲಾ ಸಂಸ್ಕೃತಿಯ ಕಾಲವು ಮಹತ್ವದ್ದಾಗಿದೆ. ಕಬ್ಬಿಣ, ಉಕ್ಕು ತಂತ್ರಗಾರಿಕೆಯಿಂದ ಹೊಸ ಉಪಕರಣಗಳನ್ನು ಶೋಧಿಸಲಾಯಿತು. ಕಬ್ಬಿಣದ ನಿಕ್ಷೇಪವಿರುವ ಪ್ರದೇಶಗಳಲ್ಲೆಲ್ಲಾ ಮಾನವನ ನೆಲೆಗಳು ಕಂಡುಬರತೊಡಗಿದವು. ಬೆಳಗಾವಿಯ ಉತ್ತರ ದಿಕ್ಕಿಗಿರುವ ಗುಡ್ಡದಲ್ಲಿ ಕಬ್ಬಿಣದ ನಿಕ್ಷೇಪಗಳಿರುವುದು ಕಂಡುಬರುತ್ತದೆ. ಈಗಲೂ ಇಲ್ಲಿ ಹಳೆಯ ಪದ್ಧತಿಯ ಪ್ರಕಾರ ಕಬ್ಬಿಣವನ್ನು ತಯಾರಿಸುವ ಒಂದೆರೆಡು ಘಟಕಗಳಿವೆ. ಈ ಪ್ರದೇಶದಲ್ಲಿ 'ಕಾಗತಿ' ಎನ್ನುವ ಪ್ರಾಚೀನ ಗ್ರಾಮವಿದ್ದು ಹಲವಾರು ಪುರಾತನ ಅವಶೇಷಗಳನ್ನು ಕಾಣಬಹುದು. ಈ ಊರಿನ ಪಕ್ಕದಲ್ಲಿಯೇ ಮಾರ್ಕಂಡೇಯ ನದಿಯು ಹರಿಯುತ್ತಿದ್ದು. ಇಲ್ಲಿ ಕಬ್ಬಿಣ ಬೃಹತ್ ಶಿಲಾ ಸಂಸ್ಕೃತಿಯ ಕಾಲದಿಂದಲೂ ಮಾನವನ ವಾಸ್ತವ್ಯವಿರುವ ಸಾಧ್ಯತೆಗಳಿವೆ. 'ಕಾಗತಿ' ಎನ್ನುವ ಹೆಸರು ಕೂಡ ಪ್ರಾಚೀನ ಇತಿಹಾಸವನ್ನು ತಿಳಿಸುವುದಾಗಿದೆ. ರಾಮಾಯಣದ ಕಾಲದಲ್ಲಿ 'ಕಾರ್ತಿಕೇಯವನ' ಎನ್ನುವುದು ಕಬ್ಬಿಣದ ನಿಕ್ಷೇಪಗಳಿರುವ ಪ್ರದೇಶದಲ್ಲಿ ಆಯುಧಗಳನ್ನು ತಯಾರಿಸುವ ಸ್ಥಳ ಎಂಬುದಾಗಿದೆ.[೨೩] ಈ ಕಾರ್ತಿಕೇಯವನಕ್ಕೂ 'ಕಾಗತಿ'ಗೂ ಸಂಬಂಧವಿರುವ ಸಾಧ್ಯತೆಯಿದೆ. ಕಾರ್ತಿಕೇಯವನವೇ 'ಕಾಗತಿ'ಯಾಗಿರಬಹುದು. ಈ ಪ್ರದೇಶದಲ್ಲಿಯೇ ಇಂಡಾಲ ಅಲ್ಯುಮಿನಿಯಂ ಫ್ಯಾಕ್ಟರಿಯನ್ನು ಸ್ಥಾಪಿಸಲಾಗಿದೆ. ಹೀಗಾಗಿ ಕಬ್ಬಿಣ ಬೃಹತ್ ಶಿಲಾಯುಗದ ಕಾಲದ ಮಾನವ ವಾಸ್ತವ್ಯದ ನೆಲೆಯು ಈ ಪ್ರದೇಶದಲ್ಲಿರುವ ಸಾಧ್ಯತೆಯಿದೆ.

ಒಟ್ಟಿನಲ್ಲಿ ಬೆಳಗಾವಿ ನಗರ ಮತ್ತು ಸುತ್ತಮುತ್ತಲಿನ ಪ್ರದೇಶವು ಆದಿ ಶಿಲಾಯುಗದ ಕಾಲದಿಂದಲೂ ಮಾನವನ ವಾಸ್ತವ್ಯದ ನೆಲೆಯಾಗಿರುವ ಬಗೆಗೆ ಹಲವಾರು ಕುರುಹುಗಳು ಕಂಡುಬರುತ್ತವೆ. ಮುಂದೆ ಇತಿಹಾಸ ಕಾಲದಲ್ಲಿ ಶಾತವಾಹನರ ಆಳ್ವಿಕೆಯಲ್ಲಿ ಕಂಡು ಬಂದ ವಡಗಾವಿ-ಮಾಧವಪುರ ಪ್ರದೇಶವು ಆ ಕಾಲದಲ್ಲಿ ಅತ್ಯಂತ ಸಮೃದ್ಧವಾದ, ವ್ಯವಸ್ಥಿತವಾದ ನಗರವಾಗಿತ್ತು. ಈ ನಗರದ ಬೆಳವಣಿಗೆಯು ಒಮ್ಮೆಲೇ ಆಗಿದ್ದಲ್ಲ. ಅದು ಹಂತಹಂತವಾಗಿ ರೂಪಗೊಂಡದ್ದು. ಅಂದರೆ ಸಂಸ್ಕೃತಿಗಳ ಕಾಲದಲ್ಲಿ ಮಾನವನ ವಾಸ್ತವ್ಯ ನಿಸ್ಸಂದೇಹವಾಗಿ ಇಲ್ಲಿ ನೆಲೆಗೊಂಡಿತ್ತೆಂದು ಹೇಳಬಹುದಾಗಿದೆ. ಈ ಪ್ರದೇಶದಲ್ಲಿ ಇನ್ನೂ ಹೆಚ್ಚಿನ ಉತ್ಖನನ ನಡೆಸಿದರೆ ಹೆಚ್ಚಿನ ಮಾಹಿತಿಯನ್ನು ಪಡೆಯಬಹುದಾಗಿದೆ.

**೪. ಪ್ರಾಚೀನ ಇತಿಹಾಸ :**

ಕರ್ನಾಟಕದ ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆಯಲ್ಲಿ ಬೆಳಗಾವಿ ತನ್ನದೇ ಆದ ಕೊಡುಗೆಯನ್ನು ನೀಡಿದೆ. ಹಲವಾರು ಪ್ರಾಚೀನ ಅರಸುಮನೆತನಗಳ ಆಧೀನದಲ್ಲಿ ಬೆಳಗಾವಿಯು ಒಂದಾಗಿ ಸೇರಿದ್ದಿತು. ಈ ಪ್ರದೇಶದ ರಾಜಕೀಯ ಚರಿತ್ರೆಯಲ್ಲಿ ಮೌರ್ಯ, ಶಾತವಾಹನ, ರಾಷ್ಟ್ರಕೂಟ, ರಟ್ಟರು, ಗೋವಾ ಕದಂಬ ಮುಂತಾದ

ಅರಸು ಮನೆತನಗಳು ಸಕ್ರಿಯ ಪಾತ್ರವನ್ನು ವಹಿಸಿದ್ದವು. ಈ ಎಲ್ಲ ರಾಜರ ಆಳ್ವಿಕೆಯಿಂದಾಗಿ ಬೆಳಗಾವಿಯು ಸಾಂಸ್ಕೃತಿಕವಾಗಿ ವಿಕಾಸವಾಗತೊಡಗಿತು.

**ಮೌರ್ಯರು :** ಪ್ರಾಚೀನ ಭಾರತದ ಇತಿಹಾಸದಲ್ಲಿ ಉಜ್ವಲವಾದ ನೂತನಯುಗ ಆರಂಭವಾಗುವುದು ಮೌರ್ಯ ಸಾಮ್ರಾಜ್ಯದ ಸ್ಥಾಪನೆಯಿಂದ. ಉತ್ತರಭಾರತದ ಕಾಬೂಲ್-ಖಾಂದಹಾರ್ (ಅಪ್ಘಾನಿಸ್ಥಾನ)ದಿಂದ ದಕ್ಷಿಣದಲ್ಲಿ ಚಿತ್ರದುರ್ಗದವರೆಗಿನ ವಿಶಾಲವಾದ ಪ್ರದೇಶವನ್ನೊಳಗೊಂಡ ಮೌರ್ಯ ಸಾಮ್ರಾಜ್ಯವು ಅಸ್ತಿತ್ವದಲ್ಲಿತ್ತು. ಬೆಳಗಾವಿ ಪ್ರದೇಶವೂ ಈ ಸಾಮ್ರಾಜ್ಯಕ್ಕೆ ಒಳಪಟ್ಟಿತ್ತು. ಮೌರ್ಯರ ಕಾಲದಿಂದ ಬೆಳಗಾವಿಯ ಇತಿಹಾಸ ಪ್ರಾರಂಭವಾಗುತ್ತದೆ. ಮೌರ್ಯವಂಶದ ಪ್ರಸಿದ್ಧ ದೊರೆ ಚಂದ್ರಗುಪ್ತನು(ಕ್ರಿ. ಪೂ. ೩೨೩-೨೯೮) ತನ್ನ ಸಹಚರರ ಜೊತೆಗೆ ಮಧ್ಯಪ್ರದೇಶದಿಂದ ಶ್ರವಣಬೆಳಗೊಳಕ್ಕೆ ಬೆಳಗಾವಿಯ ಮೂಲಕ ಹೋಗುವಾಗ ಬೆಳಗಾವಿಯಲ್ಲಿ ಆತ ತಂಗಿದ್ದನೆಂದು ತಿಳಿದುಬರುತ್ತದೆ.[೨೪]

ಮತ್ತೊಂದು ಐತಿಹ್ಯದ ಪ್ರಕಾರ ಜಕ್ಕದೇವ ಎಂಬ ಅರಸನು ಬೆಳಗಾವಿಯಲ್ಲಿ ಮಣ್ಣಿನ ಕೋಟೆಯನ್ನು ಕಟ್ಟಿಕೊಂಡು ೮೦೦೦ ಹಳ್ಳಿಗಳಿಗೆ ಒಡೆಯನಾಗಿ ರಾಜ್ಯವಾಳುತ್ತಿದ್ದನು.[೨೫] ಆಗ ದಕ್ಷಿಣದಿಂದ ೧೦೮ ಜೈನ ದಿಗಂಬರ ಮುನಿಗಳು ಧರ್ಮಪ್ರಚಾರಕ್ಕೆಂದು ಬೆಳಗಾವಿಗೆ ಬಂದು ಈಗಿನ ವಡಗಾವಿ ಪ್ರದೇಶದಲ್ಲಿ ಬೀಡುಬಿಟ್ಟರು. ಆಗ ಜಕ್ಕದೇವನು ಅವರ ದರ್ಶನಕ್ಕಾಗಿ ಸಾಯಂಕಾಲ ತನ್ನ ಪರಿವಾರ ಸಮೇತನಾಗಿ ಹೋಗುತ್ತಿರುವಾಗ ಸೈನಿಕರ ಕೈಯಲ್ಲಿದ್ದ ಪಂಜುಗಳು ಕಾಡಿಗೆ ತಾಕಿ ಅಲ್ಲಿದ್ದ ಜೈನ ಯತಿಗಳು ಬೆಂಕಿಯಲ್ಲಿ ಸುಟ್ಟು ಭಸ್ಮವಾದರು. ಈ ಪಾಪ ಪರಿಹಾರಕ್ಕಾಗಿ ಜಕ್ಕದೇವನು ಈಗಿನ ಕೋಟೆ ಪ್ರದೇಶದಲ್ಲಿ ೧೦೮ ಜಿನಾಲಯಗಳನ್ನು ಮತ್ತು ಬಾವಿಗಳನ್ನು ಕಟ್ಟಿಸಿದನು. ಆದರೆ ಇದಕ್ಕೆ ಯಾವುದೇ ಆಧಾರಗಳು ಲಭ್ಯವಿಲ್ಲ. ಈಗಿನ ವಡಗಾವಿಯ ಸುತ್ತ ಮಣ್ಣಿನ ಕೋಟೆಯ ಅವಶೇಷಗಳು ಮಾತ್ರ ಕಂಡುಬರುತ್ತವೆ. ಸಂಗಡವೇ ಕೋಟೆಯ ಪ್ರದೇಶದಲ್ಲಿ ಅಲ್ಲಲ್ಲಿ ಜೈನಧರ್ಮದ ಬಸದಿಗಳ ಕುರುಹುಗಳು ಕಂಡುಬರುತ್ತವೆ.

**ಶಾತವಾಹನರು :** ಮೌರ್ಯರ ಪತನಾನಂತರ ಅವರ ಅಧೀನರಾಗಿದ್ದ ಶಾತವಾಹನರು ದಕ್ಷಿಣ ಪಥ(ಡಕ್ಕನ್)ದಲ್ಲಿ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿ ಆಳ್ವಿಕೆ ನಡೆಸಿದರು. ದಕ್ಷಿಣ ಭಾರತದಲ್ಲಿ ಮೊಟ್ಟ ಮೊದಲಬಾರಿಗೆ ವಿಶಾಲ ಸಾಮ್ರಾಜ್ಯವನ್ನು ಸ್ಥಾಪಿಸಿದ ಶ್ರೇಯಸ್ಸು ಶಾತವಾಹನರಿಗೆ ಸಲ್ಲುತ್ತದೆ. ಇವರು ಕ್ರಿ.ಪೂ. ೨೩೦ ರಿಂದ ಕ್ರಿ.ಶ.೨೨೦ ರವರೆಗೆ ಸುಮಾರು ೪೫೦ ವರ್ಷಗಳ ಕಾಲ ವಿಜ್ರಂಭಣೆಯಿಂದ ಆಳಿದರು. ಇವರು ಉತ್ತರ ಭಾರತದಲ್ಲಿಯೂ ತಮ್ಮ ಪ್ರಭುತ್ವವನ್ನು ವಿಸ್ತರಿಸುವಲ್ಲಿ ಕೆಲಮಟ್ಟಿಗೆ ಯಶಸ್ವಿಯಾದರು. ಬೆಳಗಾವಿಯ ಇಂದಿನ ವಡಗಾಂವಿ-ಮಾಧವಪುರ ಪ್ರದೇಶದಲ್ಲಿ ಶಾತವಾಹನ ಸಾಮ್ರಾಜ್ಯದ ಪ್ರಮುಖ ಪಟ್ಟಣವು ಅಸ್ತಿತ್ವದಲ್ಲಿರುವುದು ಉತ್ಖನನದಿಂದ ತಿಳಿದುಬಂದಿದೆ.

ಅಲ್ಲದೆ ಈ ಸಾಮ್ರಾಜ್ಯದ ನೆಲೆ ಹೇಗೆ ವ್ಯಾಪಿಸಿತ್ತು ಎಂಬ ಅಂಶಗಳು ಮೊದಲು ಬೆಳಕಿಗೆ ಬಂದಿದ್ದೇ ಬೆಳಗಾವಿಯಲ್ಲಿ ಎಂಬುದು ಮಹತ್ವದ್ದಾಗಿದೆ. ೧೯೪೫ರಲ್ಲಿ ಕನ್ನಡ ಸಂಶೋಧನ ಸಂಸ್ಥೆಯ ನಿರ್ದೇಶಕರಾಗಿದ್ದ ಆರ್. ಎಸ್. ಪಂಚಮುಖಿಯವರು ಬೆಳಗಾವಿಯ ಈ ನೆಲೆಯನ್ನು ಪ್ರಥಮವಾಗಿ ಪರೀಕ್ಷಿಸಿ ಇದು ಒಂದು ಮಹತ್ವದ ಪ್ರಾಚೀನ ಸಂಸ್ಕೃತಿಯ ನೆಲೆಯೆಂಬುದನ್ನು ವರದಿ ಮಾಡಿದರು.[೨೬] ಇಲ್ಲಿ ನಡೆದ ಉತ್ಖನನದ ಸಂದರ್ಭದಲ್ಲಿ ದೊರೆತ ಷಟ್ಕೋನದ ಸ್ತಂಭ ಶಾಸನವು (ಕ್ರಿ.ಶ.೧೦೫) ಮುಖ್ಯವಾಗಿದೆ. ಈ ಶಾಸನವು ಬ್ರಾಹ್ಮಿ ಲಿಪಿ, ಪ್ರಾಕೃತಭಾಷೆಯ ಶಾಸನವಾಗಿದೆ. ಈ ಶಾಸನವು ಸಾಕೇತದಿಂದ ಬಂದ ಕಾಶ್ಯಪಗೋತ್ರದ ಕಠಶಾಖೆಯ ಸೋಮಯಶಸ್ ಎಂಬ ಶ್ರೋತ್ರಿ 'ವಾಜಪೇಯ'ವು ಸೇರಿದಂತೆ ೮೦ ಪ್ರಕಾರದ ಯಜ್ಞ ಮಾಡಿದ ವಿಷಯ ಹೇಳುತ್ತದೆ. ಮುಂದೆ ೧೯೬೫ರಲ್ಲಿ ಡಾ. ಅ. ಸುಂದರ ಅವರು ಈ ನೆಲೆಯನ್ನು ಪರೀಕ್ಷಿಸಿದಾಗ ಶಾತವಾಹನ ಅರಸರ ಕಾಲದ ಸತುವು ಮತ್ತು ತವರ ಲೋಹಗಳ ಮಿಶ್ರಣದ ಎರಡು ನಾಣ್ಯಗಳು ದೊರೆತವು. ಒಂದು ನಾಣ್ಯದ ಬದಿಯಲ್ಲಿ ಪ್ರಾಕೃತಭಾಷೆಯಲ್ಲಿ 'ಸಿರಿ ಸತಕಣಿ' (ಯಜ್ಞಶ್ರೀ ಶಾತಕರ್ಣಿ) ನಾಣ್ಯಗಳು 'ವಾಸಿರಿಪುಟಸ ಪುಳಾಮಾವಿ' (ವಾಸಿಷ್ಠೀ ಪುತ್ರ ಪುಳುಮಾವಿ) 'ಯಜ್ಞಸಿರಿ ಸತಕಣಿ' (ಯಜ್ಞಶ್ರೀ ಶಾತಕರ್ಣಿ) 'ವಾಸಿರಿ ಪುತಸವಿಳಿವಾಯಕುರಸ' (ವಾಸಿಷ್ಠಿ ಪುತ್ರ ವಿಳಿವಾಯಕುರಸ್ಯ) 'ಮಹಾರಠಿಸ' ಮುಂತಾದ ಹೆಸರುಗಳು ಇಲ್ಲಿಯ ನಾಣ್ಯಗಳಿಂದ ಕಂಡುಬರುತ್ತವೆ. ನಾಣ್ಯಗಳ ಮೇಲೆ ಒಂದು ಬದಿಯಲ್ಲಿ ಆನೆಯ ಉಬ್ಬು ಚಿತ್ರವಿದ್ದು ಮತ್ತೊಂದು ಬದಿಯಲ್ಲಿ 'ಉಜ್ಜಯಿನಿ' ಚಿಹ್ನೆ ಇದೆ. ಇಲ್ಲಿಯ ನಾಣ್ಯಗಳು ಶಾತವಾಹನರ ಬೇರೆ ಬೇರೆ ರಾಜರ ಕಾಲದ್ದಾಗಿವೆ. ಒಂದನೆಯ ಶಾತಕರ್ಣಿಯ ಕಾಲದಲ್ಲಿ ತಾಮ್ರದ ನಾಣ್ಯಗಳು, ಸತು-ತವರ ಮಿಶ್ರಲೋಹದ ನಾಣ್ಯಗಳು ಗೌತಮಿ ಪುತ್ರಶಾತಕರ್ಣಿ, ವಾಸಿಷ್ಠಿಪುತ್ರ ಪುಳುಮಾವಿ, ಯಜ್ಞಶ್ರೀ ಶಾತಕರ್ಣಿ ರಾಜರ ಕಾಲದ್ದಾಗಿವೆ ಎಂದು ಡಾ. ಅ. ಸುಂದರ ಅಭಿಪ್ರಾಯಪಟ್ಟಿದ್ದಾರೆ.[೨೭]

ಶಾತವಾಹನರ ಕಾಲದಲ್ಲಿ ಬೆಳಗಾವಿಯು ಪ್ರಮುಖ ವ್ಯಾಪಾರಿ ಪಟ್ಟಣವಾಗಿತ್ತು. ದೇಶ ವಿದೇಶಗಳಿಂದ ಇಲ್ಲಿ ವ್ಯಾಪಾರಕ್ಕಾಗಿ ಜನರು ಬರುತ್ತಿದ್ದರು ಎನ್ನುವುದು ಇಲ್ಲಿ ದೊರೆತ ಕೆಲವು ನಾಣ್ಯಗಳ ಮೇಲಿಂದ ತಿಳಿದುಬರುತ್ತದೆ. ರೋಮನ್ ದೇಶದ ನಾಣ್ಯಗಳು ಇಲ್ಲಿ ದೊರೆತಿದ್ದು ರೋಮ್ ದೇಶದ ಜೊತೆಗೆ ವ್ಯಾಪಾರ ಸಂಬಂಧವನ್ನು ಬೆಳಗಾವಿಯು ಹೊಂದಿರುವುದು ಸ್ಪಷ್ಟವಾಗುತ್ತದೆ.[೨೮]

ಬೆಳಗಾವಿಯು ಶಾತವಾಹನರ ಕಾಲದಲ್ಲಿ ಬೃಹತ್ ಪಟ್ಟಣವಾಗಿದ್ದು ಇಲ್ಲಿಯ ಅವಶೇಷಗಳಿಂದ ತಿಳಿದುಬರುತ್ತದೆ. ಉತ್ಖನನದ ಸಂದರ್ಭದಲ್ಲಿ ಮಾಧವಪುರದಲ್ಲಿ ಪತ್ತೆಯಾದ ವಿಶಾಲ ಬೀದಿಯು ವಿಶಿಷ್ಟವಾಗಿದೆ. ಈ ಬೀದಿಯ ಅಕ್ಕಪಕ್ಕದಲ್ಲಿ ಎರಡೂ ಬದಿಯಲ್ಲಿ ಕಟ್ಟಡಗಳ ಅವಶೇಷಗಳು ಕಂಡುಬಂದಿದ್ದರಿಂದ ಇದು ಪ್ರಮುಖವಾದ ಬೀದಿಯಾಗಿರಬಹುದೆಂದು ಇತಿಹಾಸತಜ್ಞರು ಶೋಧಿಸಿದ್ದಾರೆ. ಸುಮಾರು ಒಂದನೆಯ ಶತಮಾನಕ್ಕೆ ಸೇರಿದ ಈ ಬೀದಿಯು ದಕ್ಷಿಣಭಾರತದ ಪ್ರಾಚೀನ ಬೀದಿಗಳಲ್ಲಿಯೇ ಅತ್ಯಂತ ದೊಡ್ಡದಾದುದ್ದಾಗಿದೆ[೨೯] ಈಗಲೂ ಅವರ ಕುರುಹುಗಳನ್ನು ಮಾಧವಪುರದಲ್ಲಿ ಕಾಣಬಹುದು.

ಕ್ರಿ. ಶ. ಪೂರ್ವದಲ್ಲಿ ಭಾರತದ ಕೆಲವೇ ಪಟ್ಟಣಗಳಲ್ಲಿ ಬೆಳಗಾವಿಯು ಪ್ರಮುಖವಾದ ಪಟ್ಟಣವಾಗಿದ್ದು, ಸಾಂಸ್ಕೃತಿಕ, ಧಾರ್ಮಿಕ, ಸಾಮಾಜಿಕವಾಗಿ ಅತ್ಯಂತ ಮಹತ್ವವನ್ನು ಪಡೆದುಕೊಂಡಿತ್ತು. ಶಾತವಾಹನರ ಆಳ್ವಿಕೆಯ ಸುವರ್ಣಯುಗದ ದಿನಗಳು ಪ್ರಾಚೀನ ಬೆಳಗಾವಿಯಲ್ಲಿ ಕಂಡುಬಂದವು. ನಾಗರಿಕತೆಯ ವಿಕಾಸದ ಹಂತದಲ್ಲಿ ಬೆಳಗಾವಿ ವ್ಯವಸ್ಥಿತವಾದ ರಚನೆಗೊಂಡ ನಗರವಾಗಿದ್ದು ವಿಶೇಷವಾಗಿದೆ.

ಶಾತವಾಹನರ ಕಾಲದ ಧಾರ್ಮಿಕ ವ್ಯವಸ್ಥೆ ವಿಶಿಷ್ಟವಾದುದಾಗಿದೆ. ಶಾತವಾಹನರು ಸರ್ವಧರ್ಮಸಹಿಷ್ಣುಗಳಾಗಿದ್ದರು ಎನ್ನುವುದಕ್ಕೆ ಇಲ್ಲಿ ದೊರೆತ ಕೆಲವು ಸ್ಮಾರಕಗಳಿಂದ ತಿಳಿದುಬರುತ್ತದೆ. ಧಾರ್ಮಿಕ ವಿಧಿವಿಧಾನಗಳಿಗಾಗಿಯೇ ನಿರ್ಮಾಣಗೊಂಡ ಕಟ್ಟಡಗಳು ವಿಶೇಷವಾಗಿವೆ. ಇಲ್ಲಿ ದೊರೆತ ಶೈವ, ವೈದಿಕ, ಬೌದ್ಧ, ಜೈನಧರ್ಮದ ಕುರುಹುಗಳು ಶಾತವಾಹನರ ಸರ್ವಧರ್ಮ ಸಮನ್ವಯತೆಯ ನೀತಿಯನ್ನು ತಿಳಿಸಿಕೊಡುತ್ತವೆ. ವೈದಿಕಧರ್ಮದ ಯಜ್ಞಯಾಗಾದಿಗಳು ಬೆಳಗಾವಿಯಲ್ಲಿ ನಡೆಯುತ್ತಿದ್ದುದರ ಬಗೆಗೆ ಇಲ್ಲಿ ದೊರೆತ ಶಾಸನವು ಮಹತ್ವದ ದಾಖಲೆಯಾಗಿದೆ. ಷಟ್ಕೋಣ ಯೂಪಸ್ತಂಭದ ಈ ಶಿಲಾಶಾಸನವು ಮತ್ತೊಂದು ಮಹತ್ವದ ಸಂಗತಿಯನ್ನು ತಿಳಿಸುತ್ತದೆ. ಅದೆಂದರೆ ಕಲಿಯುಗ ಆರಂಭವಾದ ದಿನದಿಂದ ಆ ಸ್ಥಂಭ ಶಾಸನವು ಸ್ಥಾಪನೆಯಾಗುವವರೆಗಿನ ಕಾಲವನ್ನು ದಿನಗಳಲ್ಲಿ ಬರೆಯಲಾಗಿದೆ.[೨೦] ಕಲಿಯುಗ ಶಕೆಯ ಬಳಕೆಯನ್ನು ತಿಳಿಸುವ ಅತ್ಯಂತ ಪ್ರಾಚೀನ ಶಾಸನವು ಇದಾಗಿದೆ.

ಶಾತವಾಹನರ ಆಳ್ವಿಕೆಯಲ್ಲಿ ವಡಗಾಂವ-ಮಾಧವಪುರದಲ್ಲಿ ಬೌದ್ಧಧರ್ಮ ಪ್ರಚಲಿತವಿದ್ದುದು ಕಂಡುಬರುತ್ತದೆ. ಇಲ್ಲಿಯ ಕೆಲವು ಕಟ್ಟಡಗಳು ಬೌದ್ಧಧರ್ಮಕ್ಕೆ ಸಂಬಂಧಪಟ್ಟವುಗಳಾಗಿವೆಯೆಂದು ಡಾ. ಎಂ. ಬಿ. ನೇಗಿನಹಾಳ ಅವರು ಅಭಿಪ್ರಾಯಪಟ್ಟಿದ್ದಾರೆ.[೨೧] ಸುಡಾವೆ ಮಣ್ಣಿನಿಂದ ಮಾಡಿದ ಕೆಲವು ಪ್ರತಿಮೆಗಳು ಇವು ದೊರೆತಿದ್ದು ಬುದ್ಧನ ಶಿರಸ್ಸನ್ನು ಹೋಲುತ್ತವೆ. ಅಲ್ಲದೆ ಕೆಲವು ಯಕ್ಷರ ಪ್ರತಿಮೆಗಳು ದೊರೆತಿವೆ. ಇವೆಲ್ಲವುಗಳ ಆಧಾರದಿಂದ ಬೆಳಗಾವಿ ಪ್ರದೇಶದಲ್ಲಿ ಶಾತವಾಹನರ ಕಾಲದಲ್ಲಿ ಬೌದ್ಧಧರ್ಮವು ಪ್ರಚಾರದಲ್ಲಿರುವುದು ಸ್ಪಷ್ಟವಾಗುತ್ತದೆ.

ಬೆಳಗಾವಿಯು ಶಾತವಾಹನರ ಕಾಲದ ಪ್ರಮುಖ ವ್ಯಾಪಾರಕೇಂದ್ರವಾಗಿತ್ತು. ದೇಶ ವಿದೇಶಗಳ ಜೊತೆಗೆ ವ್ಯಾಪಾರ ಸಂಬಂಧವನ್ನು ಹೊಂದಿದ್ದ ಬೆಳಗಾವಿಯಲ್ಲಿ ಅಂದಿನ ಕಾಲದ ಮಹತ್ವದ ಕುರುಹುಗಳು ದೊರೆತಿವೆ. ಭಾರತದ ಪಶ್ಚಿಮ ಭಾಗವನ್ನು ಆಳುತ್ತಿದ್ದ ಕ್ಷತ್ರಪ ರಾಜರ ನಾಣ್ಯಗಳು, ರೋಮನ್ ಕೃತಕ ನಾಣ್ಯ, ಶಾತವಾಹನ ದೊರೆಗಳ ನಾಣ್ಯಗಳು ಇಲ್ಲಿ ದೊರೆತಿವೆ.[೨೨]

ಶಾತವಾಹನರ ತರುವಾಯ ಆದಿ ಕದಂಬ, ಬಾದಾಮಿ ಚಾಳುಕ್ಯರ ಆಡಳಿತದ ವ್ಯಾಪ್ತಿಗೆ ಬೆಳಗಾವಿ ಸೇರಿತ್ತು. ಆದಿ ಕದಂಬರು ಬೆಳಗಾವಿಯ ಸಮೀಪದಲ್ಲಿರುವ ಹಲಸಿಯನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು

ಆಳ್ವಿಕೆ ನಡೆಸಿದ್ದರು. ಕದಂಬರ ಆಡಳಿತ ವ್ಯಾಪ್ತಿಯು ಗೋದಾವರಿಯವರೆಗೆ ಹಬ್ಬಿತ್ತು ಎಂದು ಪ್ರೊ. ಬಾ. ರಾ. ಗೋಪಾಲ ಅಭಿಪ್ರಾಯ ಪಡುತ್ತಾರೆ.[೩೩]

ಬಾದಾಮಿ ಚಾಳುಕ್ಯರು ದಕ್ಷಿಣ ಭಾರತವನ್ನೆಲ್ಲಾ ತಮ್ಮ ರಾಜ್ಯದ ಆಡಳಿತಕ್ಕೆ ಸೇರಿಸಿದ್ದರು. ಚಾಲುಕ್ಯರ ಇಮ್ಮಡಿ ಪುಲಕೇಶಿಯು ತನ್ನ ಸಾಮ್ರಾಜ್ಯದ ವಿಸ್ತರಣೆಯನ್ನು ಉತ್ತರ ಭಾರತದ ಗಡಿಯವರೆಗೆ ಹೊಂದಿದ್ದನು. ಹೀಗಾಗಿ ಚಾಳುಕ್ಯರ ಕಾಲದಲ್ಲಿ ಬೆಳಗಾವಿಯು ಅವರ ಆಡಳಿತಕ್ಕೆ ಒಳಪಟ್ಟಿರಬಹುದಾಗಿದೆ. ಆದರೆ ಈ ಎರಡೂ ರಾಜಮನೆತನಗಳ ಯಾವುದೇ ಪುರಾವೆಗಳು ಬೆಳಗಾವಿಯಲ್ಲಿ ಲಭ್ಯವಿಲ್ಲ.

**ರಾಷ್ಟ್ರಕೂಟರು:** ಬಾದಾಮಿ ಚಾಲುಕ್ಯರನ್ನು ಸೋಲಿಸಿ ಅಧಿಕಾರಕ್ಕೆ ಬಂದ ರಾಷ್ಟ್ರಕೂಟರು ಸುಮಾರು ಎರಡು ಶತಮಾನದವರೆಗೆ ಆಡಳಿತ ನಡೆಸಿದ್ದಾರೆ. ಇವರ ಕಾಲದ ಅನೇಕ ಶಾಸನಗಳು ಬೆಳಗಾವಿ ಜಿಲ್ಲೆಯಲ್ಲಿ ಲಭ್ಯವಾಗಿವೆ. ಅವುಗಳಲ್ಲಿ ಬೆಳಗಾವಿಗೆ ಸಂಬಂಧಿಸಿದ ಶಾಸನವೆಂದರೆ ಕ್ರಿ. ಶ. ೮೦೫ರ ಮುಮ್ಮಡಿ ಗೋವಿಂದನ ನೇಸ್ರಿ ತಾಮ್ರಪಟ ಶಾಸನ.[೩೪]

ಈ ಶಾಸನದಲ್ಲಿ ಚಂದಗಡ ವಿಷಯದ ನೇಸರಿಕೆ (ನೇಸ್ರಿ)ಯ ಭೂಮಿಯನ್ನು ಇಕ್ಷುಗ್ರಾಮ (ಬೆಳಗಾವಿ)ದ ಪರಿವಚಂದ್ರ ಚತುರ್ವೇದಿಯ ಮಗ ಮತ್ತು ಭಾರಿದಾಸ ಮೊಮ್ಮಗ ಶಿವನಾಗಭಟ್ಟನಿಗೆ ಚಂದಗಡ ವಿಷಯದಲ್ಲಿನ ನೇಸರಿಕೆ ಗ್ರಾಮವನ್ನು ದತ್ತಿ ನೀಡಲಾಗಿದೆ ಎಂದು ಹೇಳಿದೆ.[೩೫]

ರಾಷ್ಟ್ರಕೂಟರು ಸ್ಥಳೀಯ ಆಡಳಿತಗಾರರಿಗೆ ಮಹತ್ವವನ್ನು ನೀಡಿದ್ದರು. ಸ್ಥಳೀಯ ಶಾಸಕರನ್ನು ಅನೇಕ ಶಾಸನಗಳಲ್ಲಿ ಉಲ್ಲೇಖಿಸಿರುವುದನ್ನು ಕಾಣಬಹುದು. ನೇಸ್ರಿ ಶಾಸನದಲ್ಲಿ ನಾಗಹರಿ ಎಂಬ ಮುಖ್ಯಸ್ಥನ ಸೂಚನೆಯಂತೆ ನೇಸ್ರಿಯನ್ನು ದಾನವಾಗಿ ನೀಡಲಾಯಿತು ಎಂದು ಹೇಳಲಾಗಿದೆ.[೩೬] ಮೂರನೆಯ ಗೋವಿಂದನು ತನ್ನ ಸರ್ವಸ್ವವನ್ನು ತನ್ನ ಗುರುಗಳು, ಬ್ರಾಹ್ಮಣರು, ಸಜ್ಜನರು, ಮಿತ್ರರು ಮತ್ತು ಬಂಧುಗಳ ಸೇವೆಗಾಗಿ ಮೀಸಲಾಗಿಟ್ಟಿದ್ದನು. ಬೆಳಗಾವಿಯ (ಇಕ್ಷುಗ್ರಾಮ) ತ್ರಿಭುವನ ಭಟ್ಟನು, ನೇಸ್ರಿ ಭೂಮಿಯನ್ನು ಧಾರ್ಮಿಕ ಕಾರ್ಯಗಳಿಗೆ ಬಳಸಿಕೊಳ್ಳಲು ನೀಡಿರುವುದು ಕಂಡುಬರುತ್ತದೆ. ಬೆಳಗಾವಿ ಜಿಲ್ಲೆಯ ಬಹುಭಾಗವು ರಾಷ್ಟ್ರಕೂಟರ ಆಡಳಿತಕ್ಕೆ ಒಳಪಟ್ಟಿತ್ತು.

**ಕಲ್ಯಾಣ ಚಾಲುಕ್ಯರು:** ಕಲ್ಯಾಣ ಚಾಲುಕ್ಯರು ಕ್ರಿ. ಶ. ೯೭೩ ರಿಂದ ೧೧೮೯ ರ ವರೆಗೆ ಸುಮಾರು ಎರಡು ಶತಮಾನಗಳ ವರೆಗೆ ಇವರು ಆಳ್ವಿಕೆ ನಡೆಸಿದರು. ಈ ಅವಧಿಯಲ್ಲಿ ಕುಹುಂಡಿ-೩೦೦೦ ವಿಭಾಗದಲ್ಲಿ ಬೆಳಗಾವಿಯು ವೇಳುಗ್ರಾಮ-೩೦, ನಂತರ ವೇಳುಗ್ರಾಮ-೭೦ ಎಂಬ ಉಪವಿಭಾಗವಾಗಿ ಆಳಲ್ಪಡುತ್ತಿತ್ತು. ಕಲ್ಯಾಣ ಚಾಲುಕ್ಯರಿಗೆ ಸಾಮಂತರಾಗಿ ಗೋವೆ ಕದಂಬರು, ಸೌದತ್ತಿಯ ರಟ್ಟರು, ಕುಹುಂಡಿ-೩೦೦೦ ವನ್ನು ಆಳುತ್ತಿದ್ದರು.[೩೭] ಬೆಳಗಾವಿಯಲ್ಲದೆ ಜಿಲ್ಲೆಯ ಹಲವಾರು ಪ್ರದೇಶಗಳು ಚಾಲುಕ್ಯರ ಆಡಳಿತಕ್ಕೆ ಒಳಪಟ್ಟಿದ್ದವು.

**ಗೋವೆಯ ಕದಂಬರು:** ಬೆಳಗಾವಿ ಹಾಗೂ ಜಿಲ್ಲೆಯ ಬಹುಭಾಗದಲ್ಲಿ ಆಳ್ವಿಕೆ ನಡೆಸಿದ ಗೋವೆಯ ಕದಂಬರು ರಾಷ್ಟ್ರಕೂಟರ ಹಾಗೂ ಚಾಲುಕ್ಯರ ಸಾಮಂತರಾಗಿ ಆಡಳಿತವನ್ನು ನಡೆಸಿದರು. ಈ ವಂಶದ ಪ್ರಸಿದ್ಧ ದೊರೆ ಇಮ್ಮಡಿ ಜಯಕೇಶಿಯ ಕಾಲದಲ್ಲಿ (ಕ್ರಿ. ಶ.೧೧೮೮) ಬೆಳಗಾವಿಯು ವೇಳುಗ್ರಾಮ-೭೦ ರ ನಾಡಾಗಿತ್ತು. ಈತನ ರಾಜ್ಯ ವಿಸ್ತಾರವು ನರೇಂದ್ರ ಶಾಸನದಲ್ಲಿ ಹೀಗಿದೆ[೩೮] : ಕೊಂಕಣ-೯೦೦, ಪಲಸಿಗೆ ೧೨೦೦೦, ಕಾವರಿಡಿ ದ್ವೀಪ ೧, ೨೫, ೦೦೦, ಕೊಂತಕುಲಿ-೩೦, ಪಾನುಂಗಲ್-೭೦೦, ಉಣಕಲ್ಲು-೭೦, ಸಟ್ಟಿ-೩೦, ಉತ್ತುಗ್ರಾಮೆ-೩೦, ಕಾರದವಲ್ಲ-೩೦, ಪೊಳಗುಂದೆ-೩೦, ಹೈವೇ ೫೦೦, ಮತ್ತು ವೇಳುಗ್ರಾಮ-೭೦ ಎಂದಿದೆ. ಇಮ್ಮಡಿ ಜಯಕೇಶಿಯ ರಾಣಿಯಾದ ಮೈಳಲದೇವಿಯು ರಾಜನಿಗೆ ಸಹಾಯಕಳಾಗಿ ಈ ಪ್ರದೇಶವನ್ನು ನೋಡಿಕೊಳ್ಳುತ್ತಿದ್ದಳು.[೩೯] ಇಮ್ಮಡಿ ಜಯಕೇಶಿಯ ಮಗನಾದ ಪೆರುಮಾಡಿಯು ಹಸಿ-೧೨೦೦, ಕೊಂಕಣ-೯೦೦ ಹಾಗೂ ವೇಣುಗ್ರಾಮ-೭೦ ಈ ಭಾಗಗಳನ್ನು ಆಳುತ್ತಿದ್ದನೆಂದು ದೇವಗಾವಿಯ 'ಕಮಲ ನಾರಾಯಣ' ದೇವಾಲಯದಲ್ಲಿರುವ ಶಿಲಾಶಾಸನಗಳಿಂದ ತಿಳಿದುಬರುತ್ತದೆ.[೪೦]

**ರಟ್ಟರು:** ಬೆಳಗಾವಿಯನ್ನು ಆಳಿದ ಅರಸು ಮನೆತನಗಳಲ್ಲಿ 'ಸವದತ್ತಿಯ ರಟ್ಟರು' ಅತ್ಯಂತ ಪ್ರಮುಖರಾಗಿದ್ದಾರೆ. ಮೊದ ಮೊದಲು ರಾಷ್ಟ್ರಕೂಟರ ನಂತರ ಚಾಳುಕ್ಯರ ಹಾಗೂ ಕಳಚುರ್ಯರ ಸಾಮಂತರಾಗಿದ್ದ ರಟ್ಟರು ಕಳಚುರ್ಯರ ಪ್ರಾಬಲ್ಯ ಕುಗ್ಗಿದ ಮೇಲೆ ಕ್ರಿ. ಶ. ೮೫೦ ರಿಂದ ಕ್ರಿ. ಶ. ೧೨೫೦ ರವರೆಗೆ ಸುಮಾರು ಮೂರು ನೂರು ವರ್ಷಗಳ ವರೆಗೆ ಕುಹುಂಡಿ ೩೦೦೦ ಪ್ರದೇಶಕ್ಕೆ ಒಡೆಯರಾಗಿದ್ದರು.[೪೧] ಪ್ರಾರಂಭದಲ್ಲಿ ಇವರ ರಾಜ್ಯವು ಧಾರವಾಡ ಜಿಲ್ಲೆಯ ಗದಗ ತಾಲೂಕಿನ ಬಹುಭಾಗವನ್ನು ಒಳಗೊಂಡಿದ್ದಿತ್ತು. ಸೌಂದತ್ತಿ ಅಥವಾ ಸುಗಂಧವರ್ತಿಯು ಇವರ ರಾಜಧಾನಿಯಾಗಿದ್ದಿತ್ತು. ಅನಂತರ ಅವರು ಸ್ವತಂತ್ರರಾಗಿ ವೇಳುಗ್ರಾಮ (ಬೆಳಗಾವಿ)ಕ್ಕೆ ತಮ್ಮ ರಾಜಧಾನಿಯನ್ನು ಸ್ಥಳಾಂತರಿಸಿದರು. ದೇವಗಿರಿ ಯಾದವರ ಎಡೆಬಿಡದ ಉಪಟಳದಿಂದ ವೇಣುಗ್ರಾಮ ಅಂದರೆ ಇಂದಿನ ಬೆಳಗಾವಿಗೆ ತಮ್ಮ ರಾಜಧಾನಿಯನ್ನು ಸ್ಥಳಾಂತರಿಸಿಕೊಂಡರು.[೪೨]

ರಟ್ಟಮನೆತನದ ಮೂಲ ಅರಸರಲ್ಲಿ ಎರಡು ಶಾಖೆಗಳಿದ್ದವು. ಮೊದಲನೆಯ ಶಾಖೆ ಮೇದರ ಎಂಬುವನಿಂದ ಪ್ರಾರಂಭವಾದದ್ದು ಎರಡನೆಯ ಶಾಖೆ 'ನನ್ನ' ಎಂಬುವನಿಂದ ಪ್ರಾರಂಭವಾದದ್ದು. ಮೊದಲನೆಯ ಶಾಖೆಯಲ್ಲಿ ಮೇದರ, ಪೃಥ್ವೀರಾಮ, ಪಿತ್ತುಗ, ಶಾಂತಿವರ್ಮ ಎಂಬ ಅರಸರು ಆಳಿದ್ದಾರೆ.[೪೩]

'ನನ್ನ'ನಿಂದ ಪ್ರಾರಂಭಗೊಂಡ ಎರಡನೆಯ ಶಾಖೆ ಸುಮಾರು ೯೩೦ ರಿಂದ ೧೨೩೦ ರವರೆಗೆ ೩೦೦ ವರ್ಷಗಳ ಕಾಲ ಸೌಂದತ್ತಿ ಹಾಗೂ ವೇಣುಗ್ರಾಮಗಳನ್ನು ರಾಜಧಾನಿಯನ್ನಾಗಿಸಿಕೊಂಡು ರಾಜ್ಯವಾಳಿತು.[೪೪]

ಇದರಲ್ಲಿ ಒಂದನೆಯ ಲಕ್ಷ್ಮೀದೇವನು (೧೧೭೦-೯೦) ರಟ್ಟರ ಪ್ರಸಿದ್ಧ ದೊರೆಯಾಗಿದ್ದನು. ಈತನು ಗೋವೆ ಕದಂಬರ ವಶದಲ್ಲಿದ್ದ ವೇಣುಗ್ರಾಮವನ್ನು ಯುದ್ಧಮಾಡಿ ಸೋಲಿಸಿ ವಶಪಡಿಸಿಕೊಂಡು ಸ್ವತಂತ್ರ ರಾಜ್ಯವೆಂದು ಸಾರಿದನು. ಇವನ ಕಾಲದಲ್ಲಿಯೇ ವೇಳುಗ್ರಾಮವು ರಟ್ಟರ ರಾಜಧಾನಿಯಾಯಿತು.[೪೫] ಲಕ್ಷ್ಮೀದೇವನು ಶಕ್ತಿಶಾಲಿಯು, ಸ್ಫೂರದ್ರೂಪಿಯೂ ಆಗಿದ್ದನು. ಪ್ರಜೆಗಳು ಇವನನ್ನು 'ಮನ್ಮಥ', 'ವಸಂತ', 'ಚಂದ್ರ' ಎಂದು ಪ್ರೀತ್ಯಾದರದಿಂದ ಕರೆಯುತ್ತಿದ್ದರು. ಈತನು ದಾನ-ಧರ್ಮಗಳನ್ನು ಮಾಡುವಲ್ಲಿ ಕೀರ್ತಿಶಾಲಿಯಾಗಿದ್ದನು. ಈತನ ಪತ್ನಿ ಚಂದ್ರಿಕಾದೇವಿಯು ರಟ್ಟರ ಇತಿಹಾಸದಲ್ಲಿ ವಿಶೇಷವಾಗಿ ಕಂಗೊಳಿಸಿದ್ದಾಳೆ. ಅವಳು ಬಹುರೂಪವತಿಯೂ, ಕಲಾನಿಪುಣೆಯೂ ಆಗಿದ್ದಳು ಎಂದು ಶಾಸನಗಳಲ್ಲಿ ಉಲ್ಲೇಖಗೊಂಡಿದೆ.[೪೬]

ಲಕ್ಷ್ಮೀದೇವನಲ್ಲಿ 'ನೇಮಿಚಂದ್ರ'ನೆಂಬ ಪ್ರಸಿದ್ಧ ಕವಿಯು ಆಶ್ರಯ ಪಡೆದಿದ್ದನು. ಈತನು ತನ್ನ ಲೀಲಾವತಿ ಪ್ರಬಂಧದ ಕೊನೆಯಲ್ಲಿ "ಅಂಬುಧಿ ವೇಷ್ಟಿತಾವನಿಗೆ ಲಕ್ಷ್ಮಣದೇವನೇ ರಾಜನೆಂದೂ ಲೋಕಾಂಬಿಕೆಯಪ್ಪ ಪುಣ್ಯಸತಿ ಚಂದಲದೇವಿಯೇ ದೇವಿಯೆಂದು ಸೇವ್ಯಂಭುದ ನೇಮಿಚಂದ್ರನೇ ಕವೀಂದ್ರಂ" ಎಂದು ಕವಿಯು ತನ್ನ ಆಶ್ರಯದಾತರಾದ ದಂಪತಿಗಳನ್ನು ಹೊಗಳಿದ್ದಾನೆ.[೪೭]

ವೇಣುಗ್ರಾಮವನ್ನು ಆಳಿದ ರಟ್ಟರ ವಂಶದ ಮತ್ತೊರ್ವ ಪ್ರಸಿದ್ಧ ದೊರೆ ನಾಲ್ವಡಿ ಕಾರ್ತವೀರ್ಯ. ಈತ ಒಂದನೆಯ ಲಕ್ಷ್ಮೀದೇವನ ಮಗ. ಇವನ ಕಾಲದಲ್ಲಿ ರಾಜ್ಯ ವಿಸ್ತರಣೆಯೊಂದಿಗೆ ಸಾಂಸ್ಕೃತಿಕವಾಗಿಯೂ ಬೆಳವಣಿಗೆಯನ್ನು ಹೊಂದಿತು. ಈತನ ಆಳ್ವಿಕೆಯಲ್ಲಿ ವೇಣುಗ್ರಾಮವು ಅತ್ಯುನ್ನತ ಮಟ್ಟವನ್ನು ಮುಟ್ಟಿತ್ತು. ಇವನಿಗೆ ಎಚಲಾದೇವಿ ಹಾಗೂ ಮಹಾದೇವಿಯರೆಂಬ ಇಬ್ಬರು ರಾಣಿಯರಿದ್ದರು. ಇವರು ಸದ್ಗುಣ ಸಂಪನ್ನೆಯರೂ ವಿವಿಧ ಕಲೆಗಳಲ್ಲಿ ನಿಪುಣೆಯರೂ ದಾನ-ಧರ್ಮ ಪರಾಯಣೆಯರೂ ಆಗಿದ್ದರು.[೪೮]

ನಾಲ್ಕನೆಯ ಕಾರ್ತವೀರ್ಯನು ಬೆಳಗಾವಿಯನ್ನು ಒಳ್ಳೇ ವೈಭವದಿಂದ ಆಳಿದನು ಎನ್ನುವುದಕ್ಕೆ ಆತನ ಕಾಲದಲ್ಲಿ ನಿರ್ಮಾಣಗೊಂಡ ದೇವಾಲಯಗಳು, ಬಸದಿಗಳು, ಕೋಟೆ ಮತ್ತು ಆತನು ನೀಡಿದ ದಾನ ದತ್ತಿಗಳು ಸಾಕ್ಷಿಯಾಗಿವೆ. ಅಲ್ಲದೆ ಚತುರ್ಭಾಷಾ ಕವಿಗಳು, ಶಾಸನ ಕವಿಗಳು, ಈತನ ಆಸ್ಥಾನದಲ್ಲಿ ಆಶ್ರಯವನ್ನು ಪಡೆದು ಮಹತ್ವದ ಕೃತಿಗಳನ್ನು, ಶಾಸನಗಳನ್ನು ರಚಿಸಿದರು.

ರಟ್ಟರ ಬೆಳಗಾವಿ ಶಾಸನಗಳು: ಕ್ರಿ. ಶ. ೧೨೦೪ರಲ್ಲಿ ರಚನೆಗೊಂಡ ರಟ್ಟರ ಎರಡು ಶಾಸನಗಳು ಕೋಟೆಯ ಒಳಗಡೆ ದೊರೆತಿವೆ. ಇವು ಇಂದು ಬ್ರಿಟಿಷ್ ವಸ್ತುಸಂಗ್ರಹಾಲಯದಲ್ಲಿವೆ. ಕ್ರಿ. ಶ. ೧೧೯೯ರಲ್ಲಿ ಮಹಾಮಂಡಳೇಶ್ವರನಾಗಿ ಅಧಿಕಾರಕ್ಕೆ ಬಂದ ಕಾರ್ತವೀರ್ಯನು ೧೨೦೪ರಲ್ಲಿ ಸ್ವತಂತ್ರ ರಾಜನಾಗಿ ಆಳ್ವಿಕೆಯನ್ನು ನಡೆಸಿದನು. ಈತನು ತನ್ನ ಮಗನಾದ ಮಲ್ಲಿಕಾರ್ಜುನನೊಂದಿಗೆ ವೇಣುಗ್ರಾಮದ ಸ್ಕಂಧಾವರದಲ್ಲಿದ್ದ ಕಾರ್ತವಿರ್ಯನು ತನ್ನ ಮಂತ್ರಿಯಾದ

ಬೀಚಿರಾಜ ಏರ್ಪಡಿಸಿದ ಬೃಹತ್ ಸಮಾರಂಭದಲ್ಲಿ ಪಾಲ್ಗೊಂಡು ಬೀಚಿರಾಜನು ನಿರ್ಮಿಸಿದ ರಟ್ಟ ಜಿನಾಲಯಕ್ಕೆ ದತ್ತಿ ಕೊಡುವ ಸಂದರ್ಭದಲ್ಲಿ ಈ ಸಮಾರಂಭವನ್ನು ಏರ್ಪಡಿಸಿದ್ದನು. ಆ ಸಂಭ್ರಮದ ದಿನದಂದು ವೀರಬಣಂಜು ಧರ್ಮದವರು, ಪದ್ಮಾವತಿದೇವಿಲಬ್ಧವರ ಪ್ರಸಾದರು, ವೇಣುಗ್ರಾಮದ ಮುಮ್ಮರಿ ದಂಡರು, ಕೂಂಡಿ-೩೦೦೦ ಪಟ್ಟಣದ ಉಭಯ ನಾನಾದೇಶಿಗಳು ಅಲ್ಲದೆ ವ್ಯವಹಾರಿಗಳಾದ ಪರಶುರಾಮ ನಾಯಕ, ಪೊಮ್ಮಣ್ಣ ನಾಯಕ, ಅಮ್ಮುಗಿ ನಾಯಕ ಹಾಗೂ ಮಲೆಯಾಳ ವ್ಯವಹಾರಿಗಳಾದ ಪಡಪ ನಾಯಕ, ಕೊಂಡನಂಬಿಸೆಟ್ಟಿ, ತೊರೆಯ ಚಸೆಟ್ಟಿ ಮುಂತಾದವರು ಭಾಗವಹಿಸಿದ ಬಗ್ಗೆ ಈ ಶಾಸನ ವರದಿ ಮಾಡುತ್ತದೆ. ಅಲ್ಲದೆ ವೇಣುಗ್ರಾಮದ ಚಿನ್ನಗೆಯ ಕದವರು, ದೂಸಿಗರು, ಪರದರು, ತೇಲಿಗರು, ದಿಂಕಸಾಲಿಗರು ಅಲ್ಲಿ ಸೇರಿದಾಗ ಅವರ ಸಮಕ್ಷಮದಲ್ಲಿ ರಟ್ಟ ಜಿನಾಲಯಕ್ಕೆ ದಾನಕೊಟ್ಟರು. ಅಕ್ಕಸಾಲಿಗ, ದೂಸಿಗಾರ, ಮಣಿಹಾರ, ಗಂಧವಣಕಾರರಿಂದ ಬಂದ ಕರದ ಬಾಬತ್ತು ಹಾಗೂ ಹತ್ತಿ, ಭತ್ತ, ಅಕ್ಕಿ, ಮೆಣಸು, ಇಂಗು, ಅರಿಷಿಣ, ಅಲ್ಲ, ಅಡಕೆ, ಎಲೆ, ಓಲೆ, ತೆಂಗು, ಬೆಲ್ಲ, ಬಾಳೆ, ನೆಲ್ಲಿಕಾಯಿ, ಕರ್ವಿ, ಬಳಪ ಮುಂತಾದ ಪದಾರ್ಥಗಳ ಮೇಲೂ ಹೇರಿದ ಕರದಲ್ಲಿಯ ಕೆಲ ಆದಾಯವನ್ನು ನೇರವಾಗಿ ಶಾಂತಿನಾಥದೇವರಿಗೆ ಸಲ್ಲುವಂತೆ ಕಾರ್ತವೀರ್ಯ, ಬೀಚಿರಾಜ, ನೆರೆದ ಮಹಾಜನ ಹಾಗೂ ವ್ಯವಹಾರಿಗಳ ಮಧ್ಯೆಯೇ ನಿರ್ಣಯಿಸಲಾಯಿತು. ಈ ಸಂದರ್ಭದಲ್ಲಿ ಕಾರ್ತವೀರ್ಯನು ಕೋವರಳ್ಳಿ ಕಂಪಣದ 'ಉಂಬರವಾಣಿ' ಗ್ರಾಮವನ್ನು ಮತ್ತು ನಾಡೊಳಗಿನ ಕೆಲ ಸ್ಥಳ ವೃತ್ತಿಯನ್ನು ಜಿನಾಲಯಕ್ಕೆ ದಾನವಾಗಿ ನೀಡಿದನು.

ರಟ್ಟರ ಕಾಲದಲ್ಲಿ ಬೆಳಗಾವಿಯು ಪ್ರಮುಖ ವ್ಯಾಪಾರಿ ಪಟ್ಟಣವಾಗಿರುವುದು ಈ ಶಾಸನದಲ್ಲಿ ಉಲ್ಲೇಖಿತವಾದ ವಸ್ತುಗಳ ಮೇಲಿಂದ ತಿಳಿದು ಬರುತ್ತದೆ. ರಾಜ್ಯದ ಆದಾಯವನ್ನು ದೇವರಿಗೆ ದತ್ತಿ ನೀಡುವುದಕ್ಕೆ ಬಳಸಿಕೊಳ್ಳುತ್ತಿದ್ದರು. ಬರವಣಿಗೆಯ ಸಾಧನವಾದ ತಾಳೆಗರಿ ಮತ್ತು ಬಳಪಗಳ ಮೇಲೂ ಕರ ವಿಧಿಸುವುದನ್ನು ನೋಡಿದಾಗ ಅಂದು ಇವುಗಳ ಮಾರಾಟದ ಪ್ರಮುಖ ಕೇಂದ್ರ ಬೆಳಗಾವಿಯಾಗಿತ್ತು ಎನ್ನುವುದು ತಿಳಿದುಬರುತ್ತದೆ. ಕಣಂಬುರಿಗೆ (ಕಣಬುರ್ಗಿ), ಆನೆಯಕೆರೆ (ಆನಿಗೋಳ) ಸಾಲ ಬಸದಿ ದುಗ್ಗಿಯರ ಟೀಕಣ, ಬಜೆಯಖಾರಿಗೆ ಹೀಗೆ ಹಲವು ಸ್ಥಳಗಳನ್ನು ಈ ಶಾಸನವು ಪರಿಚಯಿಸುತ್ತದೆ. ಈ ಎಲ್ಲ ಪ್ರದೇಶಗಳು ಇಂದು ಬೆಳಗಾವಿ ನಗರ ವ್ಯಾಪ್ತಿಯೊಳಗಿವೆ. ಈ ಶಾಸನವನ್ನು ಮಾಧವಚಂದ್ರ ತ್ರೈವಿದ್ಯ ಚಕ್ರವರ್ತಿಯ ಶಿಷ್ಯನಾದ ಬಾಳಚಂದ್ರನು ರಚಿಸಿದ್ದಾನೆ.

ಬೆಳಗಾವಿ ಕೋಟೆಯಲ್ಲಿ ದೊರೆತ ಮತ್ತೊಂದು ಶಾಸನ ಶಕವರ್ಷ ೧೧೨೭ ರ ರಕ್ತಾಕ್ಷಿ ಸಂವತ್ಸರದ ಪುಷ್ಯಶು. ೧೨ ವಡ್ಡವಾರದಂದು ಬರೆಯಲಾಗಿದೆ. ಅಂದರೆ ಕ್ರಿ. ಶ. ೧೨೦೪ರಲ್ಲಿ ರಚಿತವಾದ ಈ ಶಾಸನವು ಕಾರ್ತವೀರ್ಯಯನ ಕಾಲದ್ದಾಗಿದೆ.[೪೮] ಈ ಶಾಸನವು "ಶಾಂತಿನಾಥದೇವರ ಬಸದಿಯನ್ನು ಮತ್ತು ಬಸದಿಯ ಆಚಾರ್ಯನಾದ ಶುಭಾಚಂದ್ರ ಭಟ್ಟಾರಕ ದೇವನಿಗೆ ಕೊಡಮಾಡಿದ ದತ್ತಿಯ ವಿವರಗಳನ್ನು ಒಳಗೊಂಡಿದೆ."

ಕಾರ್ತವೀರ್ಯನ ಕಾಲದಲ್ಲಿ ಬೆಳಗಾವಿಗೆ ಲಾಟ, ಕೇರಳ ಮೊದಲಾದ ದೇಶಗಳಿಂದ ವ್ಯಾಪಾರಿಗಳು ಬರುತ್ತಿದ್ದರು. "ಸಕಳೈಸ್ವರ್ಯ ಭೋಗಂಗಳಿಂದಾ ಇಂತು ವಸಂತಪುರದಂತ ನಂತ ವಿಳಾಸದಿಂ ಸಂತತಂ ಮೆರೆವ ವೇಳುಪುರದೊಳ್ ಸುಖದಿಂ ರಾಜ್ಯಂಗೆಯ್ಯುತ್ತಮಿರೆ" ಎಂದು ವೇಣುಗ್ರಾಮ (ಬೆಳಗಾವಿ)ವನ್ನು ಈ ಶಾಸನದಲ್ಲಿ ವರ್ಣಿಸಲಾಗಿದೆ.[೫೦]

ರಟ್ಟರ ಆಳ್ವಿಕೆಯಿಂದ ಬೆಳಗಾವಿಯು ರಾಜಧಾನಿಯ ಪಟ್ಟವನ್ನು ಪಡೆದುಕೊಂಡಿತು. ಅಲ್ಲದೆ ಸಾಂಸ್ಕೃತಿಕವಾಗಿ ಮಹತ್ವದ ಬದಲಾವಣೆಗಳಿಗೆ ಕಾರಣವಾಯಿತು. ಇವರ ಕಾಲದಲ್ಲಿದ್ದ ಮುನಿಚಂದ್ರ ಮಹಾಪ್ರಭಾವಿ ವ್ಯಕ್ತಿಯಾಗಿದ್ದನು. ಈತನನ್ನು ರಟ್ಟ ರಾಜ್ಯಪ್ರತಿಷ್ಠಾಪನಾಚಾರ್ಯ (ಬೆಳಗಾವಿ ಶಾಖೆ) ಎಂದು ಕರೆಯಲಾಗುತ್ತಿತ್ತು.[೫೧] ಅಲ್ಲದೆ ಅಂದಿನ ಕಾಲದ ಪ್ರಮುಖ ವ್ಯಾಪಾರಿ ಕೇಂದ್ರವಾಗಿ ಬೇರೆ ಬೇರೆ ದೇಶಗಳ ಜೊತೆಗೆ ವ್ಯಾಪಾರ ಸಂಬಂಧವನ್ನಿಟ್ಟುಕೊಂಡಿತ್ತು. ಇವರ ಆಶ್ರಯದಲ್ಲಿ ಪಾರ್ಶ್ವಪಂಡಿತ, ಗುಣವರ್ಮ, ಬಾಳಚಂದ್ರ, ನೇಮಿಚಂದ್ರ ಮುಂತಾದ ಕವಿಗಳು ಆಶ್ರಯವನ್ನು ಪಡೆದು ಮಹತ್ವದ ಕೃತಿಗಳನ್ನು ರಚಿಸಿದರು. ಹೀಗೆ ಕಲೆ, ವಾಣಿಜ್ಯ, ಸಾಹಿತ್ಯ ಕ್ಷೇತ್ರಗಳಲ್ಲಿ ಮಹತ್ವವನ್ನು ಪಡೆದುಕೊಂಡು ಬೆಳಗಾವಿ ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿತು.

**೫. ಮಧ್ಯಕಾಲೀನ ಇತಿಹಾಸ:**

ಪ್ರಾಗೈತಿಹಾಸಿಕ ಕಾಲದಿಂದಲೂ ಮಹತ್ವದ ನೆಲೆಯಾದ ಬೆಳಗಾವಿಯು ಹಲವಾರು ರಾಜಕೀಯ ಸ್ಥಿತ್ಯಂತರಗಳನ್ನು ಎದುರಿಸಿತು. ಬೇರೆ ಬೇರೆ ರಾಜರ ಆಳ್ವಿಕೆಗೆ ಒಳಪಟ್ಟ ಬೆಳಗಾವಿಯಲ್ಲಿ ನಿಶ್ಚಿತವಾಗಿ ಒಂದು ಸಾಮ್ರಾಜ್ಯ ನೆಲೆಗೊಳ್ಳಲಿಲ್ಲ. ಮೌರ್ಯ, ಶಾತವಾಹನ, ಕದಂಬರು, ಚಾಳುಕ್ಯರು, ರಾಷ್ಟ್ರಕೂಟರು, ಕದಂಬ ರಾಜರು ಬೆಳಗಾವಿಯನ್ನು ಆಡಳಿತದ ವಿಭಾಗವಾಗಿ ಮಾಡಿಕೊಂಡು ಆಳಿದರು. ರಟ್ಟರ ಅವನತಿಯ ನಂತರ ಬೆಳಗಾವಿಯ ರಾಜಕೀಯ ಇತಿಹಾಸವು ಮತ್ತಷ್ಟು ಸಂದಿಗ್ಧವಾಯಿತು. ಮೇಲಿಂದ ಮೇಲೆ ದಾಳಿಗಳು ನಡೆದು ಬೆಳಗಾವಿಯ ಸಿಂಹಾಸನ ರಾಜರಿಂದ ರಾಜರಿಗೆ ಪಲ್ಲಟವಾಗತೊಡಗಿತು. ದೇವಗಿರಿಯ ಯಾದವರು, ವಿಜಯನಗರದ ಅರಸರು, ಬಹಮನಿ ಸುಲ್ತಾನರು, ವಿಜಾಪುರದ ಆದಿಲಶಹರು, ಮೊಘಲರು, ಮರಾಠರು, ಸವಣೂರು ನವಾಬರು, ಪೇಶ್ವೆಗಳು– ಹೀಗೆ ಹತ್ತಾರು ರಾಜಮನೆತನಗಳು ಬೆಳಗಾವಿಯ ಮೇಲೆ ಆಡಳಿತವನ್ನು ನಡೆಸಿದವು. ಇದರಿಂದ ಬೆಳಗಾವಿಯ ಇತಿಹಾಸ, ಭಾಷೆ, ಧರ್ಮ, ಕಲೆ, ವಾಸ್ತುಶಿಲ್ಪ, ಸಾಹಿತ್ಯ, ಸಂಗೀತದ ಮೇಲೆ ಮಹತ್ವದ ಪರಿಣಾಮ ಬೀರಿ ವೈವಿಧ್ಯಮಯವಾದ ಸಂಸ್ಕೃತಿಯು ನಿರ್ಮಾಣಗೊಂಡಿತು.

ರಟ್ಟರನ್ನು ಸೋಲಿಸಿ ಬೆಳಗಾವಿಯನ್ನು ವಶಪಡಿಸಿಕೊಂಡ ದೇವಗಿರಿಯ ಯಾದವರಿಂದ ಬ್ರಿಟಿಷರವರೆಗಿನ ಕಾಲವನ್ನು ಮಧ್ಯಯುಗಿನ ಕಾಲವೆಂದು ಪರಿಗಣಿಸಿ ಈ ಅವಧಿಯಲ್ಲಿ ಬೆಳಗಾವಿಯಲ್ಲಿ ಉಂಟಾದ ರಾಜಕೀಯ ಬದಲಾವಣೆಗಳನ್ನು ಪ್ರಮುಖವಾಗಿ ಇಲ್ಲಿ ವಿವರಿಸಲಾಗಿದೆ.

ಕಾರ್ತವೀರ್ಯನ ಕಾಲದಲ್ಲಿ ಬೆಳಗಾವಿಗೆ ಲಾಟ, ಕೇರಳ ಮೊದಲಾದ ದೇಶಗಳಿಂದ ವ್ಯಾಪಾರಿಗಳು ಬರುತ್ತಿದ್ದರು. "ಸಕಳೈಸ್ವರ್ಯ ಭೋಗಂಗಳಿಂದಾ ಇಂತು ವಸಂತಪುರದಂತ ನಂತ ವಿಳಾಸದಿಂ ಸಂತತಂ ಮೆರೆವ ವೇಳುಪುರದೊಳ್ ಸುಖದಿಂ ರಾಜ್ಯಂಗೆಯ್ಯುತ್ತಮಿರೆ" ಎಂದು ವೇಣುಗ್ರಾಮ (ಬೆಳಗಾವಿ)ವನ್ನು ಈ ಶಾಸನದಲ್ಲಿ ವರ್ಣಿಸಲಾಗಿದೆ.[೫೦]

ರಟ್ಟರ ಆಳ್ವಿಕೆಯಿಂದ ಬೆಳಗಾವಿಯು ರಾಜಧಾನಿಯ ಪಟ್ಟವನ್ನು ಪಡೆದುಕೊಂಡಿತು. ಅಲ್ಲದೆ ಸಾಂಸ್ಕೃತಿಕವಾಗಿ ಮಹತ್ವದ ಬದಲಾವಣೆಗಳಿಗೆ ಕಾರಣವಾಯಿತು. ಇವರ ಕಾಲದಲ್ಲಿದ್ದ ಮುನಿಚಂದ್ರ ಮಹಾಪ್ರಭಾವಿ ವ್ಯಕ್ತಿಯಾಗಿದ್ದನು. ಈತನನ್ನು ರಟ್ಟ ರಾಜ್ಯಪ್ರತಿಷ್ಠಾಪನಾಚಾರ್ಯ (ಬೆಳಗಾವಿ ಶಾಖೆ) ಎಂದು ಕರೆಯಲಾಗುತ್ತಿತ್ತು.[೫೧] ಅಲ್ಲದೆ ಅಂದಿನ ಕಾಲದ ಪ್ರಮುಖ ವ್ಯಾಪಾರಿ ಕೇಂದ್ರವಾಗಿ ಬೇರೆ ಬೇರೆ ದೇಶಗಳ ಜೊತೆಗೆ ವ್ಯಾಪಾರ ಸಂಬಂಧವನ್ನಿಟ್ಟುಕೊಂಡಿತ್ತು. ಇವರ ಆಶ್ರಯದಲ್ಲಿ ಪಾರ್ಶ್ವಪಂಡಿತ, ಗುಣವರ್ಮ, ಬಾಳಚಂದ್ರ, ನೇಮಿಚಂದ್ರ ಮುಂತಾದ ಕವಿಗಳು ಆಶ್ರಯವನ್ನು ಪಡೆದು ಮಹತ್ವದ ಕೃತಿಗಳನ್ನು ರಚಿಸಿದರು. ಹೀಗೆ ಕಲೆ, ವಾಣಿಜ್ಯ, ಸಾಹಿತ್ಯ ಕ್ಷೇತ್ರಗಳಲ್ಲಿ ಮಹತ್ವವನ್ನು ಪಡೆದುಕೊಂಡು ಬೆಳಗಾವಿ ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿತು.

**೫. ಮಧ್ಯಕಾಲೀನ ಇತಿಹಾಸ:**

ಪ್ರಾಗೈತಿಹಾಸಿಕ ಕಾಲದಿಂದಲೂ ಮಹತ್ವದ ನೆಲೆಯಾದ ಬೆಳಗಾವಿಯು ಹಲವಾರು ರಾಜಕೀಯ ಸ್ಥಿತ್ಯಂತರಗಳನ್ನು ಎದುರಿಸಿತು. ಬೇರೆ ಬೇರೆ ರಾಜರ ಆಳ್ವಿಕೆಗೆ ಒಳಪಟ್ಟ ಬೆಳಗಾವಿಯಲ್ಲಿ ನಿಶ್ಚಿತವಾಗಿ ಒಂದು ಸಾಮ್ರಾಜ್ಯ ನೆಲೆಗೊಳ್ಳಲಿಲ್ಲ. ಮೌರ್ಯ, ಶಾತವಾಹನ, ಕದಂಬರು, ಚಾಳುಕ್ಯರು, ರಾಷ್ಟ್ರಕೂಟರು, ಕದಂಬ ರಾಜರು ಬೆಳಗಾವಿಯನ್ನು ಆಡಳಿತದ ವಿಭಾಗವಾಗಿ ಮಾಡಿಕೊಂಡು ಆಳಿದರು. ರಟ್ಟರ ಅವನತಿಯ ನಂತರ ಬೆಳಗಾವಿಯ ರಾಜಕೀಯ ಇತಿಹಾಸವು ಮತ್ತಷ್ಟು ಸಂದಿಗ್ಧವಾಯಿತು. ಮೇಲಿಂದ ಮೇಲೆ ದಾಳಿಗಳು ನಡೆದು ಬೆಳಗಾವಿಯ ಸಿಂಹಾಸನ ರಾಜರಿಂದ ರಾಜರಿಗೆ ಪಲ್ಲಟವಾಗತೊಡಗಿತು. ದೇವಗಿರಿಯ ಯಾದವರು, ವಿಜಯನಗರದ ಅರಸರು, ಬಹಮನಿ ಸುಲ್ತಾನರು, ವಿಜಾಪುರದ ಆದಿಲಶಹರು, ಮೊಘಲರು, ಮರಾಠರು, ಸವಣೂರು ನವಾಬರು, ಪೇಶ್ವೆಗಳು– ಹೀಗೆ ಹತ್ತಾರು ರಾಜಮನೆತನಗಳು ಬೆಳಗಾವಿಯ ಮೇಲೆ ಆಡಳಿತವನ್ನು ನಡೆಸಿದವು. ಇದರಿಂದ ಬೆಳಗಾವಿಯ ಇತಿಹಾಸ, ಭಾಷೆ, ಧರ್ಮ, ಕಲೆ, ವಾಸ್ತುಶಿಲ್ಪ, ಸಾಹಿತ್ಯ, ಸಂಗೀತದ ಮೇಲೆ ಮಹತ್ವದ ಪರಿಣಾಮ ಬೀರಿ ವೈವಿಧ್ಯಮಯವಾದ ಸಂಸ್ಕೃತಿಯು ನಿರ್ಮಾಣಗೊಂಡಿತು.

ರಟ್ಟರನ್ನು ಸೋಲಿಸಿ ಬೆಳಗಾವಿಯನ್ನು ವಶಪಡಿಸಿಕೊಂಡ ದೇವಗಿರಿಯ ಯಾದವರಿಂದ ಬ್ರಿಟಿಷರವರೆಗಿನ ಕಾಲವನ್ನು ಮಧ್ಯಯುಗಿನ ಕಾಲವೆಂದು ಪರಿಗಣಿಸಿ ಈ ಅವಧಿಯಲ್ಲಿ ಬೆಳಗಾವಿಯಲ್ಲಿ ಉಂಟಾದ ರಾಜಕೀಯ ಬದಲಾವಣೆಗಳನ್ನು ಪ್ರಮುಖವಾಗಿ ಇಲ್ಲಿ ವಿವರಿಸಲಾಗಿದೆ.

**ಸೇವುಣರು (ದೇವಗಿರಿಯ ಯಾದವರು) :** ಸೇವುಣರನ್ನು ಸಾಮಾನ್ಯವಾಗಿ ದೇವಗಿರಿಯ ಯಾದವರೆಂದು ಕರೆಯಲಾಗುತ್ತದೆ.[೫೨] ಸೇವುಣಚಂದ್ರನಿಂದ ಈ ವಂಶವು ಪ್ರಾರಂಭಗೊಂಡಿದ್ದರಿಂದ ಈ ಮನೆತನಕ್ಕೆ 'ಸೇವುಣ' ಎಂಬ ಹೆಸರು ಬಂದಿತು.

ಸೇವುಣರ ಪ್ರಸಿದ್ಧ ದೊರೆ ಸಿಂಘನು ಕ್ರಿ. ಶ. ೧೨೦೦ ರಿಂದ ೧೨೨೦ ರವರೆಗೆ ಆಳ್ವಿಕೆ ನಡೆಸಿದನು. ಈತನು ಕೊಲ್ಹಾಪುರದಲ್ಲಿ ಆಳುತ್ತಿದ್ದ ಭೋಜನನ್ನು ಸೋಲಿಸಿದನು. ಅದೇ ಸಮಯಕ್ಕೆ ವೇಣುಗ್ರಾಮದಲ್ಲಿ ಎರಡನೆಯ ಲಕ್ಷ್ಮೀದೇವನು ಆಳ್ವಿಕೆ ನಡೆಸುತ್ತಿದ್ದನು. ಸಿಂಘನಿಗೂ ರಟ್ಟರಿಗೂ ಘರ್ಷಣೆಗಳೂ ನಡೆದವು. ಸಿಂಘನು ಶಿಲಾಹಾರ ಭೋಜನನ್ನು ಸೋಲಿಸಿದ್ದನ್ನು ಕಂಡ ರಟ್ಟರ ಲಕ್ಷ್ಮೀದೇವನು ಯುದ್ಧದ ಗೊಡವಿಗೆ ಹೋಗದೆ ಅವನಿಗೆ ಕಪ್ಪುಕಾಣಿಕೆ ನೀಡಿ ಸೋಲನೊಪ್ಪಿಕೊಂಡು ಹಿಂತಿರುಗಿದನು. ಸಿಂಘನು ನಿಶ್ಚಿಂತೆಯಿಂದ ಉತ್ತರ ಭಾರತದ ಕಡೆಗೆ ದಿಗ್ವಿಜಯವನ್ನು ಕೈಕೊಂಡಾಗ ಲಕ್ಷ್ಮೀದೇವನು ಮತ್ತೆ ಸ್ವತಂತ್ರ ರೀತಿಯ ಶಾಸನಗಳನ್ನು ತನ್ನ ಹೆಸರಿನಿಂದ ಬರೆಸಲು ಆರಂಭಿಸಿದನು.[೫೩] ತಾನಿಲ್ಲದ ಸಮಯದಲ್ಲಿ ಸ್ವತಂತ್ರನಾಗಿರುವ ಲಕ್ಷ್ಮೀದೇವನ ಮೇಲೆ ಯುದ್ಧ ಸಾರಲು ಸಿಂಘನು ತನ್ನ ಸೈನ್ಯವನ್ನು ಕಳುಹಿಸಿಕೊಟ್ಟನು. ಈ ಯುದ್ಧದಲ್ಲಿ ಲಕ್ಷ್ಮೀದೇವನು ಸೋತನು. ಇದರಿಂದ ಬೆಳಗಾವಿಯನ್ನು ಒಳಗೊಂಡ ಸಂಪೂರ್ಣ ಕುಹುಂಡಿ ಪ್ರದೇಶ ಸೇವುಣರ ವಶವಾಯಿತು. ಇಲ್ಲಿಂದ ರಟ್ಟರ ಆಡಳಿತವು ಕೊನೆಗೊಂಡಿತು.

ಬೆಳಗಾವಿಯನ್ನು ವಶಪಡಿಸಿಕೊಂಡ ಸೇವುಣರು ಹಲವಾರು ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡರು. ದೇವಾಲಯಗಳಿಗೆ ದಾನ-ದತ್ತಿಗಳನ್ನು ನೀಡಿದರು. ಸೇವುಣರ ಕನ್ನರದೇವನು ೧೨೬೧ ರ ಸುಮಾರಿಗೆ ಬೆಳಗಾವಿಯಲ್ಲಿ ಆಡಳಿತ ನಡೆಸಿದ್ದರ ಬಗ್ಗೆ ಮತ್ತು ದತ್ತಿ ಬಿಟ್ಟ ಬಗೆಗೆ ಸೋಫಾ ಮಸೀದಿಯ ಎರಡನೆಯ ಕಂಬದ ಮೇಲಿನ ಶಾಸನ ತಿಳಿಸುತ್ತದೆ. ಶಕವರ್ಷ ೧೧೮೪ ದುರ್ಮತಿ ಸಂವತ್ಸರದ ಜೇಷ್ಠ ಬಹುಳ ಅಮವಾಸ್ಯೆ ಸೋಮವಾರದಂದು ಅಂದರೆ ಕ್ರಿ. ಶ. ೧೨೬೧ ರ ಮೇ ೩೦ರ ಸೋಮವಾರದಂದು 'ಇಕ್ಷುಗ್ರಾಮ' ಅಗ್ರಹಾರಕ್ಕೆ ದತ್ತಿ ಬಿಟ್ಟ ಕನ್ನರದೇವನನ್ನು ಈ ಶಾಸನ ವರ್ಣಿಸುತ್ತದೆ. ಇಕ್ಷ್ವಾಕು ಚಕ್ರವರ್ತಿಗಳು ಮಾಡಿದ ಅಶ್ವಮೇಧಯಾಗದ ಸವಿನೆನಪಿಗಾಗಿ ಈ ದಾನ-ಧರ್ಮ ನಡೆಯಿತು ಎಂದು ಶಾಸನ ಹೇಳುತ್ತದೆ.[೫೪] ಹದಿನಾರು ಋತ್ವಿಕಗಣ ಮತ್ತು ಲಕ್ಷ್ಮೀದೇವ ಪಟ್ಟವರ್ಧನನ್ನು ಈ ಶಾಸನ ಹೆಸರಿಸುತ್ತದೆ. ಕ್ರಿ. ಶ. ೧೨೪೯ ರ ಹಿರೇಬಾಗೆವಾಡಿ ಶಾಸನವು ಯಾದವರ ಕೃಷ್ಣನ ಕಾಲದ್ದಾಗಿದೆ. ಈ ಶಾಸನದಲ್ಲಿ ವೇಣುಗ್ರಾಮದಲ್ಲಿರುವ 'ತಾಮ್ರಪುರಿ' ಎಂಬ ಹಳ್ಳಿಯನ್ನು ೧೧೦ ಬ್ರಾಹ್ಮಣರಿಗೆ ದಾನ ಮಾಡಿದ ವಿಷಯವನ್ನು ಹಾಗೂ ಚೌಡಿಶೆಟ್ಟಿಯೆಂಬ ಮಂತ್ರಿ, ಮಲ್ಲಸೆಟ್ಟಿಯೆಂಬ ಮಹಾ ಅಮಾತ್ಯರು ಯಾದವರ ಅಧಿಕಾರಿಗಳಾಗಿ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದರೆಂಬುದನ್ನು ಉಲ್ಲೇಖಿಸಲಾಗಿದೆ.[೫೫]

ಸೇವುಣರು ಹೆಚ್ಚು ಕಾಲ ಬೆಳಗಾವಿಯಲ್ಲಿ ಆಡಳಿತವನ್ನು ನಡೆಸಲಿಲ್ಲ. ಈ ಸಮಯದಲ್ಲಿ ಅಲ್ಲಾವುದ್ದೀನ ಖಿಲ್ಜಿಯ ಸರದಾರನಾದ ಮಲ್ಲಿಕಾಫರನ ದಾಳಿಗೆ ಈಡಾದ ದೇವಗಿರಿ ಯಾದವರ ರಾಜ್ಯ ಸಂಪೂರ್ಣವಾಗಿ ಆತನ

ಕೈ ಸೇರಿತು. ಕ್ರಿ. ಶ. ೧೩೧೨–೧೩ ರಲ್ಲಿ ಯಾದವರ ಶಂಕರದೇವನನ್ನು ಸೋಲಿಸಿ ಸೆರೆಹಿಡಿದು ಮಲ್ಲಿಕಾಫರನು ಅಧಿಕಾರ ಸೂತ್ರವನ್ನು ತಾನೇ ವಹಿಸಿಕೊಂಡನು. ಆಗ ಬೆಳಗಾವಿಯು ಮುಸ್ಲಿಂರ ಆಳ್ವಿಕೆಗೆ ಒಳಪಟ್ಟಿತು.[೫೬]

**ವಿಜಯನಗರದ ಅರಸರು:** ದೇವಗಿರಿಯ ಯಾದವರ (ಸೇವುಣ) ಆಳ್ವಿಕೆಯ ನಂತರ ಬೆಳಗಾವಿಯು ಮುಸ್ಲಿಂರ ದಾಳಿಗೆ ಒಳಗಾಯಿತು. ಇಡೀ ದಕ್ಷಿಣ ಭಾರತವೇ ಮಲಿಕಾಫರನ ದಾಳಿಯಿಂದ ಜರ್ಜರಿತಗೊಂಡು ತತ್ತರಿಸುತ್ತಿತ್ತು. ಇಂತಹ ಸಂದರ್ಭದಲ್ಲಿ ವಿಜಯನಗರ ಸಾಮ್ರಾಜ್ಯ ಉದಯಿಸಿ ಹಿಂದೂಧರ್ಮದ ರಕ್ಷಣೆಯ ಜೊತೆಗೆ ಸನಾತನಧರ್ಮದ ಉದಾತ್ತ ಭಾವಗಳನ್ನು ಮೈಗೂಡಿಸಿಕೊಂಡು ಸರ್ವಧರ್ಮ ಸಹಿಷ್ಣುತಾ ನೀತಿಯನ್ನು ಅನುಸರಿಸಿತು. ಕ್ರಿ. ಶ. ೧೩೩೬ ರ ನಂತರ ಮುಂದೆ ಕೆಲವರ್ಷಗಳಲ್ಲಿಯೇ ಇಡೀ ದಕ್ಷಿಣ ಭಾರತವು ಈ ಸಾಮ್ರಾಜ್ಯದ ಆಡಳಿತಕ್ಕೊಳಪಟ್ಟಿತು. ಉತ್ತರದಲ್ಲಿ ಬೆಳಗಾವಿಯನ್ನೊಳಗೊಂಡು ಕೃಷ್ಣಾನದಿಯವರೆಗೂ ಈ ಸಾಮ್ರಾಜ್ಯ ವಿಸ್ತರಿಸಿತು.

ವಿಜಯನಗರ ಸಾಮ್ರಾಜ್ಯದ ಆಳ್ವಿಕೆಗೆ ಬೆಳಗಾವಿಯ ಕೆಲವು ಪ್ರದೇಶಗಳು ಒಳಪಟ್ಟಿದ್ದವು. ಮೊದಲನೆಯ ಹರಿಹರನ ಕಾಲದಲ್ಲಿ (೧೩೩೫ ರಿಂದ ೧೩೪೭ ರ ವರೆಗೆ) ಘಟಪ್ರಭಾದವರೆಗೆ ಈ ಸಾಮ್ರಾಜ್ಯವು ವಿಸ್ತರಿಸಿತ್ತು. ಮುಂದೆ ೧೩೭೦ರ ಸುಮಾರಿಗೆ ಮೊದಲನೆಯ ಬುಕ್ಕರಾಯನ ಮಂತ್ರಿ ಮಾಧವನು ಗೋವೆಯನ್ನು ಗೆದ್ದುಕೊಂಡು ಕೊಂಕಣದವರೆಗೂ ತನ್ನ ರಾಜ್ಯ ವಿಸ್ತರಿಸಿದನು. ಬುಕ್ಕರಾಯನು ಬೆಳಗಾವಿ ಹಾಗೂ ತೋರಗಲ್‌ಗಳಲ್ಲಿದ್ದ ಒಂದು ನಿರ್ದಿಷ್ಟ ಮನೆತನದ ಜ್ಯೋತಿಷಗಳನ್ನು ನೇಮಿಸಿಕೊಂಡಿದ್ದನೆಂದು ತಿಳಿದುಬರುತ್ತದೆ.[೫೭] ಈ ಅವಧಿಯಲ್ಲಿಯೇ ಹುಟ್ಟಿಕೊಂಡ ಬಹಮನಿ ಸುಲ್ತಾನರಿಗೂ ವಿಜಯನಗರದ ಅರಸರಿಗೂ ಮೇಲಿಂದ ಮೇಲೆ ಯುದ್ಧಗಳು ಸಂಭವಿಸುತ್ತಿದ್ದವು. ಇಂತಹ ಸಂದರ್ಭದಲ್ಲಿ ಬೆಳಗಾವಿಯು ಒಮ್ಮೆ ವಿಜಯನಗರ ಅರಸರ ಆಡಳಿತಕ್ಕೆ ಒಳಪಟ್ಟರೆ ಮತ್ತೊಮ್ಮೆ ಬಹಮನಿ ಅರಸರ ಆಳ್ವಿಕೆಗೆ ಒಳಪಡುತ್ತಿತ್ತು. ಮುಂದೆ ವಿಜಾಪುರದ ಸುಲ್ತಾನನ್ನೂ ಸೇರಿಕೊಂಡ ಬೆಳಗಾವಿ ಈ ಮೂರು ಸಾಮ್ರಾಜ್ಯಗಳ ಜಗಳದಲ್ಲಿ ಪಲ್ಲಟವಾಗುತ್ತಲೇ ಸಾಗಿತು. ಮುಂದೆ ಕ್ರಿ. ಶ. ೧೪೭೦ರಲ್ಲಿ ಬಹಮನಿ ಬಾದಶಹನ ವಜೀರನಾದ ಮಹಮೂದ ಗವಾನನು ವಿಜಯನಗರ ಅರಸರ ಸೈನ್ಯವನ್ನು ಸೋಲಿಸಿ ಗೋಪಿ ಮತ್ತು ಅದರ ಸುತ್ತಲಿನ ಪ್ರದೇಶವನ್ನು ವಶಪಡಿಸಿಕೊಂಡನು. ನಂತರ ಎರಡು ವರ್ಷದಲ್ಲಿ ವಜೀರ ಮಹಮೂದನು ಬೆಳಗಾವಿಯ ಮೇಲೆ ದಾಳಿ ಮಾಡಿ ವಿಜಯನಗರ ಅರಸರರಿಂದ ವಶಪಡಿಸಿಕೊಂಡನು. ಮುಂದೆ ಪಟ್ಟಕ್ಕೆ ಬಂದ ವಿಜಯನಗರದ ಒಂದನೆಯ ನರಸಿಂಗರಾಯನು ಬೆಳಗಾವಿಯನ್ನು ಮತ್ತೇ ವಶಪಡಿಸಿಕೊಂಡನು.[೫೮]

**ಬಹಮನಿಗಳು:** ಕ್ರಿ. ಶ. ೧೩೪೭ರಲ್ಲಿ ಬಹಮನಿ ಸಾಮ್ರಾಜ್ಯ ಅಸ್ತಿತ್ವಕ್ಕೆ ಬಂದಿತು. ಮಹಮ್ಮದ ತುಘಲಕ್‌ನ ವಿರುದ್ಧ ಅಮೀರರು ನಡೆಸಿದ ಯಶಸ್ವಿ ದಂಗೆಗಳ ಪರಿಣಾಮವಾಗಿ ಈ ಸಾಮ್ರಾಜ್ಯ ಉದಯಿಸಿತು. ಬಹಮನಿ ರಾಜ್ಯ ಸ್ಥಾಪಕ ಅಲ್ಲಾವುದ್ದೀನ ಹಸನಗಂಗು ಮೂಲತಃ ಬೆಳಗಾವಿ ಜಿಲ್ಲೆಯ ಕುಡಚಿ ಪ್ರದೇಶದವನು ಎಂದು ಹೇಳಲಾಗುತ್ತದೆ.[೫೯]

ಮುಂದೆ ಕ್ರಿ. ಶ. ೧೪೭೨ರಲ್ಲಿ ಬಹಮನಿ ಸುಲ್ತಾನ ಮಹಮ್ಮದ ಗವಾನನು ಕೊಂಕಣ, ಬೆಳಗಾವಿ ಪ್ರದೇಶ ಮತ್ತು ಗೋವಾ ವಶಪಡಿಸಿಕೊಂಡನು. ಆ ಸಮಯದಲ್ಲಿ ವಿಜಯನಗರದ ಗವರ್ನರ ಪರ್ಕಿಟಾ ಬೆಳಗಾವಿ ಗೋವೆಯನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದನು. ಆದರೆ ಯುದ್ಧದಲ್ಲಿ ಮಹಮ್ಮದ ಗವಾನನು ಮದ್ದಿನಪುಡಿ ಉಪಯೋಗಿಸಿ ನಡೆಸಿದ ದಾಳಿಯಿಂದ ಜಯ ಆತನಿಗೆ ದೊರೆಯಿತು. ಇದರಿಂದ ಬೆಳಗಾವಿಯ ಮೇಲೆ ಬಹಮನಿಗಳ ಸ್ವಾಮ್ಯ ಹೆಚ್ಚಾಯಿತು. ಹೀಗೆ ಬಹಮನಿ ಹಾಗೂ ವಿಜಯನಗರದ ನಡುವೆ ಗೋವೆ, ಬೆಳಗಾವಿ ಪ್ರದೇಶಗಳ ಮೇಲಿನ ಪ್ರಭುತ್ವಕ್ಕಾಗಿ ನಿರಂತರ ಹೋರಾಟ ನಡೆದು ಈ ಪ್ರದೇಶದಲ್ಲಿ ರಾಜಕೀಯ ಅಸ್ಥಿರತೆಗೆ ಕಾರಣವಾಯಿತು.

ಮಹಮ್ಮದ ಗವಾನನ ಆಳ್ವಿಕಾವಧಿಯಲ್ಲಿ ಕ್ರಿ. ಶ. ೧೪೭೭ರಲ್ಲಿ ಬೆಳಗಾವಿಯ ಪ್ರದೇಶದ ಆಡಳಿತ ಪಕರ್ ಉಲ್ ಗಲಾನಿ ಎಂಬ ಅಧಿಕಾರಿಗೆ ಒಳಪಟ್ಟಿತ್ತು. ಮುಂದೆ ಈ ಕೋಟೆಯ ರಕ್ಷಣೆಯು 'ಮುಸ್ತಫಾ' ಎಂಬ ಸರದಾರನ ಆಳ್ವಿಕೆಗೆ ಒಳಪಟ್ಟಿತು. ಹೀಗಾಗಿ ಕೋಟೆಯ ಪ್ರಮುಖ ಭಾಗಕ್ಕೆ 'ಮುಸ್ತಫಾಬಾದ' ಎಂದು ಹೆಸರು ಬರಲು ಕಾರಣವಾಯಿತು. ಗವಾನನ ಪತತಾನಂತರ ಬಹಮನಿ ರಾಜ್ಯ ಅಶಕ್ತವಾಯಿತು. ಮುಂದೆ ಬಹಮನಿ ಸುಲ್ತಾನರ ಮೂರನೆಯ ಮಹಮ್ಮದ ಗೋವಾದ ಮೇಲೆ ದಾಳಿ ಮಾಡಿದ ಸಂದರ್ಭದಲ್ಲಿ ಬೆಳಗಾವಿಗೆ ಭೇಟಿಯಿತ್ತನು. ಆತನ ಉತ್ತರಾಧಿಕಾರಿಯಾದ ಶಹಾಬುದ್ದೀನ್ ಮಹಮ್ಮದನ ಆಳ್ವಿಕೆಯಲ್ಲಿ ಬಹಮನಿ ಸಾಮ್ರಾಜ್ಯ ವಿಭಜನೆ ಹೊಂದಿ, ಬೆಳಗಾವಿ ಪ್ರದೇಶ ಯುಸುಫ್ ಅವಿಲ್‌ಖಾನನ ಆಳ್ವಿಕೆಗೆ ಒಳಪಟ್ಟಿತು. ಈ ಸಂದರ್ಭದಲ್ಲಿ ಗೋವಾದಲ್ಲಿ ಬಹಮನಿ ಸುಲ್ತಾನರ ಕೊತ್ವಾಲನಾಗಿ ಆಡಳಿತ ನಡೆಸುತ್ತಿದ್ದ ಬಹದ್ದೂರ ಗಿಲಾನಿಯು ದಂಗೆಯೆದ್ದು ಗೋವಾ ಮತ್ತು ಬೆಳಗಾವಿಯನ್ನು ವಶಪಡಿಸಿಕೊಂಡನು.

**ವಿಜಾಪುರದ ಆದಿಲಶಾಹಿಗಳು:** ಕ್ರಿ. ಶ. ೧೪೮೯ರಲ್ಲಿ ಯೂಸೂಫ್ ಆದಿಲ್‌ಖಾನನೆಂಬ ಸುಬೇದಾರನು ವಿಜಾಪುರದ ಆದಿಲ್‌ಶಾಹನೆಂದು ಆಡಳಿತ ಪ್ರಾರಂಭಿಸಿದನು. ಈತನು ಬಹಮನಿಯ ವಶದಲ್ಲಿದ್ದ ಬೆಳಗಾವಿ ಪ್ರದೇಶದ ಪ್ರಾಂತಗಳ ಉತ್ತರಾಧಿಕಾರಿಯಾಗಿಯೂ ಆಡಳಿತ ನಿರ್ವಹಿಸಿದನು. ಈತನ ಆಳ್ವಿಕೆಯಲ್ಲಿ ಬೆಳಗಾವಿ, ಹುಕ್ಕೇರಿ ಮತ್ತು ರಾಯಬಾಗಗಳು ಪ್ರಮುಖ ಆಡಳಿತ ಕೇಂದ್ರಗಳಾಗಿ ಮುಂದುವರೆದವು.

ಯೂಸೂಫ್ ಆದಿಲ್‌ಶಾಹನ ಮಗ ಇಸ್ಮಾಯಿಲ್ ವಿಜಾಪುರದ ಬಾದಶಹನಾಗಿ ಆಳ್ವಿಕೆ ನಡೆಸಿದ ಸಂದರ್ಭದಲ್ಲಿ ಆಸ್ಥಾನದಲ್ಲಿ ದಂಗೆಗಳು ನಡೆದವು. ಈ ದಂಗೆಗಳನ್ನು ಹತ್ತಿಕ್ಕುವಲ್ಲಿ ಯಶಸ್ವಿಯಾದ ಮಹಮ್ಮದ್ ಲಾರಿ ಎಂಬ ಸರದಾರನು ರಾಜನ ಪ್ರೀತಿಗೆ ಪಾತ್ರನಾದನು. ಇದರಿಂದ ಕ್ರಿ. ಶ. ೧೫೧೧ರಲ್ಲಿ ಈತನಿಗೆ ಬೆಳಗಾವಿ ಜಹಗೀರನ್ನು ಕೊಡಲಾಯಿತು. ಮಹಮ್ಮದ್ ಲಾರಿಯು 'ಅಸದಖಾನ' ಎಂಬ ಹೆಸರಿನಿಂದ ಬೆಳಗಾವಿಯ ಆಡಳಿತವನ್ನು ನಿರ್ವಹಿಸ ತೊಡಗಿದನು. ಈತನು ಕ್ರಿ. ಶ. ೧೫೧೧ ರಿಂದ ೧೫೪೯ ರವರೆಗೆ ಸುಮಾರು ೩೮ ವರ್ಷಗಳ ಕಾಲ ಬೆಳಗಾವಿಯಲ್ಲಿ ಆಳ್ವಿಕೆ ನಡೆಸಿದನು. ಈತನು ಶೂರನೂ, ಬುದ್ಧಿಶಾಲಿಯೂ, ಮುತ್ಸದ್ದಿಯೂ, ಉತ್ತಮ ಆಡಳಿತಗಾರನೂ ಆಗಿದ್ದಲ್ಲದೆ

ಕವಿಗಳಿಗೆ, ವಿದ್ವಾಂಸರಿಗೆ ಆಶ್ರಯವನ್ನು ಕೊಟ್ಟಿದ್ದನು. ಈತನ ಆಡಳಿತಾವಧಿಯಲ್ಲಿ ಬೆಳಗಾವಿಯು ಅಭಿವೃದ್ಧಿಯನ್ನು ಹೊಂದಿತು. ಅಸದಖಾನನು ಸರ್ವಧರ್ಮ ಸಮನ್ವಯತೆಯಿಂದ ರಾಜ್ಯಭಾರವನ್ನು ಮಾಡಿ ಎಲ್ಲ ಧರ್ಮದವರಿಗೂ ಪ್ರೀತಿಪಾತ್ರನಾಗಿದ್ದನು.

ಅಸದಖಾನನು ಸುಮಾರು ೪೦-೫೦ ವರ್ಷಗಳವರೆಗೆ ವಿಜಾಪುರದ ಸುಲ್ತಾನರ ಸೇವೆಯಲ್ಲಿದ್ದನು. ಈತನ ಅಧಿಕಾರವಧಿಯಲ್ಲಿ ಬೆಳಗಾವಿಯು ಸ್ಥಿರವಾದ ಆಡಳಿತವನ್ನು ಹೊಂದಿತು. ಅಸದಖಾನನು ಬೆಳಗಾವಿ ಕೋಟೆಯನ್ನು ಕ್ರಿ. ಶ. ೧೪೮೬ರಲ್ಲಿ ಅಭಿವೃದ್ಧಿ ಪಡಿಸಿದನು. ಶೂರತ್ವ, ದಾನ, ವಿದ್ವತ್ತು ಈ ಮೂರು ಉತ್ತಮ ಗುಣಗಳನ್ನು ಹೊಂದಿದ ಅಸದಖಾನನು ಬೆಳಗಾವಿ ಜನರಲ್ಲಿ ಇಂದಿಗೂ ದೈವತ್ವವನ್ನು ಪಡೆದುಕೊಂಡಿದ್ದಾನೆ. ಆತನ ಗೋರಿಗೆ ಹಿಂದೂ, ಮುಸ್ಲಿಂ, ಎಲ್ಲ ಸಮುದಾಯದವರು ನಡೆದುಕೊಳ್ಳುತ್ತಾರೆ.[೬೦]

ವಿಜಾಪುರದ ಸುಲ್ತಾನ ಹಾಗೂ ಅಸದಖಾನನ ಬಗೆಗೆ ವಿವರಗಳನ್ನು ನೀಡುವ ಮಹತ್ವದ ಶಾಸನಗಳು ಬೆಳಗಾವಿಯ ಕೋಟೆಯ ಮಧ್ಯದಲ್ಲಿರುವ ಮಸ್ಜಿದ್–ಐ ಸಫಾ ಎಂಬ ಮಸೀದಿಯಲ್ಲಿವೆ. ಅರಬ್ಬಿ ಮತ್ತು ಪರ್ಶಿಯನ್ ಭಾಷೆಯಲ್ಲಿರುವ ಈ ಶಿಲಾಶಾಸನವು ಕ್ರಿ. ಶ. ೧೫೧೮ರಲ್ಲಿ ಇಸ್ಮಾಯಿಲ್ ಆದಿಲ್‌ಖಾನ ಕಾಲದಲ್ಲಿ ರಚಿಸಲ್ಪಟ್ಟಿದೆ.[೬೧] ಈ ಶಾಸನವನ್ನು ರಚಿಸಿದವನು ಖ್ವಾಜಿ ನಿಜಾಮುದ್ದಿನ್ ಅದ್ ದವ್ವಾನಿ ಎನ್ನುವವನು. ಕುರಾನಿನ ಪದ್ಯದಿಂದ ಆರಂಭವಾಗುವ ಈ ಶಾಸನದಲ್ಲಿ ಅಸದಖಾನನು ಖ್ವಾಜಗಿ ನಿಜಾಮ ಉದದ್ವಾನಿ ಮುಂತಾದವರ ನೆರವಿನಿಂದ ಇಲ್ಲಿ ಮಸೀದಿಯನ್ನು ನಿರ್ಮಿಸಿದ ಉಲ್ಲೇಖವಿದೆ.[೬೨]

ಇದೇ ಮಸೀದಿಯಲ್ಲಿಯ ಮತ್ತೊಂದು ಶಾಸನವು ಕ್ರಿ. ಶ. ೧೫೧೯ ಜುಲೈ ೧೯ ರಂದು ರಚಿಸಿದ್ದಾಗಿದೆ.[೬೩] ಪರ್ಶಿಯನ್ ಭಾಷೆಯಲ್ಲಿರುವ ಈ ಶಾಸನವು ಇಸ್ಮೈಲ್ ಆದಿಲ್ ಖಾನ್‌ನ ಅವಧಿಯದ್ದಾಗಿದೆ. ಈ ಮಸೀದಿಯನ್ನು ಅಸದಖಾನ್ ಕಟ್ಟಿಸಿದನೆಂಬ ಉಲ್ಲೇಖ ಈ ಶಾಸನದಿಂದ ತಿಳಿದುಬರುತ್ತದೆ.

ಸಫಾ ಮಸೀದಿಗೆ ದತ್ತಿಯಾಗಿ ಅಸದಖಾನ್ ನೀಡಿದ್ದ ಉಳುಮೆ ಭೂಮಿಯ ವಿವರವನ್ನು ತಿಳಿಸುವ ಶಾಸನವು ಪರ್ಷಿಯನ್ ಭಾಷೆಯಲ್ಲಿದೆ. ಶ್ರೀ ಬಾಬುರಾವ್ ಎನ್ನುವವರ ಮನೆಯೇ ಹಾಸುಕಲ್ಲಿನ ಮೇಲೆ ಈ ಶಾಸನವಿದೆ. ಇದು ಕ್ರಿ. ಶ. ೧೫೧೯ರಲ್ಲಿ ರಚಿಸಿದ್ದಾಗಿದೆ.[೬೪] ಅಸದಖಾನನು ಕ್ರಿ. ಶ. ೧೫೪೯ರಲ್ಲಿ ಮರಣ ಹೊಂದಿದ ಬಳಿಕ ಆದಿಲ್‌ಶಾಹನು ಈತನ ಮಗ ಮಹಮ್ಮದ ಕಿಶಾವರಖಾನನ ಅಸದಖಾನನ್ನು ಉತ್ತರಾಧಿಕಾರಿಯೆಂದು ಗುರುತಿಸಿ ಬೆಳಗಾವಿ, ರಾಯಬಾಗ, ಹುಕ್ಕೇರಿಗಳನ್ನು ಈತನ ಆಳ್ವಿಕೆಗೆ ಒಳಪಡಿಸಿದನು.

ಕ್ರಿ. ಶ. ೧೫೫೦ರಲ್ಲಿ ಶೇರಖಾನ ಎಂಬ ಆದಿಲಶಾಹಿ ಅಧಿಕಾರಿಯು ಬೆಳಗಾವಿಯಲ್ಲಿ ಹೊಸದೊಂದು ಪೇಟೆಯನ್ನು ಮಾಡುವುದಕ್ಕಾಗಿ ಶಹಾಪೂರವನ್ನು ಕಟ್ಟಿದನು. ಈ ಪೇಟೆಯ ಸುತ್ತಲೂ ಗೋಡೆಗಳನ್ನು ನಿರ್ಮಿಸಿದನು. ಅಲ್ಲಿ ಮೊದಲು ಶಹಾಪೇಟೆಯೆಂಬ ಸಣ್ಣ ಹಳ್ಳಿ ಇತ್ತು. ಇಲ್ಲಿ ವಜ್ರ, ಮಾಣಿಕ್ಯ, ನೀಲ ಮುಂತಾದ ಹರಳುಗಳ ವ್ಯಾಪಾರವು ನಡೆಯುತ್ತಿತ್ತು.[೬೫] ಕ್ರಿ. ಶ. ೧೫೮೩ ರಲ್ಲಿ ಎರಡನೆಯ ಇಬ್ರಾಹಿಂನ ಆಳ್ವಿಕೆಗೆ ಬೆಳಗಾವಿ ಪ್ರಾಂತ ಒಳಗೊಂಡಾಗ ಬೆಳಗಾವಿಗೆ ಭೇಟಿಯಿತ್ತ ರಾಲ್ಫಿಫಿಜ್ ಎಂಬ ವಿದೇಶಿ ಪ್ರವಾಸಿ ಬೆಳಗಾವಿಯನ್ನು ಉತ್ತಮ ವ್ಯಾಪಾರಕೇಂದ್ರವಾಗಿತ್ತೆಂದು ಉಲ್ಲೇಖಿಸಿದ್ದಾನೆ. ಕ್ರಿ. ಶ. ೧೬೯೫ ರಲ್ಲಿ ಇಟಲಿಯ ಪ್ರವಾಸಿ 'ಕಥೇರಿ' ಎನ್ನುವವನು ಬೆಳಗಾವಿಯನ್ನು ಸಂದರ್ಶಿಸಿ ಬೆಳಗಾವಿಯು ದೊಡ್ಡ ದೊಡ್ಡ ಮಾರುಕಟ್ಟೆಗಳಿಂದ ಆವೃತ್ತವಾದ ಜನನಿಬಿಡ ಪ್ರದೇಶವೆಂದು ವರ್ಣಿಸಿದ್ದಾನೆ.[೬೬]

ಎರಡನೆಯ ಇಬ್ರಾಹಿಮನ ಪರ್ಶಿಯನ್ ಮತ್ತು ಕನ್ನಡ ಭಾಷೆಯಲ್ಲಿರುವ ತೋರಗಲ್ ಶಿಲಾಶಾಸನ ಬೆಳಗಾವಿ ಪ್ರದೇಶ ಈತನ ವಶದಲ್ಲಿತ್ತೆಂದು ಸೂಚಿಸುತ್ತದೆ. ಎರಡನೆಯ ಇಬ್ರಾಹಿಮನ ಮಗನಾದ ಮಹಮ್ಮದನ ಆಳ್ವಿಕೆಯ ಕಾಲದ ಪರ್ಶಿಯನ್ ಶಿಲಾಲೇಖ (೧೬೩೩-೩೪)ವು ಅಬ್ದುಲ್ ಹುಸೇನ್ ಎಂಬ ಅಮೀರನು ಬೆಳಗಾವಿಯಲ್ಲಿ ಆಳ್ವಿಕೆ ನಡೆಸುತ್ತಿದ್ದು ಈತನು ಬೆಳಗಾವಿ ಕೋಟೆಯ ಗೋಡೆಯನ್ನು ದುರಸ್ತಿಗೊಳಿಸಿದನೆಂದು ಉಲ್ಲೇಖಿಸುತ್ತದೆ.[೬೭] ಇನ್ನೊಂದು ಪರ್ಶಿಯನ್ ಶಾಸನ ಯಾಕೂಬ ಅಲಿಖಾನ ಎಂಬುವನೂ ಬೆಳಗಾವಿ ಕೋಟೆಯ ಗೋಡೆಯನ್ನು ದುರಸ್ತಿಗೊಳಿಸಿದ್ದನ್ನು ಸೂಚಿಸುತ್ತದೆ.[೬೮] ೧೬೫೬ರ ಸುಮಾರಿಗೆ ಸಿದ್ದಿ ರೆಹಾನ್ ಎಂಬಾತನಿಗೆ ಬೆಳಗಾವಿಯ ಜಹಗೀರ್‌ವನ್ನು ಕೊಡಲಾಯಿತು. ಮುಂದೆ ಮೊಘಲರು ವಿಜಾಪುರದ ಕೊನೆಯ ಸುಲ್ತಾನ ಸಿಕಂದರ ಶಹಾನನ್ನು ಸೋಲಿಸಿದಾಗ ಬೆಳಗಾವಿಯು ಮೊಘಲರ ಆಳ್ವಿಕೆಗೆ ಒಳಪಟ್ಟಿತು.

ಈ ಸಮಯದಲ್ಲಿ ಕೆಲವು ಕಾಲ ಬೆಳಗಾವಿಯು ಶಿವಾಜಿಯ ಆಡಳಿತಕ್ಕೆ ಒಳಪಟ್ಟಿತ್ತು. ಮರಾಠರು ಪ್ರಬಲರಾಗಿ ತಮ್ಮ ಸಾಮ್ರಾಜ್ಯ ವಿಸ್ತರಣೆ ಕಾರ್ಯ ಕೈಗೊಂಡರು. ೧೬೭೪ರಲ್ಲಿ ಮರಾಠಾ ಸಾಮ್ರಾಜ್ಯವನ್ನು ಸ್ಥಾಪಿಸಿದ ಛತ್ರಪತಿ ಶಿವಾಜಿ ವಿಜಾಪುರದ ವಿರುದ್ಧ ಬಂಡೆದ್ದು ಕರ್ನಾಟಕದ ಅನೇಕ ಪ್ರದೇಶಗಳ ಮೇಲೆ ದಂಡಯಾತ್ರೆಯನ್ನು ಕೈಗೊಂಡನು. ಕ್ರಿ. ಶ. ೧೬೭೩ರಲ್ಲಿ ಪನ್ಹಾಳದಿಂದ ಹುಬ್ಬಳ್ಳಿಯವರೆಗಿನ ದಾಳಿಯಲ್ಲಿ ಬೆಳಗಾವಿಯನ್ನು ವಶಪಡಿಸಿಕೊಂಡು ರಾಮಚಂದ್ರ ಪಂತ ಅಮಾತ್ಯ ಎನ್ನುವವನನ್ನು ಬೆಳಗಾವಿ ಭಾಗದ ಆಡಳಿಗಾರನನ್ನಾಗಿ ನೇಮಿಸಿದನು. ಆದರೆ ವಿಜಾಪುರದ ಸುಲ್ತಾನರು ಬೆಳಗಾವಿಯ ಮೇಲೆ ದಾಳಿಮಾಡಿ ಮತ್ತೆ ಬೆಳಗಾವಿಯನ್ನು ವಶಪಡಿಸಿಕೊಂಡರು.

**ಮೊಘಲರು:** ಕ್ರಿ. ಶ. ೧೬೮೬ ರಲ್ಲಿ ಮೊಘಲರು ಬೆಳಗಾವಿ ಪ್ರದೇಶದ ಮೇಲೆ ಪ್ರಭುತ್ವವನ್ನು ಹೊಂದಿದರು. ಮೊಘಲರ ಔರಂಗಜೇಬನು ಬಿಜಾಪುರ ಸುಲ್ತಾನ ಸಿಕಂದರ ಶಹಾನನ್ನು ಸೋಲಿಸಿ ಬೆಳಗಾವಿಯನ್ನು ವಶಪಡಿಸಿಕೊಂಡನು. ಈತನು ಕರ್ನಾಟಕ ಸುಭಾ ರಚಿಸಿ ಬೆಳಗಾವಿಯನ್ನು ಒಳಗೊಂಡ ಪ್ರದೇಶವನ್ನು ಆಳಿದನು.

ಔರಂಗಜೇಬನು ಮಗನಾದ 'ಅಜಂ'ನಿಗೆ ಈ ಪ್ರದೇಶವನ್ನು ಒಪ್ಪಿಸಿದನು. 'ಅಜಂ'ನು ಆಳ್ವಿಕೆ ನಡೆಸಿದ್ದರಿಂದ ಬೆಳಗಾವಿಗೆ 'ಅಜಂನಗರ' ಎಂಬ ಹೆಸರು ಬಂದಿತು.[೧೯] ಬೆಳಗಾವಿಯ ಅಧಿಪತ್ಯಕ್ಕಾಗಿ ಮೊಗಲರಿಗೂ ಹಾಗೂ ಮರಾಠಿಗರ ನಡುವೆ ಮೇಲಿಂದ ಮೇಲೆ ಯುದ್ಧಗಳು ಸಂಭವಿಸತೊಡಗಿದವು. ಈ ಸಂದರ್ಭದಲ್ಲಿ ಮೊಗಲರು ಈ ಪ್ರದೇಶವನ್ನು ಸವಣೂರಿನ ನವಾಬ ಅಬ್ದುಲ್ ರವುಫಖಾನನಿಗೆ ಕೊಟ್ಟನು. ಆಗ ಇಲಾಚಿ ಬೇಗ್ ಎಂಬುವನು ಸವಣೂರ ನವಾಬನಿಂದ ಗವರ್ನರ ಆಗಿ ನೇಮಕ ಹೊಂದಿ ಬೆಳಗಾವಿಯಲ್ಲಿ ಆಡಳಿತ ನಡೆಸಿದನು ಎಂಬುದು ಪುಣೆಯ ಭಾರತ ಇತಿಹಾಸ ಸಂಶೋಧನ ಮಂಟಳಿಯಲ್ಲಿರುವ ಪಟವರ್ಧನ ದಫ್ತರಿನಲ್ಲಿ ಉಲ್ಲೇಖಗೊಂಡಿದೆ ಎಂದು ಡಾ. ಎಂ.ವೈ. ಸಾವಂತ ಅವರು ತಿಳಿಸಿದ್ದಾರೆ.[೨೦]

**ಸವಣೂರಿನ ನವಾಬರು:** ಮೊಗಲರ ಸಾಮಂತರಾಗಿ ಆಳ್ವಿಕೆ ನಡೆಸಿದ ಸವಣೂರಿನ ನವಾಬರು ಬೆಳಗಾವಿಯಲ್ಲಿಯೂ ಆಳ್ವಿಕೆಯನ್ನು ನಡೆಸಿದರು. ಇವರು ಅಧಿಕಾರಕ್ಕೆ ಬಂದಾಗ ಮರಾಠರ ದಾಳಿಗಳನ್ನು ಎದುರಿಸಬೇಕಾಯಿತು. ಹೀಗಾಗಿ ಬೆಳಗಾವಿಯು ಒಮ್ಮೆ ಮರಾಠರ ವಶಕ್ಕೆ ಮತ್ತೊಮ್ಮೆ ನವಾಬರ ವಶಕ್ಕೆ ಹಸ್ತಾಂತರವಾಗತೊಡಗಿತು. ಈ ಸಮಯದಲ್ಲಿ ೧೭೨೦-೧೭೩೦ ರ ಮಧ್ಯೆ ಕೊಲ್ಲಾಪೂರ ಮತ್ತು ಸಾತಾರಾ ರಾಜ್ಯಗಳು ಶಿವಾಜಿ ಮಹಾರಾಜರ ನಂತರ ತಮ್ಮದೇ ನಿಜವಾದ ಮೂಲ ಶಿವಾಜಿ ಮಹಾರಾಜರ ರಾಜ್ಯಗಳೆಂದು ಬಡಿದಾಡ ಹತ್ತಿದವು. ಈ ಅಂತಃಲಕಹದಲ್ಲಿ ಸವಣೂರಿನ ನವಾಬನಾಗಿದ್ದ ಅಬ್ದುಲ್ ಮಜೀದಖಾನನು ಕೊಲ್ಲಾಪುರದ ಮಹಾರಾಜನಾಗಿದ್ದ ಎರಡನೇ ಸಂಭಾಜಿ ರಾಜನ ಸಹಾಯಕ್ಕೆ ನಿಂತನು. ೧೭೩೦ರ ಹೊತ್ತಿಗೆ ಮೊಗಲ ಪ್ರತಿನಿಧಿ ನಿಜಾಮ ಉಲ್ಕ ಮುಲ್ಕನ ವಶದಲ್ಲಿದ್ದ ಬೆಳಗಾವಿ (ಅಜಂನಗರ) ಕೋಟೆಯನ್ನು ಕೂಡ ಮಜೀದಖಾನನು ಆಕ್ರಮಿಸಿದನು. ೧೭೩೨ರ ಅಂತ್ಯದಲ್ಲಿ ಅಬ್ದುಲ್ ಮಜೀದಖಾನನು ತನಗೂ ಮತ್ತು ಜಹಗೀರನ್ನು ದಯಪಾಲಿಸಿದ ಮೊಗಲರಿಗೂ ಯಾವ ಸಂಬಂಧವಿಲ್ಲವೆಂದು ಸಾರಿ ತಾನು ಸ್ವತಂತ್ರನಾದೆನೆಂದು ಹೇಳಿದನು. ಅಲ್ಲದೆ ಮರಾಠರಿಗೆ ಕೊಡಬೇಕಿದ್ದ ಕಪ್ಪವನ್ನು ಕೂಡ ಕೊಡಲು ನಿರಾಕರಿಸಿದನು. ಇದು ಮರಾಠರನ್ನು ಕೆರಳಿಸಿತು. ಮರಾಠರು ಕೂಡಲೇ ತಮಗೆ ಬರಬೇಕಿದ್ದ ಕಪ್ಪಕಾಣಿಕೆಗಳನ್ನು ವಸೂಲು ಮಾಡಿಕೊಂಡು ಬರಲು ತಮ್ಮ ಸರದಾರನಾಗಿದ್ದ ಬಾಪೂಜಿ ನಾಯಕ ಬಾರಮತಿಕರನನ್ನು ಸೈನ್ಯದೊಂದಿಗೆ ಸವಣೂರಿಗೆ ಕಳಿಸಿದರು. ಎರಡೂ ಸೈನ್ಯಗಳ ಮಧ್ಯೆ ದೊಡ್ಡ ಯುದ್ಧವಾಯಿತು. ಇದರಲ್ಲಿ ಯಾರೂ ವಿಜಯಿಗಳಾಗಲಿಲ್ಲ. ಕೊನೆಗೆ ಒಂದು ಒಪ್ಪಂದಕ್ಕೆ ಬಂದರು.[೨೧] ಈ ಒಪ್ಪಂದದ ಪ್ರಕಾರ ಸವಣೂರಿನ ನವಾಬನಿಗೆ ೨೨ ಮಹಲುಗಳು ಮತ್ತು ೩ ಸರಕಾರಗಳ ಆಡಳಿತ ಉಳಿಯಿತು. ಮೂರು ಸರ್ಕಾರಗಳಲ್ಲಿ ಬಂಕಾಪುರ, ತೊರಗಲ್ಲು ಮತ್ತು ಬೆಳಗಾವಿ (ಅಜಮನಗರ) ಇವು ನವಾಬರ ಆಡಳಿತದಲ್ಲಿಯೇ ಮುಂದುವರೆದವು. ಪೇಶ್ವೆಗೆ ಬೆಳಗಾವಿ ಪರಗಣಾ (ಜಿಲ್ಲೆ) ದೊರೆಯಿತು. ಇದರಿಂದ ಬೆಳಗಾವಿ ಪ್ರದೇಶದ ಕೆಲವು ಭಾಗ ಪೇಶ್ವೆಗಳ ಆಡಳಿತಕ್ಕೆ ಒಳಪಟ್ಟಿತು.

**ಪೇಶ್ವೆಗಳ ಕಾಲದ ಆಡಳಿತ :** ಪೇಶ್ವೆಗಳು ಸವಣೂರಿನ ನವಾಬರಿಂದ ಬೆಳಗಾವಿಯನ್ನು ವಶಪಡಿಸಿಕೊಂಡು ಆಡಳಿತವನ್ನು ಈ ಭಾಗದ ದೇಸಾಯಿ ಮನೆತನದವರಿಗೆ ಒಪ್ಪಿಸಿ ಅವರಿಂದ ಕಂದಾಯ ಶೇಖರಿಸ ತೊಡಗಿದರು.

ಮುಂದೆ ೧೭೬೫ರಲ್ಲಿ ಗೋವಿಂದ ಹರಿಪಂತ ಪಟವರ್ಧನ ಎನ್ನುವವರಿಗೆ ಬೆಳಗಾವಿಯನ್ನು ಸರಂಜಾಮ ನೀಡಿದರು.[೨] ಆಗಿನ ಸಾಂಗ್ಲಿ, ಮಿರ್ಜಿ, ಜಮಖಂಡಿ, ಕುರುಂದವಾಡ ಈ ನಾಲ್ಕು ಸಂಸ್ಥಾನಗಳನ್ನು ಪಟವರ್ಧನ ವಂಶದವರೇ ಆಳುತ್ತಿದ್ದರು. ಈ ಅವಧಿಯಲ್ಲಿ ಬೆಳಗಾವಿಯ (ಅಜಂ ನಗರ) ಆಡಳಿತವು ಅತ್ಯಂತ ವ್ಯವಸ್ಥಿತವಾಗಿ ನಡೆಯುತ್ತಿತ್ತು. ಪ್ರಮುಖ ವ್ಯಾಪಾರಿ ಕೇಂದ್ರವಾಗಿ ರೂಪಗೊಂಡಿತ್ತು. ಬೇರೆ ಬೇರೆ ದೇಶಗಳ ವ್ಯಾಪಾರಿಗಳು ಬೆಳಗಾವಿಯಲ್ಲಿ ನೆಲೆಸಿದ್ದರು. ಅವರಿಗೆ ವಿಶೇಷ ಸೌಲಭ್ಯಗಳನ್ನು ಒದಗಿಸಿ ತೆರಿಗೆ ರಿಯಾಯತಿಯನ್ನು ನೀಡಲಾಗಿತ್ತು. ಸ್ಥಳೀಯ ವರ್ತಕರು ಇಂದಿನ ಬ್ಯಾಂಕರ್‌ಗಳಂತೆ ಕಾರ್ಯನಿರ್ವಹಿಸುತ್ತಿದ್ದರು. ಸಾಲಗಳ ಮೇಲೆ ಬಡ್ಡಿ ವಿಧಿಸಲಾಗುತ್ತಿತ್ತು. ಈ ಬಡ್ಡಿ ವರ್ತಕರನ್ನು ಮಹಾಜನರು, ಶೆಟ್ಟಿ ಮಹಾಜನ, ಶೆಟ್ಟರು, ಶೇಟ ಎಂದು ಕರೆಯಲಾಗುತ್ತಿತ್ತು. ಹೀಗೆ ಉದ್ಯಮಿಗಳು, ವ್ಯಾಪಾರಿಗಳು, ದಳ್ಳಾಳಿಗಳು ಒಂದೆಡೆ ಸೇರಿ ವ್ಯಾಪಾರ ವಹಿವಾಟು ಬೆಳೆಸಿದರು. ಇದರಿಂದ ಬೆಳಗಾವಿ ನಗರವು ಬೆಳವಣಿಗೆಯನ್ನು ಹೊಂದಿ ಎಲ್ಲ ಬಗೆಯ ವಹಿವಾಟುಗಳ ಕೇಂದ್ರವಾಯಿತು. ಶಹಾಪುರದಲ್ಲಿ ಒಂದು ಟಂಕಸಾಲೆಯನ್ನು ಸ್ಥಾಪಿಸಿದ್ದರು. ಇಲ್ಲಿ ಶಹಾಪುರಿ ಹೊನ್ನು ಮತ್ತು ರೂಪಾಯಿ, ಧಾರವಾಡೀ ಹೊನ್ನುಗಳು, ಚಲಾವಣೆಯಲ್ಲಿದ್ದವು.[೩]

ಬೆಳಗಾವಿ ಪೇಶ್ವೆಗಳ ಆಡಳಿತಕ್ಕೆ ಒಳಗಾದಾಗ ಮಹತ್ವದ ಬೆಳವಣಿಗೆ ಉಂಟಾಯಿತು. ಅತ್ಯಂತ ವ್ಯವಸ್ಥಿತವಾದ ಆಡಳಿತವನ್ನು ಅವರು ಜಾರಿಗೆ ತಂದರು. ಸಾಮಾನ್ಯವಾಗಿ ಪ್ರತಿ ಪರಗಣೆಯಲ್ಲಿ ನಾಲ್ಕು ಅಧಿಕಾರಿಗಳನ್ನು ನೇಮಿಸಿದರು. ಅವರೆಂದರೆ ೧. ಕಮಾವಿಸದಾರ ೨. ಫಡನಿಸ್ ೩. ಸಬನಿಸ್ ೪. ಧಪ್ತರದಾರರೆಂದು ಇರುತ್ತಿದ್ದರು. ಕಮಾವಿಸ್‌ದಾರನ ಕೈಕೆಳಗೆ ಮುಜುಮದಾರ, ಫಡನಿಸ್, ಧಪ್ತರದಾರ, ದಶಮನಿಸ್, ಪೋತದಾರ, ಚಿಟನಿಸ್, ನಾಕೇದಾರ, ಕೋತವಾಲ, ಕಾರಖಾನಿಸ್ ಮುಂತಾದ ಅಧಿಕಾರಿಗಳಿರುತ್ತಿದ್ದರು. ಇವರಲ್ಲಿ ಮಜುಮದಾರ ಮತ್ತು ಫಡನಿಸ್ ಇವರು ಪೇಶ್ವೆ ಸರಕಾರದಿಂದ ನೇರವಾಗಿ ನೇಮಿಸಲ್ಪಡುತ್ತಿದ್ದರು. ಉಳಿದ ಅಧಿಕಾರಿಗಳನ್ನು ಸರಸುಬೇದಾರ ಅಥವಾ ಕಮಾವಿಸದಾರ ಅಧಿಕಾರಿಗಳು ನೇಮಿಸುತ್ತಿದ್ದರು. ಇದಲ್ಲದೆ ಮೇಲಾಧಿಕಾರಿಗಳ ಸಹಾಯಕರಾಗಿ ದೇಶಮುಖ, ದೇಶಪಾಂಡೆ, ದರಕದಾರ ಹಾಗೂ ಕಾರಕೂನರು ಸ್ಥಳೀಯವಾಗಿ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದರು. ಪರಗಣೆಯ ಕೆಳಗೆ ಮಹಾಲ ಅಥವಾ ತರಫ ಮತ್ತು ಕರ್ಮಾತ ಎಂಬ ವಿಭಾಗಗಳನ್ನು ಮಾಡಿದ್ದರು. ಇವುಗಳ ಆಡಳಿತವನ್ನು ಮುಜಮದಾರ, ಫಡನೀಸ್, ಕೋತವಾಲ ಪಾಟೀಲ, ಕುಲಕರ್ಣಿ ಮತ್ತು ಬಾರಾಬಲುತೇದಾರರು (ಇವರು ೧೨ ಗ್ರಾಮಗಳ ಸೇವಕರಾಗಿದ್ದರು) ಮುಂತಾದವರು ನೋಡಿಕೊಳ್ಳುತ್ತಿದ್ದರು.

ಗ್ರಾಮಗಳಲ್ಲಿ ಸ್ವಯಂ ಆಡಳಿತ ವ್ಯವಸ್ಥೆ ಜಾರಿಯಲ್ಲಿತ್ತು. ಗ್ರಾಮದ ಮುಖಂಡನಿಗೆ ಪಾಟೀಲ ಅಥವಾ ಗೌಡ ಎಂಬ ಹೆಸರಿತ್ತು. ಇವರ ಸಹಾಯಕ್ಕೆ ಗ್ರಾಮಲೆಕ್ಕಿಗ (ಕುಲಕರ್ಣಿ) ಅಂಬಿಗ, ಕಮ್ಮಾರ, ಕುಂಬಾರ, ಕ್ಷೌರಿಕ, ಕಾವಲುಗಾರ, ಪುರೋಹಿತ, ಜ್ಯೋತಿಷಿ ಮುಂತಾದವರು ಸೇವೆಸಲ್ಲಿಸುತ್ತಿದ್ದರು. ಶಾಂತಿಪಾಲನೆ, ತೆರಿಗೆ ವಸೂಲಿ, ಕಂದಾಯ, ದಾನ-ದತ್ತಿ ಮೊದಲಾದವು ಇವರ ವ್ಯಾಪ್ತಿಗೆ ಒಳಪಡುತ್ತಿದ್ದವು. ಪ್ರತಿಗ್ರಾಮದಲ್ಲಿಯೂ ಜಾತಿ ಸಭೆಗಳು

(ಗೋತ ಸಭಾ) ನಡೆಯುತ್ತಿದ್ದವು. ಊರಿಗೊಂದು ಗಾವ ಕಛೇರಿ ಇರುತ್ತಿತ್ತು. ಇಲ್ಲಿ ಗಾವ ಕಛೇರಿಗಳು (ಸಭೆ) ನಡೆಯುತ್ತಿದ್ದವು.

ಉತ್ಪನ್ನದ ಬಾಬತ್ತುಗಳು ಭೂ ಕಂದಾಯ ಮುಖ್ಯ ಜಮಾ, ಸಿಪಾಯಿ ಜಮಾ (ಭೂ ಕಂದಾಯದ ಹೊರತಾಗಿ ಇತರ ಬಾಬತ್ತುಗಳಿಂದ ಬಂದ ಆದಾಯ) ಇತರೆ ಆದಾಯ ಕಮಾವಿಸ ಜಮಾ, ಕಮಾವೀಸದಾರರಿಂದ ವಸೂಲಾದದು, ಇಜಾಫತ ಜಮಾ, ಹೆಚ್ಚಿಸಿದ ತೆರಿಗೆಯಿಂದ, ಕರ್ಜ ಜಮಾ (ಸಾಲ), ಇದಲ್ಲದೆ ಫಲವತ್ತತೆಯ ಆಧಾರದ ಮೇಲೆ ಭೂಮಿಯನ್ನು ಜಿರಾಮತ, ಭಾಗಾಯತ, ತರಿ, ಖುಷ್ಕೀ ಎಂಬುದಾಗಿ ವಿಂಗಡಿಸಲಾಗಿತ್ತು. ಭೂ ಕಂದಾಯ, ನಗದು ಹಾಗೂ ಧಾನ್ಯ ರೂಪದಲ್ಲಿ ಸಂದಾಯವಾಗುತ್ತಿತ್ತು. ಇತರ ಬಾಬತ್ತುಗಳಿಂದ ಬಂದ ಆದಾಯವು ಇಜಾರದಾರರ ಕಡೆಯಿಂದ, ಅಂಬ್ರಾಯಿ ಹಣ್ಣಿನ ತೋಟಗಳಿಂದ, ಇನಾಮ ತಿಜಾಯಿ, ಇನಾಮದಾರರ ಜಮೀನಿನ ಉತ್ಪನ್ನದ ೧/೩ ಭಾಗ, ವನಚರಾಯಿ-ದನಕರುಗಳನ್ನು ಕಾಡಿನ ಹುಲ್ಲುಗಾವಲಿನಲ್ಲಿ ಮೇಯಿಸಲು, ಮೊಹತರ್ಫಾ, ವ್ಯಾಪಾರಸ್ಥರ ಮೇಲಿನ ತೆರಿಗೆ ಹಾಗೂ ಬಸಕ–ಸಣ್ಣ ಪುಟ್ಟ ವ್ಯಾಪಾರಸ್ಥರಿಂದ (ಪರಪೇಟಕರರು) ವಸೂಲಾದದ್ದು ಇರುತ್ತದೆ. ಅವರಲ್ಲಿ ಮುಖ್ಯವಾಗಿ ತೇಲಿ, ಕಾಂಬೋಳಿ, ಕಾಸಾರ, ಲೊನಾರಿ ಇತ್ಯಾದಿ. ಕಮಾವಿಸನ ಜಮಾ ಇದು ಕಂದಾಯ ವಸೂಲು ಮಾಡಲು ಯಾರು ಗುತ್ತಿಗೆ ಹಿಡಿಯುತ್ತಾರೋ ಅವರಿಂದ ಮತ್ತು ಕೆಲವು ಮುಖ್ಯ ಗ್ರಾಮಗಳಲ್ಲಿ ಮಾರುಕಟ್ಟೆ ಸ್ಥಾಪಿಸಲು ಪರವಾನಿಗೆ ಪಡೆಯಲು ನೀಡುವ ಹಣ, ಅಲ್ಲದೆ ಸರದಾರರು ನೀಡುವ ಕಾಣಿಕೆಗಳು, ನ್ಯಾಯಾಂಗ ಫೀ ಇತ್ಯಾದಿಗಳಿಂದ ಕೂಡಿರುತ್ತಿತ್ತು. ಉದಾಹರಣೆಗೆ ಖಂಡಗುನ್ಹೇಗಾರಿ ದಾವೆಗಳಲ್ಲಿ ಸೋತವರಿಂದ ವಸೂಲ ಮಾಡುವ ದಂಡ, ಪೈದಾಸ್ತ ಜಮಾ, ಲಾಭದಿಂದ ಬಂದ ಹಣ, ಚಿಟ್ಟಿ ಮಸಾಲಾ ಆಪಾದನೆಗೊಳಗಾದ ವ್ಯಕ್ತಿ ಜವಾಬ ನೀಡಲು ಬಂದಾಗ ಕೊಡುವ ಫೀ ಗುನ್ಹೆಗಾರಿ – ಅಪರಾಧಿಗಳಿಂದ ವಸೂಲು ಮಾಡುವ ಹಣ ಹಾಗೂ ನಝುರ, ಅಧಿಕಾರ ಅಥವಾ ಆಸ್ತಿಯನ್ನು ಪಡೆಯಬೇಕಾದರೆ ನೀಡಬೇಕಾದ ಹಣ, ಕಪ್ಪಕಾಣಿಕೆ–ಹೀಗೆ ಇತ್ಯಾದಿ ಮೂಲಗಳಿಂದ ಕರ ವಸೂಲಿಯು ನಡೆಯುತ್ತಿತ್ತು. ಹೀಗೆ ಈ ಎಲ್ಲ ಮೂಲಗಳಿಂದ ಬಂದ ಉತ್ಪನ್ನವು ರಾಜನಿಗೆ ಜಮಾ ಆಗುತ್ತಿತ್ತು. ಹೀಗೆ ಜಮಾದ ಆದ ಬೆಳಗಾವಿ ಪರಗಣೆಯ ವಾರ್ಷಿಕ ಆದಾಯವು ಎರಡು ಲಕ್ಷಕ್ಕಿಂತಲೂ ಹೆಚ್ಚಾಗುತ್ತಿತ್ತು.

ಖರ್ಚಿನ ಬಾಬತ್ತುಗಳು – ರಾಜ್ಯದ ಆಡಳಿತದ ನಿರ್ವಹಣೆಗಾಗಿ ರಾಜ್ಯದ ಬೊಕ್ಕಸದಿಂದ ಖರ್ಚಾದ ಹಣ ಈ ರೀತಿಯಾಗಿತ್ತು. ಸರಕಾರಿ ನೌಕರರಿಗೆ (ಕಾರಕೂನ) ವೇತನ, ಗಾರ್ದಿ ಹಾಗೂ ರೊಹಿಲ್ಲಾ ಸೈನಿಕರಿಗೆ ವೇತನ, ದೇವಾಲಯಗಳ ಖರ್ಚು, ದಫ್ತರ (ಕಚೇರಿ) ಖರ್ಚು, ತೈವಜ ಖರ್ಚು ಅಂದರೆ ವಿಶೇಷ ಅತಿಥಿಗಳಿಗಾಗಿ (ವೀಳ್ಯೆದೆಲೆ, ಅಡಿಕೆ, ಲವಂಗ ಮತ್ತು ಯಾಲಕ್ಕಿ ಖರೀದಿಗೆ ಆದ ಖರ್ಚು), ಮಾಡಿದ ಖರ್ಚು, ಹಬ್ಬ ಹರಿದಿನಗಳ ಖರ್ಚು (ಮಸಾಲತ ಖರ್ಚು), ಕೋಟೆಗೆ ದೀಪ ಹಚ್ಚುವ ಖರ್ಚು, ವಸತಿ ಖರ್ಚು, ಮಿಲಿಟರಿ ಯೋಜನೆ ಖರ್ಚು

(ಮಸಲತ ಖರ್ಚು) ಧಾರ್ಮಿಕ ಖರ್ಚು ಇತ್ಯಾದಿಯಾಗಿ ರಾಜ್ಯದ ಖಜಾನೆಯಿಂದ ಹಣವು ಖರ್ಚಾಗುತ್ತಿತ್ತು. ಪೇಶ್ವೆಗಳ ಕಾಲದಲ್ಲಿ ವಿಶೇಷವಾಗಿ ಆಚರಿಸಲ್ಪಡುತ್ತಿದ್ದ ನಾಗರಪಂಚಮಿ, ಗಣೇಶ ಚತುರ್ಥಿ, ದಸರಾ, ಸಂಕ್ರಾಂತಿ, ಹೋಳಿ ಮುಂತಾದ ಹಬ್ಬಗಳಲ್ಲಿ ನೃತ್ಯ ಮಾಡುವವರಿಗೆ, ಹಾಡುಗಾರರಿಗೆ, ಡೊಂಬರಾಟ, ಬಹುರೂಪಿ, ಖೇಲಕರಿ, ಜಾದುಗಾರಿಕೆ, ದಶಾವತಾರಿಗಳಿಗೆ ಬೈರಾಗಿ ಮತ್ತು ಗೋಸಾವಿಗಳಿಗೆ, ಹರಿದಾಸ ಕೀರ್ತನಕಾರರಿಗೆ ಹಣವನ್ನು ನೀಡುತ್ತಿದ್ದರು. ಅಲ್ಲದೆ ಬ್ರಾಹ್ಮಣ ಅತಿಥಿಗಳಿಗೆ, ವೈದ್ಯರಿಗೆ ಭೂ ಕಂದಾಯದ ನಿಗದಿಪಡಿಸಲು ಬಂದ ಪಾಟೀಲ, ಕುಲಕರ್ಣಿಯವರಿಗೆ ಕಾಳು –ಕಡಿ ಪೂರೈಸಲಾಗುತ್ತಿತ್ತು. ಇದನ್ನು ಸೀದೆ ಖರ್ಚು ಎನ್ನುತ್ತಿದ್ದರು. ಮೊಹರಮ್ ಸಂದರ್ಭದಲ್ಲಿ ಫಕೀರರಿಗೆ ದಾನ (ಖೈರಾತ) ಕೊಡಲಾಗುತ್ತಿತ್ತು. ಬ್ರಾಹ್ಮಣರಿಗೆ ವಾರ್ಷಿಕ ಭತ್ಯೆಯನ್ನು ಕೊಡುತ್ತಿದ್ದರು. ಇದನ್ನು 'ಧರ್ಮಾದಾನ' ಎನ್ನುತ್ತಿದ್ದರು.

ಹೀಗೆ ಈ ಎಲ್ಲ ಉತ್ಪನ್ನ, ಖರ್ಚುಗಳಿಂದ ಪೇಶ್ವೆಯವರ ಕಾಲದಲ್ಲಿ ಬೆಳಗಾವಿಯ ಆಡಳಿತವು ಅತ್ಯಂತ ಸುವ್ಯವಸ್ಥಿತವಾಗಿ ನಡೆಯಿತು. ಎಲ್ಲ ಧರ್ಮದವರಿಗೂ ಸಮಾನವಾದ ಅವಕಾಶಗಳನ್ನು ನೀಡಿದ್ದರು. ಹೀಗಾಗಿ ಸೌಹಾರ್ದತೆಯ ಜೀವನ ಸಾಗಿತ್ತು.

**೬. ಆಧುನಿಕ ಇತಿಹಾಸ (ಬ್ರಿಟಿಷರಿಂದ ಮಹಾನಗರಸಭೆಯವರೆಗೆ) :**

ಬ್ರಿಟಿಷರು ಬೆಳಗಾವಿಯಲ್ಲಿ ತಮ್ಮ ಆಡಳಿತವನ್ನು ಆರಂಭಿಸಿದಾಗ ಇಲ್ಲಿ ಹಲವಾರು ಸಮಸ್ಯೆಗಳಿದ್ದವು. ರಾಜಕೀಯ ಅಸ್ಥಿರತೆ ಮುಖ್ಯವಾಗಿ ಕಂಡುಬರುತ್ತಿತ್ತು. ಬೆಳಗಾವಿಯನ್ನು ಬಿಡಿಬಿಡಿಯಾಗಿ ಬೇರೆ ಬೇರೆ ರಾಜರು ಆಳುತ್ತಿದ್ದರು. ಕೋಟೆಯ ಬೆಳಗಾವಿ, ಶಹಪೂರ, ಅನಿಗೋಳ, ವಡಗಾವಿ ಹೀಗೆ ಒಂದೊಂದು ಭಾಗವು ಒಂದೊಂದು ಸಂಸ್ಥಾನಕ್ಕೆ ಒಳಪಟ್ಟಿತ್ತು. ಭಾಷಿಕವಾಗಿ ಮರಾಠಿ ತನ್ನ ಪ್ರಭುತ್ವವನ್ನು ಸ್ಥಾಪಿಸಿತ್ತು. ಆಡಳಿತ, ವ್ಯವಹಾರ, ಶಿಕ್ಷಣ, ಸಾಹಿತ್ಯ, ರಂಗಭೂಮಿ ಮುಂತಾದ ಕ್ಷೇತ್ರಗಳಲ್ಲಿ ಮರಾಠಿ ಭಾಷೆಯೇ ಅಗ್ರಗಣ್ಯವಾಗಿತ್ತು. ಸಮಾಜದಲ್ಲಿ ಮೇಲುಕೀಳು ಎಂಬ ತಾರತಮ್ಯ ಇತ್ತು. ಶಿಕ್ಷಣವು ಉನ್ನತ ವರ್ಗದವರಿಗೆ, ಸರದಾರ, ಜಮೀನ್ದಾರ, ಗೌಡರ ಮಕ್ಕಳಿಗೆ ಮಾತ್ರ ಮೀಸಲಾಗಿತ್ತು. ಅಲ್ಲದೆ ಬಡತನ, ದಾರಿದ್ರ್ಯ, ವೈಮನಸ್ಸು, ಮೂಢನಂಬಿಕೆಗಳು ಇವೆಲ್ಲವುಗಳಿಂದ ಬೆಳಗಾವಿ ಜನರ ಜೀವನ ಮಟ್ಟ ಅತ್ಯಂತ ಶೋಚನೀಯವಾಗಿತ್ತು. ಇಂತಹ ಪರಿಸ್ಥಿತಿಯಲ್ಲಿ ಬ್ರಿಟಿಷರು ಬೆಳಗಾವಿಯಲ್ಲಿ ತಮ್ಮ ಆಡಳಿತವನ್ನು ಆರಂಭಿಸಿದರು. ಬೆಳಗಾವಿಯಲ್ಲಿ ತಮ್ಮ ಅಧಿಪತ್ಯವನ್ನು ಪ್ರಾರಂಭಿಸುವುದು ಬ್ರಿಟಿಷರಿಗೆ ಮಹತ್ವದ್ದಾಗಿತ್ತು. ಬೆಳಗಾವಿ ಬ್ರಿಟಿಷ ಸಾಮ್ರಾಜ್ಯದ ಕೊನೆಯ ಪಟ್ಟಣ. ಇಲ್ಲಿಂದ ಸ್ವಲ್ಪ ದೂರದಲ್ಲಿ ಗೋವಾ ರಾಜ್ಯ ಪ್ರಾರಂಭಗೊಳ್ಳುತ್ತದೆ. ಅದು ಪೋರ್ಚುಗೀಜರ ಆಡಳಿತದಲ್ಲಿತ್ತು. ಹೀಗಾಗಿ ಸುರಕ್ಷತೆಯ ದೃಷ್ಟಿಯಿಂದ ಬೆಳಗಾವಿಯನ್ನು ವಶಪಡಿಸಿಕೊಳ್ಳುವುದು ಬ್ರಿಟಿಷರಿಗೆ ಅನಿವಾರ್ಯವಾಗಿತ್ತು.

ಬೆಳಗಾವಿಯು ಬ್ರಿಟಿಷರ ಅಧಿಪತ್ಯಕ್ಕೆ ಒಳಪಟ್ಟಿದ್ದು, ಚಾರಿತ್ರಿಕ ಮಹತ್ವವನ್ನು ಪಡೆದುಕೊಂಡಿದೆ. ಹಲವಾರು ಘಟನೆಗಳು ಈ ನೆಲದಲ್ಲಿ ನಡೆದು ದೇಶದ ಗಮನವನ್ನು ಸೆಳೆಯಿತು. ಆಧುನಿಕ ಜಗತ್ತಿನ ನಿರ್ಮಾಣದ ಹಂತದಲ್ಲಿ ಬೆಳಗಾವಿಗೆ ಬ್ರಿಟಿಷರ ಆಡಳಿತ ಒದಗಿದ್ದು ಅತ್ಯಂತ ಮಹತ್ವದ ಘಟ್ಟವಾಗಿದೆ. ಈ ನೆಲದ ವೀರ, ತ್ಯಾಗ, ಸಹಬಾಳ್ವೆ ಸಾಮರಸ್ಯ, ದೇಶಪ್ರೇಮ, ಹೋರಾಟ, ಕಾಯಕನಿಷ್ಠೆ ಮುಂತಾದ ಮೌಲ್ಯಗಳ ದರ್ಶನ ಬ್ರಿಟಿಷರ ಮೂಲಕವಾಯಿತು. ಭಾಷೆ, ಸಾಹಿತ್ಯ, ರಾಜಕೀಯ, ಧರ್ಮ, ಸಮಾಜ, ಸಂಸ್ಕೃತಿ ಈ ಎಲ್ಲ ವಲಯಗಳಲ್ಲಿ ಮಹತ್ವದ ಬದಲಾವಣೆಗಳು, ಬೆಳವಣಿಗೆಗಳೂ ಉಂಟಾದವು. ಶೈಕ್ಷಣಿಕವಾಗಿ ಪ್ರಗತಿಹೊಂದಿ ಉತ್ತರಕರ್ನಾಟಕದ ಶಿಕ್ಷಣಕೇಂದ್ರವಾಗಿ ಬೆಳಗಾವಿ ಮಾರ್ಪಟ್ಟಿತು. ಧಾರ್ಮಿಕ ಆಂದೋಲನಗಳು ನಡೆದು ಸಾಮಾಜಿಕ ಸುಧಾರಣೆಗಳುಂಟಾದವು. ಮೊದಲಿನಿಂದಲೂ ಸಾಮರಸ್ಯದ ಬದುಕನ್ನು ಕಂಡ ಬೆಳಗಾವಿಯ ಜನ ಕ್ರೈಸ್ತಧರ್ಮೀಯರನ್ನು ಪ್ರೀತಿ ಆದರಗಳಿಂದ ಕಂಡರು. ವಿವಿಧ ಉದ್ಯೋಗಗಳು ಸೃಷ್ಟಿಗೊಂಡು ಆರ್ಥಿಕವಾಗಿ ಅಭಿವೃದ್ಧಿಯನ್ನು ಹೊಂದತೊಡಗಿತು. ಕಟ್ಟಡಗಳಲ್ಲಿ ಹೊಸ ವಿನ್ಯಾಸ ಕಂಡು ಬಂದು ಬೆಳಗಾವಿಗೆ ಒಂದು ಸೌಂದರ್ಯ ಕಾಣತೊಡಗಿತು. ಪಾಶ್ಚಾತ್ಯರ ಜೀವನ ಶೈಲಿಯ ಅನುಕರಣೆಯಿಂದ ನೂತನಸಂಸ್ಕೃತಿ ರೂಪಗೊಳ್ಳತೊಡಗಿತು. ಜನರ ವೇಷ-ಭೂಷಣ, ತಿಂಡಿ-ತಿನಿಸು, ಆಟ-ಪಾಟ, ನಡೆ-ನುಡಿಯಲ್ಲಿ ಕ್ರಮೇಣ ಬದಲಾವಣೆಗಳುಂಟಾಗಿ ಹಂತಹಂತವಾಗಿ ಬೆಳಗಾವಿ ಎಂಬ ದೊಡ್ಡ ಹಳ್ಳಿ ನಗರ ಸಂಸ್ಕೃತಿಯತ್ತ ಬದಲಾಗತೊಡಗಿತು.

ಹತ್ತೊಂಬತ್ತನೆಯ ಶತಮಾನದ ಪ್ರಾರಂಭದಲ್ಲಿ ಬೆಳಗಾವಿಯು ಪುಣೆಯ ಪೇಶ್ವೆಗಳ ವಶದಲ್ಲಿತ್ತು. ಆಗ ಎರಡನೆಯ ಬಾಜೀರಾಯ ಪೇಶ್ವೆಯು ಪುಣೆಯನ್ನು ರಾಜಧಾನಿಯನ್ನಾಗಿಸಿಕೊಂಡು ಆಡಳಿತ ನಡೆಸುತ್ತಿದ್ದನು. ಕ್ರಿ.ಶ. ೧೭೯೫ ರಲ್ಲಿ ಅಧಿಕಾರಕ್ಕೆ ಬಂದು ಈತನು ಸವಣೂರಿನ ನವಾಬರಿಂದ ಬೆಳಗಾವಿಯುನ್ನು ವಶಪಡಿಸಿಕೊಂಡಿದ್ದನು.[೨೪] ಎರಡನೆಯ ಬಾಜೀರಾಯನು ಮೊದಲು ಇಂಗ್ಲಿಷರ ಜೊತೆಗೆ ಸ್ನೇಹದಿಂದ ಇದ್ದನು. ಹೀಗಾಗಿ ಬ್ರಿಟಿಷರ ಸಹಾಯ ಸಹಕಾರ ಅವನಿಗೆ ಹಲವಾರು ಸಂದರ್ಭಗಳಲ್ಲಿ ಒದಗಿ ಬಂದಿತ್ತು. ಪುಣೆಯಲ್ಲಿ ಬಾಜೀರಾಯನು ಯಶವಂತರಾವ ಹೋಳಕರನೆಂಬ ಸರದಾರನ ತಮ್ಮನನ್ನು ನಿಷ್ಕಾರಣವಾಗಿ ಆನೆಯ ಕಾಲಿಗೆ ಹಾಕಿ ತುಳಿಸಿ ಕೊಂದಿದ್ದರಿಂದ ಯಶವಂತರಾಯನು ಬಾಜೀರಾಯನನ್ನು ಪುಣೆಯಿಂದ ಓಡಿಸಿದನು. ಈ ಸಂದರ್ಭದಲ್ಲಿ ಬಾಜೀರಾಯನು ಇಂಗ್ಲಿಷರ ಜೊತೆಗೆ ಸ್ನೇಹದ ಒಡಂಬಡಿಕೆ ಮಾಡಿಕೊಂಡು, ಅವರ ಸೈನ್ಯವನ್ನು ಚಾಕರಿಗೆ ಇಟ್ಟುಕೊಂಡು ಧಾರವಾಡದ ಸೀಮೆಯನ್ನು ಇಂಗ್ಲಿಷರಿಗೆ ಕೊಟ್ಟನು. ಇದರಿಂದ ಸಂತುಷ್ಟರಾದ ಇಂಗ್ಲಿಷರು ಬಾಜೀರಾಯನನ್ನು ಪುನಃ ಪುಣೆಯ ರಾಜನನ್ನಾಗಿ ಮಾಡಿದರು. ಆದರೆ ತಿಳಿಗೇಡಿ, ಚಂಚಲ ಮನಸ್ಸಿನ, ದುರ್ವ್ಯಸನಿಯಾಗಿದ್ದ ಬಾಜೀರಾಯನು ಇಂಗ್ಲಿಷರ ವಿರುದ್ಧ ಸಂಚು ಹೂಡಿ ದೊಡ್ಡ ಸೈನ್ಯವನ್ನು ಕೂಡಿಸಿ ಯುದ್ಧ

ಹೂಡಲು ಸಿದ್ಧನಾದನು. ಹೀಗಾಗಿ ಯುದ್ಧ ಅನಿವಾರ್ಯವಾಗಿ ಖಡಕಿಯ ಹತ್ತಿರ ಕ್ರಿ. ಶ. ೧೮೧೭ರಲ್ಲಿ ಇಂಗ್ಲಿಷರಿಗೂ ಬಾಜೀರಾಯನಿಗೂ ಯುದ್ಧವಾಗಿ ಅದರಲ್ಲಿ ಬಾಜೀರಾಯನು ಸೋತು, ಅಲ್ಲಿಂದ ತಪ್ಪಿಸಿಕೊಂಡು ಓಡಿ ಹೋದನು.

**ಬೆಳಗಾವಿ ಯುದ್ಧ : ಪೇಶ್ವೆ ಸಾಮ್ರಾಜ್ಯದ ಅವನತಿ :** ಬ್ರಿಟಿಷರು ದಕ್ಷಿಣ ಮಹಾರಾಷ್ಟ್ರದಲ್ಲಿ ತಮ್ಮ ಪ್ರಭುತ್ವವನ್ನು ಸ್ಥಾಪಿಸುತ್ತ ಸಾಗಿದರು. ಸ್ಥಳೀಯ ಸಂಸ್ಥಾನಿಕರ ಒಳಜಗಳವನ್ನು ಸರಿಯಾಗಿ ಬಳಸಿಕೊಂಡು ಒಬ್ಬೊಬ್ಬರನ್ನೇ ನಾಶಮಾಡುತ್ತ ಒಂದೊಂದೇ ಪ್ರದೇಶಗಳನ್ನು ವಶಕ್ಕೆ ತೆಗೆದುಕೊಂಡು ತಮ್ಮ ಆಡಳಿತವನ್ನು ಪ್ರಾರಂಭಿಸಿದರು. ಬ್ರಿಟಿಷರ ಈ ತಂತ್ರಗಾರಿಕೆಯನ್ನು ಅರಿಯದ ಸ್ಥಳೀಯ ರಾಜರು ದ್ವೇಷದ ರಾಜಕಾರಣಕ್ಕೆ ಬಲಿಯಾದರು. ಮರಾಠರ ಎರಡನೇ ಬಾಜೀರಾಯನ ಒಂದೊಂದೇ ಪ್ರದೇಶಗಳನ್ನು ಬ್ರಿಟಿಷರು ವಶಪಡಿಸಿಕೊಂಡರು. ಬೆಳಗಾವಿಯೂ ಕೂಡ ಪೇಶ್ವೆಗಳ ಆಡಳಿತಕ್ಕೆ ಒಳಪಟ್ಟಿತ್ತು. ಬೆಳಗಾವಿಯನ್ನು ವಶಪಡಿಸಿಕೊಳ್ಳಲು ಬ್ರಿಟಿಷ ಅಧಿಕಾರಿ ಜನರಲ್ ಮನ್ರೊ ತಂತ್ರವನ್ನು ಹೂಡಿದನು. ಆಗ ಸ್ಥಳೀಯ ಸಂಸ್ಥಾನಿಕರು ಮನ್ರೊನ ಬೆಂಬಲಕ್ಕೆ ನಿಂತರು. ಅವರಲ್ಲಿ ಪ್ರಮುಖರಾದವರೆಂದರೆ ಕಿತ್ತೂರಿನ ಸಂಸ್ಥಾನಿಕರು.

ಕ್ರಿ. ಶ. ೧೮೧೮ ಮಾರ್ಚ ೧೪ ರಂದು ಬ್ರಿಟಿಷರ ಜನರಲ್ ಮನ್ರೊ ಕಿತ್ತೂರಿನ ಸಹಾಯದಿಂದ ಬೆಳಗಾವಿಯಲ್ಲಿ ದೊಡ್ಡ ಸೈನ್ಯ ಜಮಾಯಿಸಿದನು.[೨೫] ಈ ಯುದ್ಧಕ್ಕೆ ಬೇಕಾದ ಸಲಕರಣೆಗಳನ್ನು ಸೈನಿಕರನ್ನು ಕಿತ್ತೂರಿನ ಯುವರಾಜ ಚನ್ನಮ್ಮಳ ಪುತ್ರನಾದ ಶಿವಬಸಪ್ಪನ ನಾಯಕತ್ವದಲ್ಲಿ ಪೂರೈಸಲಾಯಿತು. ಈ ಸಂದರ್ಭದಲ್ಲಿ ನಡೆದ ಯುದ್ಧದಲ್ಲಿ ಬ್ರಿಟಿಷರಿಗೆ ಜಯವಾಯಿತು. ಬೆಳಗಾವಿಯು ಬ್ರಿಟಿಷರ ಅಧೀನಕ್ಕೆ ಬಂದಿತು. ಈ ಯುದ್ಧದ ಸೋಲಿನಿಂದ ಬಾಜೀರಾಯನು ಇಂಗ್ಲಿಷರಿಗೆ ಶರಣಾದನು. ಬ್ರಿಟಿಷರು ಆತನಿಗೆ ವರ್ಷಕ್ಕೆ ೮ ಲಕ್ಷ ರೂಪಾಯಿ ವರ್ಷಾಶನ ನೀಡಿ ಪೇಶ್ವೆಯ ಎಲ್ಲ ಸಾಮ್ರಾಜ್ಯವನ್ನು ತಮ್ಮ ಆಡಳಿತಕ್ಕೆ ವಶಪಡಿಸಿಕೊಂಡರು. ಹೀಗೆ ಬೆಳಗಾವಿಯ ಯುದ್ಧ ಪುಣೆಯ ಪೇಶ್ವೆಯವರ ಆಡಳಿತಕ್ಕೆ ಅಂತ್ಯ ಹಾಡಿತು.

**ಕಿತ್ತೂರು ಸಂಸ್ಥಾನ ಸ್ವತಂತ್ರವಾದದ್ದು :** ಕ್ರಿ. ಶ. ೧೮೧೮ ರಲ್ಲಿ ನಡೆದ ಬೆಳಗಾವಿ ಯುದ್ಧದಲ್ಲಿ ಬ್ರಿಟಿಷರಿಗೆ ಸೈನಿಕ ನೆಲವನ್ನು ನೀಡಿದ ಕಿತ್ತೂರ ಸಂಸ್ಥಾನವು ಬ್ರಿಟಿಷರ ಪ್ರೀತಿಗೆ ಪಾತ್ರವಾಯಿತು. ಈ ಯುದ್ಧದಲ್ಲಿ ಪೇಶ್ವೆಗಳು ಸಂಪೂರ್ಣವಾಗಿ ಅವನತಿಯನ್ನು ಹೊಂದಿದ್ದರಿಂದ ಕಿತ್ತೂರಿನ ಮೇಲಿದ್ದ ಪೇಶ್ವೆಗಳ ಅಧಿಕಾರ ಕಳೆದುಹೋಯಿತು. ಇದರಿಂದ ಕಿತ್ತೂರು ಸಂಪೂರ್ಣ ಸ್ವತಂತ್ರ ಸಂಸ್ಥಾನವಾಗಿ ರೂಪಗೊಂಡಿತು.[೭೭] ಆದರೆ ಈ ಯುದ್ಧದ ನಂತರ ಜನರಲ್ ಮನ್ರೊ ಮತ್ತು ಕಿತ್ತೂರಿನ ಸಂಸ್ಥಾನದ ನಡುವೆ ಕೆಲವು ಒಪ್ಪಂದಗಳಾದವು. ಈ ಒಪ್ಪಂದಕ್ಕೆ ಕಿತ್ತೂರಿನ ಆಗಿನ ದೊರೆ ಶಿವಲಿಂಗರುದ್ರ ಸರ್ಜನು ಇದಕ್ಕೆ ಒಪ್ಪಿಕೊಂಡು ಸಹಿ ಹಾಕಿದನು.[೭೭]

**ಬೆಳಗಾವಿ ಯುದ್ಧದಲ್ಲಿ ಕಿತ್ತೂರ ಚನ್ನಮ್ಮಳ ಮಗನ ಸಾವು :** ಕ್ರಿ. ಶ. ೧೮೧೮ ರಲ್ಲಿ ಬೆಳಗಾವಿಯಲ್ಲಿ ಪೇಶ್ವೆಗಳಿಗೂ ಮತ್ತು ಬ್ರಿಟಿಷರಿಗೂ ನಡೆದ ಯುದ್ಧದಲ್ಲಿ ಬ್ರಿಟಿಷರಿಗೆ ಜಯವಾಗಲು ಕಾರಣ ಕಿತ್ತೂರಿನ ಸಹಾಯ.

ಅಪಾರವಾದ ಯುದ್ಧ ಸಲಕರಣೆಗಳನ್ನು ಸೈನಿಕರ ನೆರವನ್ನು ಕಿತ್ತೂರಿನ ಸಂಸ್ಥಾನವು ಒದಗಿಸಿತು. ಇದಕ್ಕೆ ಕಾರಣವೂ ಇತ್ತು. ಪೇಶ್ವೆಗಳು ಕಿತ್ತೂರಿನ ಬದ್ಧ ವೈರಿಗಳಾಗಿದ್ದರು. ಹೀಗಾಗಿ ಪೇಶ್ವೆಗಳನ್ನು ಬಗ್ಗು ಬಡಿಯಲು ಬೆಳಗಾವಿ ಯುದ್ಧ ಒಳ್ಳೆಯ ಅವಕಾಶವನ್ನು ಒದಗಿಸಿತ್ತು. ಇದರ ಸದುಪಯೋಗವನ್ನು ಪಡೆಯಲು ಕಿತ್ತೂರಿನ ಸಂಸ್ಥಾನವು ಅಪಾರವಾದ ಸೈನ್ಯವನ್ನು ಚನ್ನಮ್ಮಳ ಮಗನಾದ ಶಿವಬಸಪ್ಪನ ನೇತೃತ್ವದಲ್ಲಿ ಬೆಳಗಾವಿಗೆ ಕಳುಹಿಸಲಾಯಿತು.[೨೮] ಈ ಯುದ್ಧದಲ್ಲಿ ಶಿವಬಸಪ್ಪನು ತೀವ್ರವಾಗಿ ಗಾಯಗೊಂಡು ತನ್ನ ಪ್ರಾಣವನ್ನು ಕಳೆದುಕೊಂಡನು.

**ಕಿತ್ತೂರಿನ ಸ್ವಾತಂತ್ರ್ಯ ಹೋರಾಟ :** ಬೆಳಗಾವಿಯನ್ನು ವಶಪಡಿಸಿಕೊಂಡ ಬ್ರಿಟಿಷರಿಗೆ ದಕ್ಷಿಣ ಮಹಾರಾಷ್ಟ್ರದಲ್ಲಿ ಒಂದು ಭದ್ರವಾದ ನೆಲೆ ಒದಗಿತು. ಅತ್ಯಂತ ಆಯಕಟ್ಟಿನ ಸ್ಥಳವನ್ನು ಹೊಂದಿದ ಬೆಳಗಾವಿಯಲ್ಲಿ ಒಂದು ಸೈನ್ಯದ ತುಕಡಿಯನ್ನು ನೇಮಿಸಿದರು. ಯುದ್ಧೋಪಕರಣಗಳನ್ನು ಸಂಗ್ರಹಿಸಿಟ್ಟರು. ಯುದ್ಧ ತರಬೇತಿ ಕೇಂದ್ರವನ್ನು ತೆರೆದರು. ತಮ್ಮ ಪ್ರಮುಖ ಸೇನಾ ನೆಲೆಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರು. ಬೆಳಗಾವಿಯಿಂದಲೇ ಕರ್ನಾಟಕ–ಮಹಾರಾಷ್ಟ್ರ–ಗೋವಾ ರಾಜ್ಯಗಳ ಗಡಿಭಾಗವನ್ನು ನಿಯಂತ್ರಣದಲ್ಲಿಟ್ಟುಕೊಂಡರು. ಈ ಭಾಗದಲ್ಲಿ ಎಲ್ಲಿಯೇ ಯುದ್ಧಗಳಾದರೂ ಅದಕ್ಕೆ ಬೆಳಗಾವಿಯಿಂದಲೇ ಸೈನ್ಯ ಸಲಕರಣೆಗಳು ಸರಬರಾಜವಾಗತೊಡಗಿದವು.

ಬ್ರಿಟಿಷರ ಜೊತೆಗೆ ಕಿತ್ತೂರ ಸಂಸ್ಥಾನದ ಸಂಬಂಧ ಬೆಳಗಾವಿಯ ಕದನಕ್ಕಿಂತ ಪೂರ್ವದಿಂದಲೇ ಇತ್ತು. ಕಿತ್ತೂರ ಸಂಸ್ಥಾನ ಕಂಡ ಪ್ರಸಿದ್ಧ ದೊರೆ ಮಲ್ಲಸರ್ಜನು (ಕ್ರಿ. ಶ. ೧೭೮೨–೧೮೧೬) ಬ್ರಿಟಿಷರ ಜನರಲ್ ವೆಲ್ಲೆಸ್ಲಿಗೆ ಆಪ್ತನಾಗಿದ್ದನು. ಹಲವಾರು ಯುದ್ಧಗಳಲ್ಲಿ ಬ್ರಿಟಿಷರಿಗೆ ನೆರವಾಗಿದ್ದನು. ಅಲ್ಲದೆ ಬ್ರಿಟಿಷರ ನಾವೆ, ಔಷಧೋಪಚಾರ ಸಾಮಗ್ರಿಗಳನ್ನು ಕಾಯ್ದಿಡುವುದಕ್ಕಾಗಿ ಸಂಗೊಳ್ಳಿಯ ಸಣ್ಣ ಕಿಲ್ಲೆಯನ್ನು ಕೊಟ್ಟಿದ್ದನು.[೨೯] ಅಲ್ಲದೆ ನೂರು ಕುದುರೆಗಳು, ಕಾಲ್ದಳ ಸೈನಿಕರ ನೆರವನ್ನು ನೀಡಿದ್ದನು. ಆದರೆ ಈ ಸಂಬಂಧ ಹೆಚ್ಚು ದಿನ ಉಳಿಯಲಿಲ್ಲ. ಕಿತ್ತೂರು ಸಂಸ್ಥಾನದ ಅಧಿಪತ್ಯವನ್ನು ಮುಂದುವರಿಸಲು ದತ್ತಕ ಪುತ್ರನನ್ನು ನೇಮಿಸಲಾಯಿತು. ಇದರಿಂದ ದತ್ತಕ ತೆಗೆದುಕೊಳ್ಳಬೇಕಾದರೆ ಗವ್ವರ್ನರನ ಒಪ್ಪಿಗೆಯನ್ನು ಪಡೆಯಲಿಲ್ಲವೆಂದು ಕಿತ್ತೂರಿನ ಖಜಾನೆಗೆ ಬೀಗಮುದ್ರೆಯನ್ನು ಬ್ರಿಟಿಷರು ಹಾಕಿದರು. ಹೀಗಾಗಿ ರಾಣಿ ಚೆನ್ನಮ್ಮ ಇದನ್ನು ವಿರೋಧಿಸಿ ತೀವ್ರ ಪ್ರತಿಭಟನೆಯನ್ನು ಮಾಡಿದಳು. ಈ ಸಂದರ್ಭದಲ್ಲಿ ಎರಡು ಯುದ್ಧಗಳು ನಡೆದವು: ಒಂದು ಥ್ಯಾಕರೆಯ ಸಂಗಡ; ಇನ್ನೊಂದು ಚಾಪ್ಲಿನ್ ಸಂಗಡ. ಚಾಪ್ಲಿನ್ ಆಗ ಬೆಳಗಾವಿಯ ಕಮೀಷನರ್ ಆಗಿದ್ದನು. ಮೊದಲನೆಯ ಯುದ್ಧದಲ್ಲಿ ಕಿತ್ತೂರಿಗೆ ಜಯವಾದರೆ, ಎರಡನೆಯ ಯುದ್ಧದಲ್ಲಿ ಕಿತ್ತೂರ ಸಾಮ್ರಾಜ್ಯ ಕೊನೆಗೊಂಡಿತು.

**ಕಿತ್ತೂರ ಯುದ್ಧದಲ್ಲಿ ಬೆಳಗಾವಿ ಮಿಲಿಟರಿಯ ಪಾತ್ರ :** ಕಿತ್ತೂರಿನಲ್ಲಿ ನಡೆದ ಎರಡೂ ಯುದ್ಧದಲ್ಲಿ ಬೆಳಗಾವಿಯಲ್ಲಿದ್ದ ಬ್ರಿಟಿಷರ ಸೈನಿಕರು ನೇರವಾಗಿ ಭಾಗವಹಿಸಿ ಕಿತ್ತೂರಿನ ನಾಶಕ್ಕೆ ಕಾರಣರಾಗಿದ್ದಾರೆ. ಮೊದಲನೆಯ ಯುದ್ಧದಲ್ಲಿ ಕಲಾದಗಿಯಲ್ಲಿದ್ದ ಸೈನ್ಯದ ತುಕುಡಿಯ ಸಹಾಯವನ್ನು ಪಡೆದು ಬೆಳಗಾವಿಯಿಂದ ಥ್ಯಾಕರೆ ದೊಡ್ಡ

ಸೈನ್ಯದೊಂದಿಗೆ ಕಿತ್ತೂರಿನ ಮೇಲೆ ಮುತ್ತಿಗೆ ಹಾಕಿದನು.[೮೦] ಈ ಯುದ್ಧದಲ್ಲಿ ಥ್ಯಾಕರೆ ಮಡಿದನು. ಥ್ಯಾಕರೆ ಕೊಲೆಯಿಂದ ಎಚ್ಚೆತ್ತ ಬ್ರಿಟಿಷ ಸೈನ್ಯ ದೊಡ್ಡ ಪ್ರಮಾಣದಲ್ಲಿ ಸೈನ್ಯವನ್ನು ಸಂಗ್ರಹಿಸುವುದರಲ್ಲಿ ನಿರತವಾಯಿತು. ಈಗಾಗಲೇ ಆದ ತಪ್ಪಿನ ಅರಿವು ಅವರನ್ನು ಎಚ್ಚರಿಸಿತ್ತು. ಈ ಕಾರ್ಯದಲ್ಲಿ ನಿರತನಾದವನು ಬೆಳಗಾವಿಯ ಕಮಿಷನರ್ ಆಗಿದ್ದ ಚಾಪ್ಲಿನ. ಥ್ಯಾಕರೆಯ ಜೊತೆಯುದ್ಧ ನಡೆದಾಗ ಕಿತ್ತೂರಿನ ಸೈನ್ಯದಲ್ಲಿ ೫೦೦೦೦ ಯೋಧರಪಡೆ, ಸುಮಾರು ೧೮ ಫಿರಂಗಿಗಳು ಇದ್ದವು. ಥ್ಯಾಕರೆಯ ಸೈನ್ಯದಲ್ಲಿ ನೂರು ಯೋಧರು ಮಾತ್ರ ಇದ್ದರು. ಇವರಲ್ಲಿ ಕೆಲವರು ಧಾರವಾಡದಿಂದ ಇನ್ನು ಕೆಲವರು ಕಲಾದಗಿಯಿಂದ ಬೆಳಗಾವಿಗೆ ಬರುವ ಸೈನಿಕರಾಗಿದ್ದರು. ಕಿತ್ತೂರಿನ ಸೈನಿಕರು ಧಾರವಾಡಕ್ಕೂ ಮುತ್ತಿಗೆ ಹಾಕುತ್ತಾರೆ ಎನ್ನುವ ಸುದ್ದಿಯು ಬ್ರಿಟಿಷರನ್ನು ನಡುಗಿಸಿತ್ತು. ಕಾರಣ ಆಗ ಕಿತ್ತೂರಿನಲ್ಲಿ ಒಬ್ಬ ಸೈನಿಕನೂ ಕೂಡ ಇರಲಿಲ್ಲ.[೮೧] ಕಿತ್ತೂರಿನ ಸೈನ್ಯ ಇನ್ನೂ ಹೆಚ್ಚುತ್ತಲೇ ಇತ್ತು. ಸುತ್ತಮುತ್ತಲಿನ ಊರುಗಳಿಂದ ವೀರಯೋಧರು ಕಿತ್ತೂರಿಗೆ ಬಂದು ಸೇರುತ್ತಿದ್ದರು. ಹಳ್ಳಿಗಳ ನಾಯಕರ, ಜಾಗೀರುದಾರರ, ಕಿತ್ತೂರಿಗೆ ಬರುತ್ತಿತ್ತು. ಇದನ್ನರಿತ ಚಾಪ್ಲಿನ್ ಬೆಳಗಾವಿಯ ಸೈನ್ಯವನ್ನು ಸಿದ್ಧಗೊಳಿಸಿದವನು. ಥ್ಯಾಕರೆಯ ಕೊಲೆಯಾದ ದಿನವೇ (ಅಕ್ಟೋಬರ ೨೩, ೧೮೨೪) ರಾತ್ರಿಯ ಹೊತ್ತಿಗೆ ಲೆಫ್ಟಿನಂಟ ಕರ್ನಲ್ ಮ್ಯಾಕಲ್ಯೂಡ್ ಆಧೀನದಲ್ಲಿ ಬೆಳಗಾವಿಯಿಂದ ಒಂದು ಸೈನ್ಯ ಕಿತ್ತೂರಿಗೆ ಹೊರಡಿತು. ಈ ಸೈನ್ಯದಲ್ಲಿ ೪ನೆಯ ಲೈಟ ಅಶ್ವವಿಭಾಗದ ಮೂರು ಸ್ಕ್ವಾಡ್ರನ್‌ಗಳು ೧೨ ಪೌಂಡಿನ ಹಿತ್ತಾಳೆಯ ಎರಡು ಕ್ಷೇತ್ರ ಫಿರಂಗಿಗಳು ಹಿಜ್ ಮ್ಯಾಜಸ್ಟಿ ೪೬ ಕಾಲ್ದಳದ ಒಂದು ವಿಭಾಗ ಸೇರಿದ್ದವು. ಈ ಸಂದರ್ಭದಲ್ಲಿ ಕಿತ್ತೂರಿನ ಸೈನಿಕರು ಬೆಳಗಾವಿಯ ಮೇಲೂ ದಾಳಿ ಮಾಡಬಹುದು ಎನ್ನುವ ಅಂಜಿಕೆ ಬ್ರಿಟಿಷರಲ್ಲಿತ್ತು. ಹೀಗಾಗಿ ಬೆಳಗಾವಿಯ ರಕ್ಷಣೆಗಾಗಿ ಕರ್ನಲ್ ಪಿಯರ್ಸ್‌ನ ಆಧೀನದಲ್ಲಿ ಒಂದು ಸುಸಜ್ಜಿತ ಸೈನ್ಯವನ್ನು ಇಡಲಾಯಿತು. ಈ ಸಂದರ್ಭದಲ್ಲಿ ಮೈಸೂರಿನ ಮಹಾರಾಜನು ಬ್ರಿಟಿಷರಿಗೆ ಸೈನಿಕ ನೆರವನ್ನು ನೀಡಿದ. ಹೀಗೆ ಎರಡನೆಯ ಕಿತ್ತೂರ ಯುದ್ಧಕ್ಕೆ ಸಿದ್ಧತೆಗಳು ಬೆಳಗಾವಿಯಲ್ಲಿ ನಡೆಯತೊಡಗಿದವು. ಇದೇ ಕಾಲಕ್ಕೆ ವಿಂಗೋರ್ಲಾದ ಒಂದು ಸೈನ್ಯ ಘಟಕದೊಂದಿಗೆ ಕರ್ನಲ್ ಸೇರಿ ಬೆಳಗಾವಿಗೆ ಬಂದು ಸೇರಿದ.[೮೨] ಹೀಗೆ ಬೆಳಗಾವಿಯಲ್ಲಿ ಬ್ರಿಟಿಷರ ಸೈನ್ಯವೆಲ್ಲ ಜಮಾವಣೆಗೊಂಡು ನವಂಬರ ೨೭ ೧೮೨೩ ರ ಬೆಳಿಗ್ಗೆ ಬೆಳಗಾವಿಯಿಂದ ಕಿತ್ತೂರಿಗೆ ಹೊರಡಲು ಅಪ್ಪಣೆಯಾಯಿತು.

ಬ್ರಿಟಿಷರು ದೊಡ್ಡ ಸೈನ್ಯದೊಂದಿಗೆ ಕಿತ್ತೂರಿನ ಮೇಲೆ ದಾಳಿ ಮಾಡುವ ಸುದ್ದಿ ಚನ್ನಮ್ಮಳಿಗೆ ಗೊತ್ತಾದಾಗ ಚನ್ನಮ್ಮಳೂ ಯುದ್ಧದ ಸಿದ್ಧತೆಯಲ್ಲಿ ತೊಡಗಿದಳು. ಆದರೆ ಯುದ್ಧ ಸಮಯದಲ್ಲಿ ಕೆಲವರು ಮೋಸ ಮಾಡಿದ್ದರಿಂದ ಕಿತ್ತೂರಿನ ತೋಪುಗಳು ಹಾರಲಿಲ್ಲ. ಹೀಗಾಗಿ ಕಿತ್ತೂರ ಸಂಸ್ಥಾನವು ಅವಸಾನವನ್ನು ಹೊಂದಿತು. ಚನ್ನಮ್ಮ, ರುದ್ರಮ್ಮರನ್ನು ಬಂಧಿಸಲಾಯಿತು. ಚನ್ನಮ್ಮಳನ್ನು ಬೈಲಹೊಂಗಲದ ಸೆರೆಮನೆಯಲ್ಲಿ ರುದ್ರಮ್ಮಳನ್ನು ಧಾರವಾಡದಲ್ಲಿ ಬಂಧಿಸಿ ಇಡಲಾಯಿತು. ಈ ಯುದ್ಧದಲ್ಲಿ ಚಾಪ್ಲಿನ ಮೋಸದ ದಾರಿಯನ್ನು ಹುಡುಕಿದ. ಒತ್ತೆಯಾಳುಗಳನ್ನು ಬಿಡುಗಡೆಗೊಳಿಸಿದರೆ ಯುದ್ಧ ನಿಲ್ಲಿಸುವುದಾಗಿ ಭರವಸೆ ನೀಡಿದ. ಆದರೆ ಅದರಂತೆ ನಡೆದುಕೊಳ್ಳಲಿಲ್ಲ. ಹೀಗಾಗಿ

ಡಿಸೆಂಬರ ೫, ೧೮೨೪ ರಂದು ಕಿತ್ತೂರು ಕೋಟೆ ಸಂಪೂರ್ಣ ನಾಶವಾಯಿತು. ಅದೇ ತಿಂಗಳ ೧೨ ರಂದು ಕಿತ್ತೂರ ಸಂಸ್ಥಾನ ಬ್ರಿಟಿಷರ ಸ್ವಾದೀನವಾಯಿತು.

**ಬೆಳಗಾವಿ ಕಿಲ್ಲೆಯಲ್ಲಿ ರಾಯಣ್ಣನ ಸೆರೆಮನೆವಾಸ–ಪಾಸಿ ಶಿಕ್ಷೆಗೆ ಆಜ್ಞೆ:** ಬ್ರಿಟಿಷರ ಸೈನ್ಯ ಚಾಪ್ಲಿನ್‌ನ ನಾಯಕತ್ವದಲ್ಲಿ ಕಿತ್ತೂರಿನ ಸಂಸ್ಥಾನವನ್ನು ನಾಶಮಾಡಿ, ಸೆರೆಸಿಕ್ಕಿದ್ದ ಸ್ಟೀವನ್‌ಸನ್, ಈಲಿಯಟ್ ಮುಂತಾದವರನ್ನು ಕಿತ್ತೂರಿನಿಂದ ಬಿಡುಗಡೆಗೊಳಿಸಿ ಸಂಸ್ಥಾನದ ಖಜಾನೆಯನ್ನು ಲೂಟಿ ಮಾಡಿತು. ಈ ಸಂದರ್ಭದಲ್ಲಿ ಕಿತ್ತೂರಿನ ಹಲವಾರು ಜನ ವೀರಯೋಧರು ವೀರ ಮರಣ ಹೊಂದಿದರು. ಹಲವಾರು ಜನರು ಅಲ್ಲಿಂದ ತಪ್ಪಿಸಿಕೊಂಡು ಓಡಿ ಹೋದರು. ಇನ್ನು ಕೆಲವರು ಶರಣಾದರು. ಕೆಲವರನ್ನು ಬ್ರಿಟಿಷ ಸೈನಿಕರು ಬಂಧಿಸಿದರು.[೮೩] ಹೀಗೆ ಬಂಧನಕ್ಕೊಳಗಾದ ನಲವತ್ತು ಜನ ವೀರಯೋಧರನ್ನು ಬೆಳಗಾವಿಯ ಕಿಲ್ಲೆಯಲ್ಲಿರುವ ಕಾರಾಗ್ರಹದಲ್ಲಿ ಬಂಧನದಲ್ಲಿಡಲಾಯಿತು. ಅವರಲ್ಲಿ ಸಂಗೊಳ್ಳಿ ರಾಯಣ್ಣನು ಬಂಧನಕ್ಕೊಳಗಾಗಿ ಸೆರೆಮನೆಯನ್ನು ಸೇರಿದನು. ಮುಂದೆ ಬಂಧಿತರ ಅಪಾದನೆಗಳ ಬಗೆಗೆ ವಿಚಾರಣೆ ನಡೆದು ರಾಯಣ್ಣನ ಅಪರಾಧಗಳ ಬಗ್ಗೆ ಯಾವುದೇ ಪುರಾವೆಗಳು, ಸಾಕ್ಷಾದಾರಗಳು ಸಿಗಲಿಲ್ಲ. ಹೀಗಾಗಿ ಅವನನ್ನು ಒಂದು ಮುಚ್ಚಳಿಕೆ ಪತ್ರವನ್ನು ಬರೆಸಿಕೊಂಡು ಬಿಡುಗಡೆಗೊಳಿಸಿದರು. ಉಳಿದವರನ್ನು ಕಿಲ್ಲೆಯಲ್ಲಿರುವ ಆಲದ ಗಿಡಕ್ಕೆ ಪಾಸಿ ಶಿಕ್ಷೆಗೆ ಗುರಿಪಡಿಸಲಾಯಿತು. ಹೀಗೆ ರಾಯಣ್ಣನಿಗೆ ಪಾಸಿ ಶಿಕ್ಷೆಯಾಗುವುದು ಸ್ವಲ್ಪದರಲ್ಲಿ ತಪ್ಪಿಹೋಯಿತು.[೮೪] ಈ ಸಂದರ್ಭದಲ್ಲಿಯೇ ರಾಯಣ್ಣನಿಗೆ ಪಾಸಿ ಶಿಕ್ಷೆಯಾಗಿದ್ದರೆ ಮುಂದಿನ ದೇಶದ ಸ್ವಾತಂತ್ರ್ಯ ಹೊರಾಟದ ಚಿತ್ರಣವೇ ಬದಲಾಗುತ್ತಿತ್ತು. ಅಪ್ರತಿಮ ಹೋರಾಟಗಾರನಾದ ರಾಯಣ್ಣ ಮುಂದೆ ನಡೆದ ಸ್ವಾತಂತ್ರ್ಯ ಹೋರಾಟಕ್ಕೆ ಪ್ರಮುಖ ಸೆಲೆಯಾಗಿದ್ದನು. ಬೆಳಗಾವಿ ನೆಲದಲ್ಲಿ ನಡೆದ ಸ್ವಾತಂತ್ರ್ಯ ಹೋರಾಟಕ್ಕೆ ಹೋರಾಟಗಾರರಿಗೆ ಸ್ಫೂರ್ತಿಯಾಗಿದ್ದನು. ಕಿತ್ತೂರು ಸಂಸ್ಥಾನದ ಅವನತಿಯ ನಂತರ ರಾಯಣ್ಣನ ಹೋರಾಟಗಳು ಬ್ರಿಟಿಷರ ಶಕ್ತಿಯನ್ನೇ ಉಡುಗಿಸಿದ್ದವು. ಗಜವೀರ, ಬಿಚ್ಚುಗತ್ತಿ ಚನ್ನಬಸಪ್ಪ ಮುಂತಾದ ವೀರರ ತಂಡವನ್ನು ಕಟ್ಟಿಕೊಂಡು ಬ್ರಿಟಿಷರ ವಿರುದ್ಧ ಹೋರಾಟಕ್ಕಿಳಿದಿದ್ದ. ಒಂದು ಸಲ ಬೆಳಗಾವಿಯ ಕೋಟೆಯೊಳಗಿರುವ ಬ್ರಿಟಿಷರ ಸೈನಿಕ ನೆಲೆಯ ಮೇಲೆಯೇ ದಾಳಿ ಮಾಡಲು ನಿರ್ಧರಿಸಿ ಅದು ಸಾಧ್ಯವಾಗದೆ ಹಿಂತಿರುಗಿದ್ದ.[೮೫] ಈತನ ವೀರತನವನ್ನು ಕೇಳಿದ ಇಂಗ್ಲೆಂಡಿನ ವಿಕ್ಟೋರಿಯಾ ಮಹಾರಾಣಿಯು ಅವನನ್ನು ಜೀವಂತ ಹಿಡಿದು ತಂದರೆ ಅವನನ್ನು ಕಾಣಬೇಕೆಂಬ ಇಚ್ಛೆಯನ್ನು ವ್ಯಕ್ತಪಡಿಸಿದ್ದಳು.[೮೬] ಆದರೆ ರಾಯಣ್ಣನನ್ನು ಮೋಸದಿಂದ ಬಂಧಿಸಿ ಆತನಿಗೆ ಖಾನಾಪುರದ ಬಳಿಯ ನಂದಗಡದಲ್ಲಿ ನೇಣು ಶಿಕ್ಷೆಯಾಯಿತು. (ದಿನಾಂಕ ೨೮–೧೨–೧೮೩೦).

ಕಿತ್ತೂರಿನ ಸ್ವಾತಂತ್ರ್ಯ ಹೋರಾಟ ಬೆಳಗಾವಿ ಭಾಗದಲ್ಲಿ ಸಂಚಲನವನ್ನು ಉಂಟುಮಾಡಿತು. ಥ್ಯಾಕರೆಯ ಸಾವಿನಿಂದ ಹಿಡಿದು ರಾಯಣ್ಣನ ಗಲ್ಲು ಶಿಕ್ಷೆಯವರೆಗೆ ಸುಮಾರು ಏಳು ವರ್ಷಗಳ ಕಾಲ ಬೆಳಗಾವಿಯಲ್ಲಿ ನಿರಂತರ ಸೈನಿಕ ಚಟುವಟಿಕೆಗಳು ನಡೆದವು. ಬೆಳಗಾವಿ ಭಾಗದ ಜನರು ಈ ಎಲ್ಲ ಚಟುವಟಿಕೆಗಳನ್ನು ಕಣ್ಣಾರೆ ಕಂಡರು.

ಕಿತ್ತೂರಿನ ಸಂಸ್ಥಾನಕ್ಕೆ ಒದಗಿದ ಪರಿಸ್ಥಿತಿಗೆ ಮರುಗಿದರು. ಒಳಗೊಳಗೇ ಆವೇಶಪಟ್ಟರು, ಬ್ರಿಟಿಷರ ದೌರ್ಜನ್ಯವನ್ನು ತೆಗಳಿದರು. ಕೆಲವು ಸಲ ಪ್ರತಿಭಟಿಸಿದರು. ಒಂದು ದೃಷ್ಟಿಯಲ್ಲಿ ದೇಶದ ಸ್ವಾತಂತ್ರ್ಯ ಹೋರಾಟಕ್ಕೆ ಬೆಳಗಾವಿ ಈ ಕಾಲದಲ್ಲಿಯೇ ಸಿದ್ಧಗೊಳ್ಳತೊಡಗಿತು. ಕಿತ್ತೂರಿನ ಸಂಸ್ಥಾನದಿಂದ ಪ್ರಾರಂಭವಾದ ಬ್ರಿಟಿಷರ ವಿರುದ್ಧ ಹೋರಾಟ ಬೆಳಗಾವಿ ಭಾಗದಲ್ಲಿ ನಿರಂತರವಾಗಿ ಮುಂದುವರಿದುಕೊಂಡೇ ಬಂದಿದೆ. ಈ ಎಲ್ಲ ಹೋರಾಟಗಳ ಫಲವೇ ಮುಂದಿನ ಸ್ವಾತಂತ್ರ್ಯ ಸಂಗ್ರಾಮಕ್ಕೆ ಬೆಳಗಾವಿ ಹೋರಾಟದ ಕೇಂದ್ರವಾಗಿ ರೂಪಗೊಂಡಿತು.

ಬೆಳಗಾವಿ ಜಿಲ್ಲೆಯಾದ್ಯಂತ ಬ್ರಿಟಿಷರ ವಿರುದ್ಧ ಹೋರಾಟಗಳು ಹೆಚ್ಚಾದಂತೆ ಬೆಳಗಾವಿಯಲ್ಲಿಯ ಬ್ರಿಟಿಷರ ಸೈನಿಕ ನೆಲೆ ಹೆಚ್ಚೆಚ್ಚು ವಿಸ್ತಾರಗೊಂಡು ದಕ್ಷಿಣ ಮಹಾರಾಷ್ಟ್ರದಲ್ಲಿಯೇ ಬ್ರಿಟಿಷರ ಭದ್ರಕೋಟೆಯಾಗಿ ನಿಂತಿತು.

**ಬೆಳಗಾವಿ ಜಿಲ್ಲೆಯ ಉದಯ (ಕ್ರಿ ಶ. ೧೮೩೮):** ಕ್ರಿ ಶ. ೧೮೧೮ ರಲ್ಲಿ ಬ್ರಿಟಿಷರು ಬೆಳಗಾವಿಯನ್ನು ಪೇಶ್ವೆಯವರಿಂದ ವಶಪಡಿಸಿಕೊಂಡ ಮೇಲೆ ಬೆಳಗಾವಿ ಜಿಲ್ಲೆಯ ರೂಪಗೊಳ್ಳಲು ಪ್ರಾರಂಭವಾಯಿತು. ದಕ್ಷಿಣ ಮಹಾರಾಷ್ಟ್ರದ ಭಾಗವೆಂದೇ ಆಗ ಗುರುತಿಸಲ್ಪಟ್ಟ ಬೆಳಗಾವಿ, ವಿಜಾಪುರ, ಧಾರವಾಡ ಹಾಗೂ ಕಾನಡಾ (ಕಾರವಾರ) ಪ್ರದೇಶಗಳು ಮುಂಬೈ ಮತ್ತು ಮದ್ರಾಸ್ ಇಲಾಖೆಗಳಿಗೆ ಸೇರಲ್ಪಟ್ಟವು. ಪೇಶ್ವೆ ಬಾಜೀರಾಯನ ಕಾರ್‍ಯವು ಬ್ರಿಟಿಷರ ಕೈವಶವಾದ ಬಳಿಕ ದಕ್ಷಿಣ ಮಹಾರಾಷ್ಟ್ರದ ಭಾಗವು ಮೊದಲು ಬಳ್ಳಾರಿಯ ಕಲೆಕ್ಟರನ ಆಧೀನವಾಗಿ ಮದ್ರಾಸ ಇಲಾಖೆಗೆ ಸೇರಿತು.[೮೭] ೧೭೯೯ ರಲ್ಲಿಯೇ ಕಾನಡಾ ಭಾಗವು ಮಂಗಳೂರಿನ ಕಲೆಕ್ಟರನ ಆಧೀನವಾಗಿತ್ತು. ಮುಂದೆ ಕ್ರಿ ಶ. ೧೮೩೦ ರಲ್ಲಿ ದಕ್ಷಿಣ ಮಹಾರಾಷ್ಟ್ರದ ಸರಕಾರಿ ಸೀಮೆಯನ್ನೆಲ್ಲಾ ಕೂಡಿಸಿ ಧಾರವಾಡ ಜಿಲ್ಲೆಯನ್ನು ಮಾಡಿ ಅದನ್ನು ಮುಂಬಯಿ ಇಲಾಖೆಗೆ ಸೇರಿಸಲಾಯಿತು. ಮುಂದೆ ಧಾರವಾಡ ಜಿಲ್ಲೆಯನ್ನು ಎರಡು ಭಾಗ ಮಾಡಿ ೧೮೩೬ ಎಪ್ರಿಲ್ ೪ ರಂದು ಬೆಳಗಾವಿ ಭಾಗವನ್ನು ಮಾಡಿ ಅದಕ್ಕೆ ನೂತನ ಕಲೆಕ್ಟರ್‌ನ್ನು ನೇಮಿಸಲಾಯಿತು. ಆದರೆ ಆಗ ಧಾರವಾಡ ಜಿಲ್ಲೆಯಲ್ಲಿಯೇ ಈ ಪ್ರದೇಶ ಒಳಪಟ್ಟಿತ್ತು. ಆಗ ಬೆಳಗಾವಿ ಭಾಗದಲ್ಲಿ ಹತ್ತು ತಾಲೂಕುಗಳು ರಚನೆಗೊಂಡವು. ಅವೆಂದರೆ ಪರಸಗಡ(೯೬ ಗ್ರಾಮಗಳೂ)ಸಂಪಗಾವಿ(೧೦೬ ಗ್ರಾಮಗಳು) ಪಾಶ್ಚಾಪೂರ (೮೬ಗ್ರಾಮಗಳೂ)ಚಿಕ್ಕೋಡಿ (೧೪೧ ಗ್ರಾಮಗಳೂ) ಇಂಡಿ(೧೭೫ ಗ್ರಾಮಗಳು) ಬಾಗಲಕೋಟೆ (೧೨೩ ಗ್ರಾಮಗಳು) ಮುದ್ದೇಬಿಹಾಳ (೨೩೭ ಗ್ರಾಮಗಳು) ಹುನಗುಂದ (೧೩೮ ಗ್ರಾಮಗಳು) ಬದಾಮಿ (೧೩೩ ಗ್ರಾಮಗಳು) ಬೀಡಿ (೨೩೭ ಗ್ರಾಮಗಳು)–ಹೀಗೆ ಒಟ್ಟು ೧೫೯೬ ಗ್ರಾಮಗಳಿಂದ ಹತ್ತು ತಾಲೂಕುಗಳನ್ನು ಒಳಗೊಂಡಿತ್ತು.[೮೮]

ಬೆಳಗಾವಿಯು ಸ್ವತಂತ್ರ ಜಿಲ್ಲೆಯಾಗಿ ರೂಪಗೊಂಡದ್ದು ಕ್ರಿ ಶ ೧೮೩೮ ಮಾರ್ಚ ೯ ರಂದು. ಈ ನೂತನ ಜಿಲ್ಲೆಯು ಅಸ್ತಿತ್ವಕ್ಕೆ ಬಂದಾಗ ಹತ್ತು ತಾಲೂಕುಗಳನ್ನು ಒಳಗೊಂಡಿತ್ತು. ಮುಂದೆ ಇಂಡಿ, ಮುದ್ದೇಬಿಹಾಳ ತಾಲೂಕುಗಳು ನೂತನ ಸೊಲ್ಲಾಪುರ ಜಿಲ್ಲೆಗೆ ಸೇರ್ಪಡೆಯಾಗಿ, ಅಥಣಿ ಹಾಗೂ ಗೋಕಾಕ ಎಂಬ ಹೊಸ ತಾಲೂಕುಗಳು

ಬೆಳಗಾವಿ ಜಿಲ್ಲೆಗೆ ಸೇರಿಕೊಂಡವು. ೧೮೬೪ ರಲ್ಲಿ ಸೊಲ್ಲಾಪೂರ ಜಿಲ್ಲೆಗೆ ಸೇರಿದ ಭೀಮಾ ಮತ್ತು ಕೃಷ್ಣಾ ನದಿಗಳ ನಡುವಿನ ಇಂಡಿ, ಹಿಪ್ಪರಗಿ, ವಿಜಾಪುರ, ಮನಗೂಳಿ, ಮುದ್ದೇಬಿಹಾಳ ಈ ತಾಲೂಕುಗಳನ್ನು ಹಾಗೂ ಬೆಳಗಾವಿ ಜಿಲ್ಲೆಯೊಳಗಿದ್ದ ಬಾಗಲಕೋಟೆ, ಬದಾಮಿ, ಹುನಗುಂದ, ತಾಲೂಕುಗಳನ್ನು ಕೂಡಿಸಿ ಕಲಾದಗಿ ಜಿಲ್ಲೆಯನ್ನು ನಿರ್ಮಿಸಲಾಯಿತು.[೯]

ಕ್ರಿ. ಶ. ೧೮೮೧ ರ ಸುಮಾರಿಗೆ ಪಾಶ್ಚಾಪೂರ ತಾಲೂಕನ್ನು ಕಡಿಮೆ ಮಾಡಿ ಬೆಳಗಾವಿ ತಾಲೂಕನ್ನು ರಚಿಸಲಾಯಿತು. ಹೀಗೆ ಒಟ್ಟು ಏಳು ತಾಲೂಕುಗಳಾದವು. ಅವುಗಳೆಂದರೆ, ಅಥಣಿ, ಚಿಕ್ಕೋಡಿ, ಗೋಕಾಕ, ಪರಸಗಡ, ಖಾನಾಪೂರ, ಬೈಲಹೊಂಗಲ ಮತ್ತು ಬೆಳಗಾವಿ ತಾಲೂಕುಗಳನ್ನು ಒಳಗೊಂಡ ಬೆಳಗಾವಿ ಜಿಲ್ಲೆಯು ರೂಪಗೊಂಡಿತು.[೧೦]

ಇದೇ ರೀತಿ ಬೇರೆ ಬೇರೆ ಸಂಸ್ಥಾನಗಳಿಂದ ಧಾರವಾಡ, ವಿಜಾಪೂರ ಜಿಲ್ಲೆಗಳಲ್ಲಿ ಬದಲಾವಣೆಗಳು ಉಂಟಾದವು. ೧೮೮೪ ರಲ್ಲಿ ಕಲಾದಗಿ ಜಿಲ್ಲೆಯನ್ನು ಕಡಿಮೆ ಮಾಡಿ ವಿಜಾಪೂರ ಜಿಲ್ಲೆಯನ್ನು ಮಾಡಲಾಯಿತು. ಮದ್ರಾಸ ಇಲಾಖೆಗೆ ಸೇರಿದ ಕಾನಡಾ ಜಿಲ್ಲೆಯನ್ನು ಎರಡು ಭಾಗ ಮಾಡಿ ಉತ್ತರಕನ್ನಡ ಮತ್ತು ದಕ್ಷಿಣಕನ್ನಡ ಜಿಲ್ಲೆಗಳನ್ನು ಮಾಡಿ ಉತ್ತರಕನ್ನಡ ಜಿಲ್ಲೆಯನ್ನು ಮುಂಬೈ ಇಲಾಖೆಗೆ ಸೇರಿಸಲಾಯಿತು. ಈ ರೀತಿಯಲ್ಲಿ ಮುಂಬೈ ಇಲಾಖೆಯ ದಕ್ಷಿಣದಲ್ಲಿ ಸ್ವಾತಂತ್ರ್ಯ ಪೂರ್ವದ ನಾಲ್ಕು ಜಿಲ್ಲೆಗಳ ಬೆಳಗಾವಿ ವಿಭಾಗವು ನಿರ್ಮಾಣವಾಯಿತು. ಬೆಳಗಾವಿಯು ವಿಭಾಗದ ಕೇಂದ್ರಸ್ಥಳವಾಯಿತು.

ಉತ್ತರ ಕರ್ನಾಟಕದ ಈ ನಾಲ್ಕು ಜಿಲ್ಲೆಗಳಲ್ಲಿ (ವಿಜಾಪೂರ, ಬೆಳಗಾವಿ, ಧಾರವಾಡ, ಕೆನರಾ) ಹೆಚ್ಚಿನ ಬದಲಾವಣೆಗಳು ಮೇಲಿಂದ ಮೇಲೆ ಉಂಟಾಗಲು ಮುಖ್ಯವಾದ ಕಾರಣವೆಂದರೆ ಈ ಭಾಗದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಸಂಸ್ಥಾನಗಳಿದ್ದು ಅವು ಹಂತಹಂತವಾಗಿ ಬ್ರಿಟಿಷ ಸಾಮ್ರಾಜ್ಯಕ್ಕೆ ಸೇರತೊಡಗಿದವು. ೧೯ ನೆಯ ಶತಮಾನದ ಮೊದಲರ್ಧದಲ್ಲಿ ಬ್ರಿಟಿಷರ ವಿರುದ್ಧ ಎದ್ದ ಬಂಡಾಯಗಳು ಇಡೀ ಭಾರತವನ್ನು ಗಮನಿಸಿದರೆ ಈ ಭಾಗದಲ್ಲಿ ಅಧಿಕವಾಗಿರುವುದು ಕಂಡುಬರುತ್ತದೆ.[೧೧] ಹೀಗಾಗಿ ಸಂಸ್ಥಾನಗಳ ಸೇರ್ಪಡೆಯಿಂದಾಗಿ ಭೌಗೋಳಿಕ ವ್ಯಾಪ್ತಿ ಹೆಚ್ಚಾಗಿ ಆಡಳಿತದ ಅನುಕೂಲಕ್ಕಾಗಿ ಆಗಾಗ ಜಿಲ್ಲೆ, ತಾಲೂಕುಗಳ ರಚನೆಯಲ್ಲಿ ವ್ಯತ್ಯಾಸಉಂಟಾದದ್ದು ಕಂಡುಬರುತ್ತದೆ.

**ಆಡಳಿತ :** ಜಿಲ್ಲೆಗೆ ಕಂದಾಯ ಮುಖ್ಯಸ್ಥನನ್ನಾಗಿ ಕಲೆಕ್ಟರರನ್ನು ನೇಮಿಸುತ್ತಿದ್ದರು. ಈತನು ಜಿಲ್ಲೆಯ ವಸೂಲು, ಶಿಲ್ಕು ಇವುಗಳ ಮುಖ್ಯಾಧಿಕಾರಿಯಾಗಿರುತ್ತಾನೆ. ಅಲ್ಲದೆ ಈತನೇ ಜಿಲ್ಲೆಯ ಮುಖ್ಯ ಮಾಜಿಸ್ಟ್ರೇಟ ಆಗಿರುತ್ತಾನೆ. ಅಲ್ಲದೆ ಲೋಕಲ್ ಬೋರ್ಡಿನ ಅಧ್ಯಕ್ಷ. ಅಗ್ರಿಕಲ್ಚರಲ್ ಖಾತೆಗಳೆಲ್ಲ ಕಲೆಕ್ಟರನಿಗೆ ಸೇರಿದ್ದವು. ಕೆಲವು ಸಂದರ್ಭಗಳಲ್ಲಿ ಡಿಸ್ಟ್ರಿಕ್ಟ ಮ್ಯುನಿಸಿಪಾಲಿಟಿಯ ಅಧ್ಯಕ್ಷನೂ ಆಗಿರುತ್ತಿದ್ದನು. ಪೋಲೀಸ ಖಾತೆಯು ಬೇರೆ ಇದ್ದಾಗ್ಯೂ

ಪೋಲೀಸ ಅಧಿಕಾರಿಗಳ ಮೇಲೆ ಕಲೆಕ್ಟರನ ಅಧಿಕಾರ ಪೂರ್ತಿಯಾಗಿ ನಡೆಯುತ್ತಿತ್ತು. ಹೀಗಾಗಿ ಕಲೆಕ್ಟರನಿಗೇ ಜಿಲ್ಲೆಯ ಸಂಪೂರ್ಣ ಅಧಿಕಾರವನ್ನು ನೀಡಲಾಗಿತ್ತು.

ಕಲೆಕ್ಟರನಿಗೆ ಸಹಾಯಕರಾಗಿ ಎರಡು ಅಥವಾ ಮೂವರನ್ನು ಅಸಿಸ್ಟಂಟ ಕಲೆಕ್ಟರರನ್ನು ನೇಮಿಸಲಾಗುತ್ತಿತ್ತು. ಇವರು ಬ್ರಿಟಿಷ ಅಧಿಕಾರಿಗಳಾಗಿದ್ದರು. ಅಲ್ಲದೆ ಇಬ್ಬರನ್ನೂ ದೇಶಿ ಕಲೆಕ್ಟರರನ್ನು ನೇಮಿಸಲಾಗುತ್ತಿತ್ತು. ಇವರನ್ನು ಡಿಸ್ಟಿಕ್ ಡೆಪ್ಯೂಟಿ ಹುಜೂರ ಎಂದು ಕರೆಯುತ್ತಿದ್ದರು.

ಅಸಿಸ್ಟಂಟ ಕಲೆಕ್ಟರ ಮತ್ತು ಡಿಸ್ಟಿಕ್ ಕಲೆಕ್ಟರರು ತಮ್ಮ ತಮ್ಮ ಕೈಕೆಳಗಿನ ತಾಲೂಕುಗಳ ಮೂಲಕ ಖಾತೆಯ ಮೇಲ್ವಿಚಾರಣೆಯನ್ನು ಮಾಡುವುದಲ್ಲದೆ ೧ನೆಯ ೨ನೆಯ ವರ್ಗದ ಮಾಜಿಸ್ಟ್ರೀಟರಾಗಿ ಫೌಜದಾರಿ ನ್ಯಾಯಗಳನ್ನು ನಿರ್ಣಯಿಸುತ್ತಿದ್ದರು. ಅಲ್ಲದೆ ಡೆಪ್ಯೂಟಿ ಕಲೆಕ್ಟರರು ಜಿಲ್ಲೆಯ ನಗದ ಜಮೆ, ಖರ್ಚು, ಉಳಿತಾಯಗಳ ಲೆಕ್ಕಗಳಿಗೆ ಜವಾಬ್ದಾರರಾಗಿದ್ದರು. ಮತ್ತು ೧ನೆಯ ವರ್ಗದ ಮ್ಯಾಜಿಸ್ಟ್ರೇಟರಾಗಿ ಫೌಜದಾರೀ ನ್ಯಾಯವನ್ನು ನಿರ್ಣಯಿಸುತ್ತಿದ್ದರು.

**ನಗರ ಸಭೆ :** ನಗರಸಭೆ ಅಥವಾ ಮುನಿಸಿಪಾಲಿಟಿಗಳು ಬ್ರಿಟಿಷ್ ಆಡಳಿತದ ಅವಧಿಯಲ್ಲಿ ಅಸ್ತಿತ್ವದಲ್ಲಿದ್ದ ಸ್ಥಳೀಯ ಸಂಸ್ಥೆಗಳು. ಮುನಿಸಿಪಲ್ ಕಮಿಟಿಗಳನ್ನು ರಚಿಸುವುದಕ್ಕಿಂತ ಪೂರ್ವದಲ್ಲಿ ಬಾಂಬೆ ಸರಕಾರ ಬೆಳಗಾವಿ ಸೈನಿಕ ನೆಲೆಯಲ್ಲಿ ನಾಗರಿಕ ಸೌಲಭ್ಯಗಳನ್ನು ಒದಗಿಸಲು ಕಂಟೋನಮೆಂಟ ಬೋರ್ಡನ್ನು ಸ್ಥಾಪಿಸಿತ್ತು. ಪ್ರೆಸಿಡೆನ್ಸಿ ಪಟ್ಟಣಗಳ ಹೊರತಾಗಿ ಇತರ ಪಟ್ಟಣಗಳಲ್ಲಿ ಮುನ್ಸಿಪಲ್ ಸಂಸ್ಥೆಗಳನ್ನು ಸ್ಥಾಪಿಸುವ ನಿಟ್ಟಿನಲ್ಲಿ ಮೊದಲ ಕಾನೂನು ೧೮೪೨ ರಲ್ಲಿ ಜಾರಿಯಲ್ಲಿ ಬಂದಿತು. ಈ ಕಾನೂನಿಗೆ ೧೮೪೨ ರ ಬೆಂಗಾಲ ಕಾನೂನು ಎಂತಲೇ ಕರೆಯಲಾಯಿತು. ಈ ಕಾನೂನಿನ ಅನ್ವಯ ಯಾವುದೇ ಪಟ್ಟಣದಲ್ಲಿ ೨/೩ ಭಾಗ ನಾಗರಿಕರು ಮುನಿಸಿಪಾಲಿಟಿಯ ಸ್ಥಾಪನೆಗೆ ಸರಕಾರಕ್ಕೆ ಕೋರಿಕೆಯನ್ನು ಸಲ್ಲಿಸಿದಲ್ಲಿ ಆ ಪಟ್ಟಣದಲ್ಲಿ ಮುನಿಸಿಪಲ್ ಸಂಸ್ಥೆಯನ್ನು ಸ್ಥಾಪಿಸಬಹುದಿತ್ತು. ಈ ಕಾನೂನಿಗೆ ಸ್ಪಂದಿಸಿದ ಮೊದಲ ಪಟ್ಟಣಗಳೆಂದರೆ ಬೆಳಗಾವಿ ಮತ್ತು ಧಾರವಾಡ. ಆದರೆ ಈಗಾಗಲೇ ಕಂಟೋನಮೆಂಟ ಬೋರ್ಡವಿದ್ದಿದ್ದರಿಂದ ಅನುಮತಿಯು ದೊರೆಯಲಿಲ್ಲ. ಮುಂದೆ ೧೮೫೦ರಲ್ಲಿ ಈ ಕಾನೂನಿಗೆ ಮಾಪಾಟನ್ನು ಮಾಡಿ ಈ ಕಾನೂನಿನ ಅನ್ವಯ ಯಾವುದೇ ಪಟ್ಟಣ ಅದರ ಸುತ್ತಮುತ್ತಲಿನ ಪ್ರದೇಶದ ನಾಗರಿಕರು ಮನವಿ ಮಾಡಿಕೊಂಡಲ್ಲಿ ಆ ಪ್ರದೇಶಕ್ಕೆ 'ಮುನಿಸಿಪಲ್ ಕಮಿಟಿ'ಯನ್ನು ರಚನೆ ಮಾಡಿಕೊಳ್ಳಲು ಸರಕಾರ ಆಡಳಿತಾತ್ಮಕ ಒಪ್ಪಿಗೆಯನ್ನು ನೀಡಿತು.

ಪ್ರಾರಂಭದಲ್ಲಿ ನಗರ ಸಭೆಗಳು ಜಿಲ್ಲಾ ಮ್ಯಾಜಿಸ್ಟ್ರೇಟರ ನೇತೃತ್ವದಲ್ಲಿ ಸರಕಾರದಿಂದ ನೇಮಿಸಲ್ಪಟ್ಟ ಸದಸ್ಯರಿಂದ ಕೂಡಿರುತ್ತಿತ್ತು. ನಾಗರಿಕರು ಈ ಮುನಿಸಿಪಾಲಿಟಿ ಸ್ಥಾಪನೆಯ ಸಲುವಾಗಿ ಈ ಮ್ಯಾಜಿಸ್ಟ್ರೇಟರ ಮೂಲಕ ಮನವಿ

ಮಾಡಿಕೊಳ್ಳಬೇಕಿತ್ತು. ಅದರಂತೆ ನವಂಬರ ೨೬, ೧೮೫೦ರಲ್ಲಿ ಬೆಳಗಾವಿ ಪ್ರಪ್ರಥಮವಾಗಿ ಮನವಿ ಮಾಡಿಕೊಂಡಿತು. ಅದರಂತೆ ಬೆಳಗಾವಿ ಮುನಿಸಿಪಾಲಿಟಿಯು ಡಿಸೆಂಬರ ೧, ೧೮೫೧ ರಲ್ಲಿ ಸ್ಥಾಪನೆಗೊಂಡಿತು. ಹೀಗಾಗಿ ಇದು ಬಾಂಬೆ ಕರ್ನಾಟಕ ಪ್ರಾಂತ್ಯದಲ್ಲಿ ಸ್ಥಾಪನೆಗೊಂಡ ಮೊಟ್ಟ ಮೊದಲ ನಗರ ಸಭೆಯಾಗಿದೆ.

೧೮೫೦ ರ ಕಾಯಿದೆ ಅನ್ವಯ ಜಿಲ್ಲಾ ಕಲೆಕ್ಟರನನ್ನು ನಗರ ಸಭೆಯ ಅಧ್ಯಕ್ಷನನ್ನಾಗಿ ನೇಮಿಸಲಾಯಿತು. ತಾಲೂಕಿನ ಡೆಪ್ಯೂಟಿ ಕಲೆಕ್ಟರನನ್ನು ಉಪಾಧ್ಯಕ್ಷನನ್ನಾಗಿ ನೇಮಕ ಮಾಡಲಾಯಿತು. ಅಗಸ್ಟ ೨೩ ೧೮೫೨ ರಂದು ಬೆಳಗಾವಿಯ ಸ್ಥಳೀಯ ಗ್ರಂಥಾಲಯದಲ್ಲಿ ಎಲ್ಲ ವರ್ಗದ ನಾಗರಿಕರ ಸಾರ್ವಜನಿಕ ಸಭೆಯನ್ನು ಕರೆಯಲಾಯಿತು. ಈ ಸಂದರ್ಭದಲ್ಲಿ ೧೨ ಜನರನ್ನು ಆಯ್ಕೆ ಮಾಡಿ ಅವರನ್ನು ಪ್ರತಿನಿಧಿಗಳನ್ನಾಗಿ ನೇಮಿಸಲಾಯಿತು. ಆಯ್ಕೆಯ ಸಂದರ್ಭದಲ್ಲಿ ಸಮಾಜದಲ್ಲಿ ಬೇರೆ ಬೇರೆ ಸೇವೆಯಲ್ಲಿರುವ ಇಂಜನೀಯರ್, ಡಾಕ್ಟರ್, ಶಾಲಾ ಶಿಕ್ಷಕ, ಗಣ್ಯನಾಗರಿಕ, ಸಮಾಜ ಸೇವಕ, ಹೀಗೆ ಬೇರೆ ಬೇರೆ ಕ್ಷೇತ್ರಗಳಲ್ಲಿ ಹೆಸರುಗಳಿಸಿದ ಸುಶಿಕ್ಷಿತರನ್ನು ಸದಸ್ಯರನ್ನಾಗಿ ಆಯ್ಕೆ ಮಾಡಲಾಯಿತು. ಇವರನ್ನು ಪದನಿಮಿತ್ತ ಸದಸ್ಯರನ್ನಾಗಿ ನೇಮಿಸಲಾಯಿತು. ಪಟ್ಟಣದ ವಿವಿಧ ಓಣಿಗಳಲ್ಲಿ ಸಬ್-ಕಮೀಷನರ್‌ರನ್ನು ನೇಮಕ ಮಾಡಲಾಯಿತು. ಇವರೆಲ್ಲರು ಸೇರಿ ಊರಿನವರ ಆರೋಗ್ಯ, ಬೀದಿಗಳ ಸ್ವಚ್ಛತೆ, ರಾತ್ರಿ ದೀಪ ಮುಂತಾದ ಕೆಲಸಗಳನ್ನು ನಿರ್ವಹಿಸುತ್ತಿದ್ದರು. ನಗರ ಸಭೆಯ ಆದಾಯದ ಮೂಲವೆಂದರೆ ಮನೆ ಪಟ್ಟಿ, ಚಕ್ಕಡಿ ಪಟ್ಟಿ, ಹೊರಗಿನಿಂದ ಬರುವ ಮಾಲಿನ ಮೇಲೆ ಜಕಾತಿ, ಮುಂತಾದವುಗಳ ಮೇಲಿನ ಕರ ವಸೂಲಿಯಿಂದ ಹಣ ಬರುತ್ತಿತ್ತು. ಆಗ ಮನೆ ಪಟ್ಟಯು ತಿಂಗಳಿಗೆ ೧/೪ ಆಣೆಯಿಂದ ೨ ಆಣೆ ಇತ್ತು.

ನಗರಸಭೆಯಾಗಿ ಬೆಳವಣಿಗೆ : ೧೮೬೨ ರಲ್ಲಿ ಕೆಲವು ಬದಲಾವಣೆಗಳನ್ನು ಮಾಡಿ ಹೊಸ ಮುನಿಸಿಪಲ್ ಕಾಯಿದೆಯನ್ನು ಜಾರಿಯಲ್ಲಿ ತಂದರು. ಅದರ ಪ್ರಕಾರ ಆಯಾ ಜಿಲ್ಲಾ ಕಲೆಕ್ಟರ್, ಸಹಾಯಕ ಕಲೆಕ್ಟರೆರು, ಮಾವಲೆದಾರರು, ಮಹಲೇಖಾಧಿಕಾರಿಯವರು ಮುಮತಾದ ಹಿರಿಯ ಅಧಿಕಾರಿಗಳನ್ನು ಮುನಿಸಿಪಾಲಿಟಿಯ ಪದನಿಮಿತ್ತ ಸದಸ್ಯರನ್ನಾಗಿ ನೇಮಿಸಲಾಯಿತು. ಕಂದಾಯ ಇಲಾಖೆಯ ಅಧಿಕಾರಿಗಳಲ್ಲದೇ ಸರ್ಕಾರದ ಇತರ ಇಲಾಖೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದ ಇಂಜನಿಯರ್, ಡಾಕ್ಟರ್, ಶಿಕ್ಷಣ ಇಲಾಖೆಯ ಡೆಪ್ಯೂಟಿ ಇನ್ಸಪೆಕ್ಟರ್ ಮುಂತಾದವರನ್ನು ಪದನಿಮಿತ್ತ ಸದಸ್ಯರನ್ನಾಗಿ ನೇಮಿಸಲಾಯಿತು. ಅಧಿಕಾರಿಗಳನ್ನಲ್ಲದೆ ಮುನಿಸಿಪಲ್ ತೆರಿಗೆಯನ್ನು ಕೊಡುತ್ತಿದ್ದ ಕೆಲವು ಆಯ್ದ ಸಮಾಜಗಳ ಗಣ್ಯನಾಗರಿಕರನ್ನು ಸಹ ನೇಮಕಮಾಡಲಾಗುತ್ತಿತ್ತು. ಈ ಎಲ್ಲ ಸದಸ್ಯರನ್ನು ಮುನಿಸಿಪಲ್ ಕಮಿಶನರ್ ಎಂತಲೇ ಕರೆಯುತ್ತಿದ್ದರು.

೧೮೭೩ ರಲ್ಲಿ ಬಾಂಬೆ ಸರ್ಕಾರ ಬಾಂಬೆ ಜಿಲ್ಲಾ ಮುನಿಸಿಪಾಲಿಟಿಗಳ ಕಾನೂನನ್ನು ಜಾರಿಯಲ್ಲಿ ತಂದಿತು. ಈ ಕಾನೂನಿನ ಅನ್ವಯ ಹತ್ತು ಸಾವಿರ ಜನಸಂಖ್ಯೆಗೆ 'ಸಿಟಿ ಮುನಿಸಿಪಾಲಿಟಿ' ಎಂದು. ಎರಡು ಸಾವಿರ ಜನಸಂಖ್ಯೆಗಿಂತ ಕಡಿಮೆ ಇಲ್ಲದ ಪ್ರದೇಶಗಳನ್ನು 'ಟೌನ್ ಮುನಿಸಿಪಾಲಿಟಿ' ಗಳೆಂದು ವರ್ಗೀಕರಿಸಲಾಯಿತು. 'ಸಿಟಿ ಮುನಿಸಿಪಾಲಿಟಿ'ಗಳಲ್ಲಿ

೨/೩ ಭಾಗ ಸದಸ್ಯರು ಸರಕಾರದಿಂದ ನಾಮಕರಣ ಹೊಂದಿದ ಅಧಿಕಾರರೇತರಾಗಿದ್ದರೆ ಉಳಿದಂತೆ ೧/೩ ಭಾಗ ಸರ್ಕಾರದ ಪದನಿಮಿತ್ತ ಸದಸ್ಯರಾಗಿದ್ದರು. ೧೮೭೩ ರ ಕಾಯ್ದೆ ಅನ್ವಯ ಬೆಳಗಾವಿ ಮುನಿಸಿಪಾಲಿಟಿಯನ್ನು ಎಪ್ರಿಲ್ ೧, ೧೮೮೩ ರ ಕಾಯ್ದೆ ಅನ್ವಯ ಮಹಾನಗರ ಸಭೆಯ ಸದಸ್ಯರನ್ನು ಚುನಾವಣೆಯ ಮೂಲಕ ಆಯ್ಕೆ ಮಾಡುವ ಪದ್ಧತಿಯಂತೆ ೧೮೮೩-೮೪ ರಲ್ಲಿ ಚುನಾವಣೆಗಳು ಜರುಗಿ ಸದಸ್ಯರನ್ನು ಆಯ್ಕೆ ಮಾಡಲಾಯಿತು. ಅಧ್ಯಕ್ಷರನ್ನು ಚುನಾಯಿತ ಸದಸ್ಯರಿಂದಲೇ ಆಯ್ಕೆ ಮಾಡಲಾಗುತ್ತಿತ್ತು. ಮುಂದೆ ಮಹಾನಗರ ಸಭೆಯ ನಿಯಮಗಳಲ್ಲಿ ಮಹತ್ವದ ಬದಲಾವಣೆಗಳನ್ನು ತರಲಾಯಿತು. ೧೮೮೪ ರ ಪೂರಕ ಮುನಿಸಿಪಲ್ ಕಾಯಿದೆಯ ಅನ್ವಯ ನಗರ ಸಭೆಗಳಲ್ಲಿ ಚುನಾಯಿತ ಸದಸ್ಯರ ಸಂಖ್ಯೆಯನ್ನು ಹೆಚ್ಚಿಸಲಾಯಿತು. ಮೊದಲಿನ ಸಿಟಿ ಮತ್ತು ಟೌನ್ ಎಂಬ ವರ್ಗೀಕರಣವನ್ನು ತೆಗೆದುಹಾಕಲಾಯಿತು. ಸದಸ್ಯರ ಅಧಿಕಾರ ಅವಧಿಯನ್ನು ಮೂರು ವರ್ಷ ಎಂದು ನಿಗದಿಪಡಿಸಲಾಯಿತು. ಸದಸ್ಯರ ಕರ್ತವ್ಯಗಳಲ್ಲಿ 'ಕಡ್ಡಾಯ' ಮತ್ತು 'ಐಚ್ಛಿಕ' ಎಂದು ವಿಂಗಡಿಸಲಾಯಿತು. ಪ್ರತಿ ನಗರ ಸಭೆಗೆ ಸ್ಥಾಯೀ ಸಮಿತಿಯ ರಚನೆಯನ್ನು ಕಡ್ಡಾಯಗೊಳಿಸಲಾಯಿತು. ಕೆಲಸ ಕಾರ್ಯಗಳನ್ನು ಸಮರ್ಪಕವಾಗಿ ನಡೆಸಿಕೊಂಡು ಹೋಗಲು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯನ್ನು ನೇಮಿಸಲಾಯಿತು. ಅದರಂತೆ ೧೯೦೧ ರಲ್ಲಿ ಬೆಳಗಾವಿ ನಗರ ಸಭೆಗೆ ಅಧಿಕಾರಿಯನ್ನು ನೇಮಿಸಲಾಯಿತು.

೧೯೨೫ ರಲ್ಲಿ ಬಾಂಬೆ ಬರೋ ಮುನಿಸಿಪಾಲಿಟಿ ಕಾನೂನನ್ನು ಜಾರಿಯಲ್ಲಿ ತರಲಾಯಿತು. ಬರೋ ಅಂದರೆ ಇಂಗ್ಲೆಂಡಿನ ಪಾರ್ಲಿಮೆಂಟಗೆ ಪ್ರತಿನಿಧಿಗಳನ್ನು ಆಯ್ಕೆ ಮಾಡುವ ಅಧಿಕಾರವಿರುವ ನಗರಗಳು. ಅದರಂತೆ ಬೆಳಗಾವಿ ನಗರ ಸಭೆಯನ್ನು ಬರೋ ನಗರ ಸಭೆಯೆಂದು ಸಾರಲಾಯಿತು.

ತೆರಿಗೆ ಪದ್ಧತಿ : ನಗರಾಡಳಿತದ ವೆಚ್ಚ ನಿರ್ವಹಿಸಲು ಆಯಾ ಸ್ಥಳೀಯ ಮಟ್ಟದಲ್ಲಿಯೇ ತೆರಿಗೆ ಸಂಗ್ರಹಿಸುವ ಪದ್ಧತಿ ಜಾರಿಯಲ್ಲಿತ್ತು. ಬ್ರಿಟಿಷರು ಏಕರೂಪ ತೆರಿಗೆ ವ್ಯವಸ್ಥೆಯನ್ನು ಜಾರಿಗೆ ತಂದರು. ನಗರ ಸಭೆಯ ಅಂದಿನ ತೆರಿಗೆ ಪದ್ಧತಿಯಲ್ಲಿ ನಾಲ್ಕು ಪ್ರಕಾರದಲ್ಲಿದ್ದವು. ಅವುಗಳೆಂದರೆ ೧. ಸಾರ್ವಜನಿಕರ ಮೇಲೆ ವಿಧಿಸಿದ ತೆರಿಗೆ ೨. ನಗರಸಭೆಗಳ ಆಸ್ತಿ, ೩. ಕೇಂದ್ರ ಸರ್ಕಾರದ ಅನುದಾನ ಮತ್ತು ೪. ಇತರ ಮೂಲಗಳಿಂದ ಸಂಗ್ರಹವಾದ ಮೊತ್ತ. ಸಾರ್ವಜನಿಕರಿಂದ ಸಂಗ್ರಹಿಸುತ್ತಿದ್ದ ತೆರಿಗೆಗಳೆಂದರೆ ಭೂತೆರಿಗೆ/ಕಟ್ಟಡ/ಮನೆ ಮೇಲಿನ ತೆರಿಗೆ, ವಾಹನ ಪ್ರಾಣಿಗಳ ಮೇಲಿನ ತೆರಿಗೆ, ಅಕ್ರಾಯ ತೆರಿಗೆ, ನೈರ್ಮಲ್ಯೀಕರಣದ ತೆರಿಗೆ, ನೀರಿನ ತೆರಿಗೆ, ದೀಪದ ತೆರಿಗೆ, ಯಾತ್ರಾರ್ತಿಗಳ ಮೇಲಿನ ತೆರಿಗೆ ಗೌರ್ನರ ಜನರಲ್‌ರಿಂದ ಅನುಮೋದಿಸಿದ ಇನ್ನಿತರ ತೆರಿಗೆಗಳು.

ಈ ರೀತಿ ಸಂಗ್ರಹಗೊಂಡ ಹಣವನ್ನು ನಗರದ ಮೂಲಭೂತ ಸೌಲಭ್ಯಗಳಾದ ಆರೋಗ್ಯ, ಕುಡಿಯುವ ನೀರು, ನೈರ್ಮಲ್ಯೀಕರಣಗಳ ವೆಚ್ಚ, ಸಾಂಕ್ರಾಮಿಕ ರೋಗಗಳ ನಿಯಂತ್ರಣ, ನೌಕರರ ವೇತನ ಮುಂತಾದವುಗಳಿಗೆ ಬಳಸಲಾಗುತ್ತಿತ್ತು. ಇದಲ್ಲದೆ ಪಟ್ಟಣಕ್ಕೆ ಬರುತ್ತಿದ್ದ ಜೀವನೋಪಾಯ ವಸ್ತುಗಳ ಮೇಲೆ ತೆರಿಗೆ ಇತ್ತು. ಕಲ್ಲು, ಕಟ್ಟಿಗೆ,

ಕಬ್ಬಿಣ ಮರದ ಪೀಠೋಪಕರಣ ಗ್ಲಾಸ್ ಸುಗಂಧ ದ್ರವ್ಯ, ಒಣಮೀನು, ಹತ್ತಿ ಬಟ್ಟೆ, ಬಿದರಿನ ಬುಟ್ಟಿ, ಸುಣ್ಣ, ಇಟ್ಟಿಗೆ, ಮರಳು, ಕಲ್ಲಿದ್ದಲು, ತರಕಾರಿ, ಮಾಂಸ ಮುಂತಾದ ವಸ್ತುಗಳ ಮೇಲೆ ತೆರಿಗೆಯನ್ನು ವಿಧಿಸಲಾಗುತ್ತಿತ್ತು. ಮನೆ ತೆರಿಗೆಯನ್ನು ಅದರ ವಾರ್ಷಿಕ ಬಾಡಿಗೆಯಿಂದ ಬರಬಹುದಾದ ಅಂದಾಜಿ ಲಾಭದ ಮೇಲಿಂದ ನಿಗದಿಪಡಿಸುತ್ತಿದ್ದರು. ನೈರ್ಮಲ್ಯೀಕರಣದ ತೆರಿಗೆಯನ್ನು ಸಾರ್ವಜನಿಕ ಶೌಚಾಲಯ ಮತ್ತು ಖಾಸಗಿ ಶೌಚಾಲಯದ ಮೇಲೆ ಸಂಗ್ರಹಿಸುತ್ತಿದ್ದರು. ಸಾರ್ವಜನಿಕ ಶೌಚಾಲಯ ತೆರಿಗೆಯನ್ನು ಮನೆ ತೆರಿಗೆ ಸಂಗ್ರಹಿಸುವಾಗ ಎಲ್ಲರಿಂದಲೂ ಕಡ್ಡಾಯವಾಗಿ ಸಂಗ್ರಹಿಸುತ್ತಿದ್ದರು. ಪ್ರಾಣಿಗಳ ಮೇಲಿನ ತೆರಿಗೆ ನಾಯಿ, ಹಂದಿ, ಕುರಿ ಆಡುಗಳ ಮೇಲೆ ಮತ್ತು ಮಾರಾಟದ ವೇಳೆಯಲ್ಲಿ ಮಾರಾಟ ಮಾಡಿದವನಿಂದಲೂ ಖರೀದಿಸಿದವನಿಂದಲೂ ಈ ತೆರಿಗೆ ಸಂಗ್ರಹಿಸುತ್ತಿದ್ದರು.

ಇನ್ನಿತರ ತೆರಿಗೆಗಳಲ್ಲಿ ಮಾರುಕಟ್ಟೆ ಸ್ಥಳ, ಶ್ರೀಗಂಧದ ಮರ, ದನದ ಮಾರುಕಟ್ಟೆ, ಮಾರಾಟ ಅಂಗಡಿಗಳ ಮೇಲಿನ ಬಾಡಿಗೆ, ಖಸಾಯಿಕಾನೆ, ಪರವಾನಿಗೆ ಪತ್ರದ ಮೇಲಿನ ತೆರಿಗೆ ಮುಂತಾದವುಗಳು ಇದ್ದವು.

ಈ ತೆರಿಗೆಗಳಿಂದ ಸಂಗ್ರಹಿಸಿದ ಹಣವು ನಗರ ಸಭೆಯ ನಿರ್ವಹಣೆಗೆ ಸಾಧ್ಯವಾಗುತ್ತಿರಲಿಲ್ಲ. ಹೀಗಾಗಿ ನಗರ ಸಭೆಗಳಿಗೆ ಸರ್ಕಾರದಿಂದ ಹಣಕಾಸಿನ ನೆರವು ದೊರೆಯುತ್ತಿತ್ತು.

**ಮಿಲಿಟರಿ ನೆಲೆ :**

ಭಾರತಕ್ಕೆ ಬ್ರಿಟಿಷರು ಬರುವ ಮುಂಚೆ ವ್ಯಾಪಾರಕ್ಕಾಗಿ ಬಂದವರೆಂದರೆ ಪೋರ್ಚುಗೀಸರು (೧೪೯೮) ಮತ್ತು ಡಚ್ಚರು (೧೯೫೯) ಇವರು ಗೋವಾ ಮತ್ತು ಕೆಲವು ಭಾಗಗಳನ್ನು ಉಳಿಸಿಕೊಂಡಿದ್ದರು.

ಕ್ರಿ.ಶ. ೧೮೧೮ ರಲ್ಲಿ ಪೇಶ್ವೆಯವರ ಆಡಳಿತವನ್ನು ಕೊನೆಗೊಳಿಸಿ ಬೆಳಗಾವಿಯನ್ನು ಬ್ರಿಟಿಷರು ವಶಪಡಿಸಿಕೊಳ್ಳುವುದಕ್ಕಿಂತ ಪೂರ್ವದಲ್ಲಿಯೇ ಬೆಳಗಾವಿಯು ಬ್ರಿಟಿಷರ ಸೇನಾ ನೆಲೆಯಾಗಿತ್ತು. ಬೆಳಗಾವಿಗೆ ಸಮೀಪದಲ್ಲಿರುವ ವೆಂಗುರ್ಲಾ ಡಚ್ಚರ ಆಡಳಿತಕ್ಕೂ ಮತ್ತು ಗೋವೆಯು ಪೋರ್ಚುಗೀಜರ ಆಡಳಿತಕ್ಕೂ ಒಳಪಟ್ಟಿತ್ತು. ಗೋವಾ, ಬೆಳಗಾವಿಗೆ ಹೊಂದಿಕೊಂಡ ಪ್ರದೇಶವಾಗಿದ್ದರಿಂದ ರಕ್ಷಣೆಯ ದೃಷ್ಟಿಯಿಂದ ಅತ್ಯಂತ ಮಹತ್ವದ ನೆಲೆಯಾಗಿತ್ತು. ಪೋರ್ಚುಗೀಸರು ಮತ್ತು ಡಚ್ಚರನ್ನು ನಿಂತ್ರಿಸಲು ಬೆಳಗಾವಿ ಗಡಿ ಪ್ರದೇಶವಾಯಿತು. ಆದ್ದರಿಂದ ಬ್ರಿಟಿಷರ ಸಾಮ್ರಾಜ್ಯವು ಬೆಳಗಾವಿಯಲ್ಲಿ ತನ್ನ ಸೇನಾ ನೆಲೆಯನ್ನು ಸ್ಥಾಪಿಸಿತು. ಇಲ್ಲಿ ಯುರೋಪಿಯನ್ ರೆಜಿಮೆಂಟು, ಎರಡು ನೇಟೀವ ರೆಜಿಮೆಂಟಗಳು, ಒಂದು ತೋಪಖಾನೆಯ ಬ್ಯಾಟರಿ ಅಲ್ಲದೆ ಸೈನಿಕರ ಬರಾಕುಗಳನ್ನು ಸ್ಥಾಪಿಸಿದರು. ಕ್ರಿ. ಶ ೧೮೧೮ ರಲ್ಲಿ ಬೆಳಗಾವಿಯು ಬ್ರಿಟಿಷರ ವಶವಾದ ಬಳಿಕ ಸೈನ್ಯದ ಠಾಣೆಯನ್ನು ಇಲ್ಲಿಯೇ ಸ್ಥಾಪಿಸಿದರು. ಇಲ್ಲಿಯೇ ಮರಾಠಾ ಲೈಟ ಇನ್ ಫೆಂಟ್ರಿ ನೆಲೆಸಿದೆ. ಇಲ್ಲಿ ಕಮಾಂಡೋ ತರಬೇತಿ, ವೈಮಾನಿಕ ತರಬೇತಿಯನ್ನು ನೀಡಿ ಯುದ್ಧಕ್ಕೆ ಅಣಿಗೊಳಸಲಾಗುತ್ತದೆ. ಬ್ರಿಟಿಷರ ಹಲವಾರು ಯುದ್ಧಗಳಲ್ಲಿ ಇಲ್ಲಿಯ ಸೈನಿಕರು ಭಾಗವಹಿಸಿದ್ದಾರೆ.

ಟೀಪು ಸುಲ್ತಾನನೊಂದಿಗಲ್ಲದೆ ಅಫಘಾನಿಸ್ತಾನ, ಇಜಿಪ್ತ, ಸುಡ್ರಾನ್ ಇಥಿಯೋಪಿಯಾ, ಇರಾಕ್, ಇಟಲಿ, ಬರ್ಮಾ, ಕೋರಿಯಾ, ಇಂಡೋನೇಶಿಯಾ ಮುಂತಾದ ದೇಶಗಳ ವಿರುದ್ಧವೂ ನಡೆದ ಯುದ್ಧಗಳಲ್ಲಿ ಬೆಳಗಾವಿ ಮಿಲಿಟರಿ ನೆಲೆಯ ಸೈನಿಕರು ಹೋರಾಡಿ ವಿಜಯಿಗಳಾಗಿ ಹಲವಾರು ಪ್ರಶಸ್ತಿಯನ್ನು ಪಡೆದುಕೊಂಡಿದ್ದಾರೆ. ಇಟಲಿ ವಿರುದ್ಧ ಬ್ರಿಟಿಷರು ಯುದ್ಧ ಹೂಡಿದಾಗ ಬೆಳಗಾವಿಯ ಸೈನಿಕರು ಭಾಗವಹಿಸಿದ್ದರು. ಈ ಯುದ್ಧದಲ್ಲಿ ಬ್ರಿಟಿಷರು ವಿಜಯಿಗಳಾದರು. ಇದರಿಂದ ವಿಕ್ಟೋರಿಯಾ ವೀರ ಚಕ್ರವನ್ನು ಇಲ್ಲಿಯ ಸೈನಿಕರು ಪಡೆದುಕೊಂಡರು.

ಕ್ರಿ. ಶ. ೧೯೨೦ ರಲ್ಲಿ ಇಲ್ಲಿಯ ಸೈನಿಕರ ತಗಬೇತಿಗಾಗಿ ಮರಾಠಾ ಲೈಟ್ ಇನ್‌ಫಂಟ್ರಿ ತರಬೇತಿ ಶಾಲೆಯನ್ನು ತೆರೆಯಲಾಯಿತು. ಇದು ದೇಶದಲ್ಲಿಯೇ ಅಧಿಕಾರಿಗಳನ್ನು ತರಬೇತಿಗೊಳಿಸುವಂತ ಹಿರಿಯ ಸಂಸ್ಥೆಗಳಲ್ಲಿ ಒಂದಾಗಿದೆ. ಪಂಜಾಬ್, ಗುರ್ಖಾ, ರಜಪೂತ ಮುಂತಾದ ಪದಾತಿದಳಗಳೊಂದಿಗೆ ಸರಿಸಮನಾಗಿ ಯುದ್ಧ ಮಾಡುವ ಕಲೆಯಲ್ಲಿ ಇಲ್ಲಿಯ ಸೈನಿಕರು ನಿಪುಣರಾಗಿದ್ದಾರೆ. ಬ್ರಿಟಿಷರು ಹಳೆಯ ಮುಂಬೈ ಪ್ರಾಂತ್ಯದಲ್ಲಿ ಸ್ಥಾಪಿಸಿದ ಐದು ಸೈನಿಕ ನೆಲೆಗಳಲ್ಲಿ ಬೆಳಗಾವಿಯ ಸೈನ್ಯವು ಪ್ರಮುಖವಾದ ಸ್ಥಾನವನ್ನು ಹೊಂದಿತ್ತು. ಧೈರ್ಯ, ಸಾಹಸ, ಯುದ್ಧ ಕಲೆಗಳಿಗೆ ದೇಶದಲ್ಲಿಯೇ ಮುಂಚೂಣಿಯಲ್ಲಿತ್ತು. ಮುಂಬೈ ಪ್ರಾಂತದಲ್ಲಿ ಬೆಳಗಾವಿ ಜಿಲ್ಲಾ ಪ್ರದೇಶವಾಗುವುದಕ್ಕಿಂತ ಪೂರ್ವದಲ್ಲಿ ಬೆಳಗಾವಿಯ ಧಾರವಾಡ ಜಿಲ್ಲೆಯ ವ್ಯಾಪ್ತಿಗೆ ಒಳಪಟ್ಟಿತ್ತು. ಹೀಗಾಗಿ ಬೆಳಗಾವಿ ಸೈನಿಕ ನೆಲೆಯ (ಮಿಲಿಟರಿ) ಆಡಳಿತವು ಧಾರವಾಡ ಸುಭಾದ ಕಲೆಕ್ಟರ್‌ನಿಗೆ ಒಳಪಟ್ಟಿತ್ತು. ದಕ್ಷಿಣ ಮಹಾರಾಷ್ಟ್ರ ಪ್ರಾಂತದ ಸೈನ್ಯದ ತುಕಡಿಗೆ ಒಬ್ಬ ಮುಖ್ಯಸ್ಥನಿರುತ್ತಿದ್ದನು. ಅವನ ಕೈಕೆಳಗೆ ಮದ್ರಾಸ್ ನೇಟಿವ್ ಇನ್‌ಫೆಂಟ್ರಿಯ ಹಲವಾರು ಅಧಿಕಾರಿಗಳು ಇರುತ್ತಿದ್ದರು. ಸರಕಾರಿ ಸೈನ್ಯದಲ್ಲಿ ಹಲವಾರು ದರ್ಜೆಗಳಿದ್ದವು. ಒಂದನೆಯದು ಶೇತ್ಸನದಿಗಳು ಹಾಗೂ ವಾಲೀಕಾರರು ಇದು ಕಚ್ಚಾ ಸೈನ್ಯ. ಅವರು ಬಳಸುತ್ತಿದ್ದ ಆಯುಧಗಳೆಂದರೆ ಹಾರೆ, ಕೊಡಲಿ ಮಚ್ಚು ಮುಂತಾದವುಗಳಾಗಿದ್ದವು. ಇವು ಪ್ರತಿ ಹಳ್ಳಿಯಲ್ಲಿ ಇರುತ್ತಿದ್ದವು. ಪ್ರಸಂಗ ಬಂದರೆ ಅವರನ್ನು ವಿವಿಧ ಕಡೆಗಳಿಂದ ಕರೆಸಿಕೊಳ್ಳುತ್ತಿದ್ದರು. ಈ ಪಡೆಯ ಉಸ್ತುವಾರಿಯನ್ನು ಅಮಲ್ದಾರರೇ ನೋಡಿಕೊಳ್ಳುತ್ತಿದ್ದರು. ಮತ್ತೊಂದು ಪಡೆ ಕುದುರೆ ಸವಾರರದ್ದು. ಅದಕ್ಕೊಬ್ಬ ರಿಸಾಲದಾರ ಎನ್ನುವ ಮುಖ್ಯಸ್ಥನಿರುತ್ತಿದ್ದನು. ಮೂರನೆಯದಾಗಿ ಮಿಲಿಟರಿ ಪಡೆ. ಇದು ಸುಸಜ್ಜಿತವಾಗಿ ತರಬೇತಿಯನ್ನು ಪಡೆದ ಸೈನ್ಯ ಪಡೆಯಾಗಿತ್ತು. ಬ್ರಿಟಿಷರು ಈ ಮೂರೂ ಸೈನ್ಯ ಪಡೆಗಳನ್ನು ಸಾಂದರ್ಭಿಕವಾಗಿ ಬಳಸಿಕೊಳ್ಳುತ್ತಿದ್ದರು.

**ಮರಾಠಾ ಪದಾತಿದಳದ ಸೈನಿಕರ ಸಾಧನೆ :** ಬೆಳಗಾವಿಯ ಮರಾಠಾ ಪದಾತಿದಳವು ದೇಶದಲ್ಲಿಯೇ ಅತಿ ಶಿಸ್ತುಬದ್ಧವಾದ ಸೇನಾವಲಯವಾಗಿದೆ. ಇಲ್ಲಿಯ ಸೈನಿಕರು ೨೦೧೦ರಲ್ಲಿ ಫ್ರಾನ್ಸ್‌ನಲ್ಲಿ ನಡೆದ ಬ್ಯಾಸ್ಟಲ್ ಡೇ ಪರೇಡನಲ್ಲಿ ಸುಮಾರು ೧೩೦ ಜನರು ಭಾಗವಹಿಸುವ ಮೂಲಕ ದೇಶದ ಸೈನ್ಯದ ಇತಿಹಾಸದಲ್ಲಿಯೇ ಹೊಸ ದಾಖಲೆ ನಿರ್ಮಿಸಿದ್ದಾರೆ. ವಿದೇಶದಲ್ಲಿ ನಡೆಯುವ ಸಮಾರಂಭದಲ್ಲಿ ನಮ್ಮ ರಾಷ್ಟ್ರದ ಪ್ರಧಾನಿಗಳೊಂದಿಗೆ ಬೇರೆ

ರಾಷ್ಟ್ರದ ಅಧ್ಯಕ್ಷರಿಗೆ ಪರೇಡ ಮೂಲಕ ಗೌರವ ಸಲ್ಲಿಸಿರುವುದು ಸೈನ್ಯದ ಇತಿಹಾಸದಲ್ಲಿ ಇದೇ ಮೊದಲನೆಯದಾಗಿದೆ. ಹೀಗಾಗಿ ಭಾರತೀಯ ಸೈನ್ಯದಲ್ಲಿ ಬೆಳಗಾವಿಯ ಸೈನಿಕರು ವಿಶೇಷವಾದ ಗೌರವಕ್ಕೆ ಪಾತ್ರರಾದರು. ಇದು ಬೆಳಗಾವಿಗೆ ಹೆಮ್ಮೆಯ ವಿಷಯವಾಗಿದೆ. ಬೆಳಗಾವಿಯ ಮರಾಠಾ ಪದಾತಿ ದಳದಲ್ಲಿ ದೇಶದಲ್ಲಿಯೇ ಅತ್ಯುತ್ತಮವಾದ ತರಬೇತಿಯನ್ನು ನೀಡಲಾಗುತ್ತದೆ.

**ಇಂಡೋ-ಚೀನಾ ಜಂಟಿ ಸಮರಾಭ್ಯಾಸ** : ಭಯೋತ್ಪಾದನೆ ನಿಗ್ರಹದಲ್ಲಿ ಕೌಶಲ್ಯ ಬೆಳೆಸುವುದರ ಜೊತೆಗೆ ಭಾರತ ಹಾಗೂ ಚೀನಾ ರಾಷ್ಟ್ರಗಳ ನಡುವೆ ಬಾಂಧವ್ಯ ವೃದ್ಧಿಗೆ ಒಂಬತ್ತು ದಿನಗಳವರೆಗೆ ಎಕ್ಸರ್‌ಸೈಜ್ ಹ್ಯಾಂಡ-ಇನ್-ಹ್ಯಾಂಡ್ ೨೦೦೮ ಎನ್ನುವ ಜಂಟಿ ಸಮರಾಭ್ಯಾಸವು ಬೆಳಗಾವಿಯ ಮರಾಠಾ ಪದಾತಿದಳದಲ್ಲಿ ಜರುಗಿ ಮಹತ್ತರ ಘಟನೆಗೆ ಸಾಕ್ಷಿಯಾಗಿ ಜಾಗತಿಕ ಮಟ್ಟದಲ್ಲಿ ಗಮನ ಸೆಳೆಯಿತು. ಇದೇ ರೀತಿಯ ಭಾರತ ಮತ್ತು ಅಮೇರಿಕ ಯೋಧರು ೨೦೦೬ ರಲ್ಲಿ ಶತ್ರುಜೀತ ಎಂಬ ಹೆಸರಿನಲ್ಲಿ ಸಮರಾಭ್ಯಾಸವನ್ನು ಬೆಳಗಾವಿಯಲ್ಲಿ ನಡೆಸಿದರು. ಬೆಳಗಾವಿಯ ಹೊರವಲಯದಲ್ಲಿರುವ ಗುಡ್ಡ ಕಣಿವೆಗಳು ಸಮರಾಭ್ಯಾಸಕ್ಕೆ ಪ್ರಶಸ್ತವಾಗಿವೆ. ಅದರಲ್ಲಿಯೂ ಮರಾಠಾ ಪದಾತಿ ದಳದ ಶೌರ್ಯ, ಪರಾಕ್ರಮ, ಅಚ್ಚುಕಟ್ಟುತನವನ್ನು ಅರಿತ ದೇಶ ವಿದೇಶಗಳ ಸೈನಿಕರು ಸಮರಾಭ್ಯಾಸವನ್ನು ನಡೆಸಲು ಹೆಚ್ಚಾಗಿ ಬೆಳಗಾವಿಯನ್ನು ಆಯ್ಕೆಮಾಡಿಕೊಳ್ಳಲು ಕಾರಣವಾಗಿದೆ.

ಈ ರೀತಿಯಾಗಿ ಬೆಳಗಾವಿಯು ಪ್ರಾಗೈತಿಹಾಸಿಕ ಕಾಲದಿಂದ ಬ್ರಿಟಿಷರ ಆಳ್ವಿಕೆಯ ವರೆಗೆ ಹಲವಾರು ಸ್ಥಿತ್ಯಂತರಗಳನ್ನು ಎದುರಿಸಿಯೂ ಮಹತ್ವದ ನೆಲೆಯಾಗಿ ರೂಪಗೊಂಡಿರುವುದು ಬೆಳಗಾವಿಯ ವೈಶಿಷ್ಟ್ಯವಾಗಿದೆ. ಬ್ರಿಟಿಷರ ಆಳ್ವಿಕೆಯ ಅವಧಿಯಲ್ಲಿಯೇ ದೇಶವ್ಯಾಪಿ ನಡೆದ ಸ್ವಾತಂತ್ರ್ಯ ಹೋರಾಟವು ಇತಿಹಾಸದ ಒಂದು ಭಾಗವೇ ಆಗಿದೆ. ಅದರಂತೆ ಬೆಳಗಾವಿಯಲ್ಲಯೂ ಸ್ವಾತಂತ್ರ ಹೋರಾಟ ತೀವ್ರವಾಗಿ ಸಾಗಿ ಅದು ನಾಡಿನ ಏಕೀಕರಣ ಚಳುವಳಿಯ ಸ್ವರೂಪದಲ್ಲಿ ಮುಂದುವರೆದು ಕರ್ನಾಟಕ ಏಕೀಕರಣಗೊಳ್ಳುವಲ್ಲಿ ಮುಕ್ತಾಯಗೊಳ್ಳುತ್ತದೆ. ಈ ವಿಷಯವನ್ನು ಅಂದರೆ, ದೇಶದ ಸ್ವಾತಂತ್ರ್ಯ ಹೋರಾಟ ಹಾಗು ನಾಡಿನ ಏಕೀಕರಣ ಚಳುವಳಿಯನ್ನು ಪ್ರತ್ಯೇಕವಾದ ಅಧ್ಯಾಯದಲ್ಲಿ ಅಳವಡಿಸಿಕೊಂಡು ಅಧ್ಯಯನ ಮಾಡಲಾಗಿದೆ.



**ಸಂದರ್ಭ ಸೂಚಿ:**

೧. ಗ್ಯಾಝಟೇಯರ-ಮುಂಬೈ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು, ಪು.೩೫೭ ಸಂ. ವೆಂಕಟ ರಂಗೋಕಟ್ಟಿ. ಏಶಿಯನ್ ಎಜ್ಯುಕೇಶನಲ್ ಸರ್ವಿಸಸ್ ಹೊಸ ದೆಹಲಿ, ೧೮೯೩.

೨. ಅದೇ.

೩. ಡಾ. ಶಿ. ಬಾ ಪಾಟೀಲ: ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ ಪುಟ. ೨೯

೪. ಡಾ. ಅ. ಸುಂದರ: ಬೆಳಗಾವಿ ಜಿಲ್ಲೆಯ ಭವ್ಯ ಪರಂಪರೆ. ಪುಟ. ೧೯

೫. ಡಾ. ಎಂ. ಬಿ. ನೇಗಿನಹಾಳ: ನೇಗಿನಹಾಳ ಪ್ರಬಂಧಗಳು, ಪುಟ. ೫೨

೬. ಸ್ಫೂರ್ತಿ: ಸ್ಮರಣ ಸಂಚಿಕೆ ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ನಂ. ೨೪ನೆಯ ಜಾಂಬೊರೇಟ-೨೦೦೧. ಬೆಳಗಾವಿ ಪುಟ. ೬೧.

೭. ಡಾ. ಆರ್. ಎಂ. ಷಡಕ್ಷರಯ್ಯ: ಬೆಳಗಾವಿ ಜಿಲ್ಲೆಯ ಭವ್ಯ ಪರಂಪರೆ ಸಂ. ವ್ಹಿ.ಸಿ. ಮಾಲಗತ್ತಿ ಪುಟ. ೩೦

೮. ಅದೇ ಪುಟ. ೪೬.

೯. ವಿರೂಪಾಕ್ಷ ಬಡಿಗೇರ: ತಿರುಳ್ಗನ್ನಡ ಸಿರಿ-ಸ್ಮರಣ ಸಂಚಿಕೆ ಬೆಳಗಾವಿ ಜಿಲ್ಲಾ ನಾಲ್ಕನೆಯ ಕನ್ನಡ ಸಾಹಿತ್ಯ ಸಮ್ಮೇಳನ ಅದೇ ಪುಟ. ೭೦

೧೦. ಡಾ. ಆರ್. ಎಂ. ಷಡಕ್ಷರಯ್ಯ: ಬೆಳಗಾವಿ ಜಿಲ್ಲೆಯ ಭವ್ಯ ಪರಂಪರೆ ಸಂ. ವ್ಹಿ.ಸಿ. ಮಾಲಗತ್ತಿ, ಪುಟ. ೨೩.

೧೧. ಡಾ. ವಿರೂಪಾಕ್ಷ ಬಡಿಗೇರ-ತಿರುಳ್ಗನ್ನಡ ಸಿರಿ-ಸ್ಮರಣ ಸಂಚಿಕೆ ಬೆಳಗಾವಿ ಜಿಲ್ಲಾ ನಾಲ್ಕನೆಯ ಕನ್ನಡ ಸಾಹಿತ್ಯ ಸಮ್ಮೇಳನ ಒಕ್ಕುಂದ, ಪುಟ. ೭೦-೭೧.

೧೨. ಡಾ. ಆರ್. ಎಂ. ಷಡಕ್ಷರಯ್ಯ-ಬೆಳಗಾವಿ ಜಿಲ್ಲೆಯ ಭವ್ಯ ಪರಂಪರೆ ಸಂ. ವ್ಹಿ.ಸಿ. ಮಾಲಗತ್ತಿ, ಪುಟ. ೫೬.

೧೩. ಡಾ. ಶಿ. ಬಾ ಪಾಟೀಲ: ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ ಪುಟ. ೨೬.

೧೪. ಅದೇ ಪುಟ. ೩೦

೧೫. ಡಾ. ಎಸ್. ಎಂ. ಹರದಗಟ್ಟಿ: ಬೆಳಗಾವಿ ಜಿಲ್ಲೆ-ಐತಿಹಾಸಿಕ ಪಕ್ಷಿನೋಟ. ಬೆಳಗಾವಿ ಸಿರಿ 'ಸ್ಮರಣ ಸಂಚಿಕೆ' ಅ.ಭಾ. ೭೦ನೆಯ ಸಾಹಿತ್ಯ ಸಮ್ಮೇಳನ ಬೆಳಗಾವಿ, ೨೦೦೩. ಪುಟ. ೮೪.

೧೬. ಸ್ಮಿತಾ ಸುರೇಬಾನಕರ: ಬೆಳಗಾವಿ ಜಿಲ್ಲೆಯ ಭವ್ಯ ಪರಂಪರೆ. ಪುಟ. ೪೩

೧೭. ಆರ್. ಎಸ್. ಚಾಪಗಾಂವಿ: ವಿಜಯ ಕರ್ನಾಟಕ, ಮಾರ್ಚ ೧೧, ೨೦೧೧. ಪುಟ.೧೦

೧೮. ಸರಜೂ ಕಾಟ್ಕರ: ಬೆಳಗಾವಿ ಸಂಸ್ಕೃತಿ, ಪ್ರಸ್ತಾವನೆ, ಪುಟ. ೯.

೧೯. ಡಾ. ಅ. ಸುಂದರ: ಅದೇ ಪುಟ. ೯.

೨೦. ಶೀಲಾಕಾಂತ ಪತ್ತಾರ-ಬಾದಾಮಿ ಸಾಂಸ್ಕೃತಿಕ ಅಧ್ಯಯನ, ಪುಟ. ???

೨೧. ಡಾ. ಅ. ಸುಂದರ: ಅದೇ ಪುಟ. ೩.

೨೨. ಡಾ. ಎಂ. ಬಿ.ನೇಗಿನಹಾಳ: ನೇಗಿನಹಾಳ ಪ್ರಬಂಧಗಳು, ಪುಟ. ೫೨.

೨೩. ಡಾ. ಅ. ಸುಂದರ: ಅದೇ ಪುಟ. ೧೯.

೨೪. ಡಾ. ಆರ್.ಎಂ. ಷಡಕ್ಷರಯ್ಯ: ಬೆಳಗಾವಿ ಜಿಲ್ಲೆಯ ಪುರಾತತ್ತ್ವ ಅಧ್ಯಕ್ಷೀಯ ಭಾಷಣ.

೨೫. ಬಿ.ಆರ್. ಹಂದೂರ: ಜೈನ ಪರಂಪರೆಗೆ ಬೆಳಗಾವಿ ಪ್ರಾದೇಶಿಕ ಕೊಡುಗೆ, ಪುಟ. ೫.

೨೬. ಡಾ. ಎಂ. ಬಿ.ನೇಗಿನಹಾಳ ಸಾಮ್ರಾಜ್ಯ ಉದಯ, ಶಾತವಾಹನರು, ಕರ್ನಾಟಕ ಚರಿತ್ರೆಮಾಲೆ-೧, ಪುಟ. ೩೧೬.

೨೭. ಡಾ. ಅ. ಸುಂದರ: ವೇಣುನಾದ, ಪುಟ. ೩.

೨೮. ಡಾ. ಎಂ. ಬಿ. ನೇಗಿನಹಾಳ: ನೇಗಿನಹಾಳ ಪ್ರಬಂಧಗಳು, ಪುಟ. ೫೩.

೨೯. ಡಾ. ಅ. ಸುಂದರ: ವೇಣುನಾದ, ಪುಟ. ೫.

೩೦. ಡಾ. ಅ. ಸುಂದರ: ಬೆಳಗಾವಿ ಜಿಲ್ಲೆಯ ಭವ್ಯ ಪರಂಪರೆ, ಪುಟ. ೧೯.

೩೧. ಕರ್ನಾಟಕ ಚರಿತ್ರೆ ಮಾಲೆ-೧, ಪುಟ. ೩೧೩.

೩೨. ಡಾ. ಎಂ. ಬಿ. ನೇಗಿನಹಾಳ: ನೇಗಿನಹಾಳ ಪ್ರಬಂಧಗಳು, ಪುಟ. ೫೩.

೩೩. ಬಾ.ರಾ. ಗೋಪಾಲ: ಕರ್ನಾಟಕ ಚರಿತ್ರೆ, ಸಂ-೧, ಪುಟ. ೩೬೪

೩೪. ಡಾ. ಆರ್.ಎಂ. ಷಡಕ್ಷರಯ್ಯ: ಅದೇ ಪುಟ. ೨೫.

೩೫. ಡಾ. ಆರ್.ಎಂ. ಷಡಕ್ಷರಯ್ಯ: ಬೆಳಗಾವಿ ಜಿಲ್ಲೆಯ ಪುರಾತತ್ತ್ವ ಅಧ್ಯಕ್ಷೀಯ ಭಾಷಣ. ಪುಟ. ೧೭.

೩೬. ಡಾ. ವ್ಹಿ.ಎಸ್. ಎಲಿಜಬೆತ್: ಕರ್ನಾಟಕ ಚರಿತ್ರೆ, ಸಂ-೨, ಪುಟ. ೨೧.

೩೭. ಡಾ. ಆರ್.ಎಂ. ಷಡಕ್ಷರಯ್ಯ: ಬೆಳಗಾವಿ ಜಿಲ್ಲೆಯ ಭವ್ಯ ಪರಂಪರೆ ಸಂ. ವ್ಹಿ.ಸಿ. ಮಾಲಗತ್ತಿ ಪುಟ. ೪೧.

೩೮. ಶಿ. ಬಾ. ಪಾಟೀಲ: ಬೆಳಗಾವಿ ಜಿಲ್ಲೆಯ ಭವ್ಯ ಪರಂಪರೆ ಸಂ. ವ್ಹಿ.ಸಿ. ಮಾಲಗತ್ತಿ ಪುಟ. ೫೬.

೩೯. ಡಾ. ಆರ್.ಎಂ. ಷಡಕ್ಷರಯ್ಯ: ಬೆಳಗಾವಿ ಬೆಳಕು, ಪುಟ. ೧೬.

೪೦. ಡಾ. ಎಸ್. ಎಂ. ಹರದಗಟ್ಟಿ: ಬೆಳಗಾವಿ ಜಿಲ್ಲೆ-ಐತಿಹಾಸಿಕ ಪಕ್ಷಿನೋಟ. ಪ್ರ: ಬೆಳಗಾವಿ ಸಿರಿ 'ಸ್ಮರಣ ಸಂಚಿಕೆ' ಅ. ಭಾ. ೭೦ನೆಯ ಸಾಹಿತ್ಯ ಸಮ್ಮೇಳನ ಬೆಳಗಾವಿ ೨೦೦೩. ಪುಟ. ೮೦.

೪೧. ಅದೇ, ಪುಟ. ೮೧.

೪೨. ಚೆನ್ನಕ್ಕ ಪಾವಟೆ-ಶಾಸನಗಳಲ್ಲಿ ಮಹಿಳೆಯರ ಕೊಡುಗೆ, ಬೆಳಗಾವಿ ಜಿಲ್ಲೆಯ ಪುರಾತತ್ತ್ವ, ಪುಟ. ೨೦೩.

೪೩. ಡಾ. ಶಿ.ಬಾ ಪಾಟೀಲ-ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ ಪುಟ. ೧೦.

೪೪. ಅದೇ, ಪುಟ. ೧೧.

೪೫. ಅದೇ, ಪುಟ. ೧೮.

೪೭. ವಿ.ಸೀತಾರಾಮಯ್ಯ: ನೇಮಿಚಂದ್ರ ಕವಿ ಕಾವ್ಯ ಮಾಲೆ-೧೮, ಪುಟ. ೩.

೪೮. ಡಾ. ಶಿ.ಬಾ. ಪಾಟೀಲ: ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ ಪು. ೧೯.

೪೯. ರಂಗರಾಜ ವನದುರ್ಗ: ಬೆಳಗಾವಿ ತಾಲೂಕಿನ ಶಾಸನ ಸಂಪತ್ತು, ವೇಣು ಸಂಪದ, ಪು. ೬.

೫೦. JBRAS.Vol-10, p.240.

೫೧. ಭುಜೇಂದ್ರ ಮಹಿಶವಾಡಿ: ವೇಣು ಸಂಪದ, ಪುಟ. ೮.

೫೨. ಡಾ. ಶ್ರೀನಿವಾಸ ರಿತ್ತಿ: ಕರ್ನಾಟಕ ಚರಿತ್ರೆ, ಸಂಪುಟ-೨. ಪುಟ. ೭೭.

೫೩. ಡಾ. ಶಿ. ಬಾ. ಪಾಟೀಲ-ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ ಪುಟ. ೨೧.

೫೪. ಡಾ. ರಂಗರಾಜ ವನದುರ್ಗ-ಬೆಳಗಾವಿ ತಾಲೂಕಿನ ಶಾಸನ ಸಂಪತ್ತು, ವೇಣು ಸಂಪದ. ಪುಟ. ೭.

೫೫. ಅದೇ ಪುಟ. ೬.

೫೬. ಭುಜೇಂದ್ರ ಮಹಿಶವಾಡಿ: ವೇಣು ಸಂಪದ, ಪುಟಟ. ೨.

೫೭. ಸ್ಮಿತಾ ಸುರೇಬಾನಕರ: ಬೆಳಗಾವಿ ಜಿಲ್ಲೆಯ ಭವ್ಯ ಪರಂಪರೆ, ಪುಟ. ೬೮.

೫೮. ಗ್ಯಾಝುಟೀಯರ-ಮುಂಬೈ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು ಪು.೩೪೬, ಸಂ. ವೆಂಕಟ ರಂಗೋಕಟ್ಟಿ. ಏಶಿಯನ್ ಎಜ್ಯುಕೇಶನಲ್ ಸರ್ವಿಸಸ್ ಹೊಸ ದೆಹಲಿ. ೧೮೯೩.

೫೯. ಸ್ಮಿತಾ ಸುರೇಬಾನಕರ: ಬೆಳಗಾವಿ ಜಿಲ್ಲೆಯ ಭವ್ಯ ಪರಂಪರೆ, ಪುಟ. ೬೮.

೬೦. ಡಾ. ಕೃಷ್ಣಕೊಲ್ಹಾರ ಕುಲಕರ್ಣಿ-ಬುಸಾತಿನೆ ಸಲಾತಿನೆ, ಪು. ೪೯.

೬೧. ಕರ್ನಾಟಕ ಮತ್ತು ಪರ್ಶಿಯನ್ ಉರ್ದು ಶಾಸನಗಳು, ಪುಟ. ೧೨.

೬೨. ಸ್ಮಿತಾ ಸುರೇಬಾನಕರ-ಬೆಳಗಾವಿ ಜಿಲ್ಲೆಯ ಭವ್ಯ ಪರಂಪರೆ. ಪುಟ. ೭೪.

೬೩. ಕರ್ನಾಟಕ ಮತ್ತು ಪರ್ಶಿಯನ್ ಉರ್ದು ಶಾಸನಗಳು, ಪುಟ. ೧೩.

೬೪. ಅದೇ, ಪುಟ. ೧೩

೬೫. ಡಾ. ಕೃಷ್ಣಕೊಲ್ಹಾರ ಕುಲಕರ್ಣಿ-ಬುಸಾತಿನೆ ಸಲಾತಿನೆ, ಪುಟ. ೫೫.

೬೬. ಗ್ಯಾಝುಟೀಯರ-ಮುಂಬೈ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು, ಪು.೪೯೪, ಸಂ. ವೆಂಕಟ ರಂಗೋಕಟ್ಟಿ. ಏಶಿಯನ್ ಎಜ್ಯುಕೇಶನಲ್ ಸರ್ವಿಸಸ್ ಹೊಸ ದೆಹಲಿ, ೧೮೯೩.

೬೭. ಸ್ಮಿತಾ ಸುರೇಬಾನಕರ: ಬೆಳಗಾವಿ ಜಿಲ್ಲೆಯ ಭವ್ಯ ಪರಂಪರೆ, ಪುಟ. ೭೫.

೬೮. ಅದೇ, ಪುಟ. ೭೫.

೬೯. ಅದೇ, ಪುಟ. ೭೭.

೭೦. ಡಾ. ಎಂ. ವೈ. ಸಾವಂತ: ಮರಾಠರು ಪೇಶ್ವೆಯರು ಹಾಗೂ ಸಂಸ್ಥಾನಗಳು, ಬೆಳಗಾವಿ ಜಿಲ್ಲೆಯ ಭವ್ಯ ಪರಂಪರೆ, ಪುಟ. ೭೯.

೭೧. ಗೋವಿಂದಮೂರ್ತಿ: ದೇಸಾಯಿ–ಸವಣೂರು ನವಾಬರು, ಪುಟ. ೨೨.

೭೨. ಡಾ. ಎಂ. ವೈ. ಸಾವಂತ: ಬೆಳಗಾವಿ ಜಿಲ್ಲೆಯ ಭವ್ಯ ಪರಂಪರೆ, ಪುಟ. ೮೧.

೭೩. ಅದೇ ಪುಟ. ೮೨.

೭೪. ಗ್ಯಾಝೆಟೀಯರ : ಮುಂಬೈ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು ಪುಟ. ೩೫೭ ಸಂ. ವೆಂಕಟ ರಂಗೋಕಟ್ಟಿ, ಏಶಿಯನ್ ಎಜ್ಯುಕೇಶನಲ್ ಸರ್ವಿಸಸ್ ಹೊಸ ದೆಹಲಿ. ೧೮೯೩.

೭೫. ಡಾ. ಎಸ್. ಎಂ. ಹರದಗಟ್ಟಿ: ಬೆಳಗಾವಿ ಜಿಲ್ಲೆ–ಐತಿಹಾಸಿಕ ಪಕ್ಷಿನೋಟ. ಬೆಳಗಾವಿ ಸಿರಿ 'ಸ್ಮರಣ ಸಂಚಿಕೆ' ಅ.ಭಾ.೭೦ನೆಯ ಸಾಹಿತ್ಯ ಸಮ್ಮೇಳನ ಬೆಳಗಾವಿ ೨೦೦೩. ಪುಟ. ೮೩.

೭೬. ಡಾ. ಎಸ್. ಶೆಟ್ಟರ್: ಕಿತ್ತೂರ ಸಂಸ್ಥಾನದ ಇತಿಹಾಸ, ಪ್ರಸಾರಾಂಗ ಕ.ವಿ.ವಿ. ಧಾರವಾಡ, ೨೦೦೪. ಕಿತ್ತೂರು ನಾಡಿನ ಇತಿಹಾಸ ಹಾಗೂ ಸಂಸ್ಕೃತಿ. ಪುಟ. ೧೧೪.

೭೭. ಡಾ. ಎಂ. ವೈ ಸಾವಂತ: ಮರಾಠಿ (ಮೋಡಿ) ಕಡತಗಳಲ್ಲಿ ಕಿತ್ತೂರಿನ ಇತಿಹಾಸ. ಪುಟ. ೨೭೨೦, ಕಿತ್ತೂರ ಇತಿಹಾಸ ೧೯೯೮, ಜಿಲ್ಲಾಧಿಕಾರಿಗಳು ಬೆಳಗಾವಿ ಜಿಲ್ಲೆ.

೭೮. ಪ್ರೊ. ವಿ.ಜಿ.ಮಾರಿಹಾಳ: ಮಹಾರಾಣಿ ಕಿತ್ತೂರ ಚೆನ್ನಮ್ಮ: ಜೀವನ ಮತ್ತು ಸಾಧನೆ. ಪುಟ. ೫೪. ಕಿತ್ತೂರ ಇತಿಹಾಸ ಪ್ರ: ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ, ೧೯೯೮.

೭೯. ಡಾ. ಸಿ.ವ್ಹಿ. ಮಠದ: ಕಿತ್ತೂರು ನಾಡಿನ ವೀರರು, ಕಿತ್ತೂರು ನಾಡಿನ ಇತಿಹಾಸ ಹಾಗೂ ಸಂಸ್ಕೃತಿ ಪ್ರಸಾರಾಂಗ ಕ.ವಿ.ವಿ. ೨೦೦೪. ಪುಟ. ೮೭.

೮೦. ಪ್ರೊ. ವಿ.ಜಿ.ಮಾರಿಹಾಳ:ಮಹಾರಾಣಿ ಕಿತ್ತೂರ ಚೆನ್ನಮ್ಮ: ಜೀವನ ಮತ್ತು ಸಾಧನೆ. ಪುಟ. ೫೫. ಕಿತ್ತೂರ ಇತಿಹಾಸ, ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ, ೧೯೯೮.

೮೧. ಡಾ. ಎಸ್. ಶೆಟ್ಟರ್: ಕಿತ್ತೂರ ಸಂಸ್ಥಾನದ ಇತಿಹಾಸ (ಅಕ್ಟೋಬರ–ಡಿಸೆಂಬರ ೧೮೨೪) ಕಿತ್ತೂರ ನಾಡಿನ ಇತಿಹಾಸ ಹಾಗೂ ಸಂಸ್ಕೃತಿ. ಪುಟ. ೧೪೫..ಪ್ರ: ಕ.ವಿ.ವಿ.ಧಾರವಾಡ ೨೦೦೪.

೮೨. ಡಾ. ಎಸ್. ಶೆಟ್ಟರ್–ಕಿತ್ತೂರ ಸಂಸ್ಥಾನದ ಇತಿಹಾಸ (ಅಕ್ಟೋಬರ–ಡಿಸೆಂಬರ ೧೮೨೪) ಕಿತ್ತೂರ ನಾಡಿನ ಇತಿಹಾಸ ಹಾಗೂ ಸಂಸ್ಕೃತಿ. ಪುಟ. ೧೬೯. ಕ.ವಿ.ವಿ.ಧಾರವಾಡ ೨೦೦೪.

೮೩. ಡಾ. ಎಸ್. ಶೆಟ್ಟರ್–ಕಿತ್ತೂರ ಸಂಸ್ಥಾನದ ಇತಿಹಾಸ ಪುಟ. ೧೮೫. ಕಿತ್ತೂರ ನಾಡಿನ ಇತಿಹಾಸ ಹಾಗೂ ಸಂಸ್ಕೃತಿ. ಪುಟ ೧೪೫. ಕ.ವಿ.ವಿ.ಧಾರವಾಡ ೨೦೦೪.

೮೪. ಪ್ರೊ. ವಿ.ಜಿ.ಮಾರಿಹಾಳ: ಶೂರ ಸಂಗೊಳ್ಳಿರಾಯಣ್ಣ ಕೃತಿ: ಕಿತ್ತೂರು ಇತಿಹಾಸ ಪು.೧೧೦. ಜಿಲ್ಲಾಧಿಕಾರಿಗಳು ಬೆಳಗಾವಿ. ೧೯೯೮.

೮೫. ಡಾ. ಸಿ.ವ್ಹಿ. ಮಠದ–ಕಿತ್ತೂರು ನಾಡಿನ ವೀರರು, ಕಿತ್ತೂರು ನಾಡಿನ ಇತಿಹಾಸ ಹಾಗೂ ಸಂಸ್ಕೃತಿ, ಪ್ರಸಾರಾಂಗ ಕ.ವಿ.ವಿ. ೨೦೦೪. ಪುಟ. ೧೦೫.



೮೬. ಅದೇ ಪುಟ–೧೦೮.

೮೭. ಗ್ಯಾಝೆಟೀಯರು–ಮುಂಬೈ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು ಪುಟ. ೩೬೪, ಸಂ: ವೆಂಕಟರಂಗೋ ಕಟ್ಟಿ, ಮುಂಬಯಿ ಗವರ್ಮೆಂಟ ಸೆಂಟ್ರಲ್ ಬುಕ್ ಡಿಪೋ, ೧೮೯೩.

೮೮. ಅದೇ.

೮೯. ಅದೇ.

೯೦. ಅದೇ.

೯೧. ಡಾ. ಕೃಷ್ಣಕೊಲ್ಹಾರ ಕುಲಕರ್ಣಿ: ಅಖಂಡ ಕರ್ನಾಟಕದ ಹೆಜ್ಜೆಗಳು. ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೨೦೦೬. ಪುಟ–೨.



## ಅಧ್ಯಾಯ : ಮೂರು

# ಬೆಳಗಾವಿ : ಸ್ವಾತಂತ್ರ್ಯ ಹೋರಾಟ ಹಾಗೂ ಏಕೀಕರಣ ಚಳುವಳಿ

## ೧. ಸ್ವಾತಂತ್ರ್ಯ ಹೋರಾಟ

**ಹಿನ್ನೆಲೆ:**

ಬೆಳಗಾವಿಯನ್ನು ಕೇಂದ್ರವಾಗಿಸಿಕೊಂಡು ಉತ್ತರ ಕರ್ನಾಟಕದ ಜನ ಹೇಗೆ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದರು ಎಂಬುದು ಬೆಳಗಾವಿ ಇತಿಹಾಸದ ಒಂದು ಭಾಗವಾಗಿಯೇ ಬರುತ್ತದೆ.

ಕ್ರಿ. ಶ. ೧೮೧೮ರಲ್ಲಿ ಬೆಳಗಾವಿಯಲ್ಲಿ ಪೇಶ್ವೆಯವರ ಆಡಳಿತ ಕೊನೆಗೊಂಡು ಬ್ರಿಟಿಷ್ ಆಡಳಿತ ಪ್ರಾರಂಭಗೊಂಡಿತು. ಬೆಳಗಾವಿಯ ಮಟ್ಟಿಗೆ ಇದೊಂದು ಮಹತ್ವದ ಬೆಳವಣಿಗೆ. ರಟ್ಟರ ಕಾಲದಲ್ಲಿ ಸ್ಥಿರ ಆಡಳಿತವನ್ನು ಕಂಡು, ವಿಜಾಪುರದ ಆದಿಲ್‌ಶಹನ ಆಡಳಿತದಲ್ಲಿ ಅಸದಖಾನನ ಮೂಲಕ ಉತ್ತಮ ಆಡಳಿತವನ್ನು ಕಂಡ ಬೆಳಗಾವಿಗೆ ಮುಂದೆ ಬಂದ ರಾಜರು ಸ್ಥಿರವಾಗಿ ನಿಲ್ಲದೆ ಕೇವಲ ತಮ್ಮ ಅಧಿಕಾರದ, ಪರಾಕ್ರಮದ, ದರ್ಪದ ಸಂಕೇತವಾಗಿ ನಿಂತರು. ಹೀಗಾಗಿ ಬೆಳಗಾವಿ ಎನ್ನುವುದು ಸಾಂಸ್ಕೃತಿಕವಾಗಿ ರೂಪಗೊಳ್ಳದೆ ಹತ್ತಾರು ಭಾಗಗಳಾಗಿ ವಿವಿಧ ರಾಜರ ಆಳ್ವಿಕೆಗೆ ಒಳಗಾಗಿತ್ತು.

ಬ್ರಿಟಿಷರ ಆಳ್ವಿಕೆ ಬೆಳಗಾವಿಗೆ ಹೊಸರೂಪವನ್ನು, ಶಕ್ತಿಯನ್ನು, ಬದುಕನ್ನು ನೀಡಿತು. ಹೊಸ ಆಡಳಿತ ಪದ್ಧತಿಯಿಂದ ಜನಜೀವನದಲ್ಲಿ ಬದಲಾವಣೆಗಳು ಕಾಣತೊಡಗಿದವು. ಈ ಸಂದರ್ಭದಲ್ಲಿ ಬ್ರಿಟಿಷರು ತಮ್ಮ ನೆಲೆಯನ್ನು ಗಟ್ಟಿಗೊಳಿಸುವ ಸಲುವಾಗಿ ಸ್ಥಳೀಯ ಸಂಸ್ಥಾನಗಳ ಮಧ್ಯದಲ್ಲಿ ವೈಷಮ್ಯ ಮೂಡಿಸಿ ಒಂದು ಸಂಸ್ಥಾನದ ಪರವಾಗಿ ನಿಂತು ಇನ್ನೊಂದು ಸಂಸ್ಥಾನವನ್ನು ನಾಶಮಾಡತೊಡಗಿದರು. ಹೀಗಾಗಿ ಅರಸೊತ್ತಿಗೆಯ ಮೇಲೆ ಇನ್ನೂ ಭಕ್ತಿ,

ವಿಶ್ವಾಸ, ನಂಬಿಕೆ, ಶ್ರದ್ಧೆಯನ್ನು ಹೊಂದಿದ ಜನರ ಭಾವನೆಗಳು ಕೆರಳಿಸಿದವು. ಇವರು ನಮ್ಮಲ್ಲಿ ಒಡಕು ಹುಟ್ಟಿಸಿ ಹಾಳುಮಾಡಲು ಬಂದ ಪರಕೀಯರು ಎನ್ನುವ ಸತ್ಯ ಗೊತ್ತಾಗತೊಡಗಿತು. ರಾಜಮಹಾರಾಜರಾಗಿ ಮೆರೆದವರೆಲ್ಲಾ ದುರ್ಮರಣವನ್ನು ಹೊಂದುವುದು. ಸೆರೆಮನೆ ಸೇರುವುದು, ರಾಜ್ಯದಿಂದ ಓಡಿಹೋಗುವುದನ್ನು ನೋಡಲಾಗದ ಜನರು ರೋಷಿ ಹೋದರು. ದಿನದಿಂದ ದಿನಕ್ಕೆ ಬ್ರಿಟಿಷರ ಕಾನೂನಿನಲ್ಲಿ ಕಂಡುಬಂದ ಬಿಗಿ ಹಿಡಿತ ಮತ್ತು ಪಾಶ್ಚಾತ್ಯ ಶಿಕ್ಷಣದಿಂದ ಉಂಟಾದ ಜಾಗೃತಿ ಇವೆಲ್ಲವುಗಳಿಂದ ಜನರಲ್ಲಿ ರಾಷ್ಟ್ರೀಯ ಮನೋಭಾವನೆ ಮೂಡತೊಡಗಿತು.

ದೇಶದಲ್ಲಿಯೇ ಮೊಟ್ಟಮೊದಲ ಬಾರಿಗೆ (ಕ್ರಿ. ಶ. ೧೮೨೩) ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯದ ಧ್ವನಿ ಕೇಳಿ ಬಂದದ್ದು ಬೆಳಗಾವಿ ಜಿಲ್ಲೆಯ ಕಿತ್ತೂರು ಚೆನ್ನಮ್ಮನಿಂದ. ಬ್ರಿಟಿಷರ ಆಡಳಿತದ ವಿರುದ್ಧ ಹೋರಾಟಕ್ಕಿಳಿದ ಅಲ್ಪ ಸಮಯದಲ್ಲಿಯೇ ಈ ಸಂಸ್ಥಾನ ಪತನ ಕಂಡದ್ದು ಒಂದು ದೊಡ್ಡ ದುರಂತ. ಆದರೆ ಈ ದುರಂತವೇ ಮುಂದಿನ ಸ್ವಾತಂತ್ರ್ಯ ಸಂಗ್ರಾಮಕ್ಕೆ ಸ್ಫೂರ್ತಿಯಾಗಿ ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿದೆ. ಕಿತ್ತೂರಿನ ಯುದ್ಧದ ಸಂದರ್ಭದಲ್ಲಿ ಬೆಳಗಾವಿಯೇ ಬ್ರಿಟಿಷರ ಎಲ್ಲ ಚಟುವಟಿಕೆಗಳಿಗೆ ಕೇಂದ್ರವಾಗಿ ರೂಪಗೊಂಡಿತ್ತು. ಕಿತ್ತೂರು ಮತ್ತು ಬೆಳಗಾವಿಗಳ ಮಧ್ಯದ ಅಂತರ ೪೫ ಕಿ. ಮೀ. ಹೀಗಾಗಿ ಹಗಲು, ರಾತ್ರಿಯೆನ್ನದೆ ನಿರಂತರ ಯುದ್ಧ ಚಟುವಟಿಕೆಗಳು ನಡೆದವು. ಇವೆಲ್ಲವುಗಳನ್ನು ಮೌನವಾಗಿ ನೋಡುವುದಷ್ಟೇ ಇಲ್ಲಿಯ ಜನರ ಕೆಲಸವಾಗಿತ್ತು. ಕಿತ್ತೂರಿನ ಪತನ, ಚನ್ನಮ್ಮಳ ಬಂಧನ, ಅವಳ ಸಾವು, ರಾಯಣ್ಣನ ಹೋರಾಟ, ಬಂಧನ, ಪಾಶಿಶಿಕ್ಷೆ ಅಲ್ಲದೆ ಕ್ರಿ. ಶ. ೧೮೫೮ ರ ಜೂನ್ ೧೨ ರಂದು ಬೆಳಗಾವಿಯ ಸಾರ್ವಜನಿಕರ ಎದುರಿಗೇ ನರಗುಂದ ಬಾಬಾ ಸಾಹೇಬರಿಗೊದಗಿದ ಗಲ್ಲುಶಿಕ್ಷೆ ಮುಂತಾದ ಘಟನೆಗಳನ್ನು ಕಣ್ಣಾರೆ ಕಂಡಿದ್ದ ಜನರ ಮೌನ ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ರೋಷವಾಗಿ ಪ್ರತಿಭಟಿಸಿತು. ಹೀಗಾಗಿ ದೇಶದಲ್ಲಿಯೇ ಅತ್ಯಂತ ಪ್ರಬಲವಾದ ಪ್ರತಿಭಟನೆ, ಹೋರಾಟ ಬೆಳಗಾವಿ ನೆಲದಲ್ಲಿ ಕಂಡು ಬಂದವು.

ಈ ಸಂದರ್ಭದಲ್ಲಿಯೇ ಕ್ರಿ. ಶ. ೧೮೯೦ ರಲ್ಲಿ ಸ್ವಾಮಿ ವಿವೇಕಾನಂದರು ಬೆಳಗಾವಿಯಲ್ಲಿ ನೀಡಿದ ಉಪನ್ಯಾಸಗಳಿಂದ ಜನರು ಹೆಚ್ಚು ಧೈರ್ಯ, ಸ್ಥೈರ್ಯ ಹಾಗೂ ಆತ್ಮವಿಶ್ವಾಸವನ್ನು ಹೊಂದುವಂತಾಯಿತು. ಭಯವನ್ನು ಬಿಡಿರೆಂದು ವಿವೇಕಾನಂದರು ಪರಿಣಾಮಕಾರಿಯಾಗಿ ಹೇಳಿದ್ದರಿಂದ ಅವರು ಹೋದಲೆಲ್ಲಾ ರಾಷ್ಟ್ರಪ್ರೇಮದ ಉತ್ಕಟತೆ ಸ್ಪಷ್ಟವಾಗಿ ಗೋಚರವಾಯಿತು.

ಈ ಎಲ್ಲ ಹಿನ್ನೆಲೆಯಲ್ಲಿ ಬೆಳಗಾವಿಯಲ್ಲಿ ನಡೆದ ಸ್ವಾತಂತ್ರ್ಯ ಹೋರಾಟವು ದೇಶದ ಸ್ವಾತಂತ್ರ್ಯ ಚರಿತ್ರೆಯಲ್ಲಿ ಮಹತ್ವವನ್ನು ಪಡೆದುಕೊಂಡಿದೆ. ಈ ಸ್ವಾತಂತ್ರ್ಯ ಹೋರಾಟದ ಜೊತೆ ಜೊತೆಯಲ್ಲಿಯೇ ಕರ್ನಾಟಕ ಏಕೀಕರಣ ಚಳುವಳಿಯೂ ಸಾಗಿ 'ಸ್ವತಂತ್ರ ಭಾರತ ಅಖಂಡ ಕರ್ನಾಟಕ' ಎಂಬ ವಿಶಿಷ್ಟ ರೀತಿಯ ಹೋರಾಟ ಬೆಳಗಾವಿ ನೆಲದಲ್ಲಿ ನಡೆಯಿತು. ಈ ಹೋರಾಟಗಳ ಜೊತೆಜೊತೆಯಲ್ಲಿಯೇ ಬೆಳಗಾವಿಯು ಸಾಂಸ್ಕೃತಿಕವಾಗಿ ವಿಕಾಸವಾಗತೊಡಗಿದ್ದು ಒಂದು ವೈಶಿಷ್ಟ್ಯ.

ಬೆಳಗಾವಿಯಲ್ಲಿ ಬ್ರಿಟಿಷರ ವಿರುದ್ಧ ಹೋರಾಟದ ಮೊದಲ ಹೆಜ್ಜೆ ಗುರುತುಗಳನ್ನು ಇಲ್ಲಿ ಸ್ಥಾಪಿತವಾದ ಬ್ರಿಟಿಷರ ಮಿಲಟರಿ ನೆಲೆಯಿಂದ ಗುರುತಿಸಬೇಕಾಗುತ್ತದೆ. ಕ್ರಿ. ಶ. ೧೮೫೭ ರಲ್ಲಿ ಬ್ರಿಟಿಷರ ಸೈನ್ಯದಲ್ಲಿದ್ದ ಐದು ಜನ ಸೈನಿಕರು ಬಂಡಾಯವೆದ್ದರು.[೧] ಆಗ ಅವರನ್ನು ವಿಚಾರಣೆಗೆ ಒಳಪಡಿಸಿ ಅವರನ್ನು ಗಲ್ಲಿಗೇರಿಸಲಾಯಿತು. ಸೈನಿಕರು ಬಂಡಾಯವೆದ್ದುದ್ದು ಗಲ್ಲಿಗೇರಿಸುವಷ್ಟು ದೊಡ್ಡ ಅಪರಾಧವಲ್ಲದಿದ್ದರೂ  ಈ ಶಿಕ್ಷೆ ಗಲ್ಲಿಗೇರಿಲಾಯಿತು. ಸೈನಿಕರು ಬಂಡಾಯವೆದ್ದುದ್ದು ಗಲ್ಲಿಗೇರಿಸುವಷ್ಟು ದೊಡ್ಡ ಅಪರಾಧವಲ್ಲದಿದ್ದರೂ ಈ ಶಿಕ್ಷೆ ನೀಡಿದ್ದರ ಉದ್ದೇಶ ಜನರಲ್ಲಿ ಅಂಜಿಕೆ ಉಂಟುಮಾಡುವುದಲ್ಲದೆ ಬಂಡಾಯ, ಪ್ರತಿಭಟನೆಯನ್ನು ಹತ್ತಿಕ್ಕುವುದೇ ಆಗಿತ್ತೆಂಬುದು ಸ್ಪಷ್ಟವಾಗುತ್ತದೆ. ಈ ಅವಧಿಯಲ್ಲಿಯೇ ಬೆಳಗಾವಿಯ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಬ್ರಿಟಿಷರ ವಿರುದ್ಧ ಬಂಡಾಯಗಳೆದ್ದು ಹಲವಾರು ಜನರ ಬಂಧನ, ಮರಣ ದಂಡನೆ, ಫಾಶಿ ಶಿಕ್ಷೆಗಳಾದವು.

ರಾಷ್ಟ್ರೀಯ ಕಾಂಗ್ರೆಸ್ ಪಕ್ಷದ ಸ್ಥಾಪನೆ ದೇಶದ ಇತಿಹಾಸದಲ್ಲಿ ಮಹತ್ವದ ಘಟ್ಟ, ದೇಶವನ್ನು ಸ್ವತಂತ್ರಗೊಳಿಸುವ ಉದ್ದೇಶದೊಂದಿಗೆ ಉದಯವಾದ ಈ ಪಕ್ಷದ ಸ್ಥಾಪನೆಯೊಂದಿಗೆ ಸ್ವಾತಂತ್ರ್ಯ ಹೋರಾಟಕ್ಕೆ ಸ್ಪಷ್ಟ ವೇದಿಕೆ ಸಿದ್ಧವಾಯಿತು. ಕ್ರಿ. ಶ. ೧೮೮೫ ರಲ್ಲಿ ರಾಷ್ಟ್ರೀಯ ಕಾಂಗ್ರೆಸ್ ಸ್ಥಾಪನೆ ಮಾಡಲು ಮುಂಬಯಿಯಲ್ಲಿ ಸಭೆ ಸೇರಿದ ಸಂದರ್ಭದಲ್ಲಿ ಬೆಳಗಾವಿಯಿಂದ ಭಾವೂ ಸಾಹೇಬ ಭಾಟೆ ಎಂಬುವವರು ಹೋಗಿದ್ದರು. ಮುಂದೆ ನಡೆದ ಕಾಂಗ್ರೆಸಿನ ಮೊದಲನೆ, ಹಾಗೂ ಎರಡನೆಯ ಅಧಿವೇಶನಕ್ಕೂ ಭಾಟೆಯವರು ಪ್ರತಿನಿಧಿಯಾಗಿ ಬೆಳಗಾವಿಯಿಂದ ಹೋಗಿದ್ದರು. ಮುಂದಿನ ಕೆಲವು ಅಧಿವೇಶನಗಳಿಗೆ ಭಾಟೆಯವರ ಜೊತೆಗೆ ವಿಷ್ಣುಪಂತ ನಾತೂ, ಛತ್ರೆ ವಕೀಲರು, ಭಾವೂ ಸಾಹೇಬ ದೇಶಪಾಂಡೆ ಮುಂತಾದವರು ಭಾಗವಹಿಸುತ್ತಿದ್ದರು. ದೇಶದಲ್ಲಿ ಇನ್ನೂ ರಾಷ್ಟ್ರೀಯ ಮನೋಭಾವನೆ ಜನರಲ್ಲಿ ಅಷ್ಟಾಗಿ ಮೂಡಿರದ ಕಾಲದಲ್ಲಿ ಬೆಳಗಾವಿಯಲ್ಲಿ ಬ್ರಿಟಿಷರ ವಿರುದ್ಧ ಹೋರಾಟ ಚಾಲನೆ ಪಡೆದುಕೊಂಡಿತ್ತು.

ಕ್ರಿ. ಶ. ೧೮೮೭ ರಲ್ಲಿ ಮದ್ರಾಸ್‌ನಲ್ಲಿ ನಡೆದ ಕಾಂಗ್ರೆಸ್ ಅಧಿವೇಶನಕ್ಕೆ ಬೆಳಗಾವಿ ಜಿಲ್ಲೆಯಿಂದ ಭಾವೂ ಸಾಹೇಬ ದೇಶಪಾಂಡೆಯವರ ನೇತೃತ್ವದಲ್ಲಿ ೨೫ ಜನ ಪ್ರತಿನಿಧಿಗಳು ಭಾಗವಹಿಸಿದ್ದರು. ಪ್ರಾರಂಭದಲ್ಲಿ ಒಬ್ಬರು ಇಬ್ಬರು ಭಾಗವಹಿಸುತ್ತಿದ್ದವರು ಮುಂದೆ ಆ ಸಂಖ್ಯೆ ಹೆಚ್ಚಾಗತೊಡಗಿದ್ದನ್ನು ಕಾಣಬಹುದು. ಹೋರಾಟಗಾರರೆಲ್ಲಾ ಬೆಳಗಾವಿಯ ಸುತ್ತಲಿನ ಭಾಗದವರಾಗಿದ್ದರು. ಹೀಗಾಗಿ ಬೆಳಗಾವಿ ಸ್ವಾತಂತ್ರ್ಯ ಹೋರಾಟಗಾರರ ಕೇಂದ್ರ ಸ್ಥಳವಾಗಿ ರೂಪಗೊಳ್ಳತೊಡಗಿತು.

ಬ್ರಿಟಿಷರ ವಿರುದ್ಧ ದೇಶದಲ್ಲಿಯೇ ಮೊಟ್ಟಮೊದಲ ಬಾರಿಗೆ ರೈತರ ಸಾರ್ವಜನಿಕ ಪ್ರತಿಭಟನೆ ಬೆಳಗಾವಿಯಲ್ಲಿ ನಡೆದದ್ದು ದೇಶದ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸದಲ್ಲಿ ಮಹತ್ವದ ಘಟನೆಯಾಗಿದೆ. ಬ್ರಿಟಿಷರು ಅರಣ್ಯ ಕಾಯ್ದೆಯನ್ನು ತಂದಾಗ ಅವರ ವಿರುದ್ಧ ಪ್ರತಿಭಟನೆಗಳು ದೇಶದ ತುಂಬೆಲ್ಲಾ ನಡೆದವು. ಕ್ರಿ. ಶ. ೧೯೨ರಲ್ಲಿ ಈ ಕಾನೂನಿನ ವಿರುದ್ಧ ಬೆಳಗಾವಿ ನಗರದಲ್ಲಿ ಸುಮಾರು ೬೦೦೦ ಕ್ಕಿಂತ ಹೆಚ್ಚಿನ ರೈತರು ಶೇತ್ಕರಿ ಮೇಳಾ ನಡೆಸಿ ತಮ್ಮ ಪ್ರತಿಭಟನೆಯನ್ನು

ಸೂಚಿಸಿದರು.[೨] ಈ ಪ್ರತಿಭಟನೆಯ ಮೂಲಕ ಬೆಳಗಾವಿ ಜನರ ಸಂಘಟನಾ ಶಕ್ತಿ ಪ್ರದರ್ಶಿತವಾಗಿ ಇಡೀ ದೇಶದ ಗಮನವನ್ನು ಸೆಳೆಯಿತು. ಇದಾದ ಮರುವರ್ಷವೇ ಕ್ರಿ. ಶ. ೧೮೯೩ರಲ್ಲಿ ಕಾಂಗ್ರೆಸ್ಸಿನ ಅಂದಿನ ಮುಖಂಡರಾದ ಯು. ಎ. ಹೂಂ ಬೆಳಗಾವಿಗೆ ಬಂದು ಸ್ವಾತಂತ್ರ್ಯದ ಮಹತ್ವ, ಕಾಂಗ್ರೆಸ್‌ನ ಹೋರಾಟವನ್ನು ಕುರಿತು ಸಾರ್ವಜನಿಕ ಸಭೆಗಳಲ್ಲಿ ಪ್ರಚಾರ ಮಾಡಿದರು. ಈ ಸಭೆಯ ನಂತರ ಮುಂದಿನ ದಿನಗಳಲ್ಲಿ ಬೆಳಗಾವಿಯಲ್ಲಿ ಹೋರಾಟಗಾರರ ಸಂಖ್ಯೆ ಹೆಚ್ಚಾಗಿರುವುದು ಕಂಡು ಬರುತ್ತದೆ. ೧೯೦೫ ರ ವಂಗಭಂಗ ಆಂದೋಲನದಿಂದ ೧೯೪೨ ರ ಚಲೇಜಾವ್ ಕ್ರಾಂತಿಯವರೆಗಿನ ಎಲ್ಲಾ ಸ್ವಾತಂತ್ರ್ಯ ಹೋರಾಟಗಳಲ್ಲಿ ಬೆಳಗಾವಿ ಜಿಲ್ಲೆ ಪ್ರಮುಖ ಪಾತ್ರವನ್ನು ವಹಿಸಿತು. ಬೆಳಗಾವಿಯನ್ನು ಕೇಂದ್ರವನ್ನಾಗಿ ಮಾಡಿಕೊಂಡು ನಿರಂತರವಾಗಿ ಹೋರಾಟಗಳು ನಡೆಯತೊಡಗಿದವು. ಈ ಅವಧಿಯಲ್ಲಿ ದೇಶದ ಪ್ರಮುಖ ಮುಖಂಡರೆಲ್ಲಾ ಬೆಳಗಾವಿಗೆ ಬಂದು ತಮ್ಮ ಭಾಷಣಗಳ ಮೂಲಕ ಸ್ವಾತಂತ್ರ್ಯ ಹೋರಾಟಕ್ಕೆ ಸ್ಫೂರ್ತಿಯನ್ನು ತುಂಬಿದರು. ಇದರ ಪರಿಣಾಮವಾಗಿ ಬೆಳಗಾವಿ ಜನರ ಬೌದ್ಧಿಕ ವಿಕಾಸವಾಗತೊಡಗಿತು. ದೇಶದ ಹಲವಾರು ನಾಯಕರೊಂದಿಗಿನ ಒಡನಾಟದಿಂದ ದೇಶದ ಹೊರಗಿನ ಆಗುಹೋಗುಗಳಿಗೆ ಸ್ಪಂದಿಸತೊಡಗಿದರು. ಜಾಗತಿಕ ಮಟ್ಟದ ಬದಲಾವಣೆಗಳನ್ನು ತೆರೆದ ಕಣ್ಣಿನಿಂದ ನೋಡತೊಡಗಿದರು. ಇದಕ್ಕೆ ಸಾಕ್ಷಿಯಾಗಿ ೧೯೦೫ ರಲ್ಲಿ ನಡೆದ ಘಟನೆಯನ್ನು ನೋಡಬಹುದು. ರಷ್ಯಾದ ವಿರುದ್ಧ ಓಸಾನ ಸಾಧಿಸಿದ ವಿಜಯಕ್ಕಾಗಿ ಜಪಾನದೇಶವನ್ನು ಅಭಿನಂದಿಸಲು ವಿಷ್ಣು ಪಂತ ನಾತು ಅವರ ಅಧ್ಯಕ್ಷತೆಯಲ್ಲಿ ಬಾರಿಪ್ರಮಾಣದ ಸಾರ್ವಜನಿಕ ಸಭೆ ನಡೆದದ್ದನ್ನು ಇಲ್ಲಿ ಸ್ಮರಿಸಬಹುದು.

ಬೆಳಗಾವಿಯ ಸ್ವಾತಂತ್ರ್ಯ ಹೋರಾಟಕ್ಕೆ ಇಬ್ಬರು ರಾಷ್ಟ್ರೀಯ ಮಹಾನಾಯಕರ ಸ್ಫೂರ್ತಿ, ಪ್ರೋತ್ಸಾಹ, ಮಾರ್ಗದರ್ಶನ ದೊರೆತದ್ದು ಒಂದು ವಿಶೇಷವೆನ್ನಬಹುದು. ಅವರೆಂದರೆ ಒಬ್ಬರು ಲೋಕಮಾನ್ಯ ಬಾಲಗಂಗಾಧರ ತಿಲಕರು; ಮತ್ತೊಬ್ಬರು ಮಹಾತ್ಮಾ ಗಾಂಧೀಜಿಯವರು. ಬೆಳಗಾವಿ ಜನರ ಶಿಸ್ತು, ಆಸಕ್ತಿ, ಸಂಘಟನೆ ಇವುಗಳನ್ನು ಅರಿತ ಈ ಮಹಾನ್ ನಾಯಕರು ಬೆಳಗಾವಿಯಲ್ಲಿ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡರು. ಇಲ್ಲಿಯ ಮುಖಂಡರ ಜೊತೆಗೆ ನಿರಂತರ ಸಂಪರ್ಕವನ್ನಿಟ್ಟುಕೊಂಡು ಮೇಲಿಂದ ಮೇಲೆ ಬೆಳಗಾವಿಗೆ ಭೆಟ್ಟಿಕೊಡತೊಡಗಿದರು. ಇದರಿಂದಾಗಿಯೇ ಬೆಳಗಾವಿಯಲ್ಲಿ ಸ್ವಾತಂತ್ರ್ಯ ಹೋರಾಟ ಪ್ರಖರವಾಗಿ ಬೆಳೆಯುತ್ತಾ ಅದರ ಜೊತೆಗೆ ಸಾಂಸ್ಕೃತಿಕವಾಗಿಯೂ ಬದಲಾವಣೆಯನ್ನು ಕಾಣತೊಡಗಿತು.

ಈ ಹಿನ್ನೆಲೆಯಲ್ಲಿ ಬೆಳಗಾವಿಯಲ್ಲಿ ಪ್ರಾರಂಭವಾದ ಹೋಳಿ ಆಚರಣೆ ಮತ್ತು ಸಾರ್ವಜನಿಕ ಗಣೇಶೋತ್ಸವ ಮಹತ್ವದ್ದಾಗಿವೆ. ೧೯೦೫ರಲ್ಲಿ ಬೆಳಗಾವಿಯ ಸ್ವಾತಂತ್ರ್ಯ ಹೋರಾಟಗಾರರಿಂದ ನಗರದಲ್ಲಿ ಸಾರ್ವಜನಿಕವಾಗಿ ಹೋಳಿ ಆಚರಣೆಯನ್ನು ಗಂಗಾಧರರಾಯ ದೇಶಪಾಂಡೆಯವರ ನೇತೃತ್ವದಲ್ಲಿ ಆರಂಭಿಸಲಾಯಿತು. ಇದರಿಂದ ಸಾಮಾಜಿಕ ಜೀವನದಲ್ಲಿ ಸಂಘಟನೆ, ಸಾಮರಸ್ಯ ಉಂಟಾಗತೊಡಗಿತು. ಇದೇ ವರ್ಷವೇ ಅಂದರೆ ೧೯೦೫ ರಲ್ಲಿ ಲೋಕಮಾನ್ಯ ಟಿಳಕರು ಬೆಳಗಾವಿಗೆ ಆಗಮಿಸಿ ಸಾರ್ವಜನಿಕ ಗಣೇಶೋತ್ಸವದ ಆಚರಣೆಗೆ ಚಾಲನೆ ನೀಡಿದರು.

ಅಂದು ಗಣೇಶಮೂರ್ತಿಯನ್ನು ಸಾರ್ವಜನಿಕವಾಗಿ ಸ್ಥಾಪಿಸಲು ಅನುಮತಿ ದೊರೆಯದಿದ್ದರಿಂದ ಮಾರ್ಕೆಟಿನ ಝುಂಡಾ ಚೌಕ ಪ್ರದೇಶದಲ್ಲಿ ಶ್ರೀ ಎಸ್. ವಿ. ಪಾಟ್ನೇಕರ ಎಂಬುವವರ ಅಂಗಡಿಯಲ್ಲಿ ಗಣೇಶನ ಸ್ಥಾಪನೆಯನ್ನು ತಿಲಕರಿಂದ ಮಾಡಿಸಲಾಯಿತು.[೨] ಈ ಸಂದರ್ಭದಲ್ಲಿ ಶ್ರೀ. ಎಸ್. ವಿ. ಪಾಟ್ನೇಕರ, ಶ್ರೀ ವಜ್ಜಪ್ಪಣ್ಣ ಸಿದ್ಧಣ್ಣವರ, ಶ್ರೀ ಬಿ. ಎಲ್. ಘಸಾರಿ, ಶ್ರೀ ಪ್ರಭಾಕರ ಕಲಘಟಗಿ ಮುಂತಾದವರು ಗಣೇಶ ಮೂರ್ತಿ ಪ್ರತಿಷ್ಠಾಪಿಸಲು ಅನುವು ಮಾಡಿಕೊಟ್ಟರು. ಬೆಳಗಾವಿಯ ಸ್ವಾತಂತ್ರ್ಯ ಹೋರಾಟದಲ್ಲಿ ಇದೊಂದು ಮಹತ್ವದ ಘಟನೆ, ಧಾರ್ಮಿಕ ಆಚರಣೆಯ ನೆಪದಲ್ಲಿ ಸ್ವಾತಂತ್ರ್ಯ ಹೋರಾಟಗಾರರೆಲ್ಲ ಒಂದೆಡೆ ಸೇರಲು ಒಂದು ವೇದಿಕೆ ನಿರ್ಮಾಣವಾಯಿತು. ಮುಖಂಡರೆನಿಸಿದವರು ಹೋರಾಟದ ರೂಪರೇಷಗಳನ್ನೆಲ್ಲಾ ಈ ಸಂದರ್ಭದಲ್ಲಿ ಚರ್ಚಿಸಿ ಹೋರಾಟವನ್ನು ತೀವ್ರಗೊಳಿಸಿದರು. ಈ ಆಚರಣೆ, ಉತ್ಸವಗಳ ಮೂಲಕ ಬೆಳಗಾವಿಯ ಜನರಲ್ಲಿ ಸಾಮರಸ್ಯ ಬೆಳೆಯತೊಡಗಿತು. ಭಾಷೆ, ಧರ್ಮ, ಜಾತಿಗಳ ಭೇದಭಾವವಿಲ್ಲದೆ ಎಲ್ಲಾವರ್ಗದ ಜನರು ಇದರಲ್ಲಿ ಪಾಲ್ಗೊಂಡರು. ಈ ಮೂಲಕ ಸಾಮಾಜಿಕ ವಲಯದಲ್ಲಿ ರಚನಾತ್ಮಕ ಕಾರ್ಯಗಳಾಗತೊಡಗಿದವು. ಇದರಿಂದ ಬೆಳಗಾವಿಯು ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ವಲಯಗಳಲ್ಲಿ ಬೆಳವಣಿಗೆಯನ್ನು ಕಾಣತೊಡಗಿತು. ಜನರಲ್ಲಿ ಸ್ವಾತಂತ್ರ್ಯದ ಅರಿವು ಮೂಡಿ ಹೆಚ್ಚಿನ ಸಂಖ್ಯೆಯಲ್ಲಿ ರಾಷ್ಟ್ರೀಯ ಆಂದೋಲನದಲ್ಲಿ ಭಾಗವಹಿಸತೊಡಗಿದರು. ಇದೇ ಸಂದರ್ಭದಲ್ಲಿ ಧಾರ್ಮಿಕ ಆಚರಣೆಗಳನ್ನು ನಡೆಸುವುದು ಕಾನೂನು ಬಾಹಿರವಲ್ಲವೆಂದು ಬ್ರಿಟಿಷರ ಹೇಳಿಕೆಯನ್ನು ಉಪಯೋಗಿಸಿಕೊಂಡು ಈ ಉತ್ಸವ, ಆಚರಣೆಗಳನ್ನು ರಾಷ್ಟ್ರೀಕರಣಗೊಳಿಸಿ ಸಾರ್ವಜನಿಕ ಹಬ್ಬಗಳನ್ನಾಗಿ ಆಚರಿಸತೊಡಗಲಾಯಿತು.

**ರಾಷ್ಟ್ರೀಯ ಶಾಲೆಯ ಸ್ಥಾಪನೆ:** ಲೋಕಮಾನ್ಯ ತಿಳಕರು ಸ್ವದೇಶ ಪ್ರಚಾರ, ವಿದೇಶಿ ಬಹಿಷ್ಕಾರ, ರಾಷ್ಟ್ರೀಯ ಶಿಕ್ಷಣ ಮತ್ತು ಸ್ವರಾಜ್ಯ ಬೇಡಿಕೆ ಈ ಚತುಃಸೂತ್ರ ಚಳುವಳಿಯ ಹರಿಕಾರರಾಗಿ ಪುಣೆಯಲ್ಲಿ ತೀವ್ರವಾದ ಹೋರಾಟವನ್ನು ಆರಂಭಿಸಿದ್ದರು. ಈ ಹೋರಾಟ ಪುಣೆಯ ನಂತರ ಇಡೀ ದೇಶದಲ್ಲಿಯೇ ಹೆಚ್ಚು ಪ್ರಬಲವಾದದ್ದು ಬೆಳಗಾವಿಯಲ್ಲಿ. ತಿಳಕರ ಜೊತೆಗೆ ನಿರಂತರ ಸಂಪರ್ಕವನ್ನಿಟ್ಟುಕೊಂಡಿದ್ದ ಬೆಳಗಾವಿಯ ಹೋರಾಟಗಾರರು ತಿಳಕರ ಕಟ್ಟಾ ಅನುಯಾಯಿಗಳಾಗಿದ್ದರು. ಅಲ್ಲದೆ ಕರ್ನಾಟಕ–ಮಹಾರಾಷ್ಟ್ರದ ಸಾಂಸ್ಕೃತಿಕ ಸಂಬಂಧ, ಬೆಳಗಾವಿ–ಪೂಣಾ ನಗರಗಳ ಮಧ್ಯದಲ್ಲಿಯ ಕಡಿಮೆ ಅಂತರ ಮತ್ತು ಬೆಳಗಾವಿ ಜನರ ಸಂಘಟಿತ ಹೋರಾಟದಿಂದ ಬೆಳಗಾವಿ ನಗರ ದೇಶದಲ್ಲಿಯೇ ಹೋರಾಟದ ಪ್ರಮುಖ ನೆಲೆಯಾಗಿ ರೂಪಗೊಳ್ಳತೊಡಗಿತು. ಟಿಳಕರು ಆರಂಭಿಸಿದ ಚತುಃಸೂತ್ರ ಚಳುವಳಿಯಲ್ಲಿ ಅತ್ಯಂತ ಮಹತ್ವದಾದದ್ದು ರಾಷ್ಟ್ರೀಯ ಶಿಕ್ಷಣವನ್ನು ನೀಡುವುದು. ಇದಕ್ಕಾಗಿ ದೇಶದ ತುಂಬೆಲ್ಲಾ ರಾಷ್ಟ್ರೀಯ ಶಾಲೆಗಳನ್ನು ತೆರೆಯಲು ಆರಂಭಿಸಿದರು. ಈ ಹಿನ್ನೆಲೆಯಲ್ಲಿ ಬೆಳಗಾವಿಯಲ್ಲಿ ರಾಷ್ಟ್ರೀಯ ಶಾಲೆಯನ್ನು ಪ್ರಾರಂಭಿಸಲು ನಿರ್ಧರಿಸಲಾಯಿತು. ಕ್ರಿ. ಶ. ೧೯೦೭ರಲ್ಲಿ ಬೆಳಗಾವಿಯ ಹನುಮಾನ (ಮಾರುತಿ) ಬೀದಿಯಲ್ಲಿರುವ ಬಾವೂಸಾಹೇಬ

ಭಾಟೆ ವಕೀಲರ ಮನೆಯಲ್ಲಿ ರಾಷ್ಟ್ರೀಯ ಶಾಲೆಯನ್ನು ಪ್ರಾರಂಭಿಸಲಾಯಿತು.[೪] ಆದರೆ ಆ ವರ್ಷ ಹೆಚ್ಚಿನ ವಿದ್ಯಾರ್ಥಿಗಳು ಬಾರದ್ದರಿಂದ ಶಾಲೆ ಪ್ರಾರಂಭಗೊಳ್ಳಲಿಲ್ಲ. ಹೀಗಾಗಿ ಬೆಳಗಾವಿಯ ಕೆಲವು ಜನ ವಿದ್ಯಾರ್ಥಿಗಳು (ಜೀವನರಾವ್ ಯಾಳಗಿ ಮುಂತಾದವರು) ಸಮೀಪದ ಕೊಲ್ಲಾಪುರದಲ್ಲಿಯ ಸಮರ್ಥ ವಿದ್ಯಾಲಯಕ್ಕೆ ಹೋಗಿ ಕಲಿಯತೊಡಗಿದರು. ಮುಂದೆ ಒಂದು ವರ್ಷದೊಳಗೆ ಬೆಳಗಾವಿಯಲ್ಲಿ ರಾಷ್ಟ್ರೀಯ ಶಾಲೆಯು ಪ್ರಾರಂಭಗೊಂಡಿತು. ಗಣೇಶ ವಿದ್ಯಾಲಯವೆಂದು ಅದಕ್ಕೆ ನಾಮಕರಣ ಮಾಡಿ, ಸುಮಾರು ೭೦ ವಿದ್ಯಾರ್ಥಿಗಳ ಶಾಲೆ ಪ್ರಾರಂಭವಾಯಿತು. ಈ ಶಾಲೆಯಲ್ಲಿ ಕೃಷ್ಣಾಜಿ ಹರಿದೀಕ್ಷಿತ, ನಾಗಪೂರಕರ, ಕಾಕಾ ಕಾಲೇಲಕರ ಮೊದಲಾದವರು ಶಿಕ್ಷಕರಾಗಿ ರಾಷ್ಟ್ರಪ್ರೇಮದ ಶಿಕ್ಷಣವನ್ನು ನೀಡತೊಡಗಿದರು. ಆದರೆ ಹೆಚ್ಚುದಿನ ಈ ರಾಷ್ಟ್ರೀಯ ಶಾಲೆಗಳು ನಡೆಯಲಿಲ್ಲ. ಸರ್ಕಾರದ ದಬ್ಬಾಳಿಕೆಯಿಂದ ಈ ಶಾಲೆಗಳನ್ನು ಕ್ರಿ. ಶ. ೧೯೧೦ರಲ್ಲಿ ಮುಚ್ಚಲಾಯಿತು.

**ಕರ್ನಾಟಕದಲ್ಲಿ ಮೊಟ್ಟ ಮೊದಲ ಕಾಯಿದೆ ಭಂಗ ಚಳುವಳಿ:** ಕ್ರಿ. ಶ. ೧೯೦೭ರಲ್ಲಿ ಗೋವಿಂದರಾವ್ ಯಾಳಗಿ, ರಾಮಚಂದ್ರ ಜೋಶಿಯವರ ನೇತೃತ್ವದಲ್ಲಿ ಮದ್ಯದಂಗಡಿಗಳ ಮೇಲೆ ಪಿಕೆಟಿಂಗ್ ನಡೆಯಿತು. ಈ ಸಂಧರ್ಭದಲ್ಲಿ ನೂರಾರು ಜನರ ಸ್ವಯಂಸೇವಕರು ಪಾಲ್ಗೊಂಡು ಪಿಕೆಟಿಂಗ್ ನಡೆಸಿದರು. ಇದು ಕರ್ನಾಟಕದಲ್ಲಿಯೇ ಮೊಟ್ಟಮೊದಲ ಕಾಯಿದೆ ಭಂಗವಾಗಿತ್ತು.[೫] ಸುಮಾರು ೨೦-೨೫ ಜನರನ್ನು ಈ ಸಂದರ್ಭದಲ್ಲಿ ಬಂಧಿಸಿ ಸೆರೆಮನೆಗೆ ಹಾಕಲಾಯಿತು. ಹೀಗೆ ಬ್ರಿಟಿಷರ ಕಾಯಿದೆಯನ್ನು ಭಂಗಮಾಡಿ ದಂಡವನ್ನು ತೆರದೇ ಸೆರೆಮನೆಯನ್ನು ಸೇರಿ ಪ್ರತಿಭಟಿಸಿದ ನಗರವೆಂದರೆ ಇಡೀ ದೇಶದಲ್ಲಿಯೇ ಪುಣೆಯ ನಂತರ ಬೆಳಗಾವಿಯೇ ಎರಡನೆಯದು.[೬] ಈ ಸಂದರ್ಭದಲ್ಲಿ ನಾರಾಯಣ ಹಣಮಶೇಟ ಎಂಬುವರಿಗೆ ಮೂರು ತಿಂಗಳ ಜೈಲು ಶಿಕ್ಷೆಯಾಯಿತು. ಈ ಘಟನೆಯಿಂದ ಬೆಳಗಾವಿ ಜಿಲ್ಲೆಯಾದ್ಯಂತ ಸ್ವಾತಂತ್ರ್ಯ ಹೋರಾಟಕ್ಕೆ ಅಪಾರ ಬೆಂಬಲ ದೊರೆಯಿತು. ಹೆಚ್ಚೆಚ್ಚು ಜನರು ಬೆಳಗಾವಿಗೆ ಬಂದು ಹೋರಾಟದಲ್ಲಿ ಭಾಗವಹಿಸತೊಡಗಿದರು. ತಮ್ಮ ತಮ್ಮ ಊರುಗಳಲ್ಲಿರುವ ಮದ್ಯದಂಗಡಿಗಳ ಮುಂದೆ ಪಿಕಟಿಂಗ್ ಆರಂಭಿಸಿದರು. ಹೀಗಾಗಿ ಇಡೀ ಜಿಲ್ಲೆಯೇ ಸ್ವಾತಂತ್ರ್ಯ ಹೋರಾಟಕ್ಕೆ ಸಿದ್ಧಗೊಂಡಿತು.

**ಸ್ವದೇಶಿ ವಸ್ತುಭಂಡಾರ:** ಬೆಳಗಾವಿ ಸ್ವಾತಂತ್ರ್ಯ ಹೋರಾಟಗಾರರಿಗೆ ಕೇಂದ್ರ ಸ್ಥಳವಾಗಿ ರೂಪಗೊಳ್ಳುತ್ತಿದ್ದಂತೆಯೇ ಹೋರಾಟಗಾರರ ಸಂಖ್ಯೆಯೂ ಹೆಚ್ಚುತ್ತಾ ಸಾಗಿತು. ದಿನನಿತ್ಯ ಸಂಗ್ರಾಮದ ಚಟುವಟಿಕೆಗಳು ಬೆಳಗಾವಿಯ ಹೋರಾಟಗಾರರ ಮನೆಗಳಲ್ಲಿ, ಮಾರುತಿಗಲ್ಲಿಯ ಮಾರುತಿದೇವಾಲಯದಲ್ಲಿ ನಡೆಯತೊಡಗಿದವು. ಈಗಾಗಲೇ ಮದ್ಯದಂಗಡಿಗಳ ಮೇಲೆ ಪಿಕಟಿಂಗ್ ಆರಂಭಿಸಿ ಬಂಧನಕ್ಕೊಳಗಾಗಿ ಅದರಲ್ಲಿ ಕೆಲವರು ಬಿಡುಗಡೆ ಹೊಂದಿದ್ದರು. ಈ ಸಂದರ್ಭದಲ್ಲಿ ಗಂಗಾಧರರಾಯ ದೇಶಪಾಂಡೆಯವರು ಬೆಳಗಾವಿಯಲ್ಲಿ ಸ್ವದೇಶಿ ವಸ್ತುಭಂಡಾರವನ್ನು ಸ್ಥಾಪಿಸಿದರು. ದೇಸಿಯವಾಗಿ ತಯಾರಿಸಲಾದ ವಸ್ತುಗಳನ್ನು ಇದರ ಮೂಲಕ ಮಾರಾಟ ಮಾಡತೊಡಗಿದರು. ಚರಕಾದಿಂದ ನೆಯ್ದು ಬಟ್ಟೆಗಳನ್ನು ಈ ವಸ್ತುಭಂಡಾರದ ಮೂಲಕ ಮಾರಾಟ ಮಾಡಲಾಗುತ್ತಿತ್ತು.

**ತಿಳಕರ ತೀವ್ರಗಾಮಿ ಪಂಥ:** ಕ್ರಿ. ಶ. ೧೯೦೭ರಲ್ಲಿ ಸೂರತನಲ್ಲಿ ಕಾಂಗ್ರೆಸ್ ಅಧಿವೇಶನದ ಸಂದರ್ಭದಲ್ಲಿ ಮಂದಗಾಮಿಗಳಿಗೂ ತೀವ್ರಗಾಮಿಗಳಿಗೂ ಜಗಳ ಪ್ರಾರಂಭವಾಗಿ ವಿಕೋಪಕ್ಕೆ ಹೋಯಿತು. ಕೈಗೆ ಕೈ ಹತ್ತಿ ಜಗಳ ಪ್ರಾರಂಭವಾಯಿತು. ಈ ಸಂದರ್ಭದಲ್ಲಿ ಬೆಳಗಾವಿಯಿಂದ ನೂರಾರು ಹೋರಾಟಗಾರರು ಗಂಗಾಧರರಾಯ ದೇಶಪಾಂಡೆಯವರ ನೇತೃತ್ವದಲ್ಲಿ ಅಧಿವೇಶನದಲ್ಲಿ ಭಾಗವಹಿಸಿದ್ದರು. ಮೊದಲಿನಿಂದಲೂ ತಿಳಕರ ಅಭಿಮಾನಿಗಳಾದ ಬೆಳಗಾವಿಯ ಹೋರಾಟಗಾರರು ತಿಳಕರ ತೀವ್ರಗಾಮಿಯ ಪಕ್ಷವನ್ನು ಬೆಂಬಲಿಸಿದರು. ಈ ಸಮಯದಲ್ಲಿ ಗಂಗಾಧರರಾಯ ದೇಶಪಾಂಡೆ, ಕೌಜಲಗಿ ಶ್ರೀನಿವಾಸರಾಯರು, ಹನುಮಂತರಾಯರು, ಮಾಳಗಿ ಗೋವಿಂದರಾಯರು, ಬಾಬಾಸಾಹೇಬ ಸೋಮಣ ಮುಂತಾದವರು ತಿಳಕರ ಪಕ್ಷವಹಿಸಿದರು. ಈ ಘಟನೆಯಿಂದ ಬೆಳಗಾವಿ ಹೋರಾಟಗಾರರ ಮೇಲೆ ತಿಲಕರ ಅಭಿಮಾನ ಹೆಚ್ಚಿತು. ಅದರಲ್ಲಿಯೂ ಗಂಗಾಧರರಾಯ ದೇಶಪಾಂಡೆ, ಗೋವಿಂದರಾವ್ ಯಾಳಗಿ, ಹಣಮಂತರಾವ್ ದೇಶಪಾಂಡೆ, ಬಾಬಾಸಾಹೇಬ ಸೋಮಣ್ಣ[೭] ಈ ನಾಲ್ವರು ತಿಳಕರ ಏಕನಿಷ್ಠ ಅನುಯಾಯಿಗಳಾಗಿದ್ದರು.

**'ಮಾಝಿನಿ ಕ್ಲಬ್' : ಕ್ರಾಂತಿಕಾರಿ ಗುಪ್ತಸಂಸ್ಥೆ:** ೧೯೦೭ ರಲ್ಲಿ ಸೂರತ್‌ನಲ್ಲಿ ನಡೆದ ರಾಷ್ಟ್ರೀಯ ಕಾಂಗ್ರೆಸ್‌ನ ಅಧಿವೇಶನದಲ್ಲಿ ಬೆಳಗಾವಿಯಿಂದ ನೂರಾರು ಜನ ಭಾಗವಹಿಸಿದ್ದರು. ಅವರಲ್ಲಿ ಗೋವಿಂದರಾವ್ ಯಾಳಗಿ, ಬಾಬಾಸಾಹೇಬ ಸೋಮಣ ಮತ್ತು ಹನುಮಂತರಾವ್ ದೇಶಪಾಂಡೆ ಇವರು ಅರವಿಂದರ ಸಹೋದರನಾದ ಬಾರೀಂದ್ರ ಘೋಷರನ್ನು ಭೆಟ್ಟಿಯಾಗಿ ಅವರೊಡನೆ ದೀರ್ಘಕಾಲದವರೆಗೆ ಹೋರಾಟದ ಯೋಜನೆಗಳ ಬಗೆಗೆ ಸಮಾಲೋಚನೆ ನಡೆಸಿದರು. ಅವರಿಂದ ಸ್ಫೂರ್ತಿ ಪಡೆದು ಬೆಳಗಾವಿಗೆ ಬಂದು ಮಾಝೀನಿ ಕ್ಲಬ್ ಎಂಬ ಕ್ರಾಂತಿಕಾರಿ ಗುಪ್ತ ಸಂಸ್ಥೆಯನ್ನು ಸ್ಥಾಪಿಸಿದರು.[೮] ಇದರೊಂದಿಗೆ ಬೆಳಗಾವಿಯಲ್ಲಿ ಸ್ವಾತಂತ್ರ್ಯ ಹೋರಾಟದ ಚಿತ್ರಣವೇ ಬದಲಾಯಿತು. ಇದರ ಚಟುವಟಿಕೆಗಳೆಲ್ಲ ಬೆಳಗಾವಿಯ ಹೊರವಲಯದ ಲಕ್ಷ್ಮೀಟೇಕ ಹತ್ತಿರವಿದ್ದ ಶಾಮರಾವ ಕಾಲಕುಂದ್ರೀಕರ ಅವರ ಬಂಗ್ಲೆಯಲ್ಲಿ ನಡೆಯುತ್ತಿದ್ದವು. ಈ ಬಂಗ್ಲೆಯ ಆವರಣದಲ್ಲಿ ಹೋರಾಟಗಾರರಿಗೆ ಲಾಠಿ ಶಿಕ್ಷಣ, ಪಿಸ್ತೂಲು ಗುರಿ ಹೊಡೆಯುವುದು ಮುಂತಾದವುಗಳ ಬಗ್ಗೆ ತರಬೇತಿಯನ್ನು ನೀಡಿ ಹೋರಾಟದ ಯೋಜನೆಗಳನ್ನು ರೂಪಿಸಲಾಗುತ್ತಿತ್ತು. ಇದರಿಂದಾಗಿ ಬೆಳಗಾವಿಯಲ್ಲಿ ಸ್ವಾತಂತ್ರ್ಯ ಹೋರಾಟ ವ್ಯವಸ್ಥಿತವಾಗಿ ಸಾಗಿ ಬ್ರಿಟಿಷರಿಗೆ ನಡುಕ ಹುಟ್ಟಿತು. ಬೆಳಗಾವಿ ನಗರವಲ್ಲದೆ ಜಿಲ್ಲೆಯ ಮತ್ತು ಬೇರೆ ಬೇರೆ ಜಿಲ್ಲೆಯ ಹೋರಾಟಗಾರರು ಈ ಸಂಸ್ಥೆಯ ಜೊತೆಗೆ ಸಂಪರ್ಕವನ್ನಿಟ್ಟುಕೊಂಡು ತಮ್ಮ ಪ್ರದೇಶಗಳಲ್ಲಿ ಹೋರಾಟವನ್ನು ಆರಂಭಿಸಿದರು. ಅಷ್ಟೇ ಅಲ್ಲದೆ ಮಾಝಿನಿ ಕ್ಲಬ್‌ನ ಸದಸ್ಯರು ಬೇರೆ ಬೇರೆ ರಾಜ್ಯಗಳ ಸಂಪರ್ಕವನ್ನು ಹೊಂದಿ ಮಹತ್ವದ ವಿಷಯಗಳನ್ನು ತಿಳಿದುಕೊಳ್ಳತೊಡಗಿದರು. ಗೋವಾ, ಮಹಾರಾಷ್ಟ್ರ ರಾಜ್ಯಗಳ ಹೋರಾಟಗಾರರ ಸಂಪರ್ಕ ಉಂಟಾಗಿ ದಕ್ಷಿಣ ಭಾರತದಲ್ಲಿ ಪ್ರಮುಖ ಹೋರಾಟದ ನೆಲೆಯಾಗಿ ಬೆಳಗಾವಿ ರೂಪುಗೊಂಡಿತು.

**ಗುಪ್ತಚಾರರ ತಂಡ:** 'ಮಾರ್ಝಿನಿ ಕ್ಲಬ್' ಮೂಲಕ ಬ್ರಿಟಿಷರ ಚಲನವಲನಗಳನ್ನು, ಯೋಜನೆಗಳನ್ನು ತಿಳಿದುಕೊಳ್ಳಲು ಗುಪ್ತಚಾರರ ತಂಡ ಸಿದ್ಧಗೊಂಡಿತು. ಬೆಳಗಾವಿಯ ಅನೇಕ ತರುಣರು ಈ ಸಂಘಟನೆಯಲ್ಲಿ ಪಾಲ್ಗೊಂಡು ಮಹತ್ವದ ವಿಷಯಗಳನ್ನು ಗುಪ್ತವಾಗಿ ಮಾರುವೇಷದಲ್ಲಿ ಸಂಗ್ರಹಿಸಿ ಹೋರಾಟಗಾರರಿಗೆ ತಿಳಿಸತೊಡಗಿದರು. ಸರಕಾರಿ ನೌಕರರಾದ ಬೈತಮಂಗಲಕರ ಗುಡಿ, ವಿನಾಯಕರಾವ ಅರ್ಜುನವಾಡಕರ ಮುಂತಾದವರು ಸರಕಾರದ ಗುಪ್ತ ಆಜ್ಞೆಗಳು, ಅಧಿಕಾರಿಗಳ ಚಲನ ವಲನಗಳನ್ನು ತಿಳಿಸುತ್ತಿದ್ದರು. ಇದೇ ರೀತಿ ಗಂಗೂಮಾಮ ಹುಕ್ಕೇರಿಕರ, ದನದ ದವಾಖಾನೆಯ ಕಂಪೌಂಡರ್ ಗೋಪಾಳರಾವ್ ಪಾಚಲಗ ಇವರೂ ಸುದ್ದಿ ಸಂಗ್ರಹಕ್ಕೆ ಶ್ರಮಿಸುತ್ತಿದ್ದರು. ಬೆಳಗಾವಿಯ ರೈಲ್ವೆ ಕ್ಯಾಂಟೀನ್‌ನ ಕಂಟ್ರಾಕ್ಟರ್‌ನಾದ ಬಳವಂತರಾವ್ ನಾತೂ ಕಾರಿನ ಡ್ರೈವರರಾದ ಗೋವಿಂದ ಪರಾಂಜಪೆ ಮತ್ತು ದತ್ತಾತ್ರಯ ಪರಾಂಜಪೆ ಎಂಬ ಸಹೋದರರು ಬ್ರಿಟಿಷ್ ಅಧಿಕಾರಿಗಳು ಕ್ಯಾಂಟೀನಿಗೆ ಬಂದಾಗ ಅವರು ನಡೆಸಿದ ಸಂಭಾಷಣೆಗಳ ವಿಷಯವನ್ನು ಗುಪ್ತವಾಗಿ ಕೇಳಿಸಿಕೊಂಡು ಗೋವಿಂದರಾವ್ ಯಾಳಗಿ ಅವರಿಗೆ ತಿಳಿಸುತ್ತಿದ್ದರು. ಈ ಗುಪ್ತಚಾರರು ಮಾರುವೇಷದಲ್ಲಿ ತಿರುಗಾಡುತ್ತಿದ್ದರು. ಇದರಿಂದ ಬೆಳಗಾವಿ ಹೋರಾಟಗಾರರಿಗೆ ಹೋರಾಟವನ್ನು ವ್ಯವಸ್ಥಿತವಾಗಿ ನಡೆಸಲು ಅನುಕೂಲವಾಯಿತು.

**ಮದ್ದು, ಬಾಂಬು ತಯಾರಿಕೆ:** ಬೆಳಗಾವಿಯ ಸ್ವಾತಂತ್ರ್ಯ ಹೋರಾಟಗಾರರು ದಿನದಿಂದ ದಿನಕ್ಕೆ ದಿಟ್ಟಹೆಜ್ಜೆಗಳನ್ನು ಇಡತೊಡಗಿದರು. ಮಾರ್ಝೀನ್ ಕ್ಲಬ್‌ನ ಮೂಲಕ ಸಂಘಟಿತ ಹೋರಾಟವನ್ನು ಆರಂಭಿಸಿ ದೇಶವ್ಯಾಪಿಯಾದ ಸಂಪರ್ಕವನ್ನು ಹೊಂದಿದರು. ದೇಶದ ಬೇರೆ ಬೇರೆ ಭಾಗಗಳ ಹೋರಾಟಗಾರರು ಬೆಳಗಾವಿಯ ಜೊತೆಗೆ ಸಂಪರ್ಕವನ್ನಿಟ್ಟುಕೊಂಡು ಮಾರ್ಗದರ್ಶನ ಪಡೆಯತೊಡಗಿದರು. 'ಮಾರ್ಝಿನ್ ಕ್ಲಬ್' ಕಾರ್ಯ ಚಟುವಟಿಕೆಗಳಲ್ಲಿ ಅತ್ಯಂತ ಮಹತ್ವದಾದದ್ದು ಮದ್ದು, ಬಾಂಬುಗಳನ್ನು ತಯಾರಿಸಲು ಮುಂದಾದದ್ದು. ಈಗಾಗಲೇ ಮಾರ್ಝಿನಕ್ಲಬ್‌ನಲ್ಲಿ ಪಿಸ್ತೂಲಗಳ ಸಂಗ್ರಹ ಸಾಕಷ್ಟಿತ್ತು. ಇವುಗಳನ್ನು ಗೋವಾ ಮತ್ತು ನಿಜಾಮ ರಾಜ್ಯದಿಂದ ಸಂಗ್ರಹಿಸಲಾಗಿತ್ತು.[೯] ಅಲ್ಲದೆ ಸ್ಥಳೀಯ ಕಮ್ಮಾರ, ಬಡಿಗರ ಮೂಲಕ ಪಿಸ್ತೂಲಗಳನ್ನು ತಯಾರಿಸುತ್ತಿದ್ದರು.[೧೦] ಇಂತಹ ಹಲವಾರು ತಂಡಗಳು ಬೆಳಗಾವಿಯ ಸುತ್ತಮುತ್ತಲಿನ ಹಳ್ಳಿಗಳಲ್ಲಿದ್ದವು. ಈಗಾಗಲೇ ಮದ್ದು, ಬಾಂಬು ತಯಾರಿಸುವ ಕಾರ್ಯ ಕೊಲ್ಲಾಪುರದ 'ಶಿವಾಜಿ ಕ್ಲಬ್'ನ ಮೂಲಕ ನಡೆದಿತ್ತು. ಇದೂ ಸಹ ಕ್ರಾಂತಿಕಾರಿ ಗುಪ್ತಸಂಸ್ಥೆಯಾಗಿತ್ತು. ಇದರ ಕಾರ್ಯಕರ್ತನಾದ ದಾಮು ಜೋಶಿಯು ಯಾಳಗಿಯವರ ಜೊತೆಗೆ ಉತ್ತಮ ಸಂಬಂಧವನ್ನು ಹೊಂದಿದ್ದನು. 'ಮಾರ್ಝಿನ ಕ್ಲಬ್'ಗೆ ಮದ್ದು, ಪಿಸ್ತೂಲುಗಳನ್ನು ದಾಮು ಜೋಶಿ ನೀಡಿದ್ದನು. ಅವು ಬಹಳಷ್ಟು ದಿನಗಳವರೆಗೆ ಯಾಳಗಿಯವರಲ್ಲಿದ್ದು ಕೊನೆಗೆ ಅವುಗಳನ್ನು ನಾಶ ಮಾಡಿದರು.[೧೧]

ಮಾರ್ಝಿನ ಕ್ಲಬ್ ಮೂಲಕವೂ ಬಾಂಬ್‌ಗಳನ್ನು ತಯಾರಿಸುವ ಕಾರ್ಯ ನಡೆಯಿತು. ಈ ಬಾಂಬ್ ತಯಾರಿಸುವ ವಿಧಾನದ ಪುಸ್ತಕವನ್ನು ಓರ್ವ ರಶಿಯನ್ ಕ್ರಾಂತಿಕಾರನಿಂದ ಸೇನಾಪತಿ ಬಾಪಟ ಎಂಬುವವರು

ಪಡೆದುಕೊಂಡಿದ್ದರು. ಅದು ಬೆಳಗಾವಿ ಹೋರಾಟಗಾರರಿಗೆ ಲಭ್ಯವಾಗಿ ಅದನ್ನು ಮಾಝಿನಿ ಕ್ಲಬ್‌ನಲ್ಲಿ ಅಭ್ಯಸಿಸುತ್ತಿದ್ದರು. ಈ ಬಾಂಬು ತಯಾರಿಕೆಗೆ ಬೆಳಗಾವಿಯಲ್ಲಿದ್ದ ಕಡ್ಡಿ ಪೆಟ್ಟಿಗೆ ಕಾರ್ಖಾನೆಯ ಮಾಲಿಕರಾದ ಖಟಾವಕರ ಮತ್ತು ನೀಲಜಕರ ಎಂಬುವವರು ಸಹಕಾರ ನೀಡಿದರು.[೨]

ಬೆಳಗಾವಿಯ ಹೋರಾಟಗಾರರು ಮದ್ದು, ಬಾಂಬು, ಪಿಸ್ತೂಲಗಳನ್ನು ಸಂಗ್ರಹಿಸುವ ವಿಷಯ ಕೊಲ್ಲಾಪುರದ ಶಾಹುಮಹಾರಾಜರಿಗೆ ಗೊತ್ತಾಯಿತು. ಈ ಸಂದರ್ಭದಲ್ಲಿ ಅವರು ಗಂಗಾಧರರಾಯ ಹಾಗೂ ಯಾಳಗಿಯವರ ವಿರುದ್ಧ ಬ್ರಿಟಿಷರಿಗೆ ಈ ವಿಷಯ ತಿಳಿಸಿ ಅವರನ್ನು ಬಂಧಿಸಲು ಪ್ರಯತ್ನಿಸಿದರು. ಆದರೆ ಈ ವಿಷಯ ಬೆಳಗಾವಿ ಹೋರಾಟಗಾರರಿಗೆ ಗೊತ್ತಾಗಿ ಚಾಣಾಕ್ಷತನದಿಂದ ಪಾರಾದರು. ೧೯೦೯ ರ ಮೇ ೪ ರಂದು ಕೊಲ್ಲಾಪುರದಿಂದ ವಾಲಿಂಜರ ಎಂಬ ಬ್ರಿಟಿಷ್ ಅಧಿಕಾರಿಯು ಭಾರೀ ಪ್ರಮಾಣದಲ್ಲಿ ಪೊಲೀಸ ಪಡೆಯೊಂದಿಗೆ ರಾತ್ರಿಯ ವೇಳೆ ಬೆಳಗಾವಿಗೆ ಆಗಮಿಸಿ ಯಾಳಗಿ, ಗಂಗಾಧರರಾವ್, ಕಾಲಕುಂದ್ರಿಕರ, ಹನುಮಂತರಾವ್ ದೇಶಪಾಂಡೆ ಮುಂತಾದವರ ಮನೆಗಳನ್ನು ಶೋಧಿಸಿದರು. ಗಂಗಾಧರರಾಯರ ಹುದಲಿ ಮನೆ ಕಮರಿ ತೋಟದ ಮನೆಗಳನ್ನು ಶೋಧಿಸಿದರು. ಎಲ್ಲಿಯೂ ಯಾವುದೇ ವಸ್ತುಗಳು ಸಿಗಲಿಲ್ಲ. ಆದರೆ ಮಜಗಾವಿಯಲ್ಲಿಯ ಹಣಮಂತರಾವ್ ದೇಶಪಾಂಡೆಯವರ ಮನೆಯಲ್ಲಿ ಮದ್ದು ತುಂಬುವ ಖಾಲಿ ತಂಬಿಗೆ ಸಿಕ್ಕಿದ್ದರಿಂದ ಅವರನ್ನು ಬಂಧಿಸಲಾಯಿತು. ಈ ಪ್ರಕರಣದಲ್ಲಿ ಕೊಲ್ಲಾಪೂರ ಶಾಹು ಮಹಾರಾಜರು ಬ್ರಿಟಿಷರಿಂದ ಮೆಚ್ಚುಗೆ ಗಳಿಸಲು ಬೆಳಗಾವಿಯ ಹೋರಾಟಗಾರರನ್ನು ಬಂಧಿಸಲು ನಡೆಸಿದ ಪ್ರಯತ್ನ ವಿಫಲವಾಯಿತು. ಈ ವಿಪತ್ತಿನಿಂದ ಪಾರಾದ ಮಾಝಿನಿ ಕ್ಲಬ್‌ನ ಗುಪ್ತಚಾರರು ನಾನಾ ವೇಷಗಳನ್ನು ಧರಿಸಿ ಈ ಸಂದರ್ಭದಲ್ಲಿ ಯಶಸ್ಸು ಸಾಧಿಸಿದರು.

**ಬೆಳಗಾವಿಯಲ್ಲಿ ಹೋಮ್‌ರೂಲ್ ಲೀಗ್ ಸ್ಥಾಪನೆ:** ಕ್ರಿ. ಶ. ೧೯೧೬ ಎಪ್ರಿಲ್ ೨೬ ರಂದು ಬೆಳಗಾವಿಯಲ್ಲಿ ಮುಂಬೈ ಪ್ರಾಂತೀಯ ರಾಜಕೀಯ ಪರಿಷತ್ತು ಸಭೆ ಸೇರಿತು. ಈ ಸಂದರ್ಭದಲ್ಲಿ ದಾದಾಸಾಹೇಬ ಖೋರ್ಪಡೆ, ಮಹಾತ್ಮಾ ಗಾಂಧೀಜಿ, ಲೋಕಮಾನ್ಯ ತಿಲಕ, ನರಸೋಪಂತ ಕೆಳಕರ, ಶಿವರಾಮ ಪಂತ ಪರಾಂಜಪೆ ಮುಂತಾದ ರಾಷ್ಟ್ರೀಯ ನಾಯಕರು ಬೆಳಗಾವಿಗೆ ಆಗಮಿಸಿದ್ದರು. ಗಂಗಾಧರರಾಯ ದೇಶಪಾಂಡೆಯವರು ಪರಿಷತ್ತಿನ ಹೊಣೆ ಹೊಗುತ್ತಿದ್ದರು. ಅಂದು ಈ ಸಭೆಯಲ್ಲಿಯೇ 'ಹೋಮ್‌ರೂಲ್ ಲೀಗ್' (ಸ್ವರಾಜ್ಯ ಸಂಘ) ಸ್ಥಾಪನೆಗೊಂಡಿತು.[೨೩] ಸಭೆಗೆ ಆಗಮಿಸಿದ ಹಿರಿಯ ನಾಯಕರನ್ನೆಲ್ಲಾ ನರಗುಂದಕರ ವಕೀಲರು ತಮ್ಮ ನಾಲ್ಕು ಗಾಲಿಯ ಬಗಿಯಲ್ಲಿ ಕುಳ್ಳಿರಿಸಿದರು ಸಭೆಗಾಗಿ ಸೇರಿದ ಹೋರಾಟಗಾರರೆಲ್ಲಾ ಸೇರಿ ಬಗಿಯನ್ನು ಎಳೆದು ಬೆಳಗಾವಿ ತುಂಬೆಲ್ಲಾ ಮೆರವಣಿಗೆ ಮಾಡಿದರು. ರಾಷ್ಟ್ರೀಯ ನಾಯಕರನ್ನು ಬೆಳಗಾವಿಯ ಹೋರಾಟಗಾರರು ಅತ್ಯಂತ ಉತ್ಸಾಹದಿಂದ, ಪ್ರೀತಿಯಿಂದ ಸತ್ಕರಿಸಿದರು. ಮುಖಂಡರೆಲ್ಲಾ ಇಲ್ಲಿಯ ಜನರ ಪ್ರೀತಿ, ವಿಶ್ವಾಸಕ್ಕೆ ಮಾರುಹೋದರು. ಹೀಗಾಗಿ ಹಲವಾರು ದಿನಗಳವರೆಗೆ ಬೆಳಗಾವಿ ಜಿಲ್ಲೆಯನ್ನೆಲ್ಲಾ ಸುತ್ತಿ ಜನರಲ್ಲಿ ಸ್ವಾತಂತ್ರ್ಯದ ಜಾಗೃತಿ ಮೂಡಿಸಿದರು.

**ಟಿಳಕರ ಸ್ವರಾಜ್ಯ ಘೋಷಣೆ:** ಬೆಳಗಾವಿ ಹೋರಾಟಗಾರರ ಉತ್ಸಾಹಕ್ಕೆ ರಾಷ್ಟ್ರೀಯ ನಾಯಕರೆಲ್ಲಾ ಮಾರುಹೋಗಿ, ತಮ್ಮ ಹೋರಾಟಕ್ಕೆ ಜಯ ಲಭಿಸುವ ದಿನಗಳು ಬಹಳ ದೂರವಿಲ್ಲ ಎಂಬ ಆತ್ಮವಿಶ್ವಾಸ ಮೂಡಿತು. ಹೋಮರೂಲ್ ಲೀಗ್ ಸ್ಥಾಪನೆಯನ್ನು ಮಾಡಿದ ಲೋಕಮಾನ್ಯ ಟಿಳಕರು ತಮ್ಮ ಭಾಷಣದಲ್ಲಿ 'ಸ್ವರಾಜ್ಯವು ನನ್ನ ಜನ್ಮಸಿದ್ಧಹಕ್ಕು, ಅದನ್ನು ನಾನು ಪಡೆದುಕೊಳ್ಳುತ್ತೇನೆ'[೧೪] ಎಂಬ ಅಮರಸಂದೇಶವನ್ನು ಬೆಳಗಾವಿ ನೆಲದಿಂದ ಸಾರಿದರು. ತಿಲಕರ ಈ ಘೋಷಣೆ ಸ್ವಾತಂತ್ರ್ಯ ಹೋರಾಟಗಾರರಿಗೆ ಸ್ಫೂರ್ತಿಯನ್ನು ತುಂಬಿತು.

ಬೆಳಗಾವಿಯಲ್ಲಿ ಒಂದು ಕಡೆ ಸ್ವಾತಂತ್ರ್ಯ ಹೋರಾಟಗಾರರ ತಂಡ ದಿನದಿಂದ ದಿನಕ್ಕೆ ಬೆಳೆಯತೊಡಗಿದ್ದರೂ ಜನಸಾಮಾನ್ಯರಿಗೆ ಇದರ ಬಗ್ಗೆ ಇನ್ನೂ ತಿಳುವಳಿಕೆ ಮೂಡಿರಲಿಲ್ಲ. ವಿನಾಕಾರಣ ಏಕೆ ಸೆರೆಮನೆ ಸೇರಿ ಜೀವನವನ್ನು ಹಾಳು ಮಾಡಿಕೊಳ್ಳಬೇಕು ಎನ್ನುವ ಮನೋಭಾವನೆಯಲ್ಲಿದ್ದರು. ಅಲ್ಲದೆ ಹೋರಾಟಗಾರರ ಚರಿತ್ರೆಯನ್ನು ನಾಟಕಗಳ ಮೂಲಕ ನೋಡಿ ಅವರ ದುರಂತ ಜೀವನವನ್ನು ತಿಳಿದುಕೊಂಡಿದ್ದರು. ಕಿತ್ತೂರ ಚೆನ್ನಮ್ಮ, ಸಂಗೊಳ್ಳಿ ರಾಯಣ್ಣ, ಬೆಳವಡಿ ಮಲ್ಲಮ್ಮ, ನರಗುಂದ ಬಾಬಾ ಸಾಹೇಬ ಮುಂತಾದವರ ಜೀವನ ಚರಿತ್ರೆಯನ್ನು ಒಳಗೊಂಡ ನಾಟಕಗಳು ಅಂದು ಪ್ರತಿ ಹಳ್ಳಿಯಲ್ಲಿಯೂ ನಡೆಯುತ್ತಿದ್ದವು. ಇವುಗಳನ್ನು ನೋಡಿದ ಕೆಲವರು ಬ್ರಿಟಿಷರ ವಿರುದ್ಧ ಸಿಡಿದೆದ್ದರು. ಇನ್ನು ಕೆಲವರು ಅದರಿಂದ ದೂರ ಉಳಿದರು. ಇಂತಹ ಸಂದರ್ಭದಲ್ಲಿ ಜನರಿಗೆ ಸ್ವಾತಂತ್ರ್ಯದ ತಿಳುವಳಿಕೆಯನ್ನು ನೀಡಲು ಹೋರಾಟಗಾರರು ಹೊಸಹಾದಿಯನ್ನು ಹುಡುಕಿದರು. ಮನೆಯಲ್ಲಿ ಸತ್ಯನಾರಾಯಣ ಪೂಜೆ, ವರಲಕ್ಷ್ಮೀ ಪೂಜೆ ಮುಂತಾದ ಪೂಜೆಗಳನ್ನು ನೆರವೇರಿಸಿ ಬಂದವರಿಗೆಲ್ಲ ಪ್ರಸಾದದ ವ್ಯವಸ್ಥೆಯನ್ನು ಕಲ್ಪಿಸುತ್ತಿದ್ದರು. ಈ ಸಂದರ್ಭದಲ್ಲಿಯೇ ಜನರಿಗೆ ಸ್ವಾತಂತ್ರ್ಯದ ತಿಳುವಳಿಕೆಯನ್ನು ನೀಡುತ್ತಿದ್ದರು. 'ಕೇಸರಿ' ಪತ್ರಿಕೆಯಲ್ಲಿ ಬಂದ ವರದಿಗಳನ್ನು ಓದಿ ಹೇಳ ತೊಡಗಿದರು. ಈ ರೀತಿಯಾಗಿ ಹೋರಾಟಗಾರರು ಸಂಧಿಸಾಧಿಸಿ ತಮ್ಮ ಉದ್ದೇಶವನ್ನು ಇಡೇರಿಸಿಕೊಳ್ಳುತ್ತಿದ್ದರು.

**ಪೈಸಾ ಫಂಡ :** ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ 'ಪೈಸಾ ಫಂಡ' ಎಂಬ ವಿನೂತನ ಸಂಪ್ರದಾಯ ಬೆಳೆದು ಬಂದಿತು. ಮದುವೆ, ಮುಂಜಿವೆ, ಧಾರ್ಮಿಕ ಕಾರ್ಯಗಳಲ್ಲಿ ಪಂಕ್ತಿಯಲ್ಲಿ ಊಟಕ್ಕೆ ಕುಳಿತವರ ಮುಂದೆ ಮನೆಯ ಯಜಮಾನನು ಒಂದೊಂದು ತಾಮ್ರದ ದುಡ್ಡನ್ನು ಊಟಕ್ಕೆ ದಕ್ಷಿಣೆಯೆಂದು ಇಡುವ ರೂಢಿ ಮೊದಲಿನಿಂದಲೂ ಇತ್ತು. ಹೀಗೆ ಇಟ್ಟು ಹೋದ ಹಣವನ್ನು ಊಟಕ್ಕೆ ಕುಳಿತವರು ತೆಗೆದುಕೊಳ್ಳುತ್ತಿದ್ದರು. ಲೋಕಮಾನ್ಯ ಟಿಳಕರು ಪುಣೆಯ ಹತ್ತಿರ ಕಾಜಿನ ಕಾರ್ಖಾನೆ ಸ್ಥಾಪಿಸಲು ಯೋಜನೆ ಹಾಕಿದಾಗ ಅದಕ್ಕೆ ಬೇಕಾದ ಹಣದ ನೆರವನ್ನು ಸ್ವಾತಂತ್ರ್ಯ ಹೋರಾಟಗಾರರು ಸಂಗ್ರಹಿಸಲು ಪ್ರಾರಂಭಿಸಿದರು. ದಕ್ಷಿಣೆಗೆ ಹಣವನ್ನು ಇಡುತ್ತಾ ಹೋಗುತ್ತಿದ್ದಂತೆಯೇ ಅವರ ಹಿಂದೆಯೇ ಸ್ವಯಂಸೇವಕರು 'ವಂದೇ ಮಾತರಂ', 'ಪೈಸಾ ಫಂಡ' ಎಂಬ ಘೋಷಣೆಯೊಂದಿಗೆ ಬಂದು ಆ ಹಣವನ್ನು ತೆಗೆದುಕೊಂಡು ಹೋಗುತ್ತಿದ್ದರು. ಈ ರೀತಿಯಾಗಿ ದೇಶದ ತುಂಬೆಲ್ಲಾ ಹಣಸಂಗ್ರಹಣೆ ನಡೆದು

ಮುಂದೆ ಪುಣೆ ಬಳಿಯ ತಳೇಗಾಂವದಲ್ಲಿ ಸ್ವದೇಶಿ ಕಾಜಿನ ಕಾರ್ಖಾನೆಯನ್ನು ಪ್ರಾರಂಭಿಸಲು ಈ ಹಣವನ್ನು ತಿಳಕರು ಸಹಾಯ ಮಾಡಿದರು. ಈ ರೀತಿಯಾಗಿ ಸಂಗ್ರಹಗೊಂಡ ಹಣದಲ್ಲಿ ಬೆಳಗಾವಿ ಭಾಗದ ಹಣವೇ ಹೆಚ್ಚಿನ ಪ್ರಮಾಣದಲ್ಲಿದ್ದದ್ದು ತಿಳಿದುಬರುತ್ತದೆ.[೧೫]

ಬೆಳಗಾವಿ ಸ್ವಾತಂತ್ರ್ಯ ಹೋರಾಟಗಾರರಿಗೆ ಮುಖ್ಯ ಸ್ಫೂರ್ತಿ ತಿಳಕರು. ತಿಳಕರ ಮೇಲೆ ಉತ್ಕಟ ಅಭಿಮಾನವನ್ನಿಟ್ಟುಕೊಂಡು ಅವರ ಮಾರ್ಗದರ್ಶನದಲ್ಲಿ ಹೋರಾಟ ನಡೆಸುತ್ತಿದ್ದರು. ತಿಳಕರು ಹೊರಡಿಸುತ್ತಿದ್ದ **'ಕೇಸರಿ'** ಪತ್ರಿಕೆಯನ್ನು ಮರಾಠಿ ಓದಲು ಬಾರದಿದ್ದರೂ ಇದು ತಿಳಕರ ಪತ್ರಿಕೆ ಎನ್ನುವ ಅಭಿಮಾನದಿಂದ ಅದನ್ನು ಇಲ್ಲಿಯ ಜನರು ಕೊಳ್ಳುತ್ತಿದ್ದರು. ತಿಳಕರು ಭಾಷಣ ಮಾಡುತ್ತಿದ್ದರೆ ತಂಡ ತಂಡವಾಗಿ ಜನ ಸೇರುತ್ತಿದ್ದರು. ಅವರಲ್ಲಿ ಬಹಳಷ್ಟು ಜನರಿಗೆ ಮರಾಠಿ ತಿಳಿಯುತ್ತಿರಲಿಲ್ಲ. ತಿಳಕರ ಮೇಲೆ ಎಷ್ಟೊಂದು ಅಭಿಮಾನವನ್ನು ಇಲ್ಲಿಯ ಜನರು ಹೊಂದಿದ್ದರೆಂದರೆ ಅವರನ್ನು ಬಂಧಿಸಿ ಜೈಲಿಗೆ ಹಾಕಿದಾಗ ಇಲ್ಲಿಯ ಜನರು ಅವರು ಬಿಡುಗಡೆ ಆಗುವವರೆಗೆ ಸಿಹಿ ಪದಾರ್ಥಗಳನ್ನು ತಿನ್ನಲಿಲ್ಲ, ಹಾಲು ಕುಡಿಯಲಿಲ್ಲ. ಎಷ್ಟೋ ಜನರು ಅನ್ನವನ್ನೂ ಕೂಡ ಉಣ್ಣದೆ ಬರಿ ಜೋಳದ ನುಚ್ಚು, ರಾಗಿಅಂಬಲಿಯನ್ನು ಉಂಡು ತಮ್ಮ ಅಭಿಮಾನವನ್ನು ವ್ಯಕ್ತ ಪಡಿಸಿದರು. ಅವರು ಜೈಲಿನಲ್ಲಿ ಕಷ್ಟಪಡಬೇಕಾದರೆ ನಾವು ಸುಖ ಪಡುವುದು ತಪ್ಪು ಎನ್ನುವ ಭಾವನೆ ಇವರದಾಗಿತ್ತು. ಈ ಭಾವನೆಯ ಮತ್ತೊಂದು ಮುಖವೇ ದೇಶಭಕ್ತಿ.

ಇದರಿಂದಾಗಿಯೇ ಬೆಳಗಾವಿ ಜನರ ಮೇಲೆ ರಾಷ್ಟ್ರೀಯ ನಾಯಕರು ಅಪಾರ ಗೌರವವನ್ನು ಹೊಂದಿದ್ದರು. ಇಲ್ಲಿಯ ಜನರ ಮುಗ್ಧತೆ, ದೇಶಭಕ್ತಿ, ಸಂಘಟನಾಶಕ್ತಿ, ಸಾಮರಸ್ಯದ ಬದುಕು, ನಿಷ್ಠೆ, ವೀರತನ, ಇವೆಲ್ಲ ಮೌಲ್ಯಗಳು ಸ್ವಾತಂತ್ರ್ಯ ಸಂಗ್ರಾಮದ ಸಂದರ್ಭದಲ್ಲಿ ಅನಾವರಣಗೊಂಡವು. ಜನರ ಮಧ್ಯದಲ್ಲಿ ಹೆಚ್ಚೆಚ್ಚು ವಿಶ್ವಾಸ, ಪ್ರೀತಿ ಬೆಳೆಯತೊಡಗಿತು. ಸಮಾಜ ಗಟ್ಟಿಯಾಗ ತೊಡಗಿತು. ಹೋರಾಟ ಹೆಚ್ಚಾಗ ತೊಡಗಿತು. ಬೆಳಗಾವಿ ಸಾಂಸ್ಕೃತಿಕವಾಗಿ ರೂಪಗೊಳ್ಳ ತೊಡಗಿತು. ಬೆಳಗಾವಿಯಲ್ಲಿ ಕನ್ನಡ ಮರಾಠಿ ಸಂಸ್ಕೃತಿಗಳ ಕೂಡುವಿಕೆ ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ಉಂಟಾಗಿರುವುದು ಸ್ಪಷ್ಟ. ಭಾಷೆ, ಪ್ರಾಂತಗಳ ಭೇದವಿಲ್ಲದ ಈ ದಿನಗಳಲ್ಲಿ ರಾಷ್ಟ್ರೀಯ ಮನೋಭಾವನೆ ಜಾಗೃತಗೊಂಡಿತ್ತು.

ಲೋಕಮಾನ್ಯ ತಿಳಕರು ಕ್ರಿ. ಶ. ೧೯೨೦ ಅಗಸ್ಟ ೧ ರಂದು ಮರಣ ಹೊಂದಿದಾಗ ದೇಶದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ತಿಳಕ ಯುಗ ಅಂತ್ಯಗೊಂಡಿತು. ತಿಳಕರ ಮರಣದ ಸುದ್ದಿಯನ್ನು ಕೇಳಿ ಬೆಳಗಾವಿಯ ಹೋರಾಟಗಾರರು ಅಘಾತಗೊಂಡರು. ಎಲ್ಲರೂ ತಮ್ಮ ವ್ಯವಹಾರಗಳನ್ನು ನಿಲ್ಲಿಸಿ ತಮ್ಮ ದುಃಖವನ್ನು ವ್ಯಕ್ತಪಡಿಸಿದರು. ಬೆಳಗಾವಿ ನಗರದಲ್ಲಿ ಬಕ್ಕ ತಲೆಯ ಪ್ರಚಂಡ ಮೆರವಣಿಗೆ ಹೊರಟಿತು. ಸಾಯಂಕಾಲ ಹನುಮನ ಗುಡಿಯಲ್ಲಿ ಸಂತಾಪ

ಸೂಚಕ ಸಭೆ ನಡೆಯಿತು. ಅರ್ದೇಸರ ನೇರೋಜಿ ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು. ಈ ಸಂದರ್ಭದಲ್ಲಿ ಒಂದೇ ಸವನೆ ಮಳೆ ಸುರಿಯುತ್ತಿದ್ದರೂ ಒಬ್ಬರೂ ಅಲ್ಲಿಂದ ಕದಡಲಿಲ್ಲ. ಸಾವಿರಾರು ಜನರು ಅಂದು ಪಾಲ್ಗೊಂಡಿದ್ದರು.

**ಬೆಳಗಾವಿಯಲ್ಲಿ ಅಸಹಕಾರ ಚಳುವಳಿ:** ಲೋಕಮಾನ್ಯ ತಿಳಕರ ನಿರಂತರ ಹೋರಾಟದಿಂದ ಇಡೀ ದೇಶವೇ ಸ್ವಾತಂತ್ರ್ಯದ ಮಹತ್ವವನ್ನು ತಿಳಿದುಕೊಂಡರು. ದೇಶದ ತುಂಬೆಲ್ಲಾ ಸಂಚರಿಸಿ ಜನಜಾಗ್ರತಿಯನ್ನು ಉಂಟುಮಾಡಿ ಜನರನ್ನು ಹೋರಾಟದ ಹಾದಿಗೆ ತಂದಿದ್ದರು. ಅವರ ಮರಣದ ನಂತರ ಮುಂದೆ ಯಾರು? ಎನ್ನುವ ಪ್ರಶ್ನೆ ಎಲ್ಲರಲ್ಲಿ ಮೂಡಿತ್ತು. ಈ ಸಂದರ್ಭದಲ್ಲಿ ಮಹಾತ್ಮಾ ಗಾಂಧೀಜಿಯವರು ದಿಟ್ಟ ಹೆಜ್ಜೆಗಳನ್ನು ಇಟ್ಟರು. ಟಿಳಕರ ಮರಣದ ದಿನವೇ ಅಸಹಕಾರ ಚಳುವಳಿಗೆ ಕರೆ ನೀಡಿದರು.

ಬೆಳಗಾವಿ ನಗರ ಮತ್ತು ಜಿಲ್ಲೆಯಾದ್ಯಂತ ಅಸಹಕಾರ ಚಳುವಳಿ ದೇಶದಲ್ಲಿಯೇ ಅತಿ ಹೆಚ್ಚು ಪ್ರಬಲವಾಗಿ ನಡೆಯಿತು. ಪ್ರತಿಯೊಂದು ಊರಿನಲ್ಲಿಯೂ ಸರ್ಕಾರದ ವಿರುದ್ಧ ಪ್ರತಿಭಟನೆಗಳು ನಡೆದವು. ವಿದ್ಯಾರ್ಥಿಗಳು, ವಕೀಲರು, ವೈದ್ಯರು, ಶಿಕ್ಷಕರು, ಸರ್ಕಾರಿ ನೌಕರರು ತಮ್ಮ ಉದ್ಯೋಗಗಳಿಗೆ ರಾಜೀನಾಮೆ ನೀಡಿ ಈ ಚಳುವಳಿಯಲ್ಲಿ ಭಾಗಿಗಳಾದರು. ಗಂಗಾಧರರಾವ್ ದೇಶಪಾಂಡೆ, ದತ್ತೋ ಪಂತ ಮಜಲಿ, ಕೃಷ್ಣರಾವ ಕರಗುಪ್ಪಿ ಮುಂತಾದವರು ತಮ್ಮ ವಕೀಲಿ ಕೆಲಸವನ್ನು ಬಿಟ್ಟು ಪೂರ್ಣ ಪ್ರಮಾಣದ ಹೋರಾಟಗಾರರಾಗಿ ಚಳುವಳಿಯಲ್ಲಿ ಧುಮ್ಮಿಕ್ಕಿದರು. ಕೇಶವರಾವ ಗೋಖಲೆ, ಬಾಬುರಾವ ಠಾಕೂರ, ಶ್ರೀಪಾದರಾವ ಕಿತ್ತೂರ ಮೊದಲಾದವರು ಕಾಲೇಜು ಶಿಕ್ಷಣವನ್ನು ನಿಲ್ಲಿಸಿ ಚಳುವಳಿಯಲ್ಲಿ ಭಾಗವಹಿಸಿದರು. ಕೊಣ್ಣೂರ, ಧೋಂಡೋ ಯಲ್ಲೋ ಕುಲಕರ್ಣಿ, ವೆಂಕಣ್ಣ ನಗರ, ವೆಂಕಟರಾವ ಜಾಲಿಹಾಳ, ದಯಾನಂದ ಅರಳಿಕಟ್ಟಿ ಮೊದಲಾದವರು ಸರ್ಕಾರಿ ನೌಕರಿಗೆ ಶರಣು ಹೊಡೆದು ದೇಶಕಾರ್ಯಕ್ಕೆ ಅಣಿಯಾದರು.

ಅಸಹಕಾರ ಚಳುವಳಿಗೆ ಕರೆ ನೀಡಿ ಎರಡು ತಿಂಗಳಲ್ಲಿಯೇ ಮಹಾತ್ಮಾ ಗಾಂಧೀಜಿಯವರು ಮೌಲಾನ ಶೌಕತ ಅಲಿಯವರೊಡನೆ ಬೆಳಗಾವಿಗೆ ಬಂದರು. ಈ ಸಂದರ್ಭದಲ್ಲಿ ಪ್ರಚಂಡ ಜಾಹೀರ ಸಭೆಯನ್ನು ಈಗಿನ ಸೆಂಟ್ರಲ್ ಬಸ್ ನಿಲ್ದಾಣವಿದ್ದಲ್ಲಿ ಏರ್ಪಡಿಸಲಾಯಿತು.[illegible] ಗಾಂಧೀಜಿಯವರು ಭಾಷಣ ಜನರಲ್ಲಿ ಸಂಚಲನವನ್ನುಂಟು ಮಾಡಿತು. ಈ ಸಂದರ್ಭದಲ್ಲಿ ಗಾಂಧೀಜಿಯವರ ತಿಳಕರ ಸ್ವರಾಜ ಫಂಡಿಗೆ ದೇಣಿಗೆ ಕೇಳಿದಾಗ ಸಭೆಯಲ್ಲಿದ್ದ ಮಹಿಳೆಯರು ತಮ್ಮ ಮೈಮೇಲಿನ ಬಂಗಾರದ ಒಡವೆಗಳನ್ನು ಗಾಂಧೀಜಿಯವರಿಗೆ ಅರ್ಪಿಸಿದರು.

ಗಾಂಧೀಜಿಯವರಿಂದ ಸ್ಫೂರ್ತಿ ಪಡೆದ ಹೋರಾಟಗಾರರು ಉಗ್ರರೂಪದಲ್ಲಿ ಚಳುವಳಿಯನ್ನು ಆರಂಭಿಸಿದರು. ವಾರಕ್ಕೆ ಕನಿಷ್ಠ ಎರಡು ಜಾಹೀರ ಸಭೆಗಳು ಬೆಳಗಾವಿಯಲ್ಲಿ ನಡೆಯ ತೊಡಗಿದವು. ಈ ಸಂದರ್ಭದಲ್ಲಿ ರಾಷ್ಟ್ರೀಯ ನಾಯಕರು ಆಗಾಗ ಬಂದು ಭಾಷಣ ಮಾಡಿ ಜನರಲ್ಲಿ ಜಾಗೃತಿ ಮೂಡಿಸುತ್ತಿದ್ದರು. ಗಾಂಧೀಜಿ, ಶೌಕತಅಲಿ,

ಮಹಮ್ಮದ ಅಲಿ, ಡಾಕೀಚಲು, ರವೀಂದ್ರನಾಥ ಟಾಗೋರ, ಲಾಲಾ ಲಜಪತರಾಯ ಮುಂತಾದವರೆಲ್ಲಾ ಬೆಳಗಾವಿಗೆ ಆಗಮಿಸಿದ್ದರು.

ಬೆಳಗಾವಿಯ ಹೋರಾಟಗಾರರೂ, ಬೇರೆ ಬೇರೆ ಸ್ಥಳಗಳಿಗೆ ಹೋಗಿ ಪ್ರಚೋದನಕಾರಿ ಭಾಷಣಗಳನ್ನು ಮಾಡುತ್ತಿದ್ದರು. ಗಂಗಾಧರರಾಯ ದೇಶಪಾಂಡೆಯವರ ಸಿಂಹಗರ್ಜನೆಯಿಂದ ಸಾವಿರಾರು ಜನ ವಿದ್ಯಾರ್ಥಿಗಳು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದರು. ಈ ಸಂದರ್ಭದಲ್ಲಿ ಇವರು ನವಲಗುಂದದಲ್ಲಿ ಭಾಷಣ ಮಾಡುತ್ತಿರುವಾಗ ಬಂಧನವಾಗಿ ಆರು ತಿಂಗಳು ಜೈಲು ಶಿಕ್ಷೆ ಅನುಭವಿಸಿದರು.[೧೭]

ಗಾಂಧೀಜಿಯವರ ಅಸಹಕಾರ ಚಳುವಳಿ ಬೆಳಗಾವಿಯಲ್ಲಿ ದಿನದಿಂದ ದಿನಕ್ಕೆ ಉಗ್ರರೂಪವನ್ನು ತಾಳತೊಡಗಿತು. ಜನರ ಜೀವನದಲ್ಲಿ ಬದಲಾವಣೆಗಳು ಕಾಣತೊಡಗಿದವು. ವಿದೇಶಿ ಬಟ್ಟೆಗಳನ್ನು, ವಸ್ತುಗಳನ್ನು ಬಹಿಷ್ಕರಿಸಿದರು. ಮನೆಗಳಲ್ಲಿ ಚರಕಾ ಕಾಣಿಸತೊಡಗಿತು. ತಮ್ಮ ಬಟ್ಟೆಗಳನ್ನು, ಸೀರೆಗಳನ್ನು ತಾವೇ ನೂಲುವುದಕ್ಕೆ ಆರಂಭಿಸಿದರು. ವಿದೇಶಿ ಸಕ್ಕರೆ, ಚಹಾಪುಡಿ, ಕಾಫಿ, ಮುಂತಾದವುಗಳು ಮನೆಗಳಲ್ಲಿ ಕಾಣದಾದವು. ಹೋರಾಟಗಾರರ ಚಳುವಳಿ ಹೆಚ್ಚಾದ ಕೂಡಲೇ ಮುಖಂಡರ ಬಂಧನಗಳಾಗ ತೊಡಗಿದವು. ದತ್ತಾತ್ರಯ ರಾಮಚಂದ್ರ ಮಜಲಿ, ಕೇಶವರಾವ ಗೋಖಲೆ, ನಾರಾಯಣರಾವ ಜೋಶಿ, ಶಿವರಾವ ಕೊಪ್ಪಳ, ಧೋಂಡೊ ರಾಜಾರಾಮ ಠಾಕೂರ ಬಾಬುರಾವ ಠಾಕೂರ ಮುಂತಾದವರಿಗೆ ಸೆರೆಮನೆವಾಸ ಶಿಕ್ಷೆಗಳಾದವು. ಈ ಸಂದರ್ಭದಲ್ಲಿ ಬೆಳಗಾವಿ ಜಿಲ್ಲೆಯಲ್ಲಿಯೇ ಅತಿ ಹೆಚ್ಚು ಜನರು ಜೈಲಿಗೆ ಹೋದರು.

೧೯೨೧ರಲ್ಲಿ ಅಸಹಕಾರ ಚಳುವಳಿಯ ಸಂದರ್ಭದಲ್ಲಿ ಬೆಳಗಾವಿಯಲ್ಲಿ ಎರಡು ಮಹತ್ವದ ಸಂಸ್ಥೆಗಳು ಪ್ರಾರಂಭವಾದವು. ಬಾಬಾ ಸಾಹೇಬ ಸೋಮಣ ಅವರು 'ರಾಷ್ಟ್ರೀಯ ಪ್ರೌಢಶಾಲೆ' ಮತ್ತು 'ಸ್ವರಾಜ್ಯ ಆಶ್ರಮ'ಗಳನ್ನು ಸ್ಥಾಪಿಸುವುದರ ಮೂಲಕ ಬೆಳಗಾವಿಯಲ್ಲಿ ಪ್ರಮುಖ ಬದಲಾವಣೆಗೆ ಕಾರಣರಾದವರು. ಈ ಕಾರ್ಯಕ್ಕೆ ಕೇಶವರಾವ ಗೋಖಲೆ ಗಜಾನನರಾವ ಫೈಸಾಸ, ವಾಮನರಾವ ಭಾಟೆ, ಲೇ ಲೇ, ಹರಿ ವಾಮನ ಗಿಂಡೆ ಶ್ರೀಪಾದರಾವ ಕಿತ್ತೂರ, ತ್ರ್ಯಂಬಕರಾವ ದೇಶಪಾಂಡೆ (ಹುದಲಿ) ಮುಂತಾದವರು ಸಹಾಯಕರಾದರು. ಪುಂಡಲೀಕಜಿ ಕಾತಗಡೆ ಎಂಬುವರು ಆಶ್ರಮದ ವ್ಯವಸ್ಥಾಪಕರಾಗಿದ್ದರು. ಈ ಎರಡೂ ಸಂಸ್ಥೆಗಳು ಟಿಳಕವಾಡಿಯಲ್ಲಿರುವ ಯಾಳಗಿಯವರ ಬಂಗ್ಲೆಯಲ್ಲಿ ನಡೆಯುತ್ತಿದ್ದವು.

ರಾಷ್ಟ್ರೀಯ ಪ್ರೌಢಶಾಲೆಯ ಸ್ಥಾಪನೆಯಿಂದ ವಿದ್ಯಾರ್ಥಿಗಳೆಲ್ಲಾ ಸರಕಾರಿ ಶಾಲೆಯನ್ನು ತೊರೆಯ ತೊಡಗಿದರು. ಈ ಶಾಲೆಯಲ್ಲಿ ಕಲಿತ ಎಷ್ಟೋ ಜನರು ಮುಂದೆ ನಡೆದ ಚಳುವಳಿಯಲ್ಲಿ ಭಾಗವಹಿಸಿದರು. ಬಾಬಾ ಸಾಹೇಬ ಸೋಮಣ್ಣ ಅವರ ದೂರದೃಷ್ಟಿ ಯೋಜನೆ ಬೆಳಗಾವಿಯಲ್ಲಿ ಫಲಪ್ರದವಾಯಿತು. ಈ ಶಾಲೆಗೆ ನಾಡಿನ ಬೇರೆ ಬೇರೆ ಭಾಗಗಳಿಂದ ಶಿಕ್ಷಕರು ಶಿಕ್ಷಣ ನೀಡಲು ಬರುತ್ತಿದ್ದರು. ಶಿಸ್ತು, ದೇಶಪ್ರೇಮ, ಸ್ವಾತಂತ್ರ್ಯ ಹೋರಾಟದ ಬಗೆಗೆ ವಿದ್ಯಾರ್ಥಿಗಳಿಗೆ ಶಿಕ್ಷಣ ದೊರೆಯುತ್ತಿತ್ತು.

ಇದೇ ಸಮಯದಲ್ಲಿಯೇ ಬೆಳಗಾವಿಯಲ್ಲಿ 'ಭಾರತ ವೈಭವ ಸಮಾಜ' ಎಂಬ ತರುಣ ಸಂಘಟನೆಯು ಬಾಬುರಾವ್ ಠಾಕೂರ, ಕರಂದೀಕರ ಮುಂತಾದ ತರುಣರ ತಂಡದಿಂದ ನಡೆಯುತ್ತಿತ್ತು. ಇವರೆಲ್ಲಾ ಕಾಲೇಜನ್ನು ಬಿಟ್ಟು ಚಳುವಳಿಯಲ್ಲಿ ಭಾಗವಹಿಸುತ್ತಿದ್ದರು. 'ತರಣ ಭಾರತ' ಎಂಬ ಪತ್ರಿಕೆಯನ್ನು ಬಾಬುರಾವ್ ಠಾಕೂರರು ಕನ್ನಡ ಮತ್ತು ಮರಾಠಿ ಎರಡು ಭಾಷೆಗಳಲ್ಲಿ ನಡೆಸುತ್ತಿದ್ದು, ಅವರಲ್ಲಿ ರಾಷ್ಟ್ರಪ್ರೇಮ ಮೂಡುವಂತೆ ಲೇಖನಗಳನ್ನು ಪ್ರಕಟಿಸುತ್ತಿದ್ದರು.

ಕೇಶವರಾವ್ ಗೋಖಲೆಯವರು 'ಬಾಲಮೋಹನ ಸ್ವದೇಶಿ ಭಂಡಾರ' ಎಂಬ ಸ್ವದೇಶಿ ವಸ್ತುಗಳ ಅಂಗಡಿಯನ್ನು ಬೆಳಗಾವಿಯಲ್ಲಿ ಪ್ರಾರಂಭಿಸಿದರು. 'ಬೆಳಗಾವಿಯ ಹುಲಿ' ಎಂದೇ ಖ್ಯಾತಿಯನ್ನು ಪಡೆದ ಇವರು ಎರಡು – ಮೂರು ಘಂಟೆಗಳವರೆಗೆ ಜನರು ಮಂತ್ರ ಮುಗ್ಧರಾಗುವಂತೆ ಭಾಷಣ ಮಾಡಿ ಜನರಲ್ಲಿ ಸ್ವಾತಂತ್ರ್ಯದ ಭಾವನೆ ಮೂಡಿಸುತ್ತಿದ್ದರು.

**ಬೆಳಗಾವಿ ಕಾಂಗ್ರೆಸ್ ಅಧಿವೇಶನ:** ಬೆಳಗಾವಿಯ ಸ್ವಾತಂತ್ರ್ಯ ಹೋರಾಟಕ್ಕೆ ಐತಿಹಾಸಿಕ ಮಹತ್ವ ಬಂದದ್ದು ೧೯೨೪ರಲ್ಲಿ ಬೆಳಗಾವಿಯಲ್ಲಿ ನೆರವೇರಿದ ರಾಷ್ಟ್ರೀಯ ಕಾಂಗ್ರೆಸನ್ ಅಧಿವೇಶನದಿಂದ. ೧೯೨೪ರ ಡಿಸೆಂಬರ ೨೬, ೨೭, ೨೮ ರಂದು ಮೂರು ದಿನಗಳವರೆಗೆ ೩೯ನೆಯ ಕಾಂಗ್ರೆಸ್ ಅಧಿವೇಶನವು ಜರುಗಿತು. ಈ ಅಧಿವೇಶನವು ದೇಶದ ಸ್ವಾತಂತ್ರ್ಯ ಹೋರಾಟಕ್ಕೆ ಮಹತ್ವದ ತಿರುವು ನೀಡಿತು. ಹಲವು ಮಹತ್ವದ ನಿರ್ಣಯಗಳ ಘೋಷಣೆ, ಭಿನ್ನಾಭಿಪ್ರಾಯಗಳ ಇತ್ಯರ್ಥ, ಕಲೆ, ಸಂಸ್ಕೃತಿ, ಭಾಷೆ, ಸಂಗೀತಗಳ ಪ್ರದರ್ಶನ, ಸಾಹಿತ್ಯ ಕೃತಿಗಳ ಬಿಡುಗಡೆ–ಹೀಗೆ ಹಲವಾರು ಮಹತ್ವದ ಘಟನೆಗಳು ಜರುಗಿದವು. ಕರ್ನಾಟಕದಲ್ಲಿ ಸ್ವಾತಂತ್ರ್ಯಪೂರ್ವದಲ್ಲಿ ಜರುಗಿದ ಮೊಟ್ಟ ಮೊದಲ ಕಾಂಗ್ರೆಸ ಅಧಿವೇಶನ ಎಂಬ ಹೆಗ್ಗಳಿಕೆಗೂ ಈ ಅಧಿವೇಶನ ಪ್ರಾಪ್ತವಾಯಿತು. ಎಲ್ಲಕ್ಕಿಂತ ಮುಖ್ಯವಾದುದೆಂದರೆ ಮಹಾತ್ಮಾ ಗಾಂಧೀಜಿಯವರು ತಮ್ಮ ಜೀವಮಾನದಲ್ಲಿ ಒಮ್ಮೆ ಮಾತ್ರ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷತೆಯನ್ನು ಈ ಅಧಿವೇಶನದ ಮೂಲಕ ಅಲಂಕರಿಸಿದರು. ಅಧಿವೇಶನದ ಮೂಲಕ ಗಾಂಧೀಜಿಯವರು ಅಖಂಡ ಭಾರತದಲ್ಲಿ ಪೂರ್ಣ ಪ್ರಮಾಣದ ನಾಯಕರಾಗಿ ಹೊರಹೊಮ್ಮಿದರು. ಈ ಅಧಿವೇಶನದ ನಂತರ ಇಡೀ ಕರ್ನಾಟಕವು ಸಕ್ರೀಯವಾಗಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪಾಲ್ಗೊಂಡಿತು. ಕಾಂಗ್ರೆಸ್ ಕೇವಲ ಬ್ರಾಹ್ಮಣರದ್ದು ಎನ್ನುವ ಅಪವಾದ ತೊಲಗಿ ಬ್ರಾಹ್ಮಣೇತರರೂ ಕಾಂಗ್ರೆಸ್ ಸೇರಿ ಸ್ವಾತಂತ್ರ್ಯ ಸಂಗ್ರಾಮದದಲ್ಲಿ ಪಾಲ್ಗೊಳ್ಳುವಂತೆ ಈ ವೇದಿಕೆ ಪ್ರೇರಣೆ ನೀಡಿತು. ಉಗ್ರಗಾಮಿಗಳು, ಮಂದಗಾಮಿಗಳು ಎಂಬ ಗುಂಪುಗಾರಿಕೆ ತೊಲಗಿ ಎರಡೂ ಬಣದ ನಾಯಕರು ಮೊದಲ ಬಾರಿಗೆ ಒಂದೇ ವೇದಿಕೆಯಲ್ಲಿ ಕಾಣಿಸಿಕೊಂಡು ತಮ್ಮ ಸಂಘಟನೆಯನ್ನು ತೋರಿಸಲು ಈ ಅಧಿವೇಶನದ ಮೂಲಕ ಸಾಧ್ಯವಾಯಿತು. ಇದರ ಮೂಲಕ ಕಾಂಗ್ರೆಸ್ ಒಡೆದು ಎರಡು ಭಾಗವಾಗುವುದು ತಪ್ಪಿತು. ದೇಶದ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸದಲ್ಲಿ ಈ ವಿಷಯ ಮಹತ್ವದ್ದು. ಒಂದು ವೇಳೆ ಕಾಂಗ್ರೆಸ್ ಒಡೆದು ಹೋಗಿದ್ದರೆ

ದೇಶದ ಇತಿಹಾಸವೇ ಬದಲಾಗುತ್ತಿತ್ತು. ಕ್ರಿ. ಶ. ೧೯೨೨ರಲ್ಲಿ ಗಯಾದಲ್ಲಿ ಜರುಗಿದ ಕಾಂಗ್ರೆಸ್ ಅಧಿವೇಶನದ ಹೊತ್ತಿಗೆ NO CHANGER PROCHANGER ಎಂಬ ಗುಂಪುಗಳು ಹುಟ್ಟಿಕೊಂಡವು. No changer ನವರು ಕಾಂಗ್ರೆಸ್ ಪಕ್ಷವು ಕಾಯಿದೆ ಮಂಡಳದಲ್ಲಿ ಪ್ರವೇಶಿಸಬಾರದು. ಇದರಿಂದ ಅಸಹಕಾರಕ್ಕೆ ಅರ್ಥವಿಲ್ಲದಂತಾಗುತ್ತದೆ ಎಂದು ವಾದಿಸಿದರೆ pro changer ನವರು ಕಾಂಗ್ರೆಸ್ ಪಕ್ಷವು ಚುನಾವಣೆಯಲ್ಲಿ ಆರಿಸಿ ಬಂದರೆ ನಮಗೆ ಬೇಕಾದ ಹಾಗೆ ಸರ್ಕಾರವನ್ನು ರಚಿಸಿಕೊಳ್ಳಬಹುದೆಂದು ವಾದಿಸಿದರು. ಕಾಂಗ್ರೆಸ್ಸಿನಲ್ಲಿ ಉಂಟಾದ ಈ ವಿಭಿನ್ನ ಧೋರಣೆಯು ವಿಕೋಪಕ್ಕೆ ಹೋಗಿತ್ತು. ಹೀಗಾಗಿ ಒಂದು ಒಮ್ಮತದ ನಿರ್ಣಯಕ್ಕೆ ಬರುವುದು ಅನಿವಾರ್ಯವಾಗಿತ್ತು. ಬೆಳಗಾವಿ ಅಧಿವೇಶನದಲ್ಲಿ ಈ ಎರಡು ಬಣಗಳ ಸಮನ್ವಯ ಸಾಧಿಸಲಾಯಿತು. ಕೌನ್ಸಿಲದಲ್ಲಿ ಹೋಗಬಯಸುವ ಕಾಂಗ್ರೆಸ್ಸಿಗರು ಹೋಗಬಹುದು. ರಚನಾತ್ಮಕ ಕಾರ್ಯಗಳಲ್ಲಿ ನಂಬಿಗೆ ಇದ್ದ ಕಾಂಗ್ರೆಸ್ಸಿಗರು ಖಾದಿ, ಗ್ರಾಮೋದ್ಯೋಗ, ಹಿಂದೂ–ಮುಸ್ಲಿಮ್ ಐಕ್ಯ, ಅಸ್ಪೃಶ್ಯತಾ ನಿವಾರಣೆ, ಹಿಂದೀ ಪ್ರಚಾರ ಮೊದಲಾದ ಕಾರ್ಯಕ್ರಮಗಳನ್ನು ಕೈಕೊಂಡು ಜನಜಾಗೃತಿ ಹಾಗೂ ಸಂಘಟನೆಯ ಕಾರ್ಯ ಮಾಡಬೇಕು ಎಂದು ನಿರ್ಧರಿಸಲಾಯಿತು. ಬೆಳಗಾವಿಯ ಕಾಂಗ್ರೆಸ್ ಅಧಿವೇಶನದಲ್ಲಿ ಕೈಗೊಂಡ ಈ ಮಹತ್ವದ ನಿರ್ಣಯದಿಂದ ಕಾಂಗ್ರೆಸ್ ಒಡೆಯದೇ ಉಳಿಯಿತು.[೧೮] ಈ ಸಂದರ್ಭದಲ್ಲಿ ಬೆಳಗಾವಿಯ ಹೋರಾಟಗಾರರು ಗಂಗಾಧರರಾಯ ದೇಶಪಾಂಡೆಯವರ ನೇತೃತ್ವದಲ್ಲಿ ಖಾದಿ ಮೊದಲಾದ ರಚನಾತ್ಮಕ ಕಾರ್ಯವನ್ನು ಕೈಗೊಳ್ಳಲು ನಿರ್ಧರಿಸಿದರು.[೧೯]

ರಾಷ್ಟ್ರೀಯ ಕಾಂಗ್ರೆಸ್ಸಿನೊಳಗೆ ಬಹಳಷ್ಟು ಸಮಸ್ಯೆಗಳಿದ್ದವು. ಜೊತೆಗೆ ಕೌಟುಂಬಿಕ ಅಸಮಾಧಾನಗಳೂ ಇದ್ದವು. ಇವುಗಳಿಗೆಲ್ಲ ಪರಿಹಾರ ಬೆಳಗಾವಿ ಅಧಿವೇಶನದಲ್ಲಿ ಒದಗಿ ಬಂದಿತು. ಅವುಗಳಲ್ಲಿ ಮುಖ್ಯವಾದದ್ದು ಜವಾಹರಲಾಲ ನೆಹರು ಹಾಗೂ ಮೋತಿಲಾಲ ನೆಹರು ಅವರ ಮಧ್ಯದಲ್ಲಿದ್ದ ಘರ್ಷಣೆ. ಬೆಳಗಾವಿ ಅಧಿವೇಶನಕ್ಕೆ ಬಂದಿದ್ದ ಪತ್ರಕರ್ತರಾದ ದುರ್ಗಾದಾಸರು ಜವಾಹರ ಮತ್ತು ಮೋತಿಲಾಲರ ಘರ್ಷಣೆಯ ವಿಚಾರವನ್ನು ಗಾಂಧೀಜಿಯವರಿಗೆ ತಿಳಿಸಿದರು.[೨೦] ಆಗ ಗಾಂಧೀಜಿ ಅವರು ಜವಾಹರ ಲಾಲ ಅವರನ್ನು ಕಾಂಗ್ರೆಸ್ ಕಮಿಟಿಗೆ ಪ್ರಧಾನ ಕಾರ್ಯದರ್ಶಿಯನ್ನಾಗಿ ಆಯ್ಕೆ ಮಾಡಿದರು.

ಕಾಂಗ್ರೆಸ್ ವರ್ಕಿಂಗ ಕಮೀಟಿಯಲ್ಲಿ ಟಿಳಕರ ಅನುಯಾಯಿಗಳಿಲ್ಲ ಎಂಬ ಅಸಮಾಧಾನವಿತ್ತು. ಇದನ್ನು ಹೋಗಲಾಡಿಸಲು ಗಾಂಧೀಜಿಯವರು ಬೆಳಗಾವಿ ಕಾಂಗ್ರೆಸ್ ಅಧಿವೇಶನದಲ್ಲಿ ಟಿಳಕರ ಇಬ್ಬರು ಅನುಯಾಯಿಗಳನ್ನು ವರ್ಕಿಂಗ ಕಮೀಟಿಯಲ್ಲಿ ಸೇರಿಸಿಕೊಂಡು ವಲ್ಲಭಬಾಯಿ ಪಟೇಲ ಹಾಗೂ ರಾಜಗೋಪಾಲಚಾರಿಯವರನ್ನು ಕೈಬಿಟ್ಟರು. ಇದರಿಂದ ಕಾಂಗ್ರೆಸ್ಸಿನಲ್ಲಿಯ ಅಸಮಾಧಾನ ತೊಲಗಿತು.

ಬೆಳಗಾವಿ ಅಧಿವೇಶನದ ಮತ್ತೊಂದು ಮಹತ್ವದ ಕೊಡುಗೆಯೆಂದರೆ ಸ್ವಾತಂತ್ರ್ಯ ಹೋರಾಟಗಾರರಲ್ಲಿದ್ದ ಗುಂಪುಗಾರಿಕೆಯನ್ನು ಹೋಗಲಾಡಿಸಿ ಸಮನ್ವಯತೆಯನ್ನು ಸಾಧಿಸಿದ್ದು. ರಾಷ್ಟ್ರೀಯವಾದಿಗಳು, ಬ್ರಾಹ್ಮಣ, ಬ್ರಾಹ್ಮಣೇತರರು,

ದೇಶಿಯ ಸಂಸ್ಥಾನಗಳು, ಬ್ರಿಟಿಷ ಪ್ರೆಸಿಡೆನ್ಸಿಗಳು ಮುಂತಾದವರೆಲ್ಲಾ ಒಂದೇ ವೇದಿಕೆಯಲ್ಲಿ ಭಾಗವಹಿಸಿ ಒಂದೇ ಸಂಘಟನೆಯಾಗಿ ರೂಪಗೊಳ್ಳುವಂತೆ ಬೆಳಗಾವಿ ಅಧಿವೇಶನದಲ್ಲಿ ಸಾಧ್ಯವಾಯಿತು.

ಈ ಅಧಿವೇಶನದ ಮತ್ತೊಂದು ವೈಶಿಷ್ಟ್ಯವೆಂದರೆ ವಿಭಿನ್ನ ರಾಜಕೀಯ ಹಿನ್ನೆಲೆಯ ಸಂಘಟನೆಗಳನ್ನು ಪ್ರತ್ಯೇಕವಾಗಿ ಮತ್ತು ಜಂಟಿಯಾಗಿ ಚರ್ಚೆ ನಡೆಸಲು ಅವಕಾಶವನ್ನು ಕಲ್ಪಿಸಲಾಯಿತು. ಖಿಲಾಫತ್ ಸಂಘಟನೆ, ಮುಸ್ಲಿಂ ಲೀಗ್‌ನಂತಹ ಅಲ್ಪಸಂಖ್ಯಾತ ಪಕ್ಷಗಳು, ಉದಾರವಾದಿಗಳು, ಬ್ರಾಹ್ಮಣೇತರರು, ಅಲ್ಲದೆ ನಿಮ್ನ ವರ್ಗದ ಸಂಘಟನೆಯನ್ನು ಆಹ್ವಾನಿಸಿ ಮುಕ್ತವಾಗಿ ಚರ್ಚಿಸಲು ಬೆಳಗಾವಿ ಅಧಿವೇಶನದಲ್ಲಿ ಸಾಧ್ಯವಾಯಿತು. ಮೇಲ್ನೋಟಕ್ಕೆ ಪರಸ್ಪರ ವ್ಯತಿರಿಕ್ತವಾದ ಹಿನ್ನೆಲೆಯುಳ್ಳ ಪಕ್ಷಗಳನ್ನು ಒಂದಡೆ ಚರ್ಚೆಗೆ ಸೇರಿಸಿದ್ದರಿಂದ ಬೆಳಗಾವಿ ಅಧಿವೇಶನಕ್ಕೆ ರಾಷ್ಟ್ರೀಯ ವೈಶಾಲ್ಯತೆ ಉಂಟಾಯಿತು.

ಬೆಳಗಾವಿ ಅಧಿವೇಶನದಲ್ಲಿ ಸ್ಪಷ್ಟವಾಗಿ ಕಂಡುಬಂದ ಒಂದು ವಿಷಯವೆಂದರೆ ಈ ಅಧಿವೇಶನವು ಕೇವಲ ಕಾಂಗ್ರೆಸ್ ಕಾರ್ಯಕರ್ತರ ಸಮಾವೇಶವಾಗಿರದೆ ಸಂಘಟನಾ ಸಮಾವೇಶವಾಗಿತ್ತು. ದೇಶ ಸ್ವತಂತ್ರಗೊಳ್ಳಬೇಕಾದರೆ ಒಗ್ಗಟ್ಟಿನಿಂದ ಹೋರಾಟ ಮಾಡುವುದು ಅನಿವಾರ್ಯವೆಂದು ಎಲ್ಲರಲ್ಲೂ ಮನವರಿಕೆಯಾಗಿತ್ತು. ಹೀಗಾಗಿ ಈ ಐಕ್ಯತೆಯನ್ನು ಸಾಧಿಸಿತೋರಿಸಲು ಒಂದು ವೇದಿಕೆಯ ಅವಶ್ಯಕತೆಗಾಗಿ ಎಲ್ಲರೂ ಕಾಯ್ದುಕುಳಿತಿದ್ದರು. ಅಲ್ಲದೆ ಎಲ್ಲರನ್ನು ಆತ್ಮೀಯವಾಗಿ ಕಾಣುವನಾಯಕನ ನಿರೀಕ್ಷೆಯಲ್ಲಿದ್ದರು. ಅಂತಹ ಒಂದು ಸದಾವಕಾಶ ಬೆಳಗಾವಿ ಅಧಿವೇಶನದಲ್ಲಿ ಒದಗಿ ಬಂದಾಗ ಇಡೀ ದೇಶದ ಹಲವಾರು ಸಂಘಟನೆಗಳು ಪಕ್ಷಗಳು ಸಂಸ್ಥಾನಗಳು ಮುಖಂಡರು ಹೋರಾಟಗಾರರು ಇದನ್ನು ಸರಿಯಾಗಿ ಬಳಸಿಕೊಂಡರು. ಹೀಗಾಗಿ ಪ್ರತಿಯೊಬ್ಬರ ಗಮನವೂ ಐಕ್ಯತಾ ಸಾಧನೆಯ ಕಡೆಗೆ ಹರಿದಿತ್ತು. ಈ ಹಿನ್ನೆಲೆಯಲ್ಲಿ ಬೆಳಗಾವಿ ಮಹಾ ಅಧಿವೇಶನದಲ್ಲಿ ಹಲವಾರು ಸಮಾವೇಶಗಳು ಜರುಗಿದವು. ಸೈಫುದ್ದೀನ್ ಕಿಚ್ಲೂ ಅವರ ಅಧ್ಯಕ್ಷತೆಯಲ್ಲಿ ಅಖಿಲಭಾರತ ಖಿಲಾಫತ್ ಸಮಾವೇಶನ ಜರುಗಿತು. ಈ ಸಂದರ್ಭದಲ್ಲಿ ಅವರು ಕಾಂಗ್ರೆಸ್ಸಿನ ಕೆಲಸದಲ್ಲಿ ಹೆಚ್ಚಿನ ಆಸಕ್ತಿ ತೋರಿ ರಾಷ್ಟ್ರೀಯ ಮನೋಭಾವನೆಯನ್ನು ಬೆಳೆಸಿಕೊಳ್ಳುವಂತೆ ಮುಸ್ಲಿಂರನ್ನು ಎಚ್ಚರಿಸಿದರು. ಪಂಡಿತ ಮದನ ಮೋಹನ ಮಾಳವೀಯ ಅವರ ಅಧ್ಯಕ್ಷತೆಯಲ್ಲಿ ಅಖಿಲ ಭಾರತ ಹಿಂದೂ ಮಹಾಸಭಾ ಸಮಾವೇಶಗೊಂಡಿತು. ಪ್ರತಿಯೊಂದು ಕೋಮಿನವರು ಮೊದಲು ರಾಷ್ಟ್ರೀಯವಾದಿಗಳಾಗಬೇಕೆಂದು ಎಲ್ಲರಲ್ಲಿ ವಿನಂತಿಸಿಕೊಂಡರು. ಅಖಿಲ ಭಾರತ ಬ್ರಾಹ್ಮಣೇತರರ ಸಮಾವೇಶ ಎ. ರಾಮಸ್ವಾಮಿ ಮೊದಲಿಯಾರ್ ಅವರ ಅಧ್ಯಕ್ಷತೆಯಲ್ಲಿ ನಡೆದು ಬ್ರಾಹ್ಮಣೇತರರು ಕಾಂಗ್ರೆಸ್ ಪಕ್ಷವನ್ನು ಸೇರಲು ಹಿಂಜರಿಯುತ್ತಿರುವುದರಿಂದ ಆ ಪಕ್ಷ ದುರ್ಬಲವಾಗಿದೆ; ವಸಾಹತುಶಾಹಿಯ ತಂತ್ರವನ್ನು ಅರ್ಥಮಾಡಿಕೊಂಡು ಕಾಂಗ್ರೆಸ್ ಪಕ್ಷವನ್ನು ಬೆಂಬಲಿಸುವಂತೆ ಕರೆ ನೀಡಿದರು.

ಡಾ. ಆರ್. ಸಿ. ರೆಡ್ಡಿಯವರ ಅಧ್ಯಕ್ಷತೆಯಲ್ಲಿ ವಿದ್ಯಾರ್ಥಿ ಕಾಂಗ್ರೆಸ್‌ನ ಸಮ್ಮೇಳನ ಜರುಗಿತು. ಈ ಸಂದರ್ಭದಲ್ಲಿ ಶೌಕತ್ ಅಲಿ, ಎಸ್. ಶ್ರೀನಿವಾಸ ಅಯ್ಯಂಗಾರ್, ಸರೋಜಿನಿ ನಾಯ್ಡು, ಮಹಾತ್ಮಾ ಗಾಧೀಜಿ–ಇವರೆಲ್ಲ ವಿದ್ಯಾರ್ಥಿಗಳ ಮೇಲೆ ಶಾಶ್ವತ ಪರಿಣಾಮ ಬೀರುವ ಭಾಷಣ ಮಾಡಿದರು.

ದಿನಾಂಕ ೨೭ ರ ಸಾಯಂಕಾಲ ನಡೆದ ಹಿಂದೂ ಮಹಾಸಭಾ ಅಧಿವೇಶನದಲ್ಲಿ ಸ್ವಾಮಿ ಶ್ರದ್ಧಾನಂದರು ಅಧ್ಯಕ್ಷತೆ ವಹಿಸಿದ್ದರು. ಈ ಸಂದರ್ಭದಲ್ಲಿ ಪಂ. ಮಾಲವೀಯ ಅವರು ಮಾತನಾಡಿ 'ಸಾಮ್ರಾಜ್ಯಗಳು ಉದಿಸಿವೆ. ಸಾಮ್ರಾಜ್ಯಗಳು ಅಳಿದಿವೆ; ಹಿಂದೂಧರ್ಮ ಮಾತ್ರ ಜೀವಂತವಾಗಿ ಉಳಿದಿದೆ. ನಾಗರಿಕತೆಗಳು ಹುಟ್ಟಿವೆ. ನಾಗರಿಕತೆಗಳು ಅಳಿದಿವೆ. ಪ್ರಾಚೀನ ಹಿಂದೂ ನಾಗರಿಕತೆಯ ಪರಿಶುದ್ಧವಾಹಿನಿಯು ಎಂದೆಂದಿಗೂ ಹರಿಯುತ್ತಿದೆ' ಎಂದು ಹಿಂದು ಧರ್ಮವನ್ನು ಕುರಿತು ಮಾರ್ಮಿಕವಾಗಿ ಮಾತನಾಡಿದರು.

ಶಂಕರನ್ ನಾಯರ್ ಅವರ ಅಧ್ಯಕ್ಷತೆಯಲ್ಲಿ ದಿನಾಂಕ ೨೭ನೆಯ ಡಿಸೆಂಬರ್ ೧೯೨೪ರಂದು ಅಖಿಲ ಭಾರತ ಸಮಾಜ ಸುಧಾರಣಾ ಸಮಾವೇಶ ಜರುಗಿತು. ನಾಯರ್ ಅವರು ಸಮಾಜ ಸುಧಾರಣೆಯ ವಿಷಯದಲ್ಲಿ ವಿರೋಧ ವ್ಯಕ್ತಪಡಿಸಿದ್ದ ದಕ್ಷಿಣ ಭಾರತೀಯ ಕಾಂಗ್ರೆಸ್ಸಿಗರ ಧೋರಣೆಯಿಂದಾಗಿ ೧೯೧೧ ರಿಂದ ಅವರೊಡನೆ ಮನಃಸ್ತಾಪಗೊಂಡು ದೂರವಾಗಿದ್ದರು. ಬ್ರಾಹ್ಮಣೇತರರಲ್ಲಿ ಪ್ರಭಾವಿಯಾಗಿದ್ದ ನಾಯರ್‌ರವರು ಕಾಂಗ್ರೆಸ್ಸಿಗೆ ಮರಳಲು ಬೆಳಗಾವಿ ಅಧಿವೇಶನ ಕಾರಣವಾಯಿತು. ನಾಯರ್ ಅವರು ಕಾಂಗ್ರೆಸ್ಸಿಗೆ ಮರಳಿದ್ದು ದಕ್ಷಿಣ ಭಾರತದ ಕಾಂಗ್ರೆಸ್ಸಿನ ಇತಿಹಾಸದಲ್ಲಿ ಮಹತ್ವದ ಬೆಳವಣಿಗೆಯಾಯಿತು. ಈ ಅಧಿವೇಶನದ ಸಂದರ್ಭದಲ್ಲಿ ನಾಯರ ಅವರು ಮಹಿಳೆಯರ ಸ್ಥಾನಮಾನ, ಅಸ್ಪೃಶ್ಯತೆ ಹಾಗೂ ಜಾತೀಯತೆಯ ಕೆಡಕುಗಳ ಬಗ್ಗೆ ಪ್ರಸ್ತಾಪ ಮಾಡಿ ಸಮಾನತೆಗಾಗಿ ಮನವಿ ಮಾಡಿಕೊಂಡರು. ಸಂಸ್ಥಾನಗಳ ಪ್ರಜೆಗಳ ಬಗೆಗಿನ ಸಮಾವೇಶದಲ್ಲಿ ಎನ್. ಸಿ. ಕೇಳ್ಕರ ಅವರು ಅಧ್ಯಕ್ಷರಾಗಿ ಸಂಸ್ಥಾನಗಳ ಪ್ರಜೆಗಳ ವಿಷಯವನ್ನು ಪ್ರಸ್ತಾಪಿಸಿದರು.

ಗಾಂಧೀಜಿಯವರು ಬೆಳಗಾವಿ ಅಧಿವೇಶನದಲ್ಲಿ ಮಾಡಿದ ಭಾಷಣ ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿತು. '. . . . ಅಸ್ಪೃಶ್ಯತೆಯನ್ನು ತೊಡೆದು ಹಾಕುವ ದೀಕ್ಷೆಯನ್ನು ಸವರ್ಣೀಯರು ಹಿಂದೂಧರ್ಮಕ್ಕಾಗಿ ಮತ್ತು ತಮಗಾಗಿ ತೊಡಬೇಕಾಗಿರುವುದು ಅನಿವಾರ್ಯವಾಗಿದೆ. ಜನರು ಸಹಿಷ್ಣುತೆ, ಸಮಾನತೆ, ಐಕ್ಯತೆಯನ್ನು ಪ್ರದರ್ಶಿಸಿದಾಗ ಮಾತ್ರ ಸ್ವರಾಜ್ಯ ಸಾಧ್ಯವಾಗುತ್ತದೆ' ಎಂದು ಎತ್ತಿ ಹೇಳಿದರು.

ಸ್ವಾತಂತ್ರ್ಯದ ಬಗ್ಗೆ ವಿವರಿಸುತ್ತಾ 'ಸಾಮ್ರಾಜ್ಯದೊಳಗಡೆಯೇ ನಾನು ಸ್ವರಾಜ್ಯಕ್ಕಾಗಿ ಹೋರಾಡುವೆ . . . ಆದರೆ ಬ್ರಿಟನ್ನಿನ ತಪ್ಪಿನಿಂದಾಗಿ ಎಲ್ಲ ಸಂಬಂಧಗಳನ್ನು ಕಡಿದುಕೊಳ್ಳುವುದು ಅನುವಾರ್ಯವಾದರೆ ಅದಕ್ಕೂ ಸಿದ್ಧ. . .' ಎಂದರು.

ಬೆಳಗಾವಿ ಅಧಿವೇಶನದಲ್ಲಿ ಸೇರಿದ ಜನರ ಉತ್ಸಾಹವನ್ನು ಕಂಡು ಗಾಂಧೀಜಿ ಬೆರಗಾದರು. ಇದರಿಂದ ಹೆಚ್ಚು ಭಾವುಕರಾಗಿ ತಮಗೆ ತೋರಿದ ಪ್ರೀತಿ ಅಭಿಮಾನವನ್ನು ಶ್ಲಾಘಿಸಿದರು. "ಬೇರೊಬ್ಬ ಅಧ್ಯಕ್ಷರಿಗೆ ಇಷ್ಟೊಂದು ಪ್ರೀತಿ, ವಿಶ್ವಾಸ ದೊರಕಿರುವುದೆಂದು ತಿಳಿಯಲಾರೆ, ಪ್ರತಿನಿಧಿಗಳು ತೋರಿರುವ ಅಕ್ಕರೆ ಅಪ್ರತಿಮವಾದುದು. ಇದಕ್ಕಿಂತ ಮಿಗಿಲಾದದ್ದನ್ನು ಪಡೆಯಲು ಯಾರೂ ಆಸೆ ಪಟ್ಟಿರಲಾರರು, ಪಡೆದಿರಲಾರರು. ನಾನು ಕೇಳಬಹುದಾದದ್ದನ್ನೆಲ್ಲ ತಾವು ನನಗೆ ನೀಡಿರುವಿರಿ" : "ನೀವು ನನಗೆ ತೋರಿರುವ ಉದಾತ್ತವಾದ ಪ್ರೀತಿಯನ್ನು ಔದಾರ್ಯವನ್ನು ನಾನು ಮತ್ತು ನೀವು ಅತ್ಯಂತ ಪ್ರೀತಿ ಪಾತ್ರವೆಂದು ತಿಳಿದಿರುವ ಪದಾರ್ಥವಾಗಿ ಪರಿವರ್ತಿಸಲು ಕೇಳಿಕೊಳ್ಳುವ ; ಯಾವ ಪದಾರ್ಥ ನನ್ನನ್ನು ನಿಮ್ಮನ್ನು ಶಾಶ್ವತವಾದ ಬಂಧನದಲ್ಲಿ ಹಿಡಿದಿಟ್ಟಿರುವುದೋ ಅದು ಬೇರೇನೂ ಅಲ್ಲ, ಸ್ವರಾಜ್ಯ. . . . ಪ್ರತಿಯೊಬ್ಬರಿಗೂ ಪರಿಸ್ಥಿತಿಯ ಅರಿವಿದೆ . . . . ನಿಮ್ಮ ನಿಮ್ಮ ಜಿಲ್ಲೆಗಳಲ್ಲಿ ಪ್ರವಾಸ ಮಾಡಿ ಖಾದಿಯ ಸಂದೇಶವನ್ನು ಸಾರಿ, ಹಿಂದೂ–ಮುಸ್ಲಿಂ ಸಂದೇಶವನ್ನು ಹಾಗೂ ಅಸ್ಪೃಶ್ಯತೆ ನಿವಾರಣೆಯ ಸಂದೇಶವನ್ನು ಸಾರಿ . . ." ಎಂದು ಕರೆಕೊಟ್ಟರು.

ಬೆಳಗಾವಿ ಅಧಿವೇಶನಕ್ಕೆ ದೇಶದ ಪ್ರಮುಖ ಮುಖಂಡರಲ್ಲಿ ಆಗಮಿಸಿದ್ದೊಂದು ವಿಶೇಷವಾಗಿತ್ತು. ಹಿಂದಿನ ಅಧಿವೇಶನಗಳಲ್ಲಿ ಭಿನ್ನಾಭಿಪ್ರಾಯಗಳಿಂದ ಹಲವರು ಭಾಗವಹಿಸಿರಲಿಲ್ಲ. ಕೆಲವು ಅಧಿವೇಶನಗಳಲ್ಲಿ ಭಾಗವಹಿಸಿದ್ದರೂ ಹೊಡೆದಾಟ ಬಡೆದಾಟ, ವಿರೋಧಗಳು ಕಂಡು ಬಂದಿದ್ದವು. ಬೆಳಗಾವಿ ಅಧಿವೇಶನ ಈ ಎಲ್ಲ ಸಮಸ್ಯೆಗಳಿಗೆ ಪರಿಹಾರವನ್ನು ಒದಗಿಸಿ ಇಡೀ ರಾಷ್ಟ್ರದ ನಾಯಕರೆಲ್ಲಾ ಒಗ್ಗಟ್ಟಾಗಿ ಹೋರಾಟವನ್ನು ಕೈಗೊಳ್ಳುವಂತೆ ನಿರ್ಣಯಿಸಲಾಯಿತು. ಈ ಸಂದರ್ಭದಲ್ಲಿ ಮಹಾತ್ಮಾ ಗಾಂಧೀಜಿಯವರು ಅಧಿವೇಶನದ ಅಧ್ಯಕ್ಷತೆಯನ್ನು ವಹಿಸಿಕೊಂಡದ್ದು ಮಹತ್ವ ಪಡೆದಿತ್ತು. ಅಧಿವೇಶನದಲ್ಲಿ ಭಾಗವಹಿಸಿದ ಪ್ರಮುಖರೆಂದರೆ ಜವಾಹರಲಾಲ ನೆಹರು, ಮೋತಿಲಾಲ ನೆಹರು, ರವೀಂದ್ರನಾಥ ಠಾಗೋರ, ಲಾಲಾ ಲಜಪತರಾಯ, ಸಿ. ರಾಜಗೋಪಾಲಚಾರಿ, ಸರೋಜಿನಿ ನಾಯ್ಡು, ಸರ್ದಾರ ವಲ್ಲಭಬಾಯಿ ಪಟೇಲ, ಡಾ. ಬಾಬುರಾಜೇಂದ್ರ, ಪ್ರಸಾದ, ಮಣಿಬೆನ್ ಪಟೇಲ, ರಾಜಾಜಿ, ಅಲಿ ಸಹೋದರರು, ಜಮನ್‌ಲಾಲ್ ಬಜಾಜ್, ನೇತಾಜಿ ಸುಭಾಸಚಂದ್ರ ಭೋಸ ಮೊದಲಾದವರು ಉಪಸ್ಥಿತರಿದ್ದರು.

ಇದೇ ಸಂದರ್ಭದಲ್ಲಿ ಲಾಲಾ ಲಜಪತರಾಯರು ಹಿಂದೂ–ಮುಸ್ಲಿಂ ಸಮಸ್ಯೆಯ ಕುರಿತು ಮಾತನಾಡಿದರು. . . . ಮಹಾತ್ಮರಿಗೆ ತಕ್ಕ ಗೌರವ ಸಲ್ಲಿಸಿ ನಾನು ಹೇಳುವುದೇನೆಂದರೆ ಹಿಂದೂ–ಮುಸ್ಲಿಂ ಸಮಸ್ಯೆ ಅತ್ಯಂತ ಪ್ರಧಾನ ಸಮಸ್ಯೆಯಾಗಿದ್ದು ಸ್ವರಾಜ್ಯದಷ್ಟೇ ಅದರ ಕುರಿತೂ ಗಮನ ನೀಡಬೇಕಾಗಿದೆ ಎಂದು ಹೇಳಿದರು.

ಬೆಳಗಾವಿಯಲ್ಲಿ ಕಾಂಗ್ರೆಸ್ ಅಧಿವೇಶನ ಜರುಗಿದ್ದು ಕರ್ನಾಟಕದ ಪಾಲಿಗೆ ಅತ್ಯಂತ ಮಹತ್ವದ್ದು. ಈ ಅಧಿವೇಶನದಿಂದ ಮಹತ್ವದ ಬದಲಾವಣೆಗಳು ಕರ್ನಾಟಕದಾದ್ಯಂತ ಉಂಟಾದವು. ಸಮಗ್ರ ಕರ್ನಾಟಕದ ಸಂಸ್ಕೃತಿಯೇ ಈ ಅಧಿವೇಶನದಲ್ಲಿ ಪ್ರತಿಬಿಂಬಿತವಾಗಿತ್ತು. ಕನ್ನಡಿಗರ ವೇಷಭೂಷಣ, ಊಟ ಉಪಚಾರ, ಕಲೆ, ಸಂಸ್ಕೃತಿ,

ಸಂಗೀತ, ಸಾಹಿತ್ಯ, ಸಂಸ್ಕಾರ, ಇತಿಹಾಸ ಇವೆಲ್ಲವುಗಳನ್ನು ದೇಶದ ಗಣ್ಯರ ಎದುರಿಗೆ ತೆರೆದಿಡಲು ಈ ವೇದಿಕೆಯ ಮೂಲಕ ಸಾಧ್ಯವಾಯಿತು. ಬೆಳಗಾವಿ ಅಧಿವೇಶನದಲ್ಲಿ ಮೈಸೂರು ಸಂಸ್ಥಾನ ಭಾರತದ ರಾಜಕೀಯದಲ್ಲಿ ಮೊದಲ ಬಾರಿಗೆ ಭಾಗವಹಿಸಿತು. ಕೃಷ್ಣರಾಜ ಒಡೆಯರು ಖಾದೀ ಗ್ರಾಮೋದ್ಯೋಗ ಪ್ರದರ್ಶನಕ್ಕೆ ನೆರವು ನೀಡಿ ತಮ್ಮ ಮ್ಯೂಜಿಯಂನಲ್ಲಿದ್ದ ಮೂರ್ತಿಗಳನ್ನು ರವಾನೆ ಮಾಡಿದರು. ಅಲ್ಲದೆ ತಮ್ಮ ಸ್ವಂತ ವೆಚ್ಚದಲ್ಲಿ ಸಂಗೀತಗಾರರನ್ನು ಕಳುಹಿಸಿಕೊಟ್ಟರು. ಈ ಸಂದರ್ಭದಲ್ಲಿ ವೀಣೆ ಶೇಷಣ್ಣನವರ ವೀಣಾವಾದನದ ಕಾರ್ಯಕ್ರಮ ಜರುಗಿತು. ಮಹಾತ್ಮಾ ಗಾಂಧೀಜಿಯವರು ಸುಮಾರು ಒಂದುವರೆ ಗಂಟೆಯವರೆಗೆ ಶೇಷಣ್ಣನವರ ವೀಣಾವಾದನವನ್ನು ಆಲಿಸಿ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. ವೀಣೆ ಶೇಷಣ್ಣನವರ ಈ ಸಂಗೀತ ಕಚೇರಿಯಿಂದ ಕರ್ನಾಟಕ ಸಂಗೀತಕ್ಕೆ ದೇಶವ್ಯಾಪ್ತಿಯಾದ ಮಹತ್ವ ಒದಗಿಬಂದಿತು. ಇದೇ ಸಂದರ್ಭದಲ್ಲಿ ಹುಯಿಲಗೋಳ ನಾರಾಯಣರಾಯರ 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ಎಂಬ ನಾಡಿನ ಏಕೀಕರಣದ ಗುರಿಯನ್ನು ಹೊತ್ತ ಹಾಡು ಹದಿನಾಲ್ಕು ವರ್ಷದ ಬಾಲಕಿಯಾಗಿದ್ದ ಗಂಗೂಬಾಯಿ ಹಾನಗಲ್ ಅವರಿಂದ ಹಾಡಲ್ಪಟ್ಟಿತು. ಈ ಅಧಿವೇಶನದ ಮೂಲಕ ಗಂಗೂಬಾಯಿಯವರು ಉದಯೋನ್ಮುಖ ಸಂಗೀತಗಾರ್ತಿಯಾಗಿ ಹೊರಹೊಮ್ಮಿದರು. ಇದೇ ಸಂದರ್ಭದಲ್ಲಿ ಬೆಟಗೇರಿ ಕೃಷ್ಣಶರ್ಮರ 'ಎನಿತು ಇನಿದು ಈ ಕನ್ನಡ ನುಡಿಯು' ಎಂಬ ಹಾಡು ಪ್ರಪ್ರಥಮವಾಗಿ ಹಾಡಲ್ಪಟ್ಟಿತು.

ಕರ್ನಾಟಕ ಏಕೀಕರಣದ ಮೊದಲನೆ ಪರಿಷತ್ತು ಇದೇ ವೇದಿಕೆಯಿಂದ ಸರ್ ಸಿದ್ದಪ್ಪ ಕಂಬಳಿಯವರ ಅಧ್ಯಕ್ಷತೆಯಲ್ಲಿ ಜರುಗಿತು. ಇದು ಕರ್ನಾಟಕದ ಏಕೀಕರಣ ಹೋರಾಟಕ್ಕೆ ಮಹತ್ವದ ತಿರುವನ್ನು ಒದಗಿಸಿತು. ಈ ಸಂದರ್ಭದಲ್ಲಿ ಕರ್ನಾಟಕದ ಬಗ್ಗೆ ಸಮಗ್ರ ಮಾಹಿತಿಯನ್ನು ನೀಡುವ 'ಕರ್ನಾಟಕ ಕೈಪಿಡಿ' ಎಂಬ ಪುಸ್ತಕವನ್ನು ಗಾಂಧೀಜಿಯವರಿಗೆ ಅರ್ಪಿಸಲಾಯಿತು.

ಹರ್ಡೇಕರ ಮಂಜಪ್ಪನವರು 'ಸತ್ಯಾಗ್ರಹಿ ಬಸವೇಶ್ವರ' ಎಂಬ ಕೃತಿಯನ್ನು ಶ್ರೀ ಭಿಡೆ ಲಕ್ಷ್ಮಣರಾಯರಿಂದ ಹಿಂದಿ ಮತ್ತು ಮರಾಠಿ ಭಾಷೆಯಲ್ಲಿ ಬರೆಯಿಸಿ ಮಹಾತ್ಮಾಗಾಂಧಿ ಮತ್ತು ಇತರ ಮುಖಂಡರಿಗೆ ಅರ್ಪಿಸಿದರು. ಇದನ್ನು ಓದಿದ ಗಾಂಧೀಜಿಯವರು ತಮ್ಮ ಭಾಷಣದಲ್ಲಿ "ತಾವು ಇಂದು ಕೈಗೊಂಡಿದ್ದ ಅಸ್ಪೃಶ್ಯತಾ ನಿವಾರಣೆ, ಮಹಿಳೆಯರಿಗೆ ಸಮಾನ ಹಕ್ಕು, ಸಾಮಾಜಿಕ ನ್ಯಾಯ, ಕಾಯಕತ್ವ ಮುಂತಾದ ವಿಧಾಯಕ ಕಾರ್ಯಕ್ರಮಗಳನ್ನು ಬಸವೇಶ್ವರರು ೮೦೦ ವರ್ಷಗಳ ಪೂರ್ವದಲ್ಲಿಯೇ ಪ್ರಾರಂಭಿಸಿರುವರು. ನಾವು ಅವುಗಳ ಅನುಕರಣೆ ಮಾಡುತ್ತಿರುವುದಾಗಿ" ಹೇಳಿದರು. ಗಾಂಧೀಜಿಯವರು ಹೇಳಿದ ಈ ಮಾತುಗಳು ಅನೇಕ ವೀರಶೈವರಿಗೆ ಕಾಂಗ್ರೆಸ್ ಸೇರಲು ಪ್ರೇರಕವಾಯಿತು. ಅದರಲ್ಲಿಯೂ ಉತ್ತರ ಕರ್ನಾಟಕ ಭಾಗದ ಲಿಂಗಾಯತರು ಕಾಂಗ್ರೆಸ ಸೇರಲು ಬಹುವಿಧದಲ್ಲಿ ಈ ಅಧಿವೇಶನ ಸಹಾಯಕವಾಯಿತು. ಮುಂದಿನ ದಶಕಗಳಲ್ಲಿ ಕಾಂಗ್ರೆಸ್ ವೀರಶೈವರಿಂದ ಒಂದುಗೂಡಿದ ದೈತ್ಯ ಶಕ್ತಿಯಾಗಿ ಬೆಳೆಯಲು ಸಹಾಯಕವಾಯಿತು.

ವೀರಶೈವರನ್ನೊಳಗೊಂಡ 'ಬಸವೇಶ್ವರ ಸೇವಾದಳ' ಎಂಬ ಸ್ವಯಂ ಸೇವಕ ದಳವನ್ನು ಬೆಳಗಾವಿ ಅಧಿವೇಶನದ ಸಂದರ್ಭದಲ್ಲಿ ಹರ್ಡೇಕರ ಮಂಜಪ್ಪನವರು ಸಿದ್ಧಗೊಳಿಸಿದ್ದರು. ಈ ಸೇವಾದಳದ ಮೂಲಕ ಅಧಿವೇಶನ ಮುಗಿಯುವವರೆಗೆ ಅತ್ಯಂತ ನಿಷ್ಠೆಯಿಂದ ಎಲ್ಲಾ ಕಾರ್ಯಗಳನ್ನು ಅಚ್ಚುಕಟ್ಟಾಗಿ ಬಸವೇಶ್ವರ ಸೇವಾದಳವು ನಿರ್ವಹಿಸಿತು.

ವೀರಶೈವರಿಗೆ ಮಹಾತ್ಮ ಗಾಂಧೀಜಿಯವರ ಸಂದೇಶ ತಲುಪುವಂತಹ ವ್ಯವಸ್ಥೆಯನ್ನು ಬೆಳಗಾವಿ ಅಧಿವೇಶನದ ಸಂದರ್ಭದಲ್ಲಿ ಹರ್ಡೇಕರ ಅವರು ಮಾಡಿದರು. ವೀರಶೈವ ಪರಿಷತ್ತನ್ನು ಈ ಸಂದರ್ಭದಲ್ಲಿ ಸೇರಿಸಿ ಗಾಂಧೀಜಿ ಹಾಗೂ ಸರೋಜಿನಿದೇವಿ ಅವರನ್ನು ಕರೆಯಿಸಿ ಅವರಿಂದ ಉಪದೇಶ ನೀಡಿಸಿದರು.

ಬೆಳಗಾವಿ ಅಧಿವೇಶನದ ಮೂಲಕ ಕರ್ನಾಟಕ ಸಂಸ್ಕೃತಿ ಇತಿಹಾಸದ ಪ್ರದರ್ಶನವಾಯಿತು. ವಿಜಯನಗರ ಸಾಮ್ರಾಜ್ಯದ ಗತವೈಭವವನ್ನು ನೆನಪಿಸುವಂತಹ ವೇದಿಕೆಯನ್ನು ಅಧಿವೇಶನದಲ್ಲಿ ನಿರ್ಮಿಸಲಾಯಿತು. ಸಮ್ಮೇಳನ ನಡೆಯುವ ಸ್ಥಳಕ್ಕೆ ವಿಜಯನಗರವೆಂದು ಹೆಸರಿಟ್ಟು ಪ್ರವೇಶದ್ವಾರಕ್ಕೆ ಹಂಪೆಯ ವಿರೂಪಾಕ್ಷನದೇವಾಲಯದ ಗೋಪುರದ ರೀತಿಯ ಅಲಂಕಾರ ಮಾಡಲಾಗಿತ್ತು. ನೀರಿನ ಅನುಕೂಲಕ್ಕಾಗಿ ತೋಡಿದ್ದ ಬಾವಿಗೆ ಪಂಪಾ ಸರೋವರ ಎಂದು ಹೆಸರಿಟ್ಟು ಇವೆಲ್ಲ ಕನ್ನಡಿಗರ ಸಾಂಸ್ಕೃತಿಕ ಸಂಕೇತಗಳಾಗಿ ರೂಪುಗೊಳ್ಳುವಂತೆ ಮಾಡಲಾಯಿತು.

ಡಾ. ಹರ್ಡೀಕರ ನಾರಾಯಣ ಅವರು ಸಂಘಟಿಸಿದ್ದ ಹಿಂದುಸ್ಥಾನಿ ಸೇವಾದಳ ಬೆಳಗಾವಿ ಕಾಂಗ್ರೆಸ್ ಅಧಿವೇಶನದಲ್ಲಿ ಅಭೂತ ಪೂರ್ವವಾದ ಕಾರ್ಯವನ್ನು ಮಾಡಿತು. ಸೇವಾದಳದ ಅಚ್ಚುಕಟ್ಟಾದ ಕಾರ್ಯಗಳಿಂದಾಗಿಯೇ ಸಮ್ಮೇಳನ ಅತ್ಯಂತ ವ್ಯವಸ್ಥಿತವಾಗಿ ನೆರವೇರಿ ಯಶಸ್ವಿಯಾಯಿತು. ಕರ್ನಾಟಕದ ಜನರ ಸಂಘಟನಾ ಕೌಶಲ್ಯವು ಇಡೀ ದೇಶದ ಜನರಿಗೆ ಈ ಮೂಲಕ ಗೊತ್ತಾಗುವಂತಾಯಿತು. ಸುಮಾರು ೧೨೦೦ ಸ್ವಯಂ ಸೇವಕರು ಈ ಸಮ್ಮೇಳನದಲ್ಲಿ ಭಾಗವಹಿಸಿದ್ದರು. ಕರ್ನಾಟಕದ ಬೇರೆ ಬೇರೆ ಭಾಗಗಳಿಂದ ಸುಮಾರು ಒಂದು ತಿಂಗಳ ತರಬೇತಿಯನ್ನು ಪಡೆದ ಯುವಕ ತಂಡ ಸೇವಾದಳದಲ್ಲಿತ್ತು.

ದೇಶದ ನಾನಾ ಭಾಗಗಳಿಂದ ಬಂದಿದ್ದ ಸುಮಾರು ಮೂರು–ನಾಲ್ಕು ಲಕ್ಷ ಜನರನ್ನು ನಿಯಂತ್ರಿಸುವುದು ಒಂದು ದೊಡ್ಡ ಸವಾಲಿನ ಕೆಲಸವಾಗಿತ್ತು. ಬೆಳಗಾವಿಯು ಅಂದು ದೊಡ್ಡ ನಗರವಾಗಿರಲಿಲ್ಲ. ಮೂಲಭೂತ ಯಾವ ಸೌಲಭ್ಯಗಳೂ ಇಲ್ಲದ ದೊಡ್ಡ ಗ್ರಾಮವಾಗಿತ್ತು. ಇಂತಹ ಪರಿಸ್ಥಿತಿಯಲ್ಲಿ ಕಾರ್ಯಕ್ರಮದ ವ್ಯವಸ್ಥೆಯಲ್ಲಿ ಸೇವಾದಳದ ಮೇಲಿತ್ತು. ಪ್ರತಿನಿಧಿ, ಪ್ರೇಕ್ಷಕರು, ಮುಖಂಡರುಗಳ ವಸತಿ, ಊಟ, ಅವರ ಸಾಮಾನುಗಳ ರಕ್ಷಣೆಗಳನ್ನು ಯಾವ ಬಗೆಯ ಕುಂದುಗಳೂ ಬಾರದ ರೀತಿಯಲ್ಲಿ ನೋಡಿಕೊಳ್ಳುವುದು, ಅಧಿವೇಶನದ ಸಭಾಂಗಣದಲ್ಲಿ ಮುಖಂಡರು ಪ್ರತಿನಿಧಿಗಳನ್ನು ಅವರವರ ಸ್ಥಾನಗಳಲ್ಲಿ ಕೂಡ್ರಿಸುವುದು, ಅವರಿಗೆ ನೀರು ವಿತರಣೆ–ಹೀಗೆ ಹಲವಾರು ಕಾರ್ಯಗಳನ್ನು ಸ್ವಯಂ ಸೇವಕರು ವ್ಯವಸ್ಥಿತವಾಗಿ ನೆರವೇರಿಸಿದರು. ಸೇವಾದಳದಲ್ಲಿ ಹಲವಾರು ತಂಡಗಳನ್ನು ರೂಪಿಸಿ ಅದಕ್ಕೆ

ಒಬ್ಬ ಮುಖ್ಯಸ್ಥನನ್ನಾಗಿ ಮಾಡಿ ಆತನಿಗೆ ಕೆಲವು ಕಾರ್ಯಗಳನ್ನು ಒಪ್ಪಿಸಿ ಪ್ರತಿಯೊಬ್ಬರಿಗೂ ಒಂದೊಂದು ಕ್ರಮ ಸಂಖ್ಯೆಯನ್ನು ನೀಡಿ ಒಂದೊಂದು ತಂಡಕ್ಕೂ ಒಂದೊಂದು ಹೆಸರನ್ನು ಕೊಡಲಾಗಿತ್ತು. ದೇವರ ಹೆಸರು, ದೇಶದ ಮಹತ್ವದ ಸ್ಥಳಗಳ ಹೆಸರು, ರಾಜ್ಯದ ಪ್ರದೇಶಗಳು, ನದಿಗಳ ಹೆಸರುಗಳು ಒಂದೊಂದು ಪಥಿಕಕ್ಕೆ ಇದ್ದವು. ಇಂತಹ ಒಂದು ಪಥಿಕದಲ್ಲಿ ನಾರಾಯಣ ಎನ್ನುವ ಪಥಿಕ ವಿಶಿಷ್ಟವಾಗಿತ್ತು. ಅಧಿವೇಶನದಲ್ಲಿ ಭಾಗವಹಿಸಲು ಸೇವಾದಳವನ್ನು ಸಂಘಟಿಸಿದ್ದ ಹರ್ಡೀಕರರು ಸ್ವಯಂ ಸೇವಕರಿಗೆ ತರಬೇತಿಯನ್ನು ನೀಡಲು ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಶಿಬಿರಗಳನ್ನು ಏರ್ಪಡಿಸಿದ್ದರು. ಇಂತಹ ಒಂದು ಶಿಬಿರ ಬೈಲಹೊಂಗಲ ತಾಲೂಕಿನ ಎಂ. ಕೆ. ಹುಬ್ಬಳ್ಳಿಯಲ್ಲಿ ನಡೆದಿತ್ತು. ಈ ಶಿಬಿರಕ್ಕೆ ತರಬೇತಿಯನ್ನು ನೀಡಲು ಬಂದಿದ್ದ ನಾರಾಯಣ ಜಿ. ಜೋಶಿ ಎಂಬುವವರು ಊರಿನ ಪಕ್ಕದದಲ್ಲಿರುವ ಮಲಪ್ರಭಾ ನದಿಯಲ್ಲಿ ಈಜಲು ಹೋಗಿ ಮುಳಗಿ ಸಾವನ್ನಪ್ಪಿದ್ದರು. ಹೀಗಾಗಿ ಅಧಿವೇಶನದ ಸಂದರ್ಭದಲ್ಲಿ ಅವರ ಸ್ಮರಣೆಗಾಗಿ 'ನಾರಾಯಣ ಪಥಿಕ' ಎಂದು ಹೆಸರನ್ನಿಟ್ಟರು.

ಬೆಳಗಾವಿ ಅಧಿವೇಶನದಲ್ಲಿ ಸ್ವಯಂ ಸೇವಕರು ಮಾಡಿದ ಅಚ್ಚುಕಟ್ಟಿನ ಕಾರ್ಯದಿಂದ ಭಾರತದ ಮುಖಂಡರೆಲ್ಲರೂ ಮೆಚ್ಚುಗೆ ವ್ಯಕ್ತಪಡಿಸಿದರು. ಈ ಬಗೆಯ ಸ್ವಯಂ ಸೇವಕ ಸಂಸ್ಥೆಯನ್ನು ತಮ್ಮ ಪ್ರಾಂತ್ಯಗಳಲ್ಲಿ ಸಹ ವ್ಯವಸ್ಥೆಗೊಳಿಸಲು ಡಾ. ಹರ್ಡೇಕರರಿಗೆ ಆಮಂತ್ರವನ್ನಿತ್ತರು. ಅಲ್ಲದೆ ಮುಂದಿನ ವರ್ಷ ಕಾನಪುರದಲ್ಲಿ ನಡೆಯುವ ಕಾಂಗ್ರೆಸ್ ಅಧಿವೇಶನಕ್ಕೂ ಹರ್ಡೇಕರರೇ ಸೇವಾದಳದ ಮೂಲಕ ವ್ಯವಸ್ಥೆಯನ್ನು ಮಾಡಬೇಕೆಂದು ವಿನಂತಿಸಿಕೊಂಡರು. ಅದರಂತೆ ಹರ್ಡೇಕರ ಅವರು ಕರ್ನಾಟಕದಿಂದ ೩೨ ಜನ ಸಂಘಟಕರನ್ನು ಕಾನಪೂರಕ್ಕೆ ಕಳುಹಿಸಿಕೊಡುವ ನಿರ್ಧಾರವನ್ನು ಕೈಗೊಂಡರು.

ಬೆಳಗಾವಿ ಅಧಿವೇಶನದ ನಂತರ ಕರ್ನಾಟಕದ ತುಂಬೆಲ್ಲಾ ಸ್ವಾತಂತ್ರ್ಯ ಚಳುವಳಿಯು ರಭಸದಿಂದ ಸಾಗಿತು. ಮೈಸೂರು, ಬೆಂಗಳೂರ ಭಾಗದ ಜನರು ಈ ಅಧಿವೇಶನದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಸೇವಾದಳದ ಕಾರ್ಯಕರ್ತರಾಗಿ ಸೇರಿ ನಿಷ್ಠೆಯಿಂದ ಕಾರ್ಯಮಾಡಿದರು. ಇಲ್ಲಿಂದ ತಿರುಗಿ ಹೋಗಿ ತಮ್ಮ ಊರುಗಳಲ್ಲಿ ರಾಷ್ಟ್ರೀಯ ಚಳುವಳಿಯ ಸಂಘಟನೆಗಳನ್ನು ಮಾಡಿಕೊಂಡು ಹೋರಾಟ ನಡೆಸಿದರು. ಈ ಅಧಿವೇಶನದ ಮೂಲಕ ಗಂಗಾಧರರಾಯ ದೇಶಪಾಂಡೆಯವರು ರಾಷ್ಟ್ರೀಯ ನಾಯಕರಾಗಿ ಹೊರಹೊಮ್ಮಿದರು. ಮುಂದಿನ ದಿನಗಳಲ್ಲಿ ರಾಜ್ಯವ್ಯಾಪಿ ಸಂಚಾರಮಾಡಿ ಭಾಷಣಗಳನ್ನು ಮಾಡಿ, ಇಡೀ ಕರ್ನಾಟಕವು ಸ್ವಾತಂತ್ರ್ಯ ಚಳುವಳಿಯಲ್ಲಿ ತೊಡಗುವಂತೆ ಮಾಡಿದರು. ಬೆಳಗಾವಿ ಉತ್ಸವವನ್ನು ಸಾಕ್ಷಾತ್ತಾಗಿ ಕಂಡ ರಾಜ್ಯದ ನಾನಾ ಭಾಗದ ಜನರು ಗಾಂಧೀಜಿಯವರ ಸಂದೇಶವನ್ನು ಹೊತ್ತು ಹೋದರು. ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಅಸ್ಪೃಶ್ಯರ ಉದ್ಧಾರವನ್ನು ಗಮನದಲ್ಲಿರಿಸಿಕೊಂಡ ಸಂಘಟನೆಗಳು ಅನೇಕಾನೇಕ ಹುಟ್ಟಿಕೊಂಡವು. ಖಾದಿ ಕಾರ್ಯಕ್ರಮವೂ ಸಹ ವ್ಯಾಪಕವಾಯಿತು. ಮೈಸೂರು ಸರ್ಕಾರವು ಬದನವಾಳಿನಲ್ಲಿ ತಾನೇ ಸ್ವತಃ ಒಂದು ಖಾದಿ ಕೇಂದ್ರವನ್ನು ತೆರೆಯಿತು ಹಾಗೂ ತನ್ನ ಶೈಕ್ಷಣಿಕ ಸಂಸ್ಥೆಗಳಲ್ಲಿ

ಹಿಂದಿಯನ್ನು ಒಂದು ಐಚ್ಛಿಕ ವಿಷಯವಾಗಿ ಬೋಧಿಸಲು ಪ್ರಾರಂಭಿಸಿತು. ಮೈಸೂರು ಸರ್ಕಾರದ ಕೆಲಸದಿಂದ ಸಂತೃಪ್ತರಾದ ಗಾಂಧೀಜಿಯವರು ಮೈಸೂರು ರಾಜ್ಯವನ್ನು 'ರಾಮರಾಜ್ಯ'ವೆಂದೂ ಇಲ್ಲಿನ ದೊರೆಗಳನ್ನು ರಾಜರ್ಷಿ ಎಂದೂ ಕರೆದರು.[೨೧]

ಬೆಳಗಾವಿ ಅಧಿವೇಶನದ ನಂತರ ಕರ್ನಾಟಕ ಪ್ರಾಂತ್ಯದಲ್ಲಿ ಸ್ವಾತಂತ್ರ್ಯ ಹೋರಾಟವನ್ನು ಮುಂದುವರಿಸಿಕೊಂಡು ಹೋಗುವ ಹೊಸತಲೆಮಾರಿನ ತಂಡವೇ ನಿರ್ಮಾಣವಾಯಿತು. ಗಂಗಾಧರರಾಯ ದೇಶಪಾಂಡೆಯವರು ತಮ್ಮ ಸ್ವಂತ ಊರಾದ ಬೆಳಗಾವಿಯ ಹತ್ತಿರವಿರುವ ಹುದಲಿಯಲ್ಲಿ ತಮ್ಮದೇ ಭೂಮಿಯಲ್ಲಿ 'ಕುಮರಿ ಆಶ್ರಮ'ವನ್ನು ಸ್ಥಾಪಿಸಿ, ಖಾದೀ ಗ್ರಾಮೋದ್ಯೋಗ, ಅಸ್ಪೃಶ್ಯತಾ ನಿವಾರಣೆ, ಗಾಂಧೀತತ್ವ ಪ್ರಚಾರ, ಸ್ವಾತಂತ್ರ್ಯ ಸಂಗ್ರಾಮದ ಬಗೆಗೆ ಜಾಗೃತಿ ಮೂಡಿಸುವ ಕಾರ್ಯಗಳನ್ನು ಆರಂಭಿಸಿದರು. ಇಲ್ಲಿ ಮಹಾರಾಷ್ಟ್ರ ಮತ್ತು ಕರ್ನಾಟಕದ ಇತರ ಭಾಗಗಳಿಂದ ಕಾರ್ಯಕರ್ತರು ಬಂದು ಶಿಕ್ಷಣ ಪಡೆದು ಕೆಲಸ ಮಾಡುತ್ತಿದ್ದರು.

ಬೆಳಗಾವಿಯಲ್ಲಿ ಕಾಂಗ್ರೆಸ್ ಅಧಿವೇಶನ ಜರುಗಿದರ ಪರಿಣಾಮವಾಗಿ ಬೆಳಗಾವಿಗೆ ರಾಷ್ಟ್ರೀಯ ಮನ್ನಣೆ ದೊರೆಯಿತು. ಮೊದಲೇ ಸ್ವಾತಂತ್ರ್ಯ ಹೋರಾಟಗಾರರ ನೆಲೆಯಾಗಿದ್ದ ಬೆಳಗಾವಿಗೆ ಮತ್ತಷ್ಟು ಶಕ್ತಿ ಒದಗಿತು. ಅದರಲ್ಲಿಯೂ ಮಹಾತ್ಮಾ ಗಾಂಧೀಜಿಯವರು ಒಮ್ಮೆ ಮಾತ್ರ ಅಧಿವೇಶನ ಅಧ್ಯಕ್ಷತೆಯನ್ನು ವಹಿಸಿಕೊಂಡದ್ದು ಬೆಳಗಾವಿಗೆ ಐತಿಹಾಸಿಕ ಮಹತ್ವ ಬರಲು ಕಾರಣವಾಯಿತು.

೩೯ನೆಯ ಕಾಂಗ್ರೆಸ ಅಧಿವೇಶನವನ್ನು ಕರ್ನಾಟಕಕ್ಕೆ ತರುವಲ್ಲಿ ವಿಜಾಪುರದ ಕೌಜಲಗಿ ಶ್ರೀನಿವಾಸರಾಯರು ಪ್ರಯತ್ನಿಸಿದರು. ೧೯೨೩ ರ ಡಿಸೆಂಬರ್‌ನಲ್ಲಿ ಆಂಧ್ರಪ್ರದೇಶದ ಕಾಕಿವಾಡನಲ್ಲಿ ಜರುಗಿದ ಕಾಂಗ್ರೆಸ್ ಅಧಿವೇಶನದಲ್ಲಿ ಪಾಲ್ಗೊಂಡಿದ್ದ ಶ್ರೀನಿವಾಸರಾಯರು ಮುಂದಿನ ಕಾಂಗ್ರೆಸ್ ಅಧಿವೇಶನವನ್ನು ಕರ್ನಾಟಕದಲ್ಲಿ ನಡೆಸುವಂತೆ ಬಹಿರಂಗ ಆಹ್ವಾನವನ್ನು ನೀಡಿ ಠರಾವು ಮಂಡಿಸಿ ಅನುಮೋದನೆ ಪಡೆಯುವಲ್ಲಿ ಯಶಸ್ವಿಯಾದರು. ಕರ್ನಾಟಕದಲ್ಲಿ ಎಲ್ಲಿ ನಡೆಸಬೇಕೆಂಬುದರ ಬಗ್ಗೆ ಕೆ.ಪಿ.ಸಿ.ಸಿ. ಸಭೆಯನ್ನು ಹುಬ್ಬಳ್ಳಿಯಲ್ಲಿ ಕರೆಯಲಾಯಿತು. ಮುಂಬೈ ಕರ್ನಾಟಕದ ನಾಲ್ಕು ಜಿಲ್ಲೆಯವರು ತಮ್ಮ ತಮ್ಮ ಪ್ರಮುಖ ಪಟ್ಟಣಗಳಾದ ಧಾರವಾಡ, ವಿಜಾಪೂರ, ಮಂಗಳೂರು ಹಾಗೂ ಬೆಳಗಾವಿಯಲ್ಲಿ ಆಗಬೇಕೆಂದು ಪಟ್ಟು ಹಿಡಿದರು. ವಿಜಾಪುರದ ಪರವಾಗಿ ಶ್ರೀನಿವಾಸ ಕೌಜಲಗಿ, ಹನುಮಂತರಾವ ಕೌಜಲಗಿ, ಗೋಪಾಲರಾವ್ ದೇಶಪಾಂಡೆ ವಾದಿಸಿದರು. ಗಂಗಾಧರರಾವ ದೇಶಪಾಂಡೆಯವರು ಬೆಳಗಾವಿಯಲ್ಲಿಯೇ ಜರುಗಿಸುವುದೆಂದು ಪಟ್ಟು ಹಿಡಿದರು. ಆದರೆ ಆಲೂರ ವೆಂಕಟರಾಯರು ಬೆಳಗಾವಿಯಲ್ಲಿ ಅಧಿವೇಶನ ನಡೆದರೆ ಹೆಸರಿಗೆ ಮಾತ್ರ ಕರ್ನಾಟಕ ಎಂದಾಗಿ ಅದು ಸಂಪೂರ್ಣ ಮರಾಠಿಮಯವಾಗುತ್ತದೆ ಎಂದು ವಾದಿಸಿದರು. ಈ ಸಂದರ್ಭದಲ್ಲಿ ಕಡಪಾ ರಾಘವೇಂದ್ರರಾಯರಿಗೂ ದೇಶಪಾಂಡೆಯವರಿಗೂ ಮಾತಿನ ಚಕಮಕಿಯಾಯಿತು.

ವೆಂಕಟರಾಯರು ಬೆಳಗಾವಿ ಬದಲಿಗೆ ಧಾರವಾಡದಲ್ಲಿ ನಡೆಯಬೇಕೆಂದು ಗೊತ್ತುವಳಿ ಮಂಡಿಸಿದರು. ಆದರೆ ಈ ಗೊತ್ತುವಳಿ ಅನುಮೋದಿಸಲು ಯಾವ ಮುಖಂಡರೂ ಮುಂದೆ ಬರಲಿಲ್ಲ. ಹೀಗಾಗಿ ಗೊತ್ತುವಳಿ ಬಿದ್ದು ಹೋಯಿತು. ಈ ಸಂದರ್ಭದಲ್ಲಿ ಗಂಗಾಧರರಾಯರು ಅಧಿವೇಶನವನ್ನು ನಿಜವಾದ ಅರ್ಥದಲ್ಲಿ ಕರ್ನಾಟಕದ್ದನ್ನಾಗಿ ಮಾಡುವುದಾಗಿ ಆಶ್ವಾಸನೆ ಕೊಟ್ಟರು. ಮೊದಲು ಧಾರವಾಡದಲ್ಲಿ ನಡೆದ ಸಭೆಯಲ್ಲಿ ಬೆಳಗಾವಿಯಲ್ಲಿಯೇ ಅಧಿವೇಶನ ನಡೆಯುವ ಕುರಿತು ಗುಪ್ತ ಮತದಾನದಲ್ಲಿ ತೀರ್ಮಾನಿಸಲಾಗಿತ್ತು. ಈ ಸಂದರ್ಭದಲ್ಲಿ ಮಂಗಳೂರಿನವರು ತಕರಾರು ತೆಗೆದಿದ್ದರಿಂದ ಹುಬ್ಬಳ್ಳಿಯಲ್ಲಿ ಮತ್ತೊಮ್ಮೆ ಬಹಿರಂಗ ಸಭೆ ಕರೆದು ಮತಗಳನ್ನು ಕೇಳಿದಾಗಲೂ ಬೆಳಗಾವಿಗೆ ಬಹುಮತ ಬಂದು ಬೆಳಗಾವಿಯಲ್ಲಿ ಅಧಿವೇಶನ ನಡೆಸಲು ತೀರ್ಮಾನಿಸಲಾಯಿತು.

ಮಹಾತ್ಮಾ ಗಾಂಧೀಜಿ ಅವರು ಬೆಳಗಾವಿಯ ಅಧಿವೇಶನಕ್ಕೆ ಅಧ್ಯಕ್ಷರಾಗಿ ಒಪ್ಪಿಕೊಂಡ ಮೇಲೆ ಕಾಂಗ್ರೆಸ್ ಕಾರ್ಯಕಾರಿ ಕಮೀಟಿಯ ಮುಂದೆ ಮೂರು ಷರತ್ತುಗಳನ್ನು ಹಾಕಿದರು. ಅವುಗಳೆಂದರೆ:

೧. ಅಧಿವೇಶನಕ್ಕೆ ಬಹಳಷ್ಟು ವೆಚ್ಚ ಹಾಗೂ ದುಂದುಗಾರಿಕೆ ಮಾಡದೆ ತೀರ ಕಡಿಮೆ ಖರ್ಚಿನಲ್ಲಿ ಸಾದಾ ರೀತಿಯಿಂದ ನಡೆಯಬೇಕು.

೨. ಅಧಿವೇಶನದಲ್ಲಿ ಭಾಗವಹಿಸಿದ ಮುಖಂಡರಿಗೆ ಮತ್ತು ಪ್ರತಿನಿಧಿಗಳಿಗೆ ಒಂದೇ ತೆರನಾದ ಊಟದ ವ್ಯವಸ್ಥೆಯನ್ನು ಮಾಡಬೇಕು.

೩. ಅಧಿವೇಶನದ ಸಂದರ್ಭದಲ್ಲಿ ಬಳಸುವ ಕಕ್ಕಸಗಳನ್ನು ಸ್ವಚ್ಛಗೊಳಿಸಲು ಹರಿಜನರನ್ನು ಹಚ್ಚದೆ ತಾವೆಲ್ಲರೂ ಅವುಗಳನ್ನು ದಿನಂಪ್ರತಿ ಸ್ವಚ್ಛಗೊಳಿಸಬೇಕು.

ಈ ಮೂರು ಕೆಲಸಗಳನ್ನು ನಿಷ್ಠೆಯಿಂದ ನಡೆಸಿಕೊಡುವುದಾಗಿ ಬೆಳಗಾವಿಯ ಕಾರ್ಯಕರ್ತರು ಒಪ್ಪಿಕೊಂಡರು. ಅದರಂತೆಯೇ ಅಧಿವೇಶನದ ಸಂದರ್ಭದಲ್ಲಿ ಎಲ್ಲ ಕಾರ್ಯಗಳೂ ಜರುಗಿದವು. ಅಧಿವೇಶನಕ್ಕೆ ಒಟ್ಟು ೨, ೨೦, ೮೫೯ ರೂ ೬ ಪೈಸೆ ಹಣವನ್ನು ಖರ್ಚು ಮಾಡಲಾಯಿತು. ಉತ್ತರ ಕರ್ನಾಟಕದ ವಿಶಿಷ್ಟ ಊಟವನ್ನು ಎಲ್ಲರಿಗೂ ಒಂದೇ ತೆರನಾಗಿ ತಯಾರಿಸಿ ನೀಡಲಾಯಿತು. ಕಾಕಾ ಕಾಲೇಲಕರರ ನೇತೃತ್ವದಲ್ಲಿ ಬ್ರಾಹ್ಮಣ ತರುಣರು ಕಕ್ಕಸಗಳನ್ನು ಸ್ವಚ್ಛ ಮಾಡುವ ಕೆಲಸವನ್ನು ಮಾಡಿದರು. ಈ ಮೂರು ಶರತ್ತುಗಳನ್ನು ಚಾಚೂ ತಪ್ಪದೆ ಪೂರೈಸಿದ್ದಕ್ಕಾಗಿ ಗಾಂಧೀಜಿಯವರು ಗಂಗಾಧರರಾಯ ದೇಶಪಾಂಡೆಯವರಿಗೆ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. ಈ ಅಧಿವೇಶನಕ್ಕಾಗಿ ವ್ಯಾಪಕವಾಗಿ ಏರ್ಪಾಟು ಮಾಡಿದ್ದರು. ವೀಕ್ಷಕರು ಮತ್ತು ಪ್ರತಿನಿಧಿಗಳಿಗೆ ಖಾದಿ ಮತ್ತು ಬಿದಿರು ಛಾವಣಿಯಿಂದ ಕುಟೀರಗಳನ್ನು ನಿರ್ಮಿಸಲಾಗಿತ್ತು. ನೀರಿನ ವ್ಯವಸ್ಥೆಗಾಗಿ ೪೩೭೦ ರೂ. ೩ ಆಣೆ ವೆಚ್ಚದಲ್ಲಿ ದೊಡ್ಡದಾದ ಬಾವಿಯನ್ನು ತೊಡಿ ಇದಕ್ಕೆ 'ಪಂಪಾ ಸರೋವರ'ವೆಂದು ಹೆಸರಿಡಲಾಯಿತು. ಬೆಳಕಿನ ವ್ಯವಸ್ಥೆಗಾಗಿ

ಸುಮಾರು ಒಂದು ಸಾವಿರ ಲಾಟೀನುಗಳನ್ನು ಮತ್ತು ೨೫೦ ಪೆಟ್ರೊ ಮ್ಯಾಕ್ಸ್ ದೀಪಗಳನ್ನು ತರಿಸಲಾಗಿತ್ತು. ಈ ಎಲ್ಲ ವ್ಯವಸ್ಥೆಯನ್ನು ಗಂಗಾಧರರಾಯ ದೇಶಪಾಂಡೆ ಮತ್ತು ನಾಸು ಹರ್ಡೀಕರ ಅವರು ಅತ್ಯಂತ ಅಚ್ಚುಕಟ್ಟಾಗಿ ನಿರ್ವಹಿಸುವಂತೆ ಮೇಲ್ವಿಚಾರಣೆ ನಡೆಸುತ್ತಿದ್ದರು. ಪೂರ್ಣ ಸಭಾಂಗಣವನ್ನೆಲ್ಲಾ ಕುದುರೆಯ ಮೇಲೆ ಕುಳಿತು ಸುತ್ತು ಹಾಕಿ ವೀಕ್ಷಿಸುತ್ತಿದ್ದರು.

ಅಧಿವೇಶನಕ್ಕಿಂತ ಒಂದು ತಿಂಗಳ ಮೊದಲೇ ವೇದಿಕೆಯನ್ನು ನಿರ್ಮಿಸುವ ಕಾರ್ಯ ಪ್ರಾರಂಭವಾಯಿತು. ಒಂದೊಂದು ತಂಡವನ್ನು ನೇಮಿಸಿ ಅದಕ್ಕೆ ಒಬ್ಬೊಬ್ಬರನ್ನು ಮುಖಂಡರನ್ನಾಗಿ ಮಾಡಲಾಗಿತ್ತು. ಅಧಿವೇಶನಕ್ಕೆ ನಿರ್ಮಿಸಿದ 'ವಿಜಯನಗರ' ಬಡಾವಣೆಯ ರಚನಾಕಾರ್ಯವನ್ನು ಗಜಾನನರಾವ ದೇಶಪಾಂಡೆ, ಖೇಮಾಜಿರಾವ ಗೋಡಸೆ, ಕೃಷ್ಣರಾವ ಯಾಳಗಿ, ವಾಮನರಾವ ಕರಗುಪ್ಪಿ ಮುಂತಾದವರು ವಹಿಸಿಕೊಂಡರು. ದೀಪದ ವ್ಯವಸ್ಥೆಯನ್ನು ಭಾವುರಾವ ಗಾವಡೆ, ಜೀವನರಾವ ಯಾಳಗಿ ವಹಿಸಿಕೊಂಡಿದ್ದರು. ಭೋಜನದ ವ್ಯವಸ್ಥೆಯನ್ನು ಹನುಮಂತರಾವ ದೇಶಪಾಂಡೆ ಮತ್ತು ಧಾರವಾಡದ ಗೋಪಾಳರಾವ ದೇಶಪಾಂಡೆ ವಹಿಸಿಕೊಂಡರು. ಅಧಿವೇಶನದಲ್ಲಿ ಭಾಗವಹಿಸಲು ಬರುವ ಪ್ರತಿನಿಧಿಗಳಿಗೆ ರಾಜ್ಯದ ಬೇರೆ ಬೇರೆ ಭಾಗಗಳಿಂದ ವಿಶೇಷವಾದ ರೈಲು ವ್ಯವಸ್ಥೆಯನ್ನು ಮಾಡಲಾಗಿತ್ತು. ಪ್ರಯಾಣದ ವೆಚ್ಚ ಮತ್ತು ಭತ್ಯೆಯನ್ನು ಪ್ರತಿನಿಧಿಗಳಿಗೆ ನೀಡಲಾಗಿತ್ತು. ರಾಷ್ಟ್ರದ ತುಂಬೆಲ್ಲಾ ಅಪಾರವಾದ ದೇಣಿಗೆ ಈ ಸಮ್ಮೇಳನಕ್ಕೆ ಹರಿದು ಬಂದಿತು. ಈ ಅಧಿವೇಶನದ ಇನ್ನೊಂದು ವೈಶಿಷ್ಟ್ಯವೆಂದರೆ ರೈಲ್ವೆ ಇಂಜನಿಯರ್ ಟ್ರ್ಯೂ ಎಂಬುವವನು ಬ್ರಿಟಿಷ್ ಅಧಿಕಾರಿಯಾಗಿದ್ದನು. ಈತ ಅಧಿವೇಶನದಲ್ಲಿ ನೀರು ಪೂರೈಸಲು ರೈಲ್ವೆಯ ಕಬ್ಬಿಣದ ಟ್ಯಾಂಕುಗಳನ್ನು ಕೊಟ್ಟು ಸಹಾಯಮಾಡಿದನು.

ಇದುವರೆಗೆ ನೋಡಿದಂತೆ ಗಾಂಧಿಜಿಯವರ ಅಧ್ಯಕ್ಷತೆಯಲ್ಲಿ ನಡೆದ ಬೆಳಗಾವಿಯ ಅಧಿವೇಶನಕ್ಕೆ ಚಾರಿತ್ರಿಕ ಸಾಂಸ್ಕೃತಿಕ ಮಹತ್ವವಿದೆ. ಬೆಳಗಾವಿಯ ಜನ ಅಧಿವೇಶನವನ್ನು ಒಂದಾಗಿ ಯಶಸ್ವಿಯಾಗಿ ಪೂರೈಸಿದರು ಎಂಬುದನ್ನು ದಾಟಿ ಅವರು ಸಾಂಸ್ಕೃತಿಕವಾಗಿ ಕೂಡಿಕೊಂಡು ತಮ್ಮತನವನ್ನು ಅರಿತರು. ಮುಂದಿನ ತೀವ್ರ ಹೋರಾಟಕ್ಕೆ ಸಜ್ಜುಗೊಂಡರೆಂಬುದು ಇಲ್ಲಿ ದಾಖಲಾರ್ಹ ವಿಷಯವೆನಿಸುತ್ತದೆ.

**ತೀವ್ರಗೊಂಡ ಹೋರಾಟ:** ೧೯೨೮ರಲ್ಲಿ ಸಾಯಮನ್ ಕಮಿಶನ್ ಕಾಯ್ದೆಯನ್ನು ಬಹಿಷ್ಕರಿಸುವ ಆಂದೋಲನವು ದೇಶವ್ಯಾಪಿ ಹರಡಿ ಅಲ್ಲಲ್ಲಿ ಸಾವು ನೋವುಗಳಾದವು. ಆಗ ೧೯೨೯ರಲ್ಲಿ ಲಾಹೋರಿನಲ್ಲಿ ಕಾಂಗ್ರೆಸ್ ಸಂಪೂರ್ಣ ಸ್ವಾತಂತ್ರ್ಯದ ಘೋಷಣೆ ಮಾಡಿದ ಠರಾವಿನಂತೆ ೧೯೩೦ರ ಜನವರಿ ೨೬ ರಂದು ಸ್ವಾತಂತ್ರ್ಯದ ಪ್ರತಿಜ್ಞೆಯನ್ನು ಗಂಗಾಧರರಾಯ ದೇಶಪಾಂಡೆಯವರು ಬೆಳಗಾವಿಯ ಮಾರ್ಕೆಟಿನ ಝುಂಡಾ ಚೌಕದಲ್ಲಿ ಓದಿದರು. ಸಾವಿರಾರು ಜನ ಹೋರಾಟಗಾರರು ಈ ಸಂದರ್ಭದಲ್ಲಿ ಪಾಲ್ಗೊಂಡು ಪ್ರತಿಜ್ಞೆಯನ್ನು ಸ್ವೀಕರಿಸಿದರು.

೧೯೩೦ರಲ್ಲಿ ಉಪ್ಪಿನ ಸತ್ಯಾಗ್ರಹ ಆರಂಭವಾದಾಗ ಗಂಗಾಧರರಾವ ದೇಶಪಾಂಡೆಯವರು ಆ ಸತ್ಯಾಗ್ರಹಕ್ಕಾಗಿ ಗಾಂಧೀಜಿಯವರು ಗೊತ್ತುಪಡಿಸಿದ ದಿನಕ್ಕಿಂತ ಒಂದು ವಾರ ಮುಂಚಿತವೇ ಎಪ್ರಿಲ್ ೬ ರಂದು ಬೆಳಗಾವಿಯ

ಝೆುಂಡಾ ಚೌಕದಲ್ಲಿ ನಿಷಿದ್ಧ ಉಪ್ಪನ್ನು ಮಾರಿ ಸೆರೆಮನೆ ಸೇರಿದರು. ಈ ಸಂದರ್ಭದಲ್ಲಿ ನಾರಾಯಣರಾವ ಜೋಶಿ, ಜೀವಣರಾವ ಯಾಳಗಿ, ಅನಂತರಾವ ದಾಬಡೆ ಅವರು ಆ ಉಪ್ಪನ್ನು ಕೊಂಡು ಬಂಧನಕ್ಕೊಳಗಾದರು. ಎಪ್ರಿಲ್ ೧೨ ರಂದು ಬೆಳಗಾವಿಯಿಂದ ಅಂಕೋಲೆಗೆ ಉಪ್ಪಿನ ಸತ್ಯಾಗ್ರಹಕ್ಕಾಗಿ ಕಾಲ್ನಡಿಗೆಯಿಂದ ಹೊರಟ ಸತ್ಯಾಗ್ರಹಿಗಳ ತಂಡದ ನಾಯಕರಾದ ಕೇಶವರಾವ ಗೋಖಲೆ ಅವರನ್ನು ಬೆಳಗಾವಿಯಿಂದ ೮ ಮೈಲು ಹೋಗುವಷ್ಟರಲ್ಲಿ ಬಂಧಿಸಲಾಯಿತು. ಗಾಂಧೀಜಿ ಗೊತ್ತುಪಡಿಸಿದ ಎಪ್ರಿಲ್ ೧೩ನೆಯ ತಾರೀಖಿನಂದು ಚಂದಗಡದಲ್ಲಿ ಪ್ರಥಮತಃ ಬಂಧಿತರಾದ ಸತ್ಯಾಗ್ರಹಿ ಜಯದೇವ ಕುಲಕರ್ಣಿ, ಆಮೇಲೆ ಧೋಂಡೋ ಯಲ್ಲೊ ಕುಲಕರ್ಣಿ, ವಾಮನರಾವ ಬಿದರಿ, ಅಣ್ಣು ಗುರೂಜಿ, ರಾಮಕೃಷ್ಣ ಪ್ರಭು, ಪುಂಡಲೀಕಜಿ, ಡಾ. ಕೋವಾಡಕರ, ಬಾಬುರಾವ ಠಾಕೂರ, ಶಿವರಾವ ಕೊಪ್ಪಳ, ದಾಮು ಅಗ್ಗಾ ಲೇಂಗಡೆ, ಶ್ರೀಪಾದರಾವ ಕಿತ್ತೂರ, ಕೆ. ಎಸ್. ಪಾಟೀಲ, ಬಾಪು ಗೋಖಲೆ, ಅನಂತರಾವ ಚಿಕ್ಕೋಡಿ, ದಯಾನಂದ ಅರಳಿಕಟ್ಟಿ ಮೊದಲಾದ ಸುಮಾರು ಮುನ್ನೂರು ಸತ್ಯಾಗ್ರಹಿಗಳು ಬೆಳಗಾವಿ ಮತ್ತು ಜಿಲ್ಲೆಯ ಬೇರೆ ಬೇರೆ ಭಾಗಗಳಲ್ಲಿ ಸತ್ಯಾಗ್ರಹ ಮಾಡಿ ಬಂಧಿತರಾದರು. ಈ ಆಂದೋಲನದ ಸಂದರ್ಭದಲ್ಲಿ ಬೆಳಗಾವಿಯ ಕೃಷ್ಣ ಸಿನಿಮಾ ಮಂದಿರದ ಮಾಲಿಕರಾದ ಕೃಷ್ಣರಾವ ವೈದ್ಯ ಅವರು ಸ್ವತಃ ಚಳುವಳಿಯಲ್ಲಿ ಭಾಗವಹಿಸಿದ್ದಲ್ಲದೆ ತಮ್ಮ ಸಿನಿಮಾ ಗೃಹವನ್ನು ಸತ್ಯಾಗ್ರಹ ಶಿಬಿರಕ್ಕೆ ಕೊಟ್ಟರು. ಇದರಿಂದ ನೂರಾರು ಜನ ಸತ್ಯಾಗ್ರಹಿಗಳಿಗೆ ಒಂದು ಆಶ್ರಯ ತಾಣ ದೊರೆಯಿತು. ದಿನಂಪ್ರತಿ ಕೈತುಂಬ ಹಣ ಬರುತ್ತಿದ್ದ ಉದ್ಯೋಗವನ್ನೇ ನಿಲ್ಲಿಸಿ ದೇಶದ ಸ್ವಾತಂತ್ರ್ಯ ಹೋರಾಟಕ್ಕೆ ಸಹಕಾರ ನೀಡಿದ್ದು, ಬೆಳಗಾವಿ ಹೋರಾಟಗಾರರ ಸ್ವಾತಂತ್ರ್ಯ ಪ್ರೇಮವನ್ನು ಎತ್ತಿ ತೋರಿಸುತ್ತದೆ.

ಈ ಆಂದೋಲನದ ಎರಡನೆಯ ಘಟ್ಟದಲ್ಲಿ ಅರಣ್ಯ ಸತ್ಯಾಗ್ರಹ ಈಚಲಮರ ಕಡಿಯುವುದು ದೊಡ್ಡ ಪ್ರಮಾಣದಲ್ಲಿ ಪ್ರಾರಂಭವಾಯಿತು. ಮಳೆಗಾಲದಲ್ಲಿ ಉಪ್ಪು ತಯಾರಿಸುವುದು ಸಾಧ್ಯವಿಲ್ಲದ್ದರಿಂದ ಈ ಕಾರ್ಯಕ್ರಮ ನಡೆಯಿತು. ಈ ಸಂದರ್ಭದಲ್ಲಿ ಸುಮಾರು ೪೫ ಜನರಿಗೆ ಕಠಿಣ ಕಾರಾಗ್ರಹವಾಸದ ಶಿಕ್ಷೆಗಳಾದವು. ಬೆಳಗಾವಿಯ ಕೇಂದ್ರ ಕಾರಾಗೃಹವು ಸತ್ಯಾಗ್ರಹಿಗಳಿಂದ ತುಂಬಿದ್ದರಿಂದ ಎಷ್ಟೋ ಅಪರಾಧಿ ಕೈದಿಗಳನ್ನು ಬಿಡುಗಡೆ ಮಾಡಿ ಸತ್ಯಾಗ್ರಹಿಗಳಿಗೆ ಸ್ಥಳಾವಕಾಶ ಮಾಡಿಕೊಡಲಾಯಿತು. ಕೆಲವು ಸತ್ಯಾಗ್ರಹಿಗಳನ್ನು ಯರವಡಾ ಹಾಗೂ ನಾಶಿಕ ಸೆರೆಮನೆಗಳಿಗೆ ಕಳಿಸಲಾಯಿತು. ಅಂದಿನ ಮುಂಬಯಿ ಪ್ರಾಂತದ ಕರ್ನಾಟಕದ ವಿಭಾಗದಿಂದ ಸೆರೆಕಂಡ ಸತ್ಯಾಗ್ರಹಿಗಳಲ್ಲಿ ಅರ್ಧದಷ್ಟು ಅಂದರೆ ಸುಮಾರು ೭೫೦ ಮಂದಿ ಬೆಳಗಾವಿ ಜಿಲ್ಲೆಯವರೇ ಆಗಿದ್ದರು.

ಉಪ್ಪಿನ ಸತ್ಯಾಗ್ರಹದ ಸಂದರ್ಭದಲ್ಲಿ ಬೆಳಗಾವಿಯ ಓಣಿ ಓಣಿಗಳಲ್ಲಿ ಪ್ರಭಾತ ಫೇರಿ ಪಥಕಗಳು ನಡೆಯುತ್ತಿದ್ದವು. ಸುಮಾರು ೧೦ ರಿಂದ ೧೫ ಸಾವಿರ ಜನ ಈ ಪಥ ಸಂಚಲನದಲ್ಲಿ ಪಾಲ್ಗೊಳ್ಳುತ್ತಿದ್ದರು. ಇದು ಬೆಳಗಾವಿ ಜನರಲ್ಲಿ ರೋಮಾಂಚನವನ್ನುಂಟು ಮಾಡುತ್ತಿತ್ತು. ಪ್ರತಿಯೊಂದು ಗಲ್ಲಿಯಿಂದ ಪ್ರಭಾತ ಫೇರಿ ತಂಡಗಳು ಸಿದ್ಧಗೊಂಡು

ಊರಲ್ಲೆಲ್ಲಾ ಸಂಚರಿಸಿ ಕೊನೆಗೆ ಒಂದು ಕಡೆ ಸೇರಿ ವಿಸರ್ಜನೆಗೊಳ್ಳುತ್ತಿದ್ದವು. ಈ ಪ್ರಭಾತ ಫೇರಿಗಳನ್ನು ನೋಡಲೆಂದೇ ಸುತ್ತಮುತ್ತಲಿನ ಜನರು ತಂಡ ತಂಡವಾಗಿ ಬಂದು ಹೋಗುತ್ತಿದ್ದರು. ಈ ಪ್ರಭಾತ ಫೇರಿ ಮತ್ತು ಸತ್ಯಾಗ್ರಹದ ಕಾರ್ಯಕ್ರಮಗಳ ಪೂರ್ವ ತಯಾರಿಯಲ್ಲಿ ಹಸ್ತಪ್ರತಿಗಳ ಮೂಲಕ ಗುಪ್ತವಾಗಿ ಪ್ರಸಾರವಾಗುತ್ತಿತ್ತು. ಈ ಎಲ್ಲ ಕಾರ್ಯವನ್ನು ರಾಘವೇಂದ್ರ ಮುನೋಳ ಎನ್ನುವವರು ಎಮ್ ರಾಘವೇಂದ್ರರಾವ್ ಎಂಬ ಹೆಸರಿನಿಂದ ಸಹಿ ಮಾಡಿ ಮಾಡುತ್ತಿದ್ದರು. ಈ ಸಹಿಯ ವ್ಯಕ್ತಿ ಯಾರು ಎಂದು ಪೊಲೀಸರಿಗೆ ಕೊನೆತನಕ ಪತ್ತೆ ಹಚ್ಚಲು ಆಗಲೇ ಇಲ್ಲ. ಅಷ್ಟೊಂದು ಗುಪ್ತವಾಗಿ ಈ ಕಾರ್ಯವು ವ್ಯವಸ್ಥಿತವಾಗಿ ನಡೆಯುತ್ತಿತ್ತು.

ಪ್ರಭಾತ ಫೇರಿಗಳ ಸಂದರ್ಭದಲ್ಲಿ ಹಲವಾರು ಅಡ್ಡಿ ಆತಂಕಗಳು ಎದುರಾಗುತ್ತಿದ್ದವು. ಪೊಲೀಸರ ಲಾಠಿ ಚಾರ್ಜು, ಗೋಳಿಬಾರುಗಳು ಆಗುತ್ತಿದ್ದವು. ಆದರೆ ಇವೆಲ್ಲವೂ ಹೋರಾಟಗಾರರಿಗೆ ಸಾಮಾನ್ಯ ವಿಷಯವಾಗಿತ್ತು. ಇವೆಲ್ಲದರ ನಡುವೆ ಸ್ಥಾನಿಕ ಸಂಸ್ಥಾನದ ಅರಸನಿಂದಲೂ ತೊಂದರೆಗಳನ್ನು ಬೆಳಗಾವಿಯ ಹೋರಾಟಗಾರರು ಎದುರಿಸಿದರು. ಬೆಳಗಾವಿಯ ಮಾಧವಪುರ-ವಡಗಾವಿ ಪ್ರದೇಶವು ಆಗ ಕುರಂದವಾಡ ಜ್ಯೂನಿಯರ ಸಂಸ್ಥಾನದ ಭಾಗವಾಗಿತ್ತು. ಆ ಸಂಸ್ಥಾನದ ಯುವರಾಜ ಬಾಪು ಸಾಹೇಬರು ತಮ್ಮ ಅರಮನೆಯ ಮುಂದಿನ ರಸ್ತೆಯಿಂದ ಪ್ರಭಾತ ಫೇರಿ ಹೋಗಬಾರದೆಂದು ಕಟ್ಟಾಜ್ಞೆಯನ್ನು ಹೊರಡಿಸಿದರು. ಆದರೆ ಅದನ್ನು ಲೆಕ್ಕಿಸದೆ ದಿನಾಂಕ ३-೬-೧೯३೦ ರಂದು ವಿನಾಯಕರಾವ ಕರಗುಪ್ಪಿ ಅವರ ನೇತೃತ್ವದಲ್ಲಿ ಹೊರಟ ಪ್ರಭಾತ ಫೇರಿಯು ಆ ಮಾರ್ಗವಾಗಿ ಸಾಗಿದಾಗ ಸೈನಿಕರು ಎಲ್ಲರನ್ನು ತಡೆದು ಬಂಧಿಸಿ ಸೆರಮನೆಗೆ ಹಾಕಿದರು. ಈ ಸುದ್ದಿ ಉಳಿದ ಪ್ರಭಾತ ಫೇರಿ ತಂಡಗಳಿಗೆ ಗೊತ್ತಾಗಿ ಹತ್ತಾರು ತಂಡಗಳು ಅರಮನೆಯತ್ತ ಸಾಗಿ ಬಂಧಿತರನ್ನು ಬಿಡುಗಡೆಗೊಳಿಸಲು ದಾಳಿ ಇಟ್ಟರು. ಕೆಲವು ಕಾರ್ಯಕರ್ತರು ಸಂಸ್ಥಾನದ ಕಾರಬಾರಿ ಹಾಗೂ ಜೇಲು ಅಧಿಕಾರಿಗಳ ಕಾರಿನ ಪೆಟ್ರೋಲ್ ಟಾಕಿಯಲ್ಲಿ ಉಸುಕು ತುಂಬಿದರು. ಮತ್ತೆ ಕೆಲವರು ಜೇಲಿನ ಬಾಗಿಲನ್ನು ಮುರಿಯತೊಡಗಿದರು. ಸಾವಿರಾರು ಸಂಖ್ಯೆಯಲ್ಲಿ ಅರಮನೆಯ ಮುಂದೆ ಹೋರಾಟಗಾರರು ರಾಜನ ವಿರುದ್ಧ ಘೋಷಣೆಗಳನ್ನು ಕೂಗತೊಡಗಿದರು. ಇದೆಲ್ಲವನ್ನು ಸೂಕ್ಷ್ಮವಾಗಿ ಗಮನಿಸಿದ ಯುವರಾಜ ಭಾಪುಸಾಹೇಬ ದೊಡ್ಡ ಅನಾಹುತವಾಗುವುದೆಂದು ಅರಿತು ಎಲ್ಲರನ್ನು ಬಿಡುಗಡೆಗೊಳಿಸಲು ಆದೇಶಿಸಿದನು.

ಬೆಳಗಾವಿಯಲ್ಲಿ ನಡೆದ ಮತ್ತೊಂದು ಪ್ರಬಲ ಪ್ರತಿಭಟನೆಯೆಂದರೆ ವಿದೇಶಿ ಬಹಿಷ್ಕಾರ ಚಳುವಳಿ. ವಿದೇಶಿ ಬಟ್ಟೆಯ ಅಂಗಡಿಗಳ ಮುಂದೆ ಹೋರಾಟಗಾರರು ಪಿಕೆಟಿಂಗ ಮಾಡತೊಡಗಿದರು. ಇದರಿಂದ ಬೆಳಗಾವಿಯಲ್ಲಿ ವಿದೇಶಿ ಬಟ್ಟೆಯ ವ್ಯಾಪಾರ ಕುಸಿಯಿತು. ಇದರಿಂದಾಗಿ ಎಲ್ಲಾ ಬಟ್ಟೆಯ ವ್ಯಾಪಾರಿಗಳು ತಮ್ಮ ತಮ್ಮ ಅಂಗಡಿಗಳಲ್ಲಿದ್ದ ವಿದೇಶಿ ಬಟ್ಟೆಗಳನ್ನೆಲ್ಲಾ ಗಂಟುಕಟ್ಟಿ ಕಾಂಗ್ರೆಸ್ ಕಮೀಟಿಯವರಿಗೆ ತಂದು ಒಪ್ಪಿಸಿ ಸ್ವದೇಶಿ ಬಟ್ಟೆಗಳನ್ನಷ್ಟೇ ಇಟ್ಟುಕೊಂಡು ವ್ಯಾಪಾರ ಮಾಡತೊಡಗಿದರು.

ಬೆಳಗಾವಿಯಲ್ಲಿಯ ಸ್ವಾತಂತ್ರ್ಯ ಹೋರಾಟಗಾರರ ಉಗ್ರವಾದ ಹೋರಾಟವು ಸಾಮಾನ್ಯ ಜನರ ಮೇಲೂ ಪರಿಣಾಮ ಬೀರಿ ಪೊಲೀಸರ ಗುಂಡಿಗೆ ಎದೆಯೊಡ್ಡಿ ನಿಲ್ಲುವ ಸ್ಥೈರ್ಯವನ್ನು ಉಂಟುಮಾಡಿತು. ಕೇವಲ ಪುರುಷರಷ್ಟೇ ಅಲ್ಲ ಸ್ತ್ರೀಯರು, ಬಾಲಕರಲ್ಲಿಯೂ ಇಂತಹ ಎದೆಗಾರಿಕೆ ಬಂದದ್ದು ಬೆಳಗಾವಿಯಲ್ಲಿ ನಡೆದ ಒಂದು ಘಟನೆಯಿಂದ ಕಂಡುಬರುತ್ತದೆ.

ವಿದೇಶಿ ಬಟ್ಟೆಗಳ ಬಹಿಷ್ಕಾರದ ಸಂದರ್ಭದಲ್ಲಿ ಬೆಳಗಾವಿಯ ಶಹಾಪೂರದಲ್ಲಿರುವ ಚಿಂತಾಮಣರಾವ ಹಾಯಸ್ಕೂಲಿನ ಕೆಲವು ವಿದ್ಯಾರ್ಥಿಗಳು ಒಂದು ದಿನ ಮಾರ್ಕೆಟದ ಮಧ್ಯದಲ್ಲಿರುವ ಝುಂಡಾಚೌಕಿಯ ವಿದೇಶಿ ಬಟ್ಟೆಯ ರಾಶಿ ಹಾಕಿ ಅದಕ್ಕೆ ಬೆಂಕಿ ಹಚ್ಚಿದರು. ಈ ಸಂದರ್ಭದಲ್ಲಿ ಅಲ್ಲಿ ಆಗಮಿಸಿದ ಪೋಲಿಸರು ಗೋಳಿಬಾರ ಮಾಡಲು ತಮ್ಮ ಬಂದೂಕುಗಳನ್ನು ಸಜ್ಜುಗೊಳಿಸುವಷ್ಟರಲ್ಲಿ ಅಲ್ಲಿಯೇ ಕಾಯಿಪಲ್ಲೆ ಮಾರುತ್ತ ಕುಳಿತ್ತಿದ್ದ ಬಸವ್ವಾ ಕಳಸಣ್ಣವರ ಎಂಬ ಮಹಾಕಾಯದ ಮಹಿಳೆಯು ಪೋಲಿಸರ ಹತ್ತಿರ ಬಂದು ನಿಂತು ‘ಈ ಚಿಕ್ಕ ಮಕ್ಕಳ ಮೇಲೆ ಬಂದೂಕಿನ ಗುರಿ ಇಡಲು ನಿಮಗೆ ನಾಚಿಕೆ ಬರುವುದಿಲ್ಲವೇ? ಬಲಾಢ್ಯ ಬ್ರಿಟಿಷ ಸರ್ಕಾರವು ಚಿಕ್ಕ ಬಾಲಕರಿಗೆ ಹೆದರುವುದೇ? ಎಂದು ಅವರಿಗೆ ಛೀಮಾರಿ ಹಾಕಿದಳು. ಅವಳ ಆ ರೌದ್ರಾವತಾರದ ಪರಿಣಾಮವಾಗಿ ಪೋಲಿಸರು ಗುಂಡು ಹಾರಿಸುವ ಬದಲು ಆ ಹುಡುಗರನ್ನು ಬಂಧಿಸಿ ಅವರ ಮೇಲೆ ಸಿಟಿ ಮ್ಯಾಜಿಸ್ಟ್ರೀಟ್ ಕೋರ್ಟನಲ್ಲಿ ಖಟ್ಲೆ ಹಾಕಿದರು.’

೧೯೩೧ ಜನವರಿ ೧೨ ರಂದು ಯರವಡಾ ಜೇಲಿನಲ್ಲಿ ಹಲವಾರು ಜನ ಸತ್ಯಾಗ್ರಹಿಗಳನ್ನು ಗಲ್ಲಿಗೇರಿಸಿದಾಗ ಬೆಳಗಾವಿಯಲ್ಲಿ ಭಾರಿ ಪ್ರಮಾಣದ ಪ್ರತಿಭಟನೆ ನಡೆಯಿತು. ಸಂಪೂರ್ಣ ಬೆಳಗಾವಿಯ ಚಟುವಟಿಕೆಗಳೆಲ್ಲಾ ಸ್ಥಗೀತಗೊಂಡವು. ಸಂತಾಪ ಸೂಚಿಸುವುದಕ್ಕಾಗಿ ಮಧ್ಯಾಹ್ನ ನಾಲ್ಕು ಗಂಟೆಗೆ ಮಾರುತಿಗಲ್ಲಿಯ ಹನುಮಾನಮಂದಿರದಿಂದ ಪ್ರಚಂಡ ಮೆರವಣಿಗೆ ಹೊರಟಿತು. ಎಲ್ಲರೂ ರಾಷ್ಟ್ರಗೀತೆಗಳನ್ನು ಹಾಡುತ್ತ ಸಾಗಿದರು. ಸುಮಾರು ಹತ್ತುಸಾವಿರಕ್ಕಿಂತಲೂ ಹೆಚ್ಚು ಜನ ಮೆರವಣಿಗೆಯಲ್ಲಿ ಪಾಲ್ಗೊಂಡಿದ್ದರು. ಈ ಸಂದರ್ಭದಲ್ಲಿ ಮೆರವಣಿಗೆಯನ್ನು ಅಧಿಕಾರಿಗಳು ನಿಷೇಧಿಸಿದ್ದರು. ಅದನ್ನು ಲೆಕ್ಕಿಸದೆ ಮೆರವಣಿಗೆಯನ್ನು ನಡೆಸಿದ್ದರು. ಆ ಸಂದರ್ಭದಲ್ಲಿ ಪೋಲಿಸರು ಅಡ್ಡಗಟ್ಟಿ ಮೆರವಣಿಗೆಕಾರರ ಮೇಲೆ ಲಾಠಿ ಪ್ರಹಾರ ಮಾಡಿದರು. ಈ ಸಂದರ್ಭದಲ್ಲಿ ನೂರಾರು ಜನರು ಗಾಯಗೊಂಡರು. ಕೆಲವರಿಗೆ ಗಂಭೀರ ಸ್ವರೂಪದ ಗಾಯಗಳಾಗಿದ್ದವು.

ಬೆಳಗಾವಿಯ ಸ್ವಾತಂತ್ರ್ಯ ಹೋರಾಟ ವೈವಿಧ್ಯತೆಯಿಂದ ಕೂಡಿದ್ದಾಗಿದೆ. ರಾಷ್ಟ್ರಪ್ರೇಮವನ್ನು ಕೆಲವರು ತಮ್ಮದೇ ಆದ ವಿಶಿಷ್ಟ ಕಾಯಕದ ಮೂಲಕ ತೋರಿಸಿದ್ದಾರೆ. ಬ್ರಿಟಿಷ ಆಡಳಿತವನ್ನು ತಿರಸ್ಕರಿಸಿದ್ದಾರೆ. ಇಂತಹ ಒಂದು ಘಟನೆ ಬೆಳಗಾವಿಯ ವಕೀಲರಿಂದ ಮತ್ತು ವ್ಯಾಪಾರಸ್ಥರಿಂದ ನಡೆದುದನ್ನು ಸ್ಮರಿಸಬಹುದು. ಕೇಶವರಾವ ಅಜರೇಕರ, ನರಗುಂದಕರ ಮೊದಲಾದ ವಕೀಲರು ತಮ್ಮ ಮನೆಯಲ್ಲಿಯೇ ಒಂದು ಕೋರ್ಟ ಸ್ಥಾಪಿಸಿ ಅದರ ಮೂಲಕ ಜನರ ವ್ಯಾಜ್ಯಗಳನ್ನು ಒಪ್ಪಂದದ ಮೂಲಕ ಇತ್ಯರ್ಥಗೊಳಿಸತೊಡಗಿದರು.

ಬೆಳಗಾವಿಯ ಸ್ವಾತಂತ್ರ್ಯ ಹೋರಾಟಗಾರರಲ್ಲಿ ಕೆಲವು ಜನರು ವ್ಯಾಪಾರಸ್ಥರಿದ್ದರು. ಇವರು ತಮ್ಮ ತಮ್ಮೊಳಗಿನ ನ್ಯಾಯಗಳನ್ನು ಬಗೆಹರಿಸಿಕೊಳ್ಳಲು ಒಂದು ಪಂಚಾಯತಿಯನ್ನು ನಿರ್ಮಿಸಿಕೊಂಡಿದ್ದರು. ಶಹಾಪುರದ ಓರ್ವ ವ್ಯಾಪಾರಿಯು ಮೋತಿಲಾಲ ನೆಹರು ಅವರು ನಿಧನರಾದಾಗ ತನ್ನ ಅಂಗಡಿ ಮುಚ್ಚಲಿಲ್ಲೆಂದು ಅವನ ಮೇಲೆ ಸಾಮಾಜಿಕ ಬಹಿಷ್ಕಾರವನ್ನು ಹಾಕಿದರು. ಆಗ ಆತ ಪಂಚಾಯತಿಯವರು ವಿಧಿಸಿದ ದಂಡ ತೆತ್ತು ಕ್ಷಮಾಯಾಚನೆ ಮಾಡಿದನು. ಪೋಲಿಸರಿಗೆ ಸಹಕರಿಸಿದವರನ್ನೂ ಸಮಾಜದಿಂದ ಬಹಿಷ್ಕಾರ ಹಾಕುತ್ತಿದ್ದರು.

೧೯೩೪ರ ಜನವರಿ ತಿಂಗಳಿನಲ್ಲಿ ಗಾಂಧೀಜಿಯವರು ಹರಿಜನ ಸೇವಾ ಕಾರ್ಯಕ್ಕಾಗಿ ದೇಶ ಸಂಚಾರ ಮಾಡುತ್ತ ಬೆಳಗಾವಿಗೆ ಬಂದರು(ಇದು ಅವರು ಬೆಳಗಾವಿಗೆ ಬರುತ್ತಿರುವುದು ನಾಲ್ಕನೆಯ ಭೆಟ್ಟಿ). ಆಗ ಎರಡು ರಾತ್ರಿ ಎರಡು ಹಗಲು ಬೆಳಗಾವಿಯ ಟಿಳಕವಾಡಿಯ ಬಂಡೋಪಂತ ಕುಲಕರ್ಣಿಯವರ ಬಂಗಲೆಯಲ್ಲಿ ವಾಸವಾಗಿದ್ದರು. ಸಾಯಂಕಾಲ ಪ್ರಾರ್ಥನೆಗೆ ಅಧಿಕ ಸಂಖ್ಯೆಯಲ್ಲಿ ಜನ ಸೇರುತ್ತಿದ್ದರು. ಕಾಂಗ್ರೆಸ ಭವನದ ಬಯಲಿನಲ್ಲಿ ಜಾಹೀರ ಸಭೆ ಜರುಗಿತು. ಆ ಸಭೆಯಲ್ಲಿ ಭೀಮರಾವ್ ಪೋತದಾರರು ಐವತ್ತುಸಾವಿರ ರೂಪಾಯಿ ನಿಧಿ ಸಂಗ್ರಹಿಸಿ ಹರಿಜನ ನಿಧಿಗಾಗಿ ಹಮ್ಮಿಣಿ (ಪರ್ಸ)ಯನ್ನು ಗಾಂಧೀಜಿಯವರಿಗೆ ಅರ್ಪಿಸಿದರು.

ಕ್ವಿಟ್ ಇಂಡಿಯಾ ಚಳುವಳಿಯ ಕಾಲದಲ್ಲಿ ಬೆಳಗಾವಿಯು ಮುಂಬೈ ಪ್ರಾಂತದಲ್ಲಿಯೇ ಅಗ್ರಗಣ್ಯ ಸಾಧನೆಯನ್ನು ಮಾಡಿತು. ಕರ್ನಾಟಕ ಪ್ಯಾಟರ್ನ ಎಂಬ ಬುಡಮೇಲು ಕೃತ್ಯಗಳ ಸಾಧನೆಯಲ್ಲಿ ಅಗ್ರಸ್ಥಾನದಲ್ಲಿತ್ತು.

ರೇಲ್ವೆ ಸ್ಟೇಶನ್‌ಗಳ ನಾಶ, ಗ್ರಾಮ ಚಾವಡಿಗಳ, ಗ್ರಾಮ ರಕ್ಷಕರ ಹತ್ಯಾರ ಅಪರಣ, ಕಂದಾಯ ದಫ್ತರಗಳ ನಾಶ, ಅಂಚೆ ರನ್ನರನಿಂದ ಅಂಚೆ ಬ್ಯಾಗ್‌ಗಳ ಲೂಟಿ, ಕಂದಾಯ ಸಂಗ್ರಹದ ಹಣದ ಲೂಟಿ, ಶಿಂಧಿ ಗಿಡಗಳ ನಾಶ, ಪಿಕಟಿಂಗ್ ಮುಂತಾದ ಚಟುವಟಿಕೆಯಲ್ಲಿ ಭಾಗವಹಿಸಿ ಸರ್ಕಾರಕ್ಕೆ ನಡುಕ ಹುಟ್ಟಿಸಿದರು. ಚಳುವಳಿಗಾರರ ಬಂಧನಕ್ಕೆ ಸರ್ಕಾರ ವ್ಯಾಪಕ ಬಲೆ ಬೀಸಿತ್ತು. ಹಿಡಿದು ಕೊಟ್ಟವರಿಗೆ ಹತ್ತುಸಾವಿರದವರೆಗೆ ಬಹುಮಾನ ನೀಡುವುದಾಗಿ ಘೋಷಿಸಿದರು. ಈ ಸಂದರ್ಭದಲ್ಲಿ ಬೆಳಗಾವಿಯ ಶಾಲೆ – ಕಾಲೇಜುಗಳು ಸುಮಾರು ಎರಡು ತಿಂಗಳುಗಳವರೆಗೆ ಮುಚ್ಚಿದ್ದವು.

೧೯೩೨ ರಿಂದ ೧೯೩೪ ರ ವರೆಗೆ ಬೆಳಗಾವಿಯ ಸ್ವಾತಂತ್ರ್ಯ ಹೋರಾಟಗಾರರು ಕಾಯಿದೆ ಭಂಗ ಚಳುವಳಿಯಲ್ಲಿ ನಿರಂತರವಾಗಿ ಜೈಲುವಾಸವನ್ನು ಅನುಭವಿಸಿದರು. ಜೀವನರಾವ್ ಯಾಳಗಿ, ನಾರಾಯಣರಾವ್ ಜೋಶಿ, ಬಳವಂತರಾವ ದಾತಾರ, ಬಾಬೂರಾವ್ ಠಾಕೂರ, ಶಿವರಾವ ಕೊಪ್ಪಳ, ಜಯದೇವ ಕುಲಕರ್ಣಿ ಮುಂತಾದವರು ಬಂಧನಕ್ಕೊಳಗಾಗಿ ಸೆರೆಮನೆ ವಾಸ ಅನುಭವಿಸಿದರು. ಜೈಲಿನಲ್ಲಿದ್ದಾಗಲೂ ಇವರು ಸಾಮಾಜಿಕ ಆಂದೋಲನವನ್ನು ಮಾಡಿದ್ದು ಒಂದು ವಿಶೇಷ. ಹಿಂಡಲಗಾ ಜೈಲಿನಲ್ಲಿದ್ದುಕೊಂಡೇ ಗಾಂಧೀಜಿಯವರ ಅಸ್ಪೃಶ್ಯತಾ ನಿವಾರಣೆಯ ಆಂದೋಲನವನ್ನು ಕೈಗೊಂಡರು.

ಬೆಳಗಾವಿಯಲ್ಲಿ ನಡೆದ ಸ್ವಾತಂತ್ರ್ಯ ಹೋರಾಟಕ್ಕೆ ಹಲವಾರು ಮಠ ಮಾನ್ಯಗಳು, ಶೈಕ್ಷಣಿಕ ಸಂಸ್ಥೆಗಳು, ಪತ್ರಿಕೆಗಳು ವಿಶಿಷ್ಟವಾದ ಸೇವೆ, ಸಹಕಾರವನ್ನು ನೀಡಿವೆ. ಇದರಲ್ಲಿ ನಾಗನೂರು ರುದ್ರಾಕ್ಷಿಮಠ, ಕೆ. ಎಲ್. ಇ. ಸಂಸ್ಥೆ, ಸಂಯುಕ್ತ ಕರ್ನಾಟಕ, ತರುಣ ಭಾರತ, ಕರ್ನಾಟಕ ಮಿತ್ರ (ಡಾ. ಸವಣೂರ ಹಣಮಂತರಾಯ) ಅರುಣೋದಯ (ವೆಂಕಟರಾವ್ ಪಂಡಿತರು) 'ಕರ್ನಾಟಕ ವೃತ್ತ' ಮತ್ತು 'ಧನಂಜಯ' (ಮುದವೀಡು ಕೃಷ್ಣರಾಯರು) ಮುಂತಾದ ಪತ್ರಿಕೆಗಳ ಪಾತ್ರ ಸಮಯೋಚಿತವಾಗಿ ಮೂಡಿ ಬಂದಿದೆ.

ನಾಡಿನ ಪ್ರತಿಷ್ಠಿತ ಧಾರ್ಮಿಕ ಸಂಸ್ಥೆಗಳಲ್ಲಿ ಒಂದಾದ ರುದ್ರಾಕ್ಷಿಮಠದ ಶಿವಬಸವಸ್ವಾಮಿಗಳು ಹೋರಾಟಗಾರರಿಗೆ ನೀಡಿದ ಸಹಕಾರ ವಿಶಿಷ್ಟವಾಗಿದೆ. ೧೯೩೭ರಲ್ಲಿ ಗಾಂಧೀಜಿಯವರು ಹುದಲಿಗೆ ಆಗಮಿಸಿದಾಗ ಅವರನ್ನು ಭೆಟ್ಟಿಯಾಗಿ ಗಾಂಧೀಜಿಯವರ ಆದರ್ಶಗಳನ್ನು ಮೆಚ್ಚಿಕೊಂಡು ಅವರ ಅನತಿಯಂತೆ ಕಾವಿ ಕಳಚಿ ಖಾದಿಯನ್ನು ತೊಟ್ಟು ಕೊನೆತನಕ ಅದನ್ನು ಪಾಲಿಸಿಕೊಂಡು ಬಂದರು. ಗಾಂಧೀಜಿಯವರ ಅನೇಕ ಕಾರ್ಯಯೋಜನೆಗಳನ್ನು ತಮ್ಮ ಮಠಧರ್ಮದ ಚೌಕಟ್ಟಿನಲ್ಲಿ ಆಚರಣೆಗೆ ತಂದರು. ಸ್ವಾತಂತ್ರ್ಯ ಹೋರಾಟದ ಚಳುವಳಿಗಾರರನ್ನು ಬೆಂಬಲಿಸಿ ರಾಷ್ಟ್ರ ನಿರ್ಮಾಣ ಕಾರ್ಯದಲ್ಲಿ ಭಾಗಿಗಳಾದರು. ಬೆಳಗಾವಿಯಲ್ಲಿ ಚಳುವಳಿಯು ದಿನದಿಂದ ದಿನಕ್ಕೆ ತೀವ್ರಗೊಂಡು ಶ್ರೀಗಳ ಕಡೆಗೆ ಬಂದು ಹೋಗುವ ಕಾಂಗ್ರೆಸ್ ಕಾರ್ಯಕರ್ತರ ಸಂಖ್ಯೆಯೂ ಹೆಚ್ಚಾಗತೊಡಗಿತು. ಪ್ರಸಾದ ನಿಲಯದ ವಿದ್ಯಾರ್ಥಿಗಳೂ ಚಳುವಳಿಯಲ್ಲಿ ಭಾಗವಹಿಸತೊಡಗಿ ಬ್ರಿಟಿಷರ ವಿರುದ್ಧ ಘೋಷಣೆ ಕೂಗುವುದು, ಪರೇಡ ನಡೆಸುವುದು ಮುಂತಾದ ಅಹಿಂಸಾತ್ಮಕ ಚಟುವಟಿಕೆಗಳನ್ನು ಮಾಡತೊಡಗಿದರು. ಬ್ರಿಟಿಷ್ ಸರಕಾರವು 'ಚಲೇಜಾವ ಚಳುವಳಿ'ಯನ್ನು ನಿಯಂತ್ರಿಸಲು ರಾಷ್ಟ್ರದ ನಾಯಕರನ್ನು ಬಂಧಿಸಿ ಸೆರೆಮನೆಗೆ ಕಳಿಸುವ ಕಾರ್ಯಾಚರಣೆಯಲ್ಲಿ ತೊಡಗಿತು. ಇದರ ಪರಿಣಾಮವಾಗಿ ಬೆಳಗಾವಿಯಲ್ಲಿಯ ಹೋರಾಟಗಾರರು ತಲೆಮರೆಸಿಕೊಂಡು ಭೂಗತರಾಗಿ ಚಳುವಳಿಯನ್ನು ಪ್ರಾರಂಭಿಸಿದರು. ಈ ಸಂದರ್ಭದಲ್ಲಿ ಶ್ರೀಗಳು ಚಳುವಳಿಗಾರರಿಗೆ ತಮ್ಮ ಮಠದಲ್ಲಿ ಆಶ್ರಯ ನೀಡಿದರು. ಅವರಿಗೆಲ್ಲ ಊಟ-ಉಪಚಾರವನ್ನು ನೀಡಿದರು. ಈ ಸುದ್ದಿಯು ಬ್ರಿಟಿಷರಿಗೆ ಗೊತ್ತಾಗಿ ಶ್ರೀಗಳನ್ನು ಬಂಧಿಸಬೇಕೆಂದು ಆದೇಶ ಹೊರಡಿಸಿದರು. ಇದು ಶ್ರೀಗಳಿಗೆ ಗೊತ್ತಾಗಿ ಭಕ್ತರ ಸಹಾಯದಿಂದ ಗುಪ್ತವೇಷದಿಂದ ಘಟಪ್ರಭಾಕ್ಕೆ ಹೋಗಿ ಅಲ್ಲಿಂದ ಬ್ಯಾಡಗಿ, ಸಾಗರ ಮಾರ್ಗವಾಗಿ ಕೆಳದಿಗೆ ಹೋಗಿ ಕೆಲದಿನಗಳ ವರೆಗೆ ನೆಲೆಸುತ್ತಾರೆ.

೧೯೪೧ ರಲ್ಲಿ ಗಾಂಧೀಜಿಯವರು ಯುದ್ಧ ವಿರೋಧಿ ಘೋಷಣೆಯ ವೈಯಕ್ತಿಕ ಸತ್ಯಾಗ್ರಹ ಆರಂಭಿಸುತ್ತಲೇ ಬೆಳಗಾವಿಯ ಹೋರಾಟಗಾರರು ಅದರಲ್ಲಿ ಉತ್ಸಾಹದಿಂದ ಭಾಗವಹಿಸಿದರು. ಜಿಲ್ಲೆಯಾದ್ಯಂತ ಈ ಹೋರಾಟ ತೀವ್ರವಾಯಿತು. ವಾಮನರಾವ ಬಿದರಿಯವರು ಈ ಸತ್ಯಾಗ್ರಹದ ಧುರೀಣರಾಗಿದ್ದರು. ಅಣ್ಣು ಗುರೂಜಿ, ಶ್ರೀರಂಗ ಕಾಮತ, ವೆಂಕರೆಡ್ಡಿ ಹೂಲಿ, ಶಿವನಗೌಡ ಪಾಟೀಲ, ಜಯದೇವ ಕುಲಕರ್ಣಿ ಮುಂತಾದವರು ಅವರಿಗೆ ಸಹಾಯಕರಾಗಿದ್ದರು. ಬೆಳಗಾವಿಯಲ್ಲಿ ೧೨ ಜನ ಮುಸಲ್ಮಾನ ತರುಣರು ಒಂದೇ ವೇದಿಕೆಯಲ್ಲಿ ಒಬ್ಬರ ನಂತರ

ಒಬ್ಬರು ಸತ್ಯಾಗ್ರಹ ಮಾಡಿ ಸೆರೆಯಾಳಾದರು. ವೈಯಕ್ತಿಕ ಸತ್ಯಾಗ್ರಹದ ಈ ವಿಶಿಷ್ಟ ರೀತಿಯನ್ನು ಕಂಡು ಗಾಂಧೀಜಿಯವರು ಕೌತುಕಗೊಂಡರು. ವೈಯಕ್ತಿಕ ಸತ್ಯಾಗ್ರಹವನ್ನು ಒಂದು ರೀತಿಯಿಂದ ಸಾಮೂಹಿಕ ಸತ್ಯಾಗ್ರಹದಲ್ಲಿ ಪರಿವರ್ತಿಸಿದ ಕೀರ್ತಿಯು ಬೆಳಗಾವಿ ಜಿಲ್ಲೆಗೆ ಸಲ್ಲುತ್ತದೆ.[೨]

೧೯೪೨ರ ಅಗಸ್ಟ್ ೯ ರಂದು ಮುಂಜಾನೆ ಜಿಲ್ಲೆಯ ಎಲ್ಲ ನಾಯಕರನ್ನು ಬಂಧಿಸಲಾಯಿತು. ಇದನ್ನು ನಿರೀಕ್ಷಿಸಿದ ಕೆಲವು ಮುಖಂಡರು ಮೊದಲೇ ಭೂಗತರಾಗಿದ್ದರು. ಈ ಸಂದರ್ಭದಲ್ಲಿ ಕಾರ್ಯಕರ್ತರಿಗೆ ಮಾರ್ಗದರ್ಶನ ನೀಡಲು ಒಬ್ಬ ಮುಖಂಡರೂ ಇರಲಿಲ್ಲ. ಆಗ ಜನರೇ ಸ್ವಪ್ರೇರಣೆಯಿಂದ ಸ್ವಯಂಸ್ಫೂರ್ತಿಯಿಂದ ಮೆರವಣಿಗೆ, ಪ್ರಭಾತಫೇರಿ, ಸಭೆ, ಹರತಾಳ ಮೊದಲಾದ ಚಟುವಟಿಕೆಯಲ್ಲಿ ತೊಡಗಿದರು. ಬೆಳಗಾವಿಯಲ್ಲಿ ಐದು ದಿನಗಳವರೆಗೆ ಶಾಲೆ ಕಾಲೇಜುಗಳು, ಅಂಗಡಿಗಳು ಮುಚ್ಚಿದವು. ಜಿಲ್ಲೆಯ ತುಂಬೆಲ್ಲಾ ಚಳುವಳಿ ಉಗ್ರರೂಪವನ್ನು ತಾಳಿ ಪೋಲಿಸರ ಗುಂಡಿಗೆ ಹಲವಾರು ಜನರು ಆಹುತಿಯಾದರು. ಬೆಳಗಾವಿಯ ಮಾರುತಿದೇವಾಲಯ ಹಾಗೂ ಮಹಿಳಾ ವಿದ್ಯಾಲಯದ ಬಯಲಿನಲ್ಲಿ ನಡೆದ ವಿದ್ಯಾರ್ಥಿ–ವಿದ್ಯಾರ್ಥಿನಿಯರ ದೊಡ್ಡ ಸಭೆಯಲ್ಲಿ ಲಾಠಿ ಪ್ರಹಾರವಾಯಿತು. ನೂರಾರು ಜನರಿಗೆ ಗಾಯಗಳಾದವು. ಹಲವರ ಬಂಧನವಾಯಿತು.

ನಾಯಕರೆಲ್ಲಾ ಭೂಗತರಾಗಿದ್ದರಿಂದ ಹೋರಾಟಗಳು ನಿಲ್ಲದೆ ಮುಂದುವರಿದಿದ್ದು ಬೆಳಗಾವಿ ಸ್ವಾತಂತ್ರ್ಯ ಹೋರಾಟದ ವೈಶಿಷ್ಟ್ಯಗಳಲ್ಲೊಂದಾಗಿದೆ. ಅದಕ್ಕಾಗಿಯೇ ಬೆಳಗಾವಿ ಜಿಲ್ಲೆಗೆ ಗಂಡುಮೆಚ್ಚಿನ ಭೂಮಿ ಎಂಬ ಹೆಸರು ಬಂದಿದೆ. ಪ್ರತಿಯೊಬ್ಬರೂ ಈ ಹೋರಾಟದಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಚಳುವಳಿಯನ್ನು ಜೀವಂತವಾಗಿರಿಸಿದರು. ಭೂಗತರಾಗಿದ್ದ ಮುಖಂಡರು ಗುಪ್ತವಾಗಿ ಭೆಟ್ಟಿಯಾಗಿ ಪಂತಬಾಳೇಕುಂದರಗಿಯಲ್ಲಿ ಸಭೆ ನಡೆಸಿದರು. ಮುಂದಿನ ಕಾರ್ಯ ಯೋಜನೆಗಳ ಬಗೆಗೆ ಚರ್ಚಿಸಿ, ಹೋರಾಟದ ಗುಪ್ತ ಸಂಘಟನೆಯನ್ನು ರಚಿಸಿ ಅದರ ಕೇಂದ್ರ ಕಚೇರಿಯನ್ನು ಬೆಳಗಾವಿಯಲ್ಲಿ ಸ್ಥಾಪಿಸಿದರು. ಅದರ ಕಾರ್ಯನಿರ್ವಹಣೆಯನ್ನು ಜಯದೇವ ಕುಲಕರ್ಣಿಯವರಿಗೆ ಒಪ್ಪಿಸಿದರು. ಅವರು ಬೆಳಗಾವಿಯಲ್ಲಿಯೇ ಮಾರುವೇಷದಿಂದ ಗುಪ್ತವಾಗಿದ್ದುಕೊಂಡು ಜಿಲ್ಲೆಯ ವಿವಿಧ ಕಡೆಗಳಲ್ಲಿ ಕೆಲಸ ಮಾಡುತ್ತಿದ್ದ ಹಲವಾರು ಗುಂಪುಗಳೊಡನೆ ಸಂಪರ್ಕ ಬೆಳೆಸಿದರು. ಈ ಕಾರ್ಯಕ್ಕೆ ಹಣದ ಅವಶ್ಯಕತೆಯಿರುವುದನ್ನು ಮನಗಂಡು ನಿಧಿ ಸಂಗ್ರಹ ಮಾಡತೊಡಗಿದರು. ಈ ಸಂದರ್ಭದಲ್ಲಿಯೇ ಇನ್ನೂ ನಿಧಿ ಸಂಗ್ರಹವಾಗಿರದ ಸಮಯದಲ್ಲಿ ಶ್ರೀರಂಗ ಕಾಮತರು ಧಾರವಾಡ ಜಿಲ್ಲೆಯ ಹೋರಾಟಗಾರರೊಡನೆ ಮಾತಾಡಿಕೊಂಡು ಒಂದೇ ರಾತ್ರಿ ನಾಲ್ಕು ರೇಲ್ವೆ ನಿಲ್ದಾಣಗಳನ್ನು ಸುಟ್ಟುಹಾಕುವ ಕಾರ್ಯಕ್ರಮವನ್ನು ಸಿದ್ಧಗೊಳಿಸಿದ್ದರು. ಅದಕ್ಕೆ ಬೇಕಾದ ಹಣಕ್ಕಾಗಿ ಅವರು ಜಯದೇವ ಕುಲಕರ್ಣಿಯವರನ್ನು ಕೇಳಿದಾಗ ಅವರು ತಮ್ಮ ಹೆಂಡತಿಯ ಆಭರಣಗಳನ್ನು ಬತ್ತಿಯಿಟ್ಟು ಹಣ ಒದಗಿಸಿದರು. ಅಂದಿನ ರಾತ್ರಿಯೇ ಅಂದರೆ ೧೯೪೨ ರ ಸೆಪ್ಟೆಂಬರ ೧೫ ರಂದು ನಾಲ್ಕು ರೇಲ್ವೆ ನಿಲ್ದಾಣಗಳು ಸುಟ್ಟುಬೂದಿಯಾದವು. ಒಂದು ವೇಳೆ ಜಯದೇವ ಕುಲಕರ್ಣಿಯವರು ಹಣವನ್ನು ಕೊಡದೇ ಇದ್ದಿದ್ದರೆ ಈ

೧೧. ಕಿರಿ ಕುರಂದವಾಡ ಸಂಸ್ಥಾನ

೧೨. ಜಮಖಂಡಿ ಸಂಸ್ಥಾನ-ಕುಂದಗೋಳ, ಚಿಪ್ಪಲಕಟ್ಟಿ ಪ್ರದೇಶಗಳು

೧೩. ಮುಧೋಳ ಸಂಸ್ಥಾನ

೧೪. ಜತ್ ಸಂಸ್ಥಾನ

೧೫. ಅಕ್ಕಲಕೋಟೆ ಸಂಸ್ಥಾನ

೧೬. ಜೋಥ್ ಸಂಸ್ಥಾನ(ಗುಣದಾಳ)

೧೭. ರಾಮದುರ್ಗ ಸಂಸ್ಥಾನ

೧೮. ಸೊಂಡೂರು ಸಂಸ್ಥಾನ

೧೯. ಸವಣೂರು ಸಂಸ್ಥಾನ

೨೦. ಬೆಳಗಾವಿ, ಬೆಂಗಳೂರು, ಬಳ್ಳಾರಿ ದಂಡು ಪ್ರದೇಶಗಳು

ಈ ಸಂಸ್ಥಾನಗಳಲ್ಲಿ ಮೈಸೂರು, ಮದರಾಸು, ಕೊಡಗುಗಳನ್ನು ಹೊರತುಪಡಿಸಿ ಉಳಿದೆಲ್ಲ ಕಡೆಗಳಲ್ಲಿ ಮರಾಠಿಯೇ ಆಡಳಿತ ಭಾಷೆ, ವ್ಯವಹಾರ ಭಾಷೆಯಾಗಿತ್ತು. ಇಲ್ಲಿರುವ ಅರಸರು ಮರಾಠರೇ ಆಗಿದ್ದರು. ಹೈದರಾಬಾದ ಸಂಸ್ಥಾನದಲ್ಲಿ ಉರ್ದು, ಮದರಾಸ್ ಅಧಿಪತ್ಯಕ್ಕೆ ಸೇರಿದ ಭಾಗಗಳಲ್ಲಿ ತೆಲುಗು, ತಮಿಳು, ಭಾಷೆಗಳು ಪ್ರಾಬಲ್ಯ ಹೊಂದಿದ್ದವು. ಉತ್ತರ ಕರ್ನಾಟಕ ಎನಿಸಿದ ಇಂದಿನ ಬೆಳಗಾವಿ, ಧಾರವಾಡ, ಹಾವೇರಿ, ಗದಗ, ಬಾಗಲಕೋಟೆ, ವಿಜಾಪುರ ಮತ್ತು ಕಾರವಾರ ಜಿಲ್ಲೆಗಳು ಮುಂಬೈ ಪ್ರಾಂತದಲ್ಲಿದ್ದವು. ಮೈಸೂರು ರಾಜ್ಯ ಬಿಟ್ಟರೆ, ಮೂರರಲ್ಲಿಯ ಎರಡಕ್ಕಿಂತ ಅಧಿಕ ಕನ್ನಡಿಗರು ಮರಾಠಿ, ಉರ್ದು, ತೆಲಗು ಮತ್ತು ತಮಿಳು, ಮಲೆಯಾಳಿ ಭಾಷೆಗಳನ್ನು ಸುಮಾರು ಮೂರು ಶತಮಾನಗಳಷ್ಟು ಕಾಲ ಕಲಿಯಬೇಕಾಯಿತು. ಜೊತೆಗೆ ಆ ಭಾಷೆಗಳ ಜನರ ಸಂಸ್ಕೃತಿಗೆ ಹೊಂದಿಕೊಳ್ಳಬೇಕಾಯಿತು.

ಹೀಗೆ ತುಂಡರಿಸ್ಪಟ್ಟ ಕರ್ನಾಟಕದ ಜನತೆಯು ತಮ್ಮ ಉದ್ಧಾರವನ್ನು ಸಾಧಿಸುವುದಕ್ಕಾಗಿ ತಾವೆಲ್ಲರೂ ಒಂದೇ ಆಡಳಿತದಲ್ಲಿ ಸೇರುವುದು ಅವಶ್ಯ ಎಂಬ ಭಾವನೆಯಿಂದ ಒಂದುಗೂಡಲು ಹವಣಿಸಿದರು. ಕರ್ನಾಟಸ್ಥರೆಲ್ಲರೂ ಒಂದೇ ಆಡಳಿತದಲ್ಲಿ ಒಂದುಗೂಡದೆ ಗತ್ಯಂತರವಿಲ್ಲವೆಂಬ ಕಲ್ಪನೆಯು ಮೊದಲು ಉದಿಸಿದ್ದು[೨೫] ಉತ್ತರ ಕರ್ನಾಟಕದಲ್ಲಿ ಎಂಬುದು ಗಮನಾರ್ಹ ವಿಷಯವಾಗಿದೆ.

ಬ್ರಿಟಿಷ್ ಆಡಳಿತವು 'ಒಡೆದು ಆಳುವ ನೀತಿ'ಯದಾಗಿತ್ತು. ಒಂದೇ ಭಾಷೆಯ ಜನರು ಒಟ್ಟಿಗೆ ಒಂದೇ ಆಡಳಿತದಲ್ಲಿದ್ದರೆ ಅದು ತಮಗೆ ಕೆಡು ಎಂದು ಬಗೆದು ತಮಗೆ ಹೇಗೆ ಬೇಕೋ ಹಾಗೆ ಪ್ರಾಂತ್ಯಗಳನ್ನು ರಚಿಸಿಕೊಂಡರು. ಇಂತಹ ಸಂದರ್ಭದಲ್ಲಿಯೇ ಕೆಲವು ಬ್ರಿಟಿಷ ಅಧಿಕಾರಿಗಳು ಉತ್ತಮ ಆಡಳಿತದ ಲಕ್ಷಣಗಳನ್ನು ಅರಿತವರಾಗಿದ್ದರು. ಅಂತದರಲ್ಲಿ ಬಳ್ಳಾರಿ ಜಿಲ್ಲೆಯ ಕಲೆಕ್ಟರ್ ಆಗಿದ್ದ ಸರ್ ಥಾಮಸ್ ಮನ್ರೋ ಪ್ರಮುಖನು. ಕನ್ನಡ ಮಾತನಾಡುವ ಜನರು ಅಧಿಕವಾಗಿರುವ ಪ್ರದೇಶಗಳನ್ನು ಒಂದೇ ಆಡಳಿತ ಪ್ರಾಂತ್ಯವಾಗಿ ಹೊಂದಿರಬೇಕೆಂಬ ಹಂಬಲವನ್ನು ಮೊಟ್ಟಮೊದಲಿಗೆ ಪ್ರಕಟಗೊಳಿಸಿದನು. ಕ್ರಿಶ. ೧೮೧೮ರ ಹೊತ್ತಿನಲ್ಲಿ ಧಾರವಾಡ, ಬೆಳಗಾವಿ ಪ್ರದೇಶಗಳನ್ನು ಗೆದ್ದುಕೊಂಡ ನಂತರ ಈ ಭಾಗವನ್ನು ಯಾವ ಪ್ರದೇಶಕ್ಕೆ ಸೇರಿಸಬೇಕೆಂಬುದನ್ನು ಕುರಿತು ಮುಂಬೈ, ಮದ್ರಾಸು ರಾಜ್ಯಗಳೊಡನೆ ಥಾಮಸ್ ಮನ್ರೋ ಪತ್ರ ವ್ಯವಹಾರ ನಡೆಸಿದ. "ಆ ಭಾಗವನ್ನು ಮದ್ರಾಸ ರಾಜ್ಯಕ್ಕೆ ಸೇರಿಸಿ ಮರಾಠರ ಪ್ರಭುತ್ವವನ್ನು ಅವರ ಆಡಳಿತದ ಹಳೆಯ ನೆನಪನ್ನು ಉಳಿಯಗೊಡದಂತೆ ಮಾಡಬೇಕೆಂದು ಪ್ರತಿಪಾದಿಸಿದನು. ಹೇಗೋ ಧಾರವಾಡ ಭಾಗವು ಮದ್ರಾಸಿನ ದಂಡಿನ ವಶದಲ್ಲಿತ್ತು. ಆಡಳಿತವೂ ಮದರಾಸು ಸರಕಾರದ ವಶಕ್ಕೆ ಬಂದರೆ ಆಡಳಿತವು ಸುಗಮವಾಗುತ್ತದೆ. ಧಾರವಾಡ ಜಿಲ್ಲೆಯ ಪೂರ್ವಕ್ಕೆ, ಪಶ್ಚಿಮಕ್ಕೂ ಮದ್ರಾಸಿನ ಜಿಲ್ಲೆಗಳು ಹೊಂದಿಕೊಂಡಿವೆ. ಆದ್ದರಿಂದ ಆಡಳಿತ ಸೌಕರ್ಯಕ್ಕೊಸ್ಕರ ಈ ವರ್ಗಾವಣೆ ವಿಹಿತವಾಗಿದೆ. ಮರಾಠರು ದಾಳಿಯಿಟ್ಟು ಪ್ರಬಲವಾಗಿದ್ರೂ ಧಾರವಾಡವು ಮರಾಠಾ ಸೀಮೆಯಲ್ಲ. ಈಗಾಗಲೇ ಮದರಾಸಿ ವಶದಲ್ಲಿರುವ ಕನ್ನಡದ ಪ್ರದೇಶಗಳೊಂದಿಗೆ ಪ್ರತಿನಿತ್ಯದ ಸಂಬಂಧವುಳ್ಳದ್ದು ಈ ಧಾರವಾಡ ಸೀಮೆ ಮತ್ತು ಮದರಾಸಿನ ವಶದಲ್ಲಿರುವ ಕನ್ನಡ ಪ್ರದೇಶಗಳಿಗೂ ಬಳ್ಳಾರಿ, ಸೊಂಡ(ಸೊಂಡೂರ) ಮತ್ತು ಮೈಸೂರು ಸೀಮೆಗಳಿಗೂ ಯಾವ ದೃಷ್ಟಿಯಿಂದಲೂ ವ್ಯತ್ಯಾಸವಿಲ್ಲ. ಆಡುವ ಭಾಷೆ ಒಂದೇ ಆಗಿರುವ ಸೀಮೆಗೆ ಸೇರಿಸುವುದರಿಂದ ಜನ ಸಂತೋಷಪಡುತ್ತಾರೆ. ಹೀಗೆ ಮಾಡದೆ ಮರಾಠರ ಪ್ರಭಾವ ಬೆಳೆಯುವುದಕ್ಕೆ ಆಸ್ಪದ ಕೊಡುವ ಹಾಗೂ ಸ್ವಾಭಾವಿಕವಾದ ನಂಟು ಇಲ್ಲದ ಮುಂಬೈ ಪ್ರಾಂತ್ಯಕ್ಕೆ ಧಾರವಾಡ ಸೀಮೆಯನ್ನು ಸೇರಿಸುವುದು ಯುಕ್ತವಲ್ಲ. ಈ ಒಂದು ಶಾಶ್ವತವಾದ ಏಕೀಕರಣವನ್ನು ಸಾಧಿಸುವಲ್ಲಿ ಒಟ್ಟು ಕನ್ನಡ ಜನದ ಹಿತದ ದೃಷ್ಟಿ ಪ್ರಾಮುಖ್ಯವಾಗಿದೆ."[೨೬]

ಮೇಲೆ ಹೇಳಿದ ಮನ್ರೋ ಅವರ ವಾದವನ್ನು ಅಲ್ಲಗಳೆದು ಧಾರವಾಡ ಭಾಗದ ಹಿತರಕ್ಷಣೆಯ ದೃಷ್ಟಿಯಿಂದ ಅದನ್ನು ಮುಂಬೈ ರಾಜ್ಯಕ್ಕೆ ಸೇರಿಸಬೇಕೆಂಬ ಮುಂಬೈ ರಾಜ್ಯಪಾಲರು ನೀಡಿದ ಸಲಹೆಯನ್ನು ಈಸ್ಟ ಇಂಡಿಯಾ ಕಂಪನಿಯು ಅಂಗೀಕರಿಸಿದ್ದರಿಂದ ಈ ಪ್ರದೇಶವೆಲ್ಲವೂ ಮುಂಬೈ ಪ್ರಾಂತ್ಯಕ್ಕೆ ಒಳಪಟ್ಟಿತು. ಮುಂದೆ ೧೮೩೬ರಲ್ಲಿ ಬೆಳಗಾವಿ ಜಿಲ್ಲೆಯೂ ೧೮೬೨ರಲ್ಲಿ ಉತ್ತರ ಕನ್ನಡ ಜಿಲ್ಲೆಯೂ ಪ್ರತ್ಯೇಕವಾದವು. ೧೮೬೨ರಲ್ಲಿ ಕನ್ನಡ ಜಿಲ್ಲೆ ಎರಡು ಪ್ರತ್ಯೇಕ ಜಿಲ್ಲೆಗಳಾಗಿ ವಿಭಾಗಿಸಿದಾಗ ಉತ್ತರದ ಭಾಗ ಮುಂಬೈ ಅಧಿಪತ್ಯಕ್ಕೂ ದಕ್ಷಿಣದ ಭಾಗ ಮದರಾಸ್ ಅಧಿಪತ್ಯಕ್ಕೂ ಸೇರಿದವು.

ಉತ್ತರ ಕರ್ನಾಟಕದ ನಾಲ್ಕು ಜಿಲ್ಲೆಗಳು ಮುಂಬೈ ಪ್ರಾಂತ್ಯಕ್ಕೆ ಸೇರಿದರೂ ಕೂಡ ಇಲ್ಲಿಯ ಆಡಳಿತ ಭಾಷೆ ಮರಾಠಿಯ ಬದಲಾಗಿ ಕನ್ನಡವೇ ಆಗಬೇಕೆಂದು ೧೮೩೫ರಲ್ಲಿ ನಿರ್ಣಯಿಸಲಾಯಿತು. ಬೆಳಗಾವಿ ಜಿಲ್ಲಾಧಿಕಾರಿಯಾಗಿದ್ದ ಜಾನ್.ಎ. ಡನಲಪ್ ಅವರು ೧-೧೧-೧೯೩೭ ರಿಂದ ಬೆಳಗಾವಿ ಜಿಲ್ಲೆಯಾದ್ಯಂತ ಕನ್ನಡವನ್ನೇ ಆಡಳಿತ ಹಾಗೂ ವ್ಯವಹಾರಿದ ಭಾಷೆಯನ್ನಾಗಿ ಜಾರಿಗೆ ತರಲು ಆದೇಶ ಹೊರಡಿಸಿದರು. ಬೆಳಗಾವಿ ಪ್ರದೇಶವು ಅಚ್ಚಗನ್ನಡದ ಪ್ರದೇಶವೆಂಬುದನ್ನು ಬ್ರಿಟಿಷ ಅಧಿಕಾರಿಗಳು ಅರಿತು ಈ ಭಾಗದ ಆಡಳಿತವು ಕನ್ನಡದಲ್ಲಿಯೇ ಇರಬೇಕೆಂದು ಸ್ಪಷ್ಟಪಡಿಸಿದರು. ೧೮೩೭ರ ಸೆಪ್ಟಂಬರ್ ೧೬ ರಂದು ಮುಂಬಯಿ ಗವರ್ನರ್ ಆರ್ ಗ್ರಾಂಟ್ ಅವರು ಮಾಡಿದ ಒಂದು ಟಿಪ್ಪಣಿ ಹೀಗಿದೆ: ಟಿಪ್ಪಣಿಗಳನ್ನು ಮರಾಠಿಯಲ್ಲಿ ಇಡುವುದಾದರೆ ಸರಕಾರೀ ಕಛೇರಿಗಳಲ್ಲಿ ಮರಾಠಿಯ ಪ್ರಭುತ್ವವನ್ನೇ ಉಳಿಸಿಕೊಂಡ ಹಾಗಾಗುತ್ತದೆ. ಇದು ಕನ್ನಡವನ್ನು ಜಾರಿಗೆ ತರುವ ದಾರಿಯಲ್ಲಿ ಒಂದು ದೊಡ್ಡ ಪ್ರಾರಂಭಿಕ ಆತಂಕವಾಗಿ ಪರಿಣಮಿಸುವುದು. ಇಂಥ ಆತಂಕವು ಈಗಾಗಲೇ ದೂರವಾಗುತ್ತಿದ್ದು, ನಾವು ಇದನ್ನು ಪೂರ್ತಿಯಾಗಿ ನಿವಾರಿಸಬೇಕು. ಮುಕ್ತಕಂಠದಿಂದ ಹೇಳುವುದಾದರೆ, ಈಗ ಅಧಿಕಾರ ಸ್ಥಾನಗಳಲ್ಲಿರುವ ಮರಾಠಿ ವಿದ್ವಾಂಸರಿಗೆ ತಕ್ಕ ಗೌರವ ಮತ್ತು ಗಮನ ನೀಡುತ್ತ, ಈ ಕಾರ್ಯವನ್ನು ಸಾಧಿಸಬೇಕಾಗಿದೆ. ನಮ್ಮ ಸರಕಾರವು ಕನ್ನಡಿಗರ ಪ್ರಯೋಜನಕ್ಕಾಗಿ ಆಡಳಿತ ನಡೆಸಬೇಕಾಗಿರುವುದರಿಂದ, ನಾವು ಹೀಗೆ ಮಾಡದೆ ಹೋದರೆ ಕನ್ನಡಿಗರಿಗೆ ಅನ್ಯಾಯ ಮಾಡಿದಂತಾಗುವುದು.[೨]

ಮುಂದೆ ೧೮೬೫ರಲ್ಲಿ ಡಬ್ಲ್ಯು ಎ ರಸೆಲ್‌ರು ಬೊಂಬಾಯಿ ಪ್ರಾಂತ್ಯದ ದಕ್ಷಿಣ ಭಾಗಗಳ ಶಿಕ್ಷಣಾಧಿಕಾರಿಗಳಾಗಿ ನೇಮಕಗೊಂಡ ನಂತರ ಬೆಳಗಾವಿ ಭಾಗದಲ್ಲಿ ಕನ್ನಡ ಚಟುವಟಿಕೆಗಳು ಹೆಚ್ಚಾದವು. ಇದೇ ಸಂದರ್ಭದಲ್ಲಿಯೇ ೧೮೬೬ರಲ್ಲಿ ರಸೆಲ್‌ರು ಚೆನ್ನಬಸಪ್ಪನವರನ್ನು ಬೆಳಗಾವಿಯ ಡೆಪ್ಯುಟಿ ಎಜುಕೇಶನಲ್ ಇನ್‌ಸ್ಪೆಕ್ಟರ್ ಎಂದು ನೇಮಿಸಿದರು. ಇವರಿಬ್ಬರ ಪ್ರಯತ್ನದಿಂದಾಗಿ ಬೆಳಗಾವಿ ಭಾಗದಲ್ಲಿ ಕನ್ನಡವು ಪ್ರಗತಿಯನ್ನು ಸಾಧಿಸಿತು. ಶಿಕ್ಷಣದಲ್ಲಿ ಮಹತ್ವದ ಬದಲಾವಣೆಗಳನ್ನು ತಂದು ಕನ್ನಡ ಪಠ್ಯಪುಸ್ತಕಗಳನ್ನು ಗುಜರಾತಿ ಮತ್ತು ಮರಾಠಿ ಭಾಷೆಗೆ ಸರಿಸಮನಾಗಿ ಬೆಳವಣಿಗೆಯನ್ನು ಹೊಂದುವಂತೆ ಮಾಡಿದರು. ಇವರಿಂದ ಶಾಂತವೀರ ರಾಜದೇವ ಕಿತ್ತೂರ, ಗಂಗಾಧರ ಮಡಿವಾಳೇಶ್ವರ ತುರಮರಿ, ವೀರಭದ್ರ ಮಡಿವಾಳೇಶ್ವರ ಪಂಡಿತ, ಚುರಮುರಿ ಶೇಷಗಿರಿರಾಯ, ಪಾಂಡುರಂಗ ಚಿಂತಾಮಣಿ ಪೇಟಕರ, ಹುಯಿಲಗೋಳ ಭುಜಂಗಯ್ಯ, ವೆಂಕಟ ರಂಗೋ ಕಟ್ಟಿ, ರೊದ್ದ ಶ್ರೀನಿವಾಸರಾಯ, ರಾ.ಹ.ದೇಶಪಾಂಡೆ ಮುಂತಾದ ಪಂಡಿತರು ಬೆಳಗಾವಿ, ಧಾರವಾಡ ಭಾಗಗಳಲ್ಲಿ ಡೆಪ್ಯುಟಿ ಚೆನ್ನಬಸಪ್ಪನವರು ಆರಂಭಿಸಿದ ಕನ್ನಡದ ಕೆಲಸವನ್ನು ಮುಂದುವರಿಸಿದರು.

ಕರ್ನಾಟಕದ ಏಕೀಕರಣ ಚಳುವಳಿ ಪ್ರಾರಂಭವಾಗುವ ಪೂರ್ವದಲ್ಲಿಯೇ ಬೆಳಗಾವಿ ಧಾರವಾಡ ಪ್ರದೇಶಗಳಲ್ಲಿ ಕನ್ನಡ ಚಟುವಟಿಕೆಗಳು ಹೆಚ್ಚು ನಡೆದವು. ಈ ಭಾಗದಲ್ಲಿಯೇ ಕನ್ನಡದ ಸ್ಥಿತಿ ಹೆಚ್ಚು ಹೀನಾಯವಾಗಿತ್ತು. ಅದರಲ್ಲಿಯೂ

ಬೆಳಗಾವಿಯಲ್ಲಿ ಕನ್ನಡಿಗರು ತಮ್ಮ ಭಾಷೆಯನ್ನೇ ಮರೆತಿದ್ದರು. ದಿನನಿತ್ಯದ ವ್ಯವಹಾರವೆಲ್ಲವೂ ಮರಾಠಿಯಲ್ಲಿಯೇ ನಡೆಯುತ್ತಿದ್ದವು. ಆಮಂತ್ರಣ ಪತ್ರಿಕೆ, ವಿವಾಹ ಪತ್ರಗಳಲ್ಲಿ ಸಭೆ, ಸಮಾರಂಭಗಳಲ್ಲಿ ಉತ್ಸವಗಳಲ್ಲಿ ಮುಂತಾದ ಸಾಂಸ್ಕೃತಿಕ ಕಾರ್ಯಕ್ರಮಗಳೆಲ್ಲವೂ ಮರಾಠಿಯಲ್ಲಿಯೇ. ಶಿಕ್ಷಣವೆಲ್ಲ ಮರಾಠಿಯಲ್ಲಿ ಕನ್ನಡಿಗರ ಮನೆಯನ್ನು ತುಂಬುತ್ತಿದ್ದ ಪತ್ರಿಕೆಗಳು ಮರಾಠಿಯವೇ ಆಗಿದ್ದವು. ಒಟ್ಟಿನಲ್ಲಿ ಕನ್ನಡಿಗರೆಲ್ಲಾ ಮರಾಠಿ ಭಾಷೆಯನ್ನು, ಸಂಸ್ಕೃತಿಯನ್ನು ಆಚರಣೆ, ಪದ್ಧತಿ, ಸಂಪ್ರದಾಯಗಳನ್ನೆಲ್ಲಾ ಸ್ವೀಕರಿಸಿದ್ದರು. ತಮ್ಮ ಮೂಲತನವನ್ನು ಕ್ರಮೇಣ ಮರೆಯುತ್ತಾ ಸಾಗಿದ್ದರು.[೫೮]

ರಾಜಕೀಯವಾಗಿಯೂ ಬೆಳಗಾವಿ ವಿಚಿತ್ರವಾದ ಆಡಳಿತವನ್ನು ಹೊಂದಿತ್ತು. ರಾಜಕೀಯದ ದ್ವಂದ್ವ ನೀತಿಯಿಂದಾಗಿ ಬೆಳಗಾವಿ ಪ್ರದೇಶ ಭೌಗೋಳಿಕವಾಗಿ ಛಿದ್ರ ಛಿದ್ರವಾದ ಸ್ವರೂಪವನ್ನು ತಾಳಿತು. ಕ್ರಿ.ಶ.೧೮೧೮ರಲ್ಲಿ ಬ್ರಿಟಿಷ ಅಧಿಕಾರಿ ಥಾಮಸ್ ಮನ್ರೋ ಬೆಳಗಾವಿಯನ್ನು ವಶಪಡಿಸಿಕೊಂಡು ಬ್ರಿಟಿಷ ಸಾಮ್ರಾಜ್ಯಕ್ಕೆ ಸೇರಿಸಿದ ಬಳಿಕ ಅದು ಆಡಳಿತದ ಅನುಕೂಲಕ್ಕಾಗಿ ಮುಂಬೈ ಪ್ರಾಂತ್ಯದಲ್ಲಿ ಸೇರಿತು. ಬ್ರಿಟಿಷರಿಗೆ ಸೇರಿದ ಬೆಳಗಾವಿಯೆಂದರೆ ಕೋಟೆ ಮತ್ತು ಈಗ ಹಳೆ ಬೆಳಗಾವಿ ಎಂದು ಕರೆಯಲ್ಪಡುವ ಬೆಳಗಾವಿ. ಈ ಬೆಳಗಾವಿಗೆ ಹತ್ತಿಯೇ ಇರುವ ಮತ್ತೊಂದು ಬೀದಿಯ ಪಕ್ಕದಲ್ಲಿಯೇ ಇರುವ(ಕಪಿಲೇಶ್ವರದೇವಾಲಯದಿಂದ)ಶಹಪೂರವು ಸಾಂಗ್ಲಿ ಪಟವರ್ಧನ ಮನೆತನಕ್ಕೆ ಸೇರಿದ ಆಡಳಿತಕ್ಕೆ ಒಳಪಟ್ಟಿತ್ತು. ಇಲ್ಲಿಂದ ಅರ್ಧ ಕಿ.ಮೀ. ದೂರದಲ್ಲಿರುವ ವಡಗಾವಿ ಪ್ರದೇಶವು ಕಿರಿಯಕುರುಂದವಾಡ ಸಂಸ್ಥಾನಕ್ಕೆ ಸೇರಿತ್ತು. ಇದರ ಪಕ್ಕದಲ್ಲಿಯೇ ಇವರು ಅನಿಗೋಳ ಪ್ರದೇಶವು ಹಿರಿಯ ಕುರಂದವಾಡ ಸಂಸ್ಥಾನಕ್ಕೆ ಸೇರಿತ್ತು. ಇದಲ್ಲದೆ ದಂಡು ಪ್ರದೇಶ(ಕಂಟೋನ್ಮಂಟ್ ಏರಿಯಾ)ವು ಬ್ರಿಟಿಷ್‌ರ ನೇರವಾದ ಆಡಳಿತಕ್ಕೆ ಒಳಪಟ್ಟಿತ್ತು. ಇವೆಲ್ಲವುಗಳ ಜೊತೆಗೆ ಬೆಳಗಾವಿಯ ಪೂರ್ವದಿಕ್ಕಿನಲ್ಲಿ ಕೊಲ್ಲಾಪೂರ ಮತ್ತು ಮಿರಜ ಸಂಸ್ಥಾನಿಕರ ಗ್ರಾಮಗಳೂ ಇದ್ದವು(ಇಂದು ಬೆಳಗಾವಿ ಇವೆಲ್ಲವುಗಳನ್ನು ಒಳಗೊಂಡಿದೆ)ಬಹುಶಃ ಈ ರೀತಿಯ ಆಡಳಿತವನ್ನು ಹೊಂದಿದ ಪಟ್ಟಣ ಬೆಳಗಾವಿಯನ್ನು ಬಿಟ್ಟರೆ ಬೇರೆಲ್ಲಿಯೂ ಇರಲಿಕ್ಕಿಲ್ಲ. ಈ ಎಲ್ಲ ಪ್ರದೇಶಗಳಲ್ಲಿ ಇರುವವರೆಲ್ಲಾ ಹೆಚ್ಚಾಗಿ ಕನ್ನಡಿಗರು. ಆದರೆ ಆಡಳಿತವೆಲ್ಲಾ ಮರಾಠಿಗರದಾಗಿತ್ತು. ಬ್ರಿಟಿಷ ಆಡಳಿತದ ಬೆಳಗಾವಿಯಲ್ಲಯೂ ಕೂಡ ಮರಾಠಿಯೇ ಆಡಳಿತ ಭಾಷೆಯಾಗಿ, ವ್ಯವಹಾರದ ಭಾಷೆಯಾಗಿ, ಶಿಕ್ಷಣದ ಭಾಷೆಯಾಗಿ ಮುಂದುವರೆಯಿತು. ಬ್ರಿಟಿಷರು ಬೆಳಗಾವಿಯನ್ನು ವಶಪಡಿಸಿಕೊಳ್ಳುವ ಪೂರ್ವದಲ್ಲಿ ಪುಣೆಯ ಪೇಶ್ವೆಗಳ ಆಡಳಿತಕ್ಕೆ ಒಳಪಟ್ಟಿದ್ದರಿಂದ ಸಹಜವಾಗಿ ಅದು ಮುಂದುವರೆಯಿತು. ಅಲ್ಲದೆ ಮುಂಬೈ ಪ್ರಾಂತ್ಯಕ್ಕೆ ಈ ಬೆಳಗಾವಿ ಸೇರಿದ್ದರಿಂದ ಮರಾಠಿಯೇ ಹೆಚ್ಚು ಬಳಕೆಯಾಗತೊಡಗಿತು. ಆದರೆ ಬ್ರಿಟಿಷರ ಆಳ್ವಿಕೆಯು ಪ್ರಾರಂಭವಾದ ಸಂದರ್ಭದಲ್ಲಿ ಅವರ ಆಳ್ವಿಕೆಗೆ ತೊಂದರೆಯಾಯಿತು. ಇಲ್ಲಿಯ ಜನರು ಕನ್ನಡಿಗರಿದ್ದದರಿಂದಲೇ ಬೆಳಗಾವಿಗೆ ಬಂದ ಅಧಿಕಾರಿಗಳು ಮುಂಬೈ ಗರ್ವನರ್‌ಗೆ ಹಲವಾರು ಪತ್ರಗಳನ್ನು ಬರೆದುದನ್ನು (ಶಿಕ್ಷಣ ಪ್ರಕಟಣದಲ್ಲಿ ಉಲ್ಲೇಖಿಸಲಾಗಿದೆ)ಕಾಣಬಹುದು. ಒಂದುವೇಳೆ ಇಲ್ಲಿಯ ಪ್ರಜೆಗಳು ಮರಾಠಿಗರಾಗಿದ್ದರೆ ಅವರ ಆಡಳಿತಕ್ಕೆ ಯಾವುದೇ ತೊಂದರೆ ಎದುರಾಗುತ್ತಿರಲಿಲ್ಲ.

ಬೆಳಗಾವಿಯಲ್ಲಿ ಮರಾಠಿಗರು ಅತ್ಯಲ್ಪ ಪ್ರಮಾಣದಲ್ಲಿದ್ದರೂ ಮರಾಠಿ ಭಾಷೆ ಹೆಚ್ಚು ಬೆಳೆಯಲು ಮೂಲಕಾರಣ ರಾಷ್ಟ್ರೀಯ ಸ್ವಾತಂತ್ರ್ಯ ಚಳುವಳಿ. ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ಬೆಳಗಾವಿಯ ಹೋರಾಟಕ್ಕೆ ಮೂಲ ಪ್ರೇರಣೆ ಮಹಾರಾಷ್ಟ್ರದ ಸ್ವಾತಂತ್ರ್ಯ ಹೋರಾಟಗಾರರು. ಅದರಲ್ಲಿಯೂ ಲೋಕಮಾನ್ಯ ಟಿಳಕರು ಬೆಳಗಾವಿ ಭಾಗದಲ್ಲಿ ಹೆಚ್ಚು ಸಂಪರ್ಕವನ್ನು ಇಟ್ಟುಕೊಂಡಿದ್ದರು. ಟಿಳಕರ ಅಪ್ಪಟ ಅಭಿಮಾನಿಗಳಾದ ಈ ಭಾಗದ ಜನರಿಗೆ ಅವರು ಪೂಜ್ಯನೀಯರಾಗಿದ್ದರು. ಹೀಗಾಗಿ ಟಿಳಕರ ಮೇಲಿನ ನಿಷ್ಠೆಯಿಂದ ಅವರ ಭಾಷೆ, ಸಂಸ್ಕೃತಿಯ ಮೇಲೆಯೂ ಪೂಜ್ಯನೀಯ ಭಾವನೆಯನ್ನು ಬೆಳಗಾವಿಯ ಮುಗ್ಧ ಕನ್ನಡಿಗರು ಹೊಂದಿದರು. ಅಲ್ಲದೆ ಮರಾಠಿಗರು ಸಂಪ್ರದಾಯವಾದಿಗಳು; ದೈವನಿಷ್ಠೆ, ಪೂಜೆ, ವ್ರತ, ಸಂಪ್ರದಾಯಗಳೆಲ್ಲ ಕಟ್ಟು ನಿಟ್ಟು, ಮರಾಠಿಗರ ಪದ್ಧತಿಗಳನ್ನೆಲ್ಲಾ ಕನ್ನಡಿಗರು ಅನುಕರಣೆ ಮಾಡಿದರು. ಕನ್ನಡದ ದೇವರನ್ನೆಲ್ಲಾ ಮರಾಠಿಗರು ತಮ್ಮದನ್ನಾಗಿಸಿಕೊಂಡರು(ಇಂದಿನ ಬೆಳಗಾವಿಯ ಹೆಚ್ಚಿನ ದೇವಾಲಯಗಳಲ್ಲಿ ಮರಾಠಿ ಜನರ ಅಧಿಕಾರವಿರುವುದನ್ನು ಕಾಣಬಹುದು)ಧಾರ್ಮಿಕವಾಗಿ ಆಕ್ರಮಣವಾದರೆ ಸಹಜವಾಗಿ ಮೂಲ ಸಂಸ್ಕೃತಿ ಮರೆಯಾಗುತ್ತದೆ. ಈ ವಾಸ್ತವವನ್ನು ಅರಿತ ಮರಾಠಿಗರು ಬೆಳಗಾವಿಯನ್ನು ಧಾರ್ಮಿಕವಾಗಿ ಆಕ್ರಮಿಸಿದವರು. ಈ ಸಂದರ್ಭದಲ್ಲಿಯೇ ಟಿಳಕರು ಪ್ರಾರಂಭಿಸಿದ ಗಣೇಶೋತ್ಸವ, ಶಿವಾಜಿಯ ಜಯಂತಿಗಳು ಕನ್ನಡಿಗರನ್ನು ಹೆಚ್ಚು ಆಕರ್ಷಿಸಿದವು.

ರಾಜಕೀಯವಾಗಿಯೂ ಕನ್ನಡಿಗರು ಹಿಂದಿದ್ದರು. ಕನ್ನಡಿಗರನ್ನು, ಕನ್ನಡ ಭಾಷೆಯನ್ನು ಎತ್ತಿಹಿಡಿಯುವ ಯಾವ ರಾಜನು ಬೆಳಗಾವಿಗೆ ಒದಗಿಬರಲಿಲ್ಲ. ನಿಶ್ಚಿತವಾದ ಅರಸೊತ್ತಿಗೆ ಬೆಳಗಾವಿಗೆ ಒದಗಿಬರಲಿಲ್ಲ. ರಾಜರಿಂದ ರಾಜರಿಗೆ ಇಲ್ಲಿಯ ಸಿಂಹಾಸನ ಪಲ್ಲಟವಾಗುತ್ತಲೇ ಸಾಗಿತು. ವಿಜಯಿಯಾದವನ ರಾಜ್ಯದ ಒಂದು ಭಾಗವಾಗಿ ಬೆಳಗಾವಿ ಬದಲಾವಣೆಯನ್ನು ಹೊಂದತೊಡಗಿತು. ಶಿವಾಜಿ, ಪೇಶ್ವೆ, ಪಟವರ್ಧನ, ಶಾಹುಮಹಾರಾಜರು ಮುಂತಾದ ಮರಾಠಿ ರಾಜರ ಆಡಳಿತಕ್ಕೆ ಒಳಪಟ್ಟು ಅವರ ಆಡಳಿತದ ಭಾಷೆಯಾದ ಮರಾಠಿಯಲ್ಲಿಯೇ ಇಲ್ಲಿಯ ಆಳ್ವಿಕೆಯೂ ನಡೆಯಿತು.

ಮುಂದೆ ಸ್ವಾತಂತ್ರ ಹೋರಾಟದ ಸಂದರ್ಭದಲ್ಲಿಯೂ ಮರಾಠಿಯ ಪ್ರಭಾವದಲ್ಲಿಯೇ ಇಲ್ಲಿಯ ಹೋರಾಟಗಾರರು ಆಂದೋಲನ ನಡೆಸಿದರು. ಈ ಭಾಗದ ಸ್ವಾತಂತ್ರ್ಯ ಹೋರಾಟದ ನೇತೃತ್ವವನ್ನು ವಹಿಸಿದ ಕರ್ನಾಟಕದ ಸಿಂಹವೆಂದೇ ಹೆಸರು ಪಡೆದ ಗಂಗಾಧರರಾಯ ದೇಶಪಾಂಡೆಯವರು ಕನ್ನಡಿಗರಾಗಿದ್ದರೂ ಅವರ ಮನೆಯ ಭಾಷೆ ಮರಾಠಿಯಾಗಿತ್ತು. ಅಲ್ಲದೆ ಕನ್ನಡದ ಬಗೆಗೆ ಪ್ರೀತಿ, ಅಭಿಮಾನ ಅವರಿಗೆ ಅಷ್ಟಕಷ್ಟೆ. ಕನ್ನಡಕ್ಕಿಂತ ಮರಾಠಿಯೇ ಅವರಿಗೆ ಪ್ರೀಯವಾದ ಭಾಷೆಯಾಗಿತ್ತು. ಸ್ವಾತಂತ್ರ್ಯ ಹೋರಾಟದ ಸಭೆಗಳು ಜರುಗಿದ ಸಂದರ್ಭದಲ್ಲಿ ಅವರು ಮರಾಠಿಯಲ್ಲಿಯೇ ಭಾಷಣ ಮಾಡುತ್ತಿದ್ದರು. ಈ ಸಂದರ್ಭದಲ್ಲಿ ಲೋಕಮಾನ್ಯ ಟಿಳಕರು ಗಂಗಾಧರರಾಯರಿಗೆ "ಈ ಪ್ರದೇಶದಲ್ಲಿ ಕನ್ನಡಿಗರು ಹೆಚ್ಚಿದ್ದಾರೆ. ಇಲ್ಲಿಯ ಭಾಷೆ ಕನ್ನಡವಾಗಿರುವುದರಿಂದ ನಿಮ್ಮ ಭಾಷಣಗಳೆಲ್ಲಾ

ಕನ್ನಡದಲ್ಲಿಯೇ ಇರಬೇಕು" ಎಂದು ಸಲಹೆ ನೀಡಿದರು.[೨೯] ಹೀಗಾಗಿ ಅನಿವಾರ್ಯವಾಗಿ ಅವರು ಕನ್ನಡದಲ್ಲಿ ಭಾಷಣಗಳನ್ನು ಮಾಡುತ್ತಿದ್ದರು. ಆದರೆ ಇನ್ನೂಳಿದ ವ್ಯವಹಾರವೆಲ್ಲವೂ ಮರಾಠಿಯಲ್ಲಿಯೇ ಇತ್ತು. ಮುಂದೆ ಏಕೀಕರಣದ ಚಳುವಳಿಗೂ ಗಂಗಾಧರರಾಯರು ತಮ್ಮ ವಿಷಾದವನ್ನು ವ್ಯಕ್ತಪಡಿಸಿದ್ದರು. ಈ ಸಂದರ್ಭದಲ್ಲಿ ಕನ್ನಡ ಹೋರಾಟಗಾರರು ಅವರ ಮನವನ್ನು ಪರಿವರ್ತಿಸಿದರು. ಗಂಗಾಧರರಾಯರಿಗೆ ಕನ್ನಡ ವಿರೋಧ ಭಾವನೆಯೇನು ಇರಲಿಲ್ಲ. ಅಪ್ಪಟ ದೇಶಾಭಿಮಾನಿಯಾದ ಅವರ ನಿಲುವು ಬೇರೆಯಾಗಿತ್ತು. ಕನ್ನಡ ಕರ್ನಾಟಕವೆಂದು ಹೋರಾಟ ಮಾಡಿದರೆ ಸ್ವಾತಂತ್ರ್ಯ ಹೋರಾಟಕ್ಕೆ ಎಲ್ಲಿಯಾದರೂ ದಕ್ಕೆ ಬರಹುದೆನ್ನುವ ಅಳುಕು ಅವರಲ್ಲಿ ಕಂಡುಬರುತ್ತಿತ್ತು. ಬೆಳಗಾವಿಯಲ್ಲಿಯ ಸ್ವಾತಂತ್ರ್ಯ ಹೋರಾಟದಲ್ಲಿ ಮರಾಠಿಗರೂ ಮಂಚೂಣಿಯಲ್ಲಿದ್ದರು. ಅಲ್ಲದೆ ಗಂಗಾಧರರಾಯರ ಒಡನಾಟ ಹೆಚ್ಚಿಗೆ ಮರಾಠಿ ಜನರೊಡನೆ ಮತ್ತು ಮಹಾರಾಷ್ಟ್ರದ ಜೊತೆಗೆ ಇತ್ತು. ಹೀಗಾಗಿ ವಿನಾಕಾರಣವಾಗಿ ದೇಶದ ಸ್ವಾತಂತ್ರ್ಯ ಹೋರಾಟದ ಸಂಘಟನೆಯಲ್ಲಿ ಭೇದ ಮೂಡದ ಹಾಗೆ ಎಚ್ಚರಿಕೆಯ ನಡೆ ಗಂಗಾಧರರಾಯರದಾಗಿತ್ತು. ಈ ಎಲ್ಲ ಕಾರಣಗಳ ಹಿನ್ನೆಲೆಯಲ್ಲಿ ಬೆಳಗಾವಿಯಲ್ಲಿ ಕನ್ನಡ ಭಾಷೆ, ಸಂಸ್ಕೃತಿ ಹಿನ್ನಡೆಯನ್ನು ಹೊಂದಲು ಕಾರಣವಾಯಿತು.

**ಏಕೀಕರಣ ಹೋರಾಟಕ್ಕೆ ಪ್ರೇರಣೆ:** ಬ್ರಿಟಿಷರು ತಮ್ಮ ಆಡಳಿತದ ಅನುಕೂಲಕ್ಕಾಗಿ ತಮಗೆ ಹೇಗೆ ಬೇಕೊ ಹಾಗೆ ಒಡೆದು ಪ್ರಾಂತ್ಯಗಳನ್ನು ಮಾಡಿಕೊಂಡು ಆಳ್ವಿಕೆ ನಡೆಸತೊಡಗಿದರು. ಕ್ರಿ. ಶ. ೧೮೭೪ರಲ್ಲಿ ಬಂಗಾಲ ಪ್ರಾಂತ್ಯದಿಂದ ಸಿಲ್ಹೆಟ್ ಜಿಲ್ಲೆಯು ಬೇರ್ಪಟ್ಟಿದ್ದರಿಂದ ಅಲ್ಲಿಯ ಜನತೆ ಆ ವಿಭಜನೆಯನ್ನು ಒಪ್ಪಿಕೊಳ್ಳದೆ ಪ್ರತಿಭಟಿಸಿದರು. ಹರಿದು ಹಂಚಿ ಹೋದ ಒರಿಯಾ ಭಾಷಿಕ ಪ್ರದೇಶಗಳನ್ನು ಒಂದು ಮಾಡಬೇಕೆಂಬ ಮನವಿಯು ೧೮೭೬ರಲ್ಲಿ ಸಲ್ಲಿಸಲ್ಪಟ್ಟಿತು. ಈ ಮನವಿಯನ್ನು ಮಾನ್ಯ ಮಾಡುವ ಆಲೋಚನೆಯೂ ಕೆಲವು ಬ್ರಿಟಿಷ್ ಅಧಿಕಾರಿಗಳಲ್ಲಿತ್ತು. ಒರಿಸ್ಸಾದಲ್ಲಿ ಚಳುವಳಿ ಪ್ರಾರಂಭವಾಗಿ ಅದು ಪ್ರಮುಖವಾಗುತ್ತಲೇ ಬಿಹಾರಿಗಳು ಪ್ರತ್ಯೇಕ ಪ್ರಾಂತಕ್ಕೆ ಸೇರಿದ್ದ ಒರಿಯಾ, ಬಿಹಾರಿಗಳು ಪ್ರತ್ಯೇಕ ರಾಜ್ಯಕ್ಕಾಗಿ ಮನವಿ ಮಾಡಿದರು. ಹಿಂದಿಭಾಷೆಯನ್ನು ಮಾತನಾಡುವ ಬಂಗಾಲದ ಪ್ರದೇಶವನ್ನು ಒಂದೇ ಆಡಳಿತದಲ್ಲಿ ತರಬೇಕೆನ್ನುವ ಉದ್ದೇಶದಿಂದ ೧೬೦೩ರಲ್ಲಿ 'ಸಂಯುಕ್ತ ಉತ್ಕಲ ಪರಿಷತ್ತು' ಜನಿಸಿತು. ೧೯೦೫ರಲ್ಲಿ ವಂಗ-ಭಂಗ ಚಳುವಳಿ ವಿರಾಟರೂಪವಾಗಿ ಕಾಣಿಸಿಕೊಂಡಿತು. ಆಗಿನ ವೈಸರಾಯ್ ಲಾರ್ಡ ಕರ್ಸನ್‌ರವರು ಬಂಗಾಳವನ್ನು ಎರಡು ಭಾಗ ಮಾಡಿದಾಗ ಸ್ವಾಭಿಮಾನಿಗಳಾದ ಆ ಜನರು ಭಯಂಕರ ಚಳವಳಿಯನ್ನು ನಡೆಸಿ ಬಂಗಾಳವನ್ನು ಒಂದುಗೂಡಿಸಿದರು. ಇದರ ಪರಿಣಾಮ ಹರಿದು ಹಂಚಿಹೋಗಿದ್ದ ಕನ್ನಡನಾಡಿನ ಮೇಲೆಯೂ ಉಂಟಾಯಿತು. ತಮ್ಮದೇ ಆದ ಒಂದು ರಾಜ್ಯವನ್ನು, ಕನ್ನಡವೇ ಪ್ರಧಾನವಾದ ಕರ್ನಾಟಕ ರಾಜ್ಯವನ್ನು ತಾವು ನಿರ್ಮಿಸಿಕೊಳ್ಳಬೇಕೆಂದು ತೀರ್ಮಾನಿಸಿದರು

ಕರ್ನಾಟಕದ ಏಕೀಕರಣ ಚಳುವಳಿಯ ಬೀಜಾಂಕುರವಾದುದು ಉತ್ತರ ಕರ್ನಾಟಕದ ಮುಂಬಯಿ ಪ್ರಾಂತ್ಯದ ಧಾರವಾಡ, ಬೆಳಗಾವಿ, ವಿಜಾಪುರ ಮತ್ತು ಕಾರವಾರ ಜಿಲ್ಲೆಯಲ್ಲಿಯ ಕನ್ನಡದ ಹಿನಾಯ ಸ್ಥಿತಿಯಿಂದ. ಒಂದುವೇಳೆ ಇಲ್ಲಿ ಕನ್ನಡವು ಪ್ರಾಧಾನ್ಯವಾಗಿದ್ದರೆ ಏಕೀಕರಣ ಹೋರಾಟದ ಅವಶ್ಯಕತೆಯಿರಲಿಲ್ಲವೆನ್ನಬಹುದು. ಈ ಭಾಗದಲ್ಲಿ ಕನ್ನಡದ ದುಃಸ್ಥಿತಿಯನ್ನು ಕಂಡ ಡೆಪ್ಯುಟಿ ಚೆನ್ನಬಸಪ್ಪನವರು ಕರ್ನಾಟಕ ಏಕೀಕರಣದ ಅವಶ್ಯಕತೆಯನ್ನು ಕುರಿತು ೧೮೫೬ರಲ್ಲಿ ಧಾರವಾಡದಲ್ಲಿ ಮಾಡಿದ ಒಂದು ಘೋಷಣೆಯಿಂದ ಏಕೀಕರಣ ಹೋರಾಟ ಆರಂಭವಾಯಿತು.[೩೦] ಮುಂದೆ ಹಲವಾರು ಸಂಘ-ಸಂಸ್ಥೆಗಳು ಸ್ಥಾಪಿನೆಗೊಂಡು ಏಕೀಕರಣ ಹೋರಾಟವನ್ನು ರಚನಾತ್ಮಕವಾಗಿ ಮುಂದುವರೆಸಿದವು. ಇವುಗಳ ಪ್ರಭಾವ, ಪ್ರೇರಣೆಯಲ್ಲಿ ಬೆಳಗಾವಿಯ ಹೋರಾಟಗಾರರು ಬೆಳಗಾವಿಯನ್ನು ಮುಖ್ಯ ನೆಲೆಯಾಗಿರಿಸಿಕೊಂಡು ಚಳುವಳಿಯನ್ನು ತೀವ್ರಗೊಳಿಸಿದರು.

**ಕರ್ನಾಟಕ ವಿದ್ಯಾವರ್ಧಕ ಸಂಘ:** ದಿನಾಂಕ: ೨೦-೦೭-೧೮೯೦ ರಂದು ರಾ. ಹ. ದೇಶಪಾಂಡೆಯವರಿಂದ ಧಾರವಾಡದಲ್ಲಿ ಸ್ಥಾಪನೆಗೊಂಡ ಕರ್ನಾಟಕ ವಿದ್ಯಾವರ್ಧಕ ಸಂಘವು ಉತ್ತರ ಕರ್ನಾಟಕದ ಭಾಗದ ಕನ್ನಡಿಗರಿಗೆ ತಮ್ಮ ಭಾವನೆಗಳನ್ನು ವಿಚಾರಗಳನ್ನು ಅಭಿವ್ಯಕ್ತಿಸುವ ವೇದಿಕೆಯಾಯಿತು. ರಾ.ಹ. ದೇಶಪಾಂಡೆಯವರು ೧೮೮೫ರಲ್ಲಿ ಬೆಳಗಾವಿಯ ಸರದಾರ ಹಾಯಸ್ಕೂಲನ ಪ್ರಥಮ ಉಪಶಿಕ್ಷಕರಾಗಿ[೩೧] ಸೇವೆಯನ್ನು ಪ್ರಾರಂಭಿಸಿದರು.ಈ ಸಂದರ್ಭದಲ್ಲಿ ಬೆಳಗಾವಿಯಲ್ಲಿಯ ದುಃಸ್ಥಿತಿಯನ್ನು ಕನ್ನಡಿಗರ ಮೇಲೆ ಮರಾಠಿಗರ ದಬ್ಬಾಳಿಕೆಯನ್ನು ಕಣ್ಣಾರೆ ಕಂಡರು. ಶಾಲೆಗಳ ಸಮಾರಂಭಗಳ ಕಲಾಪಗಳೆಲ್ಲವೂ ಮರಾಠಿಯಲ್ಲೆ ನಡೆಯುತ್ತಿದ್ದು, ಕನ್ನಡಕ್ಕೆ ಸ್ಥಾನವೇ ಇರಲಿಲ್ಲ. ಇದನ್ನು ಕಂಡು ಹೇಗಾದರೂ ಕನ್ನಡವನ್ನು ಈ ದುಃಸ್ಥಿತಿಯಿಂದ ಪಾರುಮಾಡಲು ನಿರ್ಧರಿಸಿದರು.[೩೨] ಇದರ ಫಲವೇ ಕರ್ನಾಟಕ ವಿದ್ಯಾವರ್ಧಕ ಸಂಘದ ಸ್ಥಾಪನೆ. ಈ ಸಂಸ್ಥೆಯ ಮೂಲಕ ಶಿಕ್ಷಣ ಪ್ರಸಾರ, ಗ್ರಂಥಗಳ ಪ್ರಕಟಣೆ ಪಠ್ಯಪುಸ್ತಕಗಳ ರಚನೆ, ಪತ್ರಿಕೋದ್ಯಮ, ಹೀಗೆ ಹಲವಾರು ಧ್ಯೇಯೋದ್ದೇಶಗಳನ್ನು ಹೊಂದಿ ಅವುಗಳನ್ನು ಕಾರ್ಯರೂಪಕ್ಕೆ ತರಲಾಯಿತು. ನೂರಾರು ಗ್ರಂಥಗಳು ಪ್ರಕಟಣೆಗೊಂಡವು. 'ವಾಗ್ಭೂಷಣ' ಎಂಬ ಮಾಸಪತ್ರಿಕೆ ಪ್ರಾರಂಭವಾಗಿ ಕನ್ನಡ ಭಾಷೆ, ಸಾಹಿತ್ಯ, ಶಿಕ್ಷಣದ ಪ್ರಸಾರವನ್ನು ಕೈಗೊಂಡಿತು. ಕನ್ನಡ ಗ್ರಂಥಗಳ ಭಾಷೆಯು ಏಕರೂಪವಾಗಿರಬೇಕೆಂದು ನಿರ್ಧರಿಸಿ ೧೯೦೭ರಲ್ಲಿ ಧಾರವಾಡದಲ್ಲಿ ಅಖಿಲ ಕರ್ನಾಟಕ ಗ್ರಂಥಕರ್ತರ ಸಮ್ಮೇಳನವನ್ನು ನಡೆಸಿ, 'ಕರ್ನಾಟಕ ಪುಸ್ತಕ ಮಾಲೆ' ಪ್ರಕಾಶನದ ಅಡಿಯಲ್ಲಿ ಗ್ರಂಥಗಳನ್ನು ಪ್ರಕಟಿಸುವ ನಿರ್ಣಯ ಕೈಗೊಳ್ಳಲಾಯಿತು. ಇದರಿಂದ ಧಾರವಾಡ, ಬೆಳಗಾವಿಯ ನೂರಾರು ಬರಹಗಾರರು, ಚಿಂತಕರು, ಹೋರಾಟಗಾರರು ಬೆಳಕಿಗೆ ಬಂದರು. ಮಾತೃಭಾಷೆ ಕನ್ನಡವನ್ನು ಮರೆತು ಮರಾಠಿಗೆ ದಾಸನಾದ ಕನ್ನಡಿಗನನ್ನು ವಿದ್ಯಾವರ್ಧಕ ಸಂಘವು ಎಚ್ಚರಿಸಿ ಅವನನ್ನು ಮರಳಿ ಕನ್ನಡಕ್ಕೆ ಕರೆತಂದಿತು. ಈ ಸಂಘವು ಪ್ರಬಲವಾಗಿ ಬೆಳೆಯುತ್ತ, ತನ್ನ ಉದ್ದೇಶಿತ ಕನ್ನಡನುಡಿಯ ಸೇವೆ ಮಾಡುತ್ತಲೇ ಕರ್ನಾಟಕ ಏಕೀಕರಣದ ಬಗೆಗೂ ಗಮನ ಹರಿಸಿತು. ಕನ್ನಡ ಮಾತನಾಡುವ ಪ್ರದೇಶಗಳನ್ನೆಲ್ಲ ಒಟ್ಟಿಗೆ ಸೇರಿಸಿ ಕರ್ನಾಟಕ ಇಲಾಖೆ ಅಥವಾ ಪ್ರಾಂತವೆಂಬ ರಾಜಕೀಯ ವಿಭಾಗವನ್ನು ಮಾಡಬೇಕೆಂಬ

ಗೊತ್ತುವಳಿಯನ್ನು ೧೯೧೭ರಲ್ಲಿ ಸಂಘವು ಸ್ವೀಕರಿಸಿತು. ಕರ್ನಾಟಕ ಪ್ರಾಂತೀಕರಣದ ಬಗೆಗೆ ಒಂದು ಸಂಸ್ಥೆ ರಾಜ್ಯದಲ್ಲಿ ಮೊಟ್ಟಮೊದಲ ಬಾರಿಗೆ ತನ್ನ ಗೊತ್ತುವಳಿಯನ್ನು ಸ್ವೀಕರಿಸಿದ್ದು ಅದರ ಕನ್ನಡ ಅಭಿಮಾನ ಮತ್ತು ಸಂಸ್ಕೃತಿ ಪ್ರೀತಿಯನ್ನು ಖಚಿತಪಡಿಸುತ್ತದೆ. ಇದಕ್ಕಿಂತಲೂ ಪೂರ್ವದಲ್ಲಿ ೧೯೦೩ರಲ್ಲಿ ಆಲೂರು ವೆಂಕಟರಾಯರು ವಿದ್ಯಾವರ್ಧಕ ಸಂಘದ ಒಂದು ಸಭೆಯ ಅಧ್ಯಕ್ಷತೆಯನ್ನು ವಹಿಸಿ ಮಾತನಾಡುತ್ತ ಮದರಾಸು ಹಾಗೂ ಉತ್ತರ ಕರ್ನಾಟಕದ ಕನ್ನಡಿಗರನ್ನು ಏಕೀಕರಣಗೊಳಿಸುವ ಬಗ್ಗೆ ಪ್ರಸ್ತಾಪ ಮಾಡಿದ್ದರು.[೩೩] 'ವಾಗ್ಭೂಷಣ' ಪತ್ರಿಕೆಯ ಮೂಲಕವೂ ಕರ್ನಾಟಕ ಪ್ರಾಂತೀಕರಣದ ಕಲ್ಪನೆಯನ್ನು ೧೯೦೭ರ ಫೆಬ್ರುವರಿ ಸಂಚಿಕೆಯಲ್ಲಿ ಆಲೂರ ವೆಂಕಟರಾಯರು ಪ್ರಕಟಿಸಿದ್ದರು. ರಾ.ಹ. ದೇಶಪಾಂಡೆಯವರು ಧಾರವಾಡದಿಂದ ವರ್ಗವಾಗಿ ಹೋದ ಬಳಿಕ ಸಂಘದ ನೇತೃತ್ವವನ್ನು ಆಲೂರ ವೆಂಕಟರಾಯರು ವಹಿಸಿಕೊಂಡರು. ನಾಡಿನಾದ್ಯಂತ ಏಕೀಕರಣದ ಜಾಗ್ರತಿಯನ್ನುಂಟುಮಾಡಿದರು. ಕರ್ನಾಟಕ ವಿದ್ಯಾವರ್ಧಕ ಸಂಘದ ಕಾರ್ಯ ಚಟುವಟಿಕೆಗಳಿಂದ ನಾಡಿನಾದ್ಯಂತ ವ್ಯಾಪಕವಾದ ಬೆಂಬಲ ದೊರೆಯಿತು. ರಾ. ಹ. ದೇಶಪಾಂಡೆ, ಆಲೂರ ವೆಂಕಟರಾಯರು, ಶ್ಯಾಮರಾವ ಕೈಕಿಣಿ, ವೆಂಕಟ ರಂಗೋ ಕಟ್ಟಿ, ಗುರುಸಿದ್ಧಪ್ಪ ಗಿಲಗಂಚಿ, ಶ್ರೀನಿವಾಸರಾವ್ ವಕೀಲ, ಗಂಗಾಧರ ಮಡಿವಾಳೇಶ್ವರ ತುರಮರಿ, ವಿರೂಪಾಕ್ಷಪ್ಪ ಹೂಲಿ, ಶಿವನಪ್ಪ ದೇಸಾಯಿ ಮುಂತಾದವರು ಸಂಘದ ಜೊತೆಗೆ ತಮ್ಮ ಸೇವೆಯನ್ನು ಸಲ್ಲಿಸಿದರು. ಮೈಸೂರು ಸರಕಾರ, ಮುಂಬಯಿ ಸರಕಾರ, ಹುಬ್ಬಳ್ಳಿ ಮತ್ತು ಧಾರವಾಡ ಮತ್ತಿತರ ನಗರಗಳ ಪುರಸಭೆಗಳು ಸಂಘಕ್ಕೆ ಆರ್ಥಿಕ ನೆರವು ನೀಡಿದವು.

ಬೆಳಗಾವಿಯಲ್ಲಿ ವಿದ್ಯಾವರ್ಧಕ ಸಂಘದ ಒಂದು ಶಾಖೆಯನ್ನು ಪ್ರಾರಂಭಿಸಲು ಆಲೋಚನೆ ನಡೆಯಿತು.[೩೪] ಕನ್ನಡ ವಿಜಾಪುರ ಮತ್ತು ಕಾರವಾರಗಳಲ್ಲಿ ಒಂದೊಂದು ಶಾಖೆಯನ್ನು ಪ್ರಾರಂಭಿಸಲಾಗಿತ್ತು. ಆದರೆ ಬೆಳಗಾವಿಯಲ್ಲಿ ಶಾಖೆಯನ್ನು ತೆರೆಯುವ ಆಲೋಚನೆಯಲ್ಲಿರುವಾಗಲೇ ಸಂಘವು ಬೆಳಗಾವಿ ಭಾಗದಲ್ಲಿ ಮಹತ್ವದ ಬದಲಾವಣೆಗಳನ್ನು ಉಂಟುಮಾಡಿತ್ತು. ಹೀಗಾಗಿ ಪ್ರಚಾರದ ಅಗತ್ಯವಿಲ್ಲವೆಂದು ಅರಿತು ಅದನ್ನು ಕೈಬಿಡಲಾಯಿತು.

**ಕನ್ನಡ ಸಾಹಿತ್ಯ ಪರಿಷತ್ತು:** ೧೯೧೫ರಲ್ಲಿ ಬೆಂಗಳೂರಿನಲ್ಲಿ ಕರ್ನಾಟಕದ ಎಲ್ಲಾ ಕನ್ನಡಾಭಿಮಾನಿಗಳ ಸಂಕಲ್ಪದಿಂದ ಕರ್ನಾಟಕ ಸಾಹಿತ್ಯ ಪರಿಷತ್ತು ಸ್ಥಾಪನೆಗೊಂಡಿತು. ಇದು ಎಲ್ಲಾ ಪ್ರಾಂತ್ಯಗಳನ್ನು ಒಳಗೊಂಡು ಇಡೀ ಕರ್ನಾಟಕ ವ್ಯಾಪ್ತಿಯನ್ನು ಪಡೆದುಕೊಂಡಿತು. ಇದು ಕರ್ನಾಟಕದ ಭಾಷಾ ಪರಿಷ್ಕರಣ, ಭಾಷೋನ್ನತಿ, ಗ್ರಂಥಾಭಿವೃದ್ಧಿಗಳನ್ನು ಮುಖ್ಯ ಉದ್ದೇಶವಾಗಿಟ್ಟುಕೊಂಡು ಸ್ಥಾಪನೆಗೊಂಡಿತು. ಇವುಗಳ ಜೊತೆಗೆ ಕರ್ನಾಟಕ ಏಕೀಕರಣ ವಿಷಯದಲ್ಲಿಯೂ ಆಸಕ್ತಿವಹಿಸಿತು.. ಮುಂದೆ ಕನ್ನಡ ಸಾಹಿತ್ಯ ಪರಿಷತ್ತು ಎಂಬ ಹೆಸರನ್ನು ಬದಲಾಯಿಸಿಕೊಂಡಿತು.

**ಕರ್ನಾಟಕ ಸಭೆ:** ಕರ್ನಾಟಕದ ಸರ್ವಾಂಗೀಣ ಅಭಿವೃದ್ಧಿಯನ್ನು ಉದ್ದೇಶವಾಗಿಟ್ಟುಕೊಂಡು ೧೯೧೬ರಲ್ಲಿ ಆಲೂರು ವೆಂಕಟರಾಯರು, ಕಡಪಾ ರಾಘವೇಂದ್ರರಾಯರು ಮುಂತಾದವರು ಸೇರಿ ಕರ್ನಾಟಕ ಸಭೆಯನ್ನು

ಸ್ಥಾಪಿಸಿದರು. ಉತ್ತರ ಕರ್ನಾಟಕದಲ್ಲಿ ತೀವ್ರವಾಗಿ ನಡೆದ ಸ್ವಾತಂತ್ರ್ಯ ಆಂದೋಲನದಿಂದ ಜನರು ಸಂಘಟನೆಗೊಳ್ಳತೊಡಗಿದ್ದರು. ಕರ್ನಾಟಕವು ರಾಜಕೀಯವಾಗಿ ಸಂಘಟಿತವಾಗಬೇಕೆಂಬ ಧ್ಯೇಯದೊಂದಿಗೆ ಕರ್ನಾಟಕ ಸಭೆಯು ಕಾರ್ಯಪ್ರವರ್ತವಾಯಿತು. ಕಡಪಾ ರಾಘವೇಂದ್ರರಾಯರು ಕರ್ನಾಟಕ ಸಭಾದ ಮೂಲಕ ಪ್ರಕಟಿಸಿದ 'ಕನ್ನಡಿಗರ ಕರ್ತವ್ಯ'ವೆಂಬ ಕಿರುಹೊತ್ತಿಗೆಯು ಆ ನಿಟ್ಟಿನಲ್ಲಿ ಕನ್ನಡಿಗರ ಮನವೊಲಿಸಿ ಒಂದಾಗಬೇಕೆಂಬ ಪ್ರೇರಣೆ ನೀಡಲು ಸಹಾಯಕಾರಿಯಾಯಿತು. ಅಲ್ಲದೆ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ ಸಮಿತಿಯಲ್ಲಿ ಪ್ರಾತಿನಿಧ್ಯವೇ ಇಲ್ಲದಿರುವುದನ್ನು 'ಕನ್ನಡಿಗರಿಗೆ ಕರ್ತವ್ಯ' ಕೃತಿಯಲ್ಲಿ ಸೂಚ್ಯವಾಗಿ ತಿಳಿಸಿದರು. ಕರ್ನಾಟಕ ಸಭೆಯ ಆಧಾರಸ್ತಂಭರಾಗಿ ಹೊನ್ನಾಪುರಮಠ ಗದಿಗಯ್ಯ, ನರಗುಂದಕರರು, ರಾಜಪುರೋಹಿತರು, ಮುದವೇಡಕರ ವೆಂಕಟರಾಯರು ಮುದವೇಡಕರ ಕೃಷ್ಣರಾಯರು, ಸಂಗವ್ವ ಪಾಟೀಲ ಮುಂತಾದ ಪ್ರಮುಖ ಕಾರ್ಯಕರ್ತರು ದುಡಿದರು.

ಕರ್ನಾಟಕದ ಏಕೀಕರಣ ಚಳುವಳಿಯಲ್ಲಿ ಕರ್ನಾಟಕ ಸಭೆಯಿಂದಾದ ಎರಡು ಮಹತ್ವದ ಕಾರ್ಯಗಳೆಂದರೆ: ೧. ಹೋಂ ರೂಲ್ ಲೀಗ್ ಕರ್ನಾಟಕ ಶಾಖೆಯ ಪ್ರಾರಂಭ. ೨. ಅಖಿಲ ಭಾರತ ಕಾಂಗ್ರೆಸ್ ಕಮೀಟಿಯ ಕರ್ನಾಟಕ ಶಾಖೆಯ ಪ್ರಾರಂಭ. ಈ ಎರಡು ಮಹತ್ವದ ಕಾರ್ಯಗಳು ನಡೆದು ಕರ್ನಾಟಕ ಏಕೀಕರಣಗೊಳ್ಳುವ ಮೊದಲ ಹೆಜ್ಜೆಗಳನ್ನಿಟ್ಟಿತು. ಈ ಎರಡು ಮಹಾಶಾಖೆಗಳು ಕರ್ನಾಟಕದಲ್ಲಿ ಪ್ರಾರಂಭವಾಗುವುದರ ಹಿಂದೆ ಕರ್ನಾಟಕ ಸಭೆಯ ಪಾತ್ರ ಪ್ರಮುಖವಾಗಿದೆ. ಬೇರೆ ಬೇರೆ ಪ್ರಾಂತ್ಯಗಳಲ್ಲಿ ಹಂಚಿಹೋಗಿದ್ದ ಕರ್ನಾಟಕಕ್ಕೆ ಮೊಟ್ಟಮೊದಲ ಬಾರಿಗೆ ಪ್ರತ್ಯೇಕವಾದ ಸ್ವತಂತ್ರ ಶಾಖೆ ಪ್ರಾರಂಭವಾಗಿ 'ಕರ್ನಾಟಕ' ಎಂಬುದು ರಾಜಕೀಯಪ್ರಜ್ಞೆಯಾಗಿ ರೂಪುಗೊಂಡಿತು.

**ಹೊಂ ರೂಲ್ ಲೀಗ್ ಕರ್ನಾಟಕ ಶಾಖೆ ಪ್ರಾರಂಭ:** ಆ್ಯನಿ ಬೆಸೆಂಟ್ 'ಹೊಂ ರೂಲ್' ಚಳುವಳಿಯನ್ನು ಪ್ರಾರಂಭಿಸಿ ಅದನ್ನು ಭಾರತದ ಮೂಲೆ ಮೂಲೆಯಲ್ಲಿ ಪ್ರಸಾರ ಮಾಡಿದರು. ಆದರೆ, ಅದರಿಂದ ಸಂತುಷ್ಟರಾಗದ ಲೋಕಮಾನ್ಯ ಟಿಳಕರು ೧೯೧೬ರಲ್ಲಿ ಮದರಾಸಿನಲ್ಲಿ ಹೊಸ ಹೊಂ ರೂಲ್ ಲೀಗನ್ನು ಸ್ಥಾಪಿಸಿದರು. ಈ ಸಂದರ್ಭದಲ್ಲಿ ಕರ್ನಾಟಕದ ಸಭೆಯ ಮುಖಂಡರು ಕರ್ನಾಟಕದಲ್ಲಿ ಕನ್ನಡ ಭಾಷೆಯನ್ನಾಡುವ ಪ್ರದೇಶದಲ್ಲಿ ಕರ್ನಾಟಕಕ್ಕೆ ಪ್ರತ್ಯೇಕ ಶಾಖೆಯನ್ನು ನೀಡಬೇಕೆಂದು ಮನವಿ ಮಾಡಿಕೊಂಡರು. ಇದರಿಂದ ೧೯೧೬ರಲ್ಲಿ ಬೆಳಗಾವಿಯನ್ನು ಕೇಂದ್ರವಾಗಿಟ್ಟುಕೊಂಡು ಪ್ರತ್ಯೇಕ ಕರ್ನಾಟಕ ಪ್ರದೇಶವನ್ನು ಗುರುತಿಸಿಕೊಂಡು ಹೊಂ ರೂಲ್ ಲೀಗ್ ಶಾಖೆಯನ್ನು ಬೆಳಗಾವಿಯಲ್ಲಿ ಸ್ಥಾಪಿಸಲಾಯಿತು.[೨೫] ಈ ಮಹತ್ವದ ಬೆಳವಣಿಗೆಯಿಂದ ಕರ್ನಾಟಕದ ಎರಡು ವರ್ಗದ ಜನರಿಗೆ ಅನುಕೂಲವಾಯಿತು. ಒಂದು ಕೇವಲ ದೇಶದ ಸ್ವಾತಂತ್ರ್ಯವನ್ನು ಮುಖ್ಯ ಧ್ಯೇಯವಾಗಿಟ್ಟುಕೊಂಡು ಹೋರಾಟ ಮಾಡುವ ಸ್ವಾತಂತ್ರ್ಯ ಹೋರಾಟಗಾರರಿಗೆ ಗಟ್ಟಿಯಾದ ನೆಲೆ ಒದಗಿತು. ಎರಡನೆಯ ವರ್ಗವೆಂದರೆ ದೇಶದ ಸ್ವಾತಂತ್ರ್ಯದ ಜೊತೆಗೆ ನಾಡಿನ ಏಕೀಕರಣದ ಆಶಯವನ್ನು ಹೊಂದಿದ ಕನ್ನಡಾಭಿಮಾನಿಗಳಿಗೆ ಒಂದು ರೀತಿಯ ಸಂತೋಷವಾಯಿತು. 'ಕರ್ನಾಟಕವೆಂಬು ಪ್ರತ್ಯೇಕವಾಗಿ ಮೊಟ್ಟಮೊದಲ ಬಾರಿಗೆ ರಾಷ್ಟ್ರಮಟ್ಟದಲ್ಲಿ ಗುರುತಿಸಿಕೊಂಡಿತು.

ದೇಶದ ಸ್ವಾತಂತ್ರ್ಯ ಹೋರಾಟದ ಜೊತೆ ಜೊತೆಯಲ್ಲಿಯೇ ಸಾಗಿದ ನಾಡಿನ ಏಕೀಕರಣ ಚಳುವಳಿಯು ಬೆಳಗಾವಿಯಲ್ಲಿ ವಿಶಿಷ್ಟವಾಗಿ ನಡೆಯಿತು. ಒಂದೇ ಮುಖಂಡರು ಎರಡು ಹೋರಾಟಗಳಲ್ಲಿ ಭಾಗವಹಿಸುವ ಸಂದರ್ಭದಲ್ಲಿ ಕರ್ನಾಟಕದ ಇತರ ಪ್ರದೇಶಗಳಲ್ಲಿ ಯಾವುದೇ ತೊಂದರೆಗಳು ಕಂಡುಬರಲಿಲ್ಲ. ಆದರೆ ಬೆಳಗಾವಿಯಲ್ಲಿ ಸಾಗಿದ ಸಂದರ್ಭದಲ್ಲಿ ಏಕೀಕರಣ ಚಳುವಳಿಯು ರಾಷ್ಟ್ರದ ಸ್ವಾತಂತ್ರ್ಯ ಹೋರಾಟಕ್ಕೆ ತೊಡಕಾಯಿತು. ಅದು ಹಬ್ಬ, ಉತ್ಸವ, ಆಚರಣೆಗಳಲ್ಲಿಯೂ ಕಂಡುಬರತೊಡಗಿತು.

ರಾಷ್ಟ್ರೀಯ ಸಂಘಟಣೆನೆಗಾಗಿ ಗಣೇಶೋತ್ಸವ, ಶಿವಾಜಿ ಉತ್ಸವಗಳು ಜರುಗಿದರೆ, ನಾಡಿನ ಏಕೀಕರಣಕ್ಕಾಗಿ ನಾಡಹಬ್ಬ, ವಿದ್ಯಾರಣ್ಯ ಉತ್ಸವ, ವಿಜಯನಗರ ಉತ್ಸವ, ಪಂಪ ಉತ್ಸವ, ಬಸವೇಶ್ವರ ಉತ್ಸವ, ಕುಮಾರವ್ಯಾಸ ಉತ್ಸವ, ನಿಜಗುಣ ಶಿವಯೋಗಿ ಉತ್ಸವಗಳು ನಾಡಿನಾದ್ಯಂತ ಜರುಗತೊಡಗಿದವು. ರಾಷ್ಟ್ರೀಯ ವಾದಿಗಳಿಗೆ, ಪ್ರಾಂತ್ಯಾಭಿಮಾನವು ದೇಶಭಿಮಾನಕ್ಕೆ ತೊಡಕು ಮಾಡುತ್ತದೆಂಬ ಮನೋಭಾವಯಿತ್ತೆಂದು ಆಲೂರು ವೆಂಕಟರಾಯರು ತಮ್ಮ ಆತ್ಮಚರಿತ್ರೆಯಲ್ಲಿ ಸ್ಪಷ್ಟಪಡಿಸಿದ್ದಾರೆ.[೨೬]

**ಅಖಿಲ ಭಾರತ ಕಾಂಗ್ರೆಸ್ ಕಮೀಟಿಯ ಕರ್ನಾಟಕ ಶಾಖೆ:** ಕರ್ನಾಟಕ ಸಭೆಯ ಪ್ರಯತ್ನದಿಂದಾದ ಮತ್ತೊಂದು ಮಹತ್ವದ ಕಾರ್ಯವೆಂದರೆ ಕರ್ನಾಟಕಕ್ಕೆ ಪ್ರತ್ಯೇಕವಾದ ಕಾಂಗ್ರೆಸ್ ಶಾಖೆಯನ್ನು ದೊರಕಿಸಿಕೊಟ್ಟದ್ದು ಕರ್ನಾಟಕ ಸಭಾದ ಹಲವು ಮುಂಖಡರು ಸೇರಿ ೧೯೧೮ರಲ್ಲಿ ಅಖಿಲ ಕರ್ನಾಟಕ ರಾಜಕೀಯ ಪರಿಷತ್ತನ್ನು ಸ್ಥಾಪಿಸಿ ಅವರ ಮೂಲಕ ೧೯೨೦ರಲ್ಲಿ ಧಾರವಾಡದಲ್ಲಿ ಪರಿಷತ್ತಿನ ಮೊದಲ ಅಧಿವೇಶನವನ್ನು ನೆರವೇರಿಸಿದರು.[೨೭] ಇದರ ಅಧ್ಯಕ್ಷತೆಯನ್ನು ಮೈಸೂರು ಸಂಸ್ಥಾನದ ನಿವೃತ್ತ ದಿವಾನರಾದ ವಿ.ಪಿ. ಮಾಧವರಾಯರು ವಹಿಸಿಕೊಂಡಿದ್ದರು. ಈ ಅಧಿವೇಶವದಲ್ಲಿ ಭಾರತ ಕಾಂಗ್ರೆಸ್ ಸಂಸ್ಥೆಯು ಕನ್ನಡ ಮಾತನಾಡುವ ಜನರ ಪ್ರದೇಶವನ್ನೆಲ್ಲಾ ಸೇರಿಸಿ ಒಂದು ಸ್ವತಂತ್ರ್ಯ ಪ್ರಾಂತವನ್ನಾಗಿಸಬೇಕೆಂದು ನಿರ್ಣಯವನ್ನು ಕೈಗೊಂಡಿತು. ಅದೇ ವರ್ಷ ನಾಗಪುರದಲ್ಲಿ ಜರುಗಿದ ಅಖಿಲ ಭಾರತ ೩೫ನೆಯ ಕಾಂಗ್ರೆಸ್ ಅಧಿವೇಶನಕ್ಕೆ ಕರ್ನಾಟಕದಿಂದ ಕಡಪಾ ರಾಘವೇಂದ್ರರಾಯ, ಸಕ್ಕರೆ ಬಾಳಾಚಾರ್ಯ (ಶಾಂತಕವಿಗಳು)ಮುಂತಾದವರ ನೇತೃತ್ವದಲ್ಲಿ ಸುಮಾರು ೮೦೦ ಜನ ಪ್ರತಿನಿಧಿಗಳು ಹೋಗಿದ್ದರು. ಅವರೆಲ್ಲರೂ ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿಗಾಗಿ ಒತ್ತಾಯಿಸಿದರು. ಇದರ ಫಲವಾಗಿ ಮುಂಬೈ ಪ್ರಾಂತ್ಯ ಕಾಂಗ್ರೆಸ್ ಸಮಿತಿಯಿಂದ ಪ್ರತ್ಯೇಕಗೊಂಡ ಕರ್ನಾಟಕ ಪ್ರಾಂತ್ಯ ಕಾಂಗ್ರೆಸ್ ಸಮಿತಿಯು ಸ್ಥಾಪನೆಗೊಂಡಿತು.[೨೮] ಹೀಗೆ ರೂಪಿತವಾದ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಸಮಿತಿಯ ಕಾರ್ಯಕ್ಷೇತ್ರದಲ್ಲಿ ಮೈಸೂರು ಸಂಸ್ಥಾನ, ಮುಂಬಯಿ, ಮದರಾಸು, ಹೈದರಾಬಾದಗಳಲ್ಲಿಯ ಕನ್ನಡ ಭಾಷಾಪ್ರದೇಶಗಳು ಹಾಗೂ ಕರ್ನಾಟಕದಲ್ಲಿಯ ಸಂಸ್ಥಾನಗಳು ಸಮಾವೇಶವಾದವು. ಈ ಸಂದರ್ಭದಲ್ಲಿಯೇ ರಾಷ್ಟ್ರೀಯ ಕಾಂಗ್ರೆಸ್ ವಿವಿಧ ೨೧ ಪ್ರಾಂತೀಯ ಘಟಕಗಳನ್ನಾಗಿ ಬೇರೆ ಬೇರೆ ರಾಜ್ಯಗಳಲ್ಲಿ

ಸ್ಥಾಪಿಸಿತು. ಕರ್ನಾಟಕಕ್ಕೆ ಪ್ರತ್ಯೇಕವಾದ ಕಾಂಗ್ರೆಸ್ ಕಮೀಟಿ ಅಸ್ಥಿತ್ವಕ್ಕೆ ಬಂದ ಕೂಡಲೆ ಏಕೀರಕಣ ಹೋರಾಟಕ್ಕೆ ಆನೆಬಲ ಬಂದಂತಾಯಿತು. ಈ ಕಾರ್ಯದ ಯಶಸ್ಸಿನ ಹಿಂದೆ ಕರ್ನಾಟಕ ಸಭಾದ ಪ್ರಯತ್ನ ಮಹತ್ವದ್ದಾಗಿದೆ. ೧೯೨೧ರಿಂದ ಕಾಂಗ್ರೆಸ್ಸಿನ ಆಡಳಿತದಲ್ಲಿ ಕರ್ನಾಟಕಕ್ಕೆ ಸ್ವತಂತ್ರವಾದ ಒಂದು ಪ್ರಾಂತವು ದೊರೆಯಿತು. ಕರ್ನಾಟಕ ಕಾಂಗ್ರೆಸ್ ಕಮಿಟಿಯ ಕೇಂದ್ರಸ್ಥಾನವು ಗದಗಿನಲ್ಲಿ ಸ್ಥಾಪಿತವಾಯಿತು. ಬೆಳಗಾವಿಯ ಗಂಗಾಧರರಾವ ದೇಶಪಾಂಡೆಯವರು ಇದರ ಮೊದಲ ಅಧ್ಯಕ್ಷರಾದರು.

ಕರ್ನಾಟಕ ಪ್ರಾಂತ್ಯಕ್ಕೆ ದೊರೆತ ರಾಜಕೀಯ ಪ್ರತಿನಿಧಿತ್ವದಿಂದಾಗಿ ಹೊಸ ಉತ್ಸಾಹ ಮೂಡಿತು. ಕನ್ನಡಿಗರು ಪರಸ್ಪರ ಒಂದಾಗಿ ಸಭೆ ಸಮಾರಂಭಗಳನ್ನು ಹಮ್ಮಿಕೊಳ್ಳುವ ಸಮ್ಮೇಳನಗಳನ್ನು ನಡೆಸುವ ಸೌಹಾರ್ದದ ವಾತಾವರಣವನ್ನು ಕಲ್ಪಸಿಕೊಂಡರು. ರಾಜಕೀಯ ಮತ್ತು ರಾಕೀಯೇತರ ಸಮ್ಮೇಳನಗಳು ಹೆಚ್ಚು ಹೆಚ್ಚಾಗಿ ನಡೆದವು. ಭಗಿನೀ ಮಂಡಳ ಸಮ್ಮೇಳನ, ಖಾದಿ ಸಮ್ಮೇಳನ, ಪತ್ರಕರ್ತರ ಸಮ್ಮೇಳನ, ಕರ್ನಾಟಕ ಸೇವಾದಳ ಸಮ್ಮೇಳನ, ಕರ್ನಾಟಕ ವ್ಯಾಪಾರಿಗಳ ಸಮ್ಮೇಳನ, ಆಯುರ್ವೇದ ಸಮ್ಮೇಳನ–ಹೀಗೆ ನಡೆದ ಅನೇಕ ಸಮ್ಮೇಳನಗಳು ಕರ್ನಾಟಕದ ಜನತೆಯನ್ನು ಒಂದಲ್ಲ ಒಂದು ಕಡೆ ಸೇರುವಂತೆ ಮಾಡಿ, ತಮ್ಮ ನೋವು–ನಲಿವುಗಳನ್ನು ಹಂಚಿಕೊಳ್ಳುತ್ತ, ರಾಜಕೀಯವಾಗಿ ಮಾತ್ರ ಸಿಂಧುತ್ವ ಪಡೆದಿದ್ದ ಕರ್ನಾಟಕವು ಸಾಂಸ್ಕೃತಿಕವಾಗಿ ಮತ್ತು ಆಡಳಿತಾತ್ಮಕವಾಗಿಯೂ ಒಂದಾಗಲು ಹಂಬಲಿಸುತ್ತಿತ್ತು. ಗಂಗಾಧರರಾವ ದೇಶಪಾಂಡೆ ಅವರು ಕರ್ನಾಟಕವನ್ನು ರಾಜಕೀಯವಾಗಿ ಒಂದುಗೂಡಿಸುವಲ್ಲಿ ಸಫಲರಾದರೆ, ಆಲೂರು ವೆಂಕಟರಾಯರು ಕಡಪಾ ರಾಘವೇಂದ್ರರಾಯರು ಕನ್ನಡಿಗರನ್ನು ಸಾಂಸ್ಕೃತಿಕವಾಗಿ ಒಂದು ಮಾಡುವಲ್ಲಿ ಸಫಲತೆಯನ್ನು ಕಂಡರು. ಈಗಾಗಲೇ ಇದ್ದ ಹೋಮರೂಲ್‌ನ ಕರ್ನಾಟಕ ಶಾಖೆ ಹಾಗೂ ಕರ್ನಾಟಕ ಪ್ರಾದೇಶಿಕ ಕಾಂಗ್ರೆಸ್ ಕಮಿಟಿ ಈ ಎರಡೂ ಸಂಸ್ಥೆಗಳಿಂದ ಬೆಳಗಾವಿ ಜನರಿಗೆ ಹೊಸ ಆಶಾಭಾವನೆ ಮೂಡಿತು. ಕನ್ನಡಿಗರಲ್ಲಿ ನೈತಿಕ ಬಲ ಹೆಚ್ಚಿತು.

**ಬೆಳಗಾವಿ ಕಾಂಗ್ರೆಸ್ ಅಧಿವೇಶನ:** ೧೯೨೪ರಲ್ಲಿ ಭಾರತ ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥೆಯ ಮಹಾ ಅಧಿವೇಶನ ಬೆಳಗಾವಿಯಲ್ಲಿ ನಡೆದಾಗ ಕರ್ನಾಟಕ ಏಕೀಕರಣಕ್ಕೆ ಹೊಸ ಚೈತನ್ಯ ದೊರೆಯಿತು. ಐತಿಹಾಸಿಕ ಮಹತ್ವವನ್ನು ಹೊಂದಿದ ಈ ಅಧಿವೇಶನವು ದೇಶದ ಸ್ವಾತಂತ್ರ್ಯ ಹೋರಾಟ ಮತ್ತು ರಾಜ್ಯದ ಏಕೀಕರಣ ಚಳುವಳಿಗೆ ಭದ್ರವಾದ ಬುನಾದಿಯನ್ನು ಹಾಕಿ

ಬೆಳಗಾವಿಯಲ್ಲಿ ಕಾಂಗ್ರೆಸ್ ಅಧಿವೇಶನ ನಡೆಯುವುದಕ್ಕೆ ಕರ್ನಾಟಕದ ಸ್ವಾತಂತ್ರ್ಯ ಹೋರಾಟಗಾರರಲ್ಲಿ ವಿರೋಧವಿತ್ತು. ಬೆಳಗಾವಿಯಲ್ಲಿ ಮರಾಠಿಯ ಪ್ರಭಾವವಿರುವುದರಿಂದ ಸಮ್ಮೇಳನವು ಪೂರ್ತಿಯಾಗಿ ಮರಾಠಿಮಯವಾಗುತ್ತದೆ ಎಂದು ಹಲವು ಕನ್ನಡಾಭಿಮಾನಿ ಮುಖಂಡರು ಅಭಿಪ್ರಾಯವ್ಯಕ್ತಪಡಿಸಿದರು. ಈ ಸಂದರ್ಭದಲ್ಲಿ ಗಂಗಾಧರರಾವ ದೇಶಪಾಂಡೆಯವರು ಅಧಿವೇಶವನ್ನು ಕನ್ನಡ ಅಧಿವೇಶನವೆನ್ನುವ ಹಾಗೆ

ಮಾಡುತ್ತೇನೆಂದು ಭರವಸೆಯನ್ನು ನೀಡಿದಾಗ ಅದಕ್ಕೆ ಒಪ್ಪಿಗೆ ದೊರೆಯಿತು. ಈ ರೀತಿಯ ಭಿನ್ನಾಬಿಪ್ರಾಯ ಬರಲು ಕಾರಣ ಬೆಳಗಾವಿಯ ಸ್ವಾತಂತ್ರ್ಯ ಹೋರಾಟಗಾರರಲ್ಲಿ ಹಲವಾರು ಜನರು ಮರಾಠಿಗರಿದ್ದರು. ಅಲ್ಲದೆ ಗಂಗಾಧರರಾವ ದೇಶಪಾಂಡೆ ಅವರು ಮರಾಠಿಯಲ್ಲಿಯೇ ಸಭೆ ಸಮಾರಂಭಗಳಲ್ಲಿ ಭಾಷಣಗಳನ್ನು ಮಾಡುತ್ತಿದ್ದರು. ಇಂತಹ ಸಂದರ್ಭಗಳಲ್ಲಿ ಹಲವಾರು ಬಾರಿ ಕನ್ನಡಿಗರಿಂದ ವಿರೋಧವು ಉಂಟಾಯಿತು. ಹೋರಾಟದ ಪ್ರಾರಂಭದ ದಿನಗಳಲ್ಲಿ ದೇಶಪಾಂಡೆಯವರಲ್ಲಿದ್ದ ಈ ಮರಾಠಿ ಮನೋಭಾವ ಮುಂದೆ ಕಡಿಮೆಯಾಗಿ ಕನ್ನಡ ನಾಡು, ನುಡಿಯಲ್ಲಿ ಆಸಕ್ತಿಯನ್ನು ವಹಿಸುವಂತೆ ಬದಲಾಯಿತು. ಈ ಬದಲಾವಣೆಗೆ ಕಾರಣ ಅಂದಿನ ಕನ್ನಡ ಅಭಿಮಾನವನ್ನು ಹೊಂದಿದ ಮುಖಂಡರು. ಇದರಿಂದ ಬೆಳಗಾವಿಯ ಕಾಂಗ್ರೆಸ್ ಅಧಿವೇಶನ ಕರ್ನಾಟಕದ ಸಂಸ್ಕೃತಿಯನ್ನು ಪ್ರದರ್ಶಿಸುವ ವೇದಿಕೆಯಾಗಿ ರೂಪಗೊಂಡಿತು.

ಈಗಾಗಲೇ ರಚನೆಗೊಂಡಿದ್ದ ಹೋಮ್ ರೂಲ್ ಲೀಗ್‌ನ ಕರ್ನಾಟಕದ ಶಾಖೆ ಹಾಗೂ ಕರ್ನಾಟಕ ಪ್ರದೇಶ ಕಾಂಗ್ರೆಸ್ ಕಮೀಟಿಯ ರಚನೆಯಿಂದ ಕರ್ನಾಟಕ ರಾಜ್ಯದ ಕಲ್ಪನೆ ಮೂಡಿತ್ತು. ಈ ಶಾಖೆಗಳಲ್ಲಿ ಮುಂಬೈ ಪ್ರಾಂತ್ಯದ ನಾಲ್ಕು ಜಿಲ್ಲೆಗಳು ಒಳಗೊಂಡು ಅವು ಕನ್ನಡದ ಪ್ರದೇಶಗಳೆಂದು ನಿರ್ಧರಿಸಲ್ಪಟ್ಟಿತ್ತು. ಬೆಳಗಾವಿಯೂ ಕರ್ನಾಟಕ ಅಬಿಭಾಜ್ಯ ಅಂಗವೆಂದು ಗುರುತಿಸಲ್ಪಟ್ಟಿತ್ತು. ಹೀಗಾಗಿ ಇದನ್ನು ದೃಢಪಡಿಸಲು ಕಾಂಗ್ರೆಸ್ ಅಧಿವೇಶನವು ಉತ್ತಮ ಅವಕಾಶವೊದಗಿಸಿತ್ತು. ಇದನ್ನು ಬಳಸಿಕೊಳ್ಳುವಲ್ಲಿ ಕನ್ನಡಿಗರು ಯಶಸ್ವಿಯಾದರು.

ಬೆಳಗಾವಿಯಲ್ಲಿ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನ ನಡೆದ ಸಂದರ್ಭದಲ್ಲಿ ಕನ್ನಡಿಗರ ಹಂಬಲವನ್ನು ಅಬಿವ್ಯಕ್ತಿಗೊಳಿಸುವಂತಹ, ಕರ್ನಾಟಕದ ಸಾಹಿತ್ಯ ಮತ್ತು ಸಂಸ್ಕೃತಿಗಳ ಬಗೆಗೆ ಪರಿಚಯ ನೀಡಿ ಹೆಮ್ಮೆ ಮತ್ತು ಅಭಿಮಾನ ಮೂಡಿಸುವಂತಹ ಎರಡು ಕೃತಿಗಳು ಪ್ರಕಟಗೊಂಡವು.[೬೯] ಒಂದು ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಪರವಾಗಿ ದ.ಕೃ. ಭಾರದ್ವಾಜರ ಸಂಪಾದಕತ್ವದಲ್ಲಿ ಪ್ರಕಟವಾದ 'ಕರ್ನಾಟಕ ಕೈಪಿಡಿ' ಇನ್ನೊಂದು ಆರ್.ಬಿ. ಕುಲಕರ್ಣಿಯವರು ಪ್ರಟಿಸಿದ 'ಕನ್ನಡಿಗರ ಸರ್ವಸ್ವ ಅಥವಾ ಸಂಯುಕ್ತ ಕರ್ನಾಟಕ ಪ್ರಾಂತ'. ಈ ಎರಡು ಕೃತಿಗಳು ಬೆಳಗಾವಿ ಅಧಿವೇಶವದಲ್ಲಿ ಬಿಡುಗಡೆಗೊಂಡು ಕರ್ನಾಟಕದ ಏಕೀಕರಣ ಚಳುವಳಿಗೆ ಹೊಸರೂಪವನ್ನು ನೀಡಿದವು. ಈಗಾಗಲೇ ಆಲೂರು ವೆಂಕಟರಾಯರ 'ಕರ್ನಾಟಕದ ಗತವೈಭವ' ಹಾಗೂ ಕಡಪಾ ರಾಘವೇಂದ್ರರಯರು ಪ್ರಕಟಿಸಿದ್ದ 'ಕನ್ನಡಿಗರ ಕರ್ತವ್ಯ' ಎಂಬ ಕೃತಿಗಳು ಕನ್ನಡಿಗರನ್ನು ಎಚ್ಚರಿಸಿದ್ದವು.

'ಕರ್ನಾಟಕ ಕೈಪಿಡಿ'ಯ ಸಂಪಾದಕರಾದ ದ.ಕೃ. ಭಾರದ್ವಾಜರು ಸಂಪಾದಕರ ನುಡಿಯಲ್ಲಿ ಕೃತಿಯ ಉದ್ದೇಶವೇನೆಂಬುದನ್ನು ಸ್ಪಷ್ಟವಾಗಿ ಹೇಳಿದ್ದಾರೆ: 'ಹಿಂದೆ ಕರ್ನಾಟಕವು ಭರತ ವರ್ಷದ ಇತಿಹಾಸದಲ್ಲಿ ಎಂತಹ ಸ್ಥಾನವನ್ನು ಹೊಂದಿ ಏನೇನು ಕಾರ್ಯಗಳನ್ನು ಮಾಡಿತು, ಈಗ ಯಾವ ಸ್ಥಿತಿಯಲ್ಲಿದೆ. ಅದರ ಚಳುವಳಿಗಳೇನು ಎಂಬ ವಿಷಯಗಳನ್ನು ತಿಳಿಸುವವುದೇ ನಮ್ಮ ಈ ಪ್ರಯತ್ನದ ಮುಖ್ಯೋದ್ದೇಶ'. ಕರ್ನಾಟಕದ ಭೂವಿವರಣೆ,

ಧಾರ್ಮಿಕ ಚಲನೆಗಳು, ಲಲಿತ ಕಲೆ, ಸಾಹಿತ್ಯ ಮುಂತಾದ ವಿಷಯಗಳನ್ನು ಕುರಿತ ಇಲ್ಲಿಯ ಲೇಖನಗಳು ಮಹತ್ವದ್ದಾಗಿವೆ. ಹೆಚ್ಚೋಲೆ ಎಂಬ ಭಾಗದಲ್ಲಿ ೧೯೦೧ ರಿಂದ ೧೯೨೧ ರ ವರೆಗಿನ ಸುಮಾರು ೨೦ ವರ್ಷಗಳ ಅಂತರದಲ್ಲಿ ಕರ್ನಾಟಕಕ್ಕೆ ಸೇರಿದ ಪ್ರತಿಯೊಂದು ಭಾಗದಲ್ಲೂ ಇದ್ದ ಕನ್ನಡ ಮಾತನಾಡುವವರ ಸಂಖ್ಯೆಯನ್ನು ಒದಗಿಸಲಾಗಿದೆ. ಇವೆಲ್ಲಕ್ಕಿಂತ ಮಿಗಿಲಾಗಿ ಕೃತಿಯ ಪ್ರಾರಂಭದಲ್ಲಯೇ ಇರುವ ಕರ್ನಾಟಕದ ನಕ್ಷೆಯು ಮಹತ್ವದ ಚಾರಿತ್ರಿಕ ದಾಖಲೆಯಾಗಿದೆ. ಅಂದಿನ ಆ ನಕ್ಷಯಲ್ಲಿ ಬೆಳಗಾವಿಯನ್ನು ಒಳಗೊಂಡ ನಕ್ಷೆಯು ಬೆಳಗಾವಿಯ ಕರ್ನಾಟಕದ ನೆಲೆಯೆನ್ನುವುದನ್ನು ಸ್ಪಷ್ಟಪಡಿಸುವುದು.

ಕೃತಿಯ ಬಹುಭಾಗವನ್ನು ತಾತಾಚಾರ್ಯ ಶರ್ಮರು ಬರೆದಿದ್ದು, ಕೆಲವು ಲೇಖನಗಳನ್ನು ಹರಪನಹಳ್ಳಿ ರಾಮರಾವ್, ಅ.ಭ್ರಾ. ರಾಘವೇಂದ್ರರಾವ್ ಕಡಪ, ಸಂಪದ್ಗಿರಿರಾವ್ ಕೋಲಾರ, ಕನ್ನಡವಕ್ಕಿ ಮುಂತಾದ ಲೇಖಕರು ಬರೆದಿದ್ದಾರೆ.

ಅದರಂತೆಯೇ ಆರ್.ಬಿ. ಕುಲಕರ್ಣಿಯವರು ರಚಿಸಿದ ಕೃತಿಗೆ ಪ್ರಸ್ತಾವನೆಯನ್ನು ಬರೆದಿರುವ ಡಾ. ಎಚ್.ವ್ಹಿ. ಸವಣೂರ ಅವರು "ಕರ್ನಾಟಕದ ಏಕೀಕರಣವು ಕನ್ನಡಿಗರಿಗೆ ಅತ್ಯಂತ ಇಷ್ಟವಾದ ವಿಷಯವೆಂಬುದರಲ್ಲಿ ಸಂದೇಶವಿಲ್ಲ. ಇದರ ಹೊರತು ಕರ್ನಾಟಕದ ಅಭ್ಯುದಯಕ್ಕೆ ತರಗೋಪಾಯವೇ ಇಲ್ಲ. ಬೇರೆ ಬೇರೆ ಕಡೆಗೆ ಬಿದ್ದ ಕರ್ನಾಟಕದ ಭಾಗಗಳನ್ನು ಒಂದುಗೂಡಿಸಿ, ಒಂದೇ ಪ್ರಾಂತಿಕ ಸರಕಾರದ ಕೆಳಗೆ ತರುವಂತೆ ಪ್ರಯತ್ನಿಸುವುದೇ ನಾವು ಮಾಡತಕ್ಕ ಕರ್ತವ್ಯಗಳಲ್ಲಿ ಆದ್ಯ ಕರ್ತವ್ಯವಾಗಿದೆ. ಇದಕ್ಕಾಗಿ ಸತತ ಪ್ರಯತ್ನ ಮಾಡಬೇಕಾಗುವುದರಿಂದ 'ಕರ್ನಾಟಕ ಏಕೀಕರಣ ಸಂಘ'ವೇಂಬ ಮದ್ಯವರ್ತಿ ಸಂಘವನ್ನು ಸ್ಥಾಪಿಸಿ, ಇದರ ಶಾಖಾ ಸಂಘಗಳನ್ನು ಜಿಲ್ಲೆ, ತಾಲೂಕು, ದೊಡ್ಡ ಊರುಗಳಲ್ಲಿ ಸ್ಥಾಪಿಸುವುದು ಅವಶ್ಯವಾಗಿದೆ........ರಾಷ್ಟ್ರೀಯ ಸಭೆಯ ಸುಮಂಗಲ ಪ್ರಸಂಗಕ್ಕೆಂದು ಬಂದು ಕೂಡಿದ ಕನ್ನಡಿಗರು ಈ ಸುಮಹೂರ್ತದಲ್ಲಿಯೇ "ಕರ್ನಾಟಕ ಏಕೀಕರಣ ಸಂಘ" ವನ್ನು ಸ್ಥಾಪಿಸಿ ಕಾರ್ಯತತ್ಪರಾಗುವುದು ಉಚಿತವು. ಮುಂದೆ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮೀಟಿಯು ಈ ಕಾರ್ಯವನ್ನು ಕೈಕೊಂಡರೆ ನಿಮ್ಮ ಕಾರ್ಯಕ್ಕೆ ವಿಶೇಷ ಸಹಾಯವೆ ಆದೀತಲ್ಲದೆ ಹಾನಿಯೇನು? ರಾಷ್ಟ್ರೀಯ ಸಭೆಗೆ ಸೇರಿದ ಜನರು "ಕರ್ನಾಟಕ ಏಕೀಕರಣ ಸಂಘ"ದಲ್ಲಿ ಕೆಲಸ ಮಾಡಲಿಕ್ಕೆ ಆಸ್ಪದವಾಗುವುದು."

ಡಾ. ಎಚ್. ವ್ಹಿ. ಸವಣೂರ ಅವರು ಸೂಚಿಸಿದ ಈ ಸಲಹೆಗಳು ಕರ್ನಾಟಕ ಏಕೀಕರಣ ಚಳುವಳಿಗೆ ಅತ್ಯಂತ ಮಹತ್ವದ ತಿರುವನ್ನು ನೀಡದವು. ಕರ್ನಾಟಕ ಏಕೀಕರಣಕ್ಕೆ ಸಂಬಂಧಿಸಿದಂತೆ ನಿಶ್ಚಿತ ಗೊತ್ತುಗುರಿಗಳು ರೂಪಿತವಾದದ್ದು ಬೆಳಗಾವಿಯಲ್ಲಿ ಎಂಬುದು ಬಹಳ ಮಹತ್ವದ ಸಂಗತಿಯಾಗಿದೆ ಎಂದು ಡಾ. ಎಚ್.ಎಸ್. ಗೋಲಪಾಲರಾವ್ ಅವರು ಸೂಚಿಸಿದ್ದಾರೆ.[೮೦]

ಬೆಳಗಾವಿಯ ಕಾಂಗ್ರೆಸ್ ಅಧಿವೇಶನದ ವೇದಿಕೆಯನ್ನು ಕರ್ನಾಟಕದ ಏಕೀಕರಣ ಚಳುವಳಿಗಾರರು ರೀತಿಯಲ್ಲಿ ಬಳಸಿಕೊಂಡಿದ್ದರಿಂದಲೇ ಏಕೀಕರಣ ಚಳುವಳಿಯು ಯಶಸ್ವಿಯಾಗಲಿಕ್ಕೆ ಅತ್ಯಂತ ಪ್ರಬಲವಾದ ಕಾರಣವಾಗಿದೆ. ಈಗಾಗಲೇ ನಡೆದ ಹೋರಾಟಗಳ ಲೋಪದೋಷಗಳನ್ನು ತಿದ್ದಿಕೊಂಡು ಮುಂದೆ ಯಾವರೀತಿಯ ಹೋರಾಟವನ್ನು ಕೈಗೊಳ್ಳಬಹುದು ಎನ್ನುವ ಯೋಜನೆಯು ಬೆಳಗಾವಿ ಅಧಿವೇಶನದಲ್ಲಿ ಸಿದ್ಧಗೊಂಡಿತು. ಹೀಗಾಗಿ ಈ ಅಧಿವೇಶನ ಏಕೀಕರಣ ಚಳುವಳಿಗೆ ರಾಜಕೀಯ ಶಕ್ತಿಯ ಬೆಂಬಲಕ್ಕೆ ವೇದಿಕೆಯಾಯಿತು. ಈ ಕಾರ್ಯದಲ್ಲಿ ಸ್ಫೂರ್ತಿಯಾಗಲು ಎರಡೂ ಕೃತಿಗಳು ಕಾರಣವಾದವು.

ಕನ್ನಡಿಗರ ಸರ್ವಸ್ವ ಕೃತಿಯ ಕೃತಿಕಾರರಾದ ಶ್ರೀ ಆರ್. ಬಿ. ಕುಲಕರ್ಣಿಯವರು ಇಂದಿನ ಕರ್ನಾಟಕದ ಪರಿಸ್ಥಿತಿ, ಭಾವಿ ಕರ್ನಾಟಕದ ರೂಪರೇಷೆ, ಸಂಯುಕ್ತ ಕರ್ನಾಟಕ ಪ್ರಾಂತದ ಅವಶ್ಯಕತೆ ಇತ್ಯಾದಿ ವಿಷಯಗಳನ್ನೊಂಳಗೊಂಡ ೨೦ ಪ್ರಕರಣಗಳಲ್ಲಿ ವಿಚರಣೆ ನೀಡಿದ್ದಾರೆ. ಮುಂಬಯಿ ಕರ್ನಾಟಕಕ್ಕೆ ದೂರವಾದ ಮುಂಬಯಿ ರಾಜಧಾನಿಯಾಗಿರುವದರಿಂದ ಇಲ್ಲಿ ಕರ್ನಾಟಕದ ಕನ್ನಡಿಗರ ಯಾವ ಕೆಲಸವು ಆಗುತ್ತಿಲ್ಲ. ಮುಂಬಯಿ ಶಾಸನ ಸಭೆಯ ೧೧೧ ಸ್ಥಾನಗಳಲ್ಲಿ ಕನ್ನಡಿಗರಿಗೆ ಕೇವಲ ನಾಲ್ಕು ಸ್ಥಾನಗಳು ಇದರಿಂದ ಕನ್ನಡಿಗರಿಗೆ ಪ್ರಾತಿನಿಧ್ಯವಿಲ್ಲದೆ ಮರಾಠಿಯ ಪ್ರಭಾವದಲ್ಲಿ ನರಳುವಂತಾಗಿದೆ ಎಂದು ಅಂದಿನ ಕನ್ನಡಿಗರ ಸ್ಥಿತಿಯನ್ನು ವಿವರಿಸಿದ್ದಾರೆ. ಕರ್ನಾಟಕ ಕೈಪಿಡಿಯು ಕಾಂಗ್ರೆಸ್ ಸಂಸ್ಥೆ ಪ್ರಕಟಿಸಿದ ಕರ್ನಾಟಕದ ಪರಿಚಯಾತ್ಮಕ ಪುಸ್ತಕವಾದರೆ ಕುಲಕರ್ಣಿಯವರ ಕನ್ನಡಿಗರ ಸರ್ವಸ್ವ ಕೃತಿಯು ಕರ್ನಾಟಕದ ಆಗಿನ ದುಃಸ್ಥಿತಿಯನ್ನು ಕಣ್ಣಿಗೆ ಕಟ್ಟುವಂತೆ ನಿರೂಪಿಸುವ ಕೃತಿಯಾಗಿದೆ.

**ಅಖಿಲ ಕರ್ನಾಟಕ ಏಕೀಕರಣ ಸಂಘದ ಉದಯ:** ೧೯೨೪ ಬೆಳಗಾವಿ ಕಾಂಗ್ರೆಸ್ ಅಧಿವೇಶನದಲ್ಲಿ ಪೂರ್ವ ತಯಾರಿಯಂತೆ 'ಅಖಿಲ ಕರ್ನಾಟಕ ಏಕೀರಕಣ ಸಂಘ'ವನ್ನು ಸ್ಥಾಪಿಸಲಾಯಿತು. ಈಗಾಗಲೇ ಇದ್ದ ಕರ್ನಾಟಕ ಸಭಾ ಮತ್ತು ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಜೊತೆಗೆ ಸೇರಿ ೨೫-೧೨-೧೯೨೪ರಂದು ಈ ಸಂಘವನ್ನು ಸ್ಥಾಪಿಸಲಾಯಿತು. ಅಧಿವೇಶನದಲ್ಲಯೇ ನಡೆದ ಮೊದಲ ಸಭೆಯ ಅಧ್ಯಕ್ಷತೆಯನ್ನು ಸರ್. ಸಿದ್ದಪ್ಪ ಕಂಬಳಿಯವರು ವಹಿಸಿಕೊಂಡರು.[೯೧] ಆಗ ಅವರು ಮುಂಬಯಿ ವಿಧಾನ ಪರಿಷತ್ತಿನ ಉಪಸಭಾಪತಿಯಾಗಿದ್ದರು. ಶ್ರೀ. ದ.ವೆ. ಬೆಳವಿಯವರು ಸ್ವಾಗತಾಧ್ಯಕ್ಷರಾದರು.

ಬೆಳಗಾವಿಯಲ್ಲಿ ೧೯೨೪ರಲ್ಲಿ ಜರುಗಿದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನದಿಂದ ಬೆಳಗಾವಿಯು ಕರ್ನಾಟಕದ ಅವಿಭಾಜ್ಯ ಅಂಗವೆಂದು ದೃಢಪಟ್ಟಿತು. ಬೆಳಗಾವಿಯಲ್ಲಿ ಇದುವರೆಗೆ ನಡೆದ ಕಾರ್ಯಕ್ರಮಗಳು ಹೆಚ್ಚಾಗಿ ಮರಾಠಿಮಯವಾಗಿದ್ದವು. ಕನ್ನಡದ ಕಾರ್ಯಕ್ರಮಗಳೂ ಸಹ ಮರಾಠಿಮಯವಾಗಿದ್ದವು. ಆದರೆ ಅಖಿಲ ಭಾರತ ಮಟ್ಟದ ಮಹತ್ವದ ಸಭೆಯು ಕನ್ನಡಮಯವಾಗಿ ಜರುಗಿದ ಮೇಲೆ ಕರ್ನಾಟಕದ ಅಖಂಡತ್ವಕ್ಕೆ ಮಹತ್ವದ

ಸ್ಥಾನ ದೊರೆಯಿತು. ಬೆಳಗಾವಿಯಲ್ಲಿಯಂತೂ ಮುಂದೆ ಕರ್ನಾಟಕ ಏಕೀಕರಣಗೊಳ್ಳುವವರೆಗೆ ಈ ಅಧಿವೇಶನದ ಪ್ರಭಾವ ಕನ್ನಡಿಗರ ಮೇಲಿದ್ದಿತು. ಬೆಳಗಾವಿಯು ಕನ್ನಡದ ಪ್ರದೇಶವೆಂಬ ನಿರ್ಣಯವೆಂಬಂತೆ ಈ ಅಧಿವೇಶನದ ಮೂಲಕ ನಡೆಯಿತು.

ಬೆಳಗಾವಿ ಕಾಂಗ್ರೆಸ್ ಅಧಿವೇಶನ ಬೆಳಗಾವಿ ಕನ್ನಡಿಗರಲ್ಲಿ ಜಾಗೃತಿಯನ್ನುಂಟು ಮಾಡಿದ ಮರುವರ್ಷವೇ ಅಂದರೆ ೧೯೨೫ ರಮೇ ೯, ೧೦ ೧೧ ರಂದು ಬೆಳಗಾವಿಯಲ್ಲಿ ೧೧ನೆಯ ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಳನ ಜರುಗಿತು. ಶ್ರೀ ಬೆನಗಲ್ಲ ರಾಮರಾಯರಯ ಈ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿಕೊಂಡಿದ್ದರು. ಈ ಸಮ್ಮೇಳನದಲ್ಲಿ ಕರ್ನಾಟಕ ಏಕೀಕರಣದ ವಿಷಯವನ್ನು ಪ್ರಸ್ತಾಪಿಸಲಾಯಿತು. ಹೆಚ್ಚಿನ ಸಂಖ್ಯೆಯಲ್ಲಿ ಕನ್ನಡಿಗರು ಪಾಲ್ಗೊಂಡು ಸಮ್ಮೇಳನವನ್ನು ಯಶಸ್ವಿಗೊಳಿಸಿದರು.

ಬೆಳಗಾವಿಯಲ್ಲಿ ಕನ್ನಡಪರವಾದ ಚಟುವಟಿಕೆಗಳು ತೀವ್ರಗೊಂಡು ಕರ್ನಾಟಕ ಏಕೀಕರಣದ ಹೋರಾಟಗಳು ಪ್ರಾರಂಭವಾದೊಡನೆ ಮರಾಠಿಗರು ಬೆಳಗಾವಿಯನ್ನು ತಮ್ಮ ಪ್ರಬಲವಾದ ನೆಲೆಯಾಗಿ ಸ್ಥಾಪಿಸಲು ಪ್ರಯತ್ನಿಸತೊಡಗಿದರು. ೧೯೨೯ ರಲ್ಲಿ ಬೆಳಗಾವಿಯಲ್ಲಿ ಮರಾಠಿ ಸಾಹಿತ್ಯ ಸಮ್ಮೇಳನವನ್ನು ನಡೆಸಲು ನಿರ್ಧರಿಸಿ ತಮ್ಮ ಪ್ರಾಬಲ್ಯವನ್ನು ಸ್ಥಾಪಿಸಲು ಪ್ರಯತ್ನಿಸಿದರು.[೪೨] ಆದರೆ ಈ ಸಮ್ಮೇಳನಕ್ಕೆ ಕನ್ನಡಿಗರಿಂದ ತೀವ್ರವಿರೋಧ ವ್ಯಕ್ತವಾಯಿತು. ರಾಜ್ಯವ್ಯಾಪಿಯಾಗಿ ಕನ್ನಡದ ಮುಂದಾಳುಗಳು ಇದನ್ನು ವಿರೋಧಿಸಿದರು. ಶ್ರೀ ಎ. ರಂಗನಾಥ ಮೊದಲಿಯಾರ್, ಶ್ರೀ ಬಿ. ಎಂ. ಶ್ರೀಕಂಠಯ್ಯ ಮಾಸ್ತಿ ವೆಂಕಟೇಶ ಅಯ್ಯಂಗಾರ ಮುಂತಾದ ಮುಖಂಡರು ಉದ್ದೇಶಿತ ಮರಾಠಿ ಸಮ್ಮೇಳನ ನಡೆಯಲು ಅವಕಾಶವನ್ನು ನೀಡಲಿಲ್ಲ. ಈ ಸಂದರ್ಭದಲ್ಲಿ ಕನ್ನಡ ಸಂಘಟನೆಗಳು ಬಲವಾಗಿ ಪ್ರತಿಭಟನೆ ವ್ಯಕ್ತಪಡಿಸಿದವು.[೪೩] ಆಗ ಮಹಾರಾಷ್ಟ್ರದ ಮುಖಂಡರು ಬೆಳಗಾವಿಯಲ್ಲಿ ಸಮ್ಮೇಳನ ನಡೆಯುವುದಿಲ್ಲವಾದರೆ ಅದು ತಮ್ಮ ಪ್ರತಿಷ್ಠೆಗೆ ಧಕ್ಕೆ ಎಂದು ಬಗೆದು ಹೇಗಾದರೂ ಮಾಡಿ ಬೆಳಗಾವಿಯಲ್ಲಿ ಮರಾಠಿ ಸಮ್ಮೇಳನ ನಡೆಸಲು ತೀರ್ಮಾನಿಸಿ ಕನ್ನಡಿಗರಲ್ಲಿ ಮನವಿ ಮಾಡಿಕೊಳ್ಳಲು ಮಹಾರಾಷ್ಟ್ರದ ಸುಪ್ರಸಿದ್ಧ ಸಾಹಿತಿ, ಪತ್ರಕರ್ತರಾದ ನರಸಿಂಹ ಚಿಂತಾಮಣಿ ಕೇಳಕರರವರನ್ನು ಬೆಳಗಾವಿಗೆ ಕಳುಹಿಸಿಕೊಟ್ಟರು. ಕೇಳಕರರು ಈ ಹಿಂದೆ ೧೯೨೦ ರಲ್ಲಿ ನಾಗಪುರದಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದ ನಿರ್ಣಯದ ಮೇರೆಗೆ ಭಾರತದ ಭಾಷಾನ್ವಯ ನಕ್ಷೆಯನ್ನು ಸಿದ್ಧಪಡಿಸಿ ಬೆಳಗಾವಿ ನಗರ ಹಾಗೂ ಜಿಲ್ಲೆ ಕನ್ನಡ ಭಾಷೆಗೆ ಒಳಪಟ್ಟಿವೆಯೆಂದು ಅವುಗಳನ್ನು ಕರ್ನಾಟಕದಲ್ಲಿ ಇರಿಸಿದ್ದರು.

ಕೇಳಕರರು ಬೆಳಗಾವಿಗೆ ಬಂದು ಕರ್ನಾಟಕದ ಧುರೀಣರೊಂದಿಗೆ ಚರ್ಚೆ ನಡೆಸಿ, ತಾವು ಬೆಳಗಾವಿಯ ಮೇಲೆ ತಮ್ಮ ಹಕ್ಕುದಾರಿಕೆ ಮುಂದೆ ಮಾಡಲು ಮರಾಠಿ ಸಾಹಿತ್ಯ ಸಮ್ಮೇಳನವನ್ನು ನಡೆಸುತ್ತಿಲ್ಲವೆಂದು ಭರವಸೆ ನೀಡಿದ ಮೇಲೆ ಕನ್ನಡ ಧುರೀಣರು ಮರಾಠಿ ಸಮ್ಮೇಳನವನ್ನು ನಡೆಸಿಕೊಂಡು ಹೋಗಲು ಇದ್ದ ತಮ್ಮ ವಿರೋಧವನ್ನು

ಹಿಂತೆಗೆದುಕೊಂಡರು.[೪೪] ಬೆಳಗಾವಿಯಲ್ಲಿ ಮರಾಠಿ ಸಮ್ಮೇಳನಕ್ಕೆ ಕನ್ನಡಿಗರ ವಿರೋಧದಿಂದ ಮರಾಠಿಗರಿಗೆ ಮೊದಲಬಾರಿ ದೊಡ್ಡ ಪ್ರಮಾಣದ ವಿರೋಧ ವ್ಯಕ್ತವಾಯಿತು. ಈ ಘಟನೆಯಿಂದ ಕನ್ನಡಿಗರು ಮತ್ತಷ್ಟು ಸಂಘಟಿತರಾಗತೊಡಗಿದರು.

೧೯೨೯ ಮೇ ೧೧ ಮತ್ತು ೧೨ರಂದು ಬೆಳಗಾವಿಯಲ್ಲಿ ಏಕೀಕರಣ ಪರಿಷತ್ತಿನ ನಾಲ್ಕನೆಯ ಅಧಿವೇಶನವನ್ನು ನಡೆಸಲಾಯಿತು. ಇದು ಅತ್ಯಂತ ಮಹತ್ವದ ಅಧಿವೇಶನವಾಗಿತ್ತು. ಈ ಅಧಿವೇಶನದಲ್ಲಿ ೧೯೨೯ ರ ಕೊನೆಯೊಳಗಾಗಿ ಬ್ರಿಟಿಷ ಕರ್ನಾಟಕದ ಪ್ರದೇಶಗಳನ್ನೆಲ್ಲ ಒಂದು ಗೂಡಿಸಬೇಕೆಂದು ಸಭೆಯಲ್ಲಿ ಸಾರಲಾಯಿತು. ಇದರ ಪರಿಣಾಮವಾಗಿ ೧೯೩೦ ರಿಂದ ಮುಂದೆ ಕನ್ನಡ ನಾಡಿನ ಎಲ್ಲ ಪ್ರದೇಶಗಳನ್ನು ಒಂದುಗೂಡಿಸಬೇಕೆಂಬ ಚಳುವಳಿಯು ಕರ್ನಾಟಕದ ತುಂಬೆಲ್ಲಾ ವ್ಯಾಪಿಸಿತು. ಇದರ ಪರಿಣಾಮದಿಂದಾಗಿ ಕಾಂಗ್ರೆಸ್ ಕಾರ್ಯ ಸಮಿತಿಯು ೧೯೩೮ ರಲ್ಲಿ ಒಂದು ಗೊತ್ತುವಳಿಯನ್ನು ಸ್ವೀಕರಿಸಿ ಕೇಂದ್ರ ಸರ್ಕಾರದಲ್ಲಿ ಕಾಂಗ್ರೆಸ್ಸ ಅಧಿಕಾರರೂಢವಾದ ಕೂಡಲೇ ತಾನು ಭಾಷಾನ್ವಯ ಪ್ರಾಂತರಚನೆಯ ಪ್ರಶ್ನೆಯನ್ನು ಕೈಗೆತ್ತಿಕೊಳ್ಳುವುದಾಗಿ ಸಾರಿತು. ಅಲ್ಲದೆ ಬೆಳಗಾವಿಯ ಸಮಾವೇಶದ ಪರಿಣಾಮದಿಂದಾಗಿ ಮಹಾತ್ಮಾ ಗಾಂಧೀಜಿಯವರು ಕರ್ನಾಟಕವನ್ನು ಪ್ರತ್ಯೇಕ ಪ್ರಾಂತವನ್ನಾಗಿ ಸೃಷ್ಟಿಸುವುದನ್ನು ತಡೆಯಲು ಸಾಧ್ಯವಿಲ್ಲ ಹಾಗೂ ಕರ್ನಾಟಕ ಪ್ರಾಂತರಚನೆಯಾಗುವ ವಿಚಾರವನ್ನು ನಾನು ಮನಸಾ ಸ್ವಾಗತಿಸುತ್ತೇನೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದರು.[೪೫]

ಈ ಅಧಿವೇಶನವು ಶ್ರೀ ಎ. ರಂಗನಾಥ ಮೊದಲಿಯಾರ ಅಧ್ಯಕ್ಷತೆಯಲ್ಲಿ ಜರುಗಿತು. ಈ ಸಂದರ್ಭದಲ್ಲಿ ಮೊದಲಿಯಾರರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಸರ್ವಪಕ್ಷಗಳು ತಮ್ಮ ಆಡಳಿತಕ್ಕೆ ಅನುಕೂಲಕರವಾ ರೀತಿಯಲ್ಲಿ ಭಾಷಾವಾರು ಪ್ರಾಂತ್ಯ ಸಮಿತಿಗಳ ರಚನೆಮಾಡಿರುವುದನ್ನು ಪ್ರಸ್ತಾಪಿಸಿ ಅದು ಒಂದು ಭಾಷಿಕ ಜನತೆಯ ಸರ್ವಾಂಗೀಣ ಪ್ರಗತಿಗೆ ಎಷ್ಟರಮಟ್ಟಿಗೆ ಅವಶ್ಯಕ ಎಂಬುದನ್ನು ವಿವರಿಸಿ 'ಸಾರ್ವತ್ರಿಕ ಶಿಕ್ಷಣವಿಲ್ಲದೆ ಪ್ರಜಾಪ್ರಭುತ್ವ ಅಸಾಧ್ಯ. ಮಾತೃಭಾಷೆ ಇಲ್ಲ. ಸಾರ್ವತ್ರಿಕ ಶಿಕ್ಷಣ ಅಸಾಧ್ಯ, ಭಾಷಾನುಗುಣವಾಗಿ ಪ್ರಾಂತಗಳ ಪುನರ್ವಿಂಗಡಣೆ ಆಗದಿದ್ದರೆ ಮಾತೃಭಾಷೆ ಶಿಕ್ಷಣ ಅಸಾಧ್ಯ ಎಂದು ಸ್ಪಷ್ಟಪಡಿಸಿದರು. ಇಂತಹ ಪರಿಸ್ಥಿತಿಯಲ್ಲಿಯೇ ಎರಡನೆಯ ಬಾರಿಗೆ ಬೆಳಗಾವಿಯಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನವು ಜರುಗಿತು. ೧೯೨೯ ಮೇ ೧೨, ೧೩, ೧೪ ರಂದು ಜರುಗಿದ ೧೫ನೆಯ ಕನ್ನಡ ಸಾಹಿತ್ಯ ಸಮ್ಮೇಳನವು ಬೆಳಗಾವಿಯಲ್ಲಿಯ ಕನ್ನಡಿಗರಿಗೆ ಏಕೀಕರಣ ಹೋರಾಟಕ್ಕೆ ಮತ್ತಷ್ಟು ಬಲವನ್ನು ನೀಡಿತು. ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರರ ಅಧ್ಯಕ್ಷತೆಯಲ್ಲಿ ನಡೆದ ಈ ಸಮ್ಮೇಳನವು ಮಿಷನ್ ಹಾಯಸ್ಕೂಲಿನಲ್ಲಿ ಭರದಿಂದ ಸೇರಿತು. ಶ್ರೀ ದಾತಾರ ಬಳವಂತರಾಯರು ಮತ್ತು ವೀರನಗೌಡ ಪಾಟೀಲರು ಕಾರ್ಯದರ್ಶಿಗಳಾಗಿ ಸಮ್ಮೇಳನವನ್ನು ಅಚ್ಚುಕಟ್ಟಾಗಿ ನಡೆಸಿದರು. ಈ ಸಮ್ಮೇಳನದಲ್ಲಿ ವರಕವಿ ದ.ರಾ.ಬೇಂದ್ರೆಯವರು 'ಹಕ್ಕಿ ಹಾರುತಿದೆ ನೋಡಿದಿರಾ....' ಎಂಬ ಕವಿತೆಯನ್ನು ಭಾವುಕರಾಗಿ ಆಕಾಶದತ್ತ ಕೈಮಾಡಿ ಹಾಡಲು ಪ್ರಾರಂಭಿಸಿದಾಗ ಕುಳಿತ ಜನ ಆಕಾಶದತ್ತ ನೋಡಿದ್ದರಂತೆ! ಬೇಂದ್ರೆಯವರು ಹಾಡನ್ನು ಹಾಡಿ ಮುಗಿಸಿದಾಗ ವೇದಿಕೆಯ ಮೇಲಿದ್ದ ಮಾಸ್ತಿಯವರು ಬೇಂದ್ರೆಯವರನ್ನು ಬಿಗಿಯಾಗಿ ತಬ್ಬಿಕೊಂಡರು.

ಈ ಸಮ್ಮೇಳನದಲ್ಲಿ ಗಂಗಾಧರ ದೇಶಪಾಂಡೆಯವರು ಏಕೀಕರಣದ ಬಗ್ಗೆ ಮಾತನಾಡಲು ಪ್ರಾರಂಭಿಸಿದಾಗ 'ತರುಣ ಭಾರತ' ಮರಾಠಿ ದಿನಪತ್ರಿಕೆಯ ಕೆಲವರು ಅವರನ್ನು ಮಾತನಾಡಗೊಡಲಿಲ್ಲ[೮೬] ಆಗ ಕೆಲವು ಮುಖಂಡರು ಮಧ್ಯ ಬಂದು ಮಾತನಾಡಲು ಅವಕಾಶ ಮಾಡಿದರು. ಈ ಸಂದರ್ಭದಲ್ಲಿ ದೇಶಪಾಂಡೆಯವರು ಮಾಡಿದ ಭಾಷಣದಿಂದ ಎಲ್ಲರೂ ಅಚ್ಚರಿಗೊಂಡ. ಈ ಸಮ್ಮೇಳನದಲ್ಲಿ ವಿಜಯನಗರದ ಸಾಮ್ರಾಜ್ಯ ಸ್ಥಾಪನೆಯ ಷಟ್ಶಂವರಿಕೋತ್ಸವ ವನ್ನು ನಡೆಸಬೇಕೆಂದು ತೀರ್ಮಾನಿಸಲಾಯಿತು. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ೬೦೦ನೆಯ ಉತ್ಸವ ೧೯೩೬ ರಲ್ಲಿ ಬರುವುದರಲ್ಲಿತ್ತು. ಏಳು ವರ್ಷಗಳ ಮೊದಲೆ ಬೆಳಗಾವಿಯಲ್ಲಿ ಅದರ ಹೊಳಹನ್ನು ಹಾಕಲಾಯಿತು.

ಕರ್ನಾಟಕ ಏಕೀಕರಣದ ನಿರ್ಣಯಗಳು ರಾಜ್ಯದ ಎಲ್ಲ ಲೋಕಲ್ ಬೋರ್ಡಸನಲ್ಲಿಯೂ ಈ ಸಂದರ್ಭದಲ್ಲಿ ಬೆಳಗಾವಿಯನ್ನೊಳಗೊಂಡ ಅಖಂಡ ಕರ್ನಾಟಕ ರಚನೆಯನ್ನು ಕುರಿತು ಪ್ರಮುಖ ನಿರ್ಣಯಗಳನ್ನು ಲೋಕಲ್ ಬೋರ್ಡ್‌ನ ವಿಶೇಷ ಸಭೆಯಲ್ಲಿ ಕೈಗೊಳ್ಳಲಾಯಿತು.ಕರ್ನಾಟಕದಲ್ಲಿ ಏಕೀಕರಣ ಬೇಡಿಕೆಗಳು ನಿರಂತರವಾಗಿ ನಡೆಯುತ್ತಲೇ ಇದ್ದವು. ಅದರಲ್ಲಿಯೂ ಬೆಳಗಾವಿ ನಗರ ಮತ್ತು ಜಿಲ್ಲೆಯ ವಿವಿಧ ಭಾಗಗಳಲ್ಲಿ ಮಹತ್ವದ ಅಧಿವೇಶನಗಳು ಸಮಾವೇಶಗಳು, ಚಳುವಳಿಗಳಕು ಮೇಲಿಂದ ಮೇಲೆ ಜರುಗಿ ಕರ್ನಾಟಕ ಏಕೀಕರಣ ಚಳುವಳಿಯನ್ನು ಜೀವಂತವಾಗಿರಿಸಿದ್ದವು. ೧೯೩೧ ರ ಮೇ ೨೬ ರಂದು ಬೆಳಗಾವಿಯ ಕರ್ನಾಟಕ ಏಕೀಕರಣ ಸಂಘದ ಘಟಕವು ಒಂದು ಕಿರು ಹೊತ್ತಿಗೆಯನ್ನು ಮರಾಠಿಭಾಷೆಯಲ್ಲಿ ಹೊರತಂದಿತು. 'ಸಂಯುಕ್ತ ಕರ್ನಾಟಕ ಅಥವಾ ವಿಭಾಗ ಲೇಲ್ಯಾ ಕರ್ನಾಟಕಾಂಚಿ ಏಕೀಕರಣ' ಎಂಬ ಹೊತ್ತಿಗೆಯನ್ನು ಬೆಳಗಾವಿಯ ಕನ್ನಡ ಧುರೀಣರಾದ ಶ್ರೀ. ಬಿ. ಎನ್. ದಾತಾರ್ ಅವರು ಪ್ರಕಟಿಸಿದರು. ಈ ಕೃತಿಯ ಮೂಲಕ ಬೆಳಗಾವಿ ಭಾಗದ ಮರಾಠಿಗರಿಗೆ ಕರ್ನಾಟಕದ ಏಕೀಕರಣ ಬೇಡಿಕೆಯ ಹಿಂದಿನ ಸತ್ಯ ಮತ್ತು ಔಚಿತ್ಯವನ್ನು ತಿಳಿಯಪಡಿಸಿದರು. ಬ್ರಿಟಿಷರ ಆಳ್ವಿಕೆಯ ನಂತರ ಆಡಳಿತ ವಿಭಾಗಗಳ ರಚನೆಯ ದೋಷ ಇತ್ಯಾದಿಗಳನ್ನು ವಿವರಿಸಿ, ಭಾಷಾವಾರು ಪ್ರಾಂತ ರಚನೆಯ ಅವಶ್ಯಕತೆಯನ್ನು ಮನಗಾಣಿಸಿ ಆವರೆಗೆ ಏಕೀಕರಣ ಸಂಬಂಧ ನಡೆದಿರುವ ಚಳುವಳಿ ಇತ್ಯಾದಿಗಳ ವಿವರ ನೀಡಿ, ಬೆಳಗಾವಿ ಮಾತ್ರವಲ್ಲದೆ ಬ್ರಿಟಿಷ ಕರ್ನಾಟಕದಲ್ಲಿರುವ ಎಲ್ಲಾ ಕನ್ನಡ ಪ್ರದೇಶಗಳು ಒಂದಾಗಬೇಕಾಗಿರುವುದರ ಔಚಿತ್ಯ ಮತ್ತು ಅಗತ್ಯತೆಯನ್ನು ಮರಾಠಿ ಭಾಷೆಯಲ್ಲಿ ಪ್ರಕಟಿಸಿದರು. ಬೆಳಗಾವಿ ಏಕೀಕರಣ ಘಟಕದ ವತಿಯಿಂದ ಪ್ರಕಟವಾದ ಈ ಕೃತಿಯು ಬೆಳಗಾವಿ ಭಾಗದಲ್ಲಿ ಮಹತ್ವದ ಪರಿಣಾಮವನ್ನುಂಟು ಮಾಡಿತು. ಬೆಳಗಾವಿಯು ಕನ್ನಡದ ಪ್ರದೇಶವಾದ್ದರಿಂದ ಅದು ಕರ್ನಾಟಕದಲ್ಲಿ ಸೇರುವುದು ಸೂಕ್ತವೆಂಬ ಭಾವನೆ ಅಂದಿನ ಮರಾಠಿ ಮುಖಂಡರಿಗೆ ಈ ಕೃತಿಯ ಮೂಲಕ ಮನದಟ್ಟಾಯಿತು.

೧೯೩೬ ರ ನವಂಬರ ದಲ್ಲಿ ಕರ್ನಾಟಕ ಏಕೀಕರಣ ಪರಿಷತ್ತಿನ ವಿಶೇಷ ಸಭೆ ಬೆಳಗಾವಿಯಲ್ಲಿ ಸೇರಿತು. ಈ ಸಭೆಯ ಅಧ್ಯಕ್ಷತೆಯನ್ನು ಮದರಾಸ್ ಶಾಸನ ಪರಿಷತ್ತಿನಲ್ಲಿ ಸದಸ್ಯರಾಗಿದ್ದ ಡಾ. ಯು. ರಾಮರಾಯರು

ವಹಿಸಿಕೊಂಡಿದ್ದರು. ಬಿ. ಎಸ್. ದಾತಾರ್ ಅವರು ಸ್ವಾಗತಾಧ್ಯಕ್ಷರಾಗಿದ್ದರು.ಕರ್ನಾಟಕ ಏಕೀಕರಣ ಚಳುವಳಿಗೆ ನಿರ್ದಿಷ್ಟರೂಪ ಸಿದ್ಧಗೊಂಡಿದ್ದು ಬೆಳಗಾವಿಯ ಈ ವಿಶೇಷ ಸಭೆಯ ಮೂಲಕ. ಇದುವರೆಗೆ ನಡೆದ ಚಳುವಳಿಗೆ ಯಾವುದೇ ನಿರ್ದಿಷ್ಟ ರೂಪರೇಷೆಗಳಿಲ್ಲದೆ ನಡೆಯುತ್ತ ಬಂದಿತ್ತು. ಹೀಗಾಗಿ ಏಕೀಕರಣ ಚಳುವಳಿಯನ್ನು ರಚನಾತ್ಮಕವಾಗಿ ರೂಪಿಸಿಕೊಂಡು ಹೋರಾಟ ಮಾಡಿದರೆ ಅದು ಸಾಧಿತವಾಗುವುದೆನ್ನುವುದನ್ನು ಅರಿತ ಏಕೀಕರಣ ಹೋರಾಟಗಾರರು ಬೆಳಗಾವಿ ಸಭೆಯಲ್ಲಿ ಮಹತ್ವದ ಎರಡು ನಿರ್ಧಾರಗಳನ್ನು ಕೈಗೊಂಡರು.[೪೭]

ಅವೆಂದರೆ: ೧. ಬ್ರಿಟಿಷ ಕರ್ನಾಟಕದ ಏಕೀಕರಣ

೨. ಕರ್ನಾಟಕ ಸಂಸ್ಥಾನಗಳನ್ನೊಳಗೊಂಡ ಏಕೀಕರಣ.

ಕರ್ನಾಟಕ ಏಕೀಕರಣ ಚಳುವಳಿಯು ತನ್ನ ಧ್ಯೇಯಸಾಧನೆಯನ್ನು ಈ ಎರಡು ಹಂತಗಳಲ್ಲಿ ವಿಭಾಗಿಸಿಕೊಂಡು ಹೋರಾಟವನ್ನು ಆರಂಭಿಸಿತು. ಇಲ್ಲಿಯವರೆಗೆ ಕರ್ನಾಟಕ ಏಕೀಕರಣವೆಂದರೆ ಬ್ರಿಟಿಷ ಆಳ್ವಿಕೆಗೆ ಒಳಪಟ್ಟಿದ್ದ ಕನ್ನಡ ಪ್ರದೇಶಗಳ ಏಕೀಕರಣವೆಂದೇ ಪರಿಗಣಿಸಲಾಗಿತ್ತು. ಬ್ರಿಟಿಷ ಆಳ್ವಿಕೆಯ ಕರ್ನಾಟಕಕ್ಕೂ ಮತ್ತು ಸಂಸ್ಥಾನಗಳನ್ನೊಳಗೊಂಡ ಕರ್ನಾಟಕಕ್ಕೂ ವ್ಯಾಪ್ತಿಯಲ್ಲಿ ಬಹಳಷ್ಟು ವ್ಯತ್ಯಾಸವಿರುವುದರಿಂದ ಬೆಳಗಾವಿ ವಿಶೇಷ ಸಭೆಯಲ್ಲಿ ಇದಕ್ಕೆ ಸ್ಪಷ್ಟವಾದ ಪರಿಹಾರವನ್ನು ಕಂಡುಕೊಳ್ಳಲಾಯಿತು.

ಬ್ರಿಟಿಷ ಆಡಳಿತದಲ್ಲಿದ್ದ ಕರ್ನಾಟಕವೆಂದರೆ ಮುಂಬಯಿ ಇಲಾಖೆಯ ನಾಲ್ಕು ಜಿಲ್ಲೆಗಳು, ಮದ್ರಾಸ ಇಲಾಖೆಯ ಬಳ್ಳಾರಿ, ಮಂಗಳೂರು ಹಾಗೂ ನೀಲಗಿರಿ ಜಿಲ್ಲೆಗಳು, ಮತ್ತು ಕೊಡಗು ಪ್ರಾಂತ ಇವುಗಳನ್ನಷ್ಟೇ ಕೂಡಿಸಿ ಕರ್ನಾಟಕ ಏಕೀಕರಣಗೊಳ್ಳಬೇಕೆಂಬ ಉದ್ದೇಶದೊಂದಿಗೆ ಇದುವರೆಗೆ ಹೋರಾಟ ಸಾಗಿ ಬಂದಿತ್ತು. ಈ ಸಂಕುಚಿತ ವಿಚಾರವನ್ನು ೧೯೩೭ ರ ಬೆಳಗಾವಿಯ ವಿಶೇಷ ಸಭೆಯಲ್ಲಿ ತೊಡೆದು ಹಾಕಿ ವಿಶಾಲ ಕರ್ನಾಟಕದ ರಚನೆಗೆ ನಾಂದಿಹಾಡಲಾಯಿತು. ಹೀಗಾಗಿ ಏಕೀಕರಣ ಚಳುವಳಿಯ ಇತಿಹಾಸದಲ್ಲಿ ೧೯೩೭ ರ ವಿಶೇಷ ಸಭೆಯು ಮಹತ್ವವನ್ನು ಪಡೆದುಕೊಂಡಿತು. ಇಲ್ಲಿಂದ ಮುಂದೆ ನಡೆದ ಹೋರಾಟಗಳು ವಿಶಾಲ ಕರ್ನಾಟಕ ಅಂದರೆ ಬ್ರಿಟಿಷ ಅಧಿಪತ್ಯ ಹಾಗೂ ಸಂಸ್ಥಾನಿಕರ ಆಡಳಿತದ ಕರ್ನಾಟಕವನ್ನೂ ಒಂದುಗೂಡಿಸುವ ನಿಟ್ಟಿನಲ್ಲಿ ಸಾಗಿದವು.

ಕರ್ನಾಟಕ ಏಕೀಕರಣ ಚಳುವಳಿಯು ರಾಜ್ಯವ್ಯಾಪಿಯಾಗಿ ನಡೆದ ಸಂದರ್ಭದಲ್ಲಿ ಬೆಳಗಾವಿಯಲ್ಲಿ ಈ ಚಳುವಳಿಗೆ ವಿಶೇಷವಾದ ಮಹತ್ವವಿತ್ತು. ಇಡೀ ಕರ್ನಾಟಕ ಏಕೀಕರಣಗೊಳ್ಳಬೇಕೆಂಬ ಹೋರಾಟ ಒಂದು ಕಡೆಯಾದರೆ ಬೆಳಗಾವಿಯನ್ನು ಕರ್ನಾಟಕದಲ್ಲಿಯೇ ಉಳಿಸಿಕೊಳ್ಳಬೇಕೆಂಬ ಮತ್ತೊಂದು ಜವಾಬ್ದಾರಿ ಬೆಳಗಾವಿ ಹೋರಾಟಗಾರರ ಮೇಲೆ ಬಿದ್ದಿತು. ಒಂದು ಕಡೆ ದೇಶದ ಸ್ವಾತಂತ್ರ್ಯ ಹೋರಾಟದ ಜೊತೆಗೆ ಸಾಗಿದ ಕರ್ನಟಕ ಏಕೀಕರಣ ಚಳುವಳಿ, ಇವುಗಳ ಮಧ್ಯದಲ್ಲಿಯೇ ಬೆಳಗಾವಿ ಉಳಿವಿನ ಪ್ರಶ್ನೆ ಎದುರಾಗಿ ಅದಕ್ಕಾಗಿ ನಡೆದ ಹೋರಾಟದಿಂದಾಗಿ ಅತ್ಯಂತ

ಸಂದಿಗ್ದ ಸ್ಥಿತಿಯಲ್ಲಿ ಬೆಳಗಾವಿಯ ಹೋರಾಟಗಾರರು ಸಿಕ್ಕಿಕೊಂಡರು. ಇನ್ನೂ ದೇಶ ಸ್ವತಂತ್ರವಾಗದ ಸಂದರ್ಭದಲ್ಲಿ ದೇಶದ ಸ್ವಾತಂತ್ರ್ಯವನ್ನೇ ಮುಖ್ಯ ಗುರಿಯನ್ನಾಗಿಟ್ಟುಕೊಂಡಿದ್ದ ಕಾಂಗ್ರೆಸ್ ಮುಖಂಡರು ಏಕೀಕರಣದ ವಿಷಯದಲ್ಲಿ ತಲೆಕೆಡಿಸಿಕೊಳ್ಳಲಿಲ್ಲ. ಗಾಂಧೀಜಿಯವರೇ ಎಷ್ಟೋ ಸಾರಿ ಏಕೀಕರಣ ಹೋರಾಟಗಾರರಿಗೆ 'ದೇಶಸ್ವಾತಂತ್ರ್ಯ ಹೊಂದಿದರೆ ರಾಜ್ಯ ತಾನೆ ರಚನೆಗೊಳ್ಳುತ್ತದೆ" ಎಂದು ಹೇಳಿದ್ದರು. ಗಾಂಧೀಜಿಯವರ ಅನುಯಾಯಿಗಳಾದ ಬೆಳಗಾವಿಯ ಕೆಲವು ಸ್ವಾತಂತ್ರ್ಯ ಹೋರಾಟಗಾರರು ಏಕೀಕರಣ ಹೋರಾಟದಲ್ಲಿ ಮನಸ್ಸಿಲ್ಲದ ಮನಸ್ಸಿನಿಂದ ಭಾಗಿಯಾಗುತ್ತಿದ್ದರು. ಅದರಲ್ಲಿಯೂ ಬೆಳಗಾವಿ ಪ್ರದೇಶವನ್ನು ಮಹಾರಾಷ್ಟ್ರಕ್ಕೆ ಸೇರಿಸಬೇಕೆನ್ನುವ ಮರಾಠಿ ಹೋರಾಟಗಾರರು ಬೆಳಗಾವಿಯನ್ನು ಕರ್ನಾಟಕದಲ್ಲಿಯೇ ಉಳಿಸಿಕೊಳ್ಳಬೇಕೆನ್ನುವ ಕನ್ನಡ ಹೋರಾಟಗಾರರು ಈ ಗೊಂದಲದಲ್ಲಿ ಏನು ಮಾಡಬೇಕು ಎನ್ನುವ ಸಂದಿಗ್ಧತೆ ಬೆಳಗಾವಿ ಸ್ವಾತಂತ್ರ್ಯ ಹೋರಾಟಗಾರರಲ್ಲಿ ಉಂಟಾಗಿತ್ತು. ಇಂತಹ ಸಂದರ್ಭದಲ್ಲಿ ಹೆಚ್ಚು ಗೊಂದಲಕ್ಕೆ ವಿವಾದಕ್ಕೆ ಒಳಗಾದವರೆಂದರೆ ಗಂಗಾಧರರಾವ್ ದೇಶಪಾಂಡೆಯವರು. ಇವರು ಬೆಳೆದು ಬಂದ ಪರಿಸರ ಮರಾಠಿ. ಹೋರಾಟಕ್ಕೆ ಸ್ಫೂರ್ತಿ ಮರಾಠಿ ಮುಖಂಡರು. ಸ್ನೇಹಿತರು ಮುಖಂಡರು ಮರಾಠಿಗರು. ಆದರೆ ಹೋರಾಟದ ನೆಲ ಕರ್ನಾಟಕ. ಹೀಗಾಗಿ ಅವರು ಮರಾಠಿಗರ ಅನುಯಾಯಿಗಳಾದರೆ ಅವರ ಅನುಯಾಯಿಗಳೆಲ್ಲ ಕರ್ನಾಟಕದವರಾಗಿದ್ದರು. ದೇಶಪಾಂಡೆಯವರ ಸಹಚರರು ಅಪ್ಪಟ ಕನ್ನಡಾಭಿಮಾನಿಗಳಾಗಿದ್ದರು. ಇಂತಹ ಸಂದರ್ಭದಲ್ಲಿ ಅವರ ಹೋರಾಟದ ಹೆಜ್ಜೆಗಳು ಮಹತ್ವ ಪಡೆದುಕೊಂಡಿದ್ದವು. ಇದರಿಂದಾಗಿಯೇ ಎಷ್ಟೋ ಕಡೆಗಳಲ್ಲಿ ಕನ್ನಡಿಗರ ವಿರೋಧವನ್ನು ಕಟ್ಟಿಕೊಂಡಿದ್ದರು. ಗಂಗಾಧರ ರಾಯರಲ್ಲಿಯೂ ತಾನು ಕನ್ನಡಿಗನೆನ್ನುವ ಅಭಿಮಾನವಿತ್ತು. ಆದರೆ ಅದು ದೇಶದ ಸ್ವಾತಂತ್ರ್ಯ ಹೋರಾಟಕ್ಕೆ ಅಡ್ಡಿಯಾಗಬಹುದು ಎನ್ನುವ ಅಳುಕು ಅವರಲ್ಲಿತ್ತು.[೪೮]

ಇಂತಹ ಸಂದರ್ಭದಲ್ಲಿಯೇ ಬೆಳಗಾವಿಯಲ್ಲಿ ಕನ್ನಡ ಚಟುವಟಿಕೆಗಳು ಎಡಬಿಡದೆ ನಡೆಯತೊಡಗಿದ್ದವು. ಕರ್ನಾಟಕ ಏಕೀಕರಣ ಪರಿಷತ್ತು ಕರ್ನಾಟಕ ವಿದ್ಯಾವರ್ಧಕ ಸಂಘ, ಕನ್ನಡ ಸಾಹಿತ್ಯ ಪರಿಷತ್ತು ಬೆಳಗಾವಿಯ ಕರ್ನಾಟಕ ಸಂಘ, ನಾಡಹಬ್ಬ ಉತ್ಸವ ಸಮಿತಿ ಅಲ್ಲದೆ ಹಲವಾರು ಪತ್ರಿಕೆಗಳು ಬೆಳಗಾವಿಯಲ್ಲಿ ನಿರಂತರವಾಗಿ ಕನ್ನಡ ಜಾಗೃತಿಯನ್ನುಂಟು ಮಾಡುತ್ತಿದ್ದವು. ಹೀಗಾಗಿ ಏಕೀಕರಣ ಚಳುವಳಿಯ ಮುಖ್ಯ ನೆಲೆಯಾಗಿ ಬೆಳಗಾವಿ ರೂಪಗೊಂಡಿತು. ಈಗಾಗಲೇ ಜರುಗಿದ ಅಖಿಲ ಭಾರತ ಕಾಂಗ್ರೆಸ್ ಸಮಾವೇಶದಿಂದ ಬೆಳಗಾವಿ ಕರ್ನಾಟಕದ ಪ್ರದೇಶವೆಂದು ನಿರ್ಧರಿತವಾಗಿತ್ತು. ಈ ಸಮಾವೇಶದ ಪ್ರಭಾವ ಕನ್ನಡಿಗರಲ್ಲಿ ಅಚ್ಚಳಿಯದೇ ಉಳಿದುಕೊಂಡಿತ್ತು. ಹೀಗಾಗಿ ಸ್ವಾತಂತ್ರ್ಯ ಹೋರಾಟದ ಜೊತೆಯಲ್ಲಿಯೇ ಏಕೀಕರಣ ಚಳುವಳಿ ಸಾಗಿತು. ಆದರೆ ಮರಾಠಿಗರು ಬೆಳಗಾವಿ ವಿಷಯದಲ್ಲಿ ತಕರಾರು ಎತ್ತಿದಾಗ ಸ್ವಾತಂತ್ರ್ಯ ಹೋರಾಟಕ್ಕಿಂತ ಕರ್ನಾಟಕ ಏಕೀಕರಣವು ಮುಖ್ಯವಾಗಿ ಆ ಮುಖಾಂತರ ಬೆಳಗಾವಿಯನ್ನು ಕರ್ನಾಟಕದಲ್ಲಿ ಉಳಿಸಿಕೊಳ್ಳುವುದು ಮುಖ್ಯವಾಗಿ ಬೆಳಗಾವಿ ಕನ್ನಡಿಗರಿಗೆ ತಲೆದೋರಿತು. ಹೀಗಾಗಿ ಕನ್ನಡ ಪರ ಚಟುವಟಿಕೆಗಳ ಕೇಂದ್ರ ನೆಲೆಯಾಗಿ ಬೆಳಗಾವಿ ರೂಪಗೊಳ್ಳತೊಡಗಿತು.

ಇಂತಹ ಸಂದರ್ಭದಲ್ಲಿ ಬೆಳಗಾವಿಯಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ ಮತ್ತೊಮ್ಮೆ ಜರುಗಿತು. ೧೯೩೯ ಡಿಸೆಂಬರ ೨೫ ರಿಂದ ೨೮ ರವರೆಗೆ ನಾಲ್ಕು ದಿನಗಳವರೆಗೆ ಬೆಳಗಾವಿಯಲ್ಲಿ ೨೪ನೆಯ ಅಖಿಲ ಕರ್ನಾಟಕ ಕನ್ನಡ ಸಹಿತ್ಯ ಸಮ್ಮೇಳನ ಜರುಗಿತು. ಇದು ದೇಶದ ಸ್ವಾತಂತ್ರ್ಯ ಪೂರ್ವದಲ್ಲಿ ಬೆಳಗಾವಿಯಲ್ಲಿ ಜರುಗಿದ ಮೂರನೆಯ ಅಧಿವೇಶನ ೧೯೨೫ ರಿಂದ ೧೯೩೯ ರವರೆಗಿನ ೧೪ ವರ್ಷಗಳ ಅವಧಿಯಲ್ಲಿ ಮೂರು ಸಮ್ಮೇಳನಗಳು ಬೆಳಗಾವಿಯಲ್ಲಿ ಜರುಗಿ ಐತಿಹಾಸಿಕ ಮಹತ್ವವನ್ನು ಪಡೆದುಕೊಂಡವು. ಈ ಸಮ್ಮೇಳನಗಳು ಜರುಗಿದ ಸಂದರ್ಭದಲ್ಲಿ ಯಾವುದೇ ವಿರೋಧಗಳು ಮರಾಠಿಗರಿಂದ ಬರಲಿಲ್ಲ. ಅಂದಿನ ಮರಾಠಿಗರಲ್ಲಿ ಬೆಳಗಾವಿಯು ಕನ್ನಡದ ಪ್ರದೇಶವೆಂಬ ಭಾವನೆಯೇ ಇತ್ತು. ಆದರೂ ರಾಜಕೀಯ ಉದ್ದೇಶಕ್ಕಾಗಿ ಕೆಲವು ಮರಾಠಿ ಮುಖಂಡರು ಏಕೀಕರಣ ವಿರೋಧಿ ಕಾರ್ಯಗಳಲ್ಲಿ ತೊಡಗಿದ್ದರು.

ಈ ಸಮ್ಮೇಳನಕ್ಕೆ ಸಿಂಹಗರ್ಜನೆಗೆ ಹೆಸರಾದ ಶ್ರೀ ಮುದವೀಡು ಕೃಷ್ಣರಾಯರು ಅಧ್ಯಕ್ಷರಾಗಿದ್ದರು. ಬೆಳಗಾವಿಯ ಹೃದಯ ಭಾಗದಲ್ಲಿದ್ದ ರೆಕ್ಸ್ ಟಾಕೀಜ (ಇಂದು ರೆಕ್ಸ್ ಸ್ಟೋರ್ಸ ಆಗಿದೆ) ನಲ್ಲಿ ನಾಲ್ಕು ದಿನಗಳವರೆಗೆ ಈ ಸಮ್ಮೇಳನ ಜರುಗಿತು. ಈ ಸಂದರ್ಭದಲ್ಲಿ ಮಾತನಾಡಿದ ಶ್ರೀ ಮುದವೀಡು ಕೃಷ್ಣರಾಯುರು ಮುಂದೆ ೧೯೪೧ ರಲ್ಲಿ ಬರುವ ಹೊಸ ಜನಗಣತಿಯಲ್ಲಿ ಗಡಿನಾಡಿನ ಕನ್ನಡಿಗರೆಲ್ಲರೂ 'ನಾವು ಕನ್ನಡಿಗರೇ' ಎಂದು ಬರೆಸಬೇಕೆಂದು ಕರೆಕೊಟ್ಟರು. "ಹಿಂದೂಸ್ಥಾನದಲ್ಲೆಲ್ಲ ಭಾಷಾನುರೋಧವಾದ ಪುನರ್ಘಟನೆಯಾಗುವ ಪ್ರಸಂಗವು ಬೇಗನೆ ಬರಲಿದೆ. ಆಗ ನಮ್ಮ ಗಡಿ ಸೀಮೆಗಳು ಸರಕಾರೀ ಅಂಕಿ-ಸಂಖ್ಯೆಗಳ ಕೃತ್ರಿಮತೆಯ ಕಪಟ ಜಾಲದಿಂದ ಅನ್ಯಾಕ್ರಾಂತವಾಗದಂತೆ ಈಗಿನಿಂದ ನೋಡಿಕೊಳ್ಳುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ನಮ್ಮ ತಾಯಿ ನುಡಿ ಕನ್ನಡ ಎಂದು ಅಸಂದಿಗ್ಧವಾಗಿ, ಸ್ಪಷ್ಟವಾಗಿ ಹೇಳುವುದಕ್ಕೆ ಸಿದ್ಧರಾಗುವ ಮಟ್ಟಿಗಾದರೂ ಅಲ್ಲಲ್ಲಿಯ ಕನ್ನಡಿಗರಲ್ಲಿ ಆತ್ಮ ಜ್ಞಾನೋದಯವಾಗುವಂತೆ ವಿಶ್ವ ಪ್ರಯತ್ನ ಮಾಡೋಣ...." ಎಂದು ಕನ್ನಡಿಗರನ್ನು ಎಚ್ಚರಿಸಿದರು.[೪೯] ಅವರ ಈ ಭಾಷಣದಿಂದ ರಾಜ್ಯ ಮಟ್ಟದ ಜಾಗೃತಿ ಉಂಟಾಯಿತು. ಸಮಸ್ತ ಕರ್ನಾಟಕದ ಅಭ್ಯುದಯವನ್ನು ಇಟ್ಟುಕೊಂಡು ಅವರು ಮಾಡಿದ ಭಾಷಣದಿಂದ ಬೆಳಗಾವಿಯ ಕನ್ನಡಿಗರಲ್ಲಿ ತಾವು ಕನ್ನಡಿಗರೆನ್ನುವ ಅಭಿಮಾನ ಮೂಡಿ ಬಂದಿತು.

ಈ ಸಮ್ಮೇಳನಕ್ಕೆ ನಾಡಿನ ಪ್ರಮುಖ ಸಾಹಿತಿಗಳೆಲ್ಲಾ ಆಗಮಿಸಿದ್ದು ವಿಶೇಷವಾಗಿತ್ತು. ಬಿ. ಎಂ. ಶ್ರೀಕಂಠಯ್ಯ, ತೀ.ನಂ.ಶ್ರೀಕಂಠಯ್ಯ, ಟಿ.ಪಿ. ಕೈಲಾಸಂ, ಮಾಸ್ತಿ, ವಿ.ಸೀ., ಸಿ. ಕೆ. ವೆಂಕಟರಾಮಯ್ಯ, ಶ್ರೀರಂಗ, ದ.ರಾ.ಬೇಂದ್ರೆ ಮೊದಲಾದವರೆಲ್ಲಾ ಪಾಲ್ಗೊಂಡು ಸಮ್ಮೇಳನವನ್ನು ಯಶಸ್ವಿಗೊಳಿಸಿದರು.

ಬೆಳಗಾವಿಯಲ್ಲಿ ನಡೆದ ಕರ್ನಾಟಕ ಏಕೀಕರಣ ಚಳುವಳಿಯಲ್ಲಿ ಹಲವಾರು ಸಂಘ ಸಂಸ್ಥೆಗಳು ಪತ್ರಿಕೆಗಳು ಪ್ರಮುಖವಾದ ಪಾತ್ರವನ್ನು ವಹಿಸಿವೆ. ಇವು ಬೆಳಗಾವಿಯಲ್ಲಿ ಕನ್ನಡ ವಾತಾವರಣವನ್ನು ನಿರ್ಮಿಸಲು ಹಲವಾರು ಕಾರ್ಯಯೋಜನೆಗಳನ್ನು, ಹೋರಾಟಗಳನ್ನು, ವಿಶೇಷ ಉಪನ್ಯಾಸಗಳನ್ನು ಏರ್ಪಡಿಸಿ ಕನ್ನಡಿಗರನ್ನು ಸಂಘಟಿಸಿ

ಹೋರಾಟಕ್ಕೆ ಸಿದ್ಧಗೊಳಿಸಲು ಸಹಾಯಕವಾದವು. ಸಾಹಿತ್ಯಿಕ, ಸಾಂಸ್ಕೃತಿಕ, ಶೈಕ್ಷಣಿಕ ಹಾಗೂ ಧಾರ್ಮಿಕ ಸಂಸ್ಥೆಗಳು ತಮ್ಮದೇ ಆದ ಹಾದಿಯಲ್ಲಿ ಕನ್ನಡ ಕಟ್ಟುವ ಕೆಲಸವನ್ನು ಮಾಡಿದವು. ಇವುಗಳಲ್ಲಿ ಪ್ರಮುಖವಾದವುಗಳೆಂದರೆ ಕರ್ನಾಟಕ ಸಂಘ ನಾಡಹಬ್ಬ ಉತ್ಸವ ಸಮಿತಿ, ಕೆ. ಎಲ್. ಇ. ಸಂಸ್ಥೆ, ನಾಗನೂರು ರುದ್ರಾಕ್ಷಿಮಠ, ಅಲ್ಲದೆ ಹಲವಾರು ಪತ್ರಿಕೆಗಳು ಹೋರಾಟದಲ್ಲಿ ನೇರವಾಗಿ ಬಾಗಿಯಾಗಿ, ಹೋರಾಟಗಾರರಿಗೆ ಸ್ಫೂರ್ತಿಯಾಗಿ ಬೆಂಬಲವಾಗಿ ನಿಂತು ಬೆಳಗಾವಿಯಲ್ಲಿ ಕನ್ನಡ ಏಕೀಕರಣ ಚಳುವಳಿಯನ್ನು ಯಶಸ್ವಿಗೊಳಿಸಲು ನೆರವಾದವು.

೧೯೧೫ ರಲ್ಲಿ ಬೆಳಗಾವಿಯಲ್ಲಿ ಸ್ಥಾಪನೆಗೊಂಡ 'ಕರ್ನಾಟಕ ಸಂಘ'ವು ಹೆಸರುವಾಸಿಯಾದ ಕನ್ನಡ ಪರ ಸಂಘಟನೆ. ಬೆಳಗಾವಿಯ ಡಾ. ಸವಣೂರು ಹಣಮಂತರಾಯರು ಇದರ ಸಂಸ್ಥಾಪಕರು. ಈ ಸಂಘದ ಸ್ಥಾಪನೆಯಲ್ಲಿ ಶ್ರೀ ಹಾರನಹಳ್ಳಿ ರಾಮಸ್ವಾಮಿ, ಶ್ರೀ ಗೆಜ್ಜಿ, ಹುಯಿಲಗೋಳ, ಶ್ರೀ ಲೋಕೂರ ಮುಂತಾದವರು ಭಾಗಿಯಾದರು. ಕರ್ನಾಟಕ ಸಂಘವು ಬೆಳಗಾವಿ ಕನ್ನಡಿಗರಲ್ಲಿ ಕನ್ನಡ ನಾಡು ನುಡಿ, ಸಾಹಿತ್ಯ ಸಂಸ್ಕೃತಿಯ ಬಗೆಗೆ ಅಭಿಮಾನವನ್ನು ಮೂಡಿಸಿತು. ಕನ್ನಡಿಗರಿಗೆ ಸ್ಫೂರ್ತಿಯಾಗಿ ಕರ್ನಾಟಕ ಸಂಘವು ಹಲವಾರು ಮಹತ್ವದ ಕಾರ್ಯಚಟುವಟಿಕೆಗಳನ್ನು ಬೆಳಗಾವಿಯಲ್ಲಿ ಆರಂಭಿಸಿತು. ಬೆಳಗಾವಿಯಲ್ಲಿ ವಾಚನಾಲಯವೊಂದನ್ನು ತೆರೆದು ಜನರಲ್ಲಿ ವಾಚನದ ರುಚಿ ಹೆಚ್ಚಿಸುವ ಕಾರ್ಯವನ್ನು ಕರ್ನಾಟಕ ಸಂಘದ ಮೂಲಕ ಮಾಡಲಾಯಿತು. ಕನ್ನಡ ಚಳುವಳಿಯ ಹೋರಾಟದಲ್ಲಿ ಈ ಸಾರ್ವಜನಿಕ ವಾಚನಾಲಯವು ಮಹತ್ವದ ಪಾತ್ರವಾಡಿದೆ. ವಾಚನಾಲಯದ ಮೂಲಕ ಕನ್ನಡ ವಾತಾವರಣವನ್ನು ಬೆಳೆಸಲಾಯಿತು. ವಾಚನಾಲಯದಲ್ಲಿ ಕನ್ನಡ ಪುಸ್ತಕಗಳನ್ನು, ಪತ್ರಿಕೆಗಳನ್ನು ತರಿಸಿ ಕನ್ನಡ ಓದುಗ ವರ್ಗವನ್ನು ಬೆಳೆಸಿ ಅದರ ಮೂಲಕ ಕನ್ನಡಾಭಿಮಾನವನ್ನು ಉಂಟುಮಾಡಿತು. ಡಾ. ಸವಣೂರ ಹಣಮಂತರಾಯ ಶ್ರೀ ಅರವಿಂದ ಜೋಶಿ, ಶ್ರೀ ಮುತಾಲಿಕ ವೆಂಕಟರಾವ್, ಶ್ರೀ ಆರ್. ಕೆ. ಕುಲಕರ್ಣಿ, ಶ್ರೀ ಸಾತ್ವಿಕ ವಕೀಲರು, ಶ್ರೀ ಕೃಷ್ಣರಾವ ಜೋಶಿ, ಶ್ರೀ ಅಡ್ಡಣಗಿ ವಕೀಲರು ಮುಂತಾದವರು ಈ ವಾಚನಾಲಯದ ಏಳಿಗೆಗಾಗಿ ದುಡಿದರು. ಇವರೆಲ್ಲರ ಪ್ರಯತ್ನದಿಂದ ಬೆಳಗಾವಿಯಲ್ಲಿ ಕನ್ನಡದ ವಾತಾವರಣ ಬೆಳೆಯಿತು.

೧೯೧೬ರಲ್ಲಿ ಆಂಗ್ಲೊ ವ್ಹರ್ನಾಕ್ಯುಲರ ಶಾಲೆಯೊಂದನ್ನು ಸ್ಥಾಪಿಸುವ ಮೂಲಕ ಶಿಕ್ಷಣ ದಾಸೋಹವನ್ನು ಪ್ರಾರಂಭಿಸಿದ ಕರ್ನಾಟಕದ ಲಿಂಗಾಯತ ಎಜ್ಯುಕೇಶನ್ ಸೊಸೈಟಿಯು ತನ್ಮೂಲಕ ಶಿಕ್ಷಣದ ಪ್ರಸಾರದ ಜೊತೆಗೆ ಬೆಳಗಾವಿಯಲ್ಲಿ ಕನ್ನಡದ ಜೀವಂತಿಕೆಗೆ ನಿರಂತರ ಶ್ರಮಿಸುತ್ತಿದೆ. ಕನ್ನಡ ಕಟ್ಟುವ ಕೆಲಸದ ಜೊತೆಗೆ ರಾಷ್ಟ್ರ ಕಟ್ಟುವ ಕೆಲಸವನ್ನು ಕೆ.ಎಲ್.ಇ. ಸಂಸ್ಥೆ ಮಾಡುತ್ತಿದೆ. ಈ ಸಂಸ್ಥೆಯ ಸಂಸ್ಥಾಪಕರ ಧೀರೋದಾತ್ತ ನಿಲುವುಗಳು ಹಾಗೂ ಅವಿಶ್ರಾಂತ ಪರಿಶ್ರಮಗಳು ಕನ್ನಡಕ್ಕೆ ಶಕ್ತಿ ತುಂಬಿದವು. ಶಿಕ್ಷಣದಿಂದ ವಂಚಿತರಾಗಿದ್ದ ಉತ್ತರಕರ್ನಾಟಕ ಭಾಗದ ಉತ್ಸಾಹಿಯುವಕರಾದ ಶಿ.ಶಿ.ಬಸವನಾಳ, ಎಂ. ಆರ್. ಸಾಖರೆ, ಪಂಡಿತಪ್ಪ ಚಿಕ್ಕೋಡಿ, ಸರದಾರ ವೀರನಗೌಡರು, ಬಿ. ಬಿ. ಮಮದಾಪುರ, ಬಿ. ಎಸ್. ಹಂಚಿನಾಳ, ಎಚ್. ಎಫ್. ಕಟ್ಟಿಮನಿಯವರು ಸ್ನಾತಕೋತ್ತರ ಪದವಿಗಾಗಿ

ಪುಣೆ, ಮುಂಬಯಿ ಕೊಲ್ಲಾಪುರದಲ್ಲಿ ಶಿಕ್ಷಣ ಪಡೆದು ಬೆಳಗಾವಿಗೆ ಬಂದು ಕೆ. ಎಲ್.ಇ. ಸಂಸ್ಥೆಯನ್ನು ಕಟ್ಟುವುದರ ಮೂಲಕ ಮೂಲಕ ಕನ್ನಡ ಪುನರುತ್ಥಾನಕ್ಕೆ ದಿಟ್ಟ ನಿರ್ಧಾರ ಕೈಕೊಂಡರು. ಬೆಳಗಾವಿಯಲ್ಲಿ ಕನ್ನಡ ಮಾತನಾಡಲು ಹಿಂಜರಿಯುತ್ತಿದ್ದ ಕಾಲದಲ್ಲಿ ಕೆ.ಎಲ್.ಇ. ಸಂಸ್ಥೆಯ ಶಾಲೆ ಕಾಲೇಜುಗಳ ಹಲವು ಶಿಕ್ಷಕರು ಜನಮನದಲ್ಲಿ ಕನ್ನಡದ ಬಗೆಗೆ ತೀವ್ರ ಆಸಕ್ತಿ ಅಭಿಮಾನಗಳನ್ನು ತುಂಬುವ ಕೆಲಸ ಮಾಡಿದರು. ಅದಕ್ಕೆ ಪೂರಕವಾದ ಸಭೆ, ಸಮಾರಂಭ, ಸಮ್ಮೇಳನಗಳನ್ನು ಸಂಘಟಿಸಿ ಕನ್ನಡ ಭಾಷಿಕರನ್ನು ಒಂದೆಡೆಗೆ ಸೇರಿಸಿ ಅವರಲ್ಲಿ ಕನ್ನಡಪರ ಭಾವನೆಗಳನ್ನು ಉದ್ದೀಪನಗೊಳಿಸಿದರು.

೧೯೩೩ ರಲ್ಲಿ ಬೆಳಗಾವಿಯಲ್ಲಿ ಲಿಂಗರಾಜ ಮಹಾವಿದ್ಯಾಲಯ ಸ್ಥಾಪನೆಗೊಂಡು ಉತ್ತರ ಕರ್ನಾಟಕದ ಪದವಿ ಶಿಕ್ಷಣಕ್ಕೆ ಮಹತ್ವದ ಕೊಡುಗೆಯನ್ನು ನೀಡಿತು. ಜೊತೆಗೆ ಕನ್ನಡ ಭಾಷೆ, ಸಾಹಿತ್ಯ ಸಂಸ್ಕೃತಿಯನ್ನು ಬೆಳೆಸಿಕೊಂಡು ಬರಲು ಲಿಂಗರಾಜ ಮಹಾವಿದ್ಯಾಲಯ ಮಹತ್ವದ ಕೊಡುಗೆಯನ್ನು ನೀಡಿತು. ಈ ಮಹಾವಿದ್ಯಾಲಯದ ಸ್ಥಾಪನೆಯಿಂದಾಗಿ ಬೆಳಗಾವಿಯ ಕನ್ನಡ ಹೋರಾಟಕ್ಕೆ ಶಕ್ತಿ ಒದಗಿಬಂದಿತು. ಬೇರೆ ಬೇರೆ ಊರುಗಳಿಂದ ಶಿಕ್ಷಣ ಪಡೆಯಲು ಬಂದ ವಿದ್ಯಾರ್ಥಿಗಳು ಇಲ್ಲಿಯ ಹೋರಾಟಗಳಲ್ಲಿ ಪಾಲ್ಗೊಂಡರು. ಅಲ್ಲದೆ ನಾಡಿನ ಪ್ರಸಿದ್ಧ ಸಾಹಿತಿಗಳು ಮಹಾವಿದ್ಯಾಲಯಕ್ಕೆ ಆಗಮಿಸಿ ಕನ್ನಡ ಜಾಗೃತಿಯನ್ನುಂಟು ಲಮಾಡುತ್ತಿದ್ದರು. ಇದರಿಂದ ನಿರಂತರ ಕನ್ನಡ ಕಾರ್ಯ ಚಟುವಟಿಕೆಗಳು ನಡೆದು ಕನ್ನಡ ವಾತಾವರಣ ನಿರ್ಮಾಣವಾಗಲು ಕಾರಣವಾಯಿತು. ಯುವಜನಾಂಗದಲ್ಲಿ ಕರ್ನಾಟಕ ಏಕೀಕರಣದ ಅರಿವು ಮೂಡತೊಡಗಿತು. ಬೆಳಗಾವಿಯಲ್ಲಿ ಕನ್ನಡಿಗರ ಸಂಖ್ಯೆ ಹೆಚ್ಚಾಗತೊಡಗಿ ಕನ್ನಡ ಸಂಸ್ಕೃತಿ ನಿರ್ಮಾಣಗೊಳ್ಳತೊಡಗಿತು. ಹೀಗೆ ಶಿಕ್ಷಣದ ಜೊತೆ ಜೊತೆಗೆ ಭಾಷೆ ಸಾಹಿತ್ಯ ನಾಡು, ಸಂಸ್ಕೃತಿಯ ವಿಕಾಸವಾಗತೊಡಗಿತು. ಜಯಂತಿ, ಉತ್ಸವ, ಆಚರಣೆಗಳು, ಜರುಗತೊಡಗಿದವು ಲಿಂಗರಾಜರ ಜಯಂತಿಯನ್ನು ಅತ್ಯಂತ ವಿಜ್ರಂಭಣೆಯಿಂದ ಮೆರವಣಿಗೆಯ ಮೂಲಕ ಆಚರಿಸಲಾಗುತ್ತಿತ್ತು. ಜಿ. ಎ. ಹಾಯಸ್ಕೂಲ, ಲಿಂಗರಾಜ ಮಹಾವಿದ್ಯಾಲಯದ ವಿದ್ಯಾರ್ಥಿಗಳು, ಶಿಕ್ಷಕರು ಈ ಮೆರವಣಿಗೆಯಲ್ಲಿ ಪಾಲ್ಗೊಂಡು ಕನ್ನಡ ಜೈಕಾರಗಳಿಂದ ಬೆಳಗಾವಿಯಲ್ಲಿ ಕನ್ನಡ ವಾತಾವರಣ ನಿರ್ಮಾಣಗೊಳ್ಳುವಂತೆ ಮಾಡಿದರು. ಇದರಿಂದ ಬೆಳಗಾವಿ ಕನ್ನಡಿಗರಿಗೆ ಆತ್ಮಸ್ಥೈರ್ಯ ಒದಗಿತು. ಮರಾಠಿಯ ಭಯಭೀತ ವಾತಾವರಣದಲ್ಲಿ ಬದುಕುತ್ತಿದ್ದ ಬೆಳಗಾವಿ ಕನ್ನಡಿಗರಿಗೆ ಲಿಂಗರಾಜ ಮಹಾವಿದ್ಯಾಲಯ ಧೈರ್ಯ ಒದಗಿಸಿತು.

ಬೆಳಗಾವಿಯಲ್ಲಿ ಕನ್ನಡ ಜಾಗೃತಿಯನ್ನುಂಟು ಮಾಡಿ, ಕನ್ನಡಿಗರಲ್ಲಿ ಸಂಘಟನಾ ಶಕ್ತಿಯನ್ನು ತುಂಬಿದ ಮತ್ತೊಂದು ಮಹತ್ವದ ಸಂಘವೆಂದರೆ ನಾಡಹಬ್ಬ ಉತ್ಸವ ಸಮಿತಿ. ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ನಡೆಯುತ್ತಿದ್ದ ನಾಡಹಬ್ಬವು ವಿಜಯನಗರ ಅರಸರ ಕಾಲದಲ್ಲಿ ಪ್ರಾರಂಭಗೊಂಡಿತ್ತು. ನವರಾತ್ರಿಯ ಸಮಯದಲ್ಲಿ (೯ ದಿನಗಳ ಕಾಲ) ಕಾವ್ಯ ಗೋಷ್ಠಿ, ಪಾಂಡಿತ್ಯ ಪೂರ್ಣ ವಿಷಯಗಳ ಚರ್ಚೆ, ಸಂಗೀತಸುಧೆ, ಕುಸ್ತಿ ಹೀಗೆ

ಹಲವಾರು ಕಾರ್ಯಕ್ರಮಗಳನ್ನು ಏರ್ಪಡಿಸುತ್ತಾ ಕೊನೆಯ ದಿನ ಸಾರ್ವಜನಿಕರೊಂದಿಗೆ ಬನ್ನಿಯ ದಿಬ್ಬಕ್ಕೆ ಬಂದು ಸೀಮೋಲ್ಲಂಘನೆ ಮಾಡುತ್ತಿದ್ದರು.

೧೯೨೭ ರಲ್ಲಿ ವಿದ್ಯಾರಣ್ಯರ ಉತ್ಸವ (ನಾಡಹಬ್ಬ)ವನ್ನು ಆಲೂರು ವೆಂಕಟರಾಯರ ಮಹದಾಶೆಯಂತೆ ಮುದವೀಡು ಕೃಷ್ಣರಾಯರು ಕಡಪಾ ರಾಘವೇಂದ್ರರಾಯರು ಸೇರಿ ಬೆಳಗಾವಿಯ ತರುಣರಾದ ಶ್ರೀ ಅನಂತರಾವ ಚಿಕ್ಕೋಡಿ ಹಾಗೂ ಶಿವಲಿಂಗ ದೇಸಾಯಿ ರುದ್ರಾಪುರ ಇವರ ಸಹಕಾರದೊಂದಿಗೆ ಬೆಳಗಾವಿಯಲ್ಲಿ ಪ್ರಾರಂಭಿಸಿದರು. ಬೆಳಗಾವಿಯ ಕನ್ನಡಿಗರೆಲ್ಲ ಈ ಉತ್ಸವದಲ್ಲಿ ಅತ್ಯಂತ ಉತ್ಸಾಹದಿಂದ ಭಾಗವಹಿಸುತ್ತಿದ್ದರು. ಕೆಲವು ವರ್ಷ ಬೆಳಗಾವಿಯ ಕರ್ನಾಟಕ ಸಂಘವು ಶ್ರದ್ಧೆಯಿಂದ ನಾಡಹಬ್ಬ ಉತ್ಸವವನ್ನು ನೆರವೇರಿಸಿಕೊಂಡು ಬಂದಿತು. ನಾಡಿನ ಪ್ರಸಿದ್ಧ ಸಾಹಿತಿಗಳು, ಹೋರಾಟಗಾರರು, ಚಿಂತಕರು ಈ ಉತ್ಸವದಲ್ಲಿ ಭಾಗವಹಿಸಿ ಉಪನ್ಯಾಸಗಳನ್ನು ನೀಡುತ್ತಿದ್ದರು. ಈ ಮೊದಲು ಈ ಕಾರ್ಯಕ್ರಮಗಳು ಗಣಪತಿಗಲ್ಲಿಯ ಮರಾಠಿ ಶಾಲೆಯಲ್ಲಿ ಜರುಗುತ್ತಿದ್ದವು. ರುದ್ರಾಪುರದ ಶಿವಲಿಂಗ ದೇಸಾಯಿಯವರು ಕಾರ್ಯಕ್ರಮದ ಖರ್ಚು ವೆಚ್ಚಗಳ ಜವಾಬ್ದಾರಿಯನ್ನು ವಹಿಸಿಕೊಳ್ಳುತ್ತಿದ್ದರು. ಅನಂತರಾವ ಚಿಕ್ಕೋಡಿ, ಪ್ಯಾಟಿ ಶಾಮರಾಯರು, ಅಡ್ಡಣಗಿ ವಕೀಲರು, ಮುಂತಾದವರು ಮುಂದಾಳತ್ವವನ್ನು ವಹಿಸಿ ಕಾರ್ಯಕ್ರಮಗಳನ್ನು ನೆರವೇರಿಸುತ್ತಿದ್ದರು. ಕನ್ನಡಿಗರ ಈ ಕಾರ್ಯಕ್ರಮಗಳಿಗೆ ಮರಾಠಿಗರ ವಿರೋಧ ವ್ಯಕ್ತವಾಗುತ್ತಿತ್ತು. ಕಾರ್ಯಕ್ರಮಗಳು ಜರುಗಿದಾಗ ಕಿರುಕುಳವನ್ನು ನೀಡುತ್ತಿದ್ದರು. ಕನ್ನಡಿಗರಿಗೆ ಚೂರಿ ಹಾಕುವ ಘಟನೆಯೂ ನಡೆದುದ್ದನ್ನು ಕಾಣಬಹುದು. ಶಿ.ಶಿ.ಬಸವನಾಳರು ನಾಡಹಬ್ಬ ಉತ್ಸವ ಸಮಿತಿಯವರು ಏರ್ಪಡಿಸಿದ್ದ ಉಪನ್ಯಾಸ ಕಾರ್ಯಕ್ರಮದಲ್ಲಿ ಭಾಷಣ ಮಾಡುವಾಗ ಶಿವಾಜಿ ಜನನದ ಬಗ್ಗೆ ಸಂಶೋಧನ ಪೂರ್ಣ ಹೇಳಿಕೆ ನೀಡಿದಾಗ ಕೋಪಗೊಂಡ ಮರಾಠಿಗರು ಬಸವನಾಳರಿಗೆ ಚೂರಿ ಹಾಕಿದರು. ಬಸವನಾಳರಿಗೆ ಯಾವುದೇ ಪ್ರಾಣಾಪಾಯವಾಗದೆ ಪಾರಾದರು.[೫೦]

ಮುಂದೆ ಈ ಕಾರ್ಯಕ್ರಮಗಳು ಲಿಂಗರಾಜ ಕಾಲೇಜಿನಲ್ಲಿ ಕೆಲವು ವರ್ಷಗಳವರೆಗೆ, ಮತ್ತು ಬೆನನ್ ಸ್ಮಿಥ್ ಹೈಸ್ಕೂಲಿನಲ್ಲಿ ಕೆಲವು ವರ್ಷ ವಿಜ್ರಂಭಣೆಯಿಂದ ನಡೆಯುತ್ತ ಬಂದವು. ನಾಡಹಬ್ಬ ಕಾರ್ಯಕ್ರಮಗಳಿಗೆ ಮರಾಠಿಗರ ತೊಂದರೆ ಹೆಚ್ಚಾದಂತೆ ಕನ್ನಡಿಗರ ಸಂಘಟನೆ ಬಲವಾಗತೊಡಗಿತು. ಲಿಂಗರಾಜ ಕಾಲೇಜಿನ ವಿದ್ಯಾರ್ಥಿಗಳು, ನಾಗನೂರು ರುದ್ರಾಕ್ಷಿಮಠದ ಪ್ರಸಾದ ನಿಲಯದ ವಿದ್ಯಾರ್ಥಿಗಳು, ಕರ್ನಾಟಕ ಸಂಘ, ನಾಡಹಬ್ಬ ಉತ್ಸವ ಸಮಿತಿ ಹೀಗೆ ಹಲವಾರು ಸಂಘಟನೆಗಳು ಒಂದಾಗಿ ಬೆಳಗಾವಿಯಲ್ಲಿ ಕನ್ನಡತನವನ್ನು ಗಟ್ಟಿಗೊಳಿಸುತ್ತಾ ಸಾಗಿದರು. ಮರಾಠಿಗರು ಮಂಟಪಗಳನ್ನು ಸುಟ್ಟರೆ ಕನ್ನಡಿಗರು ಕಾವಲಾಗಿ ಕುಳಿತುಕೊಳ್ಳುತ್ತಿದ್ದರು. ನಾಡಹಬ್ಬ ಉತ್ಸವ ಮುಂದೆ ಮಾರುತಿಗಲ್ಲಿಯ ನಾಗನೂರು ರುದ್ರಾಕ್ಷಿಮಠದಲ್ಲಿ ಜರುಗತೊಡಗಿತು. ಇದಕ್ಕೆ ಪೂಜ್ಯ ಶಿವಬಸವ ಮಹಾಸ್ವಾಮಿಗಳು ಬೆಂಬಲವಾಗಿ ನಿಂತರು. ಅವರ ಸಾನಿಧ್ಯದಲ್ಲಿ ಮಹತ್ವದ ಬೆಳವಣಿಗೆಯನ್ನು ನಾಡಹಬ್ಬ ಉತ್ಸವ ಸಮಿತಿ ಹೊಂದಿತು. ಬೆಳಗಾವಿಯಲ್ಲಿ ಕನ್ನಡ ಜಾಗೃತಿಯು ಕ್ರಮೇಣ ಹೆಚ್ಚಾಗತೊಡಗಿತು.

೧೯೪೦-೫೦ ರ ದಶಕವು ಅತ್ಯಂತ ರೋಮಾಂಚಕಾರಿ ಘಟನಾವಳಿಗಳ ಅವಧಿಯಾಗಿತ್ತು. ಸ್ವಾತಂತ್ರ್ಯ ಹೋರಾಟಕ್ಕೆ ತೀಕ್ಷ್ಣ ಸ್ವರೂಪ ಮೂಡಿ ಬಂದಿತ್ತು. ಮಾಡು ಇಲ್ಲವೆ ಮಡಿ ಎಂಬ ಪ್ರತಿಜ್ಞೆಯಿಂದಾಗಿ ಬೆಳಗಾವಿಯ ಸ್ವಾತಂತ್ರ್ಯ ಹೋರಾಟಗಾರರೆಲ್ಲರೂ ತಮ್ಮ ಶಕ್ತಿಯನ್ನು ರಾಷ್ಟ್ರೀಯ ಚಳುವಳಿಗೆ ಮೀಸಲಿಟ್ಟರು. ಅಣ್ಣಾಗುರೂಜಿ, ಓಂಕಾರಸ್ವಾಮಿ, ಜಯದೇವರಾವ ಕುಲಕರ್ಣಿ, ಚೆನ್ನಪ್ಪ ವಾಲಿ, ಪಾರಿಶಪ್ಪ ಶೇರಿ, ಶ್ರೀರಂಗ ಕಾಮತ ಮುಂತಾದವರೆಲ್ಲ ಈ ಚಳುವಳಿಯಲ್ಲಿ ನಿರತರಾದರು. ಆರ್ ಎಚ್. ಕುಲಕರ್ಣಿ, ಸುಶೀಲಾಬಾಯಿ ಕುಲಕರ್ಣಿ, ಶ್ರೀಕೃಷ್ಣ ಪಾಟೀಲ ಮೊದಲಾದವರು ಈ ರಾಷ್ಟ್ರೀಯ ಚಳುವಳಿಯ ಭಾಗವಾಗಿದ್ದ ಪ್ರಭಾತಫೇರಿಗಳಲ್ಲಿ ಕನ್ನಡ ಗೀತೆಗಳ ಮೇಳಾ ಅವತರಿಸುವಂತೆ ಯತ್ನಿಸಿದರು.

ಈ ಸಂದರ್ಭದಲ್ಲಿ ಬೆಳಗಾವಿಯಲ್ಲಿ ರಾಷ್ಟ್ರಮಟ್ಟದ ನಾಯಕರು ಬಂದು ಭಾಷಣ ಉಪನ್ಯಾಸಗಳನ್ನು ನೀಡುವುದು ಹೆಚ್ಚಿತು. ಬಹುತೇಕ ಭಾಷಣಗಳು ಇಂಗ್ಲಿಷ ಅಥವಾ ಹಿಂದಿಯಲ್ಲಿ ಇರುತ್ತಿದ್ದವು. ಅವುಗಳ ಅನುವಾದ ಮರಾಠಿಯಲ್ಲಿಯೇ ಹೆಚ್ಚಾಗಿ ನಡೆಯುತ್ತಿತ್ತು. ಆಗ ವಿರೋಧಗಳೂ ಕನ್ನಡ ಮುಖಂಡರಿಂದ ಉಂಟಾಗುತ್ತಿದ್ದವು. ಜೋಶಿ ಬಂಧುಗಳು ವೆಂಕಣ್ಣ ಗಲಗಲಿ, ಆರ್ ಎಚ್. ಕುಲಕರ್ಣಿ, ಹಾರ್ನಹಳ್ಳಿ ರಾಮಸ್ವಾಮಿ, ಡಾ. ಪಾಟೀಲ ಪುಟ್ಟಪ್ಪ ಮೊದಲಾದವರು ಕನ್ನಡ ಕನ್ನಡ ಎಂದು ಕೂಗೆಬ್ಬಿಸುತ್ತಿದ್ದರು. 'ನಾಡನರಿ ಸಂಘ', 'ತುಂಡರ ತಂಡ' 'ಝುಪಡಾ ಕಂಪು' ಮುಂತಾದ ಸಂಘಟನೆಗಳು ಇವರಿಗೆ ಬೆಂಬಲವಾಗಿ ನಿಂತವು. ಒಮ್ಮೆ ರಾಜಗೋಪಾಲಚಾರಿಯವರು ಭಾಷಣ ಮಾಡುವಾಗ ಇಂಥ ಪ್ರಸಂಗದಲ್ಲಿ ಇದು ಕರ್ನಾಟಕದ ಪ್ರದೇಶ. ನನ್ನ ಭಾಷಣವನ್ನು ಮೊದಲು ಕನ್ನಡದಲ್ಲಿ ಹಾಗೂ ನಂತರ ಮರಾಠಿಯಲ್ಲಿ ಅನುವಾದಿಸುವುದು ಯೋಗ್ಯ ಎಂದು ಹೇಳಿದರು. ಈ ಸಂದರ್ಭದಲ್ಲಿ ಅನಂತರಾವ್ ಚಿಕ್ಕೋಡಿಯವರು ಎರಡೂ ಭಾಷೆಯಲ್ಲಿ ಏಕಕಾಲಕ್ಕೆ ಅನುವಾದಿಸಿದರು.[೫೧]

ಮಹಾರಾಷ್ಟ್ರದ ಧುರೀಣರಾದ ಶ್ರೀ ಬಿ.ಜಿ. ಖೇರರವರು ಬೆಳಗಾವಿಗೆ ಬಂದಾಗಲೂ ಇಂತಹದೇ ಘಟನೆ ಜರುಗಿತು. ಶ್ರೀ ಗಂಗಾಧರರಾವ್ ದೇಶಪಾಂಡೆಯವರ ಅಧ್ಯಕ್ಷತೆಯಲ್ಲಿ ಬಹಿರಂಗ ಸಭೆ ನಡೆದಾಗ ಗಂಗಾಧರರಾಯರು ಮರಾಠಿಯಲ್ಲಿಯೇ ಭಾಷಣ ಪ್ರಾರಂಭಿಸಿದರು. ಜನರೆಲ್ಲ ಕೂಗಾಡತೊಡಗಿದರು ಆದರೆ ಅವರು ಮರಾಠಿಯಲ್ಲಿಯೇ ಮುಂದುವರಿಸಿದರು. ಇದಾದ ನಂತರ ಶ್ರೀ ಖೇರರೂ ಮರಾಠಿಯಲ್ಲಿಯೇ ಭಾಷಣ ಪ್ರಾರಂಭಿಸಿದಾಗ ಗದ್ದಲ ಪ್ರಾರಂಭವಾಯಿತು. ಆಗ ಖೇರರು ಪರಿಸ್ಥಿತಿಯನ್ನು ಅರ್ಥೈಸಿಕೊಂಡು ಹಿಂದಿಯಲ್ಲಿ ಮಾತನಾಡಿದರು. ಕನ್ನಡದಲ್ಲಿ ಭಾಷಾಂತರವಾಯಿತು. ೧೯೪೭ ರಲ್ಲಿ ದೇಶ ಸ್ವಾತಂತ್ರ್ಯವನ್ನು ಹೊಂದಿದ ಮೇಲೆ ಬೆಳಗಾವಿಯ ಮುಖಂಡರಲ್ಲಿ ಎರಡು ತಂಡಗಳಾದವು. ಕನ್ನಡ ಪರವಾದ ಮುಖಂಡರು ಏಕೀಕರಣ ಹೋರಾಟದಲ್ಲಿ ತೊಡಗಿದರು. ಈಗ ಅವರಿಗಿದ್ದ ಹೋರಾಟವೆಂದರೆ ಏಕೀಕರಣವೊಂದೇ ಆಗಿತ್ತು. ಸ್ವಾತಂತ್ರ್ಯ ಹೋರಾಟದ ಕಾವಿನಲ್ಲಿಯೇ ಏಕೀಕರಣ ಚಳುವಳಿ ನಿರಂತರವಾಗಿ ನಡೆಯಿತು.

೧೯೫೩ ರಲ್ಲಿ ಫಜಲ್ ಅಲಿ ಆಯೋಗ (ರಾಜ್ಯ ಪುನರ್ವಿಂಗಡಣಾ ಆಯೋಗ) ರಚನೆಗೊಂಡಿತು. ಈ ಸಮಿತಿಯು ಜನಾಭಿಪ್ರಾಯಕ್ಕೆ ಮುಖ್ಯವಾಗಿ ಮತ್ತು ಕೆಲವು ಸಂದರ್ಭಗಳಲ್ಲಿ ರಾಜ್ಯ ಸರ್ಕಾರಗಳ ಅಭಿಪ್ರಾಯಕ್ಕೆ ಮಾನ್ಯತೆ ನೀಡಿ ರಾಜ್ಯಗಳ ಪುನರ್ವಿಂಗಡಣೆ ಮತ್ತು ಗಡಿಗಳನ್ನು ನಿರ್ಣಯಿಸುವ ಮಹತ್ವದ ಜವಾಬ್ದಾರಿಯನ್ನು ಹೊತ್ತಿತು.

೨೧-೬-೧೯೫೪ ರಂದು ಆಯೋಗವು ಬೆಳಗಾವಿಯಲ್ಲಿ ಮನವಿ ಸ್ವೀಕರಿಣೆ ಮತ್ತು ಸಾಕ್ಷ್ಯ ಸಂಗ್ರಹಣೆಯ ಕಾರ್ಯ ಕೈಗೊಂಡಿತು. ಬೆಳಗಾವಿ ಜಿಲ್ಲಾ ಕಾಂಗ್ರೆಸ್ ಸಮಿತಿ, ಬೆಳಗಾವಿ ನಗರ ಕಾಂಗ್ರೆಸ್ ಸಮಿತಿ, ಕೆ.ಎಲ್.ಇ. ಸೊಸೈಟಿ, ಕರ್ನಾಟಕ ಏಕೀಕರಣ ಸಮಿತಿ ಮೊದಲಾದ ಸಂಘಟನೆಗಳು ಏಕೀಕರಣ ಪರವಾಗಿ ಮನವಿ ಸಲ್ಲಿಸಿದವು.

ಬೆಳಗಾವಿ ನಗರದ ಮುಸಲ್ಮಾನರು, ಕ್ರಿಶ್ಚಿಯನ್ನರು, ಮುಂತಾದ ಪಂಗಡಗಳವರೂ ಆಯೋಗದ ಸದಸ್ಯರನ್ನು ಭೇಟಿಯಾಇ ಮನವಿ ಸಲ್ಲಿಸಿ, ತಾವು ಕರ್ನಾಟಕದೊಡನೆ ಸೇರುವ ಹಂಬಳ ವ್ಯಕ್ತಪಡಿಸಿದರು.

ರಾಜ್ಯ ಪುನರ್ವಿಂಗಡನಾ ಆಯೋಗವು ಇದೆಲ್ಲವನ್ನು ಪರಿಗಣಿಸಿ ಬೆಳಗಾವಿ ಜಿಲ್ಲೆಯ ಚಂದಗಡ ತಾಲೂಕಿನಲ್ಲಿ ಮರಾಠಿ ಭಾಷಿಕರ ಸಂಖ್ಯೆಯು ಸ್ವಲ್ಪ ಹೆಚ್ಚು ಇರುವುದರಿಂದ ಅದು ಮಹಾರಾಷ್ಟ್ರಕ್ಕೆ ಸೇರುವುದು ಉಚಿತವೆಂದು ಆಯೋಗ ಸೂಚಿಸಿತು. ಖಾನಾಪುರ ಮತ್ತು ಬೆಳಗಾವಿ ತಾಲೂಕುಗಳಲ್ಲಿ ಮರಾಠಿ ಭಾಷಿಕರ ಸಂಖ್ಯೆಯು ಅರ್ಧಕ್ಕಿಂತ ಸ್ವಲ್ಪ ಹೆಚ್ಚಿದ್ದರೂ ಚಿಕ್ಕೋಡಿ ತಾಲೂಕಿನ ಕೆಲವು ಭಾಗಗಳಲ್ಲಿ ಅಂತಹುದೇ ಪರಿಸ್ಥಿತಿಯಿದ್ದರೂ ಬೆಳಗಾವಿ ಜಿಲ್ಲೆಯ ಉಳಿದ ಏಳು ತಾಲೂಕುಗಳಲ್ಲಿ ಕನ್ನಡಿಗರೇ ಬಹು ಸಂಖ್ಯಾತರಾಗಿರುವುದರಿಂದ ಈ ಎಲ್ಲ ಭಾಗಗಳ ಜನರಿಗೆ ಕರ್ನಾಟಕದೊಡನೆಯೇ ಹೆಚ್ಚಾಗಿ ಆರ್ಥಿಕ ಮತ್ತು ವಾಣಿಜ್ಯ ಸಂಬಂಧಗಳಿರುವುದರಿಂದ ಅವೆಲ್ಲವೂ ಕರ್ನಾಟಕಕ್ಕೆ ಸೇರಬೇಕೆಂದು ಆಯೋಗ ಅಭಿಪ್ರಾಯಪಟ್ಟಿತು. ಬೆಳಗಾವಿ ನಗರದಲ್ಲಿ ಮರಾಠಿ ಭಾಷಿಕರು ವ್ಯಾಪಾರ ವಾಣಿಜ್ಯ ಕಾರಣಗಳಿಂದ ವಲಸೆ ಬಂದು ಅಧಿಕ ಸಂಖ್ಯಾತರಾಗಿದ್ದಾರೆ ಎಂದು ಆಯೋಗ ಪರಿಗಣಿಸಿತ್ತು.

ಆಯೋಗದ ವರದಿಯು ದಿನಾಂಕ ೧೦ ಅಕ್ಟೋಬರ ೧೯೫೫ ರಂದು ಪ್ರಕಟಗೊಂಡಾಗ ಬೆಳಗಾವಿ ತಮ್ಮಿಂದ ತಪ್ಪಿತು ಎನ್ನುವ ರೋಷವನ್ನು ಮರಾಠಿಗರು ಹಿಂಸಾತ್ಮಕ ಕಾರ್ಯಗಳನ್ನು ಮಾಡುವುದರೊಂದಿಗೆ ವ್ಯಕ್ತಪಡಿಸಿದರು. ಬೆಳಗಾವಿ ತುಂಬೆಲ್ಲಾ ಹರತಾಳವನ್ನು ಹಮ್ಮಿಕೊಂಡರು ಕನ್ನಡದ ನಾಮಫಲಕಗಳನ್ನು ಕಿತ್ತು ಬಿಸಾಡಿದರು. ಕನ್ನಡಿಗರ ಆಸ್ತಿ-ಪಾಸ್ತಿಗಳಿಗೆ ಹಾನಿ ಮಾಡಿದರು. ಮಾರುತಿ ಬೀದಿಯ ಶ್ರೀ ಶಿವಬಸವ ಸ್ವಾಮಿಗಳ ಪ್ರಸಾದ ನಿಲಯದ ಮೇಲೂ ದಾಳಿ ಮಾಡಿ ಸಾಕಷ್ಟು ಹಾನಿ ಮಾಡಿದರು.

೧೭ ಅಕ್ಟೋಬರ ೧೯೪೪ ರಂದು ಟಿಳಕ ಚೌಕದಲ್ಲಿ .ಆಯೋಗದ ವರದಿಯನ್ನು ಸ್ವಾಗತಿಸುವುದಕ್ಕಾಗಿ ಬೆಳಗಾವಿ ಕನ್ನಡಿಗರು ಬಹಿರಂಗ ಸಭೆ ಏರ್ಪಡಿಸಿದರು. ಭುವನೇಶ್ವರಿಯ ಪೂಜೆ ನಡೆದು ಸಭೆ ಪ್ರಾರಂಭಗೊಂಡಿತು.

ವೇದಿಕೆಯ ಮೇಲೆ ಅಣ್ಣಾ ಗುರೂಜಿ, ಅರವಿಂದ ಜೋಶಿ, ರಾಘು ಮಂಡಗಿ, ಮುಂತಾದವರು ಉಪಸ್ಥಿತರಿದ್ದರೂ ಆಗ ಒಮ್ಮಿಂದೊಮ್ಮೆಲೆ ಮರಾಠಿಗರು ಕಲ್ಲುಗಳನ್ನು ಎಸೆಯತೊಡಗಿದರು. ಸಾವಿರಾರು ಜನ ಕನ್ನಡಿಗರು ಸೇರಿದ್ದರು. ಆದರೆ ಒಬ್ಬರೂ ಕದಡಲಿಲ್ಲ. ಅಣ್ಣಾ ಗುರೂಜಿಯವರ ಕನ್ನಡಾಭಿಮಾನದ ಸ್ಫೂರ್ತಿಯ ಮಾತುಗಳು ಅವರನ್ನು ತಡೆದು ನಿಲ್ಲಿಸಿದ್ದವು. ಈ ಸಂದರ್ಭದಲ್ಲಿ ಹಲವಾರು ಕನ್ನಡಿಗರಿಗೆ ಗಾಯಗಳಾವು. ಮುಂದೆ ಪೋಲೀಸರು ಅಶ್ರುವಾಯ ಸಿಡಿಸಿ ಪರಿಸ್ಥಿತಿಯನ್ನು ಶಾಂತಗೊಳಿಸಿದರು. ಆದರೆ ಮುಂದಿನ ಒಂದು ತಿಂಗಳವರೆಗೂ ವಿಧ್ವಂಸಕ ಕೃತ್ಯಗಳು ಅವ್ಯಾಹತವಾಗಿ ಮರಾಠಿಗರಿಂದ ನಡದೇ ಇದ್ದವು.[೫೨] ದಿನಾಂಕ ೧೭ ಅಕ್ಟೋಬರ್ ೧೯೫೫ ರಂದು ಟಿಳಕವಾಡಿಯ ನಾಗಝರಿಯ ಕನ್ನಡ ಶಾಲೆಗೆ ಬೆಂಕಿ ಹಚ್ಚಿದರು. ಕನ್ನಡ ನಾಮಫಲಕಗಳಿಗೆ ಸೆಗಣಿ, ಡಾಂಬರ ಬಳಿಯುವುದು. ಅಂಗಡಿಗಳ ಕಾಜು ಒಡೆಯುವುದು ಮುಂತಾದ ಕೃತಿಗಳನ್ನು ನಡೆಸಿದರು.[೫೩] ಅಂದಿನಿಂದ ದಿನಾಲು ಮರಾಠಿಗರು ಜಾಹೀರ ಸಭೆಗಳನ್ನು ನಡೆಸತೊಡಗಿ ಜಾಹಿರು ಭಾಷಣಗಳನ್ನು ಮಾಡಿದರು.

ಮುಂದೆ ರಾಜ್ಯ ಪುನರ್ವಿಂಗಡಣೆ ಆಯೋಗದ ವರದಿಯನ್ನು ಸಂಸತ್ತಿನಲ್ಲಿ ಮಂಡಿಸುವಾಗಲೂ ವಿರೋಧ ವ್ಯಕ್ತವಾಯಿತು. ಈ ಸಂದರ್ಭದಲ್ಲಿ ರಾಷ್ಟ್ರಮಟ್ಟದ ನಾಯಕರನ್ನು ಸಂಧಾನಕ್ಕೆ ಸಭೆ ಸೇರಿಸಲಾಯಿತು. ಆದರೂ ಯಾವುದೇ ಗಟ್ಟಿಯಾದ ನಿರ್ಧಾರಕ್ಕೆ ಮಹಾರಾಷ್ಟ್ರದವರು ಬರಲಿಲ್ಲ. ಸುದೀರ್ಘ ಚರ್ಚೆಯ ನಂತರ ದಿನಾಂಕ ೧೦ ಅಗಸ್ಟ ೧೯೫೬ ರಂದು ಸಂಸತ್ತಿನಲ್ಲಿ ವರದಿ ಮಂಡನೆಯಾಗಿ ಜಾರಿಯಾಯಿತು. ೨೫ ಅಗಸ್ಟ್ ೧೯೫೬ ರಂದು ರಾಜ್ಯ ಸಭೆಯಲ್ಲಿಯೂ ಸ್ವೀಕೃತವಾಗಿ ೩೧ ಅಗಸ್ಟ ೧೯೫೬ ರಂದು ರಾಷ್ಟ್ರಪತಿಗಳ ಅಂಕಿತ ಬಿತ್ತು. ಇದರಿಂದ ೧೯೫೬ ನವಂಬರ ೧ನೇ ದಿನಾಂಕದ ದಿನ ಹೊಸ ಪ್ರಾಂತಗಳು ಅಸ್ತಿತ್ವದಲ್ಲಿ ಬರಬೇಕೆಂದು ನಿರ್ಣಯವಾಯಿತು. ಅದರಂತೆ ಕರ್ನಾಟಕವೂ ಅಸ್ತಿತ್ವದಲ್ಲಿ ಬಂದಿತು.

ಆದರೆ ಮರಾಠಿಗರ ಹೋರಾಟವು ನಿರಂತರವಾಗಿ ಮುಂದುವರೆಯಿತು. ಅವರ ಹೋರಾಟ ತೀವ್ರವಾದಷ್ಟು ಬೆಳಗಾವಿ ಕನ್ನಡಿಗರಿಗೆ ಹತ್ತಿರವಾಗುತ್ತ ಸಾಗಿದೆ. ದಿನದಿಂದ ದಿನಕ್ಕೆ ಬೆಳಗಾವಿಯಲ್ಲಿ ಕನ್ನಡ ಸಂಸ್ಕೃತಿ ಬೆಳೆಯತೊಡಗಿದೆ. ಈಗ ಅದು ಕರ್ನಾಟಕದ ಎರಡನೇ ರಾಜಧಾನಿಯಾಗುವ ಹಂತಕ್ಕೆ ಬೆಳೆದಿದೆ.



**ಸಂದರ್ಭ ಸೂಚಿ :**


೧. ಸೂರ್ಯನಾಥ ಕಾಮತ: ಬೆಳಗಾವಿ ಜಿಲ್ಲೆಯಲ್ಲಿ ಸ್ವಾತಂತ್ರ್ಯ ಹೋರಾಟ, ಪುಟ. ೧೨೦, ಬೆಳಗಾವಿ ಜಿಲ್ಲೆಯ ಭವ್ಯ ಪರಂಪರೆ, ಸಂ. ವ್ಹಿ. ಸಿ. ಮಾಲಗತ್ತಿ, ೨೦೦೨.

೨. ಅದೇ.

೩. ೧೮೦೫ರಲ್ಲಿ ಪ್ರಾರಂಭವಾದ ಗಣೇಶ ಉತ್ಸವ ಈಗ ಶತಮಾನೋತ್ಸವವನ್ನು ಕಂಡಿದೆ. ಝುಂಡಾ ಚೌಕದಲ್ಲಿ ಇಂದಿಗೂ ಗಣೇಶನ ಪ್ರತಿಷ್ಠಾಪನೆ ನಡೆಯುತ್ತದೆ. ಗಣೇಶೋತ್ಸವದ ಜೊತೆಗೆ ಹಲವಾರು ಸಾಮಾಜಿಕ ಕಾರ್ಯಕ್ರಮಗಳನ್ನು ಝುಂಡಾ ಚೌಕದ ಸಾರ್ವಜನಿಕ ಗಣಪತಿ ಉತ್ಸವ ಮಂಡಳಿ ಹಮ್ಮಿಕೊಳ್ಳುತ್ತ ಬಂದಿದೆ. ಕ್ಯಾನ್ಸರ್ ಸೇರಿದಂತೆ ವಿವಿಧ ರೋಗಗಳ ಚಿಕಿತ್ಸೆಗೆ ಆರ್ಥಿಕ ನೆರವು ನೀಡಿದೆ.

೪. ಡಾ. ಸೂರ್ಯನಾಥ ಕಾಮತ: ಬೆಳಗಾವಿ ಜಿಲ್ಲೆಯಲ್ಲಿ ಸಂಗ್ರಾಮ, ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂಪುಟ-೩, ಪುಟ. ೪೩೭, ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೮.

೫. ಅದೇ ಸಂಪುಟ-೧, ಪುಟ. ೯೮೬.

೬. ಅದೇ ಪುಟ. ೧೦೦೫, ಸಂಪುಟ. ೧.

೭. ಬಾಬಾಸಾಹೇಬ ಸೋಮಣ್ಣ ಇವರು ಸಾಂಗಲಿ ಸಂಸ್ಥಾನದಲ್ಲಿ ಜಜ್ಜ ಆಗಿದ್ದರು. ಗಂಗಾಧರರಾಯ ದೇಶಪಾಂಡೆಯವರ ಆಪ್ತಸ್ನೇಹಿತರಾದ ಇವರ ಮೇಲೆ ಅನುಮಾನ ಎಂದು ವಿಚಾರಣೆಗೆ ಒಳಪಡಿಸಲಾಯಿತು. ಈ ಸಂದರ್ಭದಲ್ಲಿ ಗಂಗಾಧರರಾಯರ ಜೊತೆ ಸ್ನೇಹವಿಲ್ಲವೆಂದು ಬರೆದು ಕೊಡುವಂತೆ ಒತ್ತಾಯ ಬಂದಾಗ ತಮ್ಮ ನೌಕರಿಗೆ ರಾಜಿನಾಮೆ ನೀಡಿ ಬೆಳಗಾವಿಗೆ ಬಂದು ಚಳುವಳಿಗಾರರ ತಂಡವನ್ನು ಸೇರಿದರು.

೮. ಡಾ. ಸೂರ್ಯನಾಥ ಕಾಮತ, ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂಪುಟ-೧, ಪುಟ. ೧೦೦೬, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೮.

೯. ಅದೇ.

೧೦. ಅದೇ, ಪುಟ. ೧೧೧೫, ಗಂದಿಗವಾಡ (ಬೈಲಹೊಂಗಲ ತಾಲೂಕು)ದ ಗಂಗಾಧರ ದೊಡ್ಡಮನಿ ಎಂಬ ಸ್ವಾತಂತ್ರ್ಯ ಹೋರಾಟಗಾರರು ತಮ್ಮ ಊರಿನಲ್ಲಿ ಪಿಸ್ತೂಲುಗಳನ್ನು ತಯಾರಿಸಿ ಹೋರಾಟಗಾರರಿಗೆ ನೀಡಲಾಗುತ್ತಿತ್ತು. ನಮ್ಮೂರವು ಆದ ಪಿಸ್ತೂಲನ್ನು ಒದಗಿಸುವ ಕೇಂದ್ರವಾಗಿತ್ತು ಎಂದು ತಮ್ಮ ಅನುಭವದಲ್ಲಿ ಹೇಳಿದ್ದಾರೆ.

೧೧. ಅದೇ, ಪುಟ. ೧೦೦೭.

೧೨. ಡಾ. ಸೂರ್ಯನಾಥ ಕಾಮತ, ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಪು. ೧೦೦೨, ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ, ಬೆಂಗಳೂರು, ೧೯೯೮.

೧೩. ಅದೇ. ಪು. ೯೮೬

೧೪. ಅದೇ.

೧೫. ಶ್ರೀಮತಿ ಸರೋಜಿನಿ ಚಲವಾರ, ಸ್ವಾತಂತ್ರ್ಯ ಹೋರಾಟ ಹಾಗೂ ಬೆಳಗಾವಿ ಜಿಲ್ಲೆ, ಸ್ಮರಣ ಸಂಚಿಕೆ, ಕರ್ನಾಟಕ ಸ್ವಾತಂತ್ರ್ಯ ಸಂಗ್ರಾಮದ ಶತಮಾನೋತ್ಸವ, ಪು. ೩೦. ೨೦೦೬, ಬೆಳಗಾವಿ ಜಿಲ್ಲಾ ಸ್ವಾತಂತ್ರ್ಯ ಯೋಧರ ಶೈಕ್ಷಣಿಕ ಸಂಘ, ಬೆಳಗಾವಿ.

೧೬. ಡಾ. ಸೂರ್ಯನಾಥ ಕಾಮತ: ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂಪುಟ-೩, ಪುಟ.೪೪೦, ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ, ಬೆಂಗಳೂರು, ೧೯೯೮.

೧೭. ಅದೇ, ಪುಟ. ೪೬೯.

೧೮. ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಶತಮಾನೋತ್ಸವ ಸ್ಮರಣ ಸಂಚಿಕೆ, ಸರೋಜಿನಿ ಚವಾಲಾರ: ಸ್ವಾತಂತ್ರ್ಯ ಹೋರಾಟ ಮತ್ತು ಬೆಳಗಾವಿ ಜಿಲ್ಲೆ, ಪುಟ. ೨೮, ಪೃಥ್ವಿತರತ್ವ ಯೋಧರ ಶೈಕ್ಷಣಿಕ ಸಂಘ, ಬೆಳಗಾವಿ, ೨೦೦೬.

೧೯. ಡಾ. ಸೂರ್ಯನಾಥ ಕಾಮತ: ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಪುಟ. ೪೪೦, ಸಂಪುಟ-೨, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೮.

೨೦. ಸರೋಜಿನಿ ಚಲವಾರ: ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಶತಮಾನೋತ್ಸವ ಸ್ಮರಣ ಸಂಚಿಕೆ, ಪುಟ. ೩೧, ಬೆಳಗಾವಿ ಜಿಲ್ಲಾ ಸ್ವಾತಂತ್ರ್ಯ ಯೋಧರ ಶೈಕ್ಷಣಿಕ ಸಂಘ, ಬೆಳಗಾವಿ, ೨೦೦೬.

೨೧. ಡಾ. ಎಸ್. ಚಂದ್ರಶೇಖರ: ವಸಾಹತುಕಾಲೀನ ಕರ್ನಾಟಕ, ಪುಟ. ೧೯೮, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬.

೨೨. ಡಾ. ಸೂರ್ಯನಾಥ ಕಾಮತ: ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಪುಟ. ೯೯೧, ಸಂಪುಟ-೨, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೮.

೨೩. ಡಾ. ಶ್ರೀಮತಿ ರತ್ನಶೀಲಾ ಗುರಡ್ಡಿ: ಕರ್ನಾಟಕ ಏಕೀಕರಣ ಹೋರಾಟ ಮತ್ತು ಮಹಿಳೆ. ಪುಟ.೪೪. ಅಲ್ಲಮಪ್ರಭು ಸಿದ್ಧ ಸಂಸ್ಥಾನ ಮಠ ಚಿಂಚಲಿ.

೨೪. ಡಾ. ಎಚ್. ಎಸ್. ಗೋಪಾಲರಾವ: ಕರ್ನಾಟಕ ಏಕೀಕರಣ ಇತಿಹಾಸ, ಪುಟ. ೫೬.

೨೫. ಶ್ರೀ ರಂಗನಾಥ ದಿವಾಕರ: ಕರ್ನಾಟಕ ಏಕೀಕರಣ ಕಥೆ, ಪುಟ. ೧೮.

೨೬. ಶ್ರೀ ಮಹಾದೇವ ಬಣಕಾರ: ಆಂಗ್ಲರ ಆಡಳಿತದಲ್ಲಿ ಕನ್ನಡ ಪುಟ. ೧೯, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೨೭. ಡಾ. ಎಚ್. ಗೋಪಾಲರಾವ: ಕರ್ನಾಟಕ ಏಕೀಕರಣ ಇತಿಹಾಸ, ಪುಟ. ೬೩.

೨೮. ಕೃಷ್ಣ ಕೊಲ್ಹಾರ ಕುಲಕರ್ಣಿ: ಅಖಂಡ ಕರ್ನಾಟಕದ ಹೆಜ್ಜೆಗಳು, ಪುಟ. ೫೯.

೨೯. ಎಚ್. ಎಸ್. ಗೋಪಾಲರಾವ: ಕರ್ನಾಟಕ ಏಕೀಕರಣ ಇತಿಹಾಸ, ಪುಟ. ೭೦.

೩೦. ಶ್ರೀ ಬಿ. ಶಿವಮೂರ್ತಿಶಾಸ್ತ್ರಿ: ಕರ್ನಾಟಕ ಏಕೀಕರಣ ಚರಿತ್ರೆ, ಪುಟ. ೨, ಕನ್ನಡ ಸಾಹಿತ್ಯ ಪರಿಷತ್ತು ಚಿನ್ನದ ಬೆಳಸು ಸುವರ್ಣ ಮಹೋತ್ಸವ ಸವಿನೆನಪಿನ ಸಂಪುಟ.

೩೧. ರಾ. ಯ. ಧಾರವಾಡಕರ: ಹೊಸಗನ್ನಡ ಸಾಹಿತ್ಯದ ಉದಯ ಕಾಲ ಪುಟ. ೩೬೪, ಕ.ವಿ.ವಿ. ಧಾರವಾಡ. ೧೯೭೫.

೩೨. ಶ್ರೀ ರಂಗನಾಥ ದಿವಾಕರ: ಕರ್ನಾಟಕ ಏಕೀಕರಣ ಕಥೆ, ಪುಟ. ೬೬.

೩೩. ಡಾ. ಎಂ. ಜಮುನ: ಕರ್ನಾಟಕ ಏಕೀಕರಣ ಚಳುವಳಿ ಪುಟ.೨೧೯, ಕರ್ನಾಟಕ ಚರಿತ್ರೆ ಸಂಪುಟ-೭, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೪. ರಂಗನಾಥ ದಿವಾಕರ: ಕರ್ನಾಟಕ ಏಕೀಕರಣ ಕಥೆ, ಪುಟ. ೨೧.

೩೫. ಅದೇ ಪುಟ. ೨೪.

೩೬. ಆಲೂರು ವೆಂಕಟರಾಯರು: ನನ್ನ ಜೀವನ ಸ್ಮೃತಿಗಳು, ಪುಟ. ೨೩೬

೩೭. ಅದೇ. ಪುಟ. ೨೩೬.

೩೮. ಡಾ. ಎಚ್. ಎಸ್. ಗೋಪಾಲರಾವ: ಕರ್ನಾಟಕ ಏಕೀಕರಣ ಇತಿಹಾಸ, ಪುಟ. ೭೩.

೩೯. ಅದೇ. ಪುಟ. ೭೬.

೪೦. ಎಚ್. ಎಸ್. ಗೋಪಾಲರಾವ: ಕರ್ನಾಟಕ ಏಕೀಕರಣ ಇತಿಹಾಸ, ಪುಟ. ೭೮.

೪೧. ಶ್ರೀ ಬಿ. ಶಿವಮೂರ್ತಿಶಾಸ್ತ್ರಿ: ಕರ್ನಾಟಕ ಏಕೀಕರಣ ಚರಿತ್ರೆ ಪುಟ. ೩, ಕನ್ನಡ ಸಾಹಿತ್ಯ ಪರಿಷತ್ತು ಚಿನ್ನದ ಬೆಳಸು. ಸುವರ್ಣ ಮಹೋತ್ಸವ ಸವಿನೆನಪಿನ ಸಂಪುಟ.

೪೨. ಎಚ್. ಎಸ್. ಗೋಪಾಲರಾವ: ಕರ್ನಾಟಕ ಏಕೀಕರಣ ಇತಿಹಾಸ, ಪುಟ. ೧೦೦.

೪೩. ಪಾಟೀಲ ಪುಟ್ಟಪ್ಪ: ನಾಡು ನುಡಿ, ಪುಟ. ೨೨೨, ಪ್ರಸಾರಾಂಗ ಕನ್ನಡವಿಶ್ವವಿದ್ಯಾಲಯ, ಹಂಪಿ.

೪೪. ಅದೇ ಪುಟ. ೨೨೪.

೪೫. ರಂಗನಾಥ ದಿವಾಕರ: ಕರ್ನಾಟಕ ಏಕೀಕರಣ ಕಥೆ, ಪುಟ. ೪೪.

೪೬. ಹಾರ್ನಹಳ್ಳಿ ರಾಮಸ್ವಾಮಿ: ಬೆಳಗಾವಿಯಲ್ಲಿ ಕನ್ನಡ ಚಳುವಳಿ ಸಮಸ್ಯೆ ಪುಟ. ೯೬–೯೭. ರಾಘವೇಂದ್ರ ಜೋಶಿ ಅಭಿನಂದನ ಗ್ರಂಥ, ೨೦೦೩.

೪೭. ರಂಗನಾಥ ದಿವಾಕರ: ಕರ್ನಾಟಕ ಏಕೀಕರಣ ಕಥೆ, ಪುಟ. ೪೮.

೪೮. ಎಚ್. ಎಸ್. ಗೋಪಾಲರಾವ: ಕರ್ನಾಟಕ ಏಕೀಕರಣ ಇತಿಹಾಸ, ಪುಟ. ೧೦೫.

೪೯. ಅದೇ ಪುಟ. ೧೨೩.

೫೦. ಮಹೇಶ ಚಿಂತಾಮಣಿ: ಶಿ.ಶಿ. ಬಸವನಾಳರ ಜೀವನ ಮತ್ತು ಸಾಧನೆ. ಪುಟ. ೪೩.

೫೧. ಎ.ಕೆ. ಬಾಗೋಜಿ: ನನ್ನ ಬೆಳಗಾವಿ, ಪುಟ. ೨೮.

೫೨. ಬಿ. ಎಸ್. ಗವಿಮಠ(ಸಂ): ಬೆಳಗಾವಿ ಕನ್ನಡ ಕನ್ನಡಿಗ. ಪುಟ. ೪೧.

೫೩. ಅದೇ.



## ಅಧ್ಯಾಯ : ನಾಲ್ಕು

# ಬೆಳಗಾವಿ ನಗರ ರಚನೆ

### ೧. ನಿರ್ಮಾಣದ ಹಂತ:

ಗ್ರಾಮೀಣ ಪ್ರದೇಶ ನಗರ ಪ್ರದೇಶವಾಗಿ ಪರಿವರ್ತನೆಗೊಳ್ಳುವ ಪ್ರಕ್ರಿಯೆ ಸಂಕೀರ್ಣವಾದುದ್ದಾಗಿದೆ. ಈ ಪ್ರಕ್ರಿಯೆಯನ್ನು ನಗರೀಕರಣ ಎಂದು ಕರೆಯಬಹುದು. ಇಲ್ಲಿ ನಗರಗಳ ಹುಟ್ಟು ಮತ್ತು ಅವುಗಳ ಬೆಳವಣಿಗೆ ಪ್ರಧಾನ ಅಂಶಗಳಾಗಿರುತ್ತವೆ.

ಭಾರತದ ಸಂದರ್ಭದಲ್ಲಿ ಸಿಂಧೂ ನದಿ ನಾಗರಿಕತೆಯ ಅವಧಿಯನ್ನು ಪ್ರಥಮ ನಗರೀಕರಣ ಎಂದು ಕರೆಯಲಾಗಿದೆ.[1] ಈ ನಗರೀಕರಣ ವ್ಯವಸ್ಥೆಯ ಪ್ರಭಾವದಲ್ಲಿ ಕರ್ನಾಟಕವೂ ಒಳಗೊಂಡಿತ್ತು. ಕರ್ನಾಟಕದಲ್ಲಿ ಪ್ರಮುಖವಾಗಿ ಮೌರ್ಯರ ಅಶೋಕನ ಕಾಲದಿಂದ ನಗರಗಳು ವ್ಯವಸ್ಥಿತವಾಗಿ ರಚನೆಗೊಂಡಿರುವುದು ತಿಳಿದುಬರುತ್ತದೆ. ಮುಂದೆ ಬಂದ ಶಾತವಾಹನರ ಕಾಲದಲ್ಲಿ ಮಹತ್ವದ ಬೆಳವಣಿಗೆಯನ್ನು ಪಡೆದುಕೊಂಡವು. ಆ ಕಾಲದ ನಗರ ಪ್ರದೇಶಗಳೆಂದರೆ ಚಂದ್ರವಳ್ಳಿ, ಮಸ್ಕಿ, ಬನವಾಸಿ, ಬಾದಾಮಿ, ಸನ್ನತಿ, ಇಂಡಿ, ಹೀರಕಲ್, ತಾಳಗುಂದ, ವಡಗಾಂವ ಮಾಧವಪುರ, ಹಲಸಿ, ಕಾರವಾರ, ಹಾನಗಲ್ ಮುಂತಾದವುಗಳು ಪ್ರಮುಖ ಪಟ್ಟಣಗಳಾಗಿದ್ದವು. ಇವುಗಳಲ್ಲಿ ಕೆಲವು ಪಟ್ಟಣಗಳು ಧಾರ್ಮಿಕ ನೆಲೆಗಳಾಗಿ, ಆಡಳಿತ ಕೇಂದ್ರಗಳಾಗಿ, ವ್ಯಾಪಾರಿ ಪಟ್ಟಣಗಳಾಗಿ ಪ್ರಸಿದ್ಧಿಯನ್ನು ಪಡೆದುಕೊಂಡಿದ್ದವು. ಇಂತಹ ಪ್ರಮುಖ ಪಟ್ಟಣಗಳಲ್ಲಿ ಬೆಳಗಾವಿಯು (ವಡಗಾಂವ–ಮಾಧವಪುರ) ಧಾರ್ಮಿಕ, ವ್ಯಾಪಾರ ವಲಯಗಳಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಂಡು ಅಂದಿನ ಕಾಲದ ದೇಶ–ವಿದೇಶಗಳ ಗಮನವನ್ನು ಸೆಳೆದದ್ದು ವಿಶೇಷವಾಗಿದೆ.

ಬೆಳಗಾವಿ ಸಾಂಸ್ಕೃತಿಕ ಮತ್ತು ಐತಿಹಾಸಿಕ ಮಹತ್ವವುಳ್ಳ ಕರ್ನಾಟಕದ ಕೆಲವೇ ಕೆಲವು ನಗರಗಳಲ್ಲಿ ಒಂದಾಗಿದೆ. ರಾಜ್ಯದ ಐದನೆಯ ದೊಡ್ಡ ನಗರವಾಗಿ ರೂಪಗೊಂಡಿರುವ ಬೆಳಗಾವಿಯು ಹಂತ ಹಂತವಾಗಿ ಬೆಳವಣಿಗೆಯನ್ನು ಕಂಡಿದೆ. ಇಂದು ಮಹಾನಗರ ವ್ಯಾಪ್ತಿಯಲ್ಲಿ ಬರುವ ಬೆಳಗಾವಿಯಲ್ಲಿ ಮೂರು ಪಟ್ಟಣಗಳು ಹಾಗೂ ಹದಿನಾರು ಹಳ್ಳಿಗಳು ಸೇರಿಕೊಂಡಿವೆ. ಎಂದು ಡಾ. ಎಂ. ಬಿ. ನೇಗಿನಹಾಳರು ಅಭಿಪ್ರಾಯ ಪಡುತ್ತಾರೆ.[೨]

ಶಾತವಾಹನರ ಕಾಲದ ಬೆಳಗಾವಿಯು ಈಗ ಹಳೆ ಬೆಳಗಾವಿ ಎಂದು ಕರೆಯಲ್ಪಡುವ ವಡಗಾವಿಯ ಪೂರ್ವ ಭಾಗ ಹಾಗೂ ಮಾಧವಪುರ ಪ್ರದೇಶದಲ್ಲಿರುವುದು ದೃಢಪಟ್ಟಿದೆ. ಈ ಪ್ರದೇಶದಲ್ಲಿ ಆರ್. ಎಸ್. ಪಂಚಮುಖಿ, ಡಾ. ಅ. ಸುಂದರ ಮುಂತಾದವರು ನಡೆಸಿದ ಉತ್ಖನನದ ಸಂದರ್ಭದಲ್ಲಿ ಪ್ರಾಚೀನ ನಗರದ ಅವಶೇಷಗಳು, ಜೀವನೋಪಾಯದ ಸಲಕರಣೆಗಳು, ನಾಣ್ಯಗಳು, ಶಾಸನ, ಮೂರ್ತಿಗಳು ದೊರೆತು ಇದೊಂದು ಪ್ರಾಚೀನ ಕಾಲದ ಸಂಸ್ಕೃತಿಯ ನೆಲೆ ಎಂಬುದನ್ನು ಶೋಧಿಸಿದ್ದಾರೆ. ಒಂದು ಸಾಧಾರಣ ಗ್ರಾಮೀಣ ಸಂಸ್ಕೃತಿಯ ಸಮಾಜವು ಕ್ರಮೇಣ ಕಟ್ಟಡ ನಿರ್ಮಾಣ, ನಾಣ್ಯ ಚಲಾವಣೆ, ಕಲಾವಸ್ತುಗಳ ರಚನೆ ಮುಂತಾದ ಚಟುವಟಿಕೆಗಳಿಂದ ಕೂಡಿದ ನಗರ ಸಂಸ್ಕೃತಿಯಾಗಿ ಬೆಳೆದಿದ್ದು ಇಲ್ಲಿ ಕಂಡು ಬಂದಿದೆ ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೩]

ಶಾತವಾಹನರ ಕಾಲದ ಬೆಳಗಾವಿಯು ಕೇವಲ ವ್ಯಾಪಾರಿ ಕೇಂದ್ರವಾಗಿರದೆ ಧಾರ್ಮಿಕ ಕೇಂದ್ರವೂ ಆಗಿತ್ತು. ವೇದಗಳ ಪ್ರತಿ ಮಾಡುವ ಕೇಂದ್ರವಾಗಿದ್ದಲ್ಲದೆ, ಇಲ್ಲಿ ಯಜ್ಞ ಯಾಗಗಳೂ ನಡೆಯುತ್ತಿದ್ದವು. ಇಲ್ಲಿ ದೊರೆತ ಕ್ರಿ. ಶ. ಪೂ. ಒಂದನೆಯ ಶತಮಾನದ ಬ್ರಾಹ್ಮೀ ಲಿಪಿ ಮತ್ತು ಪ್ರಾಕೃತಭಾಷೆಯ ಶಾಸನವು ಕಾಶ್ಯಪಗೋತ್ರದ 'ಧಸ' ಎಂಬ ಒಬ್ಬ ಬ್ರಾಹ್ಮಣನು ವಾಜಪೇಯ ಮೊದಲಾದ ಯಾಗ ಮಾಡಿದನೆಂದು ತಿಳಿಸುತ್ತದೆ. ಇದಲ್ಲದೆ ಬೌದ್ಧಧರ್ಮ ಇಲ್ಲಿ ಪ್ರಚಲಿತವಾಗಿದ್ದ ಬಗ್ಗೆ, ಶಿವಾರಾಧನೆ ನಡೆಯುತ್ತಿದ್ದುದರ ಬಗ್ಗೆ ಕೆಲವು ಸೂಚನೆಗಳು ಉತ್ಖನನದಿಂದ ಕಂಡು ಬಂದಿವೆ.[೪]

ಅಶೋಕನ ಕಾಲದಲ್ಲಿ ಬನವಾಸಿಯು ಒಂದು ಪ್ರಮುಖ ನಗರ ಕೇಂದ್ರವಾಗಿತ್ತು. ಈ ಬನವಾಸಿಗೂ ಮತ್ತು ಬೆಳಗಾವಿಗೂ ಹಲವಾರು ಸಾಮ್ಯತೆಗಳು ಕಂಡುಬರುತ್ತವೆ. ಬನವಾಸಿಯಲ್ಲಿ ಕಂಡು ಬಂದ ವೈವಿಧ್ಯಮಯವಾದ ಇಟ್ಟಿಗೆ ಕಟ್ಟಡಗಳು, ಅಗಲವಾದ ರಸ್ತೆಗಳು, ಅವುಗಳಿಗೆ ಸಮಾನಾಂತರ ಕಾಲು ದಾರಿಗಳು, ರಸ್ತೆಯ ಇಕ್ಕೆಡೆಗಳಲ್ಲಿ ಇಟ್ಟಿಗೆಯಿಂದ ನಿರ್ಮಿಸಿದ ಕಟ್ಟಡಗಳು, ವಸತಿ ಗೃಹಗಳಿಗೆ ಇಟ್ಟಿಗೆ ಆವರಣವಿರುವ ಬಾವಿಗಳು, ವಸತಿ ಪ್ರದೇಶದ ಸುತ್ತ ಎತ್ತರದ ಗೋಡೆಗಳ ಆವರಣ ಇವೆಲ್ಲ ಲಕ್ಷಣಗಳು ಬೆಳಗಾವಿಯ ವಡಗಾಂವಿ-ಮಾಧವಪುರದಲ್ಲಿರುವುದು ಕಂಡುಬರುತ್ತದೆ. ಅದೇ ರೀತಿ ಸನ್ನತಿಯು ಕೂಡ ಇದೇ ಸ್ವರೂಪದಲ್ಲಿರುವುದು ಕಂಡುಬರುತ್ತದೆ. ಈ ಎಲ್ಲ ಪ್ರಾಚೀನ ನಗರಗಳನ್ನು ತೌಲನಿಕವಾಗಿ ನೋಡಿದಾಗ ಅಂದಿನವರು ನಗರಗಳ ನಿರ್ಮಾಣಕ್ಕೆ ಒಂದು ವ್ಯವಸ್ಥೆಯನ್ನು ಕಲ್ಪಿಸಿದ್ದರು ಎನ್ನುವುದು ತಿಳಿದು ಬರುತ್ತದೆ. ಅಂದರೆ ವಾಸ್ತು ಪ್ರಕಾರವಾಗಿ ನಗರಗಳು ನಿರ್ಮಾಣಗೊಂಡಿರಬಹುದಾದ ಸಾಧ್ಯತೆಗಳು ಕಂಡುಬರುತ್ತವೆ.

ಶಾತವಾಹನರ ಕಾಲದಲ್ಲಿ ವಡಗಾವಿ–ಮಾಧವಪುರವು ಗಟ್ಟಿಮುಟ್ಟಾದ ಮಣ್ಣಿನ ರಕ್ಷಣಾ ಗೋಡೆಯನ್ನು ಹೊಂದಿತ್ತು. ಇಟ್ಟಿಗೆ ಹಾಗೂ ಮೃತ್ತಿಕಾ ಪದಾರ್ಥಗಳಿಂದ ರಚಿಸಲ್ಪಟ್ಟ ಕೋಟೆಯು ಸಾಧಾರಣವಾಗಿ ಅಂಡಾಕೃತಿಯಲ್ಲಿರುವುದು. ಈ ಕೋಟೆಯು ನಗರದ ಸುತ್ತಲೂ ಇದ್ದು, ನಗರವು ಸುಮಾರು ೧೫ ಎಕರೆಗಳಲ್ಲಿ ವಿಸ್ತಾರಗೊಂಡಿದ್ದು ತಿಳಿದುಬರುತ್ತದೆ. ಇದೊಂದು ಸಮತಟ್ಟಾದ 'ಸ್ಥಲದುರ್ಗ'ವಾಗಿದ್ದು ಕರ್ನಾಟಕದ ಅತ್ಯಂತ ಪ್ರಾಚೀನ ಕೋಟೆಗಳಲ್ಲಿ ಒಂದಾಗಿದೆಯೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೫] ಕ್ರಿ. ಶ. ೨೨೫ ರ ಸುಮಾರಿಗೆ ಜಕ್ಕದೇವನೆಂಬ ಜೈನ ದೊರೆಯು ಇಲ್ಲಿ ಆಳುತ್ತಿದ್ದನೆಂಬ ಐತಿಹ್ಯವಿದೆ. ಈತನು ಸುಮಾರು ೮೦೦ ಹಳ್ಳಿಗಳಿಗೆ ರಾಜನಾಗಿದ್ದನೆಂಬುದು ತಿಳಿದು ಬರುತ್ತದೆ.[೬]

ವಡಗಾವಿ–ಮಾಧವಪುರದಲ್ಲಿಯ ಪ್ರಾಚೀನ ನಗರವು ಕ್ರಿ. ಪೂ. ಐದನೆಯ ಶತಮಾನದ ವೇಳೆಗೆ ಭಾರತದಲ್ಲಿ ನಗರೀಕರಣ ಪ್ರಕ್ರಿಯೆ ಕಾಣಿಸಿಕೊಂಡ ಸಂದರ್ಭದಲ್ಲಿ ನಿರ್ಮಾಣಗೊಂಡಿದ್ದಾಗಿದೆ. ಹೀಗಾಗಿ ಇದು ಕರ್ನಾಟಕದ ಸಂದರ್ಭಕ್ಕೆ ಪ್ರಥಮ ನಗರೀಕರಣಗೊಂಡ ಬ್ರಹ್ಮಗಿರಿ, ಚಂದ್ರವಳ್ಳಿ, ಹೆಮ್ಮಿಗೆ ಮುಂತಾದ ನಗರಗಳಿಗೆ ಸರಿಸಮವಾಗಿ ಬೆಳೆದುದೆಂದು ಡಾ. ಕೆ. ಮೋಹನ್‌ಕೃಷ್ಣ ರೈ ಅಭಿಪ್ರಾಯ ಪಟ್ಟಿದ್ದಾರೆ.[೭]

ಶಾತವಾಹನರ ಆಳ್ವಿಕೆಯ ಸಂದರ್ಭದಲ್ಲಿ ಆಡಳಿತದ ದೃಷ್ಟಿಯಿಂದ ಮಹತ್ವದ ಕೇಂದ್ರವಾಗಿದ್ದ ಬೆಳಗಾವಿಯು (ವಡಗಾಂವ–ಮಾಧವಪುರ) ಮುಂದಿನ ದಿನಗಳಲ್ಲಿ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳಲಾರಂಭಿಸಿತು. ಇದು ಆ ಕಾಲದ ಹಲವಾರು ಪಟ್ಟಣಗಳ ಸ್ಥಿತಿಯಾಗಿತ್ತು. ಇದಕ್ಕೆ ಮುಖ್ಯ ಕಾರಣ ಉತ್ಪಾದನಾ ವ್ಯವಸ್ಥೆಯಲ್ಲಾದ ಬದಲಾವಣೆ. ಅಲ್ಲದೆ ರಾಜಕೀಯ ಕಾರಣವೂ ಮುಖ್ಯವಾಗಿ ಕಂಡುಬರುತ್ತದೆ. ಶಾತವಾಹನರ ಅವನತಿಯ ನಂತರ ಅಧಿಕಾರಕ್ಕೆ ಬಂದ ಕದಂಬರು, ಗಂಗರು ಮುಂತಾದವರು ಭೂಮಿಯನ್ನು ದಾನ ನೀಡತೊಡಗಿದರು. ಇದರಿಂದ ಭೂಮಾಲಿಕರು ಹುಟ್ಟತೊಡಗಿದರು. ಈ ಪ್ರಕ್ರಿಯೆಯಿಂದ ವ್ಯಾಪಾರ–ವಾಣಿಜ್ಯಕ್ಕೆ ಬಲವಾದ ಪೆಟ್ಟು ಬಿತ್ತು. ಊಳಿಗಮಾನ್ಯ ಪದ್ಧತಿ ಹುಟ್ಟಿಕೊಂಡು ನಗರ ವ್ಯವಸ್ಥೆಯನ್ನು ನಾಶಮಾಡತೊಡಗಿತು. ವ್ಯಾಪಾರ–ವಾಣಿಜ್ಯದಲ್ಲಾದ ಕುಂಠಿತದಿಂದ ರೋಮನ್ ಸಾಮ್ರಾಜ್ಯದೊಂದಿಗಿನ ವ್ಯಾಪಾರ ಕುಸಿದು ಹಲವಾರು ನಗರ ಕೇಂದ್ರಗಳು ಅವನತಿಯತ್ತ ಸಾಗಿದವು. ವ್ಯಾಪಾರದಲ್ಲಿ ತೊಡಗಿದ್ದ ಹಲವಾರು ಸಮುದಾಯಗಳು ತಮ್ಮ ವೃತ್ತಿಯನ್ನು ಬದಲಾಯಿಸಿದವು. ಕೃಷಿ ಆಧಾರಿತ ಅರ್ಥವ್ಯವಸ್ಥೆ ರೂಪಗೊಳ್ಳಲಾರಂಭಿಸಿತು. ಶಾತವಾಹನರ ನಂತರ ಬಂದ ರಾಜರೆಲ್ಲ ಕೃಷಿ ವ್ಯವಸ್ಥೆಗೆ ಹೆಚ್ಚಿನ ಒತ್ತನ್ನು ನೀಡಲಾರಂಭಿಸಿದರು. ಇದರಿಂದ ನಗರ ಪ್ರದೇಶಗಳೆಲ್ಲ ಹಂತಹಂತವಾಗಿ ಅವನತಿಯನ್ನು ಹೊಂದಲಾರಂಭಿಸಿದವು. ಅಲ್ಲದೆ ಇದಕ್ಕೆ ಧಾರ್ಮಿಕ ಕಾರಣಗಳೂ ಕೂಡಿ ಜಾತಿ, ಧರ್ಮಗಳಲ್ಲಿನ ಸಂಘರ್ಷ ನಗರ ಪ್ರದೇಶಗಳ ಅವನತಿಗೆ ಕಾರಣವಾಯಿತು. ಈ ಪ್ರಕ್ರಿಯೆಗೆ ಪ್ರಾಚೀನ ಬೆಳಗಾವಿ ನಗರವೂ ಒಳಗಾಗಿ ಅದು ನಾಶ ಹೊಂದಿರಬಹುದಾದ ಸಾಧ್ಯತೆಗಳಿವೆ.

ಶಾತವಾಹನರ ನಂತರ ಬೆಳಗಾವಿ ನಗರದ ಪ್ರದೇಶಕ್ಕೆ ಒಂದು ಪ್ರಬಲವಾದ ಆಡಳಿತ ಒದಗಿ ಬರಲಿಲ್ಲ. ಪ್ರಾಚೀನ ಬನವಾಸಿ, ತಲಕಾಡು ಪ್ರದೇಶಗಳು ಕದಂಬ, ಗಂಗರ ರಾಜಧಾನಿಯಾಗುವ ಮೂಲಕ ತನ್ನ ಅಸ್ತಿತ್ವವನ್ನು ಉಳಿಸಿಕೊಂಡವು. ಹೀಗಾಗಿ ಮೇಲಿಂದ ಮೇಲೆ ದಾಳಿಗೆ ಒಳಗಾಗಿ ಪ್ರಾಚೀನ ಬೆಳಗಾವಿ ನಗರವು ನಾಶಹೊಂದಲು ಕಾರಣವಾಯಿತು.

ಪ್ರಾಚೀನ ಬೆಳಗಾವಿ ನಗರವು ಮೌರ್ಯರ ಆಳ್ವಿಕೆಯ ತರುವಾಯ ಮತ್ತು ಕದಂಬರ ಪೂರ್ವಕಾಲದ ಸು. ೫೦೦ ವರ್ಷಗಳ ಅವಧಿಯ ಚರಿತ್ರೆ ಸಂಬಂಧಿ ಅವಶೇಷಗಳನ್ನು ಉಳಿಸಿಕೊಂಡು ಬಂದ ಶ್ರೇಯಸ್ಸು ಈ ಹಳೆಯ ಬೆಳಗಾವಿಯದಾಗಿದೆ ಎಂದು ಡಾ. ಎಂ.ಬಿ. ನೇಗಿನಹಾಳ ಅಭಿಪ್ರಾಯ ಪಟ್ಟಿದ್ದಾರೆ.[೮]

ಮಧ್ಯಕಾಲದ ಬೆಳಗಾವಿಯನ್ನು ಸದ್ಯದ ಕೋಟೆ ಪ್ರದೇಶ ಮತ್ತು ಅದರ ಸಮೀಪದ ಪಶ್ಚಿಮ ಮತ್ತು ಉತ್ತರ ಬದಿಗಳಲ್ಲಿ ಎಂದರೆ ಈಗಿನ ಖಡೇಬಜಾರ, ಮಾಳಿಗಲ್ಲಿ, ಕಾಮತಗಲ್ಲಿ, ಹಳೆ ಧಾರವಾಡ ರಸ್ತೆಯ ಅಕ್ಕಪಕ್ಕಗಳಲ್ಲಿ ಗುರುತಿಸಬಹುದು. ಈಗಿರುವ ದೊಡ್ಡ ಕೋಟೆಯ ಮೇಲ್ಭಾಗ ಮುಸಲ್ಮಾನ ಆಡಳಿತಗಾರರಿಂದ ನಿರ್ಮಿಸಲ್ಪಟ್ಟಿದ್ದರೂ ಅದರ ಅತಿ ಕೆಳಗಿನ ಸ್ತರದಲ್ಲಿ ಬನವಾಸಿ ಕದಂಬರ ಕಾಲಾವಧಿಗೆ ಸೇರುವ ರಚನೆಯೂ ಅದರ ಮೇಲೆ ಚಾಲುಕ್ಯ ರಾಷ್ಟ್ರಕೂಟದ ಕಾಲದ ರಚನೆಯೂ ಇದೆಯೆಂದು ಡಾ. ಎಸ್. ಕೆ. ಜೋಶಿ ತಿಳಿಸುತ್ತಾರೆ.[೯] ಈ ಕೋಟೆಯ ಪ್ರಾಚೀನವಾದುದೆಂಬುದಕ್ಕೆ ಕೋಟೆಯ ತಳಭಾಗದ ರಚನೆಯಿಂದ ತಿಳಿದು ಬರುತ್ತದೆಯೆಂದು ಮಡಿವಾಳೇಶ್ವರ ಶಿ. ಸರದಾರರವರು ಸ್ಪಷ್ಟಪಡಿಸಿದ್ದಾರೆ.[೧೦] ಶಾತವಾಹನರ ಕಾಲದ ಬೆಳಗಾವಿ ನಗರ ಕಾರಣಾಂತರಗಳಿಂದ ತ್ಯಜಿಸಲ್ಪಟ್ಟ ಮೇಲೆ ಮೂರನೆಯ ಹಂತದ ನಗರ ಈ ಕೋಟೆಯ ಪ್ರದೇಶದಲ್ಲಿ ಅಭಿವೃದ್ಧಿ ಹೊಂದಿತೆಂದು ಮತ್ತು ಕನಿಷ್ಠ ಹದಿನಾರು ಊರುಗಳನ್ನು ಒಟ್ಟುಗೂಡಿಸಿ ರಚಿತವಾದುದೆಂದು ಡಾ. ಎಂ. ಬಿ. ನೇಗಿನಹಾಳರು ಖಚಿತಪಡಿಸಿದ್ದಾರೆ.[೧೧]

ಬೆಳಗಾವಿ ಕೋಟೆಯನ್ನು ಯಾರು ಕಟ್ಟಿಸಿದರು ಎನ್ನುವುದಕ್ಕೆ ಸರಿಯಾದ ದಾಖಲೆಗಳಿಲ್ಲ. ಕ್ರಿ ಶ. ಪೂ. ೨೨೫ರಲ್ಲಿ ಜಕ್ಕದೇವ ಎನ್ನುವ ರಾಜನು ಬೆಳಗಾವಿಯಲ್ಲಿ ಕೋಟೆಯನ್ನು ಕಟ್ಟಿಕೊಂಡು ಸುಮಾರು ೮೦೦೦ ಹಳ್ಳಿಗಳನ್ನು ಆಳುತ್ತಿದ್ದನು[೧೨] ಎನ್ನುವ ಹೇಳಿಕೆಯನ್ನು ಗಮನಿಸಿದಾಗ ಈಗಿನ ಕೋಟೆಯೇ ಅದಾಗಿರಬಹುದೆನ್ನುವುದಕ್ಕೆ ಸಾಕಷ್ಟು ಪುರಾವೆಗಳು ದೊರೆಯುತ್ತವೆ. ಜಕ್ಕದೇವನು ೧೦೧ ಜೈನ ಬಸದಿಗಳನ್ನು ಹಾಗೂ ಬಾವಿಗಳನ್ನು ಕಟ್ಟಿಸಿದನು. ಈ ಜೈನ ಬಸದಿಗಳು ಹಾಗೂ ಬಾವಿಗಳ ಕುರುಹುಗಳು ಕೋಟೆಯ ಆವರಣದೊಳಗೆ ಕಂಡುಬರುತ್ತವೆ. ಅಂದರೆ ಬೆಳಗಾವಿ ನಗರದ ಎರಡನೆಯ ಹಂತವು ಈ ಪ್ರದೇಶದಲ್ಲಾಗಿರಬಹುದಾಗಿದೆ. ಅದು ಕಾಲಕಾಲಕ್ಕೆ ರಾಜರಿಂದ ರಾಜರಿಗೆ ಬದಲಾವಣೆಯನ್ನು ಹೊಂದಿ ಈ ಮೇಲೆ ತಿಳಿಸಿದ ಮೂರನೆಯ ಹಂತದ ಬೆಳಗಾವಿಯು ರೂಪಗೊಂಡಿರಬಹುದಾಗಿದೆ.

ಬೆಳಗಾವಿಗೆ ಹೆಚ್ಚು ವ್ಯಾಪ್ತಿ ಬಂದದ್ದು ರಟ್ಟರ ಆಳ್ವಿಕೆಯ ಕಾಲದಲ್ಲಿ. ರಟ್ಟರು ಕೋಟೆಯ ಆವರಣದೊಳಗೆ ಬಸದಿಗಳನ್ನು ನಿರ್ಮಿಸಿ ಜೈನರ ಧಾರ್ಮಿಕ ನೆಲೆಯನ್ನಾಗಿಸಿದರು. ಕರ್ನಾಟಕದ ಶ್ರೇಷ್ಠ ಶಿಲ್ಪಕಲಾಕೃತಿಗಳಲ್ಲಿ ಒಂದಾದ ಕಮಲ ಬಸದಿಯು ರಟ್ಟರ ಕಾಲದಲ್ಲಿಯೇ ಕಟ್ಟಲ್ಪಟ್ಟಿತು. ಇವರ ಕಾಲದಲ್ಲಿಯೇ ಬೆಳಗಾವಿಯು ರಾಜಧಾನಿಯ ಪಟ್ಟವನ್ನು ಪಡೆದು ಐತಿಹಾಸಿಕ ಮಹತ್ವವನ್ನು ಪಡೆದುಕೊಳ್ಳುವುದರ ಜೊತೆಗೆ ಬೆಳಗಾವಿ ನಗರದ ವಿಕಾಸವೂ ಆಯಿತು. ಕೋಟೆಗೆ ಹೊಂದಿಕೊಂಡೇ ಬೆಳಗಾವಿ ಬೆಳೆಯಿತು. ಈ ಹಂತದಲ್ಲಿ ಹಲವಾರು ಜೈನ ಬಸದಿಗಳು ದೇವಾಲಯಗಳು ಸ್ಥಾಪನೆಗೊಂಡವು. ಒಂದೊಂದು ಪ್ರತ್ಯೇಕ ಹಳ್ಳಿಗಳಾಗಿದ್ದ ಪ್ರದೇಶಗಳು ಸಮೀಪವಾಗತೊಡಗಿ ಒಂದು ನಗರದ ಸ್ವರೂಪವನ್ನು ಹೊಂದತೊಡಗಿತು. ಹೀಗೆ ಸುಮಾರು ಎಂಟು ಹಳ್ಳಿಗಳ ಅಸ್ತಿತ್ವವನ್ನು ಡಾ. ಎಂ. ಬಿ. ನೇಗಿನಹಾಳರು ಗುರುತಿಸಿದ್ದಾರೆ.[೧೩] ಈಗಿನ ಚವಾಟಗಲ್ಲಿ, ಕಂಗ್ರಾಳ, ಗೋಂದಳಿಗಲ್ಲಿ, ಕೋನವಾಳಗಲ್ಲಿ, ಬಾಂಧೂರಗಲ್ಲಿ, ಹೊಸೂರ ಅಥವಾ ಹೊಸಟ್ಟಿ, ಖಾಸಬಾಗ, ಶಹಪೂರ, ಮತ್ತು ವಡಗಾವಿ ಈ ಪ್ರದೇಶಗಳು ಮೂಲ ಬೆಳಗಾವಿಯ ಪ್ರದೇಶಗಳು ಎಂದು ಗುರುತಿಸಿದ್ದಾರೆ. ಈ ಪ್ರದೇಶಗಳು ಮೊದಲು ಪ್ರತ್ಯೇಕ ಹಳ್ಳಿಗಳಾಗಿದ್ದವು ಎನ್ನುವುಕ್ಕೆ ಈ ಪ್ರದೇಶಗಳಲ್ಲಿರುವ ಹರಿಜನ ಕೇರಿಗಳನ್ನು ಮಾನದಂಡವಾಗಿಸಿದ್ದಾರೆ. ಮೂಲ ಬೆಳಗಾವಿ ಪ್ರದೇಶವು ಈಗಿರುವ ಶನಿದೇವರ ಗುಡಿಯಿಂದ ಉತ್ತರ ವೆಂಕಟರಮಣನ ಗುಡಿ, ಪೂರ್ವದ ಮಠಬೀದಿಯ ತುದಿಯಲ್ಲಿರುವ ವೀರಶೈವ ಮಠದಿಂದ ಪಶ್ಚಿಮದ ಹನುಮಂತದೇವರ ಗುಡಿ ವರೆಗಿನ ಪ್ರದೇಶ ಎಂದು ಗುರುತಿಸಿದ್ದಾರೆ. ಈಗಲೂ ಈ ಪ್ರದೇಶದಲ್ಲಿ ಶೇಕಡ ೮೦ರಷ್ಟು ಕನ್ನಡಿಗರು ಇರುವರು. ಈ ಪ್ರದೇಶದಲ್ಲಿನ ದೇವಾಲಯಗಳು, ಆಚರಣೆಗಳು, ಸಂಪ್ರದಾಯಗಳು ಕನ್ನಡ ಸಂಸ್ಕೃತಿಯದ್ದಾಗಿವೆ.

ಮೂಲ ಬೆಳಗಾವಿಯ ರಚನೆ ವಿಶಿಷ್ಟವಾಗಿದೆ. ಕೋಟೆಯ ಪಶ್ಚಿಮಕ್ಕೆ ಬೆಳವಣಿಗೆಯನ್ನು ಹೊಂದುತ್ತಾ ಸಾಗಿದೆ. ಅಂದಿನ ಬೆಳಗಾವಿಯಲ್ಲಿ ಎಲ್ಲ ರಸ್ತೆಗಳು ಪೂರ್ವಪಶ್ಚಿಮವಾಗಿಯೇ ಇದ್ದವು. ಪ್ರತಿಯೊಂದು ಓಣಿಯ ಕೊನೆಗೆ ಪಶ್ಚಿಮ ದಿಕ್ಕಿನಲ್ಲಿ ಒಂದೊಂದು ದೇವಸ್ಥಾನವಿದ್ದುದು ಒಂದು ವಿಶೇಷ. ಅಲ್ಲದೆ ಪ್ರತಿಯೊಂದು ರಸ್ತೆಯೂ ಕೋಟೆಯ ದಿಕ್ಕಿಗೆ ಕೊನೆಗೊಳ್ಳುತ್ತವೆ. ಈ ವ್ಯವಸ್ಥೆಯು ಇಂದಿಗೂ ಕೂಡ ಸ್ಪಷ್ಟವಾಗಿ ಕಂಡುಬರುತ್ತದೆ.

ಪೇಶ್ವೆಗಳ ಆಡಳಿತದ ಅವಧಿಯಲ್ಲಿ ಶಹಪೂರ, ವಡಗಾಂವಿ, ಆನಿಗೋಳ ಪ್ರದೇಶಗಳನ್ನು ಹೊರತುಪಡಿಸಿ ಹಳೆಬೆಳಗಾವಿ ಎಂದು ಕರೆಯಲ್ಪಡುವ ಚವ್ವಾಟಗಲ್ಲಿ, ಕಂಗ್ರಾಳಿಗಲ್ಲಿ, ಬಸವನಗಲ್ಲಿ, ಖಡೇಬಜಾರ, ದರಬಾರಗಲ್ಲಿ, ಬಾಂದೂರಗಲ್ಲಿ ಮುಂತಾದ ಪ್ರದೇಶಗಳನ್ನೊಳಗೊಂಡ ಬೆಳಗಾವಿಯು ಮಾತ್ರ ಇತ್ತು. ಶಹಪೂರವು ಸಾಂಗ್ಲಿ ಸಂಸ್ಥಾನಕ್ಕೆ, ವಡಗಾವಿಯ ಕುರುಂದವಾಡ ಕಿರಿಯ ಸಂಸ್ಥಾನಕ್ಕೆ ಆನಿಗೋಳವು ಕುರುಂದವಾಡ ಹಿರಿಯ ಸಂಸ್ಥಾನಕ್ಕೆ ಸೇರಿ ಪ್ರತ್ಯೇಕವಾಗಿಯೇ ಆಡಳಿತವ್ಯವಸ್ಥೆಯನ್ನು ಒಳಗೊಂಡಿದ್ದವು. ಮುಂದೆ ೧೮೧೮ರಲ್ಲಿ ಬೆಳಗಾವಿ ಕೋಟೆಯನ್ನು ಬ್ರಿಟಿಷರು ವಶಪಡಿಸಿಕೊಂಡ ಮೇಲೆ ಬೆಳಗಾವಿ ನಗರ ರಚನೆಯ ಸ್ಪಷ್ಟವಾದ ಚಿತ್ರಣ ದೊರೆಯತೊಡಗಿತು. ಅವರ

ಏಕರೂಪದ ಆಡಳಿತದ ವ್ಯವಸ್ಥೆಯು ಬೆಳಗಾವಿ ಪಾಲಿಗೆ ವರವಾಗಿ ಪರಿಣಮಿಸಿತು. ತುಂಡು ತುಂಡಾಗಿದ್ದ ಪ್ರದೇಶಗಳೆಲ್ಲವೂ ಕೂಡಿಕೊಂಡು ಅಖಂಡ ನಗರವಾಗಿ ರೂಪಗೊಂಡಿತು.

**೨. ಬೆಳವಣಿಗೆಯ ಹಂತ:**

ಪ್ರಾಚೀನ ಕಾಲದಿಂದಲೂ ಬೆಳಗಾವಿಯು ಬಹುಮುಖ ರೀತಿಯಲ್ಲಿ ನಿರ್ಮಾಣಗೊಂಡ ರೀತಿಯನ್ನು ನೋಡಿಯಾದ ಮೇಲೆ ಬೆಳಗಾವಿ ನಗರವು ವಿವಿಧ ಪ್ರದೇಶಗಳಲ್ಲಿ ಬೆಳವಣಿಗೆ ಪಡೆದ ಹಂತವನ್ನು ಇನ್ನು ಮುಂದೆ ಗಮನಿಸಬಹುದು.

ಸಂಸ್ಥಾನಗಳೆಲ್ಲ ಅಳಿದು ಹೋದದ್ದರಿಂದ ಶಹಪೂರ, ಖಾಸಭಾಗ, ವಡಗಾವಿ, ಅನಿಗೋಳ ಪ್ರದೇಶಗಳು ಬೆಳಗಾವಿಯಲ್ಲಿ ವಿಲೀನಗೊಂಡವು. ಹೀಗಾಗಿ ಇವೆಲ್ಲವುಗಳನ್ನು ಒಳಗೊಂಡ ಬೆಳಗಾವಿ ನಗರ ರಚನೆಗೊಂಡಿತು. ಇದರ ಜೊತೆಗೆ ಕ್ಯಾಂಪ ಪ್ರದೇಶದಲ್ಲಿ ಬ್ರಿಟಿಷ ಅಧಿಕಾರಿಗಳ, ಸೈನಿಕರ, ಮತ್ತು ನಾಗರಿಕರ ವಸತಿಯನ್ನು ಹೊಂದಿದ್ದ ಪ್ರದೇಶವು ಆಡಳಿತಾತ್ಮಕವಾಗಿ ಪ್ರತ್ಯೇಕವಾಗಿದ್ದರೂ ಬೆಳಗಾವಿಯ ಸಾಂಸ್ಕೃತಿಕ ಸಂಬಂಧವನ್ನು ಹೊಂದಿ ಅದು ನಗರದಲ್ಲಿಯೇ ಪರಿಗಣಿತವಾಗಿತ್ತು. ಹೀಗೆ ೨೦ನೆಯ ಶತಮಾನದ ಪ್ರಾರಂಭದ ಹೊತ್ತಿಗೆ ಬೆಳಗಾವಿಯು ನಗರ ಪ್ರದೇಶವಾಗಿ ರೂಪಗೊಂಡಿತು. ಈ ಅವಧಿಯಲ್ಲಯೇ ಹಿಂದವಾಡಿ, ಟಿಳಕವಾಡಿ, ಕಾಳಿಅಂಬ್ರಾಯಿ, ಶಿವಾಜಿ ನಗರ ಮುಂತಾದ ಪ್ರದೇಶಗಳು ಹುಟ್ಟಿಕೊಡು ಬೆಳಗಣಿಗೆಯನ್ನು ಹೊಂದಿದವು. ಸಿವ್ಹಿಲ್ ಆಸ್ಪತ್ರೆ, ಜಿಲ್ಲಾ ನ್ಯಾಯಾಲಯ, ಜಿಲ್ಲಾ ಆಡಳಿತ ಕೇಂದ್ರ ಕಛೇರಿ ಮುಂತಾದವುಗಳು ಸ್ಥಾಪನೆಗೊಂಡು ನಗರ ಬೆಳವಣಿಗೆಗೆ ಪ್ರಮುಖ ಕಾರಣವಾದವು. ಮುಂದೆ ಸ್ವಾತಂತ್ರ್ಯ ನಂತರದ ದಿನಗಳಲ್ಲಿ ಹೊಸ ಹೊಸ ಬಡಾವಣೆಗಳು ನಿರ್ಮಾಣವಾಗ ತೊಡಗಿದವು. ಜೊತೆಗೆ ನಗರೀಕರಣದ ಪ್ರಭಾವದಲ್ಲಿ ನಗರದ ಸಮೀಪವಿದ್ದ ಹಳ್ಳಿಗಳಿಗೂ ನಗರಸಭೆಯ ವ್ಯಾಪ್ತಿಯೊಳಗೆ ಸೇರಿಕೊಂಡವು. ಹೊಸದಾಗಿ ನಿರ್ಮಾಣಗೊಂಡ ಬಡಾವಣೆಗಳಲ್ಲಿ ಪ್ರಮುಖವಾಗಿ ಶಿವಬಸವನ ನಗರ, ವಿಶ್ವೇಶ್ವರಯ್ಯ ನಗರ, ಗಾಂಧಿ ನಗರ, ಅಂಬೇಡ್ಕರ ನಗರ, ಮಹಾಂತೇಶ ನಗರ, ಅಶೋಕ ನಗರ, ಆಂಜನೇಯ ನಗರ, ಶಾಹು ನಗರ, ಚನ್ನಮ್ಮ ನಗರ, ವಿಜಯ ನಗರ, ಗಣೇಶಪೂರ, ರುಕ್ಮೀಣಿ ನಗರ, ವೈಭವ ನಗರ ಮುಂತಾದ ಹೊಸ ಹೊಸ ಬಡಾವಣೆಯಗಳು ನಿರ್ಮಾಣಗೊಂಡವು. ಅಲ್ಲದೆ ಮಹಾನಗರ ಸಭೆಯ ವ್ಯಾಪ್ತಿಯೊಳಗೆ ಕಣಬರಗಿ, ಬಸವನ ಕುಡಚಿ, ಯಮನಾಪುರ, ಮುತ್ಯಾನಟ್ಟಿ, ಅಲಾರವಾಡ ಮುಂತಾದ ಗ್ರಾಮಗಳು ಸೇರಿಕೊಂಡು ನಗರ ಬೆಳವಣಿಗೆಗೆ ಪ್ರಮುಖ ಕಾರಣವಾದವು. ಇಂದು ಪ್ರಮುಖ ೨೫ ಬಡಾವಣೆಗಳನ್ನು ನೂರಕ್ಕಿಂತಲೂ ಹೆಚ್ಚು ಪ್ರಮುಖ ಬೀದಿಗಳನ್ನು ಒಳಗೊಂಡು ಮಹಾನಗರವಾಗಿ ರೂಪುಗೊಂಡಿದೆ. ಅಲ್ಲದೆ ಹೊಸದಾಗಿ ಮಹತ್ವದ ಸಂಸ್ಥೆಗಳಾದ

ರಾಣಿಚೆನ್ನಮ್ಮ ವಿಶ್ವವಿದ್ಯಾಲಯ, ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ ಹಾಗೂ ವಿಧಾನಸೌಧ ಪ್ರದೇಶಗಳು ನಗರ ವ್ಯಾಪ್ತಿಯೊಳಗೆ ಬರುತ್ತವೆ. ಇವುಗಳ ಅಕ್ಕ ಪಕ್ಕದ ಹಳ್ಳಿಗಳು ಸ್ವತಂತ್ರವಾದ ಹಳ್ಳಿಯ ಅಸ್ತಿತ್ವದಲ್ಲಿದ್ದರೂ ಮುಂದಿನದಿನಗಳಲ್ಲಿ ಅವೂ ನಗರ ವ್ಯಾಪ್ತಿಯೊಳಗೆ ಸೇರುವ ಸಾಧ್ಯತೆಗಳಿವೆ. ಅಂದರೆ ಸುಮಾರು ೨೦ ಹಳ್ಳಿಗಳು ಸೇರಿಕೊಂಡು ಬೃಹತ್ ಮಹಾನಗರವಾಗಿ ರೂಪಗೊಳ್ಳುವ ಸಾಧ್ಯತೆಗಳು ಕಂಡುಬರುತ್ತದೆ. ಈಗಿನ ಮಹಾನಗರದ ಕೆಲವು ಪ್ರಮುಖ ಪ್ರದೇಶಗಳ ಹಾಗೂ ಪ್ರಮುಖ ಬೀದಿಗಳ ಹಿನ್ನೆಲೆ, ಮಹತ್ವವನ್ನು ಪರಿಗಣಿಸಿ ಎರಡು ರೀತಿಯಲ್ಲಿ ವಿಂಗಡಿಸಿಕೊಳ್ಳಲಾಗಿದೆ. ಅ. ಪ್ರಮುಖ ಪ್ರದೇಶಗಳು ಆ. ಪ್ರಮುಖ ಬೀದಿಗಳು.

**ಅ. ಪ್ರಮುಖ ಪ್ರದೇಶಗಳು:**

**ವಡಗಾವಿ :** ಪ್ರಾಚೀನ ಇತಿಹಾಸವನ್ನು ಹೊಂದಿದ ವಡಗಾವಿ ಪ್ರದೇಶವು ಶಿಲಾಯುಗದಿಂದಲೂ ಅಸ್ತಿತ್ವದಲ್ಲಿದ್ದು ಮಹತ್ವದ ಸ್ಥಾನವನ್ನು ಹೊಂದಿದೆ. ವಡಗಾವಿ–ಮಾಧವಪುರ ಪ್ರದೇಶದಲ್ಲಿ ಉತ್ಖನನ ಕಾರ್ಯನಡೆದು ಸುಮಾರು ಎರಡು ಸಾವಿರ ವರ್ಷಗಳ ಹಿಂದಿನ ಇತಿಹಾಸವನ್ನು ಬೆಳಕಿಗೆ ತರಲಾಗಿದೆ. ಪ್ರಾಚೀನ ಭಾರತದ ಅತ್ಯಂತ ಸುವ್ಯವಸ್ಥಿತವಾದ ನಗರದ ಅವಶೇಷಗಳು ಈ ಪ್ರದೇಶದಲ್ಲಿ ದೊರೆತಿವೆ. ಶಾತವಾಹನರ ಕಾಲದಲ್ಲಿ ಪ್ರಮುಖ ಆಡಳಿತ ಕೇಂದ್ರವಾಗಿ, ಧಾರ್ಮಿಕ ನೆಲೆಯಾಗಿ ರೂಪಗೊಂಡಿದ್ದ ಈ ಪ್ರದೇಶದಲ್ಲಿ ಹಲವಾರು ಸ್ಮಾರಕಗಳು, ಸಾಮಗ್ರಿಗಳು, ಶಾಸನಗಳು ದೊರೆತಿವೆ. ಇಲ್ಲಿ ಯಜ್ಞ–ಯಾಗಗಳು ನಡೆದುದರ ಉಲ್ಲೇಖ ಸಿಗುತ್ತದೆ.

ವಡಗಾವಿಯ ಮಂಗಾಯಿಗುಡಿ (ವಡಗಾವಿಯ ಗ್ರಾಮದೇವತೆ) ವಿಶೇಷ ಆಚರಣೆಗಳಿಂದ ಪ್ರಸಿದ್ಧಿ ಪಡೆದಿದೆ. ಕಲ್ಯಾಣಪ್ಪನ ಮಠ ಮತ್ತೊಂದು ವಿಶೇಷ ಸಂಪ್ರದಾಯವನ್ನು ಹೊಂದಿದ ಮಠವಾಗಿದೆ. ವಡಗಾವಿಯಲ್ಲಿ ಹೆಚ್ಚಾಗಿ ಬಟ್ಟೆ ನೆಯ್ಯುವ ಮಗ್ಗಗಳು ಕಂಡುಬರುತ್ತದೆ. ಹಳೆಯ ಕಾಲದ ಮನೆಗಳು ಹೆಚ್ಚಾಗಿವೆ. ಕನ್ನಡ ಮರಾಠಿ ಎರಡೂ ಸಂಸ್ಕೃತಿಯ ಜನರು ಇಲ್ಲಿದ್ದಾರೆ.

**ಶಹಪೂರ:** ಶಹಪೂರವೆಂದರೆ ಬೆಳಗಾವಿಯ ಒಂದು ಉಪನಗರ. ಶಹಪೂರ ದೊಡ್ಡ ಭಾಗವಾಗಿದ್ದರೂ ಬೆಳಗಾವಿಯ ಆಡಳಿತದಲ್ಲಿಯೇ ಇರುವುದು. ಬೆಳಗಾವಿಯ ದಕ್ಷಿಣ ಭಾಗಕ್ಕೆ ಹಬ್ಬಿಕೊಂಡಿರುವ ಈ ಪ್ರದೇಶವು ಅಂದಿನ ಸಾಂಗಲಿ ಸಂಸ್ಥಾನದ ಭಾಗವಾಗಿತ್ತು. ಅಂದು ಇಲ್ಲಿ ಮರಾಠಿ ಭಾಷೆಯು ಆಡಳಿತ ಭಾಷೆಯಾಗಿತ್ತು. ಮುಂದೆ ಬ್ರಿಟಿಷರ ಆಡಳಿತ ಪ್ರಾರಂಭವಾದಾಗ ಈ ಪ್ರದೇಶವು ಬೆಳಗಾವಿಯ ಆಡಳಿತಕ್ಕೆ ಸೇರಿತು. ಇಂದು ಬೆಳಗಾವಿ ಮಹಾನಗರ ಸಭೆಯ ವ್ಯಾಪ್ತಿಯೊಳಗೆ ಈ ಪ್ರದೇಶವು ಬರುತ್ತದೆ.

ಶಹಪೂರ ಪ್ರದೇಶವು ಹದಿನಾರನೆಯ ಶತಮಾನದಲ್ಲಿ ಪ್ರಮುಖ ಪಟ್ಟಣವೆನಿಸಿ ವಿಜಾಪುರದ ಆದಿಲ್‌ಶಾಹಿಗಳ ಕಾಲದಲ್ಲಿ ಆಡಳಿತ ವಿಭಾಗವಾಗಿ ಮಹತ್ವವನ್ನು ಪಡೆದುಕೊಂಡಿತ್ತು. ಶೇರಖಾನ ಎಂಬ ಆದಿಲಶಾಹಿ ಅಧಿಕಾರಿಯು

ಕ್ರಿ. ಶ. ೧೫೫೦ರಲ್ಲಿ ಶಹಪುರದಲ್ಲಿ 'ಶಹಪೇಟೆ' ಎಂಬ ಬಡಾವಣೆಯನ್ನು ನಿರ್ಮಿಸಿದನು. ಅಂದಿನಿಂದ ಇದು ವ್ಯಾಪಾರಿ ಕೇಂದ್ರವಾಗಿ ಬೆಳೆಯಿತು. ಈ ಶಹಪೇಟೆಯ ಸುತ್ತಲೂ ಕಲ್ಲಿನ ಕೋಟೆಯನ್ನು ಕಟ್ಟಿಸಿದನು. ಈತನ ಆಳ್ವಿಕೆಯಲ್ಲಿ ಶಹಪೂರವು ಬೆಳ್ಳಿ , ಬಂಗಾರ ಮಾರಾಟದ ಕೇಂದ್ರವಾಯಿತು. ಇಲ್ಲಿದ್ದ ಅಕ್ಕಸಾಲಿಗರು ಜಗತ್ಪ್ರಸಿದ್ಧರಾಗಿದ್ದರು. ಶಹಪುರವು ಮುತ್ತು, ರತ್ನ, ವಜ್ರ, ವೈಢೂರ್ಯಗಳ ಕೊಡು ಕೊಳ್ಳುವ ತಾಣವಾಗಿತ್ತು. ಈ ಚಿನಿವಾಲರ ರಕ್ಷಣೆಗಾಗಿಯೇ ಶೇರಖಾನನು ಶಹಾಪುರದ ಸುತ್ತಲು ಭದ್ರವಾದ ಕೋಟೆಯನ್ನು ಕಟ್ಟಿಸಿದನು. ಆದರೆ ಈಗ ಕೋಟೆಯ ಯಾವ ಕುರುಹುಗಳು ಕಂಡುಬರುವುದಿಲ್ಲ. ಅಂದು ಬೆಳಗಾವಿಯು ಗೋವೆ ಮತ್ತು ವಿಜಾಪುರ ನಡುವಿನ ಅತೀ ಮುಖ್ಯ ವ್ಯಾಪಾರಿ ಕೇಂದ್ರವಾಗಿತ್ತು. ಬ್ರಿಟಿಷರು ಬೆಳಗಾವಿಯನ್ನು ವಶಪಡಿಸಿಕೊಳ್ಳುವುದಕ್ಕಿಂತ ಪೂರ್ವದಲ್ಲಿ ಶಹಪುರವು ಸಾಂಗ್ಲಿ ಪಟವರ್ಧನರ ಆಳ್ವಿಕೆಯಲ್ಲಿತ್ತು. ಆಗಲೂ ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು. ಅಲ್ಲದೆ ರೇಶಿಮೆ ಸೀರೆಯ ನೆಯ್ಗೆಗೆ ಮತ್ತು ಬಟ್ಟೆಗಳಿಗೆ ಬಣ್ಣ ಎದ್ದುವ ಕೈಗಾರಿಕೆಗೆ ಅಂದು ಪ್ರಸಿದ್ಧಿಯನ್ನು ಹೊಂದಿತ್ತು. ಇಂದಿಗೂ ಕೂಡ ಶಹಪೂರದ ತುಂಬೆಲ್ಲಾ ಎಲ್ಲಿ ನೋಡಿದಲ್ಲೆಲ್ಲ ಬಟ್ಟೆ ನೇಯುವ ಮಗ್ಗಗಳೇ ಕಂಡು ಬರುತ್ತದೆ. ಇಲ್ಲಿಯ ಸೀರೆಯು ದೇಶದಲ್ಲಿ ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ಬ್ರಿಟಿಷರ ಕಾಲದಲ್ಲಿ ದಕ್ಷಿಣ ಮಹಾರಾಷ್ಟ್ರದ ಭಾಗದಲ್ಲಿ ಹುಬ್ಬಳ್ಳಿಯ ನಂತರ ಶಹಪುರವು ದೊಡ್ಡ ವ್ಯಾಪಾರದ ಸ್ಥಳವೆನಿಸಿತ್ತು.[೧೪]

**ಅನಗೋಳ :** ಇದು ಕುರಂದವಾಡ ಸಂಸ್ಥಾನಕ್ಕೆ ಸಂಬಂಧಿಸಿದ ಪ್ರದೇಶ. ಇದು ಬೆಳಗಾವಿಯ ಕೊನೆಯ ಭಾಗಕ್ಕೆ ಗೋವ ರಾಜ್ಯದ ಮಾರ್ಗದಲ್ಲಿದೆ. ಇಲ್ಲಿ ಒಂದು ದೊಡ್ಡದಾದ ಕೊಳ ಇದ್ದು ಮೊದಲು ಇಲ್ಲಿ ಆನೆಗಳು ನೀರು ಕುಡಿಯಲು ಬರುತ್ತಿದ್ದವು. ಹೀಗಾಗಿ ಇದಕ್ಕೆ 'ಆನೆಯ ಕೊಳ' ಎಂದು ಹೆಸರು ಬಂದಿತು. ಮುಂದೆ ಅದು ರೂಪಾತಂರಗೊಂಡು 'ಅನಗೋಳ' ಆಯಿತು. ಇಲ್ಲಿ ಹೆಚ್ಚಾಗಿ ಕೆಲಸಗಾರರು ವಾಸಿಸುತ್ತಾರೆ. ಎಲ್ಲ ಭಾಷೆಯ ಜನರು ಇಲ್ಲಿದ್ದಾರೆ. ಇಲ್ಲಿಯ ಮನೆಗಳು ಹಳೆಯ ಕಾಲದ ಕಪ್ಪು ಹಂಚಿನ ಮನೆಗಳಾಗಿವೆ.

**ಟಿಳಕವಾಡಿ:** ೧೯೨೦-೩೦ರ ದಶಕದ ನಡುವೆ ಬೆಳಗಾವಿಗೆ ಪ್ಲೇಗಿನ ಹಾವಳಿ ಎದ್ದಾಗ ಬೆಳಗಾವಿಯಲ್ಲಿಯ ಶ್ರೀಮಂತ ವರ್ಗದವರು ಇಂದಿನ ಖಾನಾಪೂರ ರಸ್ತೆಯ ಪಕ್ಕದಲ್ಲಿ ಸ್ವಚ್ಛವಾದ ವಾತಾವರಣವನ್ನು ಹೊಂದಿದ್ದ ಪ್ರದೇಶದಲ್ಲಿ ಮನಗಳನ್ನು ಕಟ್ಟಿಕೊಂಡು ವಾಸಿಸತೊಡಗಿದರು. ಈ ಪ್ರದೇಶವೇ ಇಂದಿನ ಟಿಳಕವಾಡಿ. ನಿರ್ಮಲವಾದ ವಾತಾವರಣವನ್ನು ಹೊಂದಿದ ಈ ಪ್ರದೇಶವು ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿದೆ. ಶ್ರೀಮಂತರ ಬಡಾವಣೆಯೆಂದೇ ಗುರುತಿಸಲ್ಪಡುವ ಈ ಪ್ರದೇಶದಲ್ಲಿಯೇ ೧೯೨೪ರ ಕಾಂಗ್ರೆಸ್ ಅಧಿವೇಶನ ಜರುಗಿತ್ತು. ಇಂದು ಬೆಳಗಾವಿ ದೊಡ್ಡ ವಿಸ್ತರಣ ಹೊಂದಿದ ಪ್ರದೇಶಗಳಲ್ಲಿ ಟಿಕಳವಾಡಿಯೂ ಒಂದಾಗಿದೆ. ಇಲ್ಲಿ ಬ್ರಿಟಿಷರ ಕಾಲದ ದೊಡ್ಡ ದೊಡ್ಡ ಬಂಗಲೆಯ ವಿಶೇಷವಾದ ಆಕರ್ಷಣೆಗಳಾಗಿವೆ. ಮನೆ ಮುಂದೆ ಹೂದೋಟ, ಮಾವಿನ ಗಿಡಗಳು, ಹಲಸಿನ ಗಿಡಗಳು ತುಂಬಿಕೊಂಡು ಸೌಂದರ್ಯದಿಂದ ಆಕರ್ಷಣೆ ಹೊಂದಿದೆ.

ಮೊದಲು 'ಟಿಳಕವಾಡಿ' ಎಂಬ ಹೆಸರನ್ನು ಹೊಂದಿ ಈಗ 'ಟಿಳಕವಾಡಿ' ಎಂದು ನಾಮಾಂತರಗೊಂಡಿದೆ. ಇಲ್ಲಿ ಹೆಚ್ಚಾಗಿ ಮರಾಠಿ. ಕನ್ನಡ ಎರಡೂ ಭಾಷೆಯ ಜನರು ವಾಸಿಸುತ್ತಾರೆ. ಬ್ರಾಹ್ಮಣ ಹಾಗೂ ಲಿಂಗವಂತ ಸಮುದಾಯದವರು ಹೆಚ್ಚಾಗಿದ್ದಾರೆ. ಬೆಳಗಾವಿಯು ಮಹಾನಗರವಾಗಿ ರೂಪಗೊಳ್ಳುವಲ್ಲಿ ಟಿಳಕವಾಡಿಯೂ ಪ್ರಮುಖ ಕಾರಣವಾಗಿದೆ. ಟಿಕಳವಾಡಿ, ವಡಗಾವಿ, ಶಹಪೂರ, ಖಾಸಭಾಗಗಳ ನಡುವಿನ ವಿಸ್ತಾರದ ಮರಡಿಯ ಪ್ರದೇಶದಲ್ಲಿ ಬೆಳವಣಿಗೆಗೊಂಡ ನಿವೇಶಗಳಿಂದ ಬೆಳಗಾವಿ ಮಹಾನಗರವಾಗುವುದಕ್ಕೆ ನಾಂದಿಯಾಯಿತು. ಈ ಪ್ರದೇಶದಲ್ಲಿ ನೀರು ಹೆಚ್ಚಿನ ಪ್ರಮಾಣದಲ್ಲಿರುವುದೇ ಇಲ್ಲಿ ವಸತಿ ನಿವೇಶನಗಳು ಹೆಚ್ಚಾಗಲಿಕ್ಕೆ ಪ್ರಮುಖ ಕಾರಣವಾಯಿತು. ಟಿಳಕವಾಡಿಯಲ್ಲಿ ೧೫, ೨೦ ಫೂಟಿಗೆ ನೀರು ಹತ್ತುತ್ತದೆ. ಹೀಗಾಗಿ ಇಲ್ಲಿ ಪ್ರತಿಯೊಂದು ಮನೆಗಳಿಗೂ ಬಾವಿಗಳಿವೆ. ಅತ್ಯಂತ ಕಡಿಮೆ ಸುತ್ತಳತೆಯ ಬಾವಿಗಳು ಮನೆಯ ಹೊರಭಾಗದಲ್ಲಿ ಅಥವಾ ಹಿತ್ತಲಿನ ಭಾಗದಲ್ಲಿ ಕಂಡು ಬರುತ್ತವೆ. ಈ ಪ್ರದೇಶದ ನೀರು ಅತ್ಯಂತ ರುಚಿಕಟ್ಟಾಗಿರುವುದು ವಿಶೇಷವಾಗಿದೆ, ಒಂದು ಕಾಲಕ್ಕೆ ಉರು ಹೊರಗಿನ ಭಾಗವಾಗಿದ್ದ ಟಿಳಕವಾಡಿಯೂ ಇಂದು ನಗರದ ಮಧ್ಯದಲ್ಲಿ ಬಂದಿದೆ. ಭೋಗಾರವೆಸ್‌ದಿಂದ ಕ್ಯಾಂಪ್ ಪ್ರದೇಶ, ರೇಲ್ವೆ ಸ್ಟೇಷನ ಮಾರ್ಗವಾಗಿ ಟಿಳಕವಾಡಿಯನ್ನು ಕೂಡುವ ರಸ್ತೆಯು ಇಂದು ನಗರದ ಪ್ರಮುಖ ದಟ್ಟಣೆಯ ರಸ್ತೆಯಾಗಿ ಬದಲಾವಣೆಗೊಂಡಿದೆ. ಈ ರಸ್ತೆಯು ಮುಂದೆ ಖಾನಾಪೂರಗೆ ಹೋಗುವ ರಸ್ತೆಯನ್ನು ಕೂಡುತ್ತದೆ.

**ಕ್ಯಾಂಪ್ ಪ್ರದೇಶ:** ಬೆಳಗಾವಿ ನಗರದ ಪಶ್ಚಿಮಕ್ಕೆ ಇರುವ ಕ್ಯಾಂಪ್ ಪ್ರದೇಶವು ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿದೆ. ಬೆಳಗಾವಿಯಿಂದ ಗೋವಾಕ್ಕೆ ಹೋಗುವ ಮಾರ್ಗದ ಪಕ್ಕದಲ್ಲಿ ಈ ಪ್ರದೇಶ ಹಬ್ಬಿದೆ. ಬ್ರಿಟಿಷರು ತಮ್ಮ ಸೈನಿಕ ನೆಲೆಯನ್ನು ಇಲ್ಲಿ ಸ್ಥಾಪಿಸಿ ಡಚ್ಚ, ಪೋರ್ಚುಗೀಸರ ದಾಳಿಯನ್ನು ತಡೆಗಟ್ಟಲು ಇಲ್ಲಿ ನೆಲೆಸಿದರು. ಸೈನಿಕರ, ಅಧಿಕಾರಿಗಳ ವಾಸ್ತವ್ಯವಾಗಿ ಈ ಪ್ರದೇಶದಲ್ಲಿ ಬಂಗಲೆಯನ್ನು ಕಟ್ಟಿಕೊಂಡರು. ಅತ್ಯಂತ ಸುವ್ಯವಸ್ಥೆಯಲ್ಲಿ ನಿರ್ಮಾಣಗೊಂಡ ಇಲ್ಲಿಯ ಮನೆಗಳು ಅಪರೂಪದ ಮನೆಗಳಾಗಿವೆ. ಈ ಪ್ರದೇಶವು ಬ್ರಿಟಿಷರ ನೇರ ಆಡಳಿತಕ್ಕೆ ಒಳಪಟ್ಟಿತ್ತು. ಈ ಪ್ರದೇಶದ ನಿರ್ಮಾಣದಿಂದ ಬೆಳಗಾವಿಯ ಸಾಂಸ್ಕೃತಿಕ ಪರಿಸರದ ಮೇಲೆ ಮಹತ್ವದ ಬದಲಾವಣೆ ಉಂಟಾಗಿದೆ. ಬೆಳಗಾವಿ ಗ್ರಾಮದಿಂದ ಪಟ್ಟಣವಾಗಿ ನಗರವಾಗಿ–ಮಹಾನಗರವಾಗಿ ರೂಪಗೊಳ್ಳುವಲ್ಲಿ ಈ ಪ್ರದೇಶದ ಪಾತ್ರ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಬೆಳಗಾವಿಯ ಗ್ರಾಮೀಣ ಪರಿಸರವನ್ನು ಆಧುನಿಕರಿಸಿ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವಕ್ಕೊಳಪಡಿಸಿತು. ಬೆಳಗಾವಿ ಜನರ ಆಹಾರ ವೇಷಭೂಷಣ, ವಿಚಾರ, ಬೇಡಿಕೆಗಳಿಗೆ ಕ್ಯಾಂಪ ಪ್ರದೇಶವು ಬಣ್ಣ ಬಳೆಯಿತು. ಪಾಶ್ಚಾತ್ಯರ ವಿಲಾಸ ಜೀವನದ ಅನುಕರಣೆ ಮದ್ಯ–ಮಾಂಸಗಳ ಸೇವನೆ ಮುಂತಾದ ಹವ್ಯಾಸಗಳನ್ನು ಬೆಳಗಾವಿ ಜನರು ಈ ಪ್ರದೇಶದಿಂದ ಪ್ರಭಾವಿತರಾಗಿ ಕಲಿತರು.

ಕ್ಯಾಂಪ್ ಪ್ರದೇಶವನ್ನು ಪ್ರವೇಶಿಸಿದರೆ ಯಾವುದೋ ಯುರೋಪಿಯನ್ ಪ್ರದೇಶಕ್ಕೆ ಕಾಲಿಟ್ಟಷ್ಟು ದಟ್ಟವಾದ ಪ್ರಭಾವವಿತ್ತು. ಗಿಡ ಮರಗಳಿಂದ ಆವೃತ್ತವಾದ ಈ ಪ್ರದೇಶವು ಹಿತಕರವಾದ ವಾತಾವರಣವನ್ನು ಹೊಂದಿದೆ. ಹೀಗಾಗಿ ಈ ಪ್ರದೇಶಕ್ಕೆ ಬೇರೆ ಬೇರೆ ಭಾಗಗಳಿಂದ ಹಾಯಾಗಿ ಕಾಲ ಕಳೆಯಲು ಬರುತ್ತಿದ್ದರು.

ಕ್ಯಾಂಪ್‌ದಲ್ಲಿರುವ ರಸ್ತೆಗಳ ಹೆಸರುಗಳನ್ನು ನೋಡಿದರೆ ಬ್ರಿಟಿಷರ ಪ್ರಭಾವ ಈ ಪ್ರದೇಶಕ್ಕೆ ಎಷ್ಟಿತ್ತೆಂಬುದು ತಿಳಿದುಬರುತ್ತದೆ. ಇಂದಿಗೂ ಈ ಪ್ರದೇಶ ಆ ವಾತಾವರಣದಿಂದ ಹೊರಗೆ ಬಂದಿಲ್ಲ. ಲಾಯಿಟನ್ ರೋಡ, ಚರ್ಚ ರೋಡ, ರಿಪನ್ ರೋಡ್, ಚಪೆಲ್ ರೋಡ, ನಾರ್ಥ ಬ್ರೂಕ ರೋಡ, ಜಾರ್ಡನ ರೋಡ, ಹಾರಿಸ ರೋಡ, ಟೆಂಪಲ್ ರೋಡ, ಕ್ಯಾಟಲ್ ರೋಡ ಮುಂತಾದ ಹೆಸರುಗಳೆಲ್ಲ ಬ್ರಿಟಿಷರ ಅಧಿಪತ್ಯದ ಕುರುಹುಗಳಾಗಿವೆ. ಕ್ಯಾಂಪ್ ಪ್ರದೇಶದ ಮುಖ್ಯ ಆಕರ್ಷಣೆ ಎಂದರೆ ಇಲ್ಲಿರುವ ಆಂಗ್ಲ ಮಾಧ್ಯಮದ ಸೆಂಟ್ ಜೇವಿಯರ್, ಸೆಂಟ್ ಜೋಸೆಪ್, ಸೆಂಟ್ ಫಾಲ್, ಸೆಂಟ್ ಮೇರಿ ಮುಂತಾದ ಶಾಲೆ-ಹಾಯಸ್ಕೂಲಗಳು ನಗರದ ಪ್ರತಿಷ್ಠಿತ ಶಾಲೆಗಳಾಗಿವೆ. ಇವು ನಗರದ ಶೈಕ್ಷಣಿಕ ವಿಕಾಸಕ್ಕೂ ಕಾರಣವಾಗಿವೆ. ಕ್ಯಾಂಪ್ ಪ್ರದೇಶದಲ್ಲಿರುವ ಚರ್ಚಗಳು ವಿಶೇಷ ಮಹತ್ವವನ್ನು ಪಡೆದುಕೊಂಡಿವೆ. ಇಲ್ಲಿಯ ಸೆಂಟ್ ಮೆರೀಸ್ ಚರ್ಚ ಅತ್ಯಾಕರ್ಷಕವಾಗಿದೆ. ಕ್ಯಾಂಪ್ ಪ್ರದೇಶವು ಬ್ರಿಟಿಷರ ಕಾಲದಿಂದಲೂ ಚರ್ಮೋದ್ಯಮಕ್ಕೆ ಪ್ರಸಿದ್ಧಿಯನ್ನು ಪಡೆದುಕೊಂಡಿದೆ.

ಈಗ ಈ ಪ್ರದೇಶವು ಮಿಲಟರಿಯವರ ವಶದಲ್ಲಿದೆ. ದೇಶದ ಪ್ರಮುಖ ಸೈನಿಕ ನೆಲೆಗಳಲ್ಲಿ ಒಂದಾದ ಮರಾಠಾ ಲೈಟ್ ಇನ್‌ಪೆಂಟರಿ ಇಲ್ಲಿದೆ. ಮಿಲಟರಿ ಆಡಳಿತವಿರುವುದರಿಂದ ರಸ್ತೆಗಳೆಲ್ಲ ಅಚ್ಚುಕಟ್ಟಾಗಿದೆ. ಗಿಡ ಮರಗಳಿಂದ ತುಂಬಿದ ಈ ಪ್ರದೇಶವು ಅತ್ಯಂತ ಮೋಹಕವಾಗಿ ಒಳ್ಳೆಯ ವಾತಾವರಣವನ್ನು ಹೊಂದಿದೆ.

ಕ್ಯಾಂಪ್ ಪ್ರದೇಶದಲ್ಲಿ ವಿಶೇಷವಾದ ದೇವಾಲಯಗಳೂ ಕಂಡುಬರುತ್ತವೆ. ಅಪರೂಪದ ಕುಂತಿ ದೇವಿಯ ದೇವಾಲಯ ಪ್ರಾಚೀನ ಕಾಲದ್ದಾಗಿದೆ. ಮಿಲಟರಿ ಮಹಾದೇವ ದೇವಾಲಯವು ಸಂಪೂರ್ಣವಾಗಿ ಮಿಲಟರಿಯವರಿಂದಲೇ ನಿರ್ವಹಣೆಗೊಳ್ಳುತ್ತಿವೆ. ಈ ದೇವಾಲಯದಲ್ಲಿ ಪೂಜೆ ಮಾಡುವವರು ಮಿಲಟರಿಯವರೇ ಆಗಿರುತ್ತಾರೆ. ಹೀಗಾಗಿ ಇದು ನಗರದ ವಿಶೇಷ ದೇವಾಲಯವು ಆಗಿದೆ. 'ಫೀಶ್ ಮಾರ್ಕೆಟ್' ಕ್ಯಾಂಪ್ ಪ್ರದೇಶದಲ್ಲಿಯೇ ಇದೆ. ದಿನಕ್ಕೆ ಲಕ್ಷಾಂತರ ರೂ.ಗಳ ವಹಿವಾಟು ಈ ವ್ಯಾಪಾರದಿಂದಾಗುತ್ತದೆ. ಸಮುದ್ರದ ಹಲವಾರು ಜಾತಿಯ ಮೀನುಗಳು ಇಲ್ಲಿ ಮಾರಾಟಕ್ಕಿರುತ್ತವೆ. ಗೋವಾ ರಾಜ್ಯದ ಸಮುದ್ರದಿಂದ ಹಿಡಿದು ತಂದ ಮೀನುಗಳು ಇಲ್ಲಿ ಮಾರಾಟವಾಗುತ್ತವೆ.

ಕ್ಯಾಂಪ ಪ್ರದೇಶದ ಕೆಲವು ಮನೆಗಳು ಇಂದು ಪ್ರತಿಷ್ಠಿತ ವ್ಯಕ್ತಿಗಳ ವಿಶ್ರಾಂತಿ ಗೃಹಗಳಾಗಿವೆ. ಹಲವಾರು ಜನ ರಾಜಕೀಯ ವ್ಯಕ್ತಿಗಳು, ಶ್ರೀಮಂತರು, ಅಧಿಕಾರಿಗಳು ಇಲ್ಲಿಯ ಮನೆಗಳಲ್ಲಿ ವಾಸಿಸುತ್ತಾರೆ. ಹೀಗಾಗಿ ಈ ಪ್ರದೇಶವು ಬೆಳಗಾವಿ ನಗರದ ಪ್ರತಿಷ್ಠಿತ ಪ್ರದೇಶವಾಗಿ ರೂಪಗೊಂಡಿದೆ.

ಹೊಸ ವರ್ಷದ ಆಚರಣೆಯು ಇಲ್ಲಿ ವಿಶೇಷವಾಗಿ ಆಚರಿಸಲ್ಪಡುತ್ತದೆ. ಲಕ್ಷಾಂತರ ಜನರು ಇಲ್ಲಿ ಈ ಸಂಭ್ರಮದಲ್ಲಿ ಪಾಲ್ಗೊಳ್ಳುತ್ತಾರೆ. ಬೆಳಗಾವಿಯ ಸಾಂಸ್ಕೃತಿಕ ವಿಕಾಸದಲ್ಲಿ, ಸಾಮರಸ್ಯದ ಬದುಕಿನಲ್ಲಿ ಈ ಪ್ರದೇಶವು

ಮಹತ್ವದ್ದಾಗಿದೆ. ಹಿಂದೂ, ಕ್ರೈಸ್ತ, ಮುಸ್ಲಿಂ, ಜೈನ, ಪಾರ್ಶಿ ಹೀಗೆ ಹಲವಾರು ಜಾತಿ ಜನಾಂಗದವರು ಕೂಡಿ ಬದುಕುವ ಈ ಪ್ರದೇಶವು ವಿಶೇಷ ಸಂಸ್ಕೃತಿಯ ನಿರ್ಮಿತಿಗೆ ಕಾರಣವಾಗಿದೆ.

ಕ್ಯಾಂಪ್ ಪ್ರದೇಶವನ್ನು ಬೆಳಗಾವಿಯ ಪ್ರಶಾಂತ ದ್ವೀಪ ಎಂದು ಕರೆಯಲಾಗುತ್ತದೆ. ದೇಶದಲ್ಲಿ ಒಟ್ಟು ಅರವತ್ತೆರಡು ದಂಡು ಪ್ರದೇಶಗಳಿವೆ. ಅವುಗಳಲ್ಲಿ ಬೆಳಗಾವಿಯ ದಂಡು ಪ್ರದೇಶವೂ ಒಂದಾಗಿದೆ. ಸುಮಾರು ೨೦ ಹೆಕ್ಟೇರ್ ಪ್ರದೇಶದಲ್ಲಿ ಇದು ವ್ಯಾಪಿಸಿದೆ. ೧೮೧೮ರ ಸುಮಾರಿಗೆ ಇಲ್ಲಿ ಮಿಲಟರಿ ಸ್ಟೇಶನ್ ಸ್ಥಾಪನೆಯಾದಾಗ ಅದಕ್ಕೆ ಸಂಬಂಧಪಟ್ಟ ನಾಗರಿಕ ಸೌಕರ್ಯಗಳ ವ್ಯವಸ್ಥೆ ನೋಡುಕೊಳ್ಳುವ ಉದ್ದೇಶದೊಡನೆ ಇಲ್ಲಿ ಕಾಂಟೋನ್ಮೆಂಟ ಬೋರ್ಡ ರಚಿಸಲಾಯಿತು. ಒಟ್ಟು ಹದಿನಾಲ್ಕು ಸದಸ್ಯರ ಈ ಮಂಡಳಿಯಲ್ಲಿ ಏಳು ಜನ ಚುನಾಯಿತ ಸದಸ್ಯರು ಇರುತ್ತಾರೆ. ಈಗ ಇದರ ಆದಾಯ ಸುಮಾರು ೮ ಕೋಟಿ ರೂಪಾಯಿ ಇದೆ. ಇಲ್ಲಿ ಸುಮಾರು ೧೨೦೦ ಮನೆಗಳು ಇರುತ್ತವೆ. ಹೀಗಾಗಿ ಇಲ್ಲಿಯ ಆಡಳಿತ ವ್ಯವಸ್ಥೆ ಸರಿಯಾಗಿ ನಡೆದಿದೆ. ಕ್ಯಾಂಪ್ ಪ್ರದೇಶವನ್ನು ಮೂರು ಭಾಗಗಳಾಗಿ ವಿಂಗಡಿಸಲಾಗಿದೆ. ಕ್ಯಾಂಟೋನ್ಮೆಂಟ್, ನಾಗರಿಕ ಪ್ರದೇಶ ಮತ್ತು ಕೋಟೆ ಪ್ರದೇಶ ಎಂದು ಗುರುತಿಸಿಕೊಂಡು ಇಲ್ಲಿ ಆಸ್ಪತ್ರೆ, ಶಾಲೆ ಮತ್ತಿತರ ಎಲ್ಲ ಸೌಲಭ್ಯಗಳನ್ನು ಮಾಡಲಾಗಿದೆ.

ಈ ಪ್ರದೇಶದಲ್ಲಿ ಒಟ್ಟು ಐದು ಉದ್ಯಾನ ವನಗಳಿವೆ. ಇಲ್ಲಿರುವ ಹೊಟೇಲ್ ಗ್ರೀನ್ ಪ್ರಸಿದ್ಧವಾಗಿದೆ. ದೇಶದ ಹಲವಾರು ಗಣ್ಯರು ಈ ಹೊಟೇಲಿನಲ್ಲಿ ಉಳಿದುಕೊಂಡಿರುವ ದಾಖಲೆಗಳಿವೆ. ಗೋವಾ ವಿಮೋಚನಾ ಹೋರಾಟದ ಸಂದರ್ಭದಲ್ಲಿ ಆಗಿನ ಪ್ರಧಾನಿ ಜವಾಹರಲಾಲ ನೆಹರೂ ಆಗ ಸಮವಸ್ತ್ರದಲ್ಲಿದ್ದು ಈ ಹೊಟೇಲಿನಲ್ಲಿಯೇ ಉಳಿದುಕೊಂಡಿದ್ದರು. ಗೋವಾದಲ್ಲಿ ಫ್ರೆಂಚರ್ ಆಡಳಿತವಿರುವ ವರೆಗೆ ಬೆಳಗಾವಿಯ ದಂಡು ಪ್ರದೇಶಕ್ಕೆ ರಕ್ಷಣಾ ದೃಷ್ಟಿಯಿಂದ ಸಾಕಷ್ಟು ಮಹತ್ವ ಒದಗಿಬಂದಿತ್ತು.

**ಗ್ಯಾಂಗ್‌ವಾಡಿ:** ಅಕ್ರಮ ದಂಧೆಗಳ ಗ್ಯಾಂಗ್‌ಗಳಿಂದ ತುಂಬಿಕೊಂಡಿರುವ ಗ್ಯಾಂಗ್‌ವಾಡಿಯು ನಗರದ ಪ್ರತಿಷ್ಠಿತ ಶಿವಬಸವನಗರದ ಪಕ್ಕದಲ್ಲಿದೆ. ಸುಮಾರು ನೂರು–ಎರಡನೂರು ಮನೆಗಳನ್ನು ಹೊಂದಿದ ಗ್ಯಾಂಗ್‌ವಾಡಿಯು ಸರ್ಕಾರದ ಯಾವುದೇ ಕಾನೂನನ್ನು ಪಾಲಿಸದೆ ನಿರಂತರವಾಗಿ ಅಕ್ರಮ ಕಾರ್ಯಗಳಲ್ಲಿ ನಿರತವಾಗಿದೆ. ಇಲ್ಲಿ ಕಳ್ಳಬಟ್ಟಿಯನ್ನು ತಯಾರಿಸುವ ಹಲವಾರು ಅಡ್ಡೆಗಳು ಇವೆ. ಇದರಿಂದಲೇ ಇಲ್ಲಿಯ ನಿವಾಸಿಗಳ ಜೀವನ ನಿರ್ವಹಣೆ ನಡೆಯುತ್ತದೆ. ಮೊದಲು ಈ ಪ್ರದೇಶದಲ್ಲಿ ಹಾಯ್ದುಹೋಗಲು ಜನರು ಹೆದರುತ್ತಿದ್ದರು. ಸಂಜೆಯ ಹೊತ್ತಿಗಂತೂ ಒಬ್ಬರೂ ಇಲ್ಲಿ ಸುಳಿಯುತ್ತಿರಲಿಲ್ಲ. ಕಳ್ಳಬಟ್ಟಿಯನ್ನು ತಯಾರಿಸುವುದಷ್ಟೇ ಅಲ್ಲದೆ ಅದನ್ನು ಕುಡಿದು ಅಲ್ಲಲ್ಲಿ ಬಿದ್ದಿರುವ ದೃಶ್ಯಗಳು ಇಲ್ಲಿ ಸಾಮಾನ್ಯವಾಗಿರುತ್ತವೆ.

ಇಂದು ಬೆಳಗಾವಿಯು ಹಲವಾರು ಬಡಾವಣೆಗಳಿಂದ ಒಳಗೊಂಡ ಮಹಾನಗರವಾಗಿ ರೂಪಗೊಂಡಿದೆ. ನಗರದ ಹೊರವಲಯದ ಮಹಾಂತೇಶನಗರ, ಆಂಜನೇಯ ನಗರ, ರುಕ್ಮಿಣಿ ನಗರ, ಅಟೋನಗರ, ಮಾಳಮಾರುತಿ, ರಾಮತೀರ್ಥನಗರ, ಶಿವಬಸವನಗರ, ವೈಭವ ನಗರ, ಬಸವಕಾಲಿನಿ, ಅಜಂನಗರ, ಹನುಮಾನ ನಗರ, ಸದಾಶಿವನಗರ, ವಿಜಯನಗರ, ಚನ್ನಮ್ಮ ನಗರ, ಗುರುಪ್ರಸಾದ ಕಾಲನಿ–ಹೀಗೆ ಹತ್ತಾರು ಮಹತ್ವದ ಬಡಾವಣೆಗಳು ನಿರ್ಮಾಣಗೊಂಡಿವೆ. ಈ ಬಡಾವಣೆಗಳು ಒಂದೊಂದು ಪ್ರತ್ಯೇಕ ನಗರಗಳ ಸ್ವರೂಪದಲ್ಲಿ ಬೆಳವಣಿಗೆಯನ್ನು ಹೊಂದಿವೆ. ಪ್ರತಿಯೊಂದು ಬಡಾವಣೆಗಳಲ್ಲಿಯೂ ಹಲವಾರು ಉಪ ಬೀದಿಗಳು ನಿರ್ಮಾಣಗೊಂಡಿದೆ. ಆಸ್ಪತ್ರೆ, ಶಾಲೆ, ಕಾಲೇಜು, ದೇವಾಲಯಗಳು, ಮಸೀದಿ, ಬಸದಿ, ಚರ್ಚೆಗಳು ನಿರ್ಮಾಣಗೊಂಡು ಸೌಹಾರ್ದತೆಯ ಬದುಕಿಗೆ ಸಾಕ್ಷಿಯಾಗಿವೆ. ಈ ಬಡಾವಣೆಗಳಲ್ಲಿಯ ಸಂಸ್ಕೃತಿಯು ವಿಭಿನ್ನವಾಗಿದ್ದರೂ ಈ ವಿಭಿನ್ನತೆಯೇ ಒಟ್ಟು ಬೆಳಗಾವಿ ಸಂಸ್ಕೃತಿಯ ನಿರ್ಮಿತಿಗೆ ಕಾರಣವಾಗಿದೆ.

ಬೆಳಗಾವಿ ನಗರವು ದಿನದಿಂದ ದಿನಕ್ಕೆ ಬೆಳವಣಿಗೆಯನ್ನು ಹೊಂದುತ್ತಿದೆ. ಶಿಕ್ಷಣ, ವ್ಯಾಪಾರ, ಉದ್ಯಮ, ಕ್ಷೇತ್ರಗಳಲ್ಲಿ ಪ್ರಗತಿಯನ್ನು ಸಾಧಿಸತೊಡಗಿದಂತೆ ಬೆಳಗಾವಿ ನಗರದ ವ್ಯಾಪ್ತಿಯು ಹೆಚ್ಚು ವಿಸ್ತಾರವಾಗತೊಡಗಿತು. ಇದರಿಂದ ನಗರದ ಸುತ್ತ ಮುತ್ತಲಿನ ಹಳ್ಳಿಗಳು ನಗರದ ಪ್ರಭಾವಕ್ಕೆ ಒಳಗಾಗತೊಡಗಿದವು. ಹೀಗೆ ಬೆಳಗಾವಿ ಮಹಾನಗರ ಪ್ರದೇಶದ ವ್ಯಾಪ್ತಿಯೊಳಗೆ ಸೇರಿಕೊಂಡ ಪ್ರಮುಖ ಹಳ್ಳಿಗಳೆಂದರೆ, ಬಸವನ ಕುಡಚಿ, ಕಣಬರಗಿ, ಯಮನಾಪೂರ, ಮುತ್ತ್ಯಾನಟ್ಟಿ, ಅಲಾರವಾಡ, ಮುಂತಾದ ಗ್ರಾಮಗಳು ಬೆಳಗಾವಿ ನಗರದೊಳಗೆ ವಿಲೀನವಾಗಿವೆ. ಇದರಿಂದ ಬೆಳಗಾವಿ ನಗರದ ವ್ಯಾಪ್ತಿಯು ಹೆಚ್ಚಾಗುವುದರ ಜೊತೆಗೆ ವಿಭಿನ್ನ ಸಂಸ್ಕೃತಿಯ ನಿರ್ಮಾಣಕ್ಕೂ ಕಾರಣವಾಗಿದೆ.

**ಬಸವನ ಕುಡಚಿ:** ಬೆಳಗಾವಿ ಮಹಾನಗರದ ೫೬ನೆಯ ವಾರ್ಡಿನ ಹದ್ದಿನೊಳಗೆ ಬರುವ ಐತಿಹಾಸಿಕ ಮಹತ್ವವನ್ನು ಹೊಂದಿದೆ. ಮಹಾನಗರ ಸಭೆಯ ವ್ಯಾಪ್ತಿಯೊಳಗೆ ಬರುವ ಪೂರ್ವದಲ್ಲಿ ಒಂದು ಗ್ರಾಮವಾಗಿದ್ದ ಬಸವನ ಕುಡಚಿಯು ವಿಭಿನ್ನ ಸಂಸ್ಕೃತಿಯಿಂದ ವಿಶೇಷತೆಯನ್ನು ಪಡೆದುಕೊಂಡಿದೆ. ಪ್ರಾಚೀನಕಾಲದ ಹಲವಾರು ಸಂಪ್ರದಾಯ. ನಂಬಿಕೆ. ಆಚರಣೆಗಳು ಇಂದಿಗೂ ಇಲ್ಲಿ ಮುಂದುವರೆದುಕೊಂಡು ಬಂದಿವೆ.

ಬಸವನ ಕುಡಚಿ ಎಂದಾಕ್ಷಣ ವೀರಶೈವ ಜನಾಂಗವೇ ಹೆಚ್ಚಿರಬಹುದೆಂಬ ನಂಬಿಕೆ ಇಲ್ಲಿ ಸುಳ್ಳು. ಇಲ್ಲಿ ೭೦% ಜನ ಜೈನ ಮತಾವಲಂಬಿಗಳು. ಊರಿನ ಆರಾಧ್ಯ ದೈವ ಬಸವಣ್ಣನ ಪೂಜಾರಿಗಳು ಜೈನರು. ಸ್ಥಳೀಯರ ಹೇಳಿಕೆಯ ಪ್ರಕಾರ ಕಲ್ಯಾಣ ಕ್ರಾಂತಿಯ ಸಂದರ್ಭದಲ್ಲಿ ಇಲ್ಲಿ ಬಸವಣ್ಣನು ಬಂದು ಹೋಗಿರುವನು ಎಂಬ ನಂಬಿಕೆಯಿದೆ. ಚನ್ನಬಸವಣ್ಣನು ಶರಣರ ತಂಡವನ್ನು ಕಟ್ಟಿಕೊಂಡು ಉಳವಿಗೆ ಹೋಗುವಾಗ ಇಲ್ಲಿ ತಂಗಿದ್ದನು ಎಂಬ ಹೇಳಿಕೆಯೂ ಕೆಲವರಿಂದ ಕೇಳಿ ಬಂದಿತು. ಆದರೆ ಈ ಎರಡೂ ಹೇಳಿಕೆಗಳಿಗೆ ಯಾವುದೇ ಆಧಾರಗಳಿಲ್ಲ. ಆದರೆ ಇಲ್ಲಿರುವ ಆಚರಣೆಗಳನ್ನು ನೋಡಿದಾಗ ಇದರ ಹಿಂದೆ ಏನೋ ಒಂದು ಮಹತ್ವದ ವಿಷಯವಿರುವುದು ತಿಳಿದು ಬರುತ್ತದೆ. ಸಾಮಾನ್ಯವಾಗಿ ಜೈನರ ಬಸದಿಗಳೆಲ್ಲಾ ಬೇರೆ ಬೇರೆ ದೇವಾಲಯಗಳಾಗಿ ಮಾರ್ಪಾಡಾಗಿರುವುದನ್ನು

ನಾವು ನಾಡಿನ ಬೇರೆ ಬೇರೆ ಭಾಗಗಳಲ್ಲಿ ಕಾಣುತ್ತೇವೆ. ಒಂದು ಕಾಲದಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಜೈನ ಧರ್ಮವು ಅವನತಿಯನ್ನು ಹೊಂದಿದಾಗ ಬಸದಿಗಳು ದೇವಾಲಯಗಳಾಗಿ ಮಾರ್ಪಾಟಾದವು. ಬಸವನ ಕುಡಚಿಯ ಈಗಿನ ಬಸವಣ್ಣನ ದೇವಾಲಯವೂ ಮೂಲತಃ ಬಸದಿ ಎನ್ನುವುದಕ್ಕೆ ಅಲ್ಲಿ ಸಾಕಷ್ಟು ಕುರುಹುಗಳಿರುವುದನ್ನು ಕಾಣಬಹುದಾಗಿದೆ. ಈ ದೇವಾಲಯದ ಮಧ್ಯಭಾಗದಲ್ಲಿ ಒಂದು ಅಖಂಡ ಶಿಲಾಗಂಬವಿದ್ದು ಅದರ ಕೆಳಭಾಗದಲ್ಲಿ ಜೈನ ತೀರ್ಥಂಕರನ ಮೂರ್ತಿ ಇರುವುದು ಸ್ಪಷ್ಟವಾಗಿ ಗೋಚರಿಸುತ್ತದೆ.

ಈ ಗ್ರಾಮದ ಇತಿಹಾಸವನ್ನು ನೋಡಿದಾಗ ಮೂಲತಃ ಇಲ್ಲಿ ಬಸವಣ್ಣನ ಗುಡಿ ಮಾತ್ರವಿದ್ದು. ಈ ಗುಡಿಯ ಹತ್ತಿರ ಬೇರೆ ಬೇರೆ ಭಾಗದ ಜನರು ಕೂಡಿದ್ದರಿಂದ ಇದು ಕೂಡತಿ. ಕುಡಚಿಯಾಯಿತೆಂದು, ಬಸವಣ್ಣನ ಗುಡಿ ಇಲ್ಲಿ ಇರುವುದರಿಂದ ಬಸವನ ಕುಡಚಿಯಾಯಿತೆಂದು ತಿಳಿದುಬಂದಿದೆ. ಇಲ್ಲಿರುವ ದೇವರಾಜ ಅರಸ ಬಡಾವಣೆಯಲ್ಲಿ ಮರಗವ್ವನೆಂಬ ಪ್ರಾಚೀನ ಕಾಲದ ಭಗ್ನಗೊಂಡ ವಿಗ್ರಹವಿದೆ. ಅದನ್ನು ಗ್ರಾಮದೇವತೆ ಸ್ವರೂಪದಲ್ಲಿ ಈಗಲೂ ಪೂಜೆ ಮಾಡುತ್ತಾರೆ.

ಬಸವಣ್ಣನ ದೇವಾಲಯವು ವಿಶೇಷ ವಿನ್ಯಾಸದಿಂದ ರಚನೆಗೊಂಡಿದೆ. ಚೌಕಾಕಾರದ ಗದ್ದುಗೆಯ ಮೇಲೆ ಶಿಲಾಕಂಬಗಳಿಂದ ನಿರ್ಮಿಸಿರುವ ದೇವಸ್ಥಾನಕ್ಕೆ ಚಪ್ಪಡಿಕಲ್ಲುಗಳ ಮಳಿಗೆಯನ್ನು ರೂಪಿಸಲಾಗಿದೆ. ಈ ದೇವಾಲಯದ ಮಧ್ಯಭಾಗದಲ್ಲಿರುವ ಒಂದು ಅಖಂಡ ಶಿಲಾಗಂಭವು ಮಾನಸ್ಥಂಬದ ಸ್ವರೂಪವನ್ನು ಹೋಲುತ್ತದೆ. ಇದರ ಮೇಲೆ ಬಸವನ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಈ ಬಸವಣ್ಣನ ದೇವಾಲಯವು ಮಹಡಿಯ ಮೇಲೆ ಇರುವುದೊಂದು ಗಮನಾರ್ಹ. ಇಂತಹ ಶೈಲಿಯ ದೇವಾಲಯ ಸಿಗುವುದು ಅಪರೂಪ. ಇಲ್ಲಿಯೆ ಬಸವಣ್ಣ (ನಂದಿ) ವಿಗ್ರಹವು ಸುಮಾರು ೯-೧೦ನೇ ಶತಮಾನದಲ್ಲಿ ರೂಪಗೊಂಡಿದ್ದಾಗಿದೆ. ಒಂದು ಸಾವಿರ ವರ್ಷಕ್ಕೂ ಮೇಲ್ಪಟ್ಟ ಸಾಂಸ್ಕೃತಿಕ ಪರಂಪರೆಯನ್ನು ಪಡೆದುಕೊಂಡ ಈ ಗ್ರಾಮದಲ್ಲಿಯ ಕಲ್ಮೇಶ್ವರ ಹಾಗೂ ಬಸವಣ್ಣನ ದೇವಸ್ಥಾನಕ್ಕೆ ಅಪಾರವಾದ ದಾನ ದತ್ತಿ ಮತ್ತು ಆಡಳಿತ ವರ್ಗವನ್ನು ಹೊಂದಿವೆ. ಸುಮಾರು ೧೬-೧೭ನೇ ಶತಮಾನದಲ್ಲಿಯ ದತ್ತಿ ಉಲ್ಲೇಖವೊಂದು ನಂದಿಕೋಲಿನ ಮೇಲಿದೆ. ಈ ದೇವಾಲಯದ ಆಡಳಿತವು ಎಲ್ಲಾ ಧರ್ಮಿಯರನ್ನು ಒಳಗೊಂಡಿರುವುದೊಂದು ವಿಶೇಷ. ಈ ರೀತಿಯ ಆಡಳಿತವನ್ನು ಕಾಣುವುದು ಅಪರೂಪ. ದೇವಾಲಯದ ಆಡಳಿತಕ್ಕೆ ಸಂಬಂಧಿಸಿದ ಪ್ರತಿಯೊಬ್ಬರಿಗೂ ಭೂಮಿಯನ್ನು ದತ್ತಿಯಾಗಿ ಕೊಡಲಾಗಿದೆ. ಇಲ್ಲಿಯ ಪೂಜಾರಿಗಳು ಜೈನರು, ಸ್ವಾಮಿಗಳು ಲಿಂಗವಂತರು, ಗೌಡರು-ಜೈನರು. ಕುಲಕರ್ಣಿ-ಬ್ರಾಹ್ಮಣ, ಬೇಕಡಾ-ಮರಾಠಾ (ಅಂದರೆ ಜಾತ್ರೆಯಲ್ಲಿ ಕಿಚ್ಚು ಹಾಯುವ ಸಂಪ್ರದಾಯವಿದ್ದು ಕಿಚ್ಚಿಗೆ ಕಟ್ಟಿಗೆ ತರುವ ಬಂಡಿಯ ಮುಖಂಡ), ದೇವಸ್ಥಾನದ ಮೇಲ್ವಿಚಾರಕ ಮುಲ್ಲಾ (ಮುಸ್ಲಿಂ), ನೈವೇದ್ಯ ಕಾರ್ಯ ಮಾಡುವ ಕೋಕಲೇಕರ ಮನೆತನ-ಮರಾಠಾ, ಅಲ್ಲದೇ ದೇವಸ್ಥಾನದ ಸೇವಾ ಕಾರ್ಯದಲ್ಲಿ

ತೊಡಗುವವರೆಂದರೆ, ಕಂಬಾರ, ಬಡಿಗ, ಸುಣಗಾರ, ಕೊರವರು ತಾಳಸೆ(ತಾಳ ಡೊಳ್ಳುಬಾರಿಸುವುದು) ನದಾಫ್, ಸಂಬಾಳ, ಕುಂಬಾರ, ದೀವಟಿಕಾರ, ಕೋಲಕಾರ, ತಳವಾರ, ಜಾಮರರು, ಛತ್ರಿಕಾರರು, ಮಾಲೆಕಾರರು, ಡೊಂಗರೇ ಹೀಗೆ ಊರಿನ ಎಲ್ಲಾ ವರ್ಗದ ಜನರು ಈ ದೇವಾಲಯದ ಸೇವೆಗೆ ಇರುವವರು.

ಪ್ರತಿವರ್ಷ ಹೋಳಿ ಹುಣ್ಣಿಮೆಯಿಂದ ಚಂದ್ರಮಾನ ಯುಗಾದಿಯ ಅಮವಾಸ್ಯೆ ಮಧ್ಯಾವಧಿಯಲ್ಲಿ ಬರುವ ಸೋಮವಾರ ಮತ್ತು ಮಂಗಳವಾರದಂದು ಇಲ್ಲಿ ಜಾತ್ರಾ ಮಹೋತ್ಸವ ನಡೆಯುತ್ತದೆ. ಈ ಜಾತ್ರೆಯ ವಿಶೇಷತೆಯೆಂದರೆ ಅಂಬಲಿ ಬಂಡಿಗಳ ಮೆರವಣಿಗೆ ಮಾಡುವುದು. ಕಿಚ್ಚನ್ನು ಹಾಯುವುದು. ಬಸವಣ್ಣನ ಮದುವೆ ಮಾಡುವುದು. ಇವು ಇಂದಿಗೂ ಇಲ್ಲಿ ತಪ್ಪದೆ ಜರುಗುತ್ತವೆ.

ಈ ಜಾತ್ರೆಯಲ್ಲಿಯೇ ಬಸವಣ್ಣ ಮತ್ತು ನೀಲಮ್ಮರ ಮದುವೆಯು ಗ್ರಾಮದ ವೀರಶೈವ ಮಠದಲ್ಲಿ ನೆರವೇರುತ್ತದೆ. ಇಲ್ಲಿಂದಲೇ ಈ ಗ್ರಾಮದಲ್ಲಿ ವರ್ಷದ ಮದುವೆ ಕಾರ್ಯಗಳು ಪ್ರಾರಂಭಗೊಳ್ಳುತ್ತವೆ. ಸತಿಸಹಗಮನ ಪದ್ಧತಿಯು ಇಲ್ಲಿ ಪ್ರಬಲವಾಗಿತ್ತು ಎನ್ನುವುದಕ್ಕೆ ಇಲ್ಲಿ ದೊರೆಯುವ ಮಾಸ್ತಿಕಲ್ಲುಗಳು ಸಾಕ್ಷಿಯಾಗಿವೆ. ಅಲ್ಲದೆ ಇಲ್ಲಿ ಮಾಸ್ತಿ ಅಮ್ಮನ ಗುಡಿ ಇದೆ. ಈಗಲೂ ಇಲ್ಲಿ ಸತಿ ಆಚರಣೆ ಹಬ್ಬವನ್ನು ಆಚರಿಸುತ್ತಾರೆ. ಮೂರು ವರ್ಷಕ್ಕೊಮ್ಮೆ ಮಾಸ್ತಿ ಅಮ್ಮನ ಜಾತ್ರೆ ನಡೆಯುತ್ತದೆ. ಮಾಸ್ತಿ ಹೊಲ, ಮಾಸ್ತಿ ಕೆರೆ, ಮಾಸ್ತಿ ಪೂಜಾರಿ ಹೀಗೆ ಇಂದಿಗೂ ಇಲ್ಲಿ ಉಳಿದುಕೊಂಡು ಬಂದಿರುವ ವಿಶೇಷಗಳು.

ಬಸವನ ಕುಡಚಿಯ ಮತ್ತೊಂದು ವೈಶಿಷ್ಟ್ಯವೆಂದರೆ ಇಲ್ಲಿಯ ಪ್ರಾಚೀನ ಆಯುಧಗಳು. ಇವುಗಳನ್ನು ಇಂದಿಗೂ ಹಲವಾರು ಮನೆಗಳಲ್ಲಿ ಕಾಣಬಹುದು. ವಿಶೇಷವಾಗಿ ಇವು ಯುದ್ಧದಲ್ಲಿ ಬಳಕೆಯಾಗುವ ಆಯುಧಗಳಾಗಿವೆ. ದಸರಾ ಉತ್ಸವದ ಆಯುಧ ಪೂಜೆಯ ಸಂದರ್ಭದಲ್ಲಿ ಎಲ್ಲರೂ ತಮ್ಮ ತಮ್ಮ ಬಳಿಯಿದ್ದ ಆಯುಧಗಳನ್ನು ಗ್ರಾಮದ ಚಾವಡಿಯಲ್ಲಿಟ್ಟು ಪೂಜಿಸುವ ಸಂಪ್ರದಾಯವನ್ನು ಇಂದಿಗೂ ಕಾಣಬಹುದಾಗಿದೆ.

**ಕಣಬರಗಿ :** ಇಂದು 'ಕಣಬುರ್ಗಿ' ಎಂದು ಕರೆಯಲ್ಪಡುವ ಈ ಗ್ರಾಮವು ಬೆಳಗಾವಿ ಮಹಾನಗರ ವ್ಯಾಪ್ತಿಗೆ ಒಳಪಟ್ಟ ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿದೆ. ನಗರದಿಂದ ಪೂರ್ವಕ್ಕೆ ೫ ಕಿ.ಮೀ ಅಂತರದಲ್ಲಿದೆ. ರಟ್ಟರ ಕಾಲದ ಬೆಳಗಾವಿ ಶಾಸನದಲ್ಲಿ ಇದನ್ನು ಕಣಂಬುರಿಗೆ ಎಂದು ಕರೆಯಲಾಗಿದ್ದು ಈ ಗ್ರಾಮವನ್ನು ಉಂಬಳಿಯಾಗಿ ನೀಡಿದ ವಿವರಗಳಿವೆ. ಇಲ್ಲಿ ಹಲವಾರು ಪ್ರಾಚೀನ ಸ್ಮಾರಕಗಳು ಕಂಡುಬರುತ್ತವೆ.

ಇಲ್ಲಿಯ ಗುಡ್ಡದ ಭಾಗದಲ್ಲಿ ಸ್ವಯಂ ನಿರ್ಮಿತ ಗುಹೆಯೊಂದು ಇದೆ. ಇಲ್ಲಿ ಸಿದ್ಧೇಶ್ವರ ದೇವರ ದೇವಾಲಯವಿದ್ದು ಇದರ ಪಶ್ಚಿಮ ಭಾಗದಲ್ಲಿ (ಗುಡ್ಡ ಮೇಲೆ) ರಾಮ-ಲಕ್ಷ್ಮಣ ಹಾಗೂ ಸೀತೆಯರ ಮೂರ್ತಿಗಳಿರುವ ದೇವಾಲಯವಿದೆ. ಇಲ್ಲೊಂದು ನೀರಿನ ಚಿಲುಮೆ ಇದ್ದು ಇದರಿಂದ ವರ್ಷದ ಹನ್ನೆರಡೂ ತಿಂಗಳೂ ನೀರು ಬರುತ್ತದೆ. ದಂಡಕಾರಣ್ಯದ

ಭಾಗವಾದ ಈ ಪ್ರದೇಶದಲ್ಲಿ ಶ್ರೀರಾಮನು ವನವಾಸ ಕಾಲದಲ್ಲಿ ತನ್ನ ಭಾಣದಿಂದ ನೀರು ತರಿಸಿದನೆಂದು ಹೇಳಲಾಗುತ್ತದೆ. ಇಂದು ಇದು ಈ ಭಾಗದ ತೀರ್ಥ ಕ್ಷೇತ್ರವಾಗಿದೆ. ಇದಕ್ಕೆ ರಾಮತೀರ್ಥವೆಂದು ಕರೆಯಲಾಗುತ್ತದೆ. ಇಲ್ಲಿ ರಾಮಲಿಂಗನ ಮೂಲ ಗುಡಿ ಇದೆ. ಕಣಬರಗಿ ಇಂದು ನಗರ ಪ್ರದೇಶದ ವ್ಯಾಪ್ತಿಯೊಳಗೆ ಇದ್ದರೂ ಇದು ಗ್ರಾಮೀಣ ಪರಿಸರವನ್ನೇ ಹೊಂದಿ ಪ್ರತ್ಯೇಕ ಹಳ್ಳಿಯಂತೆಯೇ ಮುಂದುವರೆದಿದೆ. ವೀರಶೈವ, ಜೈನರು ಹೆಚ್ಚಾಗಿ ಇದ್ದಾರೆ. ಮರಾಠರು, ಮುಸ್ಲಿಂರು, ಕ್ರೈಸ್ತರು, ಮುಂತಾದ ವರ್ಗದವರೂ ಇಲ್ಲಿ ಸ್ವಲ್ಪ ಪ್ರಮಾಣದಲ್ಲಿದ್ದಾರೆ. ಊರಿನಲ್ಲಿ ಜೈನಬಸದಿ, ಕಲ್ಮೇಶ್ವರ ದೇವಾಲಯ, ಬಸವಣ್ಣ ದೇವಾಲಯ, ಲಕ್ಷ್ಮಿದೇವಾಲಯ, ಮಸದೀಗಳು ಕಂಡುಬರುತ್ತವೆ. ಇಲ್ಲಿಯ ಜನರ ಮೂಲ ಉದ್ಯೋಗ ಕೃಷಿ. ಊರಿಗೆ ಹೊಂದಿಕೊಂಡ ಎರಡು ಕೆರೆಗಳು ಕಂಡು ಬರುತ್ತವೆ. ಆದರೆ ಇಲ್ಲಿಯ ನೀರನ್ನು ದನಕರುಗಳಿಗೆ, ಹೊಲ ಗದ್ದೆಗಳಿಗೆ ಮಾತ್ರ ಬಳಸುತ್ತಾರೆ. ಇಂದು ಬೆಳಗಾವಿ ನಗರದ ಬಡಾವಣೆಗಳಾದ ಅಟೋ ನಗರ, ರುಕ್ಮಿಣಿ ನಗರಗಳು ಕಣಬುರ್ಗಿಗೆ ಹೊಂದಿಕೊಂಡೆ ಇವೆ. ಕಣಬರ್ಗಿಯ ಪಕ್ಕದಲ್ಲಿಯೇ ಟಾಟಾ ವಿದ್ಯುತ್ ಘಟಕವನ್ನು ಸ್ಥಾಪಿಸಲಾಗಿದೆ. ಸುಮಾರು ೧೬೦ ಕೋಟಿ ರೂಪಾಯಿ ವೆಚ್ಚದಲ್ಲಿ ನಿರ್ಮಾಣಗೊಂಡ ಇದು ಬೃಹತ ಪ್ರಮಾಣದ ವಿದ್ಯುತ್ ಉತ್ಪಾದನಾ ಘಟಕವನ್ನು ಹೊಂದಿದೆ.

**ಯಮುನಾಪುರ :** ನಗರದ ಹೊರವಲಯದಲ್ಲಿ ರಾಷ್ಟ್ರೀಯ ಹೆದ್ದಾರೆ ಪಕ್ಕದಲ್ಲಿ ಯಮುನಾಪುರ ಗ್ರಾಮವು ನೆಲೆಗೊಂಡಿದೆ. ಕಾಗತಿ ಪಕ್ಕದಲ್ಲಿಯೇ ಇರುವ ಈ ಗ್ರಾಮವು ಮಹಾನಗರ ವ್ಯಾಪ್ತಿಯೊಳಗೆ ಸೇರಿಕೊಂಡಿದೆ. ಯುಮುನಾಪುರದ ಸುತ್ತಲು ದಂಡಿನ (ಮಿಲಟರಿ) ಪ್ರದೇಶ ಆವರಿಸಿದೆ. ಯಮುನಾಪುರದ ಪಕ್ಕದಲ್ಲಿಯೇ ಬಿ.ಕೆ. ಕಂಗ್ರಾಳಿ ಗ್ರಾಮವಿದೆ. ಈಗ ಇವೆರಡೂ ಗ್ರಾಮಗಳೂ ಕೂಡಿಕೊಂಡಿವೆ. ಗ್ರಾಮದ ಒಂದು ತುದಿಯು ಮಾರ್ಕೇಂಡೆಯ ನದಿಗೆ ಸಮೀಪದಲ್ಲಿಯೇ ಇರುತ್ತದೆ. ಗ್ರಾಮದ ಎದುರಿಗೆ ಇಂಡಾಲ ಅಲ್ಯುಮಿನಿಯಂ ಕಾರ್ಖಾನೆ ಸ್ಥಾಪನೆಗೊಂಡಿದೆ. ಇಂದು ಹೊಸ ಬಡಾವಣೆಗಳು ಗ್ರಾಮದ ಮಧ್ಯಭಾಗದಲ್ಲಿ ನಿರ್ಮಾಣಗೊಂಡಿದ್ದು ನಗರ ಸಂಸ್ಕೃತಿಯನ್ನು ಹೊಂದತೊಡಗಿದೆ. ಇಲ್ಲಿ ಹೆಚ್ಚಾಗಿ ಕನ್ನಡಿಗರೇ ವಾಸವಾಗಿದ್ದು ಬೇಡ ಜನಾಂಗದವರು ಹೆಚ್ಚಾಗಿದ್ದಾರೆ. ಈ ಗ್ರಾಮದ ಮೂಲ ಉದ್ಯೋಗ ಕೃಷಿ. ಮಾರ್ಕೇಂಡೇಯ ನದಿಯ ದಂಡೆಯ ಫಲವತ್ತಾದ ಪ್ರದೇಶವನ್ನು ಹೊಂದಿದೆ. ಭತ್ತ, ತರಕಾರಿಗಳನ್ನು ಹೆಚ್ಚಾಗಿ ಬೆಳೆಯುತ್ತಾರೆ.

**ಮುತ್ಯಾನಟ್ಟಿ :** ಇಂಡಾಲ ಪ್ಯಾಕ್ಟರಿ ಹಾಗೂ ಕಾಗತಿ ಪ್ರದೇಶದ ಮಧ್ಯದಲ್ಲಿ ಮುತ್ಯಾನಟ್ಟಿ ಗ್ರಾಮವು ನೆಲೆಗೊಂಡಿದೆ. ಕಾಗತಿ ಗುಡ್ಡದ ಮೇಲಿನ ಇಳಿಜಾರಿನ ಪ್ರದೇಶದಲ್ಲಿ ಈ ಗ್ರಾಮವು ಕಂಡು ಬರುತ್ತದೆ. ಈ ಗ್ರಾಮವು ನಗರ ವ್ಯಾಪ್ತಿಗೆ ಒಳಪಡುವ ಮೊದಲೇ ಈ ಗ್ರಾಮದ ಹತ್ತಿರವೇ ಹಲವಾರು ಉದ್ಯಮಗಳು ಸ್ಥಾಪನೆಗೊಂಡಿದ್ದವು. ಹೀಗಾಗಿ ಈ ಪ್ಯಾಕ್ಟರಿಗಳಲ್ಲಿಯ ಕಾರ್ಮಿಕರು ಮನೆಗಳನ್ನು ಕಟ್ಟಿಕೊಂಡು ಇಲ್ಲಿಯೇ ವಾಸಿಸುತ್ತಿದ್ದಾರೆ. ಗ್ರಾಮದಲ್ಲಿ ನೂರಕ್ಕೆ ೯೦ ರಷ್ಟು ಜನರು ಕನ್ನಡಿಗರಿದ್ದಾರೆ. ಇಲ್ಲಿಯ ಜನರು ಹೆಚ್ಚಾಗಿ ಬೇರೆ ಬೇರೆ ಕೆಲಸ ಕಾರ್ಯಗಳಲ್ಲಿ

ದುಡಿಯುವವರಾಗಿದ್ದಾರೆ. ದನಕರು, ಕುರಿ ಸಾಕಾಣಿಕೆಯನ್ನು ಹಾಗೂ ಕೂಲಿ ಕೆಲಸಗಳನ್ನು ಮಾಡುತ್ತಾರೆ. ಊರಿನ ಸುತ್ತಲು ಗುಡ್ಡ ವಿರುವುದರಿಂದ ಕಳ್ಳಭಟ್ಟಿಯನ್ನು ತಯಾರಿಸುತ್ತಾರೆ. ಹೀಗಾಗಿ ಮೇಲಿಂದ ಮೇಲೆ ಇಲ್ಲಿ ಅಬಕಾರಿ ಅಧಿಕಾರಿಗಳ ದಾಳಿ ನಡೆಯುತ್ತದೆ. ಹನುಮಂತದೇವರ ಗುಡಿ, ಲಕ್ಷ್ಮೀದೇವಿ ಗುಡಿಗಳು ಪ್ರಮುಖವಾಗಿವೆ.

**ಅಲಾರವಾಡ :** ರಾಷ್ಟ್ರೀಯ ಹೆದ್ದಾರೆ ಪಕ್ಕದಲ್ಲಿ ಬೆಳಗಾವಿಯಿಂದ ಧಾರವಾಡಕ್ಕೆ ಹೋಗುವ ಮಾರ್ಗದಲ್ಲಿ ಈ ಗ್ರಾಮವು ಕಂಡುಬರುತ್ತದೆ. ಮೂಲತಃ ಕೃಷಿಯನ್ನು ಮೂಲ ಉದ್ಯೋಗವನ್ನಾಗಿ ಮಾಡಿಕೊಂಡ ಕೃಷಿಕರು ಹೆಚ್ಚಾಗಿದ್ದಾರೆ. ಜೈನ ಸಮುದಾಯ, ವೀರಶೈವ ಸಮುದಾಯವು ಹೆಚ್ಚಾಗಿದೆ. ಗ್ರಾಮದಲ್ಲಿ ಬಸದಿ, ಬಸವಣ್ಣ ದೇವರ ಗುಡಿ, ಗ್ರಾಮದೇವತೆ, ಲಕ್ಷ್ಮಿದೇವಿ ಗುಡಿಗಳು ಪ್ರಮುಖವಾಗಿವೆ. ಸುಮಾರು ಹತ್ತು ಸಾವಿರ ಜನಸಂಖ್ಯೆಯನ್ನು ಹೊಂದಿದೆ. ಗ್ರಾಮದ ಸುತ್ತಮುತ್ತಲು ಬಸವನ ಕುಡಚಿ, ಕಾಗತಿ, ಮಾಸ್ತ ಮರಡಿ, ಸಿಂದೊಳ್ಳಿ ಗ್ರಾಮಗಳಿವೆ. ಪ್ರಮುಖವಾಗಿ ಭತ್ತವನ್ನು ತರಕಾರಿಯನ್ನು ಬೆಳೆಯುತ್ತಾರೆ. ಮಳೆಗಾಲದಲ್ಲಿ ಬಳ್ಳಾರಿ ನಾಲಾದ ನೀರಿನಿಂದ ಈ ಗ್ರಾಮದ ಕೃಷಿ ಭೂಮಿಯು ಹಾನಿಗೊಳಗಾಗುತ್ತದೆ. ಅಲಾರವಾಡ ಪಕ್ಕದಲ್ಲಿಯೇ ಸುವರ್ಣ ವಿಧಾನಸೌದ ನಿರ್ಮಾಣಗೊಂಡಿರುವುದರಿಂದ ಇಲ್ಲಿಯ ಭೂಮಿಗೆ ಹೆಚ್ಚಿನ ಬೆಲೆ ಬಂದಿದೆ. ಈ ಗ್ರಾಮವು ಇನ್ನೂ ಗ್ರಾಮೀಣ ಸಂಸ್ಕೃತಿಯನ್ನು ಉಳಿಸಿಕೊಂಡಿದೆ. ನಗರ ಸಂಸ್ಕೃತಿಯ ಒಂದಿಷ್ಟೂ ಪ್ರಭಾವ ಈ ಗ್ರಾಮದ ಮೇಲಾಗಿಲ್ಲ.

ಬೆಳಗಾವಿ ನಗರ ಪ್ರದೇಶದ ವ್ಯಾಪ್ತಿಗೆ ಸೇರಿದ ಈ ಐದು ಗ್ರಾಮಗಳು ಬೆಳಗಾವಿ ನಗರದ ವ್ಯಾಪ್ತಿಯನ್ನು ಹೆಚ್ಚಿಸುವಲ್ಲಿ ಮಾತ್ರ ಸಹಕಾರಿಯಾಗಿವೆ. ಇವು ಮುಂದೆ ಒಂದು ದಿನ ನಗರದ ಪ್ರಮುಖ ಭಾಗವಾಗುವ ಸಾಧ್ಯತೆ ಇದೆ.

**ಆ. ಪ್ರಮುಖ ಬೀದಿಗಳು :**

ಇಂದು ಬೆಳಗಾವಿ ನಗರವು ಕರ್ನಾಟಕ ರಾಜ್ಯದ ಪ್ರಮುಖ ನಗರಗಳಲ್ಲಿ ಒಂದಾಗಿ ರೂಪಗೊಂಡಿದೆ. ಎರಡನೆಯ ರಾಜಧಾನಿಯ ಸ್ಥಾನಮಾನಗಳನ್ನು ಪಡೆದುಕೊಳ್ಳುವ ನಿಟ್ಟಿನಲ್ಲಿ ನಗರದಲ್ಲಿ ಹಲವಾರು ಸುಧಾರಣೆಗಳು ನಡೆಯುತ್ತಿವೆ. ಈ ಹಿನ್ನೆಲೆಯಲ್ಲಿ ಬೆಳಗಾವಿ ನಗರದ ಪ್ರಮುಖ ಬೀದಿಗಳು ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ನೂರಾರು ವರ್ಷಗಳಿಂದ ಐತಿಹಾಸಿಕ ಮಹತ್ವವನ್ನು ಪಡೆದುಕೊಂಡ ಹಲವಾರು ಬೀದಿಗಳು ನಗರದ ವಿಕಾಸದಲ್ಲಿ ಮಹತ್ವದ ಪಾತ್ರಗಳನ್ನು ವಹಿಸಿದೆ. ಇಲ್ಲಿಯ ಬೀದಿಗಳಿಗೆ ಬಂದಿರುವ ಹೆಸರುಗಳ ಹಿಂದೆ ವಿಶೇಷ ಕಾರಣ ಕಂಡುಬರುತ್ತದೆ. ಧರ್ಮ, ವೃತ್ತಿ, ಭಾಷೆ, ಜಾತಿ, ವ್ಯಾಪಾರ, ವ್ಯಕ್ತಿ, ದೇವಾಲಯ ಮುಂತಾದ ಕಾರಣಗಳಿಂದ ಇಲ್ಲಿಯ ಬೀದಿಗಳು ಗುರುತಿಸಿಕೊಂಡಿವೆ. ಹೀಗಾಗಿ ಇಲ್ಲಿ ವೈವಿಧ್ಯತೆಯನ್ನು ಬಿಂಬಿಸುವ ನೂರಾರು ಗಲ್ಲಿಗಳು ಹುಟ್ಟಿಕೊಂಡಿವೆ. ಇದರಿಂದ ಬೆಳಗಾವಿಗೆ ಗಲ್ಲಿಗಳ ನಗರ ಎಂಬ ಅನ್ವರ್ಥ ನಾಮವು ಇದೆ. ಬೆಳಗಾವಿಯ ಕೆಲವು ಪ್ರಮುಖ ಬೀದಿ, ಗಲ್ಲಿಗಳ ವಿವರ ಈ ಕೆಳಗಿನಂತಿದೆ.

**ಖಡೇ ಬಜಾರ :** ಇಂದಿನ ಬೆಳಗಾವಿ ಮಹಾನಗರದಲ್ಲಿ ಎರಡು ಖಡೆ ಬಜಾರಗಳಿವೆ. ಒಂದು ಬೆಳಗಾವಿಯ ಮುಖ್ಯ ಬಸ್ ನಿಲ್ದಾಣದಿಂದ ಪ್ರಾರಂಭವಾಗಿ ಲಿಂಗರಾಜ ಕಾಲೇಜ ರೋಡದವರೆಗೆ ಇರುವುದು. ಮತ್ತೊಂದು ಶಹಾಪೂರ ಪ್ರದೇಶದಲ್ಲಿದೆ. ಈ ಎರಡೂ ಬಜಾರುಗಳು ಮುಖ್ಯವಾಗಿ ವ್ಯಾಪಾರಿ ಕೇಂದ್ರಗಳಾಗಿವೆ.

ಮೊದಲು ಖಡೇ ಬಜಾರದಲ್ಲಿ ಮುತ್ತು, ರತ್ನಗಳು, ಬೆಲೆಯುಳ್ಳ ಹರಳುಗಳು ಮಾರಾಟವಾಗುತ್ತಿದ್ದವು. ಅಂತೆಯೇ ಇದಕ್ಕೆ 'ಖಡೆ' ಬಜಾರವೆಂದು ಹೆಸರು ಬಂದಿದೆ.[೨೫] ಈ ಬಜಾರಕ್ಕೆ ಬೇರೆ ಬೇರೆ ದಿಕ್ಕುಗಳಿಂದ ಇತರ ಬೀದಿಗಳೂ ಬಂದು ಕೂಡಿಕೊಂಡಿವೆ. ಬಜಾರದ ಎರಡೂ ಬದಿಗೆ ಜನವಸತಿಯ ಮನೆಗಳೂ ಇವೆ. ಮನೆಯ ಮುಂದಿನ ಭಾಗವನ್ನು ವ್ಯಾಪಾರಕ್ಕೆ ಬಳಸಿಕೊಂಡು ಹಿಂದಿನ ಭಾಗದಲ್ಲಿ ತಾವು ವಾಸವಾಗಿರುತ್ತಾರೆ. ಬಹಳಷ್ಟು ಮನೆಗಳು ಹಳೆಯ ಕಾಲದ ಹಂಚಿನ ಮನೆಗಳಾಗಿವೆ. ಮುಂದಿನ ವ್ಯಾಪಾರದ ಭಾಗವನ್ನು ನವೀಕರಿಸಿಕೊಂಡು ಹಿಂದಿನ ಭಾಗದ ಮನೆಯನ್ನು ಮೂಲ ಸಮರೂಪದಲ್ಲಿಟ್ಟುಕೊಂಡಿದ್ದಾರೆ. ಇಲ್ಲಿ ಎಲ್ಲ ಜಾತಿ, ಧರ್ಮದ ಜನರು ಇದ್ದಾರೆ. ಹಿಂದೂ, ಮುಸ್ಲಿಂ, ಜೈನ್, ಕ್ರಿಶ್ಚಿಯನ್, ಪಾರ್ಶಿ, ಸಿಖ್, ಗುಜರಾತಿ, ರಾಜಸ್ಥಾನಿ–ಹೀಗೆ ಬೇರೆ ಬೇರೆ ಜಾತಿ, ಧರ್ಮ, ಭಾಷೆಯ ಜನರು ವ್ಯಾಪಾರ, ವಾಸ್ತವ್ಯವನ್ನು ಹೊಂದಿದ್ದಾರೆ. ಇದು ಬೆಳಗಾವಿ ನಗರದ ಮುಖ್ಯ ವ್ಯಾಪಾರಿ ಕೇಂದ್ರವಾಗಿದೆ.

**ಗಣಪತಿಗಲ್ಲಿ:** ಈ ಬೀದಿಯು ಶನಿವಾರ ಕೂಟದಿಂದ ಪ್ರಾರಂಭವಾಗಿ ದಕ್ಷಿಣಕ್ಕೆ ಮಾರುತಿ ಬೀದಿಯ ಅಂಚಿಗೆ ಹೋಗಿ ಕೂಡುತ್ತದೆ. ಈ ಬೀದಿಯಲ್ಲಿ ಗಣಪತಿಗಳನ್ನು ತಯಾರಿಸಿ ಮಾರುತ್ತಿದ್ದರಿಂದ ಈ ಬೀದಿಗೆ 'ಗಣಪತಿ ಬೀದಿ' ಎಂಬ ಹೆಸರು ಬಂದಿದೆ. ಇಲ್ಲಿ ಮುಖ್ಯವಾಗಿ, ಅರಿವೆ ಅಂಗಡಿ, ಬಂಗಾರದ ಸರಾಫ ಅಂಗಡಿ, ವಿವಿಧ ಪಾತ್ರೆಗಳ ಅಂಗಡಿ, ಪುಸ್ತಕ ಅಂಗಡಿ, ಪಾದರಕ್ಷೆ ಅಂಗಡಿ, ಔಷಧ ಅಂಗಡಿ, ಸ್ಟೇಶನರಿ ಅಂಗಡಿ, ಚಹಾ ಅಂಗಡಿ ಮುಂತಾದವುಗಳ ವ್ಯಾಪಾರ ಹೆಚ್ಚಾಗಿರುತ್ತದೆ. ಈ ಬೀದಿಯಲ್ಲಿ 'ಕನ್ನಡಮ್ಮ' ದಿನಪತ್ರಿಕೆಯ ಕಾರ್ಯಾಲಯವೂ ಸಾರ್ವಜನಿಕ ವಾಚನಾಲಯವು ಚಲನಚಿತ್ರ ಮಂದಿರಗಳು ಮುಖ್ಯವಾಗಿರುತ್ತವೆ.

ಈ ಬೀದಿಯಲ್ಲಿ ಕೀಲಿ ಕೈಗಳನ್ನು ಮಾಡುವ ಉದ್ಯೋಗವು ಪ್ರಸಿದ್ಧವಾಗಿದೆ. ಎಂತಹ ಕೀಲಿ ಇದ್ದರೂ ಅದಕ್ಕೆ ಕೀಲಿಕೈಯನ್ನು ಮಾಡಿಕೊಡುವ ನಿಪುಣತೆಯನ್ನು ಹೊಂದಿದ್ದಾರೆ. ಹೀಗಾಗಿ ದೂರದ ಪ್ರದೇಶಗಳಿಂದಲೂ ಬಂದು ಇಲ್ಲಿ ನಕಲು ಕೀಲಿಕೈಗಳನ್ನು ಮಾಡಿಸಿಕೊಂಡು ಹೋಗುವರು. ಕನ್ನಡ–ಮರಾಠಿ ಭಾಷಾ ಗದ್ದಲವೆದ್ದ ಸಂದರ್ಭದಲ್ಲಿ ಈ ಬೀದಿಯು ಸಾಕಷ್ಟು ಹಾನಿಗೊಳಗಾಗುತ್ತದೆ. ಬೀದಿಯ ಎರಡೂ ಬದಿಗೆ ಹಳೆಯ ಕಾಲದ ಕರಿ ಹಂಚಿನ ಮನೆಗಳು ಈಗಲೂ ಕಂಡುಬರುತ್ತದೆ.

**ಮಾರುತಿ ಬೀದಿ:** ಬೆಳಗಾವಿಯಲ್ಲಿ ಎರಡು ಮಾರುತಿ ಬೀದಿಗಳಿವೆ. ಇವುಗಳಿಗೆ ಹನುಮನ ಬೀದಿ ಎಂತಲೂ ಕರೆಯುವರು. ಒಂದು ಗಣಪತಿ ಬೀದಿಗೆ ಹತ್ತಿರ ಇರುವ ದೊಡ್ಡಬೀದಿ ಮತ್ತೊಂದು ಖಾಸಬಾಗದಲ್ಲಿರುವ

ಚಿಕ್ಕ ಬೀದಿ. ನಗರದ ಮಧ್ಯದಲ್ಲಿರುವ ಮಾರುತಿ ಬೀದಿಯು ಬೆಳಗಾವಿ ಸಂಸ್ಕೃತಿಯನ್ನು ಪ್ರದರ್ಶಿಸುವ ಪ್ರಮುಖ ಬೀದಿಗಳಲ್ಲಿ ಒಂದಾಗಿದೆ. ಗಣಪತಿ ಗಲ್ಲಿ ಮತ್ತು ರಾಮದೇವ ಗಲ್ಲಿಗಳ ದಕ್ಷಿಣ ತುದಿಗಳನ್ನು ಕೂಡಿಸಿಕೊಂಡು ಪೂರ್ವ ಪಶ್ಚಿಮವಾಗಿ ಬೆಳೆದಿರುವುದೇ ಮಾರುತಿ ಬೀದಿ. ಈ ಬೀದಿಯಲ್ಲಿ ಮಾರುತಿ ದೇವಾಲಯವಿರುವುದರಿಂದ ಇದಕ್ಕೆ ಮಾರುತಿ ಬೀದಿ ಎಂಬ ಹೆಸರು ಬಂದಿದೆ. ಇದೂ ಕೂಡ ಪ್ರಮುಖ ವ್ಯಾಪಾರಿ ಬೀದಿಯಾಗಿದೆ. ಮಹಿಳೆಯರು ಉಪಯೋಗಿಸುವ ವಸ್ತುಗಳ ಅಂಗಡಿಗಳು ಇಲ್ಲಿ ಹೆಚ್ಚಾಗಿರುವುದರಿಂದ ಸಂಜೆಯ ಹೊತ್ತಿಗೆ ಇಲ್ಲಿ ಮಹಿಳೆಯರೇ ಹೆಚ್ಚಾಗಿರುತ್ತಾರೆ. ಸಂಜೆಯ ಹೊತ್ತು ಬೆಳಗಾವಿ ನಗರದ ಮಹಿಳೆಯರು ಈ ಬೀದಿಯಲ್ಲಿ ಖರೀದಿಗಾಗಿ ಹಾಗೂ ಸುತ್ತಾಡುವುದಕ್ಕೆ ಬರುತ್ತಾರೆ. ಪ್ಲಾಸ್ಟಿಕ್ ದಾರದ ಅಂಗಡಿ, ಉಣ್ಣೆಯ ದಾರದ ಅಂಗಡಿ, ಸ್ನೋ, ಪೌಡರ ಅಂಗಡಿ, ಸ್ಟೇನಲೆಸ್ ಸ್ಟೀಲ ಪಾತ್ರೆಗಳ ಅಂಗಡಿ, ಪುಸ್ತಕದ ಅಂಗಡಿ, ಅರಿವೆ ಅಂಗಡಿ–ಹೀಗೆ ಹಲವಾರು ತರಹದ ಅಂಗಡಿಗಳು ಇಲ್ಲಿವೆ. ಹಳೆಯ ಕಾಲದ ಕಪ್ಪು ಹಂಚಿನ ಮನೆಗಳು ಹೆಚ್ಚಾಗಿ ಕಂಡು ಬರುತ್ತವೆ. ಈ ಬೀದಿಯಲ್ಲಿಯೇ ನಾಗನೂರು ರುದ್ರಾಕ್ಷಿಮಠ, ಸಾರ್ವಜನಿಕ ಗ್ರಂಥಾಲಯಗಳಿವೆ. ಇಲ್ಲಿಯ ಮಾರುತಿ ದೇವಾಲಯವು ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿದೆ. ಇಲ್ಲಿ ಪುರಾಣ, ಪ್ರವಚನಗಳು, ಭಾಷಣಗಳು, ಮದುವೆ ಸಮಾರಂಭಗಳು ನಡೆಯುತ್ತವೆ.

**ಕಂಬಳಿ ಕೂಟ:** ಗಣಪತಿ ಗಲ್ಲಿ ಹಾಗೂ ಮಾರುತಿ ಗಲ್ಲಿಗಳು ಕೂಡುವ ಸ್ಥಳವೇ ಕಂಬಳಿ ಕೂಟ. ಈ ಕೂಟದಲ್ಲಿ ಕುಳಿತು ಕಂಬಳಿಗಳನ್ನು ಮಾರುತ್ತಿರುವುದರಿಂದ ಇದಕ್ಕೆ ಕಂಬಳಿ ಕೂಟ ಎಂಬ ಹೆಸರು ಬಂದಿದೆ. ಈಗಲೂ ಇಲ್ಲಿ ಜಮಖಾನೆ, ಚಾದರು, ಹಾಸಿಗೆ, ಹೊದಿಕೆ, ಚಾಪೆಗಳನ್ನು ಮಾರುವರು. ಕೈಯಿಂದ ನೆಯ್ದು, ತಯಾರಿಸಿದ ವಸ್ತುಗಳು ಇಲ್ಲಿ ಕಡಿಮೆ ಬೆಲೆಗೆ ಮಾರಾಟ ಮಾಡಲಾಗುತ್ತದೆ.

**ಕಿರ್ಲೋಸ್ಕರ ಬೀದಿ :** ಬೆಳಗಾವಿ ನಗರದ ಹೃದಯ ಭಾಗವೆಂದು ಗುರುತಿಸಲ್ಪಡುವ ಕಿರ್ಲೋಸ್ಕರ ಬೀದಿ ಮಹತ್ವದ್ದಾಗಿದೆ. ಸದಾ ಚಟುವಟಿಕೆಯಿಂದ ಕೂಡಿದ ಈ ಬೀದಿಯಲ್ಲಿ ಸಂಜೆಯ ಹೊತ್ತು ತಿರುಗಾಡುವುದೆಂದರೆ ಅದೊಂದು ಪ್ರತಿಷ್ಠೆಯ ವಿಷಯವಾಗಿದೆ. ಮೋಜಿಗಾಗಿ, ವ್ಯಾಪಕರಕ್ಕಾಗಿ, ತಿರುಗಾಟಕ್ಕಾಗಿ, ತಿಂಡಿ–ತಿನಿಸುಗಳನ್ನು ತಿನ್ನಲಿಕ್ಕೆ ಹೀಗೆ ವಿಭಿನ್ನ ಕಾರ್ಯದ ಜನರು ಇಲ್ಲಿ ಕಂಡು ಬರುತ್ತಾರೆ. ಅತ್ಯಂತ ಚಿಕ್ಕದಾದ ಈ ಬೀದಿಯು ಬೆಳಗಾವಿಯ ಪ್ರತಿಷ್ಠಿತ ಬೀದಿಯಾಗಿದೆ. ರಾಮದೇವ ಗಲ್ಲಿಯ ತುದಿಯಿಂದ ಬೊಗಾರವೆಸದ ವರೆಗೆ ಇರುವ ಈ ಬೀದಿಯಲ್ಲಿ ಸರಾಯಿ ಅಂಗಡಿ, ಹೋಟೆಲ್, ಖಾನಾವಳಿ, ಚಲನಚಿತ್ರ ಮಂದಿರಗಳು ಕಂಡುಬರುತ್ತವೆ. ಈ ಬೀದಿಯ ಪಶ್ಚಿಮ ತುದಿಗೆ ಗೋವಾ ರಾಜ್ಯಕ್ಕೆ ಹೋಗುವ ಹೆದ್ದಾರಿಯು ಇರುತ್ತದೆ. ಒಂದು ದೃಷ್ಟಿಯಲ್ಲಿ ಮೊದಲಿನ ಹಳೆಯ ಬೆಳಗಾವಿಯ ಹೆಬ್ಬಾಗಿಲು ಎಂದು ಹೇಳುತ್ತಿದ್ದರು. ಇಲ್ಲಿಂದ ಮುಂದೆ ಯುರೋಪಿಯನ್ ವಸ್ತಿಯ ಕ್ಯಾಂಪ್ ಪ್ರದೇಶವಿದೆ. ಸ್ವಾತಂತ್ರ್ಯಪೂರ್ವದಲ್ಲಿ ಈ ಕ್ಯಾಂಪ್ ಪ್ರದೇಶಕ್ಕೂ ಬೆಳಗಾವಿಗೂ ಸಂಬಂಧವಿರಲಿಲ್ಲ. ಹೀಗಾಗಿ ಕಿರ್ಲೋಸ್ಕರ ಬೀದಿಯೇ ಬೆಳಗಾವಿಯ ಕೊನೆಯ ಪ್ರದೇಶವಾಗಿತ್ತು.

ಈ ಬೀದಿಗೆ ಕೀರ್ಲೋಸ್ಕರ ಬೀದಿ ಎಂಬ ಹೆಸರು ಬರಲು ಕಾರಣ ಸ್ವಾರಸ್ಯಕರವಾಗಿದೆ. ಈಗೀನ ಕಿರ್ಲೋಸ್ಕರ ಬೀದಿಯ ಪಕ್ಕದಲ್ಲಿ ಒಂದು ವಿಶಾಲವಾದ ಖಾಲಿ ಸ್ಥಳವಿತ್ತು. ಇದನ್ನು ಕಂಡ ಪ್ರಸಿದ್ಧ ಕಿರ್ಲೋಸ್ಕರ್ ಕೈಗಾರಿಕಾ ಸಮೂಹದ ಸಂಸ್ಥೆ ಈ ಮಾರ್ಗದಲ್ಲಿಯೇ ಒಂದು ಸೈಕಲ್ ಉತ್ಪಾದನಾ ಘಟಕವನ್ನು ಅರಂಭಿಸಲು ನಿರ್ಧರಿಸಿತು.[೧೬] ಮುಂಬಯಿ ಮತ್ತು ಗೋವಾ ಪಟ್ಟಣಗಳ ದಾರಿಯಲ್ಲಿರುವ ಆ ಸ್ಥಳ ಅವರನ್ನು ಆಕರ್ಷಿಸಿತ್ತು. ಆ ಬೃಹತ್ ಸಂಸ್ಥೆ ಅಲ್ಲಿಯೇ ಒಂದು ಕಚೇರಿಯನ್ನು ತೆರೆಯಿತು. ಆಗ ಸೈಕಲ್‌ಗಳಿಗೆ ಕರ್ನಾಟಕ ಮತ್ತು ಮಹಾರಾಷ್ಟ್ರ ಎರಡೂ ರಾಜ್ಯಗಳಲ್ಲಿ ಅಪಾರವಾದ ಬೇಡಿಕೆ ಇತ್ತು. ಆದರೆ ಕಾರಣಾಂತರಗಳಿಂದ ಅಂದಿನ ಬ್ರಿಟಿಷ್ ಸರಕಾರದಿಂದ ಕಿರ್ಲೋಸ್ಕರ ಕಂಪನಿಗೆ ಪೂರಕ ವಾತಾವರಣ ಒದಗಿಬರಲಿಲ್ಲ. ಕಾರಣ ಸಂಸ್ಥೆ ನೆರೆಯ ಸಾಂಗ್ಲಿಯಲ್ಲಿ ಬೇರೆ ಘಟಕವನ್ನು ಆರಂಭಿಸಿತು. ಆದರೆ ಉದ್ಯಮ ಸ್ಥಾಪನೆ ಮಾಡಲಾಗದಿದ್ದರೂ ಈ ಬೀದಿಗೆ ಕಿರ್ಲೋಸ್ಕರ ಎಂಬ ಹೆಸರು ಶಾಶ್ವತವಾಗಿ ಉಳಿಯಿತು. ಕಾರ್ಖಾನೆ ಬಾರದಿದ್ದರೂ ಕಾರ್ಖಾನೆ ಬರುವ ಕುರಿತ ಆಲೋಚನೆಯೇ ಒಂದು ಪ್ರದೇಶದಲ್ಲಿ ಎಂಥ ಬದಲಾವಣೆಗಳನ್ನು ತರಬಲ್ಲದು ಎಂಬುದಕ್ಕೆ ಬೆಳಗಾವಿಯ ಕಿರ್ಲೋಸ್ಕರ ಬೀದಿ ಉದಾಹರಣೆಯಾಗಿದೆ.

ಅಂದಿನಿಂದ ಈ ಬೀದಿಯು ನಗರದ ವಿಕಾಸದಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಬೆಳಗಾವಿಯ ಇಡೀ ಬೆಳವಣಿಗೆಯನ್ನು ಸಾಂಕೇತಿಕವಾಗಿ ನೋಡಬೇಕಾದರೆ ಕಿರ್ಲೋಸ್ಕರ ರಸ್ತೆಯಲ್ಲಿ ಅಡ್ಡಾಡಿದರೆ ಸಾಕು, ಅದು ಬೆಳಗಾವಿ ನಗರವನ್ನೇ ಪ್ರತಿಬಿಂಬಿಸುತ್ತದೆ.

ಸ್ವಾತಂತ್ರ್ಯಪೂರ್ವಕಾಲದಿಂದಲೂ ಈ ರಸ್ತೆ ಮಹತ್ವವನ್ನು ಪಡೆದುಕೊಂಡು ಬಂದಿದೆ. ಆ ಕಾಲದಲ್ಲಿ ಸಿನಿಮಾ ಎನ್ನುವುದು ಅತ್ಯಂತ ರೋಮಾಂಚನದ ಸಂಗತಿಯಾಗಿದ್ದ ಕಾಲ. ಅಂತಹ ಸಂದರ್ಭದಲ್ಲಿ ಈ ಬೀದಿಯಲ್ಲಿ ಸ್ಥಾಪನೆಗೊಂಡ ಶ್ರೀಕೃಷ್ಣ ಟಾಕೀಸ್ ಜನರ ಹೊಸ ಹುರುಪಿಗೆ ಕಾರಣವಾಯಿತು.

ಕಿರ್ಲೋಸ್ಕರ ಬೀದಿಯು ದೇಶದ ಸ್ವಾತಂತ್ರ್ಯ ಹೋರಾಟದ ಹಾಗೂ ಕರ್ನಾಟಕ ಏಕೀಕರಣ ಹೋರಾಟಗಳ ಸಂದರ್ಭದಲ್ಲಿ ಮಹತ್ವದ ಪಾತ್ರವನ್ನು ವಹಿಸಿದೆ. ಹೀಗಾಗಿ ಈ ಬೀದಿಗೆ ಹೋರಾಟದ ಬೀದಿಯೆಂದೇ ಹೆಸರು ಬಂದಿದೆ.

೧೯೫೭ರಲ್ಲಿ ಗಡಿ ಸಂಬಂಧಿ ಹೋರಾಟ ನಡೆದಾಗ ಕಿರ್ಲೋಸ್ಕರ್ ಮಾರ್ಗದಲ್ಲಿ ಸಂಗ್ರಾಮ ತೀವ್ರವಾಗಿತ್ತು. ಗಲಭೆ, ಹಿಂಸಾಚಾರಗಳು ನಡೆದಿದ್ದವು. ಈ ಗಲಭೆಯನ್ನು ನಿಯಂತ್ರಿಸಲು ಪೋಲಿಸರು ಗೋಲಿಬಾರ್ ಕೂಡ ನಡೆಸಿದ್ದರು. ಆಗ ಮೂವರು ಯುವಕರು ಗುಂಡಿಗೆ ಬಲಿಯಾಗಿ ಹುತಾತ್ಮರಾಗಿದ್ದರು.

೧೯೪೭ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ದೊರೆತ ಕೆಲವೇ ದಿನಗಳಲ್ಲಿ ಕೀರ್ಲೋಸ್ಕರ್ ಮಾರ್ಗದಲ್ಲಿ ಒಂದು ಹುತಾತ್ಮ ಚೌಕ ನಿರ್ಮಾಣವಾಯಿತು.[೧೭] ಇಂದು ಒಂದು ಸಾಮಾನ್ಯ ರಸ್ತೆಯಂತೆ ಕಂಡು ಬರುವ ಕಿರ್ಲೋಸ್ಕರ

ಬೀದಿಯು ಒಂದು ಕಾಲದಲ್ಲಿ ಈ ರಸ್ತೆಯೇ ಪಟ್ಟಣವಾಗಿ ಮೆರೆದಿತ್ತು. ಅಷ್ಟೇ ಅಲ್ಲ ಒಂದು ಶತಮಾನದ ಹಿಂದೆ ಈ ಬೀದಿಯು ಎರಡು ಭಾಷೆಗಳನ್ನು ಜೋಡಿಸುವ ಸಂಗಮವಾದಂತಿತ್ತು.

ಈ ಬೀದಿಯ ಮತ್ತೊಂದು ವಿಶೇಷವೆಂದರೆ ಇಲ್ಲಿ ಅತ್ಯಂತ ಪ್ರಸಿದ್ಧಿ ಪಡೆದ ಮೂರು ಹೊಟೇಲ್‌ಗಳು ಇದ್ದವು. ಇವು ಬೆಳಗಾವಿಯ ಸಾಂಸ್ಕೃತಿಕ ವಿಕಾಸದಲ್ಲಿ ಆರ್ಥಿಕ ಬೆಳವಣಿಗೆಯಲ್ಲಿ, ಸೌಹಾರ್ದತೆಯ ಜೀವನದಲ್ಲಿ ಮಹತ್ವವನ್ನು ವಹಿಸಿದ್ದವು. ಅವೆಂದರೆ ನಾಗೂರಿ ಮಿಠಾಯಿವಾಲ ಹೊಟೇಲ್, ಬಾಬಾ ಹೊಟೇಲ್ ಹಾಗೂ ಕೃಷ್ಣಾ ಹೊಟೇಲ್. ಬೆಳಗಾವಿಗೆ ಬಂದವರು ಈ ಹೊಟೇಲ್‌ಗಳಲ್ಲಿ ತಿಂಡಿ ತಿನ್ನದೆ ಹೋಗುತ್ತಿರಲಿಲ್ಲ. ಸಂಜೆಯ ಹೊತ್ತಿಗೆ ಈ ಹೋಟೆಲ್‌ಗಳಲ್ಲಿ ಕಾಲಿಡಲು ಸ್ಥಳವಿಲ್ಲದಷ್ಟು ದಟ್ಟಣೆಯಾಗುತ್ತಿತ್ತು.

**ರವಿವಾರ ಪೇಟೆ:** ಬೆಳಗಾವಿಯ ಮುಖ್ಯ ವ್ಯಾಪಾರದ ಕೇಂದ್ರವಾಗಿರುವ ರವಿವಾರ ಪೇಟೆಯು ಮಂಗಳವಾರ ಹೊರತುಪಡಿಸಿ ವಾರದ ಎಲ್ಲ ದಿನಗಳಲ್ಲಿಯೂ ವ್ಯಾಪಾರ, ವಹಿವಾಟವನ್ನು ಹೊಂದಿರುತ್ತದೆ. ಬೆಳಗಾವಿಯು ಜಿಲ್ಲಾ ಕೇಂದ್ರವಾಗಿರುವುದರಿಂದ ಜಿಲ್ಲೆಯ ಎಲ್ಲ ವ್ಯಾಪಾರದ ವಹಿವಾಟ ಇಲ್ಲಿಂದಲೇ ನಡೆಯುತ್ತದೆ. ಬೇರೆ ಬೇರೆ ಊರುಗಳಿಂದ ಒಕ್ಕಲುತನ ಹುಟ್ಟುವಳಿ ಸಾಮಾನುಗಳು ಇಲ್ಲಿಗೆ ಬರುವವು ಮತ್ತು ಇಲ್ಲಿ ಸಂಗ್ರಹಿಸಲಾಗುವುದು. ಪೇಟೆಯ ಬೇಡಿಕೆಯಂತೆ ಧಾರಣೆಗಳನ್ನು ಇಲ್ಲಿ ನಿರ್ಧರಿಸಲಾಗುವುದು. 'ಪೇಟೆ' ಎನ್ನುವ ಶಬ್ದವು ವಿಶೇಷವಾಗಿ ಬೆಂಗಳೂರು, ಮೈಸೂರು ಭಾಗಗಳಲ್ಲಿ ಬಳಸಲಾಗುತ್ತದೆ. ಆದರೆ ಬೆಳಗಾವಿಯಲ್ಲಿಯೂ ಈ ಶಬ್ದದ ಬಳಕೆ ವಿಶೇಷವಾಗಿ ಬಳಕೆಗೊಳ್ಳುತ್ತದೆ. ಸೋಮವಾರ ಪೇಟೆ, ಮಂಗಳವಾರ ಪೇಟೆ ಹೀಗೆ ವಾರದ ಎಲ್ಲಾ ದಿನಗಳನ್ನು ಇಟ್ಟುಕೊಂಡು ಇಲ್ಲಿ ಪೇಟೆಗಳು ಸಿಗುತ್ತವೆ.

ಸದಾ ಸರಕುಗಳನ್ನು ತುಂಬಿಕೊಳ್ಳುವ ಮತ್ತು ಖಾಲಿ ಮಾಡುವ ಲಾರಿಗಳು ಇಲ್ಲಿ ತುಂಬಿರುತ್ತವೆ. ಹೀಗಾಗಿ ಈ ಭಾಗವು ಯಾವಾಗಲೂ ದಟ್ಟಣೆಯಿಂದ ಕೂಡಿರುತ್ತದೆ. ದೂರದ ಊರಿನವರು ಸಾಮಾನುಗಳನ್ನು ಖರೀದಿಸಿ ಇಲ್ಲಿರುವ ವಿತರಣಾ ಆಫೀಸಿಗೆ ತಂದಿಟ್ಟರೆ ಮರುದಿನ ಆ ವಸ್ತುಗಳು ಸಂಬಂಧಿಸಿದವರಿಗೆ ತಲುಪುತ್ತವೆ. ರವಿವಾರ ಪೇಠೆಯಲ್ಲಿ ಹೆಚ್ಚಾಗಿ ಕನ್ನಡಿಗರ ಅದರಲ್ಲಿಯೂ ವೀರಶೈವರ ಅಂಗಡಿಗಳು ಹೆಚ್ಚಾಗಿರುತ್ತವೆ. ಇಲ್ಲಿರುವ ಮನೆಗಳೆಲ್ಲ ಹೆಚ್ಚಾಗಿ ಕರೆ ಹಂಚಿನ ಮನೆಗಳಾಗಿವೆ. ಕೆಲವು ಮನೆಗಳನ್ನು ವಾಸ್ತವ್ಯಕ್ಕೆ ಉಪಯೋಗಿಸುತ್ತಾರೆ.

**ಶನಿವಾರ ಕೂಟ:** ಬೆಳಗಾವಿ ನಗರದ ಸಂತೆಯ ದಿನವೆಂದರೆ ಶನಿವಾರ. ಶನಿವಾರ ಕೂಟವು ಹಳೆಯ ಬೆಳಗಾವಿಯ ಪ್ರಮುಖ ವ್ಯಾಪಾರಸ್ಥಳವಾಗಿದೆ. ಇದು ಕಾಯಿಪಲ್ಲೆ ಮಾರಾಟದ ಸ್ಥಳವಾಗಿದೆ. ಶನಿವಾರ ಕೂಟವು ಪ್ರಮುಖವಾಗಿ ಕೋರ್ಟಿನ ಸ್ಟ್ಯಾಂಪಗಳನ್ನು, ಅರ್ಜಿ ಪಾರ್ಮಗಳನ್ನು, ಟೈಪಿಂಗ್ ಮಳಿಗೆಗಳನ್ನು ಹೊಂದಿದೆ. ಹೀಗಾಗಿ ಇಲ್ಲಿಯ ವ್ಯವಹಾರವು ಹೆಚ್ಚಾಗಿ ಕೋರ್ಟು ಕಚೇರಿಗಳಿಗೆ ಸಂಬಂಧಿಸಿದ್ದಾಗಿರುತ್ತದೆ. ಈ ಶನಿವಾರ ಕೂಟದ ಸಮೀಪವೇ ಮಹಾನಗರ ಸಭೆಯ ಕಚೇರಿ (ಈಗ ಬದಲಾವಣೆಕೊಂಡಿದೆ), ತಾಲೂಕು ಕಚೇರಿ, ಜಿಲ್ಲಾ

ಮುಖ್ಯ ನ್ಯಾಯಾಲಯ, ಜಿಲ್ಲಾ ಪಂಚಾಯತಿ ಕಚೇರಿಗಳು ಇರುವುದರಿಂದ ಹೆಚ್ಚಿನ ವ್ಯವಹಾರವೆಲ್ಲವೂ ಕಚೇರಿಗೆ ಸಂಬಂಧಿಸಿದ್ದಾಗಿರುತ್ತದೆ.

**ಶೆಟ್ಟಿ ಬೀದಿ:** ಖಡೇಬಜಾರ ಮತ್ತು ಚವಾಟ ಗಲ್ಲಿಗಳಿಗೆ ಹೊಂದಿಕೊಂಡಿರುವ ಶೆಟ್ಟಿ ಬೀದಿಯು ಮೊದಲು ರಾಷ್ಟ್ರೀಯ ಹೆದ್ದಾರಿಯ ಪಕ್ಕದಲ್ಲಿಯೇ ಇತ್ತು. (ಈಗ ಈ ಹೆದ್ದಾರಿಯನ್ನು ಊರ ಹೊರಗಿನಿಂದ ಮಾಡಲಾಗಿದೆ) ಈ ಬೀದಿಯಲ್ಲಿ ಮೊದಲಿನಿಂದಲೂ ಹೆಚ್ಚಾಗಿ ಲಿಂಗವಂತರಿದ್ದಾರೆ. ಈ ಬೀದಿಯು ಮಡಿವಂತರ ಬೀದಿ ಎಂದೇ ಪ್ರಸಿದ್ಧಿ ಪಡೆದಿದೆ. ಇಲ್ಲಿ ವಕೀಲರು, ವ್ಯಾಪಾರಸ್ಥರು ಅಧಿಕಾರಿಗಳು ಹೆಚ್ಚಾಗಿ ವಾಸಿಸುತ್ತಾರೆ. ಈ ಬೀದಿಯಲ್ಲಿ ಬಸವೇಶ್ವರ ವಾಚನಾಲಯ, ವಿದ್ಯಾರ್ಥಿನಿಯರ ಪ್ರಸಾದ ನಿಲಯ, ಮಹಿಳಾ ಹೊಲಿಗೆಯ ವರ್ಗ, ಅಕ್ಕನ ಬಳಗ, ಅಣ್ಣನ ಬಳಗ, ಕನ್ನಡ ಪ್ರಾಥಮಿಕ ಶಾಲೆ, ರೇಶನ ಅಂಗಡಿಗಳಿವೆ. ಹಳೆಯ ಕಾಲದ ಕಪ್ಪು ಕಲ್ಲಿನ ಮನೆಗಳು, ಇತ್ತೀಚೆಗೆ ಕಟ್ಟಿಸಿದ ಗಾರೆ ಮನೆಗಳು, ಕಪ್ಪು ಹಂಚು, ಕೆಂಪು ಹಂಚಿನ ಮನೆಗಳು ಇಲ್ಲಿವೆ. ಈ ಬೀದಿಯಲ್ಲಿಯೇ ಜೈನ ಬಸದಿಯೂ ಇದೆ. ಈ ಬೀದಿಯು ಕೇಂದ್ರ ಬಸ್ ನಿಲ್ದಾಣಕ್ಕೆ ಹತ್ತಿರವಿರುವುದರಿಂದ ಜನದಟ್ಟಣೆಯು ಹೆಚ್ಚಾಗಿರುತ್ತದೆ. ರಾಜ್ಯೋತ್ಸವದ ಸಂದರ್ಭದಲ್ಲಿ ಇಲ್ಲಿಯ ಯುವಕರು ಅತ್ಯಂತ ಉತ್ಸಾಹದಿಂದ ರಾಜ್ಯೋತ್ಸವವನ್ನು ಆಚರಿಸುತ್ತಾರೆ.

**ಚವಾಟಗಲ್ಲಿ:** ಶೆಟ್ಟಿ ಬೀದಿಯ ಮಗ್ಗುಲಲ್ಲಿರುವುದೇ ಚವಾಟಗಲ್ಲಿ. ಶೆಟ್ಟಿ ಬೀದಿಯಲ್ಲಿ ಕನ್ನಡಿಗರು ಹೆಚ್ಚಾಗಿದ್ದಾರೆ. ಚವಾಟಗಲ್ಲಿಯಲ್ಲಿ ಮರಾಠಿಗರು ಹೆಚ್ಚಾಗಿರುತ್ತಾರೆ. ಆದರೆ ಎಂದೂ ಈ ಎರಡೂ ಓಣಿಗಳ ಮಧ್ಯದಲ್ಲಿ ಭಾಷಾ ಜಗಳ ಕಂಡುಬಂದಿಲ್ಲ. ಬೆಳಗಾವಿಯಲ್ಲಿ ಕನ್ನಡಿಗರು–ಮರಾಠಿಗರು ಸೌಹಾರ್ದತೆಯಿಂದ ಬದುಕುತ್ತಿದ್ದಾರೆ ಎನ್ನುವುದಕ್ಕೆ ಇದು ಸಾಕ್ಷಿಯಾಗಿದೆ. ಈ ಬೀದಿಯಲ್ಲಿ ಚವಾಟಾ ಪ್ರಸನ್ನವೆಂಬ ಚಿಕ್ಕ ದೇವಾಲಯವಿದೆ. ಚವಾಟಗಲ್ಲಿ ಎಂದು ಹೆಸರು ಬರಲು ಇಲ್ಲಿ ನಾಲ್ಕು ಬೀದಿಗಳು ಕೂಡಿ ಒಂದು ಕೂಟವಾಗಿದೆ. ಮರಾಠಿಯಲ್ಲಿ 'ಚ' ಎಂದರೆ ನಾಲ್ಕು, 'ವಾಟ್' ಅಂದರೆ ಬೀದಿ. ಹೀಗಾಗಿ ಇದಕ್ಕೆ 'ಚವಾಟ' ಎಂದು ಹೆಸರು ಬಂದಿದೆ.

ಈ ಬೀದಿಯಲ್ಲಿ ಕೂಲಿಕಾರರು, ವ್ಯಾಪಾರಸ್ಥರು ಹೆಚ್ಚಾಗಿದ್ದಾರೆ. ಆದರೂ ಎಲ್ಲ ವರ್ಗ ಪಂಗಡಗಳ ಜನರ ಮನೆಗಳನ್ನು ಕಾಣಬಹುದಾಗಿದೆ. ಈ ಬೀದಿಯಲ್ಲಿ ಹೋಳಿ ಹಬ್ಬವನ್ನು ಅತಿ ವಿಜೃಂಭಣೆಯಿಂದ ಆಚರಿಸುತ್ತಾರೆ. ಇಲ್ಲಿ ಮಾರುತಿ ದೇವಾಲಯವೂ ಇದೆ. ಈ ಬೀದಿಯ ಪಕ್ಕದಲ್ಲಿಯೇ ಕೋರ್ಟ್ ಇರುವುದರಿಂದ ಕೋರ್ಟು – ಕಚೇರಿಗೆ ಬರುವವರೆಲ್ಲ ದೇವಾಲಯದಲ್ಲಿ ವಿಶ್ರಾಂತಿ ಪಡೆಯುತ್ತಾರೆ.

**ಗೊಂದಳಿ ಗಲ್ಲಿ:** ಹಳೆ ಬೆಳಗಾವಿಯ ವಿಶಿಷ್ಟವಾದ ಪರಿಸರವನ್ನು ಹೊಂದಿದ ಈ ಬೀದಿಯಲ್ಲಿ ದೇವಿ ಉಪಾಸಕರು ಹೆಚ್ಚಾಗಿ ವಾಸವಾಗಿದ್ದಾರೆ. ಇಲ್ಲಿಯ ಕೆಲವು ಕುಟುಂಬಗಳು 'ಗೊಂದಳಿ'ಯನ್ನು ಹಾಕುತ್ತವೆ. ಗೊಂದಳಿ

ಹಾಕುವುದು ಒಂದು ವಿಶಿಷ್ಟ ಧಾರ್ಮಿಕ ಸಂಪ್ರದಾಯ. ಇಲ್ಲಿಯ ಕೆಲವು ಮನೆತನಗಳು ಒಕ್ಕಲುತನವನ್ನು ಹಾಗೂ ಹೈನುಗಾರಿಕೆಯನ್ನು ಅವಲಂಭಿಸಿವೆ. ಹೀಗಾಗಿ ಇಲ್ಲಿ ಗ್ರಾಮೀಣ ಸಂಸ್ಕೃತಿಯ ಪರಿಸರವನ್ನು ಕಾಣಬಹುದು.

**ಕಾಲೇಜ ರೋಡ:** ಬೆಳಗಾವಿಗೆ ಆಧುನಿಕ ಸ್ಪರ್ಶವನ್ನು ನೀಡಿದ ಕಾಲೇಜು ರಸ್ತೆಯು ಮುಖ್ಯವಾಗಿ ಪ್ರಮುಖ ಶಾಲಾ ಕಾಲೇಜುಗಳನ್ನು ಹಾಗೂ ಹೊಟೇಲಗಳನ್ನು ಹೊಂದಿದೆ. ಬೆಳಗಾವಿಯಿಂದ ಗೋವೆಗೆ ಹೋಗುವ ಮಾರ್ಗವನ್ನು ಕಾಲೇಜ ರಸ್ತೆಯು ಕೂಡುತ್ತದೆ. ಕೆ.ಎಲ್.ಇ ಸಂಸ್ಥೆಯ ಲಿಂಗರಾಜ ಮಹಾವಿದ್ಯಾಲಯ, ಮಹಿಳಾ ವಿದ್ಯಾಲಯ, ಬೆನನ್‌ಸ್ಮಿತ್ ಹೀಗೆ ಹಲವಾರು ಪ್ರಮುಖ ವಿದ್ಯಾಸಂಸ್ಥೆಗಳನ್ನು ಹೊಂದಿದೆ. ನಗರದಲ್ಲಿ ನಡೆಯುವ ಪ್ರಮುಖ ಮೆರವಣಿಗೆಗಳಿಗೆ ಈ ಬೀದಿಯು 'ರಾಜಬೀದಿ' ಇದ್ದಹಾಗೆ. ಬೆಳಗಾವಿಯ ಆಧುನಿಕತೆಯ ಪ್ರತಿಬಿಂಬ ಈ ಬೀದಿಯಲ್ಲಿ ಕಂಡು ಬರುತ್ತದೆ.

**ಬಸವನ ಬೀದಿ:** ನಗರದ ಹೃದಯ ಭಾಗದಲ್ಲಿರುವ ಈ ಬೀದಿಯು ಬಸಬೆಳಗಾವಿಗೆ ಆಧುನಿಕವಣ್ಣ ದೇವರ ಗುಡಿಯನ್ನು ಹೊಂದಿದ್ದರಿಂದ ಬಸವನ ಬೀದಿ ಎಂದು ಹೆಸರಾಗಿದೆ. ಈ ಬೀದಿಯಲ್ಲಿಯ ವಿಶೇಷವೆಂದರೆ ಇಲ್ಲಿ ಹಲವಾರು ದೇವಾಲಯಗಳಿವೆ. ಬಸವಣ್ಣ ದೇವಾಲಯ, ಗ್ರಾಮದೇವತೆ ದೇವಾಲಯ, ವೆಂಕಟರಮಣ ದೇವಾಲಯ, ಪಾರ್ಶ್ವನಾಥ ಬಸದಿ, ಹನುಮನ ಗುಡಿ–ಹೀಗೆ ಪ್ರಮುಖವಾದ ದೇವಾಲಯಗಳು ಇಲ್ಲಿವೆ. ಈ ಬೀದಿಯು ಪೂರ್ತಿಯಾಗಿ ಕನ್ನಡಿಗರಿಂದ ತುಂಬಿಕೊಂಡಿದೆ. ಮೂಲ ಬೆಳಗಾವಿಯಲ್ಲಿ ಕನ್ನಡಿಗರೇ ಮೂಲ ನಿವಾಸಿಗಳಾಗಿದ್ದರು ಎನ್ನುವುದು ಈ ಬೀದಿಯಲ್ಲಿಯ ದೇವಾಲಯಗಳಿಂದ ತಿಳಿದು ಬರುತ್ತದೆ. ಬಸವಣ್ಣನ ದೇವಾಲಯವು ವಿಶೇಷವಾದ ಜಾತ್ರೆಯ ಪರಂಪರೆಯನ್ನು ಹೊಂದಿದೆ. ಯುಗಾದಿಯ ದಿವಸ ಇಲ್ಲಿ ಅಂಬಲಿ ಬಂಡಿ, ಕಿಚ್ಚಹಾಯುವ ಸಂಪ್ರದಾಯ ಮುಂತಾದ ಸಂಪ್ರದಾಯಗಳು ಇಂದಿಗೂ ಕಂಡುಬರುತ್ತದೆ.

ಗ್ರಾಮದೇವತೆಯ ದೇವಾಲಯವೂ ಇದೇ ಬೀದಿಯಲ್ಲಿದೆ. ಗ್ರಾಮದೇವತೆಗೆ ಉಡಿ ತುಂಬುವ ಕಾರ್ಯವು ಪ್ರತಿವರ್ಷ ಜರುಗುತ್ತದೆ. ಬೆಳಗಾವಿಯು ಮೊದಲು ಸಣ್ಣ ಹಳ್ಳಿ ಆಗಿದ್ದ ಸಂದರ್ಭದಲ್ಲಿ ಈ ಬೀದಿಯು ಮಹತ್ವವನ್ನು ಪಡೆದುಕೊಂಡಿತ್ತು. ಸದಾ ಒಂದಿಲ್ಲೊಂದು ಧಾರ್ಮಿಕ ಕಾರ್ಯಕ್ರಮಗಳು ಈ ಬೀದಿಯಲ್ಲಿ ಜರುಗುತ್ತಿದ್ದವು. ಊರಿನ ಸಂಕೇತವಾದ ಗ್ರಾಮದೇವತೆಯ ದೇವಾಲಯವು ಹಳೆಯ ಕಾಲದ ಮಣ್ಣಿನ ದೇವಾಲಯವಾಗಿದೆ. ಇಲ್ಲಿಯ ಮನೆಗಳೆಲ್ಲ ಹಳೆಯ ಕಾಲದ ಕಪ್ಪು ಹಂಚಿನ ಮನೆಗಳಾಗಿವೆ.

**ದರಬಾರ್ ಗಲ್ಲಿ :** ವಿಜಾಪೂರದ ಆದಿಲ್‌ಶಾಹಿಗಳು ಬೆಳಗಾವಿಯಲ್ಲಿ ಆಳ್ವಿಕೆ ನಡೆಸಿದ ಸಂದರ್ಭದಲ್ಲಿ ದರಬಾರ್ ಬೀದಿ ಅಸ್ತಿತ್ವಕ್ಕೆ ಬಂದಿತು. ದರಬಾರ್ ಬೀದಿ ಎಂದು ಹೆಸರು ಬರಲು ಕಾರಣ ಈ ಬೀದಿಯಲ್ಲಿ 'ದರಬಾರ್ ಹಾಲ್' ಇದೆ. ಇಲ್ಲಿ ಭಾಷೀಬಾನ್ ದರ್ಗಾದ ಧರ್ಮ ಮುಖ್ಯಸ್ಥರಾಗಿದ್ದ ಇನಾಂದಾರಗಳು ತಮ್ಮ

ಧರ್ಮಿಯರ ಸಮಸ್ಯೆ ಹಾಗೂ ಧರ್ಮದ ಏಳ್ಗೆ ಕುರಿತಾಗಿ ಈ ಹಾಲ್‌ನಲ್ಲಿ ಸಭೆ ನಡೆಸುತ್ತಿದ್ದರು. ಇದು ದರ್ಬಾರ್ ಹಾಲ್ ಆಗಿ ನಂತರದ ದಿನಗಳಲ್ಲಿ ಹಾಲ್‌ವಿರುವ ಬೀದಿ ದರಬಾರ್ ಬೀದಿಯಾಗಿ ಪ್ರಚಾರಕ್ಕೆ ಬಂದಿತು. ಈ ಬೀದಿಯು ನಾಲ್ಕುನೂರು ವರ್ಷಗಳ ಇತಿಹಾಸವನ್ನು ಹೊಂದಿದೆ. ಈ ಬೀದಿಯಲ್ಲಿರುವ ಜಾಮಿಯಾ ಮಸೀದಿಯು ವಿಜಾಪೂರದ ಅಲಿ ಆದಿಲ್‌ಷಾಹಿಯ ಕಾಲದಲ್ಲಿ ಕಟ್ಟಲ್ಪಟ್ಟಿದೆ. ಈ ಮಸೀದಿಯಲ್ಲಿ ಏಕಕಾಲಕ್ಕೆ ಸಾವಿರ ಜನರು ಪ್ರಾರ್ಥನೆಯನ್ನು ಮಾಡಬಹುದಾಗಿದೆ.

ಈಗ ಈ ಬೀದಿ ತಿಂಗಳುದ್ದದ ಪವಿತ್ರ ರಂಜಾನ್ ಹಬ್ಬದ ದಟ್ಟಣೆಯ ಸಂತೆಯ ತಾಣವಾಗಿದೆ. ರಂಜಾನ್ ಹಬ್ಬದ ವಿಶೇಷ ಕೇಂದ್ರ ಬಿಂದುವಾದ ಈ ಬೀದಿಯು ವಿದ್ಯುತ್ ದೀಪಗಳಿಂದ ಅಲಂಕಾರಗೊಂಡು ಸದಾ ಜನದಟ್ಟನೆಯಿಂದ ಕೂಡಿರುತ್ತದೆ. ತಿಂಗಳ ಉಪವಾಸದ ಹಬ್ಬದಲ್ಲಿ ಧರ್ಮಿಯರಿಗೆ ಬೇಕಾದ ಒಣ ಪದಾರ್ಥಗಳಿಂದ ಹಿಡಿದು ಹೈದರಾಬಾದ್ ಮೊಘಲಶಾಹಿಗಳ ಖಾದ್ಯ ಪದಾರ್ಥಗಳು ಇಲ್ಲಿ ಮಾರಾಟಕ್ಕಿರುತ್ತವೆ. ಅಲ್ಲದೆ ಖುರಾನ ಧರ್ಮ ಗ್ರಂಥ, ತಲೆ ಟೊಪ್ಪಿಗೆ, ಕರವಸ್ತ್ರ, ಬಟ್ಟೆ, ಚಪ್ಪಲಿ ಹೀಗೆ ಮಕ್ಕಳಿಂದ ಮಹಿಳೆಯವರೆಗೂ ಬೇಕಾದ ಎಲ್ಲ ಅಗತ್ಯ ವಸ್ತುಗಳ ಮಾರಾಟ ಈ ಬೀದಿಯಲ್ಲಿ ನಡೆಯುತ್ತದೆ. ದಿನಕ್ಕೆ ಲಕ್ಷಾಂತರ ರೂಪಾಯಿಗಳ ವಹಿವಾಟ ಇದ್ದು ತಿಂಗಳಿಗೆ ಕೋಟ್ಯಾಂತರ ರೂ.ಗಳಷ್ಟಾಗುತ್ತದೆ. ರಂಜಾನ ಹಬ್ಬದ ಸಂದರ್ಭದಲ್ಲಿ ಈ ಬೀದಿಯು ಹಬ್ಬದ ಮಾರಾಟದ ಕೇಂದ್ರವಾಗಿದೆ. ಆದರೆ ಕೇವಲ ಮುಸ್ಲಿಂರಷ್ಟೇ ಇಲ್ಲಿ ಸೇರದೆ ಎಲ್ಲ ಜಾತಿ ಜನರು ಈ ಸಂತೆಯಲ್ಲಿ ಸಾಮಾನುಗಳನ್ನು ಖರೀದಿಸುತ್ತಾರೆ.

ಈ ಪ್ರಮುಖ ಬೀದಿಗಳಲ್ಲದೆ ಇನ್ನು ಹಲವಾರು ಬೀದಿಗಳು ಬೆಳಗಾವಿಯಲ್ಲಿ ಪ್ರಸಿದ್ಧಿಯನ್ನು ಪಡೆದುಕೊಂಡಿವೆ. ಮೂಲ ಬೆಳಗಾವಿಯಲ್ಲಿ ಕನ್ನಡ ಸಂಸ್ಕೃತಿಯ ದಟ್ಟವಾದ ಛಾಯೆ ಕಂಡುಬರುತ್ತದೆ. ಅಲ್ಲಲ್ಲಿ ಮರಾಠಿಗರು ಬಂದು ಸೇರಿಕೊಂಡು ತಮ್ಮ ಧರ್ಮದ ದೇವಾಲಯಗಳನ್ನು ನಿರ್ಮಿಸಿಕೊಂಡಿದ್ದಾರೆ. ಹನುಮನ ಬೀದಿ ಹಾಗೂ ಬಸವನ ಬೀದಿಗಳ ನಡುವೆ ದೇಶಪಾಂಡೆ ಬೀದಿ ಇದೆ. ಇಲ್ಲಿ ಬ್ರಾಹ್ಮಣರು ಹೆಚ್ಚಾಗಿದ್ದಾರೆ. ಇಲ್ಲಿಯೇ ಸ್ವಾತಂತ್ರ್ಯ ಹೋರಾಟಗಾರ ಗಂಗಾಧರರಾಯ ದೇಶಪಾಂಡೆಯವರ ವಾಡೆ ಇರುತ್ತದೆ. ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ಈ ಬೀದಿಯು ಪ್ರಾಮುಖ್ಯತೆಯನ್ನು ಪಡೆದುಕೊಂಡಿತ್ತು. ಕಲ್ಮಠ ರಸ್ತೆ, ಟಿಳಕಚೌಕ, ಅನಂತ ಶಯನ ಬೀದಿ, ಮಠಗಲ್ಲಿ, ಶೇರಿಗಲ್ಲಿ, ಪಾಟೀಲಗಲ್ಲಿ, ತಶೀಲ್ದಾರಗಲ್ಲಿ, ಚಾಂದೂರಗಲ್ಲಿ, ರಾಮಲಿಂಗಖಂಡಗಲ್ಲಿ, ಕಡೋಲಕರಗಲ್ಲಿ, ಮೇದಾರಗಲ್ಲಿ, ರಿಸಾಲದಾರಗಲ್ಲಿ, ಜಾಲಗಾರಗಲ್ಲಿ, ಬೆಂಡಿ ಬಜಾರ, ಮಾಳಿಗಲ್ಲಿ, ಕಸಾಯಿಗಲ್ಲಿ ಗೋಂದಳಿ ಗಲ್ಲಿ, ಗವಳಿ ಗಲ್ಲಿ ಬಡಕಲ್ ಗಲ್ಲಿ, ಕ್ಲಬ್ ರೋಡ, ಕಾಲೇಜು ರೋಡ, ಕೇಳಕರ ಭಾಗ, ಪಾಂಗೂಳ ಗಲ್ಲಿ, ಮಾಣಿಕಭಾಗ, ಪೋರ್ಟ ರೋಡ ಮುಂತಾದ ಗಲ್ಲಿಗಳು ಮಹತ್ವದ್ದಾಗಿವೆ. ಇಲ್ಲೆಲ್ಲ ಕನ್ನಡ–ಮರಾಠಿ–ಉರ್ದು ಭಾಷೆಯ ಜನರು ವಾಸಿಸುತ್ತಾರೆ. ಮೂಲ ಬೆಳಗಾವಿಯ ದಟ್ಟವಾದ ಛಾಯೇ ಈ ಬೀದಿಗಳಲ್ಲಿ ಕಂಡುಬರುತ್ತದೆ.



**ಸಂದರ್ಭ ಸೂಚಿ :**

೧. ನಾ. ಶಿ. ರಂಗರಾಜು: ಕರ್ನಾಟಕದ ಬೃಹತ್ ಶಿಲಾಸಂಸ್ಕೃತಿ ಒಂದು ಮರು ಚಿಂತನೆ, ಕರ್ನಾಟಕದ ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ಅಧ್ಯಯನಗಳ ಮರುಚಿಂತನೆ, ಪುಟ. ೧೩.

೨. ಡಾ. ಎಂ. ಬಿ. ನೇಗಿನಹಾಳ: ನೇಗಿನಹಾಳ ಪ್ರಬಂಧಗಳು, ಪುಟ. ೫೨.

೩. ಡಾ. ಅ. ಸುಂದರ: ವಡಗಾಂವ–ಮಾಧವಪುರದಲ್ಲಿಯ ೨೦೦೦ ವರ್ಷ ಹಿಂದಿನ ವ್ಯಾಪಾರ ಕೇಂದ್ರದ ಮಹಾನಗರ, ಪುಟ.೩.

೪. ಡಾ. ಎಂ. ಬಿ. ನೇಗಿನಹಾಳ: ನೇಗಿನಹಾಳ ಪ್ರಬಂಧಗಳು, ಪುಟ. ೫೪.

೫. ಡಾ. ಎಸ್.ಕೆ. ಜೋಶಿ: ಬೆಳಗಾವಿ ಜಿಲ್ಲೆಯ ಕೋಟೆ–ಕೊತ್ತಲಗಳು, ಪುಟ. ೨೯.

೬ ಡಾ. ಬಿ.ಆರ್. ಹಂದೂರ: ಜೈನ ಪರಪಂರೆಗೆ ಬೆಳಗಾವಿ ಜಿಲ್ಲೆಯ ಕೊಡುಗೆ, ಪುಟ. ೫.

೭ ಡಾ. ಕೆ. ಮೋಹನಕೃಷ್ಣ ರೈ: ವಸಾಹತು ಪೂರ್ವ ಕರ್ನಾಟಕದ ನಗರ ಚರಿತ್ರೆ, ಪುಟ. ೨೫.

೮. ಡಾ. ಎಂ. ಬಿ. ನೇಗಿನಹಾಳ: ನೇಗಿನಹಾಳ ಪ್ರಬಂಧಗಳು, ಪುಟ. ೫೩.

೯. ಡಾ. ಎಸ್. ಕೆ. ಜೋಶಿ: ಬೆಳಗಾವಿ ಜಿಲ್ಲೆಯ ಕೋಟೆ ಕೊತ್ತಳಗಳು, ಪುಟ. ೨೯.

೧೦. ಶ್ರೀ. ಮಡಿವಾಳೇಶ್ವರ ಶಿ. ಸರದಾರ: ಬೆಳಗಾವಿಯ ಕೋಟೆಯು, ಪ್ರಬೋಧ ಮಾಸಪತ್ರಿಕೆ, ಪುಟ. ೩, ಜೂನ ೧೯೨೨, ಸಂಚಿಕೆ –೨, ಸಂಪುಟ–೧.

೧೧. ಡಾ. ಎಂ. ಬಿ. ನೇಗಿನಹಾಳ: ನೇಗಿನಹಾಳ ಪ್ರಬಂಧಗಳು, ಪುಟ. ೫೩.

೧೨. ಡಾ. ಬಿ. ಆರ್. ಹಂದೂರ: ಜೈನ ಪರಂಪರೆಗೆ ಬೆಳಗಾವಿ ಪ್ರಾದೇಶಿಕ ಕೊಡುಗೆ, ಪುಟ. ೫.

೧೪. ಡಾ. ಎಂ. ಬಿ. ನೇಗಿನಹಾಳ: ನೇಗಿನಹಾಳ ಪ್ರಬಂಧಗಳು, ಪುಟ. ೫೧.

೧೩. ರಾಮಚಂದ್ರ ಹುಟಗಿ: ಬೆಳಗಾವಿ ಭೂಗೋಲ, ಪುಟ. ೩೪

೧೪. ಗ್ಯಾಝೆಟೀಯರು–ಮುಂಬೈ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು ಪುಟ. ೬೩೦, ಸಂ: ವೆಂಕಟರಂಗೋ ಕಟ್ಟಿ. ಮುಂಬಯಿ ಗವರ್‌ಮೆಂಟ ಸೆಂಟ್ರಲ್ ಬುಕ್ ಡಿಪೋ, ೧೮೯೩.

೧೫. ರಾಮಚಂದ್ರ ಹುಟಗಿ: ಬೆಳಗಾವಿ ಭೂಗೋಲ, ಪುಟ. ೩೪.

೧೬. ಅರುಣಕುಮಾರ ಹಬ್ಬು: ಬೆಳಗಾವಿಯ ಕಿರ್ಲೋಸ್ಕರ ರಸ್ತೆ, ತರಂಗ, ಯುಗಾದಿ ವಿಶೇಷಾಂಕ–೨೦೦೭, ಪುಟ. ೮೩.

೧೭. ಅದೇ ಪುಟ. ೮೪.

❖❖

# ಅಧ್ಯಾಯ : ಐದು

# ಕಲೆಗಳು

## ೧. ವಾಸ್ತುಶಿಲ್ಪ:

ಪ್ರಾಚೀನ ಕಾಲದಿಂದಲೂ ಮಾನವನ ಚಟುವಟಿಕೆಗೆ ನೆಲೆವೀಡಾಗಿದ್ದ ಬೆಳಗಾವಿ ಪ್ರದೇಶದಲ್ಲಿ ವಿವಿಧ ಅರಸುಮನೆತನಗಳ ಆಳ್ವಿಕೆಯು ನಡೆದು ಅಭಿವೃದ್ಧಿಹೊಂದಿ ಕರ್ನಾಟಕದ ಸಂಸ್ಕೃತಿಯನ್ನು ಸಮೃದ್ಧಗೊಳಿಸುವಲ್ಲಿ ಪ್ರಮುಖ ಪಾತ್ರವಹಿಸಿವೆ. ಸಾತವಾಹನ, ಬನವಾಸಿಯ ಕದಂಬ, ಬಾದಾಮಿಯ ಚಾಳುಕ್ಯ, ಮಳಖೇಡದ ರಾಷ್ಟ್ರಕೂಟ, ಕಲ್ಯಾಣದ ಚಾಲುಕ್ಯ, ಗೋವೆಯ ಕದಂಬ, ಸವದತ್ತಿಯ ರಟ್ಟ, ವಿಜಾಪುರದ ಸುಲ್ತಾನ, ದೇವಗಿರಿಯ ಸೇವುಣ ಮುಂತಾದ ರಾಜಮನೆತನಗಳ ಶಾಸನಗಳು, ಸ್ಮಾರಕಗಳು ಈ ಪ್ರದೇಶದಲ್ಲಿ ಲಭ್ಯವಾಗಿವೆ. ವಿವಿಧ ರಾಜರು ಎಲ್ಲಾ ಮತಧರ್ಮಗಳಿಗೆ ಪ್ರೋತ್ಸಾಹ ನೀಡಿ ದೇಗುಲ ನಿರ್ಮಾಣಕ್ಕೆ ಕಾರಣವಾಗಿದ್ದಾರೆ. ಇಲ್ಲಿಯ ದೇಗುಲಗಳ ತಲವಿನ್ಯಾಸ, ಬಾಹ್ಯರೂಪ, ಆಂತರಿಕ ಅಲಂಕಾರ ವಿನ್ಯಾಸ, ಮೂರ್ತಿಗಳ ಕೆತ್ತನೆ, ಕೋಟೆಗಳ ನಿರ್ಮಾಣ ಈ ಎಲ್ಲವೂ ಗಮನಾರ್ಹವಾಗಿದ್ದು ವಾಸ್ತುಶಿಲ್ಪ ವೈವಿಧ್ಯತೆಯನ್ನು ಪರಿಚಯಿಸುತ್ತವೆ. ಕರ್ನಾಟ ದ್ರಾವಿಡ ರೀತಿಯ ದೇಗುಲಗಳು, ಫಂಸನಾ(ಕಾದಂಬನಾಗರ)ರೀತಿಯ ದೇಗುಲಗಳು, ಯುರೋಪಿಯನ್ ಶೈಲಿ ಮುಂತಾದ ಶೈಲಿಯಲ್ಲಿ ನಿರ್ಮಾಣಗೊಂಡು ಬೆಳಗಾವಿಯ ಪ್ರಾದೇಶಿಕ ವಾಸ್ತುಶಿಲ್ಪಕಲೆಯನ್ನು ಶ್ರೀಮಂತಗೊಳಿಸಿವೆ.

ಬೆಳಗಾವಿಯು ವಾಸ್ತುಶಿಲ್ಪಕಲೆಯಿಂದ ಮುಖ್ಯವಾಗಿ ತಿಳಿದುಬರುವುದೇನೆಂದರೆ ಸಂಸ್ಕೃತಿಯ ವಿಕಾಸದ ಹಂತವನ್ನು ಗುರುತಿಸಬಹುದಾಗಿದೆ. ಸಾತವಾಹನರ ಕಾಲದಿಂದ ಬ್ರಿಟಿಷರ ಕಾಲದವರೆಗೆ ವಿವಿಧ ಹಂತಗಳಲ್ಲಿ ನಿರ್ಮಾಣಗೊಂಡ ಈ ಸ್ಮಾರಕಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ಸ್ಥೂಲವಾಗಿ ವಿವರಿಸಲಾಗಿದೆ.

ಕರ್ನಾಟಕದ ಭವ್ಯ ಸಾಂಸ್ಕೃತಿಕ ಚರಿತ್ರೆಯ ನಿರ್ಮಾಣದಲ್ಲಿ ವಾಸ್ತುಶಿಲ್ಪಕಲೆಯು ಮಹತ್ವವನ್ನು ಪಡೆದುಕೊಂಡಿದ್ದು, ಈ ನಿಟ್ಟಿನಲ್ಲಿ ಬೆಳಗಾವಿಯ ಪ್ರಾದೇಶಿಕ ವಾಸ್ತುಶಿಲ್ಪಕಲೆ ವೈಶಿಷ್ಟ್ಯಪೂರ್ಣವಾಗಿದೆ. ಭಾಷೆ, ಧರ್ಮ, ಸಂಸ್ಕೃತಿಯಲ್ಲಿ ಸಾಮರಸ್ಯತೆಯನ್ನು ಹೊಂದಿದ ಈ ನೆಲದಲಿ ವಾಸ್ತುಶಿಲ್ಪಕಲೆಯು ವಿಭಿನ್ನ ಮಾದರಿಗಳಲ್ಲಿ ನಿರ್ಮಾಣಗೊಂಡಿದೆ. ಜೈನ, ಶೈವ, ಬೌದ್ಧ, ವೈಷ್ಣವ, ಇಸ್ಲಾಂ ಹಾಗೂ ಕ್ರೈಸ್ತ ಮತಧರ್ಮಗಳ ಹಿನ್ನೆಲೆಯಲ್ಲಿ ಗುಡಿ, ಮಠ, ಮಂದಿರ, ಬಸದಿ, ಮಸಿದಿ, ಚರ್ಚಗಳಲ್ಲಿ ಈ ಕಲೆಯು ತನ್ನ ನೆಲೆಯನ್ನು ಸ್ಥಿರವಾಗಿಟ್ಟುಕೊಂಡಿದೆ.

**ಶೈವ ವಾಸ್ತುಶಿಲ್ಪಕಲೆ:** ಬೆಳಗಾವಿಯ ಪ್ರಾಚೀನ ಕಾಲದಲ್ಲಿ ಶೈವ ಪರಂಪರೆಯನ್ನು ಹೊಂದಿದ್ದು, ವಡಗಾಂವ ಮಾಧವಪುರದಲ್ಲಿ ನಡೆದ ಉತ್ಖನನದ ಸಮಯದಲ್ಲಿ ದೊರೆತ ಕೆಲವು ಅವಶೇಷಗಳಿಂದ ಸ್ಪಷ್ಟಗೊಳ್ಳುತ್ತದೆ.[೧] ಸಾತವಾಹನರ ಕಾಲಕ್ಕೆ ಸಂಬಂಧಿಸಿದ ಕೆಲವು ಸ್ಮಾರಕಗಳು, ಕಟ್ಟಡಗಳು, ಮಣ್ಣಿನ ಮೂರ್ತಿಗಳು, ಮೃತಪಾತ್ರೆಯ ಮೇಲಿನ ಚಿತ್ರಗಳು, ಈ ಸಂದರ್ಭದಲ್ಲಿ ಲಭ್ಯವಾಗಿವೆ. ಆರುವರ್ಷಗಳ ಕಾಲ ನಡೆದ ಈ ಉತ್ಖನನದಲ್ಲಿ ಬೇರೆ ಬೇರೆ ರೀತಿಯ ಎಂಟು ಇಟ್ಟಿಗೆ ಕಟ್ಟಡದ ಅವಶೇಷಗಳು, ಮೂರು ಬಾವಿಗಳು, ಇಟ್ಟಿಗೆಗಳಿಂದ ನಿರ್ಮಾಣಗೊಂಡ ಆಹಾರಧಾನ್ಯಗಳನ್ನು ಸಂಗ್ರಹಿಸಿಡುವ ಆಹಾರ ಕಣಜಗಳು, ಹಲವಾರು ಮಣ್ಣಿನ ಬೊಂಬೆಗಳು ವಿಪುಲವಾದ ಮೃತಪಾತ್ರೆಯ ಅವಶೇಷಗಳು ಈ ಉತ್ಖನನದಲ್ಲಿ ಲಭ್ಯವಾಗಿವೆ. ಇವು ಪ್ರಾಚೀನ ವಾಸ್ತುಶಿಲ್ಪಕಲೆಗೆ ಮಹತ್ವದ ಸಾಕ್ಷಾಧಾರಗಳಾಗಿವೆ.

ಪ್ರಾಚೀನ ಧರ್ಮಗಳಲ್ಲಿ ಒಂದಾದ ಶೈವಧರ್ಮವು ಶಾತವಾಹನರ ಕಾಲದಲ್ಲಿ ಬೆಳಗಾವಿ ಪ್ರದೇಶದಲ್ಲಿ ತನ್ನ ಪ್ರಭಾವವನ್ನು ಪಡೆದುಕೊಂಡಿರುವ ವಿಷಯವು ಇಲ್ಲಿಯ ಅವಶೇಷಗಳಿಂದ ಸ್ಪಷ್ಟವಾಗುತ್ತದೆ. ಕಟ್ಟಡಗಳು, ಶಿಲಾಮೂರ್ತಿ, ಮೃತಪಾತ್ರೆಯ ಮೇಲಿನ ಚಿತ್ರಗಳು ಈ ಸಂದರ್ಭದಲ್ಲಿ ಲಭ್ಯವಾಗಿವೆ.

ಧಾರ್ಮಿಕ ಕಾರ್ಯಗಳಿಗೆ ಉಪಯೋಗಿಸಲು ನಿರ್ಮಿಸಲಾದ ಎರಡು ಕಟ್ಟಡಗಳ ಅವಶೇಷಗಳು ಇಲ್ಲಿ ಪ್ರಮುಖವಾಗಿ ಕಂಡುಬರುತ್ತವೆ. ಸಾಮಾನ್ಯ ವಾಸ್ತವ್ಯದ ಮನೆಗಳಿಂದ ತೀರ ಭಿನ್ನವಾದ ವಿನ್ಯಾಸವನ್ನು ಹೊಂದಿದ ಈ ಕಟ್ಟಡಗಳ ವಿಸ್ತಾರ ಸುಮಾರು ೧೪ x ೧೨ ಮಿ. ಇದನ್ನು ಉತ್ಖನನ ನಡೆಸಿದವರು ಡಾ. ಅ. ಸುಂದರ. ಪಡಶಾಲೆ, ಚಿಕ್ಕ ಕೊಠಡಿ, ಇದರ ಮಧ್ಯದಲ್ಲಿ ಇಟ್ಟಿಗೆ ಕಣಜ ಹೀಗೆ ವ್ಯವಸ್ಥಿತವಾಗಿ ರಚನೆಗೊಂಡಿರುವುದನ್ನು ಕಾಣಬಹುದಾಗಿದೆ. ಇಲ್ಲಿ ದೊರೆತ ಗಣೇಶ, ಶಿವಲಿಂಗ ಹಾಗೂ ಗೂಳಿಶಿಲ್ಪಗಳು ಪ್ರಮುಖವಾಗಿ ದೊರೆತಿವೆ. ಇವು ಮೃತಪಾತ್ರೆಯ ಹೊರ ಮೈಯಲ್ಲಿ ಮಾಡಲ್ಪಟ್ಟಿವೆ. ಗಣೇಶನ ಚಿತ್ರದಲ್ಲಿ ತಲೆ ಬೋಳಾಗಿದ್ದು, ಆನೆಮುಖ, ಕೋರೆಯನ್ನು ಹೊಂದಿರುತ್ತದೆ. ಗಣೇಶನ ಉಬ್ಬಿದ ಹೊಟ್ಟೆಯನ್ನು ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಕ್ರಿ.ಶ.೨-೩ನೆಯ ಶತಮಾನಕ್ಕೆ ಸೇರಿದ ಈ ವಿಗ್ರಹವು ದಕ್ಷಿಣ ಭಾರತದಲ್ಲಿಯೇ ಅತ್ಯಂತ ಪ್ರಾಚೀನ ಗಣೇಶನ ವಿಗ್ರಹವಾಗಿದೆ ಎಂದು ಡಾ. ಅ. ಸುಂದರ ಅವರು ಅಭಿಪ್ರಾಯಪಟ್ಟಿದ್ದಾರೆ.[೨]

ಈ ಗಣೇಶನ ವಿಗ್ರಹದಿಂದ ಸ್ಪಷ್ಟಗೊಳ್ಳುವ ವಿಷಯವೆಂದರೆ, ಶೈವಧರ್ಮವು ಪ್ರಾಚೀನ ಕಾಲದಲ್ಲಿ ಬೆಳಗಾವಿಯಲ್ಲಿ ನೆಲೆಗೊಂಡಿದ್ದು, ಮೂರ್ತಿಪೂಜೆಯಲ್ಲಿ ನಂಬಿಕೆಯನ್ನು ಹೊಂದಿರುವುದು ಮತ್ತು ಕುಶಲಕಲೆಯು ಶಾತವಾಹನರ ಕಾಲದಲ್ಲಿ ಬಳಕೆಯಲ್ಲಿರುವುದು ಕಂಡುಬರುತ್ತದೆ. ಶಿವನ ಆರಾಧಕರಾದ ಶೈವರು ಗಣೇಶನನ್ನು ಭಯಭಕ್ತಿಯಿಂದ ಪೂಜಿಸುತ್ತಾರೆ. ಹೀಗಾಗಿ ಈ ವಿಗ್ರಹವು ಶೈವ ಪರಂಪರೆಗೆ ಸಾಕ್ಷಿಯಾಗಿದೆ.

ಶಿವಲಿಂಗ: ಕೆಂಪು ಬಣ್ಣದಿಂದ ಕೂಡಿದ ಇದನ್ನು ಯಾವುದೇ ಅಚ್ಚಿನಿಂದ ತಯಾರಿಸದೆ ಕೈಯಿಂದಲೆ ನಿರ್ಮಿಸಿರುವುದು ಸ್ಪಷ್ಟವಾಗುತ್ತದೆ. ಮಣ್ಣಿನಿಂದ ಮಾಡಲಾದ ಈ ಶಿವಲಿಂಗವನ್ನು ಪೀಠದಲ್ಲಿ ನಿಲ್ಲಿಸಲಾಗಿದೆ. ಒಂದು ವರ್ತುಳಾಕಾರದ  ಬಟ್ಟಲವಿದ್ದು ಬುಡದಲ್ಲಿ ಭದ್ರವಾಗಿ ನಿಲ್ಲಲು ಹಿಡಿಯನ್ನು ಮಾಡಲಾಗಿದೆ. ಕೆಳಗೆ ದಪ್ಪವಾಗಿ ಮೇಲಕ್ಕೆ ಬಂದಂತೆ ಸಣ್ಣಾಗುತ್ತ ತುದಿಯಲ್ಲಿ ಮೊನೆ ಚೂಪಾಗಿದೆ. ಮಣ್ಣು ಹಸಿಯಾಗಿರುವಾಗಲೇ ಸಿದ್ಧಪಡಿಸಿ ಅನಂತರ ಅದನ್ನು ಸುಡಲಾಗಿರಬಹುದೆಂದು ಡಾ. ಅ. ಸುಂದರ ಅಭಿಪ್ರಾಯಪಟ್ಟಿದ್ದಾರೆ. ಶಿವನ ವಾಹನವಾದ ವೃಷಭವು ಗಟ್ಟಿಮಣ್ಣಿನಿಂದ ನಿರ್ಮಾಣಗೊಂಡು ಗೂಳಿಯ ಆಕಾರದಲ್ಲಿದೆ. ಬಲವಾದ ಮುಖ, ಸಣ್ಣಕೊಂಬು, ಎತ್ತರವಾದ ಇಣಿ, ಕೊಬ್ಬಿದ ದೇಹವನ್ನು ಹೊಂದಿದೆ.

ನಗರದ ಕೋಟೆಯೊಳಗಿರುವ ಸೋಪಾ ಮಸೀದಿಯ ಬಲಬದಿಯಲ್ಲಿ ಪ್ರಾಚೀನ ಶಿವಾಲಯವಿದ್ದು, ಇದು ರಟ್ಟರ ಕಾಲದ್ದಾಗಿದೆ, ಶಿವಾಲಯದ ಮೇಲಿನ ಶಿಖರವು ಹಾಳಾಗಿದ್ದು, ನವರಂಗ ಮಾತ್ರ ಉಳಿದುಕೊಂಡಿದೆ. ನವರಂಗದಲ್ಲಿ ನಾಲ್ಕುಸ್ತಂಭಗಳಿವೆ. ಸಮಕೋನಾಕಾರದ ನಾಲ್ಕು ಪ್ರವೇಶದ್ವಾರಗಳನ್ನು ಇಲ್ಲಿ ಕಾಣಬಹುದು.  ಗುಡಿಯ ಪಶ್ಚಿಮಕ್ಕೆ ಗರ್ಭಗುಡಿ ಮತ್ತು ಸುಕನಾಸಿಗಳನ್ನು ಸ್ಪಷ್ಟವಾಗಿ ಗುರುತಿಸಿಬಹುದಾಗಿದೆ. ಈ ದೇವಾಲಯವು ಪೂರ್ವಾಭಿಮುಖವಾಗಿದೆ. ರಟ್ಟರು ಜೈನಮತಾವಲಂಬಿಗಳಾಗಿದ್ದರೂ ಸರ್ವಧರ್ಮ ಸಮನ್ವಯತೆಯನ್ನು ಹೊಂದಿರುವುದಕ್ಕೆ ಈ ಶಿವಾಲಯವು ಸಾಕ್ಷಿಯಾಗಿದೆ.

ಬೆಳಗಾವಿ ಪ್ರದೇಶದಲ್ಲಿ ಚಾಲುಕ್ಯರ ಶಿಲ್ಪಕಲೆಯನ್ನು ಕಪಿಲೇಶ್ವರದೇವಾಲಯದಲ್ಲಿ ಕಾಣಬಹುದಾಗಿದೆ. ಶಹಪೂರದ ಹತ್ತಿರದಲ್ಲಿರುವ ಈ ದೇವಾಲಯವು ಎರಡತಸ್ತಿನ ಛಾವಣಿಯನ್ನು ಹೊಂದಿದೆ. ಇಲ್ಲಿಯ ಉಮಾಮಹೇಶ್ವರಮೂರ್ತಿಯು ಚಾಲುಕ್ಯ ಶಿಲ್ಪದ ಅತ್ಯಂತ ಕಲಾಪೂರ್ಣಕೃತಿಯಾಗಿದೆ. ದೇವಾಲಯವು ಗರ್ಭಗೃಹ, ಅಂತರಾಳ, ನವರಂಗ, ಸಭಾಮಂಟಪ ಮತ್ತು ಪ್ರದಕ್ಷಿಣಾಪಥಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಶಿವಲಿಂಗವಿದ್ದು, ಹೊರ ಆವರಣದಲ್ಲಿ ಶಿವ, ವೀರಭದ್ರ, ಕಾಳಭೈರವ ಮತ್ತು ಹಲವಾರು ನಾಗಶಿಲ್ಪಗಳು ಕಂಡುಬರುತ್ತವೆ. ಇಲ್ಲಿನ ಲಿಂಗವು ಸ್ವಯಂಭೂ ಎಂಬ ಪ್ರತೀತಿ ಇದೆ.[೨] ಇದು ದಕ್ಷಿಣಕಾಶಿ ಎಂತಲೂ ಕರೆಯಿಸಿಕೊಳ್ಳುತ್ತಿದೆ. ದೇಶದ ಹನ್ನೆರಡು ಜ್ಯೋತಿರ್ಲಿಂಗಗಳಿಗೆ ಹೋಗಿ ಬಂದರೂ ಈ ದೇವಾಲಯಕ್ಕೆ ಹೋಗಿ ಪೂಜೆಸಲ್ಲಿಸಿದಾಗಲೇ ಕ್ಷೇತ್ರಯಾತ್ರೆಯು ಮುಕ್ತಾಯವಾದಂತೆ ಎಂಬ ನಂಬಿಕೆ ಇದೆ.

ಈ ದೇವಾಲಯದ ಆವರಣದಲ್ಲಿ ಈಗಲೂ ಉಳಿದು ಬಂದಿರುವ ಪ್ರಾಚ್ಯಾವಶೇಷಗಳಲ್ಲಿ ಗಣಪತಿ, ಭೈರವ, ಮುಖಲಿಂಗ ಮತ್ತು ನಾಗರಮೂರ್ತಿಗಳು ಕಂಡುಬರುತ್ತವೆ. ಇಲ್ಲಿಯ ಶಿವಮೂರ್ತಿಯೊಂದು ಅರ್ಧಭಾಗಮಾತ್ರ ಉಳಿದಿದ್ದು, ಇದು ಅತ್ಯಂತ ಹಳೆಯದಾದಗಿದ್ದು ಬಹುಶಃ ಲಕುಲೀಶ ಶಿವನದಾಗಿರುವಂತೆಯೇ ಕಂಡುಬರುತ್ತದೆಂದು ಡಾ. ಎಂ. ಬಿ. ನೇಗಿನಹಾಳರು ಅಭಿಪ್ರಾಯಪಟ್ಟಿದ್ದಾರೆ.[೪]

ಇಲ್ಲಿನ ಕಾಳಭೈರವನ ಶಿಲ್ಪವು ಗಮನಾರ್ಹವಾದುದಾಗಿದೆ. ಇದು ಕ್ರಿಶ.೧೧ನೆಯ ಶತಮಾನಕ್ಕೆ ಸೇರಿದ್ದಾಗಿದೆ.[೫] ತೆರೆದ ಗರ್ಭಗೃಹದಲ್ಲಿ ಪಶ್ಚಿಮಾಭಿಮುಖವಾಗಿದ್ದು, ನಿಂತಭಂಗಿಯಲ್ಲಿದೆ. ಇದು ೧೭೪ x ೩೮ ಸೆಂ. ಮೀ. ಇದೆ. ಚತುರ್ಭುಜದಾರಿ ಈ ಕಾಳಭೈರವನ ಕೈಗಳಲ್ಲಿ ಕ್ರಮವಾಗಿ ಪಾಶ, ತ್ರಿಶೂಲ, ವರದ ಹಸ್ತ ಮತ್ತು ಶಂಖಗಳಿವೆ. ಭೈರವನ ಶಿರದ ಹಿಂದಿರುವ ನಾಗಮುಕುಟವು ಹನ್ನೆರಡು ಹೆಡೆಯುಳ್ಳದ್ದಾಗಿದೆ. ಕಿವಿಗಳಲ್ಲಿ ಕುಂಡಲ ಕೊರಳಲ್ಲಿ ಕಂಠಹಾರ, ತೋಳುಗಳಲ್ಲಿ ಕೇಯೂರು ಉದರಬಂಧ, ಉತ್ತರೀಯಬಂಧ, ಖಟ್ವಾಂಗ, ಕಟಿಸೂತ್ರ, ಉದರಕ್ಕೆ ಸುತ್ತಲ್ಪಟ್ಟ ನಾಗಶಿಲ್ಪ ಮತ್ತು ಪಾದರಸಗಳಿಂದ ಅಲಂಕೃತಗೊಂಡಿದೆ. ಕೆಳಗೆ ಪಾದಗಳ ಬದಿಯಲ್ಲಿ ಗಜಾಸುರರು ಆನೆಗಳನ್ನು ಎಳೆಯುತ್ತಿರುವ ದೃಶ್ಯವನ್ನು ಕೆತ್ತಲಾಗಿದೆ. ಅತ್ಯಂತ ಅಪರೂಪವಾದ ಈ ಕಾಳಭೈರವನ ವಿಗ್ರಹವು ಈ ಪ್ರದೇಶದ ನಾಗರ ಸಂಸ್ಕೃತಿಯು ಪ್ರಚಾರದಲ್ಲಿದ್ದರಬಹುದೆಂಬುದಕ್ಕೆ ಸಾಕ್ಷಿಯಾಗಿದೆ. ಇಲ್ಲಿಯ ಜನರು ಅಲಂಕಾರಪ್ರಿಯರಾಗಿದ್ದರು ಹಾಗೂ ನಾನಾ ಬಗೆಯ ಕುಸರಿಕೆಲಸಕ್ಕೆ ಬೆಳಗಾವಿ ಪ್ರಸಿದ್ಧಿಯನ್ನು ಪಡೆದುಕೊಂಡಿರುವುದು ಈ ವಿಗ್ರಹದ ಮೇಲಿರುವ ಆಭರಣಗಳಿಂದ ತಿಳಿದುಬರುತ್ತದೆ.

**ಬೌದ್ಧಧರ್ಮದ ವಾಸ್ತುಶಿಲ್ಪಕಲೆ:** ಪ್ರಾಚೀನಕಾಲದ ಅತ್ಯಂತ ಪ್ರಭಾವಿ ಧರ್ಮಗಳಲ್ಲಿ ಒಂದಾದ ಬೌದ್ಧಧರ್ಮದವು ಬೆಳಗಾವಿ ಪ್ರದೇಶದಲ್ಲಿ ಪ್ರಚಾರದಲ್ಲಿತ್ತು ಎನ್ನುವ ವಿಷಯ ವಡಗಾಂವ–ಮಾಧವಪುರದಲ್ಲಿ ನಡೆದ ಉತ್ಖನನದ ಸಂದರ್ಭದಲ್ಲಿ ದೊರೆತ ಬುದ್ಧನ ವಿಗ್ರಹದಿಂದ ತಿಳಿದು ಬರುತ್ತದೆ.

ಈ ಬುದ್ಧನ ವಿಗ್ರಹವು ಸುಟ್ಟ ಮಣ್ಣಿನ ಟೊಳ್ಳುಗೊಂಬೆಯಾಗಿದೆ. ಇದಕ್ಕೆ ಕಪ್ಪು ಲೇಪನವಿದ್ದು, ತಲೆಯ ಮೇಲೆ ಉಷ್ಣೀಶ, ಗುಂಗುರು ಕೂದಲುಗಳನ್ನು ರೇಖೆಗಳಿಂದ ಗುರುತಿಸಲಾಗಿದೆ. ಕೂದಲಿನ ಒಪ್ಪು, ಕಿರಿದಾದ ಹಣೆ, ಮೀನಿನಂತಹ ಕಣ್ಣುಗಳು, ಕಣ್ಣಿನ ಮಧ್ಯದಲ್ಲಿ ಕಣ್ಮಣಿಯನ್ನು ಸೂಚಿಸುವ ರೇಖೆಗಳು, ದಪ್ಪನೆ ತುಟಿಗಳು, ದುಂಡುಗಲ್ಲ, ಉದ್ದನೆ ಸಪಾಟಾದ ಕಿವಿಗಳು ಇವುಗಳೆಲ್ಲದರ ಚಿತ್ರಣದಿಂದ ಇದು ಬುದ್ಧನ ಮೂರ್ತಿಯೆಂದು ಡಾ. ಅ. ಸುಂದರ ಸ್ಪಷ್ಟಪಡಿಸಿದ್ದಾರೆ.[೬]

ಉತ್ಖನನದ ಸಂದರ್ಭದಲ್ಲಿ ಬೆಳಕಿಗೆ ಬಂದ ಸ್ಮಾರಕಗಳಲ್ಲಿ ಎರಡು ಕಟ್ಟಡಗಳು ಗಮನಸೆಳೆದಿವೆ. ಇವುಗಳಲ್ಲಿಯ ಒಂದು ಕಟ್ಟಡವು ಬೌದ್ಧ ಭಿಕ್ಷುಗಳು ವಾಸಿಸಲು ಉಪಯೋಗಿಸಬಹುದಾದ ಜಗಪೃಷ್ಠಾಕೃತಿಯಲ್ಲಿದೆ. ಇದು

ಜನಸಾಮಾನ್ಯರು ವಾಸಿಸುವ ಮನೆಗಳಿಗಿಂತ ಭಿನ್ನವಾದ ವಸ್ತುವಿನ್ಯಾಸವನ್ನು ಹೊಂದಿದ್ದು, ಬೌದ್ಧಭಿಕ್ಷುಗಳು ವಾಸಿಸಲು ನಿರ್ಮಿಸಿದ್ದಾಗಿದೆ ಎಂದು ಡಾ. ಅ. ಸುಂದರ ಅವರು ತಿಳಿಸಿದ್ದಾರೆ. ಈ ಕಟ್ಟಡದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ನೀರು ಕುಡಿಯಲು ಬಳಸುವ ಲೋಟಗಳು ದೊರೆತಿದ್ದು ಇವುಗಳನ್ನು ಬೌದ್ಧಭಿಕ್ಷುಗಳು ಉಪಯೋಗಿಸಿರಬಹುದಾಗಿದೆ. ಇದೇ ವಾಸ್ತುವಿನ್ಯಾಸವನ್ನು ಹೊಂದಿದ ಮತ್ತೊಂದು ಕಟ್ಟಡವು ಬೌದ್ಧರ ಚೈತ್ಯಾಲಯವಾಗಿರಬಹುದೆಂದು ದೃಢಪಡಿಸಲಾಗಿದೆ.[೭]

ಇಲ್ಲಿ ದೊರೆತ ಮತ್ತೊಂದು ಮಹತ್ವದ ವಸ್ತುವೆಂದರೆ ಕೇಶಮುಕುಟ. ನೀಳಕೇಶವನ್ನು ಮೇಲಕ್ಕೆ ಎತ್ತಿ ವಿಶಿಷ್ಟಶೈಲಿಯ ಮಣಿಹಾರದಿಂದ ಅಲಂಕಾರಗೊಳಿಸಲಾಗಿದೆ. ಈ ರೀತಿಯ ಕೇಶಾಲಂಕಾರವನ್ನು ಗುಪ್ತರ ಕಾಲದ ಮೂರ್ತಿಶಿಲ್ಪದಲ್ಲಿ ಕಾಣಬಹುದು.

ಈ ಮೇಲಿನ ಎಲ್ಲ ಸಂಗತಿಯನ್ನು ಗಮನಿಸಿದರೆ ಆಗಿನ ಕಾಲದಲ್ಲಿ ಬೆಳಗಾವಿಯ ಸಮೀಪವಿರುವ ಉತ್ತರಕನ್ನಡ ಜಿಲ್ಲೆಯಲ್ಲಿ ಬೌದ್ಧಧರ್ಮವು ಉಚ್ಛ್ರಾಯ ಸ್ಥಿತಿಯಲ್ಲಿದ್ದು ಇಲ್ಲಿಯೂ ಈ ಧರ್ಮದ ಪ್ರಭಾವವನ್ನು ಅಲ್ಲಗಳೆಯುವಂತಿಲ್ಲ.

**ವೈಷ್ಣವಧರ್ಮದ ವಾಸ್ತುಶಿಲ್ಪಕಲೆ:** ಸುಟ್ಟಮಣ್ಣಿನ ಮನುಷ್ಯನ ಮುಖ ಹಾಗೂ ತಾಮ್ರದ ಸಿಂಹಗೊಂಬೆಯು ವಡಗಾವಿ–ಮಾಧವಪುರದಲ್ಲಿ ನಡೆದ ಉತ್ಖನನದಲ್ಲಿ ದೊರೆತಿದ್ದು, ಈ ಭಾಗದ ವಾಸ್ತುಶಿಲ್ಪಕಲೆಗೆ ವೈಷ್ಣವಮತದ ಕೊಡುಗೆ ಹೇರಳವಾಗಿದೆಯೆಂಬುದು ಇದರಿಂದ ತಿಳಿದುಬರುತ್ತದೆ. ಇಲ್ಲಿ ದೊರೆತ ಮುನಷ್ಯನ ಮುಖ, ಸುಟ್ಟಮಣ್ಣಿನಿಂದ ನಿರ್ಮಾಣಗೊಂಡಿದ್ದು, ಟೊಳ್ಳಾಗಿದೆ. ಅಗಲವಾದ ಹಗೆ, ಬೊಗಸೆಕಣ್ಣು, ದೊಡ್ಡಮೂಗುಹೊಂದಿದ್ದು, ಮುಖವು ತುಸು ಉದ್ದವಾಗಿದೆ. ಹಣೆಯ ಮೇಲೆ ಕೊರೆದ ಮೂರು ನಾಮಗಳು ಶಿಲ್ಪಿಯ ಕೈಚಳಕಕ್ಕೆ ಕನ್ನಡಿ ಹಿಡಿದಂತಿದೆ. ಶ್ರೀ ವೈಷ್ಣವ ವಡಗಲೈ ಸಂಪ್ರದಾಯದ ಈ ಚಿಹ್ನೆ ಅತಿ ಪ್ರಾಚೀನವಾದದ್ದಾಗಿದೆ. ಹರಪ್ಪಾದ ಮುದ್ರಿಕೆಯೊಂದರಲ್ಲಿ ಈ ರೀತಿಯ ಚಿಹ್ನೆಗಳಿದ್ದವೆಂದು ಡಾ. ಅ. ಸುಂದರ ಅವರು ತಿಳಿಸಿದ್ದಾರೆ.

ಇಲ್ಲಿ ದೊರೆತ ಮತ್ತೊಂದು ಶಿಲ್ಪವೆಂದರೆ ತಾಮ್ರದ ಸಿಂಹಗೊಂಬೆ. ಸುಮಾರು ೧. ೫ ಸೆಂ.ಮೀ. ಉದ್ದವಾಗಿದ್ದು ಬಾಯಿಯನ್ನು ತೆರೆದುಕುಳಿತ ಭಂಗಿಯಲ್ಲಿದೆ. ಮುಂದಿನ ಎರಡೂ ಕಾಲುಗಳನ್ನು ನೆಟ್ಟಗಾಗಿಸಿದೆ. ಬಾಲವು ಬೆನ್ನಿನ ಮೇಲಿಂದ ಬಲದ ಹೊಟ್ಟೆಯ ಮೇಲೆ ಇಳಿಬಿದ್ದಿದೆ. ದುಂಡಾದ ಕಣ್ಣುಗಳು, ಸಣ್ಣಕಿವಿ, ಉಬ್ಬಿದ ಎದೆ, ನೆಲದ ಮೇಲೆ ಮುಂದಕ್ಕೆ ಇರಿಸಲ್ಪಟ್ಟ ಹಿಂದಿನ ಪಾದಗಳು ಮುಚ್ಚಿವೆ. ಅತ್ಯಂತ ಕಲಾತ್ಮಕವಾಗಿ ಇದನ್ನು ತಯಾರಿಸಲಾಗಿದ್ದು ಸಣ್ಣಕೃತಿಯಲ್ಲಿ ದಷ್ಟಪುಷ್ಟವಾದ ಸಿಂಹದ ಭಂಗಿಯ ಭಾವವನ್ನು ತುಂಬ ಸಹಜವಾಗಿ ತೋರಿಸಲಾಗಿದೆ.

**ಜೈನಧರ್ಮದ ವಾಸ್ತುಶಿಲ್ಪಕಲೆ:** ಕ್ರಿ. ಶ. ಪೂರ್ವ ೨೨೫೮ರ ಸುಮಾರಿಗೆ ಯದುಗ್ರಾಮವೆಂದು ಪ್ರಸಿದ್ಧವಾಗಿದ್ದ ಬೆಳಗಾವಿಗೆ ಜೈನಮುನಿಗಳು ಮಹಾವೀರ ತೀರ್ಥಂಕರನ ತತ್ತ್ವಗಳನ್ನು ಪ್ರಚಾರ ಮಾಡಲು ಬಂದಿದ್ದರು. ಆಗ ಬೆಳಗಾವಿಯನ್ನು ಜಕ್ಕದೇವ ಎಂಬ ಜೈನ ಅರಸನು ಆಳುತ್ತಿದ್ದನು.[೮] ಈತ ಬೆಳಗಾವಿಯಲ್ಲಿ ಕೋಟೆಯನ್ನು ಕಟ್ಟಿಕೊಂಡ ೮೦೦೦ ಹಳ್ಳಿಗಳಿಗೆ ಒಡೆಯನಾಗಿದ್ದನು. ಈ ಸಂದರ್ಭದಲ್ಲಿ ದಕ್ಷಿಣದಿಂದ ಬಂದ ೧೦೮ ಜೈನ ದಿಗಂಬರ ಮುನಿಗಳು ಧರ್ಮಪ್ರಚಾರಕ್ಕೆ ಸಾಗುತ್ತಾ ಬೆಳಗಾವಿಗೆ ಬಂದು ಬೀಡುಬಿಟ್ಟರು. ಅವರ ದರ್ಶನಕ್ಕಾಗಿ ಜಕ್ಕದೇವ ತನ್ನ ಪರಿವಾರದೊಂಡನೆ ಸಾಯಂಕಾಲ ಹೊರಟ ಸಮಯದಲ್ಲಿ ಸ್ಥಾನಿಕರ ಪಂಜಿನ ಉರಿ ಕಾಡಿಗೆ ತಗುಲಿ ಅಲ್ಲಿದ್ದ ೧೦೮ ಜೈನಮುನಿಗಳು ಸುಟ್ಟ ಭಸ್ಮರಾದರು. ಈ ಪಾಪ ಪರಿಹಾರಕ್ಕಾಗಿ ೧೦೮ ಜಿನಾಲಯಗಳನ್ನು ಬಾವಿಗಳನ್ನು ಕಟ್ಟಿಸಿದನೆಂದು ಸ್ಥಳೀಯ ಐತಿಹ್ಯದಿಂದ ತಿಳಿದು ಬರುತ್ತದೆ.

ಈ ಮೇಲಿನ ಘಟನೆಯ ಸತ್ಯಾಸತ್ಯತೆಯನ್ನು ಅವಲೋಕಿಸಿದಾಗ ಇದಕ್ಕೆ ಯಾವುದೇ ಆಧಾರವಿಲ್ಲದ್ದು ಕಂಡುಬರುತ್ತದೆ. ಆದರೆ ಕೋಟೆಯೊಳಗಿನ ಕೆಲವೊಂದು ಕುರುಹುಗಳು ಈ ಘಟನೆಗೆ ಪುಷ್ಠಿಕೊಡುತ್ತವೆ. ಕೋಟೆಯ ಆವರಣದೊಳಗೆ ಇಂದಿಗೂ ಹಲವಾರು ಜೈನ ಅವಶೇಷಗಳನ್ನು ಕಾಣಬಹುದು. ಅಲ್ಲದೆ ಬಾವಿಗಳ ಅವಶೇಷಗಳು ಕಂಡುಬರುತ್ತವೆ. ಈಗಿರುವ ಕಮಲಬಸದಿಯ ಕೆತ್ತನೆಯಲ್ಲಿ ಕಮಲದಳಗಳ ನಡುವೆ ೧೦೮ ಜೈನ ತೀರ್ಥಂಕರರ ಕೆತ್ತನೆಯನ್ನು ಕಾಣಬಹುದು. ವಡಗಾವಿ ಪ್ರದೇಶದಲ್ಲಿ ಮಣ್ಣಿನಿಂದ ನಿರ್ಮಿಸಿದ ಕೋಟೆಯ ಅವಶೇಷಗಳನ್ನು ಈಗಲೂ ನೋಡಬಹುದಾಗಿದೆ.[೯]

ಕಮಲ ಬಸದಿ: ನಗರದ ಕೋಟೆಯೊಳಗಿರುವ ಕಮಲ ಬಸದಿಯು ಒಂದು ಶ್ರೇಷ್ಠ ಮಟ್ಟದ ಕಲಾಕೃತಿಯಾಗಿದೆ. ಸವದತ್ತಿ ರಟ್ಟರ ನಾಲ್ಕನೆಯ ಕಾರ್ತವೀರ್ಯನ ಮಂತ್ರಿ ಬೀಚಿರಾಜನು ಕ್ರಿ.ಶ. ೧೨೦೪ರಲ್ಲಿ ಈ ಕಮಲಬಸದಿಯನ್ನು ಕಟ್ಟಿಸಿದನು.[೧೦] ಇದು ಉತ್ತರಾಭಿಮುಖವಾಗಿದ್ದು ಗರ್ಭಗ್ರಹ, ಸುಕನಾಸಿ, ನವರಂಗ ಮತ್ತು ಮುಖಮಂಟಪಗಳಿಂದ ಕೂಡಿದೆ. ಈ ಬಸದಿಯು 'ಫಸಂನಾ'(ಕಾದಂಬನಾಗರ) ರೀತಿಯ ದೇಗುಲಗಳ ಶೈಲಿಯನ್ನು ಒಳಗೊಂಡಿದೆ.[೧೧] ಬೆಳಗಾವಿ ಜಿಲ್ಲಾ ಪ್ರದೇಶದಲ್ಲಿ ಅತಿ ಹೆಚ್ಚು ಸಂಖ್ಯೆಯಲ್ಲಿ ಕಾಣುವ ದೇವಾಲಯಗಳೆಂದರೆ 'ಫಂಸನ' ರೀತಿಯ ದೇವಾಲಯಗಳು. ಈ ಶೈಲಿಗೆ ಹೆಚ್ಚು ಆದ್ಯತೆ ನೀಡಿದ ಗೋವೆಯ ಕದಂಬರು ಮತ್ತು ಸವದತ್ತಿಯ ರಟ್ಟರು ಬೆಳಗಾವಿ ಜಿಲ್ಲೆಯ ಬಹುಭಾಗವನ್ನು ಆಳಿದ್ದಾರೆ.

ಕಮಲ ಬಸದಿಯು ಮೂರು ಪ್ರವೇಶದ್ವಾರಗಳನ್ನು ಒಳಗೊಂಡಿದ್ದು, ಬಸದಿಯ ಉತ್ತರಕ್ಕೆ ಮೂಲಪ್ರವೇಶದ್ವಾರ ಪಶ್ಚಿಮ ಮತ್ತು ಪೂರ್ವಕ್ಕೆ ಉಪಪ್ರವೇಶದ್ವಾರಗಳನ್ನು ಹೊಂದಿದೆ. ನವರಂಗದ ಸ್ತಂಭಗಳು ಚೌಕೋನಾಕಾರದಲ್ಲಿದ್ದು ನಕ್ಷತ್ರಾಕಾರದ ತಲವಿನ್ಯಾಸದಂತಿರುವ ತೆರೆದ ಮುಖಮಂಟಪವನನ್ನು ಕಲಾತ್ಮಕವಾಗಿ ಕೆತ್ತಲಾದ ೧೪ ಕಂಬಗಳು ಎತ್ತಿ ಹಿಡಿದಿವೆ. ಈ ಕಂಬಗಳ ಕೆತ್ತನೆ ವಿಶಿಷ್ಟವಾಗಿದೆ. ದುಂಡಾಗಿ, ಪ್ರತಿಫಲನವಾಗುವಂತಹ ತಿಳಿಹಸಿರು ಬಣ್ಣದ್ದಾಗಿದ್ದು

ಬಸದಿಯ ಸೌಂದರ್ಯವನ್ನು ಹೆಚ್ಚಿಸಿವೆ. ಪ್ರತಿಯೊಂದು ಕಂಬದ ಬೋದಿಗೆಯ ಮೇಲೆ ಒಬ್ಬೊಬ್ಬ ತೀರ್ಥಂಕರರನ್ನು ಕೆತ್ತಲಾಗಿದೆ. ಮೇಲ್ಭಾಗದಲ್ಲಿ ಭುವನೇಶ್ವರಿ ಇದ್ದು, ಇದರ ಮಧ್ಯದಲ್ಲಿ ಜೋತುಬಿದ್ದಿರುವ ಅಪೂರ್ವವಾದ ಪುಷ್ಪವಿನ್ಯಾಸದ ಕೆತ್ತನೆಯಿದೆ. ಇದು ಆಕಾರದಲ್ಲಿ ಕಮಲದಂತಿರುವುದರಿಂದ ಈ ಬಸದಿಗೆ ಕಮಲಬಸದಿ ಎಂದು ಕರೆಯಲಾಗಿದೆ. ತೂಗುವ ಪುಷ್ಪವಿನ್ಯಾಸದಲ್ಲಿ ಸುತ್ತಲೂ ಚಿಕ್ಕಚಿಕ್ಕ ಜಿನಮೂರ್ತಿಗಳನ್ನು ಕೆತ್ತಲಾಗಿದೆ. ಮೇಲ್ಭಾಗದ ಕಲ್ಲಿನ ತೊಲೆಯ ಮೇಲೆ ೭೨ ತೀರ್ಥಂಕರರ ಮೂರ್ತಿಗಳನ್ನು ಕೆತ್ತಲಾಗಿದೆ, ನೇತಾಡುವ ಕಮಲ ಪತ್ರದಲ್ಲಿ ೧೦೮ ಜಿನಮೂರ್ತಿಗಳನ್ನು ಕೆತ್ತಲಾಗಿದೆ.

ನವರಂಗದ ಪ್ರವೇಶದ್ವಾರವು ಅತ್ಯಂತ ಸೂಕ್ಷ್ಮವಾದ ಕೆತ್ತನೆಯಿಂದ ಕೂಡಿದೆ. ಲಲಾಟದಲ್ಲಿ ಸಿದ್ಧಾಸನದ ಜಿನಮೂರ್ತಿಯೊಂದಿದೆ. ಚೌಕಟ್ಟಿನ ಪ್ರತಿಯೊಂದು ಪಟ್ಟಿಯಲ್ಲಿ ವಿವಿಧ ಪ್ರಕಾರದ ಕೆತ್ತನೆ ಇದೆ. ವರ್ತುಲ, ಚೌಕುಗಳಿಂದ ಕೂಡಿದ ಕೆತ್ತನೆ, ಹೂಮೊಗ್ಗುಗಳ ಕೆತ್ತನೆ, ಎದುರುಬದುರಾಗಿ ನಿಂತ ಸಿಂಹಗಳು, ಗಿಳಿಗಳಸಾಲು, ಯಕ್ಷ-ಯಕ್ಷಿಣಿಯರ ಸಾಲು ಹೀಗೆ ಸೂಕ್ಷ್ಮವಾದ ಕೆತ್ತನೆಯನ್ನು ಅತ್ಯಂತ ಕಲಾತ್ಮಕವಾಗಿ ಕೆತ್ತಲಾಗಿದೆ. ನವರಂಗದ ಪಶ್ಚಿಮಗೋಡೆಗೆ ಖಡ್ಗಾಸನದ ಒಂದು ಪಾರ್ಶ್ವನಾಥನ ಮೂರ್ತಿಯಿದ್ದು, ಇದು ಸುಮಾರು ಮೂರು ಅಡಿ ಎತ್ತರವಾಗಿದೆ. ಇದರ ಬಲಪಾದದ ಹಿಮ್ಮಡದಿಂದ ಸುರಳಿಯಾದಕಾರದ ಹಾವಿನ ಕೆತ್ತನೆ ಇದ್ದು, ತಲೆಯ ಮೇಲೆ ಏಳು ಹೆಡೆಗಳನ್ನು ಬಿಚ್ಚಿಕೊಂಡಿದೆ. ಇದರ ಪಾದದ ಬಲಬದಿ ಯಕ್ಷ, ಧರಣೇಂದ್ರ ಮತ್ತು ಎಡಭಾಗದಲ್ಲಿ ಯಕ್ಷಿಣಿ-ಪದ್ಮಾವತಿಯಿಂದ ಅಭಯಹಸ್ತದ, ಲಲಿತಾಸನದ ಅಲಂಕೃತಮೂರ್ತಿಗಳಿದ್ದು ಅದರ ಮೇಲೆ ಒಂದು ಹೆಡೆಯ ಹಾವಿನ ಕೆತ್ತನೆಯಿದೆ. ಇಡೀ ಮೂರ್ತಿಯ ಸುತ್ತಲು ಸುಂದರ ಕೆತ್ತನೆಯು ಮಕರತೋರಣವಿದೆ. ಈ ಮೂರ್ತಿಯ ಪಾದಪೀಠದಲ್ಲಿ ಒಂದು ಶಾಸನವಿದ್ದು ಅದು ಪೂರ್ತಿಯಾಗಿ ಸವೆದು ಹೋಗಿದೆ. ಇದರ ಗರ್ಭಗೃಹವು ಚೌಕಾಕಾರವಾಗಿದೆ. ಗರ್ಭಗೃಹದ ಮೇಲ್ಛಾವಣಿಯಲ್ಲಿ ಕಮಲದ ಹೂವನ್ನು ಕೆತ್ತಲಾಗಿದೆ, ಗರ್ಭಗೃಹದ ಪೀಠದ ಮೇಲೆ ಜಿನನ ಮೂರ್ತಿಯಿದೆ. ಇದು ೨೨ನೆಯ ತೀರ್ಥಂಕರನಾದ ನೇಮಿನಾಥನದ್ದಾಗಿದೆ.[೧೨] ಕಪ್ಪು ಶಿಲೆಯ ಧ್ಯಾನಮುದ್ರೆಯ ಸಿದ್ಧಾಸನ ಮೂರ್ತಿಯು ೪ ಅಡಿ ಎತ್ತರವಾಗಿದೆ. ಮಂದಹಾಸದ ಈ ಮೂರ್ತಿಯ ಪಾದಪೀಠದ ಮೇಲೆ ಶಂಖದ ಲಾಂಛನವನ್ನು ಕೆತ್ತಲಾಗಿದೆ. ಬೆಳಗಾವಿ ಶಾಸನದ ಪ್ರಕಾರ[೧೩] ಈ ಬಸದಿಯು ೧೬ನೆಯ ತೀರ್ಥಂಕರನಾದ ಶಾಂತಿನಾಥನ ಜಿನಾಲಯವಾಗಿದೆ. ಬೆಳಗಾವಿಯಲ್ಲಿ ದೊರೆತ ಎರಡೂ ಶಾಸನಗಳಲ್ಲಿ ಈ ಬಸದಿಯು ೧೬ನೆಯ ತೀರ್ಥಂಕರನಾದ ಶಾಂತಿನಾಥನ ಜಿನಾಲಯವೆಂದು ಹೇಳಿದೆ. ಆಗ ಇದಕ್ಕೆ ರಟ್ಟ ಜಿನಾಲಯವೆಂದು ಕರೆಯಲಾಗುತ್ತಿತ್ತು.[೧೪] ಈಗ ನೇಮಿನಾಥನ ಮೂರ್ತಿಯನ್ನು ಗರ್ಭಗೃಹದಲ್ಲಿ ಕಾಣಬಹುದು. ಈಗಿರುವ ಮೂರ್ತಿಯು ಖಾನಾಪುರ ತಾಲೂಕ ಗುಡ್ಡದಲ್ಲಿ ದೊರೆತಿದ್ದು ಅದನ್ನು ಇಲ್ಲಿ ಪ್ರತಿಷ್ಠಾಪಿಸಲಾಗಿದೆ ಎಂದು ತಿಳಿದು ಬರುತ್ತದೆ.[೧೫] ಈ ಮೂರ್ತಿಯನ್ನು ತರುವುದಕ್ಕಿಂತ ಪೂರ್ವದಲ್ಲಿ ಇಲ್ಲಿ ನೇಮಿನಾಥನ ಮೂರ್ತಿಯಿದ್ದು ಅದು ಈಗ ನಗರದ ಬಸವಣ್ಣನ ಗಲ್ಲಿಯಲ್ಲಿರುವ

ಬಸದಿಯಲ್ಲಿದೆ.[೧೬] ಅಂದರೆ ಮೂಲತಃ ಇರುವ ಶಾಂತಿನಾಥನ ಮೂರ್ತಿಯು ಯಾವುದೋ ಸಂದರ್ಭದಲ್ಲಿ ನಾಶವಾಗಿರಬಹುದು. ಹೀಗಾಗಿ ಮತ್ತೊಂದು ಶಾಂತಿನಾಥನ ಮೂರ್ತಿಯನ್ನು ಪ್ರತಿಷ್ಠಾಪಿಸದೆ ನೇಮಿನಾಥನ ಮೂರ್ತಿಯನ್ನು ತಂದಿರಬಹುದಾಗಿದೆ. ಹೀಗಾಗಲಿಕ್ಕೆ ಮುಖ್ಯವಾದ ಕಾರಣವೆಂದರೆ ಸವದತ್ತಿ ರಟ್ಟರ ಮನೆಯ ದೇವರು ನೇಮಿನಾಥ ತೀರ್ಥಂಕರವಾಗಿದ್ದು[೧೭] ನೇಮಿನಾಥರ ಮೇಲಿನ ಭಕ್ತಿಯಿಂದ ಈ ಕಾರ್ಯ ಮುಂದಿನ ರಾಜರಿಂದ ನಡೆದಿರಬಹುದಾಗಿದೆ. ಗರ್ಭಗೃಹದ ನೇಮಿನಾಥ ಮೂರ್ತಿಯ ಹಿಂಬದಿಯಲ್ಲಿ ಮಹಾವೃಕ್ಷದ ಪ್ರಭಾವಳಿ ಇದ್ದು, ಇದು ಅತ್ಯಂತ ವೈಶಿಷ್ಟ್ಯಪೂರ್ಣವಾದ ಕಲಾಕೃತಿಯಾಗಿದೆ. ಈ ಪ್ರಭಾವಳಿಯನ್ನು ಶೃಂಗರಿಸಿದ ಎರಡೂ ಬದಿಯ ಆನೆಗಳ ಮೇಲೆ ಕೂಡ್ರಿಸಲಾಗಿದೆ. ಈ ಆನೆಗಳ ಮೇಲೆ ಸುಮಾರು ಎರಡು ಅಡಿ ಎತ್ತರದ ಷಟ್ಕೋನಾಕಾರದ ಚಪ್ಪಟೆಯ ಸೂಕ್ಷ್ಮ ಕೆತ್ತನೆಯ ಕಂಬಗಳಿವೆ. ಇವುಗಳ ಹೊರಬದಿಗೆ ಎರಡು ಸಿಂಹಗಳು ಅವುಗಳ ಕೆಳಗೆ ಯಕ್ಷ-ಯಕ್ಷಿಣಿಯರು ಮಂಡಿಯೂರಿ ಕುಳಿತ ಚಿತ್ರಗಳನ್ನು ಕೆತ್ತಲಾಗಿದೆ. ಇಲ್ಲಯೇ ನೀರಾನೆಯ ಆಕಾರದ ಒಂದು ಪ್ರಾಣಿಯ ಚಿತ್ರವಿದ್ದು ಅದರ ಬಾಯಿಂದ ಸುಂದರವಾದ ಸುಳಿವು ಹೊರಬಿದ್ದಿದೆ. ಇದು ಬಳ್ಳಿಯಾಕಾರದಲ್ಲಿದ್ದು, ವರ್ತುಳ ವರ್ತುಳವಾಗಿ ಹತ್ತು ವರ್ತುಳಗಳಲ್ಲಿ ಸುತ್ತುವರಿದಿದೆ. ಬಳ್ಳಿಯಲ್ಲಿ ಕಮಲದ ಹೂವುಗಳ ಚಿತ್ರವನ್ನು ಕೆತ್ತಲಾಗಿದ್ದು ಇಲ್ಲಿಯೂ ಶಿಲ್ಪಿಯ ನೈಪುಣ್ಯತೆಯನ್ನು ಕಾಣಬಹುದಾಗಿದೆ. ಕಲ್ಲಿನಲ್ಲಿಯೇ ಹೂವಿನ ಹಂತಗಳನ್ನು ಕೆತ್ತನೆಯ ಮೂಲಕ ಸ್ಪಷ್ಟವಾಗಿ ತೋರಿಸಿಕೊಟ್ಟಿದ್ದಾರೆ, ಒಂದು ಪೂರ್ಣವಾಗಿ ಅರಳಿದ ಹೂವು, ಮತ್ತೊಂದು ಅರ್ಧ ಅರಳಿದ ಹೂವು, ಮೊಗ್ಗಾದ ಹೂವುಗಳು ಇವೆಲ್ಲವು ಕಲ್ಲಿನ ಕೆತ್ತನೆಯಲ್ಲಿ ಸ್ಪಷ್ಟವಾಗಿ ಗೋಚರಿಸುವಂತೆ ಕೆತ್ತಲಾಗಿದೆ.

ಹತ್ತು ವರ್ತುಳಗಳಲ್ಲಿ ಕಂಡುಬರುವ ಸುಳಿವಿನ ಮೊದಲನೆಯ ವರ್ತುಳದಲ್ಲಿ ಯಕ್ಷ-ಯಕ್ಷಿಣಿರು ಜಿನಬಿಂಬದತ್ತ ಪುಷ್ಪವೃಷ್ಟಿ ಮಾಡುತ್ತಿದ್ದಾರೆ. ಎಡಭಾಗದಲ್ಲಿ ಮಂಗವೊಂದು ಮಾವಿನ ಹಣ್ಣನ್ನು ತಿನ್ನುತ್ತಿರುವ ದೃಶ್ಯವಿದೆ. ಎರಡನೆಯ ವರ್ತುಳದಲ್ಲಿ ನಿಂತಿರುವ ಟಗರಿನ ಪಕ್ಕದಲ್ಲಿ ಮಂಗವೊಂದು ಎರಡು ಕಾಲುಗಳ ಮೇಲೆ ಎದ್ದುನಿಂತು ಬಾಳೆಯ ಗಿಡಕ್ಕೆ ಕೈ ಚಾಚಿರುವ ಚಿತ್ರವನ್ನು ಕೆತ್ತಲಾಗಿದೆ. ಮೂರನೆಯ ವರ್ತುಳದಲ್ಲಿ ಚಿಗರೆಯ ಮೇಲೆ ಕುಳಿತ ಯಕ್ಷ-ಯಕ್ಷಿಣಿಯರು, ನಾಲ್ಕನೆಯ ವರ್ತುಳದಲ್ಲಿ ನೀರಾನೆಯ ಮೇಲೆ ಯಕ್ಷಿಣಿಯರು, ಐದನೆಯ ವರ್ತುಳದಲ್ಲಿ ನೃತ್ಯ ಮಾಡುತ್ತಿರುವ ಸ್ತ್ರೀ ಹಾಗೂ ಬಾಳೆಹಣ್ಣು ಹಿಡಿದ ಮಂಗ ಆರನೆಯ ವರ್ತುಳದಲ್ಲಿ ತಮಟೆ ಬಾರಿಸುತ್ತ ನೃತ್ಯ ಮಾಡುತ್ತಿರುವ ವ್ಯಕ್ತಿಯ ಚಿತ್ರ, ಏಳನೆಯ ವರ್ತುಳದಲ್ಲಿ ಯಕ್ಷ-ಯಕ್ಷಿಣಿಯರು ನೃತ್ಯ ಮಾಡುತ್ತಿರುವ ದೃಶ್ಯ, ಎಂಟನೆಯ ವರ್ತುಳದಲ್ಲಿ ಅವಶೇಷ ಕೊಳಲು ಊದುತ್ತ ನೃತ್ಯ ಮಾಡುತ್ತಿರುವ ದೃಶ್ಯ, ಒಂಬತ್ತನೆಯ ವರ್ತುಳದಲ್ಲಿ ಯಕ್ಷ-ಯಕ್ಷಿಣಿಯರು ಮೃದಂಗ ಬಾರಿಸುವ ಚಿತ್ರಗಳು, ಹತ್ತನೆಯ ವರ್ತುಳದಲ್ಲಿ ವೀಣೆ ನುಡಿಸುವ ಮೂರ್ತಿ ಅದರ ಅಕ್ಕಪಕ್ಕದಲ್ಲಿ ಪುಂಗಿ, ಕಹಳೆ ಊದುವ ಮೂರ್ತಿಗಳಿರುತ್ತವೆ.

ಜಿನಮೂರ್ತಿಯ ಬಲಭಾಗದಲ್ಲಿಯೂ ಹೂ ಬಳ್ಳಿಯ ಕೆತ್ತನೆ ಇದೆ. ಯಕ್ಷ-ಯಕ್ಷಿಣಿಯರ ಚಿತ್ರಗಳು ಆಕರ್ಷಣೀಯವಾಗಿವೆ. ಹೂಮಾಲೆ ಹಿಡಿದ, ನೃತ್ಯಮಾಡುವ, ಮೃದಂಗ ಬಾರಿಸುವ, ತಮಟೆ, ವೀಣೆ, ತಾಳೆ, ಗೆಜ್ಜೆಗೊಂಚಲು, ಜಾಗಟೆ, ಕೊಳಲು, ಪುಂಗಿ, ಕಹಳೆ, ಜಯಗಂಟೆ ಬಾರಿಸುವ ಚಿತ್ರಗಳು ವಿಶಿಷ್ಟವಾಗಿವೆ. ಮಧ್ಯಭಾಗದ ಪ್ರಭಾವಳಿಯಲ್ಲಿ ವಿವಿಧ ಬಗೆಯ ಭಂಗಿಯಲ್ಲಿರುವ ಗಂಡು ಮತ್ತು ಹೆಣ್ಣಿನ ವಿಗ್ರಹಗಳನ್ನು ಕೆತ್ತಲಾಗಿದೆ (ರತಿ ಚಿತ್ರಗಳು). ಇಲ್ಲಿಯೇ ಹಲವಾರು ಬಗೆಯ ಹಣ್ಣುಗಳ ಚಿತ್ರಗಳು ಮತ್ತು ಅಕ್ಷತೆ ಹಾಕುವ ಎರಡು ಸ್ತ್ರೀಮೂರ್ತಿಗಳನ್ನು ಕೆತ್ತಲಾಗಿದೆ. ಗರ್ಭಗೃಹದ ಮೇಲೆ ಸುಂದರವಾದ ಶಿಖರವಿದ್ದು, ಅಲ್ಲಿ ಒಂದು ಸುಕನಾಸಿಯಿದೆ, ಅಲ್ಲಿ ಯಾವುದೇ ಮೂರ್ತಿಯಿಲ್ಲ. ಕದಂಬನಾಗರ ಶೈಲಿಯಲ್ಲಿ ರಚನೆಗೊಂಡ ಶಿಖರಗಳು ಬಸದಿಯ ಮೆರುಗನ್ನು ಹೆಚ್ಚಿಸಿವೆ.

ಕೋಟೆ ಆವರಣದಲ್ಲಿ ಇನ್ನೊಂದು ಮಹತ್ವದ ಬಸದಿಯು ಕಮಲಬಸದಿಯ ಎದುರಿನಲ್ಲಿದೆ. ದಕ್ಷಿಣಾಭಿಮುಖವಾಗಿರುವ ಈ ಬಸದಿಯು ಎತ್ತರವಾದ ಜಗುಲಿಯ ಮೇಲೆ ನಿರ್ಮಾಣಗೊಂಡಿದೆ. ನವರಂಗದ ಪ್ರವೇಶ ದ್ವಾರದ ಲಲಾಟದಲ್ಲಿ ಯಕ್ಷಿಯ ಲಲಿತಾಸನದ ಮೂರ್ತಿಯ ಕೆತ್ತನೆಯಿದೆ. ಹೀಗಾಗಿ ಇದು ಬಹುಶಃ ಯಕ್ಷಿಯ ಬಸದಿಯಾಗಿರಬಹುದೆಂದು ಡಾ. ಬಿ.ಆರ್. ಹಂದೂರವರು ಅಭಿಪ್ರಾಯ ಪಟ್ಟಿದ್ದಾರೆ.[೧೮] ನವರಂಗದಲ್ಲಿ ನಾಲ್ಕು ಕಂಬಗಳಿದ್ದು ಈ ಕಂಬಗಳ ಮಧ್ಯದಲ್ಲಿ ಎತ್ತರವಾದ ಜಗುಲಿಯನ್ನು ಕಾಣಬಹುದು. ಉತ್ತರ ದಿಕ್ಕಿನಲ್ಲಿ ಎರಡು ಕೋಷ್ಠಕಗಳನ್ನು ಕೆತ್ತಲಾಗಿದ್ದು ಈಗ ಇಲ್ಲಿ ಯಾವುದೇ ಮೂರ್ತಿಗಳಿಲ್ಲ. ಪ್ರವೇಶದ್ವಾರದ ಅಕ್ಕಪಕ್ಕದಲ್ಲಿ ಕಲ್ಲಿನ ಜಾಲಂಧರದ ಕೆತ್ತನೆಯಿದ್ದು ಪ್ರವೇಶದ್ವಾರದ ಪಕ್ಕದಲ್ಲಿ ಕುಳಿತುಕೊಳ್ಳುವ ಆಸನಗಳನ್ನು ಕೆತ್ತಲಾಗಿದೆ.

ಶಿಲ್ಪಶೈಲಿಯಿಂದ ಇದು ಹತ್ತು-ಹನ್ನೊಂದು ಶತಮಾನದ್ದಾಗಿರಬಹುದೆಂದು ಊಹಿಸಬಹುದಾಗಿದೆ. ಆದರೆ ಈ ಬಸದಿಯನ್ನು ಯಾರು ಕಟ್ಟಿಸಿದರು. ಎನ್ನುವುದರದ ದಾಖಲೆಗಳಿಲ್ಲ. ಡಾ. ಬಿ.ಆರ್.ಹಂದೂರ ಅವರು ಈ ಬಸದಿಯು ಯಾಪನೀಯ ಸಂಘದ ಯಕ್ಷಿಣಿಯ ಬಸದಿಯಾಗಿದ್ದು ಇದನ್ನು ಕ್ರಿ.ಶ. ೧೦೧೩ರಲ್ಲಿ ಕದಂಬರ ಜಯಕೇಶಿಯ ದಂಡನಾಯಕರನಾಗಿದ್ದ ಪಾರಿಸಯ್ಯನೆಂಬುವವನು ಕಟ್ಟಿಸಿದ್ದಾನೆಂದು ಅಭಿಪ್ರಾಯ ಪಟ್ಟಿದ್ದಾರೆ.[೧೯] ಕದಂಬರ ಕಾಲದಲ್ಲಿ ಬಸದಿ ನಿರ್ಮಾಣವಾಗಿರುವುದನ್ನು ಎ.ಎಸ್. ಉಪಾಧ್ಯಾಯರೂ ಸ್ಪಷ್ಟಪಡಿಸಿದ್ದಾರೆ. ಪ್ರಸ್ತುತ ಕೋಟೆಯೊಳಗೆ ಬಸದಿಯ ಅವಶೇಷಗಳನ್ನೊಳಗೊಂಡ ಹಲವಾರು ಕುರುಹುಗಳು ದೊರೆಯುತ್ತವೆ. ಬಹುಶಃ ಇವು ಮುಸಲ್ಮಾನರ ದಾಳಿಯಲ್ಲಿ ನಾಶವಾಗಿರಬಹುದಾಗಿದೆ. ಇನ್ನು ನಗರದೊಳಗೆ ಹಲವಾರು ಜೈನಬಸದಿಗಳಿದ್ದು ಇವುಗಳಲ್ಲಿ ಕೆಲವು ವಾಸ್ತುಶಿಲ್ಪದ ದೃಷ್ಟಿಯಿಂದ ಮಹತ್ವದ್ದಾಗಿವೆ.

ಶೆಟ್ಟಿಗಲ್ಲಿಯಲ್ಲಿರುವ ಪದ್ಮಾವತಿ ಬಸದಿಯಲ್ಲಿ ಪಾರ್ಶ್ವನಾಥನ ಯಕ್ಷಿ-ಪದ್ಮಾವತಿಯ ಬಿಳಿಶಿಲೆಯ ಅಭಯಹಸ್ತದ ಅಲಂಕೃತಮೂರ್ತಿಯಿದೆ. ಈ ಮೂರ್ತಿಯ ಹಿಂದೆ ಪಾರ್ಶ್ವನಾಥನ ಸಿದ್ಧಾಸನದ ಬಿಳಿಶಿಲೆಯ ಸುಮಾರು ೩.೫ ಅಡಿ ಎತ್ತರದ ಮೂರ್ತಿಯನ್ನು ಸ್ಥಾಪಿಸಲಾಗಿದೆ. ಈ ಮೂರ್ತಿಯ ತಲೆಯ ಮೇಲೆ ಏಳು ಹೆಡೆಗಳ ಹಾವಿನ ಕೆತ್ತನೆಯಿದೆ.

ಮಠಗಲ್ಲಿಯಲ್ಲಿ ೨೩ನೆಯ ತೀರ್ಥಂಕರನಾದ ಪಾರ್ಶ್ವನಾಥನ ಬಸದಿಯಿದೆ. ಗರ್ಭಗೃಹ, ಮುಖಮಂಟಪ, ಮಾನಸ್ತಂಭವನ್ನು ಹೊಂದಿದೆ. ಗರ್ಭಗೃಹದಲ್ಲಿ ಬಿಳಿಶಿಲೆಯ ಸಿದ್ದಾಸನದ ಮೂರ್ತಿಯಿದೆ. ಸೇರಿಗಲ್ಲಿಯ ಬಸದಿಯಲ್ಲಿ ಚಂದ್ರಪ್ರಭ ತೀರ್ಥಂಕರನ ಮೂರ್ತಿಯಿದೆ. ಇದು ಕಪ್ಪುಶಿಲೆಯ ಸಿದ್ಧಾಸನದ ಮೂರ್ತಿಯಾಗಿದೆ. ಸುಮಾರು ಮೂರು ಅಡಿ ಎತ್ತರವಾಗಿದೆ. ಈ ಮೂರ್ತಿಯು ೧೨ನೆಯ ಶತಮಾನದ್ದಾಗಿದೆ.

ಬಸವಣ್ಣನಗಲ್ಲಿಯಲ್ಲಿರುವ ಬಸದಿಯು ಬೆಳಗಾವಿಯ ಪುರಾತನ ಬಸದಿಯಲ್ಲಿ ಒಂದಾಗಿದೆ. ಕಟ್ಟಿಗೆಯಿಂದ ನಿರ್ಮಿತವಾದ ಈ ಬಸದಿಯು ಗರ್ಭಗೃಹ, ಸುಕನಾಸಿ, ಮುಖಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ನೇಮಿನಾಥನ ಮೂರ್ತಿಯಿದ್ದು ಸುಮಾರು ನಾಲ್ಕುಅಡಿ ಎತ್ತರವಾಗಿದೆ. ಕಪ್ಪು ಮಿಶ್ರಿತ ಹಸಿರು ಶಿಲೆಯ ಈ ಮೂರ್ತಿಯು ಸಿದ್ಧಾಸನದಲ್ಲಿದೆ. ಈ ಮೂರ್ತಿಯು ಮೊದಲು ಕೋಟೆಯ ಬಸದಿಯಲ್ಲಿತ್ತು. ಮುಸಲ್ಮಾನರ ಉಪಟಳದಿಂದ ಇಲ್ಲಿ ತಂದಿರಿಲಾಗಿದೆ ಎಂಬ ಅಭಿಪ್ರಾಯವಿವೆ.[೨೦]

ಹಳೆ ಬೆಳಗಾವಿ ಪ್ರವೇಶವೆಂದು ಕರೆಸಿಕೊಳ್ಳುವ ಶಹಪೂರದ ಕೋರೆಗಲ್ಲಿಯ ಬಸದಿಯು ಹಳೆಯ ಬಸದಿಯಾಗಿದೆ.[೨೧] ಗರ್ಭಗೃಹ, ಸುಕನಾಸಿ, ಮುಖಮಂಟಪಗಳನ್ನು ಹೊಂದಿದೆ. ಎದುರಿನಲ್ಲಿ ಪುರಾತನವಾದ ಸುಂದರವಾದ ಮಾನಸ್ತಂಭವಿದೆ. ಗರ್ಭಗೃಹದಲ್ಲಿರುವ ಪಂಚ ಪರಮೇಷ್ಠಿಯರ ಮೂರ್ತಿಯು ಕಂದುಬಣ್ಣದಿಂದ ಕೂಡಿದ್ದು ಸುಮಾರು ಎರಡು ಅಡಿ ಎತ್ತರವಾಗಿದೆ. ಶಿಲ್ಪಶೈಲಿಯಿಂದ ಇದು ಹತ್ತನೆಯ ಶತಮಾನದ್ದಾಗಿದೆ. ಈ ಮೂರ್ತಿಯು ಬೆಳಗಾವಿಯಿಂದ ಮೂವತ್ತು ಕಿ.ಮೀ. ದೂರದಲ್ಲಿರುವ ಎಂ.ಕೆ. ಹುಬ್ಬಳ್ಳಿಯಲ್ಲಿ ದೊರೆತ್ತಿದ್ದು ಅಲ್ಲಿಂದ ತಂದು ಪ್ರತಿಷ್ಠಾಪಿಸಲಾಗಿದೆ.[೨೨] ಈ ಬಸದಿಯಲ್ಲಿ ಸುಮಾರು ೧೦-೧೧ನೆಯ ಶತಮಾನದ ಹಲವಾರು ಜೈನಮೂರ್ತಿಗಳಿದ್ದು ಸುಂದರವಾದ ಕೆತ್ತನೆಯನ್ನು ಹೊಂದಿವೆ.

ರಟ್ಟರ ಕಾಲದ ಬಸದಿಗಳ ಸಾಲಿಗೆ ಸೇರುವ ಶಹಪೂರದ ಹೊಸೂರ ಭಾಗದ ಬಸದಿಯು ಪ್ರಮುಖವಾಗಿದೆ.[೨೩] ಗರ್ಭಗೃಹ, ಸುಕನಾಸಿ, ಮುಖಮಂಟಪ ಮತ್ತು ಮಾನಸ್ತಂಭಗಳನ್ನು ಒಳಗೊಂಡಿದೆ. ಈಗಿರುವ ಆದಿನಾಥನ ಮೂರ್ತಿಯನ್ನು ಕ್ರಿಶ. ೧೯೪೨ರಲ್ಲಿ ಸ್ಥಾಪಿಸಲಾಗಿದೆ. ಮಾನಸ್ತಂಭದಲ್ಲಿ ಚತುರ್ಮುಖ ಆದಿನಾಥನ ತೀರ್ಥಂಕರನ ಮೂರ್ತಿಯು ಕೆತ್ತಲ್ಪಟ್ಟಿದೆ. ಈ ಬಸದಿಯ ಎದುರಿಗೆ ಜೈನಮಠವಿದ್ದು ಅದು ಸಂಪೂರ್ಣ ಹಾಳಾಗಿದೆ. ಈ ಎಲ್ಲ ಅವಶೇಷಗಳನ್ನು ನೋಡಿದಾಗ ಇದು ರಟ್ಟರ ಕಾಲದಲ್ಲಿ ಪ್ರಸಿದ್ಧ ಜೈನ ತಾಣವಾಗಿರುವುದು ಸ್ಪಷ್ಟವಾಗುತ್ತದೆ.

ಬೆಳಗಾವಿ ಪ್ರದೇಶವು ಕ್ರಿ.ಪೂ.೨೨೫ರ ಕಾಲದಿಂದಲೂ ಜೈನರ ಪ್ರಬಲ್ಯದಲ್ಲಿರುವುದು ಕಂಡುಬರುತ್ತದೆ. ಈಗಲೂ ಬೆಳಗಾವಿಯ ಪ್ರಬಲ ಮತವಾಗಿ ಬೆಳೆದಿದೆ. ಬೆಳಗಾವಿಯ ನಗರ ವಲಯದಲಿ ಒಟ್ಟು ೧೬ ಜೈನ ಬಸದಿಗಳನ್ನು ಕಾಣಬಹುದು. ಇವುಗಳಲ್ಲಿ ಕೆಲವು ಪಾಚೀನ ಕಾಲದ ಬಸದಿಗಳಾಗಿದ್ದರೆ ಇನ್ನು ಕೆಲವು ಹೊಸದಾಗಿ ನಿರ್ಮಿಸಿದ ಬಸದಿಗಳಾಗಿವೆ.

ಈಗಿನ ಕಪಿಲೇಶ್ವರದೇವಾಲಯದ ಹತ್ತಿರದ ಮಾರ್ಗದಲ್ಲಿ ಸಾಲು ಬಸದಿಗಳಿದ್ದವು ಎನ್ನುವುದು ಶಾಸನಗಳಲ್ಲಿ ಉಲ್ಲೇಖಗೊಂಡಿದೆ[೨೪] ಈಗ ಈ ಬಸದಿಗಳ ಯಾವುದೇ ಅವಶೇಷಗಳು ಕಂಡುಬರುವುದಿಲ್ಲ. ಹೀಗೆ ಬೆಳಗಾವಿಯ ಬಸದಿಗಳ ವಾಸ್ತುಶಿಲ್ಪಕಲೆಯು ಬೆಳಗಾವಿ ಪರಿಸರದ ಪ್ರಾದೇಶಿಕ ವಾಸ್ತಶಿಲ್ಪಕಲೆಯನ್ನು ಶ್ರೀಮಂತಗೊಳಿಸಿದೆ. ಹೀಗಾಗಿ ಇದು ಕರ್ನಾಟಕದ ವಾಸ್ತುಶಿಲ್ಪಕಲಾ ವ್ಯಾಸಂಗದಲ್ಲಿ ತನ್ನದೇ ಆದ ಮಹತ್ವವನ್ನು ಪಡೆದುಕೊಂಡಿದೆ.

**ಇಸ್ಲಾಂಧರ್ಮದ ವಾಸ್ತಶಿಲ್ಪ:** ಬೆಳಗಾವಿ ಪ್ರದೇಶದಲ್ಲಿ ಮುಸ್ಲಿಂ ಆಳ್ವಿಕೆಯು ವಿಜಾಪುರದ ಆದಿಲ್‌ಷಾಹಿಗಳು, ಬಹುಮನಿ ಸುಲ್ತಾನರು, ಸವಣೂರಿನ ನವಾಬರಿಂದ ನಡೆಯಿತು. ಇವರಲ್ಲಿ ವಿಜಾಪುರದ ಆದಿಲ್‌ಷಾಹಿಗಳು ಹೆಚ್ಚು ಕಾಲ ಬೆಳಗಾವಿಯಲ್ಲಿ ಆಳ್ವಿಕೆ ನಡೆಸಿರುವರು. ಇವರ ಕಾಲದಲ್ಲಿ ಇಂಡೋ–ಇಸ್ಲಾಮಿಕ್ ಸಂಸ್ಕೃತಿಯ ವಾಸ್ತುಶಿಲ್ಪಕಲೆಯು ಈ ಭಾಗದಲ್ಲಿ ಬೆಳೆದು ಬಂದಿತು. ವಿಜಾಪುರದ ಸರದಾರನಾದ ಅಸದಖಾನನು(೧೫೧೧–೧೫೪೯) ೩೮ ವರ್ಷಗಳ ಕಾಲ ಬೆಳಗಾವಿಯಲ್ಲಿ ಆಳ್ವಿಕೆ ನಡೆಸಿದನು. ಈತನ ಕಾಲದಲ್ಲಿ ನಿರ್ಮಾಣಗೊಂಡ ಸೋಫಾ ಮಸೀದಿಯು ಪ್ರಮುಖವಾಗಿದೆ.

ಕ್ರಿ.ಶ. ೧೫೧೮ರಲ್ಲಿ ಅಸದ್‌ಖಾನನು ಖ್ವಾದರಿ ನಿಜಾಮುದ್ದ್ವಾನಿ ಮುಂತಾದವರ ಪ್ರೋತ್ಸಾಹದಿಂದ ಸೋಫಾ ಮಸೀದಿಯನ್ನು ನಿರ್ಮಿಸಿದನು.[೨೫] ಈ ಮಸೀದಿಯು ಪೂರ್ವಾಭಿಮುಖವಾಗಿದ್ದು ಕಮಾನಿನಾಕಾರದ ಮೂರು ಪ್ರವೇಶದ್ವಾರಗಳನ್ನು ಒಳಗೊಂಡಿದೆ.

**ಕ್ರೈಸ್ತಮತದ ವಾಸ್ತುಶಿಲ್ಪ:** ನಗರದ ಇಂದಿನ ಕ್ಯಾಂಪ್ ಪ್ರದೇಶದಲ್ಲಿರುವ ಸೇಂಟ್ ಮೇರಿಚರ್ಚ ವಾಸ್ತುಶಿಲ್ಪ ವೈಶಿಷ್ಟ್ಯದಿಂದ ಇಂದಿಗೂ ಆಕರ್ಷಣೆ ಉಳಿಸಿದಕೊಂಡಿದೆ. ನಗರದ ಅತ್ಯಂತ ಹಳೆಯ ಚರ್ಚೆ ಎಂಬ ಹಿರಿಮೆಗೆ ಪಾತ್ರವಾದ ಇದರ ಕಟ್ಟಡ ವಿನ್ಯಾಸವನ್ನು ರೆವರೆಂಡ್ ಫ್ರಾನ್ಸಿಸ್ ಗೇಲ್ ಎಂಬುವವರು ರೂಪಿಸಿದ್ದಾರೆ.

೧೮೬೯ರಲ್ಲಿ ನಿರ್ಮಾಣಗೊಂಡ ಈ ಚರ್ಚ ಸುಮಾರು ಎರಡು ಎಕರೆ ಪ್ರದೇಶದ ವ್ಯಾಪ್ತಿಯನ್ನು ಹೊಂದಿದೆ. ಗೋಕಾಕದ ಕಂದು ಬಣ್ಣದ ಶಿಲೆ ಕಟ್ಟಡಕ್ಕೆ ವಿಶಿಷ್ಟ ಮೆರಗು ಮೂಡಿಸಿದೆ. ತೊಲೆ. ಜಂತಿ, ಕಿಡಕಿ, ಬಾಗಿಲುಗಳನ್ನು ಸಾಗವಾನಿ ಕಟ್ಟಿಗೆಯಿಂದ ರೂಪಿಸಲಾಗಿದೆ.

ಚರ್ಚ್‌ನ ಒಳಾಂಗಣದ ಪೂರ್ವ ದಿಕ್ಕಿನ ಗೋಡೆಗೆ ಬೆಲ್ಜಿಯಂನಿಂದ ತರಿಸಲಾದ ಗಾಜುಗಳನ್ನು ಅಳವಡಿಸಲಾಗಿದೆ. ಈ ಗಾಜುಗಳ ಮೇಲೆ ಯೇಸುಕ್ರಿಸ್ತನ ಬದುಕನ್ನು ಬಿಂಬಿಸುವ ಚಿತ್ರಗಳನ್ನು ಬಿಡಿಸಲಾಗಿದೆ. ಈ ಗಾಜಿಗಳು ವಿಶಿಷ್ಟವಾದ ಲಕ್ಷಣಗಳನ್ನು ಹೊಂದಿವೆ. ಬೆಳಗಿನ ಸೂರ್ಯ ಕಿರಣಗಳು ಈ ಗಾಜಿನ ಮೇಲೆ ಬಿದ್ದಾಗ ಅವುಗಳ ಬಣ್ಣಗಳ ಹೊಳಪು ದ್ವಿಗುಣವಾಗಿ ಅತ್ಯಂತ ಆಕರ್ಷಿಣೀಯವಾಗಿ ಕಂಡುಬರುತ್ತವೆ. ಪ್ರಾರ್ಥನೆ ಸಲ್ಲಿಸಲು ಆಗಮಿಸಲು ಅನುಕೂಲವಾಗುವಂತೆ ಈ ಚರ್ಚಗೆ ೨೪ ಪ್ರವೇಶ ದ್ವಾರಗಳನ್ನು ನಿರ್ಮಿಸಲಾಗಿದೆ.

ಚರ್ಚಿನ ಸಭಾಂಗಣವು ವಿಶಾಲವಾಗಿದ್ದು ಏಕಕಾಲಕ್ಕೆ ಸಾವಿರಾರು ಜನರು ಪ್ರಾರ್ಥನೆ ಸಲ್ಲಿಸಲು ಅನುಕೂಲವಾಗಿದೆ. ಕಟ್ಟಡದ ಶಿಲೆ, ಪೀಠೋಪಕರಣ, ಬಣ್ಣದ ಗಾಜು ಒಂದೊಂದು ಕಾರಣಕ್ಕೆ ಮಹತ್ವವನ್ನು ಪಡೆದುಕೊಂಡಿವೆ. ಸಾಗವಾನಿ ಕಟ್ಟಿಗೆಯಿಂದ ನಿರ್ಮಿಸಲಾದ ಕೂಡುವ ಆಸನಗಳು ಹಾಗೂ ಕಿವಿಗೆ ಇಂಪಾಗಿ ಕೇಳಿಸುವ 'ಪೈಪ್ ಆರ್ಗನ್' ಧ್ವನಿವರ್ಧಕ ವ್ಯವಸ್ಥೆಯಿಂದ ದೇಶದ ಅಪರೂಪದ ಚರ್ಚಗಳಲ್ಲಿ ಇದು ಒಂದಾಗಿದೆ.

ಮುಂಬೈನ 'ಡಯಾಸಿಸ್ ಟ್ರಸ್ಟ್' ಅಸೋಸಿಯೇಷನ್ ಅಧೀನದಲ್ಲಿರುವ ಈ ಚರ್ಚಿನ ನಿರ್ವಹಣೆಯನ್ನು ಈಗ ಮರಿಯಾದಾಸ್ ಕುಟುಂಬದವರು ನೋಡಿಕೊಳ್ಳುತ್ತಿದ್ದಾರೆ. ಕ್ರಿಸ್‌ಮಸ್ ಸಂದರ್ಭದಲ್ಲಿ ಎಲ್ಲಾ ಸಮುದಾಯದವರು ಇಲ್ಲಿ ಸೇರಿ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ.

ಒಟ್ಟಿನಲ್ಲಿ ಬೆಳಗಾವಿಯ ಪ್ರಾದೇಶಿಕ ವಾಸ್ತುಶಿಲ್ಪಕಲೆಯು ಕರ್ನಾಟಕದಲ್ಲಿಯೇ ಅತ್ಯಂತ ವಿಶಿಷ್ಟವಾಗಿ ರೂಪಗೊಂಡಿರುವುದು ಕಂಡುಬರುತ್ತದೆ. ಕ್ರಿ.ಪೂ.ದಿಂದ ಇಂದಿನವರೆಗೆ ವೈವಿಧ್ಯಮಯವಾಗಿ ರೂಪಗೊಂಡು ತನ್ನದೇ ಆದ ಒಂದು ವಿಶಿಷ್ಟ ಶೈಲಿಯನ್ನು ನಿರ್ಮಾಣಗೊಳಿಸಿದೆ. ಹತ್ತು ಹಲವು ಮತಧರ್ಮಗಳ ಪ್ರಭಾವದಲ್ಲಿ ಸಾಮರಸ್ಯದ ಸಂಕೇತಗಳಾಗಿ ಇಲ್ಲಿಯ ಸ್ಮಾರಕಗಳು ಉಳಿದುಕೊಂಡುಬಂದಿವೆ. ಬೆಳಗಾವಿಯ ಜನರು ಕಲೆಯನ್ನು ಪೂಜ್ಯನೀಯ ಭಾವನೆಯಿಂದ ಕಾಣುತ್ತಿದ್ದರು ಎನ್ನುವುದಕ್ಕೆ ಇಲ್ಲಿಯ ಸ್ಮಾರಕಗಳು, ದೇವಾಲಯ, ಬಸದಿ, ಚರ್ಚ, ಮಸೀದಿಗಳು ಸಾಕ್ಷಿ ನುಡಿಯುತ್ತವೆ.

ಈ ಸ್ಮಾರಕಗಳಲ್ಲದೆ ಕೆಲವು ಪಾರಂಪರಿಕ ಕಟ್ಟಡಗಳು ಬೆಳಗಾವಿಯಲ್ಲಿ ವಿಶಿಷ್ಟವಾಗಿ ಕಂಡುಬರುತ್ತವೆ. ರಚನಾ ಶೈಲಿಯಿಂದ ಇವು ಗಮನ ಸೆಳೆಯುತ್ತವೆ. ಈ ಕಟ್ಟಡಗಳು ಬೆಳಗಾವಿಯ ಸಾಂಸ್ಕೃತಿಯ ಒಂದು ಭಾಗವಾಗಿ ಮಹತ್ವವನ್ನು ಪಡೆದುಕೊಂಡಿವೆ.

**ಬೆಳಗಾವಿ ಕೋಟೆ** : ಬೆಳಗಾವಿ ನಗರದ ಕೇಂದ್ರ ಬಸ್ ನಿಲ್ದಾಣದ ಬಳಿಯಿರುವ ಕೋಟೆ ಭವ್ಯವಾಗಿದೆ. ಊರಿನ ಪೂರ್ವಕ್ಕೆ ವರ್ತುಲಾಕಾರದಲ್ಲಿರುವ ಈ ಕೋಟೆಯು ಸುಭದ್ರವಾಗಿದೆ. ನೂರು ಎಕರೆ ಪ್ರದೇಶದಿಂದಾವೃತವಾಗಿ ನೈಸರ್ಗಿಕ ಸೌಂದರ್ಯದಿಂದಾಗಿ ನಯನಮನೋಹರವಾಗಿದೆ. ಹಲವಾರು ರಾಜವಂಶಗಳ ಆಳ್ವಿಕೆಯ ಅವಧಿಯಲ್ಲಿ ವಿಕಸನ ಹೊಂದಿ ರಾಜಮನೆತನಗಳ ಏಳು-ಬೀಳುಗಳಿಗೆ ಮೂಕ ಸಾಕ್ಷಿಯಾಗಿದೆ. ಬೆಳಗಾವಿ ಕೋಟೆಯು ಅರ್ಧವೃತ್ತಾಕಾರದಲ್ಲಿದ್ದು ಭವ್ಯ ಕಮಾನಿನ ಆಕಾರದ ಪ್ರವೇಶದ್ವಾರವನ್ನೊಳಗೊಂಡಿದೆ. ಸುತ್ತಲೂ ಆಳವಾದ ಕಂದಕದಿಂದ ಸುತ್ತುವರೆದಿದೆ. ಕೋಟೆಯ ಉತ್ತರ ದಿಕ್ಕಿನ ಗೋಡೆಯ ಮೇಲಿರುವ ಆರು ಸಾಲುಗಳ ಪರ್ಶಿಯನ್ ಭಾಷೆಯ ಶಾಸನ ಹಿಜಿರಾ ಶಕೆ ೯೩೭(ಕ್ರಿ. ಶ. ೧೫೩೦) ರಲ್ಲಿ ಯಾಕೂಬ ಖಾನ್ ಎಂಬಾತ ಪುನರ್ ನಿರ್ಮಾಣ ಕಾರ್ಯ ಪೂರ್ಣಗೊಳಿಸಿದ ಬಗ್ಗೆ ಉಲ್ಲೇಖಿಸುತ್ತದೆ.[೨೬] ೧೦೦೦ ಗಜ ಉದ್ದ ಮತ್ತು ೮೦೦ ಗಜ ಅಗಲವಿರುವ ಕೋಟೆ

ಅಂಡಾಕಾರದಲ್ಲಿದೆ. ೩೪ ಅಡಿ ಆಳದ ಕಂದಕದಿಂದಾಗಿ ಈ ಕೋಟೆ ವಿಶೇಷ ಭದ್ರತೆ ಪಡೆದಿದೆ. ಕೋಟೆಗೆ ಎರಡು ಪ್ರವೇಶ ದ್ವಾರಗಳಿದ್ದು ಮುಖ್ಯ ದ್ವಾರ ಉತ್ತರಕ್ಕಿದ್ದು ಇನ್ನೊಂದು ಪೂರ್ವಕ್ಕಿದೆ. ಕೋಟೆಯ ರಕ್ಷಣ ದೇವತೆ ಎನಿಸಿದ ದುರ್ಗಾದೇವಿಯ ಮೂರ್ತಿ ಮುಖ್ಯದ್ವಾರದ ಪ್ರವೇಶದಲ್ಲಿದೆ. ಎರಡು ದ್ವಾರಗಳು ೧೨ಅಡಿ ಎತ್ತರವಾಗಿದ್ದು ಕಮಾನಿನ ಆಕಾರದಲ್ಲಿವೆ. ಕೋಟೆಯ ಒಳಭಾಗದಲ್ಲಿ ಭೂಗರ್ಭದಲ್ಲಿ ಅನೇಕ ರಹಸ್ಯ ಮಾರ್ಗಗಳಿದ್ದು ಒಂದು ಮಾರ್ಗ ಎಳ್ಳೂರು ಸೇರುತ್ತದೆ.

ಬೆಳಗಾವಿ ಕೋಟೆಯು ಮೊಟ್ಟಮೊದಲು ಶಾತವಾಹನರಿಂದ ಕಟ್ಟಲು ಪ್ರಾರಂಭವಾಯಿತು. ವಡಗಾವ–ಮಾಧವಪುರದಿಂದ ಈ ಹೊಸ ತಾಣದಲ್ಲಿ ಕೋಟೆಯ ಕಾರ್ಯಭಾರ ಸ್ಥಳಾಂತರಿಸಲಾಯಿತು.[೭೭] ಕೋಟೆಯ ತಳಪಾಯದಲ್ಲಿ ಹಾಗೂ ಕೆಲವು ಕಟ್ಟಡಗಳ ತಳಪಾಯದಲ್ಲಿ ಇಷ್ಟಿಕಾ ಸ್ತರಗಳು ಶಾತವಾಹನರನ್ನು ಸ್ಮರಿಸುತ್ತವೆ. ಚಾಲುಕ್ಯರು ಹಲಸಿ ಕದಂಬರೊಡನೆ ಆಡಿದ ಯುದ್ಧವು, ಬೆಳಗಾವಿ ಕೋಟೆಯ ವಾಸ್ತವ್ಯದಲ್ಲಿದ್ದ ಸೈನಿಕರಿಂದ ಕೈಕೊಳ್ಳಲಾಯಿತು. ರಟ್ಟರ ಮೂರನೆಯ ಕಾರ್ತವೀರ್ಯನು ಸವದತ್ತಿಯಿಂದ ಇಲ್ಲಿಗೆ ತನ್ನ ರಾಜ್ಯ ಆಡಳಿತವನ್ನು ಕೇಂದ್ರಿಕರಿಸಿ ಇದನ್ನು ತನ್ನ ಹೊಸ ರಾಜಧಾನಿಯನ್ನಾಗಿ ಮಾಡಿ, ಪೂರ್ವದ ಬದಿಯ ಅಗಳವನ್ನು ಹಾಗೂ ಕೋಟೆ ಗೋಡೆಯನ್ನು ಭದ್ರಪಡಿಸಿದನು. ಕ್ರಿ. ಶ. ೧೨೦೪ ರಲ್ಲಿ ನಾಲ್ಕನೆಯ ದೊರೆ ಕಾರ್ತವೀರ್ಯನಿಂದ ಕದಂಬ ನಾಗರಶೈಲಿಯಲ್ಲಿ ಕಮಲಬಸದಿಯು ನಿರ್ಮಾಣವಾಯಿತು.

ಈ ಕೋಟೆ ಕೆಳಸ್ತರದಲ್ಲಿ ಶಾತವಾಹನ–ಕದಂಬರ ಕೃತಿಯಿಂದಲೂ, ನಂತರ ರಾಷ್ಟ್ರಕೂಟ ಮಾಂಡಲೀಕರ ಕೊಡುಗೆಯಿಂದಲೂ ಬಿಜಾಪುರದ ಆದಿಲ್ ಶಾಹರ ರಚನಾಂಶದಿಂದಲೂ ಭದ್ರವಾಯಿತು. ಕೋಟೆಯ ಒಳಗಡೆ ಚತುರ್ಮುಖ ಬಸದಿ, ಜಿನಾಲಯ, ಅಸದಖಾನ ಅರಮನೆ (ಈಗ ಮಿಲಿಟರಿ ಆಡಳಿತ ಕಚೇರಿಯಾಗಿದೆ) ಜುಮ್ಮಾ ಮಸೀದಿ ಮುಸಾಫರ್ ಖಾನ, ದಲಾನ್‌ಗಳು, ಪ್ರವೇಶದ್ವಾರದ ಕಮಾನಗಳು, ವೀಕ್ಷಣಾ ಬುರುಜುಗಳು, ನೆಹರ್‌ಗಳು ಇತ್ಯಾದಿಗಳಿಂದ ಈ ಕೋಟೆಯು ಮಧ್ಯ ಯುಗದ ಕರ್ನಾಟಕ ಕೋಟೆಗಳಲ್ಲಿ ಎದ್ದು ಕಾಣುತ್ತದೆ. ಕೋಟೆಯ ಒಳಗಿರುವ ಕಮಲ ಬಸದಿಯ ಕಲಶಮಂಟಪದ ಫರ್ಶಿಯ ಕೆಳಗಡೆ ಕಳ್ಳದಾರಿಯಿದ್ದು ಅದು ೪–೫ ಮೈಲು ಮೇಲಿರುವ ಎಳ್ಳೂರ ಗಡಕ್ಕೆ ಹೋಗಿರುತ್ತದೆಂದು ಕೇಳಿದ ಲಕ್ಷ್ಕರೀ ಅಧಿಕಾರಿಗಳು ಆ ಫರ್ಶಿಯ ಕಲ್ಲನ್ನು ಅಲ್ಲಾಡಿಸಿ ನೋಡಿದರು. ಆದರೆ ಕಳ್ಳದಾರಿ ಸಿಗಲಿಲ್ಲ. ಇದರಿಂದ ಮಂಟಪಕ್ಕೆ ಧಕ್ಕೆ ಉಂಟಾಗಿ ಮಂಟಪವೇ ಹೊರಳಿಕೊಂಡು ಬೀಳುವಂತಾಗಿದ್ದರಿಂದ ಆ ಪ್ರಯತ್ನವನ್ನು ಬಿಟ್ಟು ಹೊಸವೆರಡು ಕಂಬಗಳ ತ್ಯಾಪಿಯನ್ನು ಹಚ್ಚಿ ಮಂಟಪವನ್ನು ಎತ್ತಿಹಿಡಿಯಬೇಕಾಯಿತು.[೨೮]

**ದಂಡು ಪ್ರದೇಶದ ಕಟ್ಟಡಗಳು :** ೧೮೧೮ ರಲ್ಲಿ ಬ್ರಿಟಿಷರು ಪೇಶ್ವೆಗಳನ್ನು ಸದೆಬಡೆದು ಬೆಳಗಾವಿ ಸಹಿತ ಅವರ ರಾಜ್ಯವನ್ನು ವಶಪಡಿಸಿಕೊಂಡರು. ಅಂದಿನಿಂದ ಬೆಳಗಾವಿ ಬ್ರಿಟಿಷ ಸೈನ್ಯಪಡೆಯ ಬೀಡಾಯಿತು. ಬೆಳಗಾವಿಯ

ಹಿತಕರ ವಾತಾವರಣ ಸಮುದ್ರ ತೀರ ಪ್ರದೇಶದ ಕರಾವಳಿಯ ಸಾಮೀಪ್ಯ ಮತ್ತು ರಕ್ಷಣಾ ದೃಷ್ಟಿಕೋನದಿಂದ ಪೋರ್ಚುಗೀಸ್ ಗೋವಾದ ಸಮೀಪದಲ್ಲಿರುವ ಆಯಕಟ್ಟಿನ ದೃಷ್ಟಿಕೋನದಿಂದ ಬ್ರಿಟಿಷರು ಬೆಳಗಾವಿಯಲ್ಲಿ ಸೈನಿಕ ತರಬೇತಿ ಕೇಂದ್ರ ಮತ್ತು ದಂಡುಮಂಡಲ ಸ್ಥಾಪಿಸಿದರು. ಅದು ಇಂದಿಗೂ ಮುಂದುವರೆದಿದ್ದು ಭಾರತೀಯ ಸೈನ್ಯ ಪಡೆ ಮತ್ತು ವಾಯುಸೇನೆಯ ಸ್ಥಲವಾಗಿದೆ. ಮರಾಠಾ ಲೈಟ್ ಇನ್‌ಫೆಂಟ್ರಿ ಸ್ಕೂಲ ಕೂಡ ಇಲ್ಲಿದೆ. ಆದ್ದರಿಂದ ಬೆಳಗಾವಿಯನ್ನು 'ಕ್ರೆಡಲ್ ಆಫ್ ಇನ್‌ಫೆಂಟ್ರಿ' ಅಥವಾ 'ಸೈನ್ಯ ಪಡೆಯ ತೊಟ್ಟಿಲು' ಎಂದು ಕರೆಯುತ್ತಾರೆ. ಬೆಳಗಾವಿಯ ದಂಡು ಪ್ರದೇಶದಲ್ಲಿ ತೋಪುಖಾನೆ, ಬರಾಕುಗಳು ಎಲ್ಲೆಲ್ಲು ಇದ್ದು ಸೈನ್ಯದ ಇರುವನ್ನು ಸಾರಿ ಹೇಳುತ್ತವೆ. ದಂಡು ಪ್ರದೇಶವು ಬೆಳಗಾವಿ ನಗರದ ದಕ್ಷಿಣ ಮತ್ತು ಪಶ್ಚಿಮ ಭಾಗದಲ್ಲಿದೆ. ಇಲ್ಲಿ ಸೈನಿಕ ಕಟ್ಟಡಗಳಲ್ಲದೇ ಸುಸ್ಥಿತಿಯಲ್ಲಿ ಕಾಪಾಡಲ್ಪಟ್ಟ ಪಾರಂಪರಿಕ ವಸಾಹತು ವಾಸ್ತುಶಿಲ್ಪ ಶೈಲಿಯ ಅನೇಕ ಇಗರ್ಜಿಗಳು, ಶಾಲೆಗಳು ಮತ್ತು ಖಾಸಗಿ ಶೋಧಗಳು ವಿಶಿಷ್ಟವಾಗಿವೆ.

**ಕೋರ್ಟ ಹೌಸ್ :** ಕ್ರಿ. ಶ. ೧೮೮೬ ರಲ್ಲಿ ಪಿರಮಿಡ್ ಆಕಾರದಲ್ಲಿ ನಿರ್ಮಾಣಗೊಂಡ ಕೋರ್ಟ ಹೌಸ್ ಪ್ರಾದೇಶಿಕ ಆಯುಕ್ತರ ಕಛೇರಿಯ ಬಲಭಾಗದಲ್ಲಿದೆ. ಸಂಪೂರ್ಣವಾಗಿ ಕಲ್ಲಿನಲ್ಲಿ ನಿರ್ಮಾಣಗೊಂಡ ಈ ಕಟ್ಟಡಕ್ಕೆ ಕೆಂಪು ಬಣ್ಣ ಹಚ್ಚಲಾಗಿದೆ. ಎರಡಂತಸ್ತಿನ ಕಟ್ಟಡದಲ್ಲಿ ವಿಶಾಲವಾದ ಕೋರ್ಟ ಹಾಲ್, ಸಭಾಂಗಣ, ಸಿಬ್ಬಂದಿ ಕೋಣೆ, ಕಛೇರಿ ಕೊಠಡಿಗಳು, ರೆಕಾರ್ಡ ರೂಪಮ್, ನ್ಯಾಯಾಧೀಶರ ಕೊಠಡಿ, ಸಾಗವಾನಿ ಮರದ ಪೀಠೋಪಕರಣಗಳು, ಕಟಕಟೆ ಕಂಬಗಳಿರುವ ಇಡಿ ಸೌಧವನ್ನು ಸುತ್ತುವರೆದ ಬಾಲ್ಕನಿ ಬ್ರಿಟಿಷ ನ್ಯಾಯಾಂಗ ವ್ಯವಸ್ಥೆಯ ಮೇಲೆ ಬೆಳಕು ಚೆಲ್ಲುತ್ತದೆ.

**ಜಿಲ್ಲಾಪಂಚಾಯತಿ ಕಟ್ಟಡ (ಹಳೆಯದು) :** ಕೋರ್ಟ ಆವರಣದೊಳಗೆ ಇರುವ ಪಾರಂಪರಿಕ ಕಟ್ಟಡಗಳಲ್ಲಿ ಮತ್ತೊಂದು ವಿಶೇಷವಾದ ಕಟ್ಟಡವೆಂದರೆ ಮೊದಲು ಜಿಲ್ಲಾಪಂಚಾಯತಿ ಕಛೇರಿಯಿದ್ದ ಕಟ್ಟಡ. (ಈಗ ಹೊಸ ಕಟ್ಟಡ ನಿರ್ಮಾಣಗೊಂಡಿದ್ದರಿಂದ ಈಗ ಈ ಕಟ್ಟಡದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಕಛೇರಿಯು ಕಾರ್ಯಾರಂಭ ಮಾಡಿದೆ) ಎರಡಂತಸ್ತಿನ ಈ ಕಟ್ಟಡವು ಕ್ರಿ. ಶ. ೧೯೨೭ ರಲ್ಲಿ ನಿರ್ಮಾಣಗೊಂಡಿದೆ. ಅಗಲವಾದ ಪ್ರವೇಶದ್ವಾರ, ಎತ್ತರವಾದ ಕಮಾನುಗಳು, ಅನುಕೂಲಕರವಾದ ಕಿಡಕಿಗಳು, ಎರಡು ಪಕ್ಕದಲ್ಲಿರುವ ಗೋಪುರಗಳು ಇವುಗಳ ಮಧ್ಯಭಾಗದಲ್ಲಿ ಅಳವಡಿಸಿರುವ ಗಡಿಯಾರ. ಹೂವಿನ ವಿನ್ಯಾಸದ ಅಲಂಕರಣ ಈ ಸೌಧದ ವೈಶಿಷ್ಟ್ಯ

**ಸಾರ್ವಜನಿಕ ವಾಚನಾಲಯ :** ಬೆಳಗಾವಿ ನಗರದ ಹೃದಯಭಾಗವಾದ ಗಣಪತಿಗಲ್ಲಿಯಲ್ಲಿರುವ ಸಾರ್ವಜನಿಕ ವಾಚನಾಲಯದ ಕಟ್ಟಡವು ಬೆಳಗಾವಿಯ ಸೌಂದರ್ಯಕ್ಕೆ ಮೆರಗು ತಂದಿದೆ. ಕ್ರಿ. ಶ. ೧೯೩೫ ರಲ್ಲಿ ನಿರ್ಮಾಣಗೊಂಡ ಈ ಕಟ್ಟಡವು ವಂಟಮುರಿ ಸಂಸ್ಥಾನದ ಶ್ರೀಮಂತ ರಾಜಾ ಲಖಮನಗೌಡ ಸರ್ ದೇಸಾಯಿಯವರಿಂದ

ಉದ್ಘಾಟನೆಗೊಂಡಿತು. ೧೮೪೮ ರಲ್ಲಿ ಸ್ಥಾಪನೆಗೊಂಡ ಸಾರ್ವಜನಿಕ ವಾಚನಾಲಯವು ಈ ಕಟ್ಟಡದಲ್ಲಿ ಕಾರ್ಯಾರಂಭಗೊಂಡಿತು. ಮೂರು ಅಂತಸ್ತಿನ ಈ ಸೌಧದ ಕೆಳ ಅಂತಸ್ತಿನಲ್ಲಿ ಅಂಗಡಿಗಳನ್ನು ತೆರೆಯಲಾಗಿದೆ. ಈ ಅಂಗಡಿಗಳ ಬಾಡಿಗೆಯಿಂದ ಬರುವ ಹಣದಲ್ಲಿಯೇ ವಾಚನಾಲಯ ಹಾಗೂ ಕಟ್ಟಡದ ನಿರ್ವಹಣೆಯನ್ನು ಕೈಗೊಳ್ಳಲಾಗುತ್ತದೆ. ಎತ್ತರವಾದ ಮೆಟ್ಟಿಲುಗಳು, ವಿಶಾಲವಾದ ಓದುವ ಕೊಠಡಿ, ಗೋಡೆಯ ಒಳಗಡೆ ಇರುವ ಮರದ ಪಾಟುಗಳು, ನೆಲಕ್ಕೆ ಹಾಕಿದ ಹಳದಿ ಕಪ್ಪು ಬಣ್ಣದ ಇಟಾಲಿಯನ್ ನೆಲದ ಹಾಸು ಉಪಯುಕ್ತಕರ ಮತ್ತು ಅತ್ಯಾಕರ್ಷಕವಾಗಿದೆ. ಸಭಾಂಗಣದ ತುದಿಗಿರುವ ಬಾಲ್ಕನಿಗೆ ಕಬ್ಬಿಣದ ಸರಳುಗಳನ್ನು ಜೋಡಿಸಲಾಗಿದೆ. ೨೫ ಅಡಿ ಎತ್ತರದ ವಿಶಾಲವಾದ ಗಡಿಯಾರದ ಗೋಪುರ ಅತ್ಯಂತ ವೈಶಿಷ್ಟ್ಯಪೂರ್ಣವಾಗಿದ್ದು, ಲಂಡನ್ ನಿರ್ಮಿತಿಯ ಗಡಿಯಾರವನ್ನು ಅಳವಡಿಸಲಾಗಿದೆ. ಈ ಗಡಿಯಾರವನ್ನು ಬೆಳಗಾವಿಯ ಯಾವುದೇ ಪ್ರದೇಶದಲ್ಲಿ ನಿಂತು ನೋಡಿದರೂ ಕಾಣುತ್ತದೆ. ಮೇಲೆ ಕೆಂಪು ಹಂಚಿನ ಇಳಿಜಾರಾದ ಮೇಲ್ಛಾವಣಿಯನ್ನು ನಿರ್ಮಿಸಲಾಗಿದೆ.

**ರಂಗೂಬಾಯಿ ಪ್ಯಾಲೇಸ್** : ಬೆಳಗಾವಿಯ ಹಳೆಕಟ್ಟಡಗಳು ಕೇವಲ ಸ್ಮಾರಕಗಳಾಗಿ ಉಳಿಯದೆ ಇಂದಿಗೂ ತನ್ನಲ್ಲಿ ವೈಭವದ ಇತಿಹಾಸವನ್ನು ಹುದುಗಿಸಿಕೊಂಡಿವೆ. ಒಂದೊಂದು ಕಟ್ಟಡಕ್ಕೂ ಭಿನ್ನ ಭಿನ್ನ ಇತಿಹಾಸವಿದೆ. ಇದಕ್ಕೊಂದು ಉತ್ತಮ ಉದಾಹರಣೆ ರಾಮಲಿಂಗ ಖಂಡದಲ್ಲಿರುವ ರಂಗೂಬಾಯಿ ಪ್ಯಾಲೇಸ್.

ರಂಗೂಬಾಯಿ ಪ್ಯಾಲೇಸ್ ಕಲಾತ್ಮಕವಾಗಿ, ವಿಶಿಷ್ಟ ವಿನ್ಯಾಸದಿಂದ ಕಟ್ಟಲ್ಪಟ್ಟಿದೆ. ಇಂದು ಕಟ್ಟಡದ ಒಡೆತನ ಮರಾಠಿಗರ ಕೈಯಲ್ಲಿದ್ದರೂ ಒಂದು ಕಾಲದಲ್ಲಿ ಕರ್ನಾಟಕ ಏಕೀಕರಣ ಕುರಿತ ಚಿಂತನ ಸಭೆಗಳು ಇಲ್ಲಿ ನಡೆಯುತ್ತಿದ್ದುದು ಸ್ಮರಣೀಯವಾಗಿದೆ. ಏಕೀಕರಣಕ್ಕೆ ಸಂಬಂಧಿಸಿದ ಮಹತ್ವದ ನಿರ್ಣಯಗಳು ಈ ಕಟ್ಟಡದೊಳಗಿಂದಲೇ ಆಗಿವೆ. ೧೯೩೬ ರ ಸಮಯದಲ್ಲಿ ಕರ್ನಾಟಕ ಏಕೀಕರಣದ ಹೋರಾಟ ಬೆಳಗಾವಿಯಲ್ಲಿ ಪ್ರಭಲವಾಗಿತ್ತು. ಆಗ ಇನ್ನೂ ಕನ್ನಡ ಮರಾಠಿ ಎಂಬ ಭೇದ ಭಾವಿರಲಿಲ್ಲ. ಅಂತಹ ಸಂದರ್ಭದಲ್ಲಿ ಏಕೀಕರಣದ ನಾಯಕರು ಚಳುವಳಿಯ ಸ್ವರೂಪ ಕುರಿತು ಒಂದು ಅಧಿವೇಶನವನ್ನು ಇಲ್ಲಿ ನಡೆಸಿದರು. ಆಗ ಇದು ಭಾಷಾತೀತ ಹಾಗೂ ಪಕ್ಷಾತೀತವಾಗಿತ್ತು. ಕರ್ನಾಟಕ ಏಕೀಕರಣಗೊಳ್ಳಬೇಕು ಎಂಬ ಹೋರಾಟದಲ್ಲಿ ಮರಾಠಿಗರೂ ಇದ್ದರು. ನಾಡಿನ ಹಿರಿಯರು ಇದ್ದರು. ದಳವಿ ದತ್ತಾರಾಯರು ಸ್ವಾಗತ ಸಮಿತಿ ಅಧ್ಯಕ್ಷರಾಗಿದ್ದರು. ಕರ್ನಾಟಕ ಸಿಂಹ ದೇಶಪಾಂಡೆ ಗಂಗಾಧರರಾಯರು, ಗೋಖಲೆ ಕೇಶವರಾಯರು, ಅಲ್ಲದೆ ಮರಾಠಿ ಭಾಷೆಯ ತರುಣ ಭಾರತ ಪತ್ರಿಕೆಯ ಸಂಸ್ಥಾಪಕ ಬಾಬುರಾವ್ ಠಾಕೂರ ಮುದವೀಡು ಕೃಷ್ಣರಾಯರು, ಆಲೂರು ವೆಂಕರಟರಾಯರು, ಡಾ. ಸವಣೂರ ಹನಮಂತರಾಯರು, ಬೆಟಗೇರಿ ಭೀಮರಾಯರು ಮುಂತಾದವರು ಕರ್ನಾಟಕದ ಏಕೀಕರಣದ ಬಗೆಗೆ ಇಲ್ಲಿ ಚಿಂತನೆಯನ್ನು ನಡೆಸಿದರು. ಹೀಗೆ ಕರ್ನಾಟಕದ ಏಕೀಕರಣದ ಹೋರಾಟದೊಂದಿಗೆ ಬೆಸೆದುಕೊಂಡ ಮರಾಠಿಕೊಂಡಿಯೊಂದು ಇನ್ನೂ ಬೆಳಗಾವಿಯಲ್ಲಿ ಪ್ಯಾಲೆಸ್ ರೂಪದಲ್ಲಿ ಗಟ್ಟಿಯಾಗಿದೆ.

ರಂಗೂಬಾಯಿ ಪ್ಯಾಲೇಸ್ ಮೂಲತಃ ಮರಾಠಾ ಸಮುದಾಯದ್ದೇ. ಕೊಲ್ಲಾಪುರ ಸಂಸ್ಥಾನದ ಮಹಾರಾಜರ ಆಶ್ರಯದಲ್ಲಿದ್ದು ಬಂದಿದ್ದ ಮರಾಠಾ ಸಮುದಾಯದ ಹೆಣ್ಣು ಮಗಳು ರಂಗೂಬಾಯಿ ರಾನಡೆ ಎಂಬುವರು ಇದನ್ನು ನಿರ್ಮಿಸಿದ್ದಾರೆ. ಒಡೆದ ಕಲ್ಲಿನಿಂದ ಕಟ್ಟಿರುವ ಈ ಭವ್ಯ ಪ್ಯಾಲೇಸ್ ೨೦ನೆಯ ಶತಮಾನದ ಪ್ರಾರಂಭದ ದಶಕದಲ್ಲಿ ಕಟ್ಟಲ್ಪಟ್ಟಿದೆ. ರಂಗೂಬಾಯಿ ರಾನಡೆ ಅಂದು ಬೆಳಗಾವಿಯ ಪ್ರಭಾವಿ ಮಹಿಳೆಯಾಗಿದ್ದರು. ೧೯೩೭ ರಲ್ಲಿ ಮುಂಬಯಿ ಇಲಾಖೆಯಲ್ಲಿ ನಡೆದ ಮೊದಲ ಪ್ರಜಾಪ್ರಾತಿನಿಧ್ಯ ಸರಕಾರ ರಚನೆಯ ಚುನಾವಣೆಯಲ್ಲಿ ಇವರು ಬೆಳಗಾವಿಜಿಲ್ಲೆಯ ದಕ್ಷಿಣ ಭಾಗದಿಂದ ಸ್ವತಂತ್ರ ಅಭ್ಯರ್ಥಿಯಾಗಿ ಕಾಂಗ್ರೆಸ್ ವಿರುದ್ಧ ಸೋತಿದ್ದರು. ಮಕ್ಕಳಿಲ್ಲದ ರಂಗೂಬಾಯಿಯವರು ತಮ್ಮ ಕೊನೆಯ ದಿನಗಳಲ್ಲಿ ಪ್ಯಾಲೇಸ್‌ನ್ನು ಮರಾಠಿ ಸಮಾಜದ ಚಟುವಟಿಕೆಗಳಿಗೆ ಬಿಟ್ಟುಕೊಟ್ಟರು. ಈಗ ಮರಾಠಿ ಶಾಲೆಯು ಇಲ್ಲಿ ನಡೆಯುತ್ತಿದೆ.

**೨. ಚಿತ್ರಕಲೆ:**

ಬೆಳಗಾವಿಯ ಸಾಂಸ್ಕೃತಿಕ ಪರಂಪರೆ ಪ್ರಾಚೀನವಾಗಿರುವಷ್ಟೇ ವೈಶಿಷ್ಟ್ಯಪೂರ್ಣವೂ ಆಗಿದೆ. ಸೃಷ್ಟಿ ಸೌಂದರ್ಯದಿಂದ ಕಂಗೊಳಿಸುವ ಬೆಳಗಾವಿ ಹಾಗೂ ಬೆಳಗಾವಿ ಜಿಲ್ಲೆ ಕಲಾವಿದರ ತವರುಮನೆಯಾಗಿದೆ. ಬೆಳಗಾವಿಯ ಹಲವಾರು ಹಿರಿಯ ಕಲಾವಿದರು ಹಾಗೂ ಉತ್ಸಾಹಿ ತರುಣ ಕಲಾವಿದರು ಅನೇಕ ಕಲಾಚಟುವಟಿಕೆಗಳಿಂದ ಇಲ್ಲಿಯ ವಾತಾವರಣವನ್ನು ಕಲಾಮಯವನ್ನಾಗಿಸಿದ್ದಾರೆ.

ಚಿತ್ರ, ಪ್ರಮುಖವಾದ ಕಲೆ ಮತ್ತು ಸಂವಹನ ಪ್ರಕಾರ. ಅದು ಭಾಷೆ ಮತ್ತು ಸಾಹಿತ್ಯಗಳಿಗೆ ಇರುವ ಪ್ರಾದೇಶಿಕ ಮತ್ತು ಜನಾಂಗಿಕ ಮಿತಿಗಳನ್ನು ಮೀರಿ ಎಲ್ಲರಿಗೂ ಸಂವಹನವಾಗುವ ಕಲೆಯಾಗಿದೆ. ಚಿತ್ರದ ಮೂಲಕ ಸಂವಹನ ನಡೆಯಿಸುವುದು ಆದಿಮಾನವನ ಕಾಲದಲ್ಲಿಯೇ ಆರಂಭವಾಗಿದೆ. ಆದಿಮಾನವ ಗೆರೆ, ಚುಕ್ಕಿಗಳನ್ನು ಬಳಸಿಕೊಂಡು ಕಣ್ಣಿಗೆ ಕಂಡ ವಸ್ತುಗಳ ಚಿತ್ರಗಳನ್ನು ಬಿಡಿಸಿದ್ದಾನೆ.

ಚಿತ್ರಕಲೆಯಲ್ಲಿ ರೇಖಾಚಿತ್ರ, ವರ್ಣಚಿತ್ರ, ಭಿತ್ತಿಚಿತ್ರ, ಕೊರೆದ ಚಿತ್ರ, ಉಬ್ಬು ಚಿತ್ರ, ವ್ಯಂಗ್ಯ ಚಿತ್ರ ಇತ್ಯಾದಿ ಪ್ರಕಾರಗಳಿವೆ. ಕಾಗದವನ್ನು ಕತ್ತರಿಸಿ ಅಂಟಿಸುವುದು, ಬಟ್ಟೆಯನ್ನು ಕತ್ತರಿಸಿ ಅಂಟಿಸುವುದು ಸಹ ಚಿತ್ರಕಲೆಯ ವ್ಯಾಪ್ತಿಗೆ ಬರುತ್ತದೆ. ಗೋಡೆಯ ಮೇಲೆ ಅಥವಾ ಆವರಣ ಗೋಡೆಯ ಮೇಲೆ ರಚಿತವಾದುದು ಭಿತ್ತಿಚಿತ್ರ. ಪ್ರಚಾರಕ್ಕಾಗಿ ಕಾಗದದ ಮೇಲೆ ಚಿತ್ರಗಳನ್ನು ಮುದ್ರಿಸಿ ಗೋಡೆಗೆ ಅಂಟಿಸುವುದನ್ನು ಭಿತ್ತಿ ಚಿತ್ರ ಎಂದು ಕರೆಯುವ ವಾಡಿಕೆಯಿದೆ. ಮೇಲೆ ತಿಳಿಸಿದ ಎಲ್ಲ ಪ್ರಕಾರದ ಚಿತ್ರಕಲೆಯನ್ನು ಬಿಡಿಸುವ ಕಲಾವಿದರು ಬೆಳಗಾವಿಯಲ್ಲಿ ಕಂಡುಬರುತ್ತಾರೆ.

**ಪ್ರಾಚೀನ ಕಾಲದ ಚಿತ್ರಕಲೆ:** ಪ್ರಾಚೀನ ಕಾಲದಿಂದಲೂ ಚಿತ್ರಕಲೆಯಲ್ಲಿ ಬೆಳಗಾವಿ ಪ್ರಸಿದ್ಧಿ ಪಡೆದಿದ್ದು ಇತಿಹಾಸದಿಂದ ತಿಳಿದು ಬರುತ್ತದೆ. ಬೆಳಗಾವಿಯ ಚಿತ್ರಕಲೆಯು ಮೊದಲಿಗೆ ಕಂಡುಬರುವುದು ಶಾತವಾಹನ

ಕಾಲದಿಂದ. ಬೆಳಗಾವಿಯ ವಡಗಾವಿ-ಮಾಧವಪುರವು ಶಾತವಾಹನರ ಕಾಲದಲ್ಲಿ ಉಚ್ಚಾಯ ಸ್ಥಿತಿಯಲ್ಲಿತ್ತು. ಅಂದಿನ ಕಾಲದಲ್ಲಿ ಚಿತ್ರಿಸಿದ ಹಲವಾರು ಮೃತ್ ಪಾತ್ರೆಗಳು, ಲೋಹದ ಸಾಮಗ್ರಿಗಳು ದೊರೆತಿವೆ. ಬೆಳಗಾವಿ ಜಿಲ್ಲೆಯ ಸತ್ತಿ ಎಂಬಲ್ಲಿ ಕ್ರಿ. ಪೂ. ೨೦೦೦-೧೦೦೦ ವರ್ಷಗಳ ಹಿಂದಿನದಾದ ಮಡಕೆಯ ಅಲಂಕಾರಿಕ ಚಿತ್ರ ದೊರೆತಿರುವುದು.[೯] ಹೆಚ್ಚು ಕಡಿಮೆ ಇದೇ ಕಾಲದಲ್ಲಿಯೇ ಇದ್ದ ಶಾತವಾಹನರ ಸಾಮ್ರಾಜ್ಯವು ಬೆಳಗಾವಿಯ ವಡಗಾವಿ ಮಾಧವಪುರದಲ್ಲಿ ಆಡಳಿತವನ್ನು ನಡೆಸುವ ಸಂದರ್ಭದಲ್ಲಿ ಇಂತಹ ಚಿತ್ರಗಳನ್ನು ಬಿಡಿಸಿರುವುದು ಕಂಡುಬರುತ್ತದೆ. ಚಿತ್ರಗಳನ್ನು ಮೂಡಿಸಲು ತಗ್ಗು ಚಿತ್ರದ ಉರುಳು ಮುದ್ರಿಕೆಯನ್ನು ಉಪಯೋಗಿಸಿದ್ದಾರೆಂದು ಡಾ. ಅ. ಸುಂದರ ಅಭಿಪ್ರಾಯಪಟ್ಟಿದ್ದಾರೆ.[೧೦] ಪಾತ್ರೆಯ ಹಿಡಿಕೆ ಮತ್ತು ಕಂಠದಿಂದ ಕೆಳಗಿನ ಭಾಗದವರೆಗೆ ಅಲ್ಲಲ್ಲಿ ಚಿತ್ರಗಳು ಕಂಡುಬರುತ್ತವೆ. ಈ ಪಾತ್ರೆಗಳ ಮೇಲೆ ನಾನಾ ವಿಧದ ಹೂವಿನ ಚಿತ್ರಗಳನ್ನು ಮೂಡಿಸಿರುವುದು ಕಂಡುಬರುತ್ತದೆ. ಈ ಕಲಾಪದ್ಧತಿ ೧-೨ನೆಯ ಶತಮಾನದ ಸುಮಾರಿಗೆ ರೋಮ್ ದೇಶದ ವ್ಯಾಪಾರಸ್ಥರಿಂದ ಇಲ್ಲಿಗೆ ಬಂದಿರಬಹುದೆಂಬ ಅಭಿಪ್ರಾಯವಿದೆ. ಈ ಹೂವುಗಳು ಗ್ರೀಕ್-ರೋಮನ್ ಶೈಲಿಯಲ್ಲಿವೆ.

**ಜನಪದ ಚಿತ್ರಕಲೆ :** ಆದಿಮಾನವನಿಂದ ಆರಂಭವಾದ ಚಿತ್ರ ರಚನೆಯು ಸಂಸ್ಕೃತಿ ವಿಕಾಸದ ಜೊತೆಯಲ್ಲಿ ಜನಸಾಮಾನ್ಯರ ಕೈಗಳಲ್ಲಿ ಜನಪದ ಚಿತ್ರಕಲೆಯಾಗಿ ಉಳಿದು ಬಂದಿದೆ. ಈ ಕಲೆಯು ಕಲ್ಲು, ಮಣ್ಣು, ಮರ, ಲೋಹ, ಚರ್ಮ, ಎಲೆ, ಬಟ್ಟೆ, ಕಾಗದಗಳ ಮೇಲೆ ಮೂಡಿರುವುದು ಕಂಡುಬರುತ್ತವೆ. ಜನಪದ ಚಿತ್ರಕಲೆಯನ್ನು ಮುಖ್ಯವಾಗಿ ಹಸೆ, ಹಚ್ಚೆ, ರಂಗೋಲಿ, ಕೇದಿ, ಮದರಂಗಿ ಮುಂತಾದ ಹಲವು ಪ್ರಕಾರಗಳಲ್ಲಿ ಕಾಣಬಹುದಾಗಿದೆ.

ಮದುವೆಯಂಥ ಶುಭ ಕಾರ್ಯಗಳಲ್ಲಿ ಗೋಡೆಯ ಮೇಲೆ ಹಸೆ ಬರೆಯುವ ಪದ್ಧತಿಯು ಸಾಮಾನ್ಯವಾಗಿ ಭಾರತೀಯ ಸಂಸ್ಕೃತಿಯಲ್ಲಿ ಎಲ್ಲೆಲ್ಲಿಯೂ ಕಂಡುಬರುತ್ತದೆ. ಅದರಂತೆ ಬೆಳಗಾವಿಯಲ್ಲಿಯೂ ಈ ಚಿತ್ರಕಲೆಯು ಮೊದಲಿನಿಂದಲೂ ಪರಂಪರಾಗತವಾಗಿ ಸಾಗಿಕೊಂಡು ಬಂದಿದೆ. ಈ ಚಿತ್ರಗಳನ್ನು ಬಿಡಿಸಲು ವಿಶೇಷವಾಗಿ ಸುಣ್ಣ ಮತ್ತು ಕೆಮ್ಮಣ್ಣನ್ನು ಬಳಸಲಾಗುತ್ತದೆ. ಇವು ನೈಸರ್ಗಿಕ ಸ್ವಯಂ ನಿರ್ಮಿತ ಬಣ್ಣಗಳಾಗಿವೆ.

ಹಚ್ಚೆ ಹಾಕುವುದು ಉತ್ತರ ಕರ್ನಾಟಕದ ಪ್ರದೇಶದಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಮನುಷ್ಯನ ದೇಹದ ಮೇಲೆ ಆತ ಬದುಕಿರುವವರೆಗೆ ಅಳಿಸಿ ಹೋಗದೆ ಉಳಿಯುವ ವಿಶಿಷ್ಟ ಚಿತ್ರಕಲೆಯಾಗಿದೆ. ಹಚ್ಚೆಯನ್ನು ಸಾಮಾನ್ಯವಾಗಿ ಕಿಳ್ಳೆಕ್ಯಾತರು, ಕೊರವರು, ಜೋಗೇರು, ಮೇದಾರರು, ಒಡ್ಡರು, ಹೊಲೆಯರು, ಮಾದಿಗರು, ಗೊಂದಲಿಗರು ಮುಂತಾದವರು ಹಾಕುತ್ತಾರೆ. ಹಚ್ಚೆಯನ್ನುಹಾಕುವ ಕೆಲವು ಮಹಿಳೆಯರು ಬೆಳಗಾವಿಯಲ್ಲಿ ನೆಲೆಸಿದ್ದಾರೆ. ಬೆಳಗಾವಿ ನಗರದ ಹೊರವಲಯದಲ್ಲಿರುವ ಗಣೇಶಪುರದ ಪಕ್ಕದಲ್ಲಿರುವ ಡೊಂಬಾರಿ ಜನಾಂಗದ ಪ್ರದೇಶವು ವಿಶಿಷ್ಟತೆಯನ್ನು ಪಡೆದುಕೊಂಡಿದೆ. ಹೆಚ್ಚಾಗಿ ಡೊಂಬರುಇಲ್ಲಿ ನೆಲೆಸಿದ್ದಾರೆ. ಈ ಜನಾಂಗದಲ್ಲಿ ಎಲ್ಲರೂ ಹಚ್ಚೆಯನ್ನು ಹಾಕಿಸಿಕೊಳ್ಳುತ್ತಾರೆ.

ಕೆಲವು ಪುರುಷರೂ ಹಚ್ಚೆಯನ್ನು ಹಾಕಿಸಿಕೊಳ್ಳುವವರು. ನಗರದ ಗ್ಯಾಂಗವಾಡಿ, ರುಕ್ಮೀಣಿ ನಗರ, ಆನಂದವಾಡಿ, ವಡಗಾವಿಯ ಕೆಲವುಜನರು ಈ ಹಚ್ಚೆಯನ್ನು ಬಿಡಿಸುವಲ್ಲಿ ಪರಿಣತಿಯನ್ನು ಪಡೆದಿದ್ದಾರೆ. ಹಚ್ಚೆ ಹಾಕುವುದನ್ನೇ ಒಂದು ವೃತ್ತಿಯನ್ನಾಗಿ ಮಾಡಿಕೊಂಡು ಕೆಲವರು ಊರುರು ಸುತ್ತುತ್ತಾರೆ. ಹಚ್ಚೆಗೆ ಬಳಸುವ ಮಸಿಯು ಹಲವಾರು ತರಹದ್ದಾಗಿರುತ್ತದೆ. ಒಬ್ಬೊಬ್ಬರು ಒಂದೊಂದು ರೀತಿಯಿಂದ ಮಸಿಯನ್ನು ತಯಾರಿಸುತ್ತಾರೆ.[೨೧] ಅದು ಜನಾಂಗದಿಂದ ಜನಾಂಗಕ್ಕೆ ಬೇರೆ ಬೇರೆಯಾಗಿರುತ್ತದೆ.

ರಂಗೋಲಿಯು ಜನಪದಚಿತ್ರಕಲೆಯಾಗಿ ಕಂಡುಬರುತ್ತದೆ. ವೈವಿಧ್ಯಮಯವಾದ ರಂಗೋಲಿಯನ್ನು ಬಿಡಿಸುವ ಪದ್ಧತಿಯು ಬೆಳಗಾವಿಯಲ್ಲಿ ಕಂಡುಬರುತ್ತದೆ. ಜಾತಿ, ಧರ್ಮ, ದೇವರಿಗೆ ಅನುಗುಣವಾಗಿ ರಂಗೋಲಿಯನ್ನು ಬಿಡಿಸುವುದನ್ನು ಕಾಣಬಹುದು. ದೇವಾಲಯ, ಮನೆಯ ಅಂಗಳ, ಸಭೆ, ಸಮಾರಂಭ ಮುಂತಾದ ಸಂದರ್ಭಗಳಲ್ಲಿ ಇಂದು ರಂಗೋಲಿ ಕಲೆಯು ಮುಖ್ಯ ಆಕರ್ಷಣೆಯಾಗಿದೆ.

ಬೆಳದಿಂಗಳುಹೊಯ್ಯುವುದು : ಬೆಳಗಾವಿ ಪ್ರದೇಶದ ಕಿತ್ತೂರು ಸೀಮೆಯಲ್ಲಿ ವಿಶೇಷವಾಗಿ ಕಂಡುಬರುವ ಕಲೆಯು. ಬೆಳಗಾವಿಯಲ್ಲಿಯ ಕೆಲವು ಜನರು (ಕಿತ್ತೂರ ಭಾಗದಿಂದ ಒಂದು ಬೆಳಗಾವಿಯಲ್ಲಿ ನೆಲೆಸಿದವರು) ಇದನ್ನು ಒಂದು ಧಾರ್ಮಿಕ ಆಚರಣೆಯಾಗಿ ಆಚರಿಸುತ್ತಾರೆ. ಉತ್ತರ ಕರ್ನಾಟಕದ ಬಯಲು ಸೀಮೆಯ ಪ್ರದೇಶಗಳಲ್ಲಿ 'ಬೆಳದಿಂಗಳಪ್ಪನ ಪೂಜೆ' ನಡೆಯುತ್ತದೆ. ಆದರೆ ಅದಕ್ಕೂ ಬೆಳಗಾವಿ ಪ್ರದೇಶದಲ್ಲಿ ಕಂಡುಬರುವ ಬೆಳದಿಂಗಳು ಹೊಯ್ಯುವುದಕ್ಕೂ ಬಹಳಷ್ಟು ವ್ಯತ್ಯಾಸವಿದೆ.

ಬೆಳದಿಂಗಳನ್ನು ಮನೆಯ ಮುಂದಿನ ನೆಲದ ಮೇಲೆ ಅಥವಾ ಕೂಡ್ರುವ ಮಣೆಯ ಮೇಲೆ ಸುಣ್ಣದಿಂದ ಬಿಡಿಸಲಾಗುತ್ತದೆ. ಭಾರತ ಹುಣ್ಣಿಮೆಯ ಮೊದಲು ನಾಲ್ಕು ದಿನದಿಂದ ಹುಣ್ಣಿಮೆಯವರೆಗೆ ಒಟ್ಟು ಐದು ದಿನ ಚಿತ್ರವನ್ನು ಬಿಡಿಸುತ್ತಾರೆ. ಎಲೆ, ಬಳ್ಳಿ, ಕೊಳಲುಬಾವಿ. ಸೂರ್ಯ, ಚಂದ್ರ ಮತ್ತು ರಥವನ್ನು(ಉಳವಿ ಚನ್ನಬಸವೇಶ್ವರ ರಥೋತ್ಸವವು ಭಾರತ ಹುಣ್ಣಿಮೆಯಂದು ಜರುಗುತ್ತದೆ) ಸುಣ್ಣದಿಂದ ಚಿತ್ರಿಸುತ್ತಾರೆ. ಈರೀತಿ ಚಿತ್ರ ಬಿಡಿಸುವ ಪದ್ಧತಿಗೆ ಕೆಲವರು ಹಿನ್ನೆಲೆ ಹೇಳುತ್ತಾರೆ: ಕಲ್ಯಾಣ ಕ್ರಾಂತಿಯಿಂದ ಶರಣರು ಉಳಿವೆಯತ್ತ ಹೋಗುವಾಗ ಬೇರೆ ಬೇರೆ ತಂಡಗಳಾಗಿ ಈ ಮಾರ್ಗದ ಮೂಲಕ ಸಾಗಿದವು. ತಮ್ಮ ತಂಡಗಳಿಗೆ ತಾವು ಸಾಗಿದ ದಾರಿ ಗೊತ್ತಾಗಲು ಈ ರೀತಿಯ ಚಿತ್ರಗಳನ್ನು ಸುಣ್ಣದಿಂದ ಬಿಡಿಸುತ್ತಿದ್ದರು. ಈ ಸಂಕೇತಗಳನ್ನು ಗುರುತಿಸಿಕೊಂಡು ಹಿಂದೆ ಇರುವತಂಡಗಳು ಸಾಗುತ್ತಿದ್ದವಂತೆ. ಶರಣ ಸಂಪ್ರದಾಯದ ದಟ್ಟವಾದ ಪ್ರಭಾವವನ್ನು ಹೊಂದಿದ ಈ ಪ್ರದೇಶದಲ್ಲಿ ಇಂದಿಗೂ ಬೆಳದಿಂಗಳ ಹೊಯ್ಯುವುದನ್ನು ಕಾಣಬಹುದು. ಬೆಳಗಾವಿಯ ಮಹಾಂತೇಶನಗರ, ಆಂಜನೆಯನಗರ, ಖಾಸಭಾಗ ಮುಂತಾದ ಪ್ರದೇಶಗಳಲ್ಲಿ ಕಿತ್ತೂರ ಪ್ರದೇಶದಿಂದ ಬಂದು ನೆಲೆಸಿದ ಕೆಲವು ಮನೆತನಗಳಲ್ಲಿ ಈ ಆಚರಣೆಯು ಕಂಡುಬರುತ್ತದೆ. ಬೆಳದಿಂಗಳ ಸಮಯದಲ್ಲಿ ಈ ಚಿತ್ರಗಳನ್ನು ಬಿಡಿಸುವುದರಿಂದ ಇದಕ್ಕೆ ಬೆಳದಿಂಗಳು ಹೊಯ್ಯುವುದು ಎನ್ನುವ ಹೆಸರು ಬಂದಿದೆ.

ಬಟ್ಟೆಯ ಮೇಲೆಬಿಡಿಸುವ ಚಿತ್ರಕಲೆ ಕಸೂತಿ. ಇದು ಬೆಳಗಾವಿಯಲ್ಲಿ ವಿಶೇಷವಾಗಿ ಕಂಡುಬರುತ್ತದೆ. ನೇಕಾರಿಕೆಯನ್ನೇ ಅವಲಂಬಿಸಿ ಬದುಕುತ್ತಿರುವ ಖಾಸಬಾಗ, ವಡಗಾವಿ, ಶಹಪೂರ ಪ್ರದೇಶಗಳಲ್ಲಿ ಸೀರೆಗೆ ಕಸೂತಿಯನ್ನು ಹಾಕಲಾಗುತ್ತದೆ. ಇಲ್ಲಿಯ ಕಸೂತಿ ಸೀರೆಗಳು ಪ್ರಸಿದ್ಧವಾಗಿವೆ. ಮೊದಲು ಕೈಮಗ್ಗದಿಂದ ಸೀರೆಗಳನ್ನು ನೇಯುತ್ತಿದ್ದರು. ಈಗ ಪಾವರ್‌ಲೂಮಗಳು (ವಿದ್ಯುತ್ ಮಗ್ಗಗಳು) ಬಂದ ಬಳಿಕ ಕಸೂತಿ ಹಾಕುವುದು ಕಡಿಮೆಯಾಗಿದೆ. ಸೂಜಿ ಮತ್ತು ನೂಲು ಉಪಯೋಗಿಸಿ ಕಸೂತಿಗಳನ್ನು ಸೀರೆಗಳ ಮೇಲೆ ಬಿಡಿಸುತ್ತಿದ್ದರು. ಇದರಂತೆಯೇ ದಾರದ ಹೆಣಿಗೆಯಿಂದ ಉಡುಪುಗಳನ್ನು ಸಿದ್ಧಪಡಿಸುವದು ಜನಪದ ಚಿತ್ರಕಲೆಯೇ ಆಗಿದೆ. ಬೆಳಗಾವಿಯಲ್ಲಿ ಈ ರೀತಿಯ ಉಡುಪುಗಳನ್ನು ಸಿದ್ಧಪಡಿಸುವ ಹಲವಾರು ಕುಟುಂಬಗಳು ಕಂಡುಬರುತ್ತವೆ. ಬೇರೆ ಬೇರೆ ಸ್ಥಳಗಳಿಂದ ಬಂದು ಬೆಳಗಾವಿಯಲ್ಲಿಯೇ ನೆಲೆಸಿದವರು ಹೆಚ್ಚಾಗಿದ್ದಾರೆ. ವಿಶೇಷವಾಗಿ ಟಿಬೆಟಿಯನ್ನರು ಈ ಕಲೆಯಲ್ಲಿ ಹೆಚ್ಚುಪರಿಣಿತಿಯನ್ನು ಪಡೆದುಕೊಂಡಿದ್ದಾರೆ.

ಕೌದಿ ಉತ್ತರ ಕರ್ನಾಟಕದ ವಿಶಿಷ್ಟ ಜನಪದ ಚಿತ್ರಕಲೆ. ಹೊದಿಕೆಯ ಮೇಲೆ ಬೇರೆ ಬೇರೆ ಬಣ್ಣಗಳ(ಬಟ್ಟೆಗಳ) ಬೇರೆ ಬೇರೆ ಆಕಾರದ ಬಟ್ಟೆಗಳನ್ನು ತೇಪೆ ಹಾಕಿ ಆಕರ್ಷಕವಾಗಿ ಕಾಣುವಂತೆ ಮಾಡಿ ಹೊಲೆಯುವ ಕಲೆಯು ವಿಶಿಷ್ಟವಾದ ಕಲೆಯಾಗಿದೆ. ಬೆಳಗಾವಿಯ ಖಾಸಬಾಗ, ವಡಗಾವಿ, ಹಳೆ ಬೆಳಗಾವಿ, ಮಠಗಳಲ್ಲಿ, ಬಸವನಗಲ್ಲಿ ಮುಂತಾದ ಪ್ರದೇಶಗಳಲ್ಲಿಯ ವಯಸ್ಸಾದ ಮಹಿಳೆಯರು ಈ ಕೌದಿಗಳನ್ನು ತಯಾರಿಸುವುದನ್ನು ಕಾಣಬಹುದು. ಇತ್ತಿತ್ತಲಾಗಿ ಬಹಳಷ್ಟು ಕಡಿಮೆಯಾಗಿದ್ದರೂ ಹಳೆಯ ಕೌದಿಗಳು ಸಾಮಾನ್ಯವಾಗಿ ಎಲ್ಲರ ಮನೆಗಳಲ್ಲಿ ಕಂಡುಬರುತ್ತವೆ. ಚಳಿಗಾಲದಲ್ಲಿ ಇವುಗಳ ಉಪಯೋಗ ಹೆಚ್ಚಾಗಿರುತ್ತದೆ.

**ಆಧುನಿಕ ಚಿತ್ರಕಲೆ :** ಚಿತ್ರಕಲೆಯು ಆಧುನಿಕ ಕಾಲಕ್ಕೆ ಬಂದಾಗ ಮಹತ್ವದ ಬೆಳವಣಿಗೆಯನ್ನು ಪಡೆದದ್ದು ಕಂಡುಬರುತ್ತದೆ. ಬ್ರಿಟಿಷರ ಕಾಲದ ಶಿಕ್ಷಣ ಪದ್ಧತಿಯಲ್ಲಿ ಪ್ರಾಥಮಿಕ, ಮಾಧ್ಯಮಿಕ ಶಿಕ್ಷಣ ಕ್ರಮದಲ್ಲಿ ಕಡ್ಡಾಯವಾಗಿ ಚಿತ್ರಕಲೆಯನ್ನು ಕಲಿಸುವ ವ್ಯವಸ್ಥೆ ಇತ್ತು. ಚಿತ್ರಕಲೆಯಲ್ಲಿ ಬೆಳಗಾವಿ ಜಿಲ್ಲೆಯ ಕೊಡುಗೆ ಮಹತ್ವದ್ದಾಗಿದೆ. ರಾಷ್ಟ್ರ ಅಂತರಾಷ್ಟ್ರೀಯ ಮಟ್ಟದಲ್ಲಿ ಹೆಸರು ಮಾಡಿದ ಹಲವಾರು ಜನ ಚಿತ್ರಕಲಾವಿದರು ಬೆಳಗಾವಿಜಿಲ್ಲೆಯ ಬೇರೆ ಬೇರೆ ಪ್ರದೇಶಗಳಲ್ಲಿ ಕಂಡುಬರುತ್ತಾರೆ. ಅವರಲ್ಲಿ ಜಿ. ಎಸ್. ದಂಡಾವತಿಮಠ, ಮುರುಗೆಪ್ಪ ಚಿಟ್ಟಿ, ಭೀಮರಾಯ ಮುರುಗೋಡ, ನಾಡಗೌಡ ಮುಂತಾದವರು ಚಿತ್ರಕಲೆಯಲ್ಲಿ ಬೆಳಗಾವಿಯ ಕೀರ್ತಿಯನ್ನು ಹರಡಿದ್ದಾರೆ.

ಬೆಳಗಾವಿ ನಗರದಲ್ಲಿ ಚಿತ್ರಕಲಾವಿದರ ಏಕವ್ಯಕ್ತಿ, ಸಾಮೂಹಿಕ ಚಿತ್ರಕಲಾ ಪ್ರದರ್ಶನಗಳು, ಕಲಾಮೇಳಗಳು, ಕಲಾವಿದರ ಕಾರ್ಯಾಗಾರಗಳು, ಪ್ರಾತ್ಯಕ್ಷಿಕೆಗಳು, ನಿರಂತರವಾಗಿ ನಡೆಯುತ್ತಲೇ ಬಂದಿವೆ. ಕಲಾವಿದರು ಒಂದೆಡೆ ಸೇರಿ, ಸಂಘ–ಸಂಸ್ಥೆಗಳನ್ನು ಕಟ್ಟಿಕೊಂಡು ಸ್ಫೂರ್ತಿಯಿಂದ ವಿವಿಧ ಕಲಾ ಚಟುವಟಿಕೆಗಳಲ್ಲಿ ನಿರತರಾಗಿದ್ದಾರೆ.

ಹೀಗಾಗಿ ಬೆಳಗಾವಿಯಲ್ಲಿ ಚಿತ್ರಕಲೆಯು ವೈವಿಧ್ಯಮಯವಾಗಿ ಮೂಡಿಬಂದಿದೆ. ಹಲವಾರು ಜನ ಕಲಾವಿದರಿಗೆ ಬೆಳಗಾವಿ ಸ್ಫೂರ್ತಿಯ ನೆಲೆಯಾಗಿದೆ.

ಚಿತ್ರಕಲಾವಿದರಿಗೆ ಧನಸಹಾಯ ನೀಡಿ ಶಿಕ್ಷಣವನ್ನು ಪಡೆಯಲು ಪ್ರೋತ್ಸಾಹವನ್ನು ನೀಡಲು ಬೆಳಗಾವಿಯಲ್ಲಿ ಹಲವಾರು ಸಂಘ-ಸಂಸ್ಥೆಗಳು ಮುಂದೆ ಬಂದವು. ಅವುಗಳಲ್ಲಿ ಶಿರಸಂಗಿ ಟ್ರಸ್ಟ್ ಫಂಡನ ಸ್ಕಾಲರ್‌ಶಿಫ್ ಪಡೆದು ಶ್ರೀ ಎಂ. ಎ. ಚೆಟ್ಟಿಯವರು ತಮ್ಮ ಕಲಾ ಶಿಕ್ಷಣವನ್ನು ಪಡೆದರು. ಚೆಟ್ಟಿಯವರು ಮ್ಯಾಟ್ರಿಕ್ ಪರೀಕ್ಷೆಯನ್ನು ೧೯೨೪ರಲ್ಲಿ ಮುಗಿಸಿ ಮುಂದೆ ಚಿತ್ರ ಕಲಾವಿದನಾಗಬೇಕೆಂದು ನಿರ್ಧರಿಸಿ ಬೆಳಗಾವಿಗೆ ಬಂದರು.[೩೨] ಆಗ ಬೆಳಗಾವಿಯಲ್ಲಿ ಚಿತ್ರಕಲೆಯ ಶಿಕ್ಷಣ ನೀಡುವ ಯಾವುದೇ ಕಾಲೇಜಿಗಳು ಇರಲಿಲ್ಲ. ಹೀಗಾಗಿ ಮುಂಬಯಿಗೆ ಹೋಗುವ ಸಂಕಲ್ಪವನ್ನು ಮಾಡಿದರು. ಆಗ ಶಿರಸಂಗಿ ಟ್ರಸ್ಟ್ ಫಂಡಿನಿಂದ ಸ್ಕಾಲರ್‌ಶಿಪ್ ಪಡೆದು ಮುಂಬಯಿಯ ಜೆ.ಜೆ. ಸ್ಕೂಲ ಸೇರಿ ಸಮಗ್ರ ಆರು ವರ್ಷಗಳ ಕಾಲ ಡ್ರಾಯಿಂಗ ಹಾಗೂ ಪೇಂಟಿಂಗದಲ್ಲಿ ಅಭ್ಯಾಸ ಮಾಡಿ ಡಿಪ್ಲೋಮಾ ಪದವಿ ಪಡೆದರು.

ಲಿಂಗರಾಜರ ತೈಲ ಚಿತ್ರ : ಶಿರಸಂಗಿ ಟ್ರಸ್ಟ್ ಫಂಡ್ ಸ್ಕಾಲರ್‌ಶಿಪ್ ಹಣವನ್ನು ಪಡೆದು ಶಿಕ್ಷಣ ಮುಗಿಸಿದ ಚೆಟ್ಟಿಯವರು ಪಡೆದುಕೊಂಡ ಹಣವನ್ನು ಹಿಂದಿರುಗಿಸಲು ಸಾಧ್ಯವಾಗಲಿಲ್ಲ. ಮನೆಯಲ್ಲಿ ಬಡತನದ ಪರಿಸ್ಥಿತಿ ಕಾಡುತ್ತಿತ್ತು. ಹೀಗಾಗಿ ಅವರು ಟ್ರಸ್ಟ್ ಕಮೀಟಿಗೆ ಪತ್ರ ಬರೆದು 'ನಾನು ಹಿಂತಿರುಗಿಸಬೇಕಾದ ಹಣದಲ್ಲಿಯೇ ಶ್ರೀ ಲಿಂಗರಾಜರ ದೊಡ್ಡ ತೈಲ ಚಿತ್ರವನ್ನು ಬಿಡಿಸಿಕೊಡುವುದಾಗಿ ತಿಳಿಸಿದರು. ಅದಕ್ಕೆ ಟ್ರಸ್ಟ್‌ದವರು ಒಪ್ಪಿಗೆ ಸೂಚಿಸಿದರು.[೩೩] ಅದರಂತೆ ಚೆಟ್ಟಿಯವರು ೪x೩ ಅಳತೆಯ ಶ್ರೀ ಶಿರಸಂಗಿ ಲಿಂಗರಾಜರ ತೈಲ ಭಾವ ಚಿತ್ರವನ್ನು ತೆಗೆದುಕೊಟ್ಟರು. ಅದು ಇಂದಿಗೂ ಕೂಡ ಟ್ರಸ್ಟ್ ಕಛೇರಿಯಲ್ಲಿ ಇದೆ. ಇಷ್ಟು ವರ್ಷಗಳಾದರೂ ಬಣ್ಣ ಮಾಸದೇ ಚಿತ್ರ ಕಂಗೊಳಿಸುತ್ತಿದೆ. ಇದೊಂದು ಅತ್ಯುತ್ತಮ ಭಾವಚಿತ್ರವಾಗಿದೆ. ಲಿಂಗರಾಜರ ತ್ಯಾಗ ಮೌಲ್ಯ ಕಣ್ಣುಗಳಲ್ಲಿ ಎದ್ದು ಬರುವಂತಿದೆ. ಮುಖದಲ್ಲಿ ಮೀಸೆ ದಪ್ಪವಾಗಿದ್ದರೂ ಕಳೆ ಮಾತ್ರ ಶಾಂತವಾಗಿದೆ. ಕಣ್ಣುಗಳು ಜೀವತುಂಬಿ ಬಂದಿವೆ.ಕಿವಿಯಲ್ಲಿ ಚುಚ್ಚಿದ ಮುತ್ತಿನೋಲೆ, ಜರಿಪಟ್ಟಿಯ ರುಮಾಲು ತಲೆಯ ಮೇಲೆ ಎದ್ದು ಕಾಣುವಂತಾಗಿದೆ. ನೊಸಲಿಗೆ ವಿಭೂತಿ, ಮುಖದಲ್ಲಿ ಹಿತಮಿತವಾದ ನೆರಳು ಬೆಳಕಿನ ವಿಭಜನೆ ಇದೆ. ಯಾವುದೇ ಬ್ರಶ್‌ಗಳ ನೇರ ಹೊಡೆತವಿಲ್ಲದೆ ಬಣ್ಣಗಳನ್ನು ಬೆರೆಸಿ ಮೃದುವಾಗಿ ತೀಡಿಸಿದ್ದಾರೆ. ಈ ಚಿತ್ರವನ್ನು ಋಣಮುಕ್ತದ ಭಾವನೆಯಿಂದ ಮಾಡಿದ್ದರಿಂದ ಕಲಾವಿದನ ತೃಪ್ತಿಯನ್ನು ಈ ಚಿತ್ರದಲ್ಲಿ ಕಾಣಬಹುದು. ಅಂತೆಯೇ ಅಂದಿನ ದಿನಗಳಲ್ಲಿ ಈ ಚಿತ್ರವು ಶ್ರೇಷ್ಠ ಮಟ್ಟದಲ್ಲಿ ಮೂಡಿ ಬಂದಿತು.

ಚೆಟ್ಟಿಯವರು ಚಿತ್ರಿಸಿದ ಮತ್ತೊಂದು ಮಹತ್ವದ ಚಿತ್ರ ಶ್ರೀ ರುದ್ರಾಕ್ಷಿಮಠದ ಶ್ರೀಗಳಾದ ಡಾ. ಶಿವಬಸವ ಮಹಾಸ್ವಾಮಿಗಳ ಚಿತ್ರ.[೩೪] ಈ ಚಿತ್ರದಲ್ಲಿ ಎಲ್ಲ ವಸ್ತುಗಳನ್ನು ವಿವರವಾಗಿ ಚಿತ್ರಿಸಿದ್ದಾರೆ. ಸಿಂಹಾಸನಾರೂಢರಾದ

ಸ್ವಾಮಿಗಳ ಮುಖದಲ್ಲಿ ತೇಜಸ್ಸು, ಮಂದಹಾಸ ಹೊರಸೂಸುವಂತಿದೆ. ಹಿನ್ನೆಲೆಯಲ್ಲಿ ಕಡುಪಾದ ಬಣ್ಣದ ಪರದೆಯನ್ನು ಚಿತ್ರಿಸಿದರೂ ಅದರ ವರ್ಣ ಆಕೃತಿಯನ್ನು ಯಾವ ರೀತಿಯಿಂದಲೂ ಮರೆಮಾಡಿಲ್ಲ. ಇದು ಕಲಾವಿದನ ಕೈಚಳಕ. ಸ್ವಾಮೀಜಿಯವರ ಬಟ್ಟೆಯ ಶುಭ್ರತೆ ಹಾಗೂ ಮೈವಳಿಕೆ ನೈಜತೆಯಿಂದ ಕೂಡಿದೆ. ನೆಲಹಾಸುಗೆಯ ಮೇಲಿನ ನಕ್ಷೆಯನ್ನು ಸೌಮ್ಯವಾಗಿ ಚಿತ್ರಿಸಿದ್ದಾರೆ. ಸಿಂಹಾಸನ, ಕೈಯಲ್ಲಿಯ ಬೆತ್ತ, ಹುಲಿಚರ್ಮ, ಹಣ್ಣುಗಳು ನೈಜತೆ ಹಾಗೂ ಸೂಕ್ಷ್ಮತೆಯಿಂದ ಚಿತ್ರಿಸಲ್ಪಟ್ಟಿವೆ. ಚಿತ್ರದಲ್ಲಿ ಬಣ್ಣಗಳ ಮೃದು ಮೇಳಾಪವಿದೆ.ಸಂಪೂರ್ಣ ಅಕಾಡೆಮಿಕ್ ಶೈಲಿಯಿಂದ ಕೂಡಿದ ಈ ಚಿತ್ರವು ೭ x ೩. ೬ ಆಕಾರದಲ್ಲಿದೆ.

ಶ್ರೀ ಚೆಟ್ಟಿಯವರು ಹಲವಾರು ವೈವಿಧ್ಯಮಯವಾದ ಚಿತ್ರಗಳನ್ನು ಚಿತ್ರಿಸಿದ್ದಾರೆ. ಅವರ ಚಿತ್ರಗಳು ಬೆಳಗಾವಿಯಲ್ಲಿ ಪ್ರದರ್ಶನಗೊಂಡು ಚಿತ್ರಕಲಾವಿದರಿಗೆ ಸ್ಫೂರ್ತಿಯನ್ನು ನೀಡಿರುತ್ತವೆ. ಇವರು ಪೆನ್ಸಿಲ್ ಮಾಧ್ಯಮದ ರೇಖಾ ಚಿತ್ರಗಳು, ಇಂಕ್ ಮಾಧ್ಯಮದ ರೇಖಾ ಚಿತ್ರಗಳು, ಭಾವಚಿತ್ರಗಳು, ನಿಸರ್ಗ ಚಿತ್ರಗಳು, ಪ್ರಾಣಿ, ಪಕ್ಷಿಗಳ ಚಿತ್ರಗಳು, ಸ್ಥಿರರೂಪ ಚಿತ್ರಗಳು ಮುಂತಾದ ಪ್ರಕಾರಗಳಲ್ಲಿ ಮಹತ್ವದ ಚಿತ್ರಗಳನ್ನು ಬಿಡಿಸಿದ್ದಾರೆ. ಹನ್ನೆರಡನೆಯ ಶತಮಾನದ ಬಹಳಷ್ಟು ಶರಣ ಶರಣೆಯರ ಚಿತ್ರಗಳನ್ನು ಬಿಡಿಸಿದ್ದಾರೆ. ಬೌದ್ಧಧರ್ಮದ ಚಿತ್ರಗಳು, ಸಾಮಾಜಿಕ ಕಾಲ್ಪನಿಕ ಚಿತ್ರಗಳು ಹೀಗೆ ಇವರ ಚಿತ್ರಗಳು ಎಲ್ಲ ವಲಯವನ್ನು ಪ್ರವೇಶಿಸಿವೆ.

ಚೆಟ್ಟಿಯವರ ಸಮಕಾಲೀನರಾದ ಶ್ರೀ ಸಿ.ವಿ.ಕಾರಡಗಿಯವರು ಬೈಲಹೊಂಗಲ ತಾಲೂಕಿನ ಗುರ್ಲಹೊಸೂರಿನವರಾದರೂ ತಮ್ಮ ಬಾಲ್ಯ ಶಿಕ್ಷಣವನ್ನು ಬೆಳಗಾವಿಯಲ್ಲಿ ಮುಗಿಸಿದರು. ಬಾಲ್ಯದಲ್ಲಿಯೇ ಚಿತ್ರಕಲೆಯ ಬಗೆಗೆ ಆಸಕ್ತಿಯನ್ನು ಬೆಳೆಸಿಕೊಂಡು ಮುಂದೆ ಚಿತ್ರಕಲಾ ಅಭ್ಯಾಸಕ್ಕಾಗಿ ಮುಂಬಯಿಯ ಸರ್ ಜೆ.ಜೆ. ಕಲಾ ಶಾಲೆಯನ್ನು ಸೇರಿ ಡಿಪ್ಲೋಮಾ ಇನ್ ಪೇಂಟಿಂಗ್ ಪದವಿಯನ್ನು ಪಡೆದರು. ಡಿಪ್ಲೋಮಾ ಮುಗಿಸಿದ ನಂತರ ಬೆಳಗಾವಿಯ ಸರದಾರ್ ಹೈಸ್ಕೂಲಿನಲ್ಲಿ ಡ್ರಾಯಿಂಗ್ ಶಿಕ್ಷಕರಾಗಿ ಕೆಲಸ ನಿರ್ವಹಿಸಿದರು. ಬಿ.ಇಡ್ ಕಾಲೇಜಿಗೂ ವಾರಕ್ಕೆ ಒಂದು ಸಾರಿ ಡ್ರಾಯಿಂಗ್ ಕಲಿಸಲು ಹೋಗುತ್ತಿದ್ದರು. ಇವರ ಚಿತ್ರಗಳು ರಾಷ್ಟ್ರಮಟ್ಟದಲ್ಲಿ ಪ್ರಸಿದ್ಧಿಯನ್ನು ಪಡೆದುಕೊಂಡಿದ್ದವು.

ಕಾರಡಗಿಯವರು ನೈಜಶೈಲಿಯಲ್ಲಿ ಭಾವಚಿತ್ರ, ಸಂಯೋಜನಾ ಚಿತ್ರ ಹಾಗೂ ನಿಸರ್ಗ ಚಿತ್ರಗಳನ್ನು ತೈಲ ಹಾಗೂ ಜಲವರ್ಣಗಳಲ್ಲಿ ಚಿತ್ರಿಸಿದ್ದಾರೆ. ಇವರ ಸಂಯೋಜನಾ ಚಿತ್ರಗಳಲ್ಲಿಯ ಆಕೃತಿಗಳು ಅತ್ಯಂತ ಶಕ್ತಿಯುತವಾದವು. ಇವರು ಬೆಳಗಾವಿಗೆ ಬಂದ ಮೇಲೆ ವಿದ್ಯಾರ್ಥಿಗಳಲ್ಲಿ ಚಿತ್ರಕಲೆಯ ಬಗೆಗೆ ಆಸಕ್ತಿ ಮೂಡುವಂತೆ ಮಾಡಿದರು.

ಅಂತರಾಷ್ಟ್ರೀಯ ಖ್ಯಾತಿಯನ್ನು ಪಡೆದ ಕಲಾವಿದ ಡಿ.ಜೆ. ಬಡಿಗೇರರವರು ಬೆಳಗಾವಿಯ ಲಿಂಗರಾಜ ಟ್ರಸ್ಟ ದಿಂದ ಧನಸಹಾಯ ಪಡೆದು ಎರಡು ವರ್ಷಗಳ ಕಾಲ ಲಂಡನ್ನಿನಲ್ಲಿ ಅಭ್ಯಾಸ ಮಾಡಿ ಗ್ರಾಜ್ಯುಯೇಟ್ ಆಫ್

ರಾಯಲ್ ಅಕಾಡೆಮಿ ಆಫ್ ಆರ್ಟ್ ಎಂಬ ಪದವಿಯನ್ನು ಪಡೆದರು. ಲಂಡನ್ನಿನಲ್ಲಿದ್ದಾಗ ಇವರ ಹಲವಾರು ಕಲಾ ಪ್ರದರ್ಶನಗಳು ಏರ್ಪಟ್ಟು ಅಂತರಾಷ್ಟ್ರೀಯ ಕಲಾವಿದರಿಂದ ಪ್ರಶಂಸೆಗೆ ಒಳಗಾಗಿದ್ದವು. ಇವರ ಮುನ್ನೂರು ಚಿತ್ರಗಳ ಏಕವ್ಯಕ್ತಿ ಕಲಾಪ್ರದರ್ಶನವನ್ನು ಲಂಡನ್ನಿನ ಬ್ಲೂಮ್ಸ್‌ಬರಿ ಗ್ಯಾಲರಿಯಲ್ಲಿ ಏರ್ಪಡಿಸಲಾಗಿತ್ತು. ಅಂತರ್ ರಾಷ್ಟ್ರೀಯ ಖ್ಯಾತ ಕವಿ ರುದಿಯಾರ್ಡ ಕಿಪ್ಲಿಂಗ್ ಈ ಕಲಾಕೃತಿಗಳನ್ನು ಉದ್ಘಾಟನೆ ಮಾಡಿ ಚಿತ್ರಗಳನ್ನು ನೋಡಿ ಪ್ರಶಂಸೆ ವ್ಯಕ್ತಪಡಿಸಿದರು. ಮುಂದೆ ಇವರ ಕಲಾಕೃತಿಗಳು 'ಇಂಡಿಯಾ ಹೌಸ' ನಲ್ಲಿ ಪ್ರದರ್ಶನಗೊಂಡವು. ಅಲ್ಲಿ ಇವರ ಎಷ್ಟೋ ಕೃತಿಗಳು ಮಾರಲ್ಪಟ್ಟವು. ಇವರ ಅತ್ಯುತ್ತಮ ಕಲಾಕೃತಿಗಳಲ್ಲಿ ಒಂದಾದ ಕ್ರಿಯೇಶನ್ ಆಫ್ ತಿಲೋತ್ತಮೆ' ಎಂಬ ಚಿತ್ರ ಬಹಳಷ್ಟು ಜನರ ಮೆಚ್ಚುಗೆಯನ್ನು ಪಡೆದುಕೊಂಡಿತ್ತು. ಇಂಗ್ಲೆಂಡಿನ ರಾಣಿ ಮೇರಿಯವರು ತಮಗಾಗಿ ಆ ಚಿತ್ರವನ್ನು ಕೊಂಡುಕೊಂಡರು. ಅದು ಇಂದಿಗೂ ಬಕಿಂಗ್ ಹ್ಯಾಮ್ ಅರಮನೆಯ ಗೋಡೆಯ ಮೇಲೆ ಕಂಗೊಳಿಸುತ್ತಿದೆ.[೩೫] ಮುಂದೆ ಫ್ರಾನ್ಸ್ ಮತ್ತು ಇಟಲಿಯಲ್ಲಿ ತಮ್ಮ ಕಲಾಪ್ರದರ್ಶನವನ್ನು ಏರ್ಪಡಿಸಿ ಪ್ರಚಾರಗೊಳಿಸಿದರು. ೧೯೩೧ ರಲ್ಲಿ ಭಾರತಕ್ಕೆ ಮರಳಿ ಮುಂಬಯಿಯಲ್ಲಿ ಹೊಸ ಮಾದರಿಯ ಕಲಾ ಶಾಲೆ 'ನೂತನ ಕಲಾಮಂದಿರ'ವನ್ನು ಸ್ಥಾಪಿಸಿದರು. ಮುಂದೆ ಕಲಾವಿದರ ಸಂಘಟನೆಯನ್ನು ಮಾಡಿ ಬೆಳಗಾವಿಯಲ್ಲಿ ತಮ್ಮ ಕಲಾಕೃತಿಗಳ ಪ್ರದರ್ಶನವನ್ನುಏರ್ಪಡಿಸಿದರು.

ಬೆಳಗಾವಿಯಲ್ಲಿ ಅನೇಕ ಕಲಾ ಸಂಘಗಳು ಸ್ಥಾಪನೆಗೊಂಡು ಚಿತ್ರಕಲೆಯನ್ನು ಪೋಷಿಸಿಕೊಂಡು ಬಂದಿವೆ. ಅವುಗಳನ್ನೀಗ ಒಂದೊಂದಾಗಿ ಪರಿಶೀಲಿಸಬಹುದು.

ಬೆಳಗಾವ ಆರ್ಟ ಸೊಸೈಟಿ: ೨೦ ರ ದಶಕದಲ್ಲಿ ಬೆಳಗಾವಿಯಲ್ಲಿ ಮಹತ್ವದ ಕಲಾ ಸಂಘ ಸಂಸ್ಥೆಗಳು ಹುಟ್ಟಿಕೊಂಡವು. ಅದರಲ್ಲಿ 'ಬೆಳಗಾವ ಆರ್ಟ ಸೊಸೈಟಿ' ಮಹತ್ವದ್ದಾಗಿದೆ. ಅದರಲ್ಲಿ ಹಿರಿಯ ಕಲಾವಿದರಾದ ಶ್ರೀ ಸಾಗರದತ್ತ ಪಾಟೀಲ. ಎಸ್.ಎಂ. ಖಂಡೆ, ಶ್ರೀ ಅನಗೋಳಕರ, ಶ್ರೀ ಎಸ್. ವಾಯ್ ನಾಯಕ, ಶ್ರೀ ಬಿ.ಕೆ.ಹುಬ್ಬಳ್ಳಿ, ಶ್ರೀ ಪುಂಡಲಿಕ ಪಾಟೀಲ, ಶ್ರೀ ರೇಡೇಕರ, ಶ್ರೀಮತಿ ಇಂದಿರಾಬಾಯಿ ಕುಲಕರ್ಣಿ ಮುಂತಾದವರು ಪ್ರಮುಖರಾಗಿದ್ದರು. ಇವರೆಲ್ಲ ಸೇರಿ ಹಲವಾರು ವಿಚಾರ ಗೋಷ್ಠಿಗಳನ್ನು ಏರ್ಪಡಿಸಿ ಚಿತ್ರಕಲೆಯ ಬೆಳವಣಿಗೆಗಾಗಿ ಶ್ರಮಿಸಿದರು. ಈ ಸಂಸ್ಥೆಯು ನಿಸರ್ಗ ಚಿತ್ರಣಕ್ಕಾಗಿ ಸುಂದರ ತಾಣಗಳಿಗೆ ಪ್ರವಾಸವನ್ನು ಕೈಕೊಳ್ಳುತ್ತ ಅತ್ಯುತ್ತಮವಾದ ಚಿತ್ರಗಳನ್ನು ರಚಿಸಿ ಅವುಗಳ ಪ್ರದರ್ಶನವನ್ನು ಹಮ್ಮಿಕೊಂಡು ಜನಸಾಮಾನ್ಯರಲ್ಲಿ ಕಲಾಪ್ರಜ್ಞೆ ಮತ್ತು ಪರಿಸರದ ಬಗೆಗೆ ಜಾಗೃತಿಯನ್ನುಂಟು ಮಾಡಿದರು.

ಈ ಸಂಸ್ಥೆಯ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದ ಶ್ರೀ ಪುಂಡಲೀಕ ಪಾಟೀಲರು ಸುಮಾರು ಕಾಲು ಶತಮಾನ ಕಲಾಸೇವೆಯಲ್ಲಿ ನಿರತರಾಗಿದ್ದರು. ಅನೇಕ ಜಲವರ್ಣ ಮತ್ತು ತೈಲವರ್ಣ ಚಿತ್ರಗಳನ್ನು ಬಿಡಿಸಿ ಪ್ರಸಿದ್ಧ ಕಲಾವಿದರಾಗಿದ್ದರು. ಹಲವಾರು ಕಾದಂಬರಿಗಳಿಗೆ ಪುಸ್ತಕಗಳಿಗೆ ಮುಖ ಚಿತ್ರಗಳನ್ನು, ನಿಯತಕಾಲಿಕ ಪತ್ರಿಕೆಗಳಲ್ಲಿ

ಸಾಂದರ್ಭಿಕ ಚಿತ್ರಗಳನ್ನು, ವ್ಯಂಗ್ಯ ಚಿತ್ರಗಳನ್ನು ಬರೆದು ಜನ ಮೆಚ್ಚುಗೆಯನ್ನು ಪಡೆದಿದ್ದರು. ಇವರ ನೈಸರ್ಗಿಕ ಚಿತ್ರಗಳಿಗೆ ಹಲವಾರು ಪ್ರಶಸ್ತಿಗಳು ಲಭ್ಯವಾಗಿವೆ. ಒನಕೆಯ ಓಬವ್ವನ ಚಿತ್ರ ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ಸಂಸ್ಥೆಯ ವತಿಯಿಂದ ಹಲವಾರು ಪ್ರಸಿದ್ಧ ಕಲಾವಿದರನ್ನು ಸತ್ಕರಿಸಿ ಕಲೆಗೆ ಪ್ರೋತ್ಸಾಹವನ್ನು ನೀಡಿದ್ದಾರೆ. ಜನಸಾಹಿತ್ಯ ಪೀಠವನ್ನು ಬೆಳಗಾವಿಯಲ್ಲಿ ಪ್ರಾರಂಭಿಸಿ ಅದರ ಮೂಲಕ ಹಲವಾರು ಕೃತಿಗಳನ್ನು ಪ್ರಕಾಶಗೊಳಿಸಿದ್ದಾರೆ.

ಕರ್ನಾಟಕ ಆರ್ಟ ಸೊಸೈಟಿ : ಬೆಳಗಾವಿಯ ಲಿಂಗರಾಜ ಕಾಲೇಜಿನ ಪ್ರಾಚಾರ್ಯರಾದ ಡಾ. ಎಸ್. ಸಿ. ನಂದಿಮಠರ ನೇತೃತ್ವದಲ್ಲಿ ಡಿ. ಜಿ. ಬಡಿಗೇರ ಅವರು ಕರ್ನಾಟಕ ಆರ್ಟ ಸೊಸೈಟಿಯನ್ನು ಸ್ಥಾಪಿಸಿದರು. ಇದು ಹಲವಾರು ಕಲಾವಿದರಿಗೆ ಸ್ಫೂರ್ತಿಯ ನೆಲೆಯಾಯಿತು. ಇದರ ಮೂಲಕ ಅನೇಕ ಕಲಾ ಚಟುವಟಿಕೆಗಳನ್ನು ಆರಂಭಿಸಿದರು. ಇವರ ಅತ್ಯುತ್ತಮವಾದ ಕಲಾಕೃತಿಗಳೆಂದರೆ ದಿ ಟೆಂಪ್ಟೇಶನ್ ಆಫ್ ಬುದ್ಧ, ತಿಲೋತ್ತಮೆ, ಲಂಬಾಣಿ ಹುಡಗಿ, ಸಾವಿತ್ರಿ ಮತ್ತು ಸತ್ಯವಾನ್, ನಳ ದಮಯಂತಿ ಮತ್ತು ಮೂಕ, ತಾಜಮಹಲ್ ತಾಜಿನ ಹಿಂದಿನ ಭಾಗ, ತಾಜಕ್ಕೆ ದಾರಿ, ವಿಜಯನಗರ, ಭಿಕ್ಷುಕ ಮುಂತಾದವುಗಳು ಅತ್ಯುತ್ತಮ ಕಲಾಕೃತಿಗಳಾಗಿವೆ. ಇವರು ತೈಲ, ಜಲ, ಸೀಸ ಇಂಡಿಯನ್ ಇಂಕ್ ಮುಂತಾದ ಮಾಧ್ಯಮಗಳಲ್ಲಿ ಚಿತ್ರ ರಚಿಸಿದ್ದಾರೆ.

(PALETTE ARTISTS GROPE): ಬೆಳಗಾವಿಯ ಕೆಲವು ಉತ್ಸಾಹಿ ತರುಣ ಕಲಾವಿದರು ಒಂದಡೆ ಸೇರಿ "ಪೆಲೆಟ್ ಆರ್ಟಿಸ್ಟಸ್ ಗ್ರುಪ್" (PALETTE ARTISTS GROPE) ಎಂಬ ಗುಂಪು ಕಟ್ಟಿಕೊಂಡು ಚಿತ್ರಕಲಾ ಚಟುವಟಿಕೆಯಲ್ಲಿ ತೊಡಗಿ ಬೆಳಗಾವಿಯಲ್ಲಿ ಚಿತ್ರಕಲಾ ಕ್ಷೇತ್ರವು ಬೆಳೆಯಲು ಕಾರಣರಾದರು.

ಚಿತ್ರಕಲಾವಿದರೆಲ್ಲ ಅತ್ಯುತ್ತಮವಾದ ಚಿತ್ರಕಲಾ ಕೃತಿಗಳನ್ನು ರಚಿಸಿ ಅವುಗಳಿಗೆ ಅಚ್ಚುಕಟ್ಟಾಗಿ ತಾವೇ ಫ್ರೇಂ ಹಾಕಿ ಬೆಳಗಾವಿಯ ವಾಙ್ಮಯ ಚರ್ಚಾಮಂಡಳದಲ್ಲಿ ಚಿತ್ರಕಲಾ ಪ್ರದರ್ಶನವನ್ನು ಏರ್ಪಡಿಸಿದರು. PALETTE ART EXHIBITION ಎಂದು ಪ್ರಸಿದ್ಧಿಯನ್ನು ಪಡೆದುಕೊಂಡ ಈ ಕಲಾ ಪ್ರದರ್ಶನವು ಸತತವಾಗಿ ಒಂಬತ್ತು ದಿನಗಳವರೆಗೆ ಬೆಳಗಾವಿಯಲ್ಲಿ ನಡೆಯಿತು.[೨೬] ಪ್ರತಿದಿನವು ಸಾವಿರಾರು ಜನರು ಈ ಕಲಾಪ್ರದರ್ಶನವನ್ನು ವೀಕ್ಷಿಸಿದರು. ಕಲಾವಿದರಾದ ಶ್ರೀ ಶಿವ ಹಿರೇಮಠ, ಸುಭಾಸ ಬೊಂಗಾಳೆ, ಅಶೋಕ ಪರಮೋಜಿ, ಎಮ್.ಟಿ. ಚೌಧರಿ, ಹಜರತಬಾಯಿ ದೇಸಾಯಿ ಮುಂತಾದ ತರುಣರ ಅತ್ಯುತ್ತಮವಾದ ಪರಿಣಾಮಕಾರಿಯಾದ ಚಿತ್ರಗಳು ಪ್ರದರ್ಶನಗೊಂಡವು.

ಕಲೆಯು ನಾಲ್ಕು ಗೋಡೆಗಳ ಮಧ್ಯದಲ್ಲಿ ಪ್ರದರ್ಶನಗೊಳ್ಳಬಾರದು ಅದು ಸಾರ್ವಜನಿಕ ಸ್ಥಳಗಳಲ್ಲಿ ಪ್ರದರ್ಶನಗೊಳ್ಳಬೇಕೆಂದು ನಿರ್ಧರಿಸಿ ಹೆಚ್ಚು ಜನರು ಓಡಾಡುವ ರಸ್ತೆ ಬದಿಗಳಲ್ಲಿ ಕಲಾ ಪ್ರದರ್ಶನಗಳನ್ನು ಪೆಲೆಟ್ ಗ್ರುಪ್‌ನವರು ಬೆಳಗಾವಿಯಲ್ಲಿ ನಡೆಸಿದರು. ಇದರಿಂದ ನಾಗರಿಕರು ಕಲಾವಿದರೊಡನೆ ಬೆರೆಯುವ ಮತ್ತು ಸ್ಪಂದಿಸುವ

ಒಂದು ಅಪೂರ್ವ ಅವಕಾಶವನ್ನು ಸೃಷ್ಟಿಸಿದರು. ಈ ಪ್ರಯೋಗವು ಜನಸಾಮಾನ್ಯರಲ್ಲಿ ಕಲೆ ಮತ್ತು ಕಲಾವಿದನ ಬಗ್ಗೆ ಪ್ರೇಮ–ಅಭಿಮಾನವನ್ನು ಮೂಡಿಸಿತು. ಇದರಿಂದ ಪ್ರೇರಿತರಾಗಿ ಹಲವಾರು ಕಲಾವಿದರು, ಕಲಾವಿದ್ಯಾರ್ಥಿಗಳು ಸ್ಫೂರ್ತಿಗೊಂಡು ಚಿತ್ರಕಲೆಯಲ್ಲಿ ಸಂಪೂರ್ಣವಾಗಿ ತಮ್ಮನ್ನು ತೊಡಗಿಸಿಕೊಂಡರು. ಇದು ಬೆಳಗಾವಿಯ ಕಲಾ ಇತಿಹಾಸದಲ್ಲಿಯೇ ಒಂದು ಪ್ರಮುಖ ಮೈಲುಗಲ್ಲಾಗಿದೆ.

ಚಿತ್ರಕಲಾ ಕಾಲೇಜುಗಳು : ವಿಶಿಷ್ಟವಾದ ಚಿತ್ರಕಲಾ ಪರಂಫರೆಯನ್ನು ಹೊಂದಿದ ಬೆಳಗಾವಿಯಲ್ಲಿ ಚಿತ್ರಕಲೆಯನ್ನು ವ್ಯವಸ್ಥಿತವಾದ ಶಿಕ್ಷಣದ ಮೂಲಕ ನೀಡುವ ಉದ್ದೇಶದಿಂದ ಹಲವಾರು ಚಿತ್ರಕಲಾ ಮಹಾವಿದ್ಯಾಲಯಗಳು ಪ್ರಾರಂಭಗೊಂಡವು. ಇವು ಬೆಳಗಾವಿ ಪ್ರದೇಶದಲ್ಲಿ ಚಿತ್ರಕಲಾ ಶಿಕ್ಷಣವನ್ನು ನೀಡುವಲ್ಲಿ ನಿರ್ಮಿಸುವಲ್ಲಿ ಮಹತ್ವದ ಪಾತ್ರವನ್ನು ವಹಿಸಿದವು.

ಬೆನನ್‌ಸ್ಮಿತ್ ಸ್ಕೂಲ ಆಫ್ ಆರ್ಟ : ೧೯೭೩ ರಲ್ಲಿ ಬೆಳಗಾವಿಯಲ್ಲಿ ಬೆನನ್‌ಸ್ಮಿತ್ ಲಲಿತಕಲಾ ಶಾಲೆಯು ಸ್ಥಾಪನೆಯಾಗುವುದರೊಂದಿಗೆ ಈ ಭಾಗದ ಚಿತ್ರಕಲಾ ವಿದ್ಯಾರ್ಥಿಗಳಿಗೆ ಮಹತ್ವದ ಶಿಕ್ಷಣವನ್ನು ನೀಡತೊಡಗಿತು. ಈ ಕಲಾಶಾಲೆಯ ಸಂಸ್ಥಾಪಕರಾಗಿ, ಪ್ರಾಂಶುಪಾಲರಾಗಿ ಕಲಾವಿದರಾಗಿ ಶ್ರೀ ಎಸ್.ಪಿ. ಚವ್ಹಾಣರು ಬೆಳಗಾವಿಯಲ್ಲಿ ಚಿತ್ರಕಲಾ ಕ್ಷೇತ್ರದಲ್ಲಿ ಮಹತ್ವದ ಬದಲಾವಣೆಗಳನ್ನು ತಂದರು.[೩೨] ಇವರು ಬಹುಭಾಷಾ ಕವಿಗಳು ಆಗಿದ್ದರು. ಇವರ ಏಕವ್ಯಕ್ತಿ ಕಲಾ ಪ್ರದರ್ಶನಗಳು, ದೇಶದ ತುಂಬೆಲ್ಲಾ ಪ್ರಸಿದ್ಧಿಯನ್ನು ಪಡೆದುಕೊಂಡಿವೆ. ವಿದೇಶಗಳಲ್ಲಿಯೂ ಇವರ ಕಲೆ ಪ್ರಚಾರವನ್ನು ಪಡೆದುಕೊಂಡಿತ್ತು. ಝಾಂಬಿಯಾ, ಇಟಾಲಿಯಾ, ಸ್ವಿಡ್ಜರ್ಲೆಂಡ್, ಯುರೋಪ್, ಅಮೇರಿಕ, ಜಪಾನ, ಆಸ್ಟ್ರೇಲಿಯಾ ಮುಂತಾದ ಕಡೆಗಳಲ್ಲಿ ಇವರ ಏಕವ್ಯಕ್ತಿ ಚಿತ್ರ ಪ್ರದರ್ಶನಗಳು ನಡೆದಿವೆ. ಈ ಮೂಲಕ ಬೆಳಗಾವಿಯ ಕೀರ್ತಿಯನ್ನು ಅಂತರಾಷ್ಟ್ರೀಯ ಮಟ್ಟದಲ್ಲಿ ಗುರುತಿಸುವಂತೆ ಮಾಡಿದರು. ಲೂಥರ್ಡ ಥಿಯಾಸಫಿಕಲ್ ಸಂಶೋಧನ ಕೇಂದ್ರ ಮದ್ರಾಸು ಪ್ರಕಟಿಸಿರುವ ಕ್ರಿಶ್ಚಿಯನ್ ಆರ್ಟ ಇನ್ ಇಂಡಿಯಾ ಎಂಬ ಪುಸ್ತಕದಲ್ಲಿ ಇವರ ಕೆಲವು ಕಲಾ ಕೃತಿಗಳು ಬಂದಿವೆ. ಇವರು ವ್ಯಕ್ತಿ ಚಿತ್ರ, ಭಿತ್ತಿ ಚಿತ್ರಗಳನ್ನು ಸಂಯೋಜಿಸಿದ್ದಾರೆ.

ಉಮಾ ಕಲಾಮಂದಿರ : ಬೆಳಗಾವಿಯಲ್ಲಿ ಚಿತ್ರಕಲಾ ಶಿಕ್ಷಣವನ್ನು ನೀಡುವಲ್ಲಿ ಮಹತ್ವದ ಶಿಕ್ಷಣ ಸಂಸ್ಥೆಯಾದ ಉಮಾ ಕಲಾ ಮಂದಿರವು ಹಲವಾರು ಜನ ಚಿತ್ರಕಲಾವಿದರನ್ನು ನಿರ್ಮಿಸಿದ ಹಿರಿಮೆಗೆ ಪಾತ್ರವಾಗಿದೆ. ಇಲ್ಲಿಯ ಪ್ರಾಧ್ಯಾಪಕರುಗಳು ಹಾಗೂ ಕಲಾವಿದ್ಯಾರ್ಥಿಗಳಿಂದ ಚಿತ್ರ ರಚನೆ, ಪ್ರದರ್ಶನ, ಕಲಾಕಾರ್ಯಾಗಾರಗಳು, ಕಲಾಶಿಬಿರಗಳು ಮುಂತಾದ ಕಲಾ ಚಟುವಟಿಕೆಗಳು ಈ ಪರಿಸರದಲ್ಲಿ ನಿರಂತರವಾಗಿ ನಡೆದು ಕಲಾ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿರುತ್ತದೆ. ಇಲ್ಲಿ ಶಿಕ್ಷಣವನ್ನು ಪಡೆದ ಹಲವಾರು ಜನರು ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಕಲಾ ಶಿಕ್ಷಕರಾಗಿ, ಕಲಾವಿದರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

ಬೆಳಗಾವಿಯ ಶಹಪುರದ ಬಿ. ಕೆ. ಹುಬ್ಬಳ್ಳಿಯವರು ನಾಡಿನ ಪ್ರಸಿದ್ಧ ಚಿತ್ರಕಲಾವಿದರಲ್ಲಿ ಒಬ್ಬರು. ಜಲವರ್ಣ, ತೈಲ ಮಾಧ್ಯಮಗಳಲ್ಲಿ ಚಿತ್ರ ಕೃತಿಗಳನ್ನು ಸೃಜಿಸಿದ್ದಾರೆ. ಅವರ ಕಲಾಭಿವ್ಯಕ್ತಿ ಮತ್ತು ಮನಸ್ಸು ಸ್ತ್ರೀಯರ ಚೆಲುವನ್ನು ಗ್ರಹಿಸಿದೆ. ಅವರ ಪೆನ್ಸಿಲ್‌ನ ರೇಖಾ ಚಿತ್ರಗಳು ಜಲವರ್ಣ ಮತ್ತು ತೈಲವರ್ಣ ರಚನೆಗಳಲ್ಲಿ ಸ್ತ್ರೀ ಸೌಂದರ್ಯ ಮತ್ತು ಬಿನ್ನಾಣ ಮಡುಗಟ್ಟಿದೆ. ಮಹಿಳೆಯ ವಿವಿಧ ಭಂಗಿಗಳಲ್ಲಿ ಅವಳ ಸ್ವಭಾವವನ್ನು ಕಲಾ ಕೃತಿಗೆ ತಂದುಕೊಟ್ಟಿದ್ದಾರೆ. ಚೆಲುವೆಯ ಲಜ್ಜೆ, ಪ್ರೇಮ, ಯೌವ್ವನ, ನಯ, ನಾಜೂಕುಗಳನ್ನು ಸಮರ್ಥವಾಗಿ ಅಭಿವ್ಯಕ್ತಿಸಿದ್ದಾರೆ. ಇವರ ಕಲಾಕೃತಿಗಳಲ್ಲಿ ಒಂದೆಡೆ ಮಹಿಳೆ ಕೇಂದ್ರ ವ್ಯಕ್ತಿಯೆನಿಸಿದರೆ ಮತ್ತೊಂದೆಡೆ ಜಲವರ್ಣದಲ್ಲಿ ಅರಳಿದ ನಿಸರ್ಗ ಚಿತ್ರಗಳು ಗಮನಸೆಳೆಯುತ್ತವೆ. ಬೆಳಗಾವಿಯಲ್ಲಿ ಇವರ ಚಿತ್ರಕಲಾ ಪ್ರದರ್ಶನಗಳು ಹಲವಾರು ಬಾರಿ ಏರ್ಪಟ್ಟಿರುತ್ತವೆ. ೧೯೮೨ ರಲ್ಲಿ ಬೆಳಗಾವಿಯಲ್ಲಿ ಏಕವ್ಯಕ್ತಿ ಪ್ರದರ್ಶನ, ೧೯೮೩ ರಲ್ಲಿ ಹುಬ್ಬಳ್ಳಿಯಲ್ಲಿ ರಾಜ್ಯಮಟ್ಟದ ಸಾಮೂಹಿಕ ಕಲಾ ಪ್ರದರ್ಶನ, ೧೯೮೫ ರಲ್ಲಿ ನವದೆಹಲಿಯಲ್ಲಿ ಚಿತ್ರಕಲೆ ಮತ್ತು ಕರಕುಶಲ ಕಲಾಪ್ರದರ್ಶನ ಮುಂತಾದ ಪ್ರದರ್ಶನಗಳಲ್ಲಿ ಇವರ ಚಿತ್ರಕಲೆಯು ಪ್ರದರ್ಶನಗೊಂಡಿದೆ.[೨೮] ಇವರು ಶಹಪುರದಲ್ಲಿ ಸ್ಟುಡಿಯೋ ತೆಗೆದು ಅಲ್ಲಿಯೇ ಕಲಾಕೃತಿಗಳನ್ನು ನಿರ್ಮಿಸುತ್ತಿದ್ದರು. ಕಲಾ ಶಾಲೆಯನ್ನು ತೆರೆದು ಕಲೆಯ ಬಗೆಗೆ ಶಿಕ್ಷಣವನ್ನು ನೀಡಿ ಹಲವಾರು ಯುವ ಕಲಾವಿದರನ್ನು ತಯಾರಿಸಿದ್ದಾರೆ.

ಬೆಳಗಾವಿ ನಗರದಲ್ಲಿದ್ದುಕೊಂಡು ಕಲಾಕೃತಿಗಳನ್ನು ನಿರ್ಮಿಸುವುದರ ಜೊತೆಗೆ ಕಲಾವಿದರನ್ನು ತಯಾರುಗೊಳಿಸುವ ಕಾರ್ಯದಲ್ಲಿ ತೊಡಗಿದ ಕಲಾವಿದರಲ್ಲಿ ಖ್ಯಾತ ಕಲಾವಿದ ಶ್ರೀ ಕೆ. ಬಿ. ಕುಲಕರ್ಣಿಯವರು ಒಬ್ಬರು. ಇವರ ವ್ಯಕ್ತಿ ಚಿತ್ರ ಮತ್ತು ನಿಸರ್ಗ ಚಿತ್ರಗಳು ಹೆಚ್ಚು ಪ್ರಸಿದ್ಧಿಯನ್ನು ಪಡೆದುಕೊಂಡಿವೆ.

ಇವರ ಕಲಾ ಕೃತಿಗಳ ಮುಖ್ಯ ವಸ್ತು ಮಹಿಳೆ. ಮುಂಬಯಿಯ ಜೆ.ಜೆ. ಪರಂಪರೆಯ ನೆನಪನ್ನು ಮರುಕಳಿಸುವ ಚಿತ್ರಗಳನ್ನು ಇವರು ರಚಿಸಿದ್ದಾರೆ. ಮಹಿಳೆಯ ವಿರಾಮದ ಕ್ಷಣಗಳನ್ನು ವಾಸ್ತವತೆಯ ನೆಲೆಯಲ್ಲಿ ಚಿತ್ರಿಸಿದ್ದಾರೆ. ನಿಸರ್ಗ ರಮ್ಯತೆಯ ಜಲವರ್ಣ ಮಿಶ್ರ ಮಾಧ್ಯಮದ ಚಿತ್ರಗಳನ್ನು ರಚಿಸುವ ಕ್ರಮ ಆಕರ್ಷಣೀಯವಾಗಿದೆ. ಕುಲಕರ್ಣಿಯವರು ಸುಮಾರು ಐವತ್ತು ವರ್ಷಗಳವರೆಗೆ ಚಿತ್ರಕಲೆಯನ್ನೇ ತಮ್ಮ ಉಸಿರಾಗಿಸಿಕೊಂಡಿದ್ದರು. ಇವರು ಪೇಪರ, ಹಾರ್ಡಬೋರ್ಡ, ಬ್ರೌನ್ ಪೇಪರಗಳಲ್ಲಿ ಕಲಾಕೃತಿಗಳನ್ನು ಚಿತ್ರಿಸಿದ್ದಾರೆ. ತೈಲ, ಜಲ, ಪೇಸ್ಟಲ್ ಅಕ್ರಲಿಕ್ ಮತ್ತು ಮಿಶ್ರ ಮಾಧ್ಯಮಗಳಲ್ಲಿ ನಿರಾಯಾಸವಾಗಿ ಚಿತ್ರ ರಚಿಸುವ ಶಕ್ತಿಯನ್ನು ಹೊಂದಿದ್ದರು. ಇವರ ಶಿಷ್ಯರಲ್ಲಿ ಪ್ರಮುಖರಾದವರೆಂದರೆ ಜಾನ್ ಫರ್ನಾಂಡಿಸ್, ರವಿ ಪರಾಂಜಪೆ, ಖ್ಯಾತ ಸಾಹಿತಿ ಕಲಾವಿದರಾದ ಚಂದ್ರಕಾಂತ ಕುಸನೂರ ಮುಂತಾದವರು; ರಾಷ್ಟ್ರಮಟ್ಟದಲ್ಲಿ ಹೆಸರು ಮಾಡಿದ್ದಾರೆ.

ಇವರು ಕಲಾವಿದ ಎಂ. ವಿ. ಮಿಣಜಗಿ, ಪಿ. ಕೆ. ಪಾಟೀಲರ ಜತೆ ಸೇರಿ ಕರ್ನಾಟಕದಲ್ಲಿ ಡ್ರಾಯಿಂಗ್ ಪರೀಕ್ಷೆಗಳನ್ನು ಆರಂಭಿಸಿದರು.[೨೯] ಇವರ ಪರೀಕ್ಷಾ ವಿಧಾನ ಮಾದರಿಯಾಗಿತ್ತು. ಮಹಾರಾಷ್ಟ್ರದವರು ಸಹ ಈ ಪರೀಕ್ಷಾ ವಿಧಾನವನ್ನು ಅಳವಡಿಸಿಕೊಂಡರು. ಇವರ ಚಿತ್ರಕಲಾ ಪ್ರದರ್ಶನಗಳು ಬೆಂಗಳೂರು, ಕೊಲ್ಲಾಪುರ,

ಪುಣೆ, ಮುಂಬೈನಗರಗಳಲ್ಲಿ ನಡೆದು ಕಲಾಪ್ರೇಮಿಗಳ ಮೆಚ್ಚುಗೆಗೆ ಪಾತ್ರವಾಗಿವೆ. ಬೆಳಗಾವಿಯಲ್ಲಿ ಹಲವಾರು ಬಾರಿ ಚಿತ್ರಕಲಾ ಪ್ರದರ್ಶನಗಳನ್ನು ಏರ್ಪಡಿಸಿ ಈ ಭಾಗದಲ್ಲಿ ಕಲೆಯು ಜೀವಂತವಾಗಿ ಉಳಿಯುವಂತೆ ಮಾಡಿದ್ದಾರೆ.

ಕೋಲಾಜ್ ಆರ್ಟ ಗ್ರುಪ್ : ೮೦ ರದಶಕದಲ್ಲಿ ಪ್ರಾರಂಭಗೊಂಡ ಕೊಲಾಜ್ ಆರ್ಟ ಗ್ರುಪ್ ಬೆಳಗಾವಿಯ ಚಿತ್ರಕಲಾ ವಲಯದಲ್ಲಿ ಸಂಚಲನವನ್ನುಂಟುಮಾಡಿದ ಸಂಸ್ಥೆ. ಬೆಳಗಾವಿಯ ಯುವ ಕಲಾವಿದರು ಸೇರಿಕೊಂಡು ಕೊಲಾಜ್ ಆರ್ಟ ಗ್ರುಪ್ ಸಂಘಟಿಸಿದರು.[೪೦] 'ಕೊಲಾಜ್' ಪದ್ಧತಿಯಲ್ಲಿ ಕೆಲವು ವೈಶಿಷ್ಟ್ಯಗಳುಳ್ಳ ಚಿತ್ರಗಳನ್ನು ಇವರು ತಯಾರಿಸಿದರು. ಈ ಕಾರ್ಯಕ್ಕೆ ಅವರು ಗೋದಿ ಕಡ್ಡಿಗಳನ್ನು ಮತ್ತು ಮುದ್ರಿತ ಕಾಗದದ ತುಂಡುಗಳನ್ನು ಬಳಸಿದರು. ಗೋದಿ ಕಡ್ಡಿಗಳನ್ನು ವಿವಿಧ ತಾಪಮಾನದ ಶಾಖ ತಗಲಿಸಿ ಅವುಗಳಲ್ಲಿ ವಿವಿಧ ವರ್ಣ ಛಾಯೆಗಳನ್ನು ಸೃಷ್ಟಿಸಿ ಅವುಗಳಿಂದ ಚಿತ್ರಗಳನ್ನು ತಯಾರಿಸಿದರು. ಈ ವರ್ಣಛಾಯೆಯು ಚಿತ್ರಕಲಾ ರಸಿಕರನ್ನು ಮೋಡಿ ಮಾಡಿತು.

ಗೋದಿ ಕಡ್ಡಿಗಳನ್ನು ಬಳಸಿ ಮಾಡಿದ ಚಿತ್ರಗಳಲ್ಲಿ ವನ್ಯ ಪ್ರಾಣಿಗಳು ಹಾಗೂ ಕಟ್ಟಡಗಳನ್ನೊಳಗೊಂಡ ನಿಸರ್ಗ ಚಿತ್ರಗಳು ಹೆಚ್ಚು ಆಕರ್ಷಣೀಯವಾಗಿದ್ದವು. ಈ ಚಿತ್ರಗಳ ಪ್ರದರ್ಶನವು ಬೆಳಗಾವಿಯಲ್ಲಿ ೧೯೮೬, ೮೭, ೮೮ ರಲ್ಲಿ  ಪ್ರದರ್ಶನಗೊಂಡವು.[೪೧] ೧೯೮೯ ರಲ್ಲಿ ಕೊಲ್ಲಾಪುರದಲ್ಲಿ ಈ ಚಿತ್ರಗಳ ಪ್ರದರ್ಶನ ಏರ್ಪಟ್ಟು ಅಸಂಖ್ಯ ಜನರ ಮೆಚ್ಚುಗೆ ಪಡೆದವು.

ಪೇಪರ ಕಟಿಂಗಗಳಿಂದಲೂ ಕೊಲಾಜ್ ಚಿತ್ರಗಳನ್ನು ಹಾಗೂ ಉಬ್ಬು ಚಿತ್ರಗಳನ್ನು ತಯಾರಿಸಿ ಮೆಚ್ಚುಗೆಯನ್ನು ಪಡೆದರು. ಈ ಕಲಾ ತಂಡದಲ್ಲಿ ಸತೀಶ ಪುಣೇದ, ರಾಜು ಪುಣೇದ, ಆರ್.ಜೆ. ಪವಾರ್, ಶ್ರೀಶೈಲ ಕುಪಾಟಿ ಹಾಗೂ ಎನ್. ಹಜೇರಿ ಎಂಬ ಕಲಾವಿದರು ಸೇರಿ ಬೆಳಗಾವಿಯ ಚಿತ್ರಕಲಾ ಪರಂಪರೆಗೆ ಹೊಸ ಮೆರುಗನ್ನು ನೀಡಿದರು. ಸಾಗರದತ್ತ ಪಾಟೀಲರು ಕಲಾ ಶಿಕ್ಷಕರಾಗಿ ಹಲವು ಮಹತ್ವದ ಕಲಾಕೃತಿಗಳನ್ನು ಚಿತ್ರಿಸಿದ್ದಾರೆ. ಮುಂಬಯಿಯ ಜೆ.ಜೆ. ಕಲಾಶಾಲೆಯಲ್ಲಿ ಶಿಕ್ಷಣ ಪಡೆದು ೧೯೬೬ ರಲ್ಲಿ ಬೆಳಗಾವಿಯ ಟಿಳಕವಾಡಿ ಪ್ರೌಢಶಾಲೆಯಲ್ಲಿ ಕಲಾ ಶಿಕ್ಷಕರಾಗಿ, ಸ್ವಲ್ಪ ಅವಧಿಯವರೆಗೆ ಬೆನನ್‌ಸ್ಮಿತ್ ಕಲಾ ಶಾಲೆಯ ಪ್ರಾಚಾರ್ಯರಾಗಿ ಕಾರ್ಯ ಮಾಡಿದ್ದಾರೆ. ಕರ್ನಾಟಕ ಲಲಿತಕಲಾ ಅಕಾಡೆಮಿ, ಚಿತ್ರಕಲಾ ಪರಿಷತ್ತು, ಮೈಸೂರು ದಸರಾ ವಸ್ತು ಪ್ರದರ್ಶನಗಳಲ್ಲಿ ಇವರ ಚಿತ್ರಗಳು ಪ್ರದರ್ಶನಗೊಂಡಿವೆ.ಬೆಳಗಾವಿಯಲ್ಲಿ ಹಲವು ಬಾರಿ ಏಕ ವ್ಯಕ್ತಿ ಚಿತ್ರಕಲಾ ಪ್ರದರ್ಶನಗಳನ್ನು ಏರ್ಪಡಿಸಿ ಚಿತ್ರಕಲೆಯನ್ನು ಬೆಳೆಸಿದ್ದಾರೆ. ಕ್ರಿಯಾತ್ಮಕತೆ ಮತ್ತು ಸುಂದರ ಬಣ್ಣಗಳ ಸಂಯೋಜನೆಯಿಂದಾಗಿ ಇವರ ಕಲಾ ಪ್ರದರ್ಶನಗಳು ಹೆಚ್ಚು ಮೆಚ್ಚುಗೆಯನ್ನು ಪಡೆದಿವೆ.

'ನಾಡಸಿರಿ' ಮಾಸಪತ್ರಿಕೆ : ೧೯೯೧ ರಲ್ಲಿ ಬೆಳಗಾವಿಯಲ್ಲಿ 'ನಾಡಸಿರಿ' ಎಂಬ ಸಾಹಿತ್ಯ, ಸಂಸ್ಕೃತಿ ಮತ್ತು ಕಲೆಗಳಿಗೆ ಮೀಸಲಾದ ಮಾಸಪತ್ರಿಕೆಯು ಪ್ರಾರಂಭಗೊಂಡು ಚಿತ್ರಕಲೆಗೆ ಪ್ರಚಾರವನ್ನು ಒದಗಿಸಿತು. ಶ್ರೀ ಎಸ್.ಜಿ.

ಕುಸುಗಲ್ ಎಂಬ ಸಾಹಿತಿಗಳು ಈ ಪತ್ರಿಕೆಯನ್ನು ಪ್ರಾರಂಭಿಸಿದರು.[೪೨] ಈ ಪತ್ರಿಕೆಯ ಮೂಲಕ ಖ್ಯಾತ ಕಲಾವಿದರ ಚಿತ್ರಗಳು ಮತ್ತು ಹಿರಿಯ ಸಾಹಿತಿಗಳಿಂದ ಚಿತ್ರಕಲೆಯ ಬಗ್ಗೆ ವಿಮರ್ಶಾತ್ಮಕ ಲೇಖನಗಳು ಪ್ರಕಟವಾಗತೊಡಗಿದವು. ಇದರಿಂದ ಚಿತ್ರಕಲೆಯ ಇತಿಹಾಸ, ಮಹತ್ವ ಮತ್ತು ಚಿತ್ರಕಲೆಯ ಜ್ಞಾನ ಮೂಡಿ ಬಂದಿತು. ಅಲ್ಲದೆ ಮಕ್ಕಳಲ್ಲಿ ಚಿತ್ರಕಲೆಯನ್ನು ಬೆಳೆಸುವ ನಿಟ್ಟಿನಲ್ಲಿ ಮಕ್ಕಳಿಗಾಗಿ ಚಿತ್ರಕಲಾ ಸ್ಪರ್ಧೆಯನ್ನು ಏರ್ಪಡಿಸಿ ವಿದ್ಯಾರ್ಥಿಗಳಲ್ಲಿ ಅಡಗಿದ ಪ್ರತಿಭೆಯನ್ನು ಪೋಷಿಸಿದರು. ಇದರ ಜೊತೆಗೆ ಕರಕುಶಲ ಕಲೆಗಳ ಬಗೆಗೆ ವಿಶಿಷ್ಟವಾದ ಲೇಖನಗಳನ್ನು ಪ್ರಕಟಿಸಿ ಕಲೆಯ ಬೆಳವಣಿಗೆಗೆ ಪ್ರೇರಣೆಯನ್ನು ಒದಗಿಸಿದೆ. ಬೆಳಗಾವಿಯ ಚಿತ್ರಕಲೆಗೆ ಹೊಸ ಆಯಾಮ ಒದಗಿ ಬಂದಿದ್ದು ಶ್ರೀ ವ್ಹಿ.ಸಿ. ಮಾಲಗತ್ತಿಯವರಿಂದ. ಮುಂಬಯಿಯ ಜೆ.ಜೆ. ಸ್ಕೂಲ್‌ನಿಂದ ಕಲಾಶಿಕ್ಷಣವನ್ನು ಹಾಗೂ ನೂತನ ಕಲಾಮಂದಿರದಿಂದ ಎ.ಎಂ. ಪದವಿಯನ್ನು ಪಡೆದುಕೊಂಡು ಸಾಹಿತ್ಯ, ಸಂಸ್ಕೃತಿ, ಸಂಗೀತ, ಕಲೆ, ಇತಿಹಾಸ ಹಾಗೂ ಪುರಾತತ್ವ ಮುಂತಾದ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಬೆಳಗಾವಿಯಲ್ಲಿ ಮಹತ್ವದ ಕಾರ್ಯಗಳನ್ನು ಮಾಡಿದ್ದಾರೆ.

೧೯೪೫ ರಿಂದ ೧೯೫೭ರವರೆಗೆ ಬೆಳಗಾವಿಯ ಟೀಚರ್ಸ್ ಕಾಲೇಜಿನಲ್ಲಿ ಕಲಾ ಶಿಕ್ಷಕರಾಗಿ ೧೯೫೯ ರಿಂದ ೭೯ ರವರೆಗೆ ಜೆ. ಎ. ಕಾಲೇಜಿನಲ್ಲಿ ಕಲಾ ವಿಭಾಗದ ಮುಖ್ಯಸ್ಥರಾಗಿ ಹಾಗೂ ಜೆ. ಎನ್. ಮೆಡಿಕಲ್ ಕಾಲೇಜನಲ್ಲಿ ಉಪನ್ಯಾಸಕರಾಗಿ ಮಹತ್ವದ ಸೇವೆಯನ್ನು ಮಾಡಿದ್ದಾರೆ.

ರಾಜ್ಯ ಪುನರ್ ವಿಂಗಡನೆಯ ನಂತರ ಕರ್ನಾಟಕದಲ್ಲಿ ಕಲಾ ಕೈಗಾರಿಕಾ ಶಿಕ್ಷಣವನ್ನು ಪ್ರಾರಂಭಿಸಬೇಕೆಂದು ಹೋರಾಡಿದ ಕೆಲವೇ ಮಂದಿ ಹಿರಿಯ ಕಲಾವಿದರಲ್ಲಿ ಮಾಲಗತ್ತಿಯವರು ಅಗ್ರಗಣ್ಯರು. ಇದರ ಪರಿಣಾಮವಾಗಿ ಸರ್ಕಾರ ರಚಿಸಿದ ಕಲೆ ಹಾಗೂ ಕೈಗಾರಿಕಾ ಪರೀಕ್ಷೆ ಮತ್ತು ಶಿಕ್ಷಣ ಸಲಹಾ ಮಂಡಲಿಯ ಸದಸ್ಯರಾಗಿ, ಕಲಾ ಶಿಕ್ಷಣಾಭ್ಯಾಸ ಪತ್ರಿಕೆಯ ಪರೀಕ್ಷೆಗಳಿಗಾಗಿ ನಿಯಮಗಳ ಸಮಿತಿಯ ಸದಸ್ಯರಾಗಿ ಸುಮಾರು ೧೫ ವರ್ಷಗಳ ಕಾಲ ವಿವಿಧ ಹುದ್ದೆಗಳಲ್ಲಿ ಮಹತ್ವದ ಸೇವೆಯನ್ನು ಸಲ್ಲಿಸಿದ್ದಾರೆ.

೧೯೬೭ ರಲ್ಲಿ ದೆಹಲಿಯಲ್ಲಿ ನಡೆದ ಅಂತಾರಾಷ್ಟ್ರೀಯ ಮಕ್ಕಳ ಕಲಾ ಪ್ರದರ್ಶನ ಸಮಿತಿಯಲ್ಲಿಯೂ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.[೪೩] ಮೈಸೂರಿನ ದಸರಾ ಪ್ರದರ್ಶನದಲ್ಲಿಯೂ ಇವರ ಕಲಾಕೃತಿಗಳು ಪ್ರಶಸ್ತಿಯನ್ನು ಪಡೆದಿವೆ. ೧೯೭೩ ರ ಅವಧಿಯಲ್ಲಿ ಇಂಗ್ಲೆಂಡ್, ಫ್ರಾನ್ಸ್, ಹಾಲೆಂಡ್, ಇರಾಕ್, ಮೊದಲಾದ ರಾಷ್ಟ್ರಗಳಲ್ಲಿ ಸಂಚರಿಸಿ ಅಲ್ಲಿಯ ಕಲಾಶಿಕ್ಷಣ ಮತ್ತು ಆರ್ಟ ಗ್ಯಾಲರಿಗಳನ್ನು ಕಂಡು ವಿದ್ವತ್ಪೂರ್ಣ ಲೇಖನಗಳನ್ನು ಬರೆದಿದ್ದಾರೆ. ಬೆಳಗಾವಿಯ ಕನ್ನಡ ಸಾಹಿತ್ಯ ಭವನದ ನಿರ್ಮಾಣದಲ್ಲಿ ಮಹತ್ವದ ಪಾತ್ರವನ್ನು ವಹಿಸಿ ಅಲ್ಲಿಯೇ ಒಂದು ಆರ್ಟ ಗ್ಯಾಲರಿಯನ್ನು ಸ್ಥಾಪಿಸಿ ಚಿತ್ರಕಲೆಗೆ ಒಂದು ನೆಲೆಯನ್ನು ಒದಗಿಸಿದರು.[೪೪] ಇಲ್ಲಿ ಇವರ ಹಲವಾರು ಕಲಾಕೃತಿಗಳು ಪ್ರದರ್ಶನಕ್ಕಿವೆ.

ಮಾಲಗತ್ತಿಯವರು ವಿಶೇಷವಾಗಿ ಮಕ್ಕಳಲ್ಲಿ ಚಿತ್ರಕಲೆಯನ್ನು ಬೆಳೆಸುವ ಕಾರ್ಯಕ್ರಮಗಳನ್ನು ರೂಪಿಸಿದರು. ಈ ಹಿನ್ನೆಲೆಯಲ್ಲಿ ಸ್ಪರ್ಧೆಗಳನ್ನು ಏರ್ಪಡಿಸಿ ಬಹುಮಾನಗಳನ್ನು ನೀಡಿ ಚಿತ್ರಕಲೆಯನ್ನು ಪ್ರೋತ್ಸಾಹಿಸಿದರು. ತಮ್ಮ ಹೆಚ್ಚು ಸಮಯವನ್ನು ಬರವಣಿಗೆ ಸಂಘಟನೆ ಹಾಗೂ ಕನ್ನಡ ಹೋರಾಟಗಳಿಗೆ ಮೀಸಲಿಟ್ಟಿದ್ದರು. ಆಗಾಗ ಬಿಡುವಿನ ವೇಳೆಯಲ್ಲಿ ಚಿತ್ರಗಳನ್ನು ಬಿಡಿಸಿರುವರು.

ಸಾಹಿತ್ಯ ಮತ್ತು ಕಲೆ ಎರಡೂ ಕ್ಷೇತ್ರಗಳಲ್ಲಿ ಗುರುತಿಸಿಕೊಂಡಿರುವ ಚಂದ್ರಕಾಂತ ಕುಸನೂರರು ನಾಡಿಗೆ ಚಿರಪರಿಚಿತರು. ಬೆಳಗಾವಿಯನ್ನು ತಮ್ಮ ನೆಲೆಯಾಗಿಸಿಕೊಂಡು ಆಧುನಿಕ ನಾಟಕ, ಚಿತ್ರಕಲೆಗೆ ತಮ್ಮದೇ ಆದ ಛಾಪು ಮೂಡಿಸಿದ್ದಾರೆ. ಕಲೆಯ ಬಗೆಗೆ ಶಾಸ್ತ್ರೋಕ್ತವಾಗಿ ವೈಜ್ಞಾನಿಕವಾಗಿ ಆಳವಾದ ಅಧ್ಯಯನ ಮಾಡಿದ ಕುಸನೂರರು ಕರ್ನಾಟಕದ ಚಿತ್ರಕಲೆಗೆ ವಿಶಿಷ್ಟವಾದ ಕೊಡುಗೆಯನ್ನು ನೀಡಿದ್ದಾರೆ. ಜಲವರ್ಣ ಮತ್ತು ಆಕ್ರಿಲಿಕ್ ಮಾಧ್ಯಮದಲ್ಲಿ ಕಾಗದದ ಮೇಲೆ ಚಿತ್ರಿಸಿದ ಚಿತ್ರಗಳು. ಪ್ರಖರ ಬಣ್ಣಗಳಲ್ಲಿ ಬಿಚ್ಚಿಕೊಳ್ಳುವ ಕಲಾಕೃತಿಗಳು, ಚಿತ್ರಕಲೆಯಲ್ಲಿ ಹೊಸ ಆಯಾಮವನ್ನು ಒದಗಿಸಿವೆ.

ಕುಸನೂರರ ಕಲಾಕೃತಿಗಳಲ್ಲಿ ಮನುಷ್ಯ ಸಂಬಂಧ ಮುಖ್ಯವಾಗಿ ಕಂಡುಬರುತ್ತದೆ. ಮಾನಸಿಕ ಸ್ಥಿತಿಗತಿಗಳ ಮೂಲಕ, ಸುಂದರ ಕನಸಿನ ಲೋಕವನ್ನು ಸೃಷ್ಟಿಸಿ ಅದಕ್ಕೆ ಕಲಾ ಸ್ಪರ್ಶ ನೀಡುವರು. ಗಂಡು ಹೆಣ್ಣಿನ ನಡುವಿನ ಸಂಬಂಧ ಮತ್ತು ಅದರ ರೂಪ–ಕುರೂಪ ಎಲ್ಲವನ್ನೂ ಶಕ್ತಿಯುತವಾಗಿ ರೇಖೆಗಳಲ್ಲಿ ಬಿಂಬಿಸುವ ಶಕ್ತಿ ಕುಸನೂರರಲ್ಲಿದೆ. ಅವರ ಚಿತ್ರಗಳಲ್ಲಿ ಕಾಣುವ ಪಕ್ಷಿ, ಹಾವು ಕುದುರೆಗಳು ರೂಪಕಗಳಾಗಿ ಚಿತ್ರ ರಸಿಕರನ್ನು ಸೆಳೆಯುತ್ತವೆ. ಕುಸನೂರರ ಹಲವಾರು ಚಿತ್ರಕಲಾ ಕೃತಿಗಳು ರಾಷ್ಟ್ರಮಟ್ಟದಲ್ಲಿ ಪ್ರದರ್ಶನಗೊಂಡಿವೆ. ದೆಹಲಿಯಲ್ಲಿ ಜರುಗಿದ ೧೧ನೆಯ ರಾಷ್ಟ್ರೀಯ ಕಲಾ ಮೇಳದಲ್ಲಿ ಸಮೂಹ ಪ್ರದರ್ಶನದಲ್ಲಿ ಹಲವಾರು ಕಲಾಪ್ರೇಮಿಗಳು, ಕಲಾವಿದರ ಗಮನ ಸೆಳೆದಿವೆ.[೪೫] ಬೆಂಗಳೂರಿನ ವೆಂಕಟಪ್ಪ ಆರ್ಟ ಗ್ಯಾಲರಿ, ಬೆಳಗಾವಿಯ ಸಪ್ತರಂಗದ ಆಶ್ರಯದಲ್ಲಿ ನಡೆದ ಶಿಬಿರ ಹೀಗೆ ಹಲವಾರು ಬಾರಿ ಇವರ ಕಲಾಕೃತಿಗಳು ಪ್ರದರ್ಶನಗೊಂಡಿವೆ.

ಸದ್ಯ ಬೆಳಗಾವಿಯಲ್ಲಿ ವಾಸಿಸುತ್ತಿರುವ ಇವರು ಕಲೆ, ಸಾಹಿತ್ಯದ ಚಟುವಟಿಕೆಯಲ್ಲಿ ಸದಾಕಾಲ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಚಿತ್ರಕಲೆಯ ಪ್ರದರ್ಶನ, ಉಪನ್ಯಾಸ, ಶಿಬಿರಗಳಲ್ಲಿ ಪಾಲ್ಗೊಂಡು ಚಿತ್ರಕಲೆಯನ್ನು ಬೆಳೆಸುತ್ತಿದ್ದಾರೆ. ಇತ್ತಿಚೆಗೆ ಲಿಂಗರಾಜ ಮಹಾವಿದ್ಯಾಲಯದಲ್ಲಿ ಚಿತ್ರಕಲೆಯನ್ನು ಕುರಿತು ವಿಶೇಷವಾದ ಉಪನ್ಯಾಸಗಳನ್ನು ನೀಡಿ ಆಧುನಿಕ ಚಿತ್ರಕಲೆಯ ಇಂದಿನ ಸ್ಥಿತಿಗತಿಗಳನ್ನು ಕುರಿತು ಸುದೀರ್ಘವಾದ ಉಪನ್ಯಾಸವನ್ನು ನೀಡಿದರು. ಚಿತ್ರಕಲೆಯನ್ನು ಕುರಿತು ಎರಡು ಮಹತ್ವದ ಕೃತಿಗಳನ್ನು ರಚಿಸಿದ್ದಾರೆ. ಕಲೆ, ಅನುಭವ ಮತ್ತು ಅನುಭಾವ ಹಾಗೂ ಸಾಹಿತ್ಯ ಮತ್ತು ಕಲೆ, ಎಂಬ ಕೃತಿಗಳು ಚಿತ್ರಕಲೆಯನ್ನು ಕುರಿತು ರಚನೆಗೊಂಡ ಅಮೂಲ್ಯ ಕೃತಿಗಳಾಗಿವೆ. ಕಲೆ, ಅನುಭವ ಮತ್ತು ಅನುಬಾವ ಕೃತಿಗೆ ಲಲಿತಕಲಾ ಅಕಾಡೆಮಿ ಪ್ರಶಸ್ತಿ ದೊರೆದಿತೆ.

ಸಪ್ತರಂಗ ಕಲಾ ತಂಡ : ೧೯೯೪ ರಲ್ಲಿ 'ಸಪ್ತರಂಗ' ಎಂಬ ಚಿತ್ರಕಲಾವಿದರ ಗುಂಪು ಬೆಳಗಾವಿಯಲ್ಲಿ ಜನ್ಮತಾಳಿತು. ಇದರ ಮುಂದಾಳತ್ವವನ್ನು ಚಂದ್ರಕಾಂತ ಕುಸನೂರರು ವಹಿಸಿಕೊಂಡರು. ಇವರ ಜೊತೆಗೆ ಶಿವ ಹಿರೇಮಠ, ಸಚಿನ್ ಉಪಾದ್ಯೆ, ರಾಜು ಮುತಗೇಕರ್, ಮಹೇಶ ಅಗಸಿಮನಿ, ಬಾಬುರಾವ್ ನಡೋಣಿ, ವಿಶ್ವನಾಥ ಗುಗ್ಗರಿ, ಡಿ.ವಿ.ಕುಲಕರ್ಣಿ, ಶೇಖರ ಕದಡಿ, ದೊಡಕಣ್ಣವರ ಮುಂತಾದ ಕಲಾವಿದರು ಸೇರಿಕೊಂಡು ಬೆಳಗಾವಿಯಲ್ಲಿ ಚಿತ್ರಕಲೆಯ ಅಭಿವೃದ್ಧಿಗೆ ಹಲವಾರು ರಚನಾತ್ಮಕ ಕಾರ್ಯಗಳನ್ನು ಕೈಕೊಂಡರು. ಕಲಾವಿದರ ಕಾರ್ಯಾಗಾರಗಳು, ಕಲಾಮೇಳಗಳು, ವಿಚಾರಗೋಷ್ಠಿಗಳು, ಪ್ರದರ್ಶನ, ಉಪನ್ಯಾಸ, ಸ್ಪರ್ಧೆ ಹೀಗೆ ಸದಾ ಚಟುವಟಿಕೆಯಲ್ಲಿ ಸಪ್ತರಂಗ ಕಾರ್ಯ ಪ್ರವೃತ್ತವಾಯಿತು. ಈ ನಿಟ್ಟಿನಲ್ಲಿ ೧೯೯೪, ೯೫ ಹಾಗೂ ೯೬ ರಲ್ಲಿ ಮೂರು ಪ್ರಮುಖ ಕಲಾಮೇಳಗಳು ಬೆಳಗಾವಿಯಲ್ಲಿ ಏರ್ಪಟ್ಟು ಕಲೆಯ ಬೆಳವಣಿಗೆಯಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಂಡವು.[೪೬] ೧೯೯೬ ರಲ್ಲಿ ಜರುಗಿದ ಕಲಾಮೇಳವು ಬೆಳಗಾವಿಯ ಚಿತ್ರಕಲಾವಿದರ ಮೇಲೆ ಅತ್ಯಂತ ಪರಿಣಾಮವನ್ನುಂಟು ಮಾಡಿತು. ರಾಜ್ಯದ ಪ್ರಮುಖ ಕಲಾವಿದರೆಲ್ಲಾ ಬೆಳಗಾವಿಯ ಸಾಹಿತ್ಯ ಭವನದಲ್ಲಿ ಸಮಾವೇಶಗೊಂಡಿದ್ದರು. ಚಿತ್ರಕೃತಿಗಳ ರಚನೆ, ಕಲಾ ಪ್ರಾತ್ಯಕ್ಷತೆ ಹಾಗೂ ಕಲೆಯ ವಿಷಯದಲ್ಲಿ ಚರ್ಚೆಗಳು, ಹಾಗೂ ಚಿತ್ರಗಳ ಬೃಹತ್ ಪ್ರದರ್ಶನ ಏರ್ಪಟ್ಟು ಬೆಳಗಾವಿಯಲ್ಲಿ ಕಲಾಚಟುವಟಿಕೆಗಳಿಗೆ, ಕಲಾವಿದರಿಗೆ ಸ್ಫೂರ್ತಿ ತುಂಬುವಂತಾಯಿತು. ಬೆಳಗಾವಿಯ ಸುತ್ತಮುತ್ತಲಿನ ಸಾವಿರಾರು ಕಲಾ ಪ್ರೇಮಿಗಳು ಈ ಕಲಾಮೇಳದಲ್ಲಿ ಪಾಲ್ಗೊಂಡಿದ್ದರು. ಈ ಸಂದರ್ಭದಲ್ಲಿ 'ಕಿನ್ನಾಳ ಕಲೆ'ಯ ಪ್ರದರ್ಶನ ಏರ್ಪಟ್ಟಿತ್ತು.[೪೭] ಕಿನ್ನಾಳದಿಂದ ಬಂದಿದ ಪ್ರಸಿದ್ಧ ಕಲಾವಿದರು ತಮ್ಮ ಕಲಾ ವಿಶೇಷವನ್ನು ಪ್ರದರ್ಶಿಸಿದರು. ಈ ಕಲೆಯು ಕಲಾಪ್ರೇಮಿಗಳ ಗಮನ ಸೆಳೆಯಿತು. ಮೂರು ದಿನಗಳ ಕಾಲ ನಡೆದ ಈ ಕಲಾಮೇಳವು ಬೆಳಗಾವಿಯ ಚಿತ್ರಕಲೆಯ ಮೇಲೆ ಪರಿಣಾಮವನ್ನುಂಟು ಮಾಡಿತು.

ಸಂಚಾರಿ ಕಲಾವಾಚನಾಲಯ : ಸಪ್ತರಂಗ ಕಲಾವಿದ ತಂಡದವರು ಬೆಳಗಾವಿಯಲ್ಲಿ ಒಂದು ತಿರುಗುವ (ಸುತ್ತುವ) ಸಂಚಾರಿ ಕಲಾ ವಾಚನಾಲಯವನ್ನು ಸ್ಥಾಪಿಸುವ ಮೂಲಕ ಚಿತ್ರಕಲಾ ಕ್ಷೇತ್ರದಲ್ಲಿ ಮಹತ್ವದ ಬದಲಾವಣೆಯನ್ನು ತಂದರು. ವಿಶಿಷ್ಟ ರೀತಿಯ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರ ಮೂಲಕ ಚಿತ್ರಕಲೆಯನ್ನು ಮನೆಮನೆಗೆ ಕೊಂಡೊಯ್ದರು. ನಗರದೊಳಗಿರುವ ಚಿತ್ರ ಕಲಾವಿದರನ್ನು ಕಲಾಪ್ರೇಮಿಗಳನ್ನು ಸದಸ್ಯರನ್ನಾಗಿ ಮಾಡಿ ಅವರ ಮನೆಗಳಲ್ಲಿ ಕಲಾ ಚಿತ್ರಗಳ ಪ್ರದರ್ಶನವನ್ನಿಡುವುದು; ಅವುಗಳನ್ನು ತಿಂಗಳಿಗೊಮ್ಮೆ ಬದಲಿಸುತ್ತ ಹೋಗುವುದು ಹಾಗೂ ಪ್ರತಿಸದಸ್ಯನಿಂದ ಚಿತ್ರ ಸಾಗಾಣಿಕಗೆ ಮಾಸಿಕ ವರ್ಗಣಿಯನ್ನು ಪಡೆಯುವುದು. ಹೀಗೆ ರಚನೆಗೊಂಡ ಈ ಕಾರ್ಯಕ್ರಮವು ಅತ್ಯಂತ ಯಶಸ್ವಿಯಾಗಿ ನಡೆಯತೊಡಗಿತು. ಇದರಿಂದ ಚಿತ್ರಕಲೆಯು ಜನಸಾಮಾನ್ಯರ ಹತ್ತಿರಕ್ಕೆ ಬಂದಿತು. ಚಿತ್ರಕಲೆಯ ಬಗೆಗೆ ಜ್ಞಾನ ಹಾಗೂ ಗೌರವ ಭಾವನೆ ಮೂಡುವಂತಾಯಿತು.ಸುಮಾರು ೫೦ ಜನ ಸದಸ್ಯರನ್ನು ಒಳಗೊಂಡ ಈ ಕಲಾವಾಚನಾಲಯವು ಬೆಳಗಾವಿಯ ಜನರಲ್ಲಿ ಕಲಾಪರಿಸರವನ್ನು ಮೂಡಿಸುವಲ್ಲಿ

ಸಫಲವಾಯಿತು. ಆದರೆ ಇದು ಹೆಚ್ಚು ದಿನ ನಡೆಯದೆ ಮುಚ್ಚುವ ಸ್ಥಿತಿಗೆ ಬಂದಾಗ ಖ್ಯಾತ ಕಲಾವಿದರಾದ ಶ್ರೀ ಶಿವು ಹಿರೇಮಠರು ಈ ಪರಂಪರೆಯನ್ನು ಮುಂದುವರೆಸಿಕೊಂಡು ಹೋಗಲು ಸ್ವತಂತ್ರವಾಗಿ ಸುತ್ತುವ 'ಕಲಾವಾಚನಾಲಯ'ವನ್ನು ನಡೆಸಿಕೊಂಡು ಬಂದರು.

ಸಪ್ತರಂಗ ಕಲಾ ತಂಡವು ರಾಷ್ಟ್ರೀಯ ಮಟ್ಟದಲ್ಲಿ ಭಾಗಿಯಾಗಿ ಬೆಳಗಾವಿಯ ಕಲೆಯನ್ನು ಪ್ರದರ್ಶಿಸಿದರು. ೧೯೯೭ ರಲ್ಲಿ ನವದೆಹಲಿಯಲ್ಲಿ ನಡೆದ ಹತ್ತನೆಯ ರಾಷ್ಟ್ರೀಯ ಕಲಾಮೇಳದಲ್ಲಿ ಭಾಗವಹಿಸಿ ಬೆಳಗಾವಿ ಪರಿಸರದ ಚಿತ್ರಕಲೆಯನ್ನು ಪ್ರದರ್ಶಿಸಿತು.[೪೮]

೧೯೯೩ರಲ್ಲಿ ಬೆಳಗಾವಿಯ ಅಂಬೇಡ್ಕರ್ ಗಾರ್ಡನ್ ನಲ್ಲಿ ಜರುಗಿದ 'ಕುಂಚಮತ್ತು ಕಾವ್ಯ' ಎಂಬ ಶಿಬಿರವು ವಿಭಿನ್ನ ರೀತಿಯಲ್ಲಿ ಮೂಡಿ ಬಂದಿತು. ಕವಿಗಳು ಮತ್ತು ಕಲಾವಿದರು ಒಂದೆಡೆ ಸೇರಿ ರಾಷ್ಟ್ರೀಯ ಐಕ್ಯತೆಗೆ ಸಂಬಂಧಿಸಿದಂತೆ ಕವಿತೆಗಳನ್ನು ಚಿತ್ರಗಳನ್ನು ರಚಿಸಿ ಪ್ರದರ್ಶಿಸಲಾಯಿತು.[೪೯] ೧೯೯೮ರಲ್ಲಿಯೂ ಇದೇ ರೀತಿಯ ವಿನೂತನ ಕಾರ್ಯಕ್ರಮವನ್ನು ಕನ್ನಡ ಸಾಹಿತ್ಯ ಭವನದಲ್ಲಿ ಏರ್ಪಡಿಸಲಾಯಿತು. ಆರು ಜನ ಕವಿಗಳು, ಆರು ಜನ ಕಲಾವಿದರು ತಮ್ಮ ಕಾವ್ಯ ಕೃತಿಗಳನ್ನು ರಚಿಸಿ ಪ್ರದರ್ಶಿಸಿದರು.

ಚಿತ್ರಕಲೆಯನ್ನು ಸ್ವಯಂ ಕಲಿಕೆಯ ಮೂಲಕ ರೂಢಿಸಿಕೊಂಡು ಮಹತ್ವದ ಚಿತ್ರಗಳನ್ನು ಬಿಡಿಸಿದ ಪ್ರೊ. ಡಿ. ಎಸ್. ಚೌಗಲೆಯವರು ಉಪನ್ಯಾಸಕರಾಗಿ, ಸಾಹಿತಿಗಳಾಗಿ, ನಾಟಕಕಾರರಾಗಿ, ಚಿತ್ರಕಲಾವಿದರಾಗಿ ಬಹುಮುಖ ಪ್ರತಿಭೆಯನ್ನು ಹೊಂದಿದ್ದಾರೆ. ಬೆಳಗಾವಿಯ ಸಾಂಸ್ಕೃತಿಕ ವಲಯದಲ್ಲಿ ಒಂದಿಲ್ಲೊಂದು ಕಾರ್ಯಕ್ರಮಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ಚೌಗಲೆಯವರ ಚಿತ್ರಗಳು ವಿಶಿಷ್ಟವಾಗಿವೆ. ಅಮೂರ್ತ, ಮೂರ್ತ ನೆಲೆಯಲ್ಲಿ ತಮ್ಮದೇ ವಿಧಾನ, ತಂತ್ರ, ವರ್ಣಗಳಲ್ಲಿ ಅಭಿವ್ಯಕ್ತಿಸುವ ಚೌಗಲೆಯವರ ಕಲೆಯ ಮುಖ್ಯ ಆಶಯ 'ಜನಪದ': ರಾಷ್ಟ್ರಾದ್ಯಾಂತ ಪ್ರದರ್ಶನಗೊಂಡಿರುವ ಅವರ ಚಿತ್ರಕಲೆಯು ಆಧುನಿಕ ಚಿತ್ರಕಲೆಯ ಹಲವಾರು ಆಯಾಮಗಳನ್ನು ಮೈಗೂಡಿಸಿಕೊಂಡಿದೆ.

ಪ್ರಕಾಶ ಸಿದ್ನಾಳ ಬೆಳಗಾವಿಯ ಮತ್ತೋರ್ವ ಉದಯೋನ್ಮುಖ ಕಲಾವಿದರು. ಕೇಂದ್ರಿಯ ಶಾಲೆಯಲ್ಲಿ ಕಲಾ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿರುವ ಇವರ ಚಿತ್ರಕೃತಿಗಳಲ್ಲಿ ಸುತ್ತಲಿನ ಪರಿಸರದ ಪ್ರಭಾವ ಎದ್ದು ಕಾಣುತ್ತದೆ. ನಿಸರ್ಗದ ಕುತೂಹಲವನ್ನು ತಮ್ಮ ಚಿತ್ರಗಳಲ್ಲಿ ಅಭಿವ್ಯಕ್ತಿಸುವ ಕಲೆ ಇವರಲ್ಲಿ ಕಂಡುಬರುತ್ತದೆ. ಇವರ ಹಲವಾರು ಕಲಾಕೃತಿಗಳ ಪ್ರದರ್ಶನ ಏರ್ಪಟ್ಟು ಕಲಾರಸಿಕರ ಗಮನ ಸೆಳೆದಿವೆ.

ನಿಸರ್ಗ ಚಿತ್ರಕಲೆಯಲ್ಲಿ ಆಸಕ್ತಿಹೊಂದಿದ ಶಿವು ಹಿರೇಮಠ ಇವರ ಚಿತ್ರಗಳು ವಾಸ್ತವ ನೆಲೆಯಲ್ಲಿ ಮೂಡಿ ಬರುತ್ತವೆ. ಬೆಳಗಾವಿಯ ಚಿತ್ರಕಲಾ ಕ್ಷೇತ್ರದಲ್ಲಿ ಸಂಪೂರ್ಣವಾಗಿ ತಮ್ಮನ್ನು ತೊಡಗಿಸಿಕೊಂಡು ಚಿತ್ರಕಲೆಯ ಬೆಳವಣಿಗೆಗೆ ಕಾರಣರಾಗಿದ್ದಾರೆ. ಇವರ ಏಕವ್ಯಕ್ತಿ ಕಲಾ ಪ್ರದರ್ಶನಗಳು ರಾಷ್ಟ್ರಾದ್ಯಾಂತ ಪ್ರದರ್ಶನಗೊಂಡಿವೆ. ಬೆಳಗಾವಿ, ಬೆಂಗಳೂರು,

ಹುಬ್ಬಳ್ಳಿ, ಧಾರವಾಡ, ನವದೆಹಲಿ ಮುಂತಾದ ಕಡೆಗಳಲ್ಲಿ ಪ್ರದರ್ಶನಗೊಂಡು ಕಲಾಭಿಮಾನಿಗಳ ಗಮನ ಸೆಳೆದಿವೆ. ಬೆಳಗಾವಿಯ ರಂಗಸಂಪದ ದ ಮೂಲಕ ಹಲವಾರು ಕಾರ್ಯಕ್ರಮಗಳನ್ನು ರೂಪಿಸಿ ಗುರುತರ ಕಾರ್ಯಗಳನ್ನು ಮಾಡಿದ್ದಾರೆ. ಈ ಕಲೆಯೊಂದಿಗೆ ಸಂಗೀತ ಸಾಹಿತ್ಯದಲ್ಲಿಯೂ ಆಸಕ್ತಿಯನ್ನು ಹೊಂದಿ ಕತೆ, ಕವನ, ಕಾದಂಬರಿಗಳನ್ನು ರಚಿಸಿದ್ದಾರೆ. ಶರಣರನ್ನು ಕುರಿತು ವಿಶಿಷ್ಟವಾದ ಚಿತ್ರಗಳನ್ನು ಚಿತ್ರಿಸಿ ಚಿತ್ರಕಲೆಯಲ್ಲಿ ತೊಡಗಿಸಿಕೊಂಡಿದ್ದಾರೆ. ತೀರ ಭಿನ್ನವಾದ ನೆಲೆಯಲ್ಲಿ ಕಲಾಕೃತಿಗಳನ್ನು ನಿರ್ಮಿಸುತ್ತಿರುವ ವಿಶ್ವನಾಥ ಗುಗ್ಗರಿಯವರು ಬೆಳಗಾವಿಯ ಜವಾಹರಲಾಲ ನೆಹರು ವೈದ್ಯಕೀಯ ಮಹಾವಿದ್ಯಾಲಯದಲ್ಲಿ ಕಲಾ ವಿಭಾಗದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ.ಕಡಿಮೆ ಬಣ್ಣಗಳ ಬಳಕೆಯನ್ನು ಮಾಡಿ ಕೃತಿ ರಚಿಸುತ್ತಿರುವ ಅವರ ಕಲಾಕೃತಿಗಳಲ್ಲಿ ರೇಖೆಯ ಬೆಳಕು ಎದ್ದು ಕಾಣುತ್ತದೆ. ಮೈವಳಿಕೆಯನ್ನು ಬಳಿ ಬಣ್ಣದಲ್ಲಿ ಸಿದ್ಧಗೊಳಿಸಿ, ಅಲ್ಲಿ ತಮ್ಮ ಚಿಂತನೆಯನ್ನು ರೇಖೆಯ ಮೂಲಕ ಅಭಿವ್ಯಕ್ತಿಸುವ ಇವರ ಚಿತ್ರಗಳು ಮನುಷ್ಯನ ವಿವಿಧ ಗುಣ ಸ್ವಭಾವಗಳನ್ನು ಬಿಡಿಸಿ ತೋರಿಸುತ್ತವೆ.

ಬೆನನ್‌ಸ್ಮಿತ್ ಕಲಾ ಶಾಲೆಯಲ್ಲಿ ಶಿಕ್ಷಕರಾದ ದಿಲೀಪ ಕುಲಕರ್ಣಿ ಬಹುಮುಖ ಪ್ರತಿಭೆಯ ಕಲಾವಿದರು. ಅಮೂರ್ತದೊಳಗೆ ಮಾನವ ರೂಪಗಳನ್ನು ಅವುಗಳ ಒಳತುಡಿತಗಳ ಮೂಲಕ ಅಭಿವ್ಯಕ್ತಿಸುವ ಇವರ ಕಲಾಕೃತಿಗಳು ವಿಶೇಷವಾಗಿ ಕಂಡುಬರುತ್ತವೆ. ಆಧುನಿಕ ಸಂವೇದನೆಗೆ ಮನುಷ್ಯ ಮುಖಾಮುಖಿಯಾಗುವ ಧ್ವನಿ ಅವರ ಚಿತ್ರಗಳಲ್ಲಿ ಕಂಡುಬರುತ್ತದೆ. ಇವರ ಕಲಾಕೃತಿಗಳು ಹೆಚ್ಚು ಗಾಢ ಬಣ್ಣಗಳ ಪ್ರಯಾಲೇಟ್ ಹೊಂದಿರುವುದು ಕಂಡುಬರುತ್ತದೆ. ಬೆಂಗಳೂರು, ಮೈಸೂರು, ಧಾರವಾಡ, ಬೆಳಗಾವಿ ಮುಂತಾದ ಕಡೆಗಳಲ್ಲಿ ಇವರ ಕಲಾಕೃತಿಗಳು ಪ್ರದರ್ಶನಗೊಂಡಿವೆ.

ಬೆಳಗಾವಿಯ ಚಿತ್ರಕಲಾ ಕ್ಷೇತ್ರದಲ್ಲಿ ಕೇವಲ ಪುರುಷರಷ್ಟೇ ಅಲ್ಲ, ಸ್ತ್ರೀಯರು ಕೂಡ ಮಹತ್ವದ ಪಾತ್ರವನ್ನು ವಹಿಸಿದ್ದಾರೆ. ೧೯೯೦ರಲ್ಲಿ ಬೆಳಗಾವಿಯ ಚಿತ್ರಕಲಾವಿದೆಯರೆಲ್ಲಾ ಸೇರಿಕೊಂಡು 'ಚಿತ್ರಕಲಾ ಕರಕುಶಲ ಮಹಿಳಾ ಅಭಿವೃದ್ಧಿ ಸಂಘ' ವನ್ನು ಸ್ಥಾಪಿಸಿ ಅದರ ಮೂಲಕ ಕಲಾಚಟುವಟಿಕೆಯಲ್ಲಿ ತೊಡಗಿದರು.[೫೦] ಚಿತ್ರ ಕೃತಿಗಳ ಪ್ರದರ್ಶನ, ಕರಕುಶಲ ವಸ್ತುಗಳ ಪ್ರದರ್ಶನಗಳನ್ನು ಏರ್ಪಡಿಸಿ ಮಹಿಳೆಯರಿಗೆ ಪ್ರೇರಣೆಯನ್ನು ನೀಡಿದರು.

ಶಿಲ್ಪಾ ಖಡಕಬಾವಿ ಮೂಲತಃ ದಾವಣಗೇರಿಯವರು. ಸದ್ಯ ಬೆಳಗಾವಿ ರಹವಾಸಿಯಾಗಿದ್ದುಕೊಂಡು ಚಿತ್ರಕಲೆಯಲ್ಲಿ ತೊಡಗಿದ್ದಾರೆ. ಭಿನ್ನ ಭಿನ್ನ ಶೈಲಿಗಳಲ್ಲಿ ಕಲಾಕೃತಿಗಳನ್ನು ರಚಿಸುವ ಇವರು ನಿಸರ್ಗ ಚಿತ್ರಗಳಲ್ಲಿ ಹೆಚ್ಚು ಆಸಕ್ತಿ ಹೊಂದಿದ್ದಾರೆ. ಮಾನವ ಸ್ವಭಾವಗಳ ಹುಡುಕಾಟ ತೈಲ ಮಾಧ್ಯಮವ ಚಿತ್ರಗಳಲ್ಲಿ ವಿಶಿಷ್ಟವಾಗಿ ಮೂಡಿ ಬಂದಿದೆ.

ಜಯಶ್ರೀ ಆಚರೇಕರ ಬೆಳಗಾವಿಯಲ್ಲಿ ಚಿತ್ರಕಲಾ ಕರಕುಶಲ ಮಹಿಳಾ ಕಲಾಭಿವೃದ್ಧಿ ಸಂಘದ ಚೇರ್‌ಮನ್‌ರಾಗಿ ಹಲವಾರು ರಚನಾತ್ಮಕ ಕಾರ್ಯಗಳ ಮೂಲಕ ಚಿತ್ರಕಲಾ ವಲಯದಲ್ಲಿ ಗುರುತಿಸಿಕೊಂಡಿದ್ದಾರೆ. ಹಲವಾರು

ಕಲಾಕೃತಿಗಳನ್ನು ರಚಿಸಿ ಪ್ರದರ್ಶಿಸಿದ್ದಾರೆ. ತೈಲವರ್ಣ, ಆಕ್ರಿಲಿಕ್, ಮಿಶ್ರಮಾಧ್ಯಮಗಳಲ್ಲಿ ಇವರ ಕಲಾಕೃತಿಗಳು ಮೂಡಿ ಬಂದಿವೆ.

ಬೆನನ್‌ಸ್ಮಿತ್ ಕಲಾ ಶಾಲೆಯ ಪ್ರಾಚಾರ್ಯ ಅನಿಲ ಪ್ರಕಾಶ ಚಿತ್ರಕಲೆಯಲ್ಲಿ ವಿಶಿಷ್ಟ ರೀತಿಯ ಪ್ರಯೋಗಗಳನ್ನು ಅಳವಡಿಸಿಕೊಂಡು ಚಿತ್ರಕಲಾ ಕೃತಿಗಳನ್ನು ರಚಿಸಿ ಗಮನ ಸೆಳೆದಿದ್ದಾರೆ. ಲಲಿತ ಕಲಾ ಅಕಾಡೆಮಿ ಸದಸ್ಯರಾಗಿ ಬೆಳಗಾವಿಯಲ್ಲಿ ಎರಡು ಬಾರಿ ಲಲಿತಕಲಾ ಅಕಾಡೆಮಿಯ ಸಹಯೋಗದೊಂದಿಗೆ ಕಲಾ ಶಿಬಿರಗಳನ್ನು ಏರ್ಪಡಿಸಿ ಬೆಳಗಾವಿಯಲ್ಲಿ ಕಲಾವಾತಾವರಣ ಬೆಳೆಯಲು ಸಹಕರಿಸಿದ್ದಾರೆ. ಇವರ ಕಲಾಕೃತಿಗಳು ಅಮೂರ್ತ ರಚನೆಯಲ್ಲಿ ವಿಶೇಷವಾಗಿ ಕಂಡುಬರುತ್ತವೆ. ಆಕ್ರಿಕಲ್ ಮಾಧ್ಯಮವನ್ನು ಕ್ಯಾನವಾಸಿನ ಮೇಲೆ ಅವರು ದುಡಿಸಿಕೊಳ್ಳುವ ರೀತಿ ವಿಶಿಷ್ಟವಾದುದಾಗಿದೆ. ಅಮೂರ್ತದಲ್ಲಿಯೂ ಮೂರ್ತದ ರೂಪಗಳನ್ನು ಸೃಷ್ಟಿಸಿ ಕಲಾಕೃತಿಗೆ ವಿಶೇಷವಾದ ಆಕರ್ಷಣೀಯ ಕಳೆಯನ್ನು ತರುವರು. ತಮ್ಮ ಕಲಾಕೃತಿಗಳಿಗೆ ವಿವಿಧ ತಂತ್ರಗಳನ್ನು ಪರಿಕರಗಳನ್ನು ಬಳಸಿಕೊಂಡು ವಿನೂತನವಾಗಿ ಚಿತ್ರ ಬಿಡಿಸುವ ಚಾತುರ್ಯವನ್ನು ಹೊಂದಿದ್ದಾರೆ. ಇವರ ಕಲಾಕೃತಿಗಳು ಬೆಂಗಳೂರು, ಮುಂಬೈ ಬೆಳಗಾವಿ ಮುಂತಾದ ಕಡೆಗಳಲ್ಲಿ ಪ್ರದರ್ಶನಗೊಂಡಿವೆ.

ದಿ. ಶೇಖರ ಕದಡಿಯವರು ಬೆಳಗಾವಿಯಲ್ಲಿ ಕಲಾಪರಿಸರವನ್ನು ನಿರ್ಮಿಸಿದವರಲ್ಲಿ ಒಬ್ಬರು. ಸಂಘಟನಾ ಚಾತುರ್ಯತೆಯನ್ನು ಪಡೆದುಕೊಂಡಿದ್ದ ಅವರು ಬೆಳಗಾವಿಯಲ್ಲಿ ಹಲವಾರು ಕಾರ್ಯಕ್ರಮಗಳನ್ನು ರೂಪಿಸಿದ್ದರು. ಕರ್ನಾಟಕ ಲಲಿತ ಕಲಾ ಅಕಾಡೆಮಿಯ ಸದಸ್ಯರಾಗಿ ಬೆಳಗಾವಿಯಲ್ಲಿ ಕಲಾ ಶಿಬಿರಗಳನ್ನು, ಪ್ರದರ್ಶನಗಳನ್ನು, ಏರ್ಪಡಿಸಿದ್ದರು. ಇವರ ಕಲಾಕೃತಿಗಳಲ್ಲಿ ನಿಸರ್ಗ ರಚನೆ, ಪೋರ್ಟ್ರೇಟ್ ಹಾಗೂ ಸೃಜನಶೀಲ ಕೃತಿಗಳ ರಚನೆ ವಿಶೇಷವಾದ ಗಮನಸೆಳೆಯುವಂತಹದು. ರೂಪಕ, ಸಂಕೇತಗಳನ್ನು ಕ್ಯಾನವಾಸಿನ ಮೇಲೆ ಮುರಿದು ಕಟ್ಟುತ್ತ ಒಂದು ಹೊಸ ಗ್ರಹಿಕೆಯ ಅಭಿವ್ಯಕ್ತಿಗೆ ತಂದುಕೊಳ್ಳುತ್ತಿದ್ದರು. ಅವರು ರಚಿಸಿದ ಭಾವಚಿತ್ರಗಳು ಆಕರ್ಷಣೀಯವಾಗಿದ್ದವು. ಹಲವಾರು ಬಾರಿ ಗುಂಪು ಪ್ರದರ್ಶನಗಳಲ್ಲಿ ಇವರ ಕಲಾಕೃತಿಗಳು ಪ್ರದರ್ಶನಗೊಂಡಿವೆ.

ಗ್ರಾಫಿಕ್ ಕಲೆ : ಗ್ರಾಫಿಕ್ ಕಲೆಯಲ್ಲಿ ಬೆಳಗಾವಿಯು ರಾಷ್ಟ್ರಮಟ್ಟದಲ್ಲಿ ಹೆಸರು ಮಾಡಿದೆ. ಇಲ್ಲಿಯ ಗ್ರಾಫಿಕ್ ಕಲೆಯು ಒಂದು ವಿಶಿಷ್ಟವಾದ ಪರಂಪರೆಯನ್ನೇ ಹೊಂದಿದೆ. ಈ ಕಲೆಯನ್ನು ಕುರಿತು ಹಲವು ಪ್ರದರ್ಶನಗಳು ಬೆಳಗಾವಿಯಲ್ಲಿ ಜರುಗಿವೆ. ೧೯೯೪ ರಲ್ಲಿ ರಾಜ್ಯ ಮಟ್ಟದ ಗ್ರಾಫಿಕ್ ಕ್ಯಾಂಪ್ ಬೆನನ್ ಸ್ಮಿತ್ ಕಲಾ ಶಾಲೆಯಲ್ಲಿ ಏರ್ಪಟ್ಟು ರಾಜ್ಯದ ವಿವಿಧ ಭಾಗಗಳಿಂದ ಬಂದಿದ್ದ ಗ್ರಾಫಿಕ್ ಚಿತ್ರಗಳು ಪ್ರದರ್ಶನಗೊಂಡವು.[೫೧] ಮುಂದೆ ೧೯೯೯ ರಲ್ಲಿ ಕನ್ನಡ ಸಾಹಿತ್ಯ ಭವನದಲ್ಲಿ 'ಗ್ರಾಫಿಕ್ ಕಲಾ ಪ್ರದರ್ಶನ' ಏರ್ಪಟ್ಟಿತ್ತು. ಇದರಿಂದ ಬೆಳಗಾವಿಯಲ್ಲಿ ಗ್ರಾಫಿಕ್ ಕಲೆಗೆ ವಿಶೇಷವಾದ ವಾತಾವರಣ ನಿರ್ಮಾಣಗೊಳ್ಳುವಂತಾಯಿತು.

ಈ ಎಲ್ಲ ಹಿನ್ನೆಲೆಯಲ್ಲಿ ಬೆಳಗಾವಿಯಲ್ಲಿ ಚಿತ್ರಕಲಾ ಚಟುವಟಿಕೆಗಳು ನಿರಂತರವಾಗಿ ಸಾಗಿಕೊಂಡು ಬರುತ್ತಿವೆ. ಮೇಲಿಂದ ಮೇಲೆ ಒಂದಿಲ್ಲೊಂದು ಕಾರ್ಯಕ್ರಮಗಳು ಚಿತ್ರಕಲೆಗೆ ಸಂಬಂಧಿಸಿದಂತೆ ಜರುಗುತ್ತವೆ. ಅವುಗಳಲ್ಲಿ ಮುಖ್ಯವಾಗಿ ಕರ್ನಾಟಕ ಲಲಿತ ಕಲಾ ಅಕಾಡೆಮಿಯವರು ನಡೆಸಿದ ೨೭ ನೆಯ ವಾರ್ಷಿಕ ಚಿತ್ರ ಕಲಾಕೃತಿಗಳ ಸಂಚಾರಿ ಪ್ರದರ್ಶನ 'ಚಿತ್ರಯಾತ್ರೆ' ಎಂಬ ಹೆಸರಿನಲ್ಲಿ ಬೆಳಗಾವಿಯಲ್ಲಿ ಜರುಗಿತು. ೧೯೯೪ಳ ರಲ್ಲಿ ಚಿತ್ರಕಲಾವಿದರ ಏಕವ್ಯಕ್ತಿ ಹಾಗೂ ಸಾಮೂಹಿಕ ಕಲಾಪ್ರದರ್ಶನ, ೨೦೦೩ ರಲ್ಲಿ ಹಿರಿಯ ಕಲಾವಿದರಾದ ಜಿ. ಎಸ್. ದಂಡಾವತಿಮಠ ಮತ್ತು ಎಮ್. ವಿ. ಮಿಣಜಗಿಯವರ ಶತಮಾನೋತ್ಸವದ ಕಾರ್ಯಕ್ರಮ, ಇವುಗಳ ಜೊತೆಗೆ ರಾಜ್ಯದ ಕಲಾವಿದರು, ಹೊರ ರಾಜ್ಯದ ಕಲಾವಿದರು ನಡೆಸುವ ಚಿತ್ರ ಪ್ರದರ್ಶನ, ಕಾರ್ಯಾಗಾರ ಹೀಗೆ ನಿರಂತರವಾಗಿ ಕಲಾ ಚಟುವಟಿಕೆಗಳು ಬೆಳಗಾವಿಯಲ್ಲಿ ನಡೆಯುತ್ತಿವೆ. ಕನ್ನಡ ಸಾಹಿತ್ಯ ವಿಶ್ವಸ್ಥ ಮಂಡಳಿಯವರು ಸಾಹಿತ್ಯ ಭವನದಲ್ಲಿ ಆರ್ಟ ಗ್ಯಾಲರಿಯನ್ನು ಸ್ಥಾಪಿಸಿ ಕಲೆಯ ಪ್ರದರ್ಶನಕ್ಕೆ ನೆಲೆಯನ್ನು ಒದಗಿಸಿದ್ದಾರೆ.

**೩. ಸಂಗೀತ :**

ಸಂಗೀತ ಕ್ಷೇತ್ರದಲ್ಲಿ ಬೆಳಗಾವಿಗೆ ವಿಶಿಷ್ಟವಾದ ಸ್ಥಾನಮಾನಗಳಿವೆ. ಸಂಗೀತದ ಮೂಲಕ ರಾಷ್ಟ್ರ-ಅಂತರಾಷ್ಟ್ರೀಯ ಮಟ್ಟದಲ್ಲಿಯೂ ಬೆಳಗಾವಿ ಗುರುತಿಸುವಂತಾಗಿದೆ. ಪ್ರಾಚೀನ ಕಾಲದಿಂದಲೂ ಸಂಗೀತಕ್ಕೆ ಮಹತ್ವವನ್ನು ಒದಗಿಸಿದ ಬೆಳಗಾವಿಯಲ್ಲಿ ರಾಜರ ಆಳ್ವಿಕೆಯ ಕಾಲದಲ್ಲಿ ಸಂಗೀತವು ಶಿಕ್ಷಣದ ಒಂದು ಭಾಗವಾಗಿ ಅಧ್ಯಯನಗೊಳ್ಳುತ್ತಿತ್ತು. ಬೆಳಗಾವಿಯಲ್ಲಿಯ ಹಲವಾರು ದೇವಾಲಯಗಳು ಸಂಗೀತದ ಶಾಲೆಗಳಾಗಿದ್ದವು. ಸಂಗೀತ ನೃತ್ಯಕ್ಕೆ ಸಂಬಂಧಿಸಿದ ಹಲವಾರು ಶಿಲ್ಪಕೃತಿಗಳು ಕುರುಹುಗಳು ಸಾಹಿತ್ಯಿಕ ದಾಖಲೆಗಳು ಬೆಳಗಾವಿಯ ಸಂಗೀತ ಪರಂಪರೆಯನ್ನು ಅಧ್ಯಯನ ಮಾಡುವಲ್ಲಿ ಪ್ರಮುಖ ಆಕರಗಳಾಗಿವೆ.

ಒಂದು ಸ್ಥಳೀಯ ಐತಿಹ್ಯದ ಪ್ರಕಾರ ರಾವಣನು ದಂಡಕಾರಣ್ಯವನ್ನು ಪ್ರವೇಶ ಮಾಡಿದಾಗ ಸಂಗೀತದ ನಾದ ಅವನ್ನು ಆಕರ್ಷಿಸುತ್ತದೆ. ಆ ನಾದವನ್ನು ಕೇಳಿದ ರಾವಣನು ಅಲ್ಲಿ ಬಂದು ಆ ಸಂಗೀತಗಾರರನ್ನು ತನ್ನ ಆಸ್ಥಾನಕ್ಕೆ ಕರೆದುಕೊಂಡು ಹೋದನೆನ್ನುವ ಕಥೆಯು ಬೆಳಗಾವಿಗೆ ಸಂಬಂಧಿಸಿದಾಗಿದೆ.[೯೭] ರಾವಣನನ್ನು ಆಕರ್ಷಿಸಿದ ಆ ಸ್ಥಳವೇ ಯದುಗ್ರಾಮವಾಗಿತ್ತು. ಅಂದಿನ ಯದುಗ್ರಾಮವೇ ಇಂದಿನ ಬೆಳಗಾವಿ. ಇದು ಕೇವಲ ಪುರಾಣದ ಕಥೆಯಾದರೂ ಬೆಳಗಾವಿಯ ಪರಿಸರದ ಅಧ್ಯಯನವನ್ನು ಕೈಕೊಂಡಾಗ ಈ ಕಥೆಯಲ್ಲಿ ವಾಸ್ತವತೆಯ ಕೆಲವು ಅಂಶಗಳು ಗೋಚರಿಸುತ್ತವೆ. ಬೆಳಗಾವಿಯ ಸುತ್ತಮುತ್ತಲೆಲ್ಲ ಬೆಟ್ಟಗುಡ್ಡಗಳು ತುಂಬಿಕೊಂಡಿವೆ. ಸಹ್ಯಾದ್ರಿ ಬೆಟ್ಟದ ಸೆರಗಿನಲ್ಲಿ ನೆಲೆಗೊಂಡಿರುವ ಬೆಳಗಾವಿಗೆ 'ವೇಣುಗ್ರಾಮ'ವೆಂಬುದು ಪ್ರಾಚೀನ ಹೆಸರು. ಸಂಸ್ಕೃತದಲ್ಲಿ 'ವೇಣು' ಎಂದ್ರೆ 'ಬಿದಿರು' ಬಿದಿರು ಹೆಚ್ಚಾಗಿರುವುದರಿಂದ 'ವೇಣು ಗ್ರಾಮ' ವೆಂಬ ಹೆಸರು ಬಂದಿತು ಎಂಬುದನ್ನು ಈ ಹಿಂದೆಯೇ ನೋಡಿದ್ದೇವೆ. (೭೦-೮೦ ವರ್ಷಗಳ ಹಿಂದೆ ದಟ್ಟವಾದ ಬಿದಿರು ಬೆಟ್ಟಗಳು ಬೆಳಗಾವಿಯಲ್ಲಿದ್ದವು ಎನ್ನುವುದನ್ನು ಬೆಳಗಾವಿಯ ಕೆಲವು ಹಿರಿಯ ನಾಗರಿಕರು ತಿಳಿಸುತ್ತಾರೆ. ಈಗಲೂ ಬಿದಿರ ಬೆಳೆ ಬೆಳಗಾವಿಯ ತುಂಬೆಲ್ಲಾ ಅಲ್ಲಿ ಕಂಡುಬರುತ್ತದೆ).

ಈ ಬಿದಿರಿನಿಂದ 'ಕೊಳಲು' ಎಂಬ ಸಂಗೀತ ವಾದನವನ್ನು ತಯಾರಿಸಲಾಗುತ್ತಿತ್ತು(ಈಗಲೂ ಬಿದಿರಿನಿಂದಲೇ ತಯಾರಿಸುತ್ತಾರೆ). ಬೆಳಗಾವಿಯ 'ಕೊಳಲು'ಗಳಿಗೆ ಬೇಡಿಕೆ ಇತ್ತು. ಈ ಕೊಳಲನ್ನು ಅತ್ಯಂತ ಮಧುರವಾಗಿ ನುಡಿಸುವ ಕಲಾವಿದರು ಸಂಗೀತಗಾರರನ್ನು ಸಹಜವಾಗಿಯೇ ಬೆಳಗಾವಿಯು ಹೊಂದಿತ್ತು. ಈ ಹಿನ್ನೆಲೆಯಲ್ಲಿ ಸಂಗೀತದ ನಿಕಟವಾದ ಸಂಬಂಧವನ್ನು ಪ್ರಾಚೀನಕಾಲದಿಂದಲೂ ಹೊಂದಿರುವುದು ಸ್ಪಷ್ಟಗೊಳ್ಳುತ್ತದೆ.

ಬೆಳಗಾವಿಯ ಪ್ರಾಚೀನ ಹೆಸರುಗಳನ್ನು ಗಮನಿಸಿದಾಗ ಇದಕ್ಕೆ ಮತ್ತಷ್ಟು ಪುಷ್ಠಿ ದೊರೆಯುತ್ತದೆ. ವೇಣು-ಯದು-ಮಾಧವ ಎನ್ನುವ ಹೆಸರುಗಳ ಹಿಂದೆ ಬೆಳಗಾವಿ ಪ್ರದೇಶ ನೆಲೆಗೊಂಡಿದೆ. ವೇಣುಗ್ರಾಮ-ಯದುಗ್ರಾಮ-ಮಾಧವಪುರ ಎನ್ನುವ ಹೆಸರುಗಳು ಬೆಳಗಾವಿಯ ಪ್ರಾಚೀನ ಹೆಸರುಗಳಾಗಿವೆ. ಯದುಗ್ರಾಮವೆಂದರೆ ಯಾದವರ ಗ್ರಾಮ, ಮಾಧವಪುರವೆಂದರೆ ಕೃಷ್ಣಪುರ ಹೀಗೆ ಬಿದಿರಿನ ಬೆಳೆಯಿಂದ ಹುಟ್ಟಿಕೊಂಡ ಕೊಳಲು ಕೊಳಲಿನಿಂದ ಹುಟ್ಟುವ ನಾದ, ಈ ನಾದವು ಸಂಗೀತದ ಜೊತೆಗೆ ಸೇರಿಕೊಂಡಿದೆ.

ಬೆಳಗಾವಿಯ ಸಂಗೀತ ಪರಂಪರೆಯ ಸ್ಪಷ್ಟವಾದ ಚಿತ್ರಣ ೧೨ನೆಯ ಶತಮಾನದ ಕೆಲವು ಸ್ಮಾರಕಗಳಿಂದ ತಿಳಿದುಬರುತ್ತದೆ. ಬೆಳಗಾವಿಯ ಕೋಟೆಯೊಳಗಿರುವ ಮಿಲಿಟರಿ ಮೈದಾನದಲ್ಲಿ ಪೂರ್ವಾಭಿಮುಖವಾಗಿರುವ ಶಿವದೇವಾಲಯದ ವಾಸ್ತುಶಿಲ್ಪಕಲೆಯು ಸಂಗೀತ ವಾದ್ಯಗಳ ಮೇಲೆ ಬೆಳಕು ಚೆಲ್ಲುತ್ತದೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕಟ್ಟಲ್ಪಟ್ಟ ಈ ದೇವಾಲಯವು ಸ್ವಲ್ಪ ಸುಸ್ಥಿತಿಯಲ್ಲಿದೆ.

ಈ ದೇವಾಲಯದ ಭಾಗಗಳ ಶಿಲ್ಪಗಳನ್ನು ಶಿಲಾ ವಿಗ್ರಹಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಆ ಕಾಲದ ಸಾಂಸ್ಕೃತಿಕ ಚಿತ್ರಣ ದೊರೆಯುತ್ತದೆ. ಇಲ್ಲಿ ಕೆತ್ತಲ್ಪಟ್ಟ ಶಿಲಾ ಸುಂದರಿಯರ ನಾಟ್ಯಭಂಗಿಯ ನೃತ್ಯ, ಸಂಗೀತ ವಾದ್ಯ, ಅಲಂಕೃತ ಆಭರಣಗಳು, ವಸ್ತ್ರಾಲಂಕಾರಗಳು, ಮುಂತಾದ ಕಲಾಕೃತಿಗಳಿಂದ ಅಂದಿನ ಸ್ತ್ರೀಯರು ನಾಟ್ಯ, ಸಂಗೀತದಲ್ಲಿ ಪರಿಣತಿಯನ್ನು ಪಡೆದಿದ್ದರು ಎನ್ನುವುದು ತಿಳಿದುಬರುತ್ತದೆ.[೫೩] ಬೆಳಗಾವಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ ರಟ್ಟರು ಕಲೆ ವಾಸ್ತುಶಿಲ್ಪ, ಸಂಗೀತ, ಸಾಹಿತ್ಯಕ್ಕೆ ಮಹತ್ವದ ಕೊಡುಗೆಗಳನ್ನು ನೀಡಿದ್ದಾರೆ. ರಟ್ಟರ ಪ್ರಸಿದ್ಧ ದೊರೆ ನಾಲ್ಕನೆಯ ಕಾರ್ತವೀರ್ಯನ ಆಳ್ವಿಕೆಯ ಕಾಲದಲ್ಲಿ ಸುಮಾರು ಕ್ರಿ.ಶ. ೧೨೦೪-೦೫ ರಲ್ಲಿ ಬೆಳಗಾವಿಯಲ್ಲಿ ಕಟ್ಟಲ್ಪಟ್ಟ 'ಕಮಲ ಬಸದಿ' ಉತ್ಕೃಷ್ಟವಾಗಿದೆ.[೫೪] ಕಾರ್ತವೀರ್ಯನ ಮಂತ್ರಿ ಬೀಚಿರಾಜನಿಂದ ಕಟ್ಟಲ್ಪಟ್ಟ ಈ ಶಾಂತಿನಾಥ ಬಸದಿಯ ಕೆತ್ತನೆಯಲ್ಲಿ ಸಂಗೀತಕ್ಕೆ ಸಂಬಂಧಪಟ್ಟ ಹಲವಾರು ಶಿಲ್ಪಕಲಾಕೃತಿಗಳು ಮಹತ್ವದ್ದಾಗಿವೆ.

ಕಮಲ ಬಸದಿಯ ಗರ್ಭಗೃಹದ ಪೀಠದ ಮೇಲೆ ಜಿನನ ಮೂರ್ತಿಯಿದ್ದು ಆ ಮೂರ್ತಿಯ ಹಿಂಬದಿಯಲ್ಲಿ ಮಹಾವೃಕ್ಷದ ಪ್ರಭಾವಳಿಯಿರುತ್ತದೆ. ಈ ಪ್ರಭಾವಳಿ (ಮಹಾವೃಕ್ಷ)ಯು ರಟ್ಟರ ಕಾಲದ ಶ್ರೇಷ್ಠ ಕಲಾಕೃತಿಯಾಗಿದೆ.

ಈ ಪ್ರಭಾವಳಿಯಲ್ಲಿ ಹತ್ತು ವರ್ತುಳಗಳಿದ್ದು ಪ್ರತಿಯೊಂದು ವೃತ್ತದಲ್ಲಿಯೂ ವಿಭಿನ್ನ ಭಂಗಿಯ ಶಿಲ್ಪಗಳನ್ನು ಕೆತ್ತಲಾಗಿದೆ. ಅದರಲ್ಲಿ ಆರನೆಯ ವರ್ತುಳದಲ್ಲಿ ತಮಟೆ ಬಾರಿಸುತ್ತ ನೃತ್ಯ ಮಾಡುತ್ತಿರುವ ಪುರುಷನ ಮೂರ್ತಿ, ಎಂಟನೆಯ ವರ್ತುಳದಲ್ಲಿ ಕೊಳಲು ಊದುತ್ತ ನೃತ್ಯ ಮಾಡುತ್ತಿರುವ ದೃಶ್ಯ, ಪಕ್ಕದಲ್ಲಿ ಯಕ್ಷ-ಯಕ್ಷಿಣಿಯರು ಮೃದಂಗ ಬಾರಿಸುತ್ತಿರುವುದು, ಒಂಬತ್ತನೆಯ ವರ್ತುಳದಲ್ಲಿ ಕೈಯಲ್ಲಿ ಗಂಟೆಗಳ ಗೊಂಚಲನ್ನು ಹಿಡಿದುಕೊಂಡು ಬಾರಿಸುತ್ತಿರುವ ಪುರುಷ; ಅದರ ಪಕ್ಕದಲ್ಲಿ ಜಾಗಟೆ ಬಾರಿಸುತ್ತಿರುವ ಮೂರ್ತಿಗಳು, ಹತ್ತನೆಯ ವರ್ತುಳದಲ್ಲಿ ವೀಣೆ ನುಡಿಸುವ ಮೂರ್ತಿ, ಅಕ್ಕ ಪಕ್ಕದಲ್ಲಿ ಪುಂಗಿ, ಕಹಳೆಗಳನ್ನು ಊದುವ ಮೂರ್ತಿಗಳು ಕೆತ್ತಲ್ಪಟ್ಟಿವೆ.

ಜಿನಮೂರ್ತಿಯ ಬಲಭಾಗಕ್ಕೆ ಇರುವ ಕಮಲದ ಹೂಗಳ ಬಳ್ಳಿಯೊಳಗೆ ಕೆತ್ತಲ್ಪಟ್ಟ ಮೂರ್ತಿಗಳು ನೃತ್ಯ, ಸಂಗೀತದಲ್ಲಿ ನಿರತವಾಗಿವೆ. ಮೃದಂಗ ಬಾರಿಸುತ್ತ ನೃತ್ಯ ಮಾಡುವುದು, ತಮಟೆ ಬಾರಿಸುವ ಮೂರ್ತಿ, ವೀಣೆ, ತಾಳ, ಬಾರಿಸುವ ಮೂರ್ತಿ, ಗೆಜ್ಜೆ ಗೊಂಚಲ, ಜಯಗಂಟೆ, ಬಾರಿಸುವ ಮೂರ್ತಿ ಕೊಳಲು, ಪುಂಗಿ, ಕಹಳೆ ಊದುವ ಮೂರ್ತಿಗಳು, ನೃತ್ಯ ಮಾಡುತ್ತಿರುವ ಯಕ್ಷ-ಯಕ್ಷಣಿಯರು ಹೀಗೆ ಹಲವಾರು ಶಿಲ್ಪಗಳು ಕೆತ್ತಲ್ಪಟ್ಟಿವೆ.

ಹನ್ನೆರಡನೆಯ ಶತಮಾನದ ಸಂಗೀತ ವಾದ್ಯಗಳ ಮೇಲೆ ಬೆಳಕು ಚೆಲ್ಲುವ ಇಲ್ಲಿಯ ಶಿಲ್ಪಗಳು ರಟ್ಟರ ಕಾಲದಲ್ಲಿ ಬೆಳಗಾವಿಯಲ್ಲಿ ಸಂಗೀತಕ್ಕೆ ವಿಶೇಷವಾದ ಗೌರವವಿತ್ತು ಎನ್ನುವುದು ತಿಳಿದುಬರುತ್ತದೆ. ಆಗಿನ ಕಾಲದಲ್ಲಿ ಸಂಗೀತಕ್ಕೆ ಉಪಯೋಗಿಸುತ್ತಿದ್ದ ವಾದ್ಯಗಳು ಈ ಶಿಲ್ಪಗಳಿಂದ ತಿಳಿದುಬರುತ್ತದೆ. ತಮಟೆ, ಕೊಳಲು, ಮೃದಂಗ, ಗಂಟೆ, ಜಾಗಟೆ, ವೀಣೆ, ಪುಂಗಿ, ಕಹಳೆ, ಗೆಜ್ಜೆ, ತಾಳ, ಜಯಗಂಟೆ, ಮುಂತಾದ ಸಂಗೀತ ವಾದ್ಯಗಳನ್ನು ಆ ಕಾಲದಲ್ಲಿ ಬಳಸುತ್ತಿದ್ದರು. ನೃತ್ಯ, ಸಂಗೀತವು ರಾಜರ ಆಸ್ಥಾನದಲ್ಲಿಯೇ ಆಶ್ರಯವನ್ನು ಪಡೆದುಕೊಂಡಿದ್ದರಿಂದ ಸಂಗೀತಕ್ಕೆ ವಿಶೇಷವಾದ ಸ್ಥಾನಮಾನಗಳಿದ್ದವು.

ರಟ್ಟರ ಕಾಲದ ಸಾಂಸ್ಕೃತಿಕ ಪರಿಸರದ ಮೇಲೆ ಬೆಳಕು ಚೆಲ್ಲುವ ಪ್ರಮುಖ ಸಾಹಿತ್ಯ ಕೃತಿ ಪಾರ್ಶ್ವಪಂಡಿತನ ಪಾರ್ಶ್ವನಾಥ ಪುರಾಣ, ರಟ್ಟರ ನಾಲ್ಕನೆಯ ಕಾರ್ತವೀರ್ಯನ ಆಶ್ರಯದಲ್ಲಿ ಆಸ್ಥಾನ ಕವಿಯಾದ ಪಾರ್ಶ್ವಪಂಡಿತನು ಆ ಕಾಲದ ಸಂಗೀತದ ಬಗೆಗೆ ಸಂಗೀತ ವಾದ್ಯಗಳ ಬಗೆಗೆ ವಿವರಣೆಯನ್ನು ಕೊಟ್ಟಿದ್ದಾನೆ. ಪಾರ್ಶ್ವಪಂಡಿತನ ಸಂಗೀತ ಮತ್ತು ನೃತ್ಯದ ಜ್ಞಾನವು ಈ ಕಾವ್ಯದ ಮೂಲಕ ಸುವ್ಯಕ್ತವಾಗಿದೆ. ಕಾರ್ತವೀರ್ಯನು ಬೆಳಗಾವಿ (ವೇಣುಗ್ರಾಮ)ವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸುತ್ತಿದ್ದನು.

ಪಾರ್ಶ್ವನಾಥ ಪುರಾಣದ ಒಂದು ಪದ್ಯದಲ್ಲಿ

ಇಂದೋಳಗೀತದಾಗರ।

ಮಿಂದುವಿನ ವಿಳಾಸಮುಖಿಳಲತೆಗಳ ಕಾಂತಂ॥

ಸುಂದರಿಯರ ಸುರತಸುಖಂ।

ಬಂದುದು ಮಧುಮಾಸಮತನು ವಿಭವಾವಾಸಂ॥[೫೫]

ಇಲ್ಲಿ ಈತನು 'ಇಂದೋಳ' ಹಾಗೂ ಬಸಂತ(ವಸಂತ) ರಾಗಗಳ ಕುರಿತು ವಿವರವಾಗಿ ಹೇಳಿದ್ದಾನೆ.

ಸಂಗೀತವು ಮನುಷ್ಯನಿಗೆ ಆನಂದವನ್ನು ಸಂತೋಷವನ್ನು ನೀಡುತ್ತದೆ ಎನ್ನುವ ಭಾವನೆಯು ಅಂದಿನ ಜನರು ಮನಗಂಡಿದ್ದರು. ಹೀಗಾಗಿಯೇ ಶಿಕ್ಷಣದ ಒಂದು ಭಾಗವಾಗಿ ಸಂಗೀತವನ್ನು ಅಧ್ಯಯನ ಮಾಡುತ್ತಿದ್ದರು. ರಾಜರು, ರಾಣಿಯರು ಸಂಗೀತದ ಬಗೆಗೆ ವಿಶೇಷವಾದ ಆಸಕ್ತಿಯನ್ನು ತಾಳಿದ್ದರು. ಹೀಗಾಗಿಯೇ ರಾಜ ನರ್ತಕಿಯರು ಸಂಗೀತಗಾರರು ರಾಜನ ಆಶ್ರಯವನ್ನು ಪಡೆದುಕೊಂಡಿದ್ದರು.

ಪಾರ್ಶ್ವಪಂಡಿತನು ತನ್ನ ಪಾರ್ಶ್ವನಾಥ ಪುರಾಣದಲ್ಲಿ ಸಂಗೀತವು ನೀಡುವ ಸುಖವು ಹೇಗಿರುತ್ತದೆ ಎನ್ನುವುದನ್ನು ಈ ಪದ್ಯದಲ್ಲಿ ಸ್ವಾರಸ್ಯಕರವಾಗಿ ವರ್ಣಿಸಿದ್ದಾನೆ.

ಈಂಚರ ಮಿಟಿಪಂತಮೃತಮಂ ಕಿವಿಯಿಂ ಸವಿಯಪ್ಪನುಣ್ಣಿನಿಂ।

ದಂಚೆಯ ತುಪ್ಪುಳಂ ತಿರಿಪಿದಂತೆವೊಲಾ ತಿರಿಪೆಯ್ದೆ ಮೆಲ್ಪನಾ॥

ಳ್ದಂಚಿರಮಲ್ಲದೊಪ್ಪೆ ವಳಿನಲ್ಲಳ ಮೆಯ್ವಳಿಯಂತೆ ರಾಗಮಂ।

ಸಂಚಿಸೆ ನಾಯಿಕಾ ಮಧುರಣೇಯಮದೇಂ ಮನಮಂ ಮರುಳ್ಚಿತೋ॥[೫೬]

ರಾಗದ ಮಧುರತೆಗೆ ಮನವು ಅರಳುವ ಸ್ವಾರಸ್ಯವನ್ನು, ಸುಖದ ಸ್ವರೂಪವನ್ನು ಹೇಳಿದ್ದಾನೆ.

ಸಂಗೀತಕ್ಕೆ ಬಳಸುವ ವಾದ್ಯಗಳನ್ನು ಪಾರ್ಶ್ವನಾಥ ಪರಿಚಯಿಸಿದ್ದಾನೆ. ಅಂದು ಸಂಗೀತಕ್ಕೆ ಬಳಸುತ್ತಿದ್ದ ವಾದ್ಯಗಳಲ್ಲಿ ಪ್ರಮುಖವಾಗಿ ಡಕ್ಕೆ, ಮಡಿಕೆ, ಗಡ, ಕವುತ ಡೇಂಕಾರ, ಮಲದವಡೆ ತುಡುಂಕು ಜಂಕೆಯ, ತರಿ, ಜತಿ, ರಗ್ಗವಣಿ, ಪಹರಣಿ, ಭೇರಿ, ಕೊಂಬು, ಶಂಖ, ತಾಳ, ವೀಣೆ, ಕೊಳಲು, ಮೃದಂಗ, ತಮ್ಮಟೆ, ಮುಂತಾದ ವಾದ್ಯಗಳು ಅಂದು ಸಂಗೀತದ ಸಾಧನಗಳಾಗಿದ್ದವು.

ರಟ್ಟರ ಪ್ರಸಿದ್ಧ ದೊರೆ ಒಂದನೆಯ ಲಕ್ಷ್ಮಿದೇವನ ಪತ್ನಿ ಚಂದ್ರಿಕಾದೇವಿಯು ಕಲಾ ನಿಪುಣೆಯಾಗಿದ್ದಳು. ಕಲ್ಲೊಳ್ಳಿಯ ಶಾಸನದಲ್ಲಿಯೂ ಚಂದ್ರಿಕಾದೇವಿಯನ್ನು ಸ್ತುತಿಸಲಾಗಿದೆ. ಒಟ್ಟಿನಲ್ಲಿ ರಟ್ಟರ ಕಾಲದಲ್ಲಿ ಬೆಳಗಾವಿಯು ಸಂಪದ್ಭರಿತವಾದ ಸಾಮ್ರಾಜ್ಯವಾಗಿ, ಕಲೆ, ಸಾಹಿತ್ಯ, ಸಂಗೀತಗಳಿಗೆ ವಿಶೇಷ ಮನ್ನಣೆಯನ್ನು ನೀಡಿ "ಸಕಳೈಸ್ವರ್ಯ ಭೋಗಂಗಳಿಂದಂ ಇಂತು ವಸಂತ ಪ್ದಂತನಂತ ವಿಳಾಸದಿಂ ಸಂತತಂ ಮೆರೆವ ವೇಳು ಪುರದೋಳ್ ಸುಖದಿಂ ರಾಜ್ಯಂಗೆಯ್ಯುತ್ತಮಿರೆ" ಎಂದು ಬೆಳಗಾವಿಯ ವರ್ಣನೆಯನ್ನು ಸಾರುವ ಬೆಳಗಾವಿ ಶಾಸನದ ಉಕ್ತಿಯಂತೆ[೫೭] ಬೆಳಗಾವಿಯು ಕಂಗೊಳಿಸುತ್ತಿತ್ತು.

ಬೆಳಗಾವಿಯ ಸಂಗೀತ ಪರಂಪರೆಯ ಎರಡನೆಯ ಹಂತವನ್ನು ಬ್ರಿಟಿಷರ ಕಾಲದಿಂದ ಗುರುತಿಸಬಹುದು. ಸಂಗೀತಕ್ಕೆ ಸಾವಿರಾರು ವರ್ಷದ ಪರಂಪರೆ ಇದ್ದರೂ ಕಾಲಕಾಲಕ್ಕೆ ಅದರಲ್ಲಿ ಬದಲಾವಣೆಗಳಾಗಿರುವುದನ್ನು ಕಾಣಬಹುದು. ಸಾಮಾಜಿಕ, ರಾಜಕೀಯ ಸ್ಥಿತ್ಯಂತರಗಳಿಂದ ಪ್ರಭಾವಿತವಾದರೂ ಶಾಸ್ತ್ರೀಯ ಸಂಗೀತ ಭಾರತೀಯ ಸಂಸ್ಕೃತಿಯ ಒಂದು ವಿಭಿನ್ನ ಅಂಗವಾಗಿ ಉಳಿದುಕೊಂಡು ಬಂದಿದೆ.

ಶಾಸ್ತ್ರೀಯ ಸಂಗೀತದಲ್ಲಿ ಎರಡು ಧಾರೆಗಳು ಕಂಡುಬರುತ್ತವೆ. ಒಂದು ಕರ್ನಾಟಕಿ ಅಥವಾ ದಕ್ಷಿಣಾದಿ ಸಂಗೀತ, ಇನ್ನೊಂದು ಹಿಂದುಸ್ಥಾನಿ ಸಂಗೀತ ಅಥವಾ ಉತ್ತರಾದಿ ಸಂಗೀತ. ಈ ಎರಡೂ ಸಂಗೀತ ಪ್ರಕಾರಗಳು ಬೆಳಗಾವಿಯಲ್ಲಿ ಬೆಳೆದು ಬಂದಿವೆ.

ಹಿಂದುಸ್ತಾನಿ ಸಂಗೀತ ಬೆಳಗಾವಿಗೆ ಪ್ರವೇಶ ಮಾಡುವುದಕ್ಕಿಂತ ಪೂರ್ವದಲ್ಲಿ ಬೆಳಗಾವಿಯಲ್ಲಿ ಕರ್ನಾಟಕ ಸಂಗೀತ ಪ್ರಸಿದ್ಧಿಯನ್ನು ಪಡೆದುಕೊಂಡಿರುವುದು ಸ್ಪಷ್ಟವಾಗಿದೆ. ಹದಿನೆಂಟನೆಯ ಶತಮಾನದಲ್ಲಿ ಆಗಿ ಹೋದ ಹರಿದಾಸರು ಕರ್ನಾಟಕ ಸಂಗೀತವನ್ನು ಆಧಾರವಾಗಿಟ್ಟುಕೊಂಡು ತಮ್ಮ ಕೀರ್ತನೆಗಳನ್ನು ರಚಿಸಿದರು. ಈ ಹರಿದಾಸರ ಪರಂಪರೆಯು ಬೆಳಗಾವಿಯಲ್ಲಿಯೂ ಪ್ರಭಾವವನ್ನು ಬೀರಿತ್ತು. ಉತ್ತರ ಕರ್ನಾಟಕದ ಜನಪದ ರಂಗಭೂಮಿಯ ಉಗಮ ಸ್ಥಾನ. ಹೀಗಾಗಿ ರಂಗಭೂಮಿಗೆ ಅಳವಡಿಸಲಾಗಿರುವ ಹಾಡುಗಳು ಕರ್ನಾಟಕಿ ಸಂಗೀತದಲ್ಲಿಯೇ ಇದ್ದದ್ದು ಕಂಡುಬರುತ್ತದೆ. ಪಾರಿಜಾತಗಳಲ್ಲಿಯ ಹಾಡುಗಳು ಕರ್ನಾಟಕಿ ಸಂಗೀತ ಬಿಟ್ಟು ಹಿಂದುಸ್ತಾನಿಯಲ್ಲಿ ಮುಂದುವರೆದುಕೊಂಡು ಬಂದಿವೆ.

ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಉತ್ತರ ಕರ್ನಾಟಕದ ಪ್ರದೇಶವು ಮುಂಬಯಿ ಪ್ರಾಂತಕ್ಕೆ ಒಳಪಟ್ಟಿದ್ದರಿಂದ ಕ್ರಮೇಣ ಹಿಂದುಸ್ತಾನಿ ಸಂಗೀತ ಈ ಭಾಗವನ್ನು ಪ್ರವೇಶಿಸಿತು. ಮುಂಬಯಿಯಿಂದ ಬೆಂಗಳೂರಿಗೆ ಹೋಗುವ ಮಾರ್ಗದಲ್ಲಿ ಬೆಳಗಾವಿ, ಧಾರವಾಡ, ಹುಬ್ಬಳ್ಳಿ ಪ್ರದೇಶಗಳಲ್ಲಿ ಸಂಗೀತಗಾರರು ಈ ಪ್ರದೇಶಗಳ ಜೊತೆಗೆ ಸಂಪರ್ಕವನ್ನು ಇಟ್ಟುಕೊಂಡು ಹಿಂದೂಸ್ತಾನಿ ಸಂಗೀತವನ್ನು ಪ್ರಚಾರಗೊಳಿಸಿದರು. ಹೀಗಾಗಿ ಇಲ್ಲಿಯ ಸಂಗೀತಗಾರರು ಮಧುರವಾದ ಹಿಂದೂಸ್ತಾನಿ ಸಂಗೀತದತ್ತ ಬೇಗನೆ ಆಕರ್ಷಿತರಾದರು. ಹೆಸರಾಂತ ಸಂಗೀತಗಾರರಾದ ಭಾಸ್ಕರ್ ಭಾಕಳೆ, ರಹೆಮತ್‌ಖಾನ್, ಅಬ್ದುಲ್ ಕರಿಂ ಖಾನ್, ಅಲ್ಲಾದಿಯಾ ಖಾನ್ ಮೊದಲಾದ ಪ್ರಖ್ಯಾತ ಹಿಂದೂಸ್ತಾನಿ ಗಾಯಕರು ಈ ಭಾಗದ ಸಂಗೀತಗಾರರ ಜೊತೆಗೆ ಸಂಪರ್ಕಹೊಂದಿ ಹಿಂದೂಸ್ತಾನಿ ಸಂಗೀತ ಬೆಳೆದು ಬರಲು ಕಾರಣವಾಯಿತು.[೫೮]

ಕ್ರಿ.ಶ. ೧೮೬೭೦ರ ಸುಮಾರಿಗೆ ಕೊಲ್ಹಾಪುರದ ಶಾಹು ಮಹಾರಾಜರ ಆಶ್ರಯದಲ್ಲಿ ನೆಲೆ ನಿಂತಿದ್ದ ಉಸ್ತಾದ ಅಲ್ಲಾದಿಯಾಖಾನರು ಪ್ರಸಿದ್ಧ ಹಿಂದೂಸ್ತಾನಿ ಸಂಗೀತಗಾರರಾಗಿದ್ದರು.[೫೯] ಇದರ ಶಿಷ್ಯರಾದ ಪಂ ಭಾಸ್ಕರ ಬುವಾ ಅವರು ೧೯೦೮ ರಲ್ಲಿ ಧಾರವಾಡದ ಸಂಗೀತ ಶಾಲೆಗೆ ಶಿಕ್ಷಕರಾಗಿ ನೇಮಕಗೊಂಡರು ಇದರಿಂದ ಬೆಳಗಾವಿಯನ್ನೊಳಗೊಂಡು ಈ ಪ್ರದೇಶವು ಅವರ ಪ್ರಭಾವಕ್ಕೆ ಒಳಗಾಯಿತು.

ಕರ್ನಾಟಕದಲ್ಲಿ ಹಿಂದೂಸ್ತಾನಿ ಸಂಗೀತದ ಬೈಠಕುಗಳು ಉತ್ತರ ಕರ್ನಾಟಕದ ಭಾಗಗಳಲ್ಲಿ ಮೇಲಿಂದ ಮೇಲೆ ನಡೆಯುತ್ತಿರುವ ಸಂದರ್ಭದಲ್ಲಿಯೇ ಮೈಸೂರಿನ ನಾಲ್ವಡಿ ಕೃಷ್ಣರಾಜ ಒಡೆಯರು ತಮ್ಮ ಆಸ್ಥಾನಕ್ಕೆ ಹಿಂದೂಸ್ತಾನಿ ಸಂಗೀತ ಕಲಾವಿದರನ್ನು ಆಹ್ವಾನಿಸಿ ಅವರ ಬೈಠಕುಗಳನ್ನು ಏರ್ಪಡಿಸತೊಡಗಿದರು.[೬೦] ಇದರಿಂದಾಗಿ ಹಿಂದೂಸ್ತಾನಿ ಸಂಗೀತಕ್ಕೆ ರಾಜಾಶ್ರಯ ದೊರೆತಂತಾಗಿ ಕರ್ನಾಟಕದ ತುಂಬೆಲ್ಲಾ ತನ್ನ ವ್ಯಾಪ್ತಿಯನ್ನು ಹೊಂದಿತು.

ಹೀಗೆ ೨೦ನೆಯ ಶತಮಾನದ ಆರಂಭದ ಹೊತ್ತಿಗೆ ಕರ್ನಾಟಕಿ ಸಂಗೀತ ಮರೆಯಾಗುತ್ತ ಹಿಂದೂಸ್ತಾನಿ ಸಂಗೀತ ಹೆಚ್ಚು ಜನಪ್ರಿಯವಾಗುತ್ತ ಸಾಗಿತು.[೬೧] ಈ ಬೆಳವಣಿಗೆಯಲ್ಲಿಯೇ ಬೆಳಗಾವಿಯಲ್ಲಿ ಅನೇಕ ಖ್ಯಾತ ಸಂಗೀತಗಾರರು ನೆಲೆ ನಿಂತರು. ಅವರಲ್ಲಿ ಮುಖ್ಯರಾಗಿ ಉಸ್ತಾದ ಅಬ್ದುಲ್ ಕರೀಂಖಾನ್, ಕಾಗಲಕರ ಬುವಾ, ಉತ್ತೂರಕರ ಬುವಾ, ರಾಮಕೃಷ್ಣ ಬುವಾ ವಝೆ, ಉಮಾಮಹೇಶ್ವರ ಬುವಾ ಮುಂತಾದವರು ಬೆಳಗಾವಿಯಲ್ಲಿ ನೆಲೆ ನಿಂತು ಸಂಗೀತ ಕ್ಷೇತ್ರವನ್ನು ಬೆಳಗಿದರು.

ಹಿಂದೂಸ್ತಾನಿ ಸಂಗೀತದಲ್ಲಿ ಘರಾನಾ ಪರಂಪರೆಗಳು ಅಸಂಖ್ಯಾತವಾಗಿವೆ. ಅವುಗಳಲ್ಲಿ ತಾನಸೇನ ಘರಾನಾ, ದಿಲ್ಲಿ ಘರಾನಾ, ಆಗ್ರಾ ಘರಾನಾ, ಜಯಪೂರ ಘರಾನಾ, ಕಿರಾನಾ ಘರಾನಾ, ಅತ್ರೋಲಿ ಘರಾನಾ ಇತ್ಯಾದಿ.

ಆರ್ಯ ಸಂಗೀತ ವಿದ್ಯಾಲಯ: ಕಿರಾನಾ ಘರಾನಾದ ಪಿತಾಮಹರೆನಿಸಿಕೊಂಡ ಉಸ್ತಾದ ಅಬ್ದುಲ್ ಕರೀಮ ಖಾನ ಸಾಹೇಬರು ಬೆಳಗಾವಿಯ ಸಂಗೀತ ವಲಯದಲ್ಲಿ ಮಹತ್ವದ ಬೆಳವಣಿಗೆಯನ್ನು ತಂದರು. ಬೆಳಗಾವಿಯಲ್ಲಿ ನೆಲೆ ನಿಂತು ಹಲವಾರು ಜನ ಶಿಷ್ಯರನ್ನು ತಯಾರಿಸಿದರು. ಅಲ್ಲದೆ ೧೯೧೦ರಲ್ಲಿ ಬೆಳಗಾವಿಯಲ್ಲಿ 'ಆರ್ಯ ಸಂಗೀತ ವಿದ್ಯಾಲಯ'ವನ್ನು ಸ್ಥಾಪಿಸುವ ಮೂಲಕ ಬೆಳಗಾವಿಯಲ್ಲಿ ಸಂಗೀತವನ್ನು ವ್ಯವಸ್ಥಿತವಾಗಿ ಶಿಕ್ಷಣದ ಸ್ವರೂಪದಲ್ಲಿ ನೀಡತೊಡಗಿದರು.[೬೨] ಈ ಸಂಗೀತ ವಿದ್ಯಾಲಯಕ್ಕೆ ಮರಾಠಿ ರಂಗಭೂಮಿಯ ಖ್ಯಾತರಾದ ಅಣ್ಣಾಸಾಹೇಬ ಕಿರ್ಲೋಸ್ಕರರು ಆರ್ಥಿಕ ಬೆಂಬಲವನ್ನು ನೀಡುತ್ತಿದ್ದರು.

ಆರ್ಯ ಸಂಗೀತ ವಿದ್ಯಾಲಯದ ಸ್ಥಾಪನೆಯೊಂದಿಗೆ ಬೆಳಗಾವಿಯಲ್ಲಿ ಖ್ಯಾತ ಸಂಗೀತಗಾರ ತಂಡವೇ ನಿರ್ಮಾಣಗೊಳ್ಳುವಂತಾಯಿತು. ರಂಗ ಸಂಗೀತ ಹಾಗೂ ಶಾಸ್ತ್ರೀಯ ಸಂಗೀತ ಎರಡರಲ್ಲಿಯೂ ಶಿಕ್ಷಣವನ್ನು ನೀಡಿ ಬೆಳಗಾವಿಯಲ್ಲಿ ಸಂಗೀತದ ವಾತಾವರಣವನ್ನು ಬೆಳೆಸಿದರು. ಈ ವಿದ್ಯಾಲಯದ ಪ್ರಭಾವದಿಂದಲೇ ಬೆಳಗಾವಿಯಲ್ಲಿ ಮರಾಠಿ ರಂಗಭೂಮಿ ಬೆಳೆಯತೊಡಗಿತು. ಅದರಲ್ಲಿಯೂ ಸಂಗೀತ ನಾಟಕಗಳು ಹೆಚ್ಚು ಪ್ರಸಿದ್ಧಿಯನ್ನು ಪಡೆದುಕೊಂಡವು. ಅರವಿಂದ ಯಾಳಗಿ, ಜಯರಾಮ ಶೀಲ್ಲೆದಾರ ಮುಂತಾದವರು ಸಂಗೀತ ನಾಟಕಗಳ ಮೂಲಕ ಶಾಸ್ತ್ರೀಯ ಸಂಗೀತವನ್ನು ಬೆಳೆಸಿದರು.

ಉಸ್ತಾದ ಅಬ್ದುಲ್ ಕರಿಂಖಾನ್ ಸಾಹೇಬರು ಬೆಳಗಾವಿಯಲ್ಲಿ ನೆಲೆಸಿ ಸಂಗೀತ ಶಿಕ್ಷಣವನ್ನು ನೀಡುತ್ತ ಹಲವಾರು ಜನ ಶಿಷ್ಯರನ್ನು ಸಂಗೀತ ಕ್ಷೇತ್ರಕ್ಕೆ ನೀಡಿದರು. ಅವರಲ್ಲಿ ಸಂಗೀತ ನಾಟಕಗಳಲ್ಲಿ ಹೆಸರಾಂತ ನಾಯಕ ನಟರೆಂದು ದೇಶಾದ್ಯಂತ ಗುರುತಿಸಿಕೊಂಡ ಬಾಲಗಂಧರ್ವರು ಬೆಳಗಾವಿಯಲ್ಲಿ ಕೆಲವು ವರ್ಷ ನಲೆ ನಿಂತು ಮರಾಠಿ ನಾಟಕಗಳ ಮೂಲಕ ಸಂಗೀತವನ್ನು ಬೆಳೆಸಿದರು. ಇವರ ನಾಟಕ ಮಂಡಳಿಯಲ್ಲಿ ಸಂಗೀತ ವಾದ್ಯಗಾರರಾಗಿದ್ದ ಪಾಂಡುರಂಗ ಬೊಂದ್ರೆ ಬೆಳಗಾವಿಯ ಶಹಪೂರದವರು. ಅವರ ಉತ್ತರಾಧಿಕಾರಿಯಾಗಿ ಯಶವಂತ ಬೋಂದ್ರೆಯವರು ಅವರ ಶೈಲಿಯನ್ನು ಮುಂದುವರೆಸಿದ್ದಾರೆ.

ಬೆಳಗಾವಿಯಲ್ಲಿ ಮರಾಠಿ ಸಂಗೀತ ನಾಟಕಗಳ ಪ್ರಭಾವದಿಂದ ಕನ್ನಡ ನಾಟಕಗಳು ಸಂಗೀತ ಪ್ರಧಾನವಾಗಿ ಮೂಡಿ ಬರಗೊಡಗಿದವು. ಅದರಲ್ಲಿಯೂ ಏಣಗಿ ಬಾಳಪ್ಪನವರು ಸಂಗೀತ ಪ್ರಧಾನವಾದ ನಾಟಕಗಳನ್ನು ಬೆಳಗಾವಿಯಲ್ಲಿ ಪ್ರದರ್ಶಿಸಿ ಈ ಭಾಗದ ಸಂಗೀತ ಪ್ರೀಯರಲ್ಲಿ ಸಂಚಲನವನ್ನುಂಟು ಮಾಡಿದರು. ಇವರು ಸ್ವತಃ ಹಾಡುತ್ತಿದ್ದ ರಂಗಗೀತೆಗಳು ಕೇಳುಗರ ಮೈನವಿರೇಳುವಂತೆ ಪರಿಣಾಮವನ್ನು ಬೀರುತ್ತಿದ್ದವು. ತಾವು ಹಾಡುವುದಲ್ಲದೆ ಹಲವಾರು ಜನ ಕಲಾವಿದರಿಗೆ ರಂಗಗೀತೆಗಳನ್ನು ಕಲಿಸಿ ಅವುಗಳನ್ನು ರಂಗದ ಮೇಲೆ ಪ್ರಯೋಗಿಸಿದರು. ಇದರಿಂದ ಕನ್ನಡ ನಾಟಕಗಳಲ್ಲಿ ರಂಗಗೀತೆಗೆ ಮಹತ್ವ ಒದಗಿಬಂದಿತು. ದುಃಖದ ಸನ್ನಿವೇಶದಲ್ಲಿ ಬಾಳಪ್ಪನವರು ಹಾಡುತ್ತಿದ್ದರೆ ಪ್ರೇಕ್ಷಕರ ಕಣ್ಣಲ್ಲಿ ನೀರು ಬರುತ್ತಿತ್ತು. ಅಷ್ಟೊಂದು ಪರಿಣಾಮಕಾರಿಯಾಗಿ ರಂಗಗೀತೆಗಳನ್ನು ಬಾಳಪ್ಪನವರು ಹಾಡುತ್ತಿದ್ದರು.

ಬೆಳಗಾವಿಯ ಗಣೇಶೋತ್ಸವ ಪ್ರಸಿದ್ಧವಾಗಿದೆ. ಈ ಉತ್ಸವದಲ್ಲಿ ಮೊದಲೆಲ್ಲ ಮರಾಠಿ ಭಾಷೆ, ಸಂಸ್ಕೃತಿ, ಕಲೆಯ ಪ್ರಚಾರ ಹೆಚ್ಚಾಗುತ್ತಿತ್ತು. ಗಲ್ಲಿ ಗಲ್ಲಿಗಳಲ್ಲಿ ನಿರ್ಮಿಸಿರುವ ಮಂಟಪಗಳ ಮುಂದೆ ನಡೆಯುವ ನಾಟಕಗಳೆಲ್ಲವೂ ಮರಾಠಿ ಭಾಷೆಯದ್ದಾಗಿದ್ದವು. ಇದರ ಪ್ರಭಾವದಲ್ಲಿಯೇ ಪ್ರಪ್ರಥಮವಾಗಿ ಗಣಪತಿ ಮೇಳದ ಕನ್ನಡ ಪದಗಳು ೧೯೩೪ ರಲ್ಲಿ ಮೂಡಿ ಬಂದವು. ಗೋವಿಂದಾಚಾರ್ಯ ಎನ್ನುವವರು ನ್ಯಾಯ ಖಾತೆಯಲ್ಲಿ ನೌಕರಿಯಲ್ಲಿದ್ದರು. ಚಿಕ್ಕಂದಿನಿಂದಲೇ ಸಂಗೀತವನ್ನು ಆಸಕ್ತಿಯಿಂದ ಅಧ್ಯಯನ ಮಾಡಿದ್ದ ಇವರು ಕನ್ನಡದಲ್ಲಿ ಗಣಪತಿ ಮೇಳದ ಪದಗಳನ್ನು ಸ್ವತಃ ರಚಿಸಿ ಅವುಗಳನ್ನು ಚಿಕ್ಕ ಬಾಲಕರಿಂದ ಹಾಡಿಸಿ ಜನಪ್ರಿಯಗೊಳಿಸಿದರು. ಪುರಂದರದಾಸರ ಭಕ್ತರಾದ ಇವರು ದಾಸರ ಪದಗಳನ್ನು ಸುಮಧುರವಾಗಿ ಹಾಡುತ್ತಿದ್ದರು. ಕ್ರಿ.ಶ. ೧೯೩೭ ರಲ್ಲಿ ಗೋವಿಂದಾಚಾರ್ಯ ತೇರದಾಳರ ಜೊತೆಗೂಡಿ 'ಶ್ರೀ ಪುರಂದರದಾಸರ ಸೇವಾ ಸಂಘ'ವನ್ನು ಸ್ಥಾಪಿಸಿ[೬] ಅದರ ಮೂಲಕ ದಾಸರ ಪದಗಳನ್ನು ರಾಗಬದ್ಧವಾಗಿ ಹಾಡತೊಡಗಿದರು. ಇವರ ಈ ಸಂಗೀತ ಕಛೇರಿಯು ಅನಂತಶಯನ ಗಲ್ಲಿಯಲ್ಲಿರುವ ಅನಂತಶಯನ ದೇವಾಲಯದಲ್ಲಿ ಜರುಗುತ್ತಿತ್ತು. ಗಾಯನಕಲೆಯ ಜೊತೆಗೆ ಹರಿಕೀರ್ತನೆ ಕಲೆಯನ್ನು ಬೆಳೆಸಿಕೊಂಡು ಕರ್ನಾಟಕದ ಪ್ರಸಿದ್ಧ ಹರಿಕೀರ್ತನಕಾರರಾದರು.

ಬೆಳಗಾವಿಯಲ್ಲಿ ಹಿಂದೂಸ್ತಾನಿ ಸಂಗೀತದ ಪ್ರಭಾವ ೨೦ನೆಯ ಶತಮಾನದ ಪ್ರಾರಂಭದ ಹೊತ್ತಿಗೆ ಹೆಚ್ಚಾಗತೊಡಗಿದಂತೆ ಕರ್ನಾಟಕಿ ಸಂಗೀತ ಜನರಿಂದ ದೂರವಾಗತೊಡಗಿತ್ತು. ೧೯೨೦ ರ ದಶಕದಲ್ಲಿ ಬೆಳಗಾವಿಯಲ್ಲಿ ನೆಲೆ ನಿಂತ ಸಂಗೀತಗಾರರ ಪ್ರಭಾವದಿಂದ ಹಲವಾರು ಯುವ ಕಲಾವಿದರು ಸಂಗೀತ ಕ್ಷೇತ್ರವನ್ನು ಬೆಳಗತೊಡಗಿದರು.[೬೪] ಅವರಲ್ಲಿ ರಾಮಕೃಷ್ಣ ಬುವಾ ವಝೆ, ಅವರ ಮಗ ಶಿವರಾಮ ಬುವಾ ವಝೆ, ಸವಾಯಿ ಗಂಧರ್ವರ ಶಿಷ್ಯ ಕಾಗಲಕರ ಬುವಾ, ಉಮಾಮಹೇಶ್ವರ ಬುವಾ, ಉತ್ತರಕರ ಬುವಾ ಮೊದಲಾದವರ ಹಾಡುಗಾರಿಕೆಯಿಂದ ಬೆಳಗಾವಿಯ ಗಲ್ಲಿ ಗಲ್ಲಿಗಳಲ್ಲಿ ಸಂಗೀತ ಅನುರಣಿಸುತ್ತಿತ್ತು.

ರಾಮಕೃಷ್ಣ ಬುವಾ ಅಂದಿನ ಕಾಲದ ಅದ್ಭುತ ಕಲಾವಿದರು. ಇವರ ಸಂಗೀತ ದೇಶದಾದ್ಯಂತ ಪ್ರಸಿದ್ಧಗೊಂಡಿತ್ತು. ೧೯೨೭ ರ ಕಾಲವೆಂದರೆ ಅದು ವಝೆಯವರ ಕಾಲವೆಂದೇ ಕರೆಯುತ್ತಿದ್ದರು. ಶುದ್ಧ ಶಾಸ್ತ್ರದ ಜೊತೆಗೆ ಮಾಧುರ್ಯದ ಮೇಳದಿಂದ ಅವರ ಸಂಗೀತಕ್ಕೆ ದಿವ್ಯತ್ವ ಒದಗಿತ್ತು. ಇವರ ಗಾಯನವನ್ನೇ ಕೇಳಲು ದೂರದೂರದಿಂದ ಬೆಳಗಾವಿಗೆ ಜನರು ಬರುತ್ತಿದ್ದರು.

ಇವರ ಮಗ ಶಿವರಾಮ ಬುವಾ ತಂದೆಯ ಪರಂಪರೆಯನ್ನು ಮುಂದುವರೆಸಿದರಲ್ಲದೆ ಬೆಳಗಾವಿಯಲ್ಲಿ ಸಂಗೀತ ವರ್ಗಗಳನ್ನು ಪ್ರಾರಂಭಿಸಿ ನೂರಾರು ಜನರಿಗೆ ಸಂಗೀತ ಶಿಕ್ಷಣವನ್ನು ಹೇಳಿಕೊಟ್ಟರು. [೬೫] ನಾಡಿನ ಪ್ರತಿಭಾವಂತ ಗಾಯಕರಾಗಿ ಬೇರೆ ಬೇರೆ ಭಾಗಗಳಲ್ಲಿ ಹಲವಾರು ಸಂಗೀತ ಕಾರ್ಯಕ್ರಮಗಳನ್ನು ನೀಡಿದ್ದಾರೆ.

ವಿ.ವಿ. ಉತ್ತೂರಕರ್ ಮಿರಜ್ ದಿಂದ ಬಂದು ಬೆಳಗಾವಿಯಲ್ಲಿ ನೆಲೆಸಿ ಸಂಗೀತ ಕ್ಷೇತ್ರಕ್ಕೆ ವಿಶಿಷ್ಟವಾದ ಕೊಡುಗೆಯನ್ನು ನೀಡಿದ್ದಾರೆ. ಬೆಳಗಾವಿಯ ಲಿಂಗರಾಜ ಕಾಲೇಜಿನಲ್ಲಿ ಟಿ. ಡಿ. ಅಧ್ಯಯನ ಮಾಡಿ ವನಿತಾ ವಿದ್ಯಾಲಯದಲ್ಲಿ ಸಂಗೀತ ಶಿಕ್ಷಕರಾಗಿ ಸೇವೆ ಸಲ್ಲಿಸಿದರು.[೬೬] ವಂಶಪಾರಂಪರ್ಯವಾಗಿ ಬಂದ ಸಂಗೀತ ಕಲೆಯನ್ನು ಮುಂದುವರೆಸಿದ ಉತ್ತೂರಕರರು ಘರಾನ ಮತ್ತು ಟಪ್ಪಖಯಾಲ್ ಹಾಡುವುದರಲ್ಲಿ ಪ್ರಸಿದ್ಧರಾಗಿದ್ದರು. ಹಲವಾರು ಸಾರ್ವಜನಿಕ ಸಮಾರಂಭಗಳಲ್ಲಿ ಆಕಾಶವಾಣಿ ಕೇಂದ್ರಗಳಲ್ಲಿ ಸಾಕಷ್ಟು ಹಾಡುಗಳನ್ನು ಹಾಡಿದ್ದಾರೆ. ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ಪ್ರಶಸ್ತಿಯನ್ನು ಪಡೆದಿರುವ ಇವರು ಬೆಳಗಾವಿಗೆ ಕೀರ್ತಿ ತಂದಿದ್ದಾರೆ. ಬೆಳಗಾವಿಯಲ್ಲಿ ಹಲವಾರು ಜನ ಯುವ ಕಲಾವಿದರನ್ನು ನಿರ್ಮಿಸಿ ಸಂಗೀತದ ಬೆಳವಣಿಗೆಗೆ ಕಾರಣರಾಗಿದ್ದರು.

ಕಾಗಲಕರ ಬುವಾ ಬೆಳಗಾವಿಯ ಸಂಗೀತಕ್ಕೆ ಶಿಸ್ತು ಒದಗಿಸಿದ ಪ್ರಸಿದ್ಧ ಸಂಗೀತಗಾರರು. ಬೆಳಗಾವಿಯಲ್ಲಿ ದತ್ತ ಸಂಗೀತ ವಿದ್ಯಾಲಯವನ್ನು ಸ್ಥಾಪಿಸಿ[೬೭] ಅದರ ಮೂಲಕ ಸಂಗೀತವನ್ನು ಶಿಸ್ತುಬದ್ಧವಾಗಿ ಕಲಿಸಿದರು. ಸಂಗೀತದ ಪಾಠಗಳನ್ನು ಪರಿಣಾಮಕಾರಿಯಾಗಿ ಹೇಳಿಕೊಡುತ್ತಿದ್ದರು. ಹೀಗಾಗಿ ಇವರ ಸಂಗೀತ ತರಗತಿಗಳಿಗೆ ವಿಶೇಷವಾದ ಮಾನ್ಯತೆ ಬಂದಿತ್ತು. ಸಂಗೀತ ಶಾಸ್ತ್ರದಲ್ಲಿ ಅಪಾರವಾದ ಜ್ಞಾನವನ್ನು ಹೊಂದಿದ್ದ ಇವರಲ್ಲಿ ಆ ಕಾಲದ ಪ್ರಸಿದ್ಧ

ಸಂಗೀತಗಾರಲೆಲ್ಲ ದೇಶದ ಬೇರೆ ಬೇರೆ ಭಾಗಗಳಿಂದ ಬಂದು ಮಾಹಿತಿಯನ್ನು ಪಡೆಯುತ್ತಿದ್ದರು. ಇವರ ಶಿಷ್ಯರು ಪುಣೆ, ಮುಂಬಯಿ ಮುಂತಾದ ನಗರಗಳಲ್ಲಿ ನೆಲೆಸಿ ಸಂಗೀತವನ್ನು ಪ್ರಚಾರಪಡಿಸಿದರು.

ಪಂ. ರಾಮಭಾವು ವಿಜಾಪುರೆ ಬೆಳಗಾವಿಯ ಸಂಗೀತ ಲೋಕಕ್ಕೆ ಮಹತ್ವದ ಕೊಡುಗೆಯನ್ನು ನೀಡಿದ ಹೆಸರಾಂತ ಹಾರ್ಮೋನಿಯಂ ವಾದಕರು. ಸುಮಾರು ೮೦ ವರ್ಷಗಳಷ್ಟು ದೀರ್ಘಕಾಲ ಸಂಗೀತವನ್ನೇ ತಮ್ಮ ಉಸಿರನ್ನಾಗಿಸಿಕೊಂಡು ಭಾರತದ ಹೆಸರಾಂತ ಐದು ತಲೆಮಾರಿನ ಗಾಯಕರಿಗೆ ಹಾರ್ಮೋನಿಯಂ ಸಾಥ್ ನೀಡಿದ ಶ್ರೇಯಸ್ಸು ಅವರಿಗೆ ಸಲ್ಲುತ್ತದೆ.

೧೯೩೫ ರಲ್ಲಿಯೇ ತಮ್ಮ ೩೧ನೆಯ ವಯಸ್ಸಿನಲ್ಲಿ ಬೆಳಗಾವಿಯಲ್ಲಿ ಶ್ರೀರಾಮ ಸಂಗೀತ ವಿದ್ಯಾಲಯವನ್ನು ಸ್ಥಾಪಿಸಿದರು.[೧೮] ಅದು ನಿರಂತರವಾಗಿ ಇಂದಿಗೂ ಕೂಡ ನಡೆದುಕೊಂಡು ಬಂದಿದೆ. ಸುಮಾರು ೭೫ ವರ್ಷಗಳಲ್ಲಿ ಸಾವಿರಾರು ಜನರು ಇಲ್ಲಿ ಸಂಗೀತವನ್ನು ಅಧ್ಯಯನ ಮಾಡಿದ್ದಾರೆ. ರವೀಂದ್ರ ಕಾಕೋಟಿ, ಸುಭಾಷ್ ಕುಲಕರ್ಣಿ, ರವೀಂದ್ರ ಮಾನೆ, ದೀಪಕ್ ಮರಾಠೆ, ಕಿರಣಕುಮಾರ, ಅರ್ಚನಾ ಬೆಳಗುಂದಿ, ಮಂಜುಳಾ ಜೋಶಿ, ಮಾನಸಿ ತೇಲಂಗಿ ಸೇರಿದಂತೆ ಹೆಸರಾಂತ ಕಲಾವಿದರು ಇವರ ಶಿಷ್ಯ ಬಳಗದಲ್ಲಿ ಪ್ರಮುಖರಾಗಿದ್ದಾರೆ. ವಿಜಾಪುರೆ ಅವರು ತಮ್ಮದೇ ಆದ ವಿಶಿಷ್ಟವಾದನ ಶೈಲಿಯಿಂದ 'ವಿಜಾಪುರೆ ಘರಾಣೆ' ಪ್ರಾರಂಭಿಸಿದ್ದರು. ಇವರು ಹಾರ್ಮೋನಿಯಂ ಬಾರಿಸುವುದನ್ನು ಕೇಳುವುದೇ ಒಂದು ಅನುಭವವಾಗಿತ್ತು ಎಂದು ಅವರ ಹಾರ್ಮೋನಿಯಂ ಆಲಿಸಿದ ಚಂದ್ರಕಾಂತ ಕುಸನೂರರು ಅಭಿಪ್ರಾಯಪಡುತ್ತಾರೆ.[೧೯] ಇವರು ಹೆಸರಾಂತ ಸಂಗೀತಗಾರರಾದ ಭೀಮಸೇನ ಜೋಶಿ, ಮಲ್ಲಿಕಾರ್ಜುನ ಮನಸೂರು, ಬಸವರಾಜ ರಾಜಗುರು, ಶ್ರೀಮತಿ ಗಂಗೂಬಾಯಿ ಹಾನಗಲ್ಲ ಅವರಿಗೆ ಅನೇಕ ಸಲ ಸಾಥ್ ಮಾಡಿದ್ದು ಅವರ ಸಿದ್ಧಿಯನ್ನು ಸಾಬೀತುಪಡಿಸುತ್ತದೆ.

ವಿಜಾಪುರೆ ಅವರು ಗೋವಿಂದರಾವ ಗಾಯಕವಾಡ ಮತ್ತು ರಾಜವಾಡೆ ಅವರ ಮಾರ್ಗದರ್ಶನದಲ್ಲಿ ಹಾರ್ಮೋನಿಯಂ ಸಂಸ್ಕಾರ ಪಡೆದುಕೊಂಡು ಹಲವಾರು ಜನರಿಗೆ ಹಾರ್ಮೋನಿಯಂ ಶಿಕ್ಷಣ ನೀಡಿದರು. ಸುಧಾಂಶು ಕುಲಕರ್ಣಿ, ಶ್ರೀಮತಿ ಕುಸುಮ ಪೈ, ಶ್ರೀಧರ ಕುಲಕರ್ಣಿ ರವೀಂದ್ರ ಮಾನೆ ಮುಂತಾದವರು ಹಾರ್ಮೋನಿಯಂನಲ್ಲಿ ಪ್ರಸಿದ್ಧಿ ಪಡೆದರು.

ಶ್ರೀ ಆರ್. ಎನ್. ಜೋಶಿ ಬುವಾ ಮೂಲತಃ ಪಾಶ್ಚಾಪುರದಿಂದ ಬಂದು ಬೆಳಗಾವಿಯಲ್ಲಿ ಸಂಗೀತದ ಸಂಸ್ಕಾರಪಡೆದರು. ಸ್ವಾತಂತ್ರ್ಯ ಯೋಧರಾದ ಇವರು ಶ್ರೇಷ್ಠ ಸಂಗೀತಗಾರರಾಗಿ ಸ್ವಾತಂತ್ರ್ಯಯೋಧರಿಗೆ ಸ್ಫೂರ್ತಿ ನೀಡುತ್ತಿದ್ದರು. ಬೆಳಗಾವಿಯಲ್ಲಿ ಮೊಟ್ಟ ಮೊದಲ ಬಾರಿಗೆ 'ಗೀತ ರಾಮಾಯಣ'ವನ್ನು ಪರಿಚಯಿಸಿದರು.[೨೦] ಇವರ ಗರಡಿಯಲ್ಲಿ ಹಲವಾರು ಜನರು ಸಂಗೀತಗಾರರು ಬೆಳೆದರು. ಅವರಲ್ಲಿ ಈಶ್ವರಪ್ಪಾ ಮಿಣಚಿ, ಅನಂತ ತೇರದಾಳ,

ಎಂ. ಎಸ್. ಕಾಮತ, ಗುರುರಾಜ ಮಿರಜಕರ, ಪ್ರಭಾಕರ ಶಹಾಪುರ, ಎಸ್.ಬಿ. ದಮಟೆ, ಎನ್. ಡಿ. ಜೋಶಿ, ಸಾಯಿನಾಥ ಮೋಹಿತೆ ಮುಂತಾದ ಪ್ರಸಿದ್ಧರಾದ ಸಂಗೀತಗಾರರೆಲ್ಲ ಜೋಶಿ ಬುವಾರಲ್ಲಿ ಸಂಗೀತ ಪಡೆದವರಾಗಿದ್ದಾರೆ.

ಆನಂದ ಮೂರ್ತಿ ಮತ್ತು ತಾಮ್ಹಣಕರ ಬುವಾ ಅವರು ಬೆಳಗಾವಿ ಸಂಗೀತ ಕ್ಷೇತ್ರಕ್ಕೆ ತಮ್ಮ ವಿಶಿಷ್ಟವಾದ ಸೇವೆಯನ್ನು ಸಲ್ಲಿಸಿದ್ದಾರೆ. ಬೆಳಗಾವಿಯಲ್ಲಿ ಸಂಗೀತ ತರಗತಿಗಳನ್ನು ನಡೆಸಿ ಸಂಗೀತ ಪರಂಪರೆಯನ್ನು ಬೆಳೆಸಿದರು.

ಹಿಂದೂಸ್ತಾನಿ ಸಂಗೀತದ ಕೀರ್ತಿಯನ್ನು ವಿದೇಶಗಳಲ್ಲಿಯೂ ಹರಡಿದ ಕುಮಾರ ಗಂಧರ್ವರು ಬೆಳಗಾವಿಯಲ್ಲಿ ಬೆಳೆದವರು. ಇಲ್ಲಿಯೇ ತಮ್ಮ ಪ್ರಾರಂಭದ ಸಂಗೀತ ಶಿಕ್ಷಣವನ್ನು ಕಲಿತವರು. ಬೆಳಗಾವಿ ಪಕ್ಕದಲ್ಲಿರುವ ಸೂಳೆಬಾವಿಯಲ್ಲಿ ಜನಿಸಿದ ಇವರು ಬೆಳಗಾವಿಯ ಶಿವಾನಂದ ಥೇಟರದಲ್ಲಿ ಹಲವಾರು ಸಂಗೀತ ಕಾರ್ಯಕ್ರಮಗಳನ್ನು ನೀಡಿದ್ದಾರೆ. ಅಪಾರವಾದ ಶಿಷ್ಯರನ್ನು ಅಭಿಮಾನಿಗಳನ್ನು ಹೊಂದಿದ್ದರು. ಇವರು ಕನ್ನಡ ರಂಗಸಂಗೀತ, ಮರಾಠಿ ರಂಗಸಂಗೀತ, ಶಾಸ್ತ್ರೀಯ ಗಾಯನ ಎಲ್ಲದರಲ್ಲಿಯೂ ತಮ್ಮ ಕಂಚಿನ ಕಂಠದಿಂದ ಸಂಗೀತಾಸಕ್ತರ ಮನವನ್ನು ತಣಿಸಿದ್ದರು. ಬೆಳಗಾವಿಯಿಂದ ಮಧ್ಯಪ್ರದೇಶಕ್ಕೆ ಹೋಗಿ ಅಲ್ಲಿ ದೇವಧರ ಸಂಗೀತ ಅಕ್ಯಾಡೆಮಿಯನ್ನು ಸ್ಥಾಪಿಸಿ ಪತ್ನಿ ವಸುಂಧರಾ ಜೊತೆಗೆ ಕೂಡಿಕೊಂಡು ಹಲವಾರು ಸಂಗೀತ ವಿದ್ವಾಂಸರನ್ನು ತಯಾರುಗೊಳಿಸಿದರು.

ಗಾನಯೋಗಿ ಪಂಚಾಕ್ಷರಿ ಗವಾಯಿಗಳ ಪ್ರಮುಖ ಶಿಷ್ಯರಲ್ಲಿ ಒಬ್ಬರೆನಿಸಿದ ಮೃತ್ಯುಂಜಯ ಬುವಾ ಪುರಾಣಿಕಮಠ ಅವರು ಬೆಳಗಾವಿ ಕಂಡ ಪ್ರಮುಖ ಸಂಗೀತಗಾರರು. ಶಾಸ್ತ್ರೀಯ ಸಂಗೀತ, ರಂಗ ಸಂಗೀತ ಎರಡರಲ್ಲಿಯೂ ಮಹತ್ವದ ಸಾಧನೆಯನ್ನು ಮಾಡಿದ್ದಾರೆ. ಹಲವಾರು ಬಾರಿ ಸಂಗೀತ ಕಛೇರಿಗಳನ್ನು ಏರ್ಪಡಿಸಿ ತಮ್ಮ ಮಧುರ ಕಂಠದಿಂದ ಬೆಳಗಾವಿಯಲ್ಲಿ ಸಂಗೀತದ ಸುಧೆಯನ್ನು ಹರಿಸಿದ್ದಾರೆ. ಸಂಗೀತದಲ್ಲಿ ಅಪಾರವಾದ ವಿದ್ವತ್‌ನ್ನು ಹೊಂದಿದ್ದ ಇವರು 'ಹಿಂದೂಸ್ತಾನಿ ಸಂಗೀತ' ಎಂಬ ಕೃತಿಯನ್ನು ರಚಿಸಿ ಸಂಗೀತ ವಿದ್ಯಾರ್ಥಿಗಳಿಗೆ ಉಪಯುಕ್ತವಾದ ಮಾಹಿತಿಯನ್ನು ಒದಗಿಸಿದ್ದಾರೆ. ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಿಂದ ಈ ಕೃತಿ ಪ್ರಕಟಗೊಂಡಿದೆ. ಸಂಗೀತ ಕಲಿಸುವುದೆಂದರೆ ಇವರಿಗೆ ಅತ್ಯಂತ ಆನಂದವನ್ನು ಕೊಡುವ ವಿಷಯವಾಗಿತ್ತು. ಹೀಗಾಗಿಯೇ ಬೆಳಗಾವಿ ಪರಿಸರದಲ್ಲಿ ಹಲವಾರು ಜನರು ಮೃತ್ಯುಂಜಯ ಬುವಾ ಅವರಲ್ಲಿ ಶಿಸ್ತುಬದ್ಧವಾದ ಸಂಗೀತವನ್ನು ಕಲಿತರು. ಅವರಲ್ಲಿ ಮುಖ್ಯರಾದವರು ಪಂ. ಆರ್. ಎ. ಶೇಷಾದ್ರಿ ಗವಾಯಿಗಳು, ಜಾನಕಿ ಅಯ್ಯರ. ನಿರ್ಮಲಾ ಘಂಟಿ, ಪುರುಷೋತ್ತಮ ವಾಲಾವಾಲ್ಕರ್, ಶ್ರೀಮತಿ ಲೀಲಾವತಿ ಗಣಾಚಾರಿ, ನಂದನ ಹೇರ್ಲೇಕರ, ಅಬ್ದುಲ ಗಣಿ ಮುಂತಾದವರು ಸಂಗೀತ ಕ್ಷೇತ್ರದಲ್ಲಿ ಹೆಸರು ಮಾಡಿದ್ದಾರೆ. ಮೃತ್ಯುಂಜಯ ಬುವಾ ಅವರಲ್ಲಿ ಸಂಗೀತ ಶಿಕ್ಷಣ ಪಡೆದ ಕಿತ್ತೂರಿನ ಶ್ರೀ ನರಸಿಂಹ ಶಿಗ್ಗಾವಿ ಈ ಭಾಗದಲ್ಲಿ ಶಾಸ್ತ್ರೀಯ ಸಂಗೀತವನ್ನು ಪ್ರಚಾರಪಡಿಸಿದರು. ಇದರಿಂದ ಕಿತ್ತೂರು ಸಂಗೀತ ಪರೀಕ್ಷೆಯ ಕೇಂದ್ರವಾಗಿ ಬೆಳೆಯಿತು.

ಗಣಪತರಾವ ಗುರವ ಬೆಳಗಾವಿಯ ಸಂಗೀತ ಕ್ಷೇತ್ರದಲ್ಲಿ ದೊಡ್ಡ ಹೆಸರು. ಉಸ್ತಾದ ಅಬ್ದುಲ್ ಕರೀಮ್‌ಖಾನ್ ಸಾಹೇಬರ ಗರಡಿಯ ವಾರಸುದಾರರೆಂದೇ ಗುರುತಿಸಲ್ಪಡುವ ಇವರು ಜಮಖಂಡಿ ಸಂಸ್ಥಾನದಲ್ಲಿ ಆಸ್ಥಾನ ಗಾಯಕರಾಗಿ ಮುಂದೆ ಬೆಳಗಾವಿಯ ಟಿಳಕವಾಡಿಯಲ್ಲಿ ಬಂದು ನೆಲೆಸಿದರು. ಅಲ್ಲಿಯೇ ಗಾಯನ, ವಾದನ ಶಾಲೆಯನ್ನು ಪ್ರಾರಂಭಿಸಿ ಸಂಗೀತವನ್ನು ಪ್ರಚಾರಪಡಿಸಿದರು. ಇವರ ಮನೆಯಿಂದ ಸತತವಾಗಿ ಸಂಗೀತದ ರಾಗಗಳು ವಾದ್ಯಗಳ ಮಧುರ ನಾದ ಹೊರಸೂಸುತ್ತಿತ್ತು. ಮನೆಯ ಮುಂದೆ ಹಾಯ್ದು ಹೋಗುವವರು ಸ್ವಲ್ಪ ಹೊತ್ತು ಅವರ ಸಂಗೀತವನ್ನು ಕೇಳಿಯೇ ಮುಂದೆ ಹೋಗುತ್ತಿದ್ದರು. ಗಣಪತರಾವರ ಚಿರಂಜೀವಿಯಾದ ಸಂಗಮೇಶ್ವರ ಗುರವ ಅವರು ತಂದೆಯ ಪರಂಪರೆಯನ್ನು ಮುಂದುವರೆಸಿ ಖಾನ ಸಾಹೇಬರ ಪರಂಪರೆಯ 'ಗಾಯಕಿ'ಯನ್ನು ದೇಶದಾದ್ಯಂತ ಪ್ರಚಾರ ಮಾಡುವಲ್ಲಿ ಯಶಸ್ವಿಯಾಗಿದ್ದಾರೆ.

ದಿಲರುಬಾ ಸಿತಾರ ವಾಯಲಿನ ಪರಂಪರೆ : ಕೊಲ್ಲಾಪುರದ ಪ್ರಸಿದ್ಧ ದಿಲರುಬಾವಾದಕರಾದ ವಿ.ಕೆ. ಧರ್ಮಾಧಿಕಾರಿ ೧೯೪೫ ರಲ್ಲಿ ಬೆಳಗಾವಿ ಬಂದು ನೆಲೆಸಿದರು.[೭೧] ದಿಲರುಬಾ ವಾದನ ಮತ್ತು ಗ್ವಾಲೀಯರ್ ಘರಾಣೆಯಲ್ಲಿ ಪರಿಣತಿಯನ್ನು ಪಡೆದುಕೊಂಡಿದ್ದ ಇವರು ಈ ಪರಂಪರೆಯನ್ನು ಬೆಳಗಾವಿಯಲ್ಲಿ ಮುಂದುವರೆಸಿದರು. ಎರಡೂ ಪ್ರಕಾರಗಳಲ್ಲಿ ಶಿಷ್ಯರನ್ನು ತಯಾರಿಗೊಳಿಸಿ ಬೆಳಗಾವಿಯಲ್ಲಿ ಈ ಸಂಗೀತವನ್ನು ಪ್ರಚಾರಗೊಳಿಸಿದರು. ಅವರ ಮಗಳಾದ ಸೌ ಕುಂದಾ ನಾಡಗೌಡ ದಿಲ್‌ರುಬಾ ವಾದನದಲ್ಲಿ ಪರಿಣತಿಯನ್ನು ಹೊಂದಿದ್ದರು. ಸಿತಾರದಲ್ಲಿ ಸಂಜಯ ದೇಶಪಾಂಡೆಯಂತಹ ಶಿಷ್ಯರನ್ನು ಹೊಂದಿದ್ದರು. ವಯಲಿನ ವಾದನದಲ್ಲಿ ಬೆಳಗಾವಿಯ ಶಹಪೂರದ ನಿವಾಸಿಗಳಾದ ಶ್ರೀ ಹನುಮಂತ ಲಡಕನ ರಾಷ್ಟ್ರಮಟ್ಟದಲ್ಲಿ ಮನ್ನಣೆಯನ್ನು ಪಡೆದಿದ್ದಾರೆ. ಇವರು ಸೋಲೋ, ತಂತುವಾದ್ಯದಲ್ಲಿಯ ಸುಮಧುರವಾದ ಸಂಗೀತ ಅಪಾರ ಜನಪ್ರಿಯತೆಯನ್ನು ಗಳಿಸಿದೆ.

ಬೆಳಗಾವಿಯ ಬಸವನ ಗಲ್ಲಿಯಲ್ಲಿ ಪುರಂದರದಾಸ ಸಂಗೀತ ವಿದ್ಯಾಲಯವನ್ನು ಸ್ಥಾಪಿಸಿ ಸಂಗೀತ ಶಿಕ್ಷಣವನ್ನು ನೀಡುತ್ತಿರುವ ತಮ್ಮಣ್ಣಾ ಗುರವ ಬೆಳಗಾವಿ ಸಂಗೀತ ಪರಂಪರೆಗೆ ಅಮೂಲ್ಯವಾದ ಕೊಡುಗೆಯನ್ನು ನೀಡಿದ್ದಾರೆ. ಈಗ ಈ ಸಂಸ್ಥೆಯು ನಿಂತಿದ್ದರೂ ಇಲ್ಲಿ ಕಲಿತ ಹಲವಾರು ಜನರು ಸಂಗೀತ ಸೇವೆಯಲ್ಲಿ ನಿರತರಾಗಿದ್ದಾರೆ. ಉತ್ತಮ ಸಂಗೀತ ಶಿಕ್ಷಕರೆಂದು ಗುರವ ಅವರು ಹೆಸರಾಗಿದ್ದಾರೆ.

ಆರ್ಟ ಸರ್ಕಲ್ :೧೯೪೦ ರಲ್ಲಿ ನಾಥ ಸಾಹೇಬ ಗುರ್ಟು ಎಂಬುವವರು ಬೆಳಗಾವಿಯಲ್ಲಿ ಸಂಗೀತದ ಪ್ರಸಾರ, ಪ್ರಚಾರಕ್ಕಾಗಿ 'ಆರ್ಟ ಸರ್ಕಲ್' ಎಂಬ ಸಂಸ್ಥೆಯನ್ನು ಸ್ಥಾಪಿಸಿದರು.[೭೨] ಇದರಿಂದ ಸಂಗೀತ ಕ್ಷೇತ್ರದಲ್ಲಿ ಮಹತ್ವದ ಬೆಳವಣಿಗೆ ಉಂಟಾಯಿತು. ಅಲ್ಲದೆ ಬೆಳಗಾವಿಗೆ ರಾಷ್ಟ್ರಮಟ್ಟದಲ್ಲಿ ಮಹತ್ವದ ಸ್ಥಾನ ಪ್ರಾಪ್ತವಾಯಿತು. ದೇಶದ ದೊಡ್ಡ ಕಲಾವಿದರೆಲ್ಲಾ ಇಲ್ಲಿಗೆ ಬಂದು ಇಲ್ಲಿ ತಮ್ಮ ಕಲೆಯ ಪ್ರದರ್ಶನವನ್ನು ಮಾಡುವುದು ಒಂದು ರೀತಿಯ ಗೌರವದ ಕಾರ್ಯವೆಂದೇ ತಿಳಿದುಕೊಂಡರು. ಬೆಳಗಾವಿಯ ಸಂಗೀತ ಪ್ರಿಯರಿಂದ 'ದಾದ' ಪಡೆದರೆ

ಆರ್ಟ ಸರ್ಕಲ್‌ನವರಿಂದ 'ವಾಹ್' ಎನಿಸಿಕೊಂಡರೆ ಅವರಿಗೆ ತೃಪ್ತಿ ಆಗುತ್ತಿತ್ತು.[೩] ಇಲ್ಲಿ ಸಂಗೀತ ಕಾರ್ಯಕ್ರಮಗಳನ್ನು ನೀಡುವುದೇ ಒಂದು ಪ್ರತಿಷ್ಠೆಯ ವಿಷಯವಾಗಿತ್ತು. ಎಷ್ಟೋ ಜನ ಕಲಾವಿದರು ಸಂಭಾವನೆ ಇಲ್ಲದೆಯೇ ಸಂಗೀತ ಕಾರ್ಯಕ್ರಮಗಳನ್ನು ನೀಡಿದ್ದಾರೆ. ಆರ್ಟ ಸರ್ಕಲ್‌ನಲ್ಲಿ ವರ್ಷವಿಡಿ ಒಂದಿಲ್ಲೊಂದು ಕಾರ್ಯಕ್ರಮಗಳು ನಡೆದೇ ಇರುತ್ತಿದ್ದವು. ವಾರ್ಷಿಕ ಸಂಗೀತ ನೃತ್ಯ ಸ್ಪರ್ಧೆಗಳನ್ನು ನಡೆಸುವುದರ ಮೂಲಕ ಬೆಳಗಾವಿಯಲ್ಲಿ ಸಂಗೀತ ಕ್ಷೇತ್ರ ಬೆಳವಣಿಗೆಯನ್ನು ಹೊಂದುವಂತಾಯಿತು.

ಇದೇ ಪರಂಪರೆಯಲ್ಲಿಯೇ ಶಹಪುರದ ಸಂಗೀತ ಸೇವಾ ಮಂಡಳ, ಶ್ರೀಮತಿ ಗೌರಿ ಶಣೈ ಮತ್ತು ಡಾ. ಶಿವಾನಂದರ ಸಮರ್ಥ ನೇತೃತ್ವದಲ್ಲಿಯ 'ಕಲಾನಿಕೇತನ' ಸಂಸ್ಥೆ, 'ಸಂಗೀತ ಕಲಾಕಾರರ ಸಂಘ' ಮುಂತಾದ ಸಂಘ ಸಂಸ್ಥೆಗಳು ಸಂಗೀತ ಕ್ಷೇತ್ರದಲ್ಲಿ ಮಹತ್ವದ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಂಗೀತದ ಬೆಳವಣಿಗೆಯಲ್ಲಿ ತೊಡಗಿಸಿಕೊಂಡಿವೆ. ಇದರ ಜೊತೆಗೆ ಅಖಿಲ ಭಾರತೀಯ ಗಂಧರ್ವ ವಿದ್ಯಾಲಯದ ಪರೀಕ್ಷಾ ಕೇಂದ್ರ ಬೆಳಗಾವಿಯಲ್ಲಿದ್ದುದು ಬೆಳಗಾವಿಗೆ ಪ್ರತಿಷ್ಠೆಯ ವಿಷಯವಾಗಿದೆ. ಪುಣೆ ಹೊರತುಪಡಿಸಿ ಈ ಪರೀಕ್ಷಾ ಕೇಂದ್ರ ಬೆಳಗಾವಿಯಲ್ಲಿ ಮಾತ್ರ ಇರುತ್ತದೆ.

ಒಟ್ಟಾರೆಯಾಗಿ ಬೆಳಗಾವಿ ಹಾಗೂ ಸುತ್ತಲಿನ ಪರಿಸರದಲ್ಲಿ ಸಂಗೀತವು ವಿಶೇಷವಾದ ಸಾಂಸ್ಕೃತಿಕ ಪರಿಸರವನ್ನು ನಿರ್ಮಾಣ ಮಾಡಿದೆ. ಬೆಳಗಾವಿಯಲ್ಲಿ ಬೆಳೆದು ಬಂದ ಸಂಗೀತ ಪರಂಪರೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ ಬೆಳಗಾವಿಯಲ್ಲಿ ಎಷ್ಟೇ ಕನ್ನಡ–ಮರಾಠಿ ಭಾಷಾ ವೈಷಮ್ಯವಿದ್ದರೂ ಅದು ಎಂದಿಗೂ ಸಂಗೀತದ ಮೇಲೆ ಸಂಗೀತಗಾರರ ಮೇಲೆ ಪ್ರಭಾವವನ್ನು ಬೀರಿಲ್ಲ. ಧರ್ಮ, ಜಾತಿ, ಭಾಷೆ, ಗಡಿಗಳನ್ನು ಮೀರಿ ಸಂಗೀತ ರೂಪಗೊಂಡಿದೆ. ಇದರಿಂದಾಗಿಯೇ ಬೆಳಗಾವಿಯಲ್ಲಿ ವಿಶ್ವಮಟ್ಟದ ಕಲಾಕಾರರು ನಿರ್ಮಾಣಗೊಂಡರು. ಬೆಳಗಾವಿಯ ಸಾಂಸ್ಕೃತಿಕ ವಿಕಾಸದಲ್ಲಿ ಸಂಗೀತವು ಮಹತ್ವದ ಪಾತ್ರವನ್ನು ವಹಿಸಿ ಸಮರಸ್ಯವನ್ನುಂಟು ಮಾಡಿ ವಿಶಿಷ್ಟವಾದ ಪರಂಪರೆಯಾಗಿ ಇಂದಿಗೂ ಬೆಳೆದು ಬರುತ್ತಿದೆ.



**ಸಂದರ್ಭ ಸೂಚಿ :**


೧. ವೇಣುನಾದ, ಪುಟ. ೧೨.

೨. ಅದೇ.

೩. ರಾಮಚಂದ್ರ ಧವಳೆ: ಕರ್ನಾಟಕದ ಬಲ ಬೆಳಗಾವಿ ನೆಲ, ಪುಟ. ೮.

೪. ಡಾ. ಎಂ. ಬಿ. ನೇಗಿನಹಾಳ: ನೇಗಿನಹಾಳರ ಪ್ರಬಂಧಗಳು, ಪುಟ. ೫೫.

೫. ಅದೇ ಪುಟ. ೫೫.

೬. ವೇಣುನಾದ, ಪುಟ. ೨.

೭. ಸಿ.ವಿ. ಮಠದ: ಬೆಳಗಾವಿ ಜಿಲ್ಲೆಯ ಭವ್ಯ ಪರಂಪರೆ, ಪುಟ.??

೮. ಡಾ. ಬಿ. ಆರ್. ಹಂದೂರ: ಜೈನ ಪರಂಪರೆಗೆ ಬೆಳಗಾವಿ ಪ್ರಾದೇಶಿಕ ಕೊಡುಗೆ, ಪುಟ. ೫.

೯. ಅದೇ ಪುಟ. ೫.

೧೦. ಶಿ. ಬಾ. ಪಾಟೀಲ: ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ, ಪುಟ. ೧೨೭.

೧೧. ಶ್ರೀನಿವಾಸ ಪಾಡಿಗಾರ: ಬೆಳಗಾವಿ ಜಿಲ್ಲಾಪ್ರದೇಶದ ದೇವಾಲಯ ವಾಸ್ತು, ಬೆಳಗಾವಿ ಜಿಲ್ಲೆಯ ಭವ್ಯ ಪರಂಪರೆ, ಪುಟ. ೧೧೨.

೧೨. ಕತ್ರಾಳೆ ಕಲ್ಲಿನಾಥ: ಬೆಳಗಾವಿ ಮತ್ತು ಜೈನಧರ್ಮ, ಪುಟ. ೯.

೧೩. ಇಪಿ.ಇಂಡಿಯಾ. ಸಂ.೧೩. ಪುಟ. ೧೮.

೧೪. ಅದೇ. ಪುಟ. ೧೮.

೧೫. ಡಾ. ಬಿ. ಆರ್. ಹಂದೂರ: ಜೈನ ಪರಂಪರೆಗೆ ಬೆಳಗಾವಿ ಪ್ರಾದೇಶಿಕ ಕೊಡುಗೆ, ಪುಟ. ೧೬೫.

೧೬. ಅದೇ. ಪುಟ. ೧೬೫.

೧೭. ಕೆ.ಐ. ಸಂ. ೨೧. ಪುಟ. ೧೮.

೧೮. ಡಾ. ಬಿ. ಆರ್. ಹಂದೂರ: ಜೈನ ಪರಂಪರೆಗೆ ಬೆಳಗಾವಿ ಪ್ರಾದೇಶಿಕ ಕೊಡುಗೆ, ಪುಟ. ೧೬೮.

೧೯. ಎ. ಎನ್. ಉಪಾಧ್ಯ: ಉಪಾಧ್ಯೆ ಪೇಪರ್ಸ, ಪುಟ. ೧೯೫

೨೦. ಡಾ. ಬಿ. ಆರ್. ಹಂದೂರ: ಜೈನ ಪರಂಪರೆಗೆ ಬೆಳಗಾವಿ ಪ್ರಾದೇಶಿಕ ಕೊಡುಗೆ, ಪುಟ. ೧೭೧

೨೧. ಅದೇ. ಪುಟ. ೧೭೧.

೨೨. ಎಂ .ಕೆ. ಹುಬ್ಬಳ್ಳಿಯು ಪುರಾತನ ಕಾಲದಿಂದಲೂ ಮಹತ್ವದ ಸ್ಥಳವಾಗಿದೆ. ರಟ್ಟರ ಕಾಲದಲ್ಲಿ ಹುಬ್ಬಳ್ಳಿ-೧೨ ಆಡಳಿತ ಉಪ ವಿಭಾಗವಾಗಿತ್ತು. ಇಲ್ಲಿಯೂ ಒಂದು ಪುರಾತನ ಕಾಲದ ಜೈನ ಬಸದಿಯನ್ನು ಕಾಣಬಹುದಾಗಿದೆ. ಈಗಿನ ಬೆಳಗಾವಿಯ ಕೋರೆ ಗಲ್ಲಿಯಲ್ಲಿರುವ ಪಂಚ ಪರಮೇಷ್ಠಿಯರ ಮೂರ್ತಿಯು ಎಂ.ಕೆ. ಹುಬ್ಬಳ್ಳಿಯಲ್ಲಿ ಮನೆ ಕಟ್ಟುವಾಗ ನೆಲದಲ್ಲಿ ದೊರೆತುದಾಗಿದೆ.

೨೩. ವಸಂತ ರಾಜಯ್ಯ: ಕರ್ನಾಟಕ ದಿಗಂಬರ ಜೈನ ಬಸದಿಗಳು, ಮುನ್ನುಡಿ. ಪುಟ. ೧೬.

೨೪. ಇಪಿ. ಇಂಡಿಯಾ. ಸಂ.೧೨. ಪುಟ. ೧೮, ೨೮.

೨೫. ಕೆ. ಉಮೇಶ: ಬೆಳಗಾವಿಯ ಪ್ರಾದೇಶಿಕ ವಾಸ್ತುಶುಲ್ಪ ಕಲೆ, ಬೆಳಗಾವಿ ಬೆಳಕು, ಪುಟ. ೬೦.

೨೬. ಸ್ಮೀತಾ ಸುರೇಬಾನಕರ: ಬೆಳಗಾವಿ ಪಾರಂಪರಿಕ ಕಟ್ಟಡಗಳು. ಬೆಳಗಾವಿ ಜಿಲ್ಲೆಯ, ಇತಿಹಾಸ ಮತ್ತು ಪುರಾತತ್ತ್ವ ಪುಟ. ೩೧೭.

೨೭. ಎಸ್. ಕೆ. ಜೋಶಿ: ಬೆಳಗಾವಿ ಜಿಲ್ಲೆಯ ಕೋಟೆ–ಕೊತ್ತಳಗಳು. ಬೆಳಗಾವಿ ಸಂಸ್ಕೃತಿ. ಪುಟ. ೩೨.

೨೮. ಮಡಿವಾಳೇಶ್ವರ ಸರದಾರ: ಬೆಳಗಾವಿ ಕೋಟೆಯು, ಪ್ರಬೋಧ, ಜೂನ ೧೯೨೨. ಪುಟ. ೪.

೨೯. ಡಾ. ಎಂ. ಶಂಕರ: ಸಂಸ್ಕೃತಿ ಸಂವಹನ, ಪುಟ. ೭೪.

೩೦. ಅ.ಸುಂದರ ವಡಗಾಂವ ಮಾಧವಪುರ ಉತ್ಖನನ, ಸೂರ್ಯಕೀರ್ತಿ, ಪುಟ. ೭.

೩೧. ಸಂದರ್ಶನ–ಲಕ್ಷ್ಮೀ ವಯಸ್ಸು–೫೮, ದುರ್ಗವ್ವ ವಯಸ್ಸು–೪೦. ಸ್ಥಳ: ವಿಜಯ ನಗರ, ದಿನಾಂಕ: ೨೮–೧೧–೨೦೧೧.

೩೨. ಲಕ್ಷ್ಮೀದೇವಿ ಗವಾಯಿ: ಎಂ.ಎ. ಚೆಟ್ಟಿ ಅವರ ಜೀವನ ಹಾಗೂ ಕಲಾಕೃತಿಗಳು, ಪುಟ. ೨೩.

೩೩. ಅದೇ ಪುಟ. ೨೬.

೩೪. ಅದೇ ಪುಟ. ೨೮೫.

೩೫. ಅದೇ ಪುಟ. ೭೧.

೩೬. ಶಿವು ಹಿರೇಮಠ: ಬೆಳಗಾವಿ ಜಿಲ್ಲೆಯ ಚಿತ್ರಕಲಾ ಪರಂಪರೆ, ಬೆಳಗಾವಿ ಸಿರಿ, ಪುಟ. ೧೫೪.

೩೭. ಕರ್ನಾಟಕದ ಕಲೆಗಳು, ಸಂಪುಟ–೧೦, ಪುಟ. ೧೩

೩೮. ವಿ.ಸಿ. ಮಾಲಗತ್ತಿ: ಬೆಳಗಾವಿ ಜಿಲ್ಲೆಯ ಚಿತ್ರಕಲಾ ಸಂಪದ, ವಿಜಯ ದುಂದುಬಿ ಸಂಸ್ಮರಣ ಸಂಚಿಕೆ. ಪುಟ. ೬೫.

೩೯. ಲಕ್ಷ್ಮೀದೇವಿ ಗವಾಯಿ: ಎಂ.ಎ. ಚೆಟ್ಟಿ ಅವರ ಜೀವನ ಹಾಗೂ ಕಲಾಕೃತಿಗಳು, ಪುಟ. ೨೫೦.

೪೦. ಶಿವು ಹಿರೇಮಠ: ಬೆಳಗಾವಿ ಜಿಲ್ಲೆಯ ಚಿತ್ರಕಲಾ ಪರಂಪರೆ, ಬೆಳಗಾವಿ ಸಿರಿ, ಪುಟ. ೧೫೫.

೪೧. ಡಿ.ಎಸ್. ಚೌಗಲೆ: ಬೆಳಗಾವಿ ಜಿಲ್ಲೆಯ ಚಿತ್ರಕಲೆ, ವಿಶ್ವಕನ್ನಡ ಸಮ್ಮೇಳನ ಸಂಪುಟ, ಪುಟ. ೪೮೮.

೪೨. ಅದೇ, ಪುಟ. ೪೮೯.

೪೩. ಕರ್ನಾಟಕದ ಕಲೆಗಳು, ಸಂಪುಟ-೧೦, ಪುಟ. ೩೩.

೪೪. ಪ್ರತಾಪ ಬಹುರೂಪಿ: ಗಡಿನಾಡ ಚಿತ್ರಕಲಾವಿದರ ಕೊಡುಗೆ, ಬೆಳಗಾವಿ ಬೆಡಗು, ಸ್ಮರಣ ಸಂಚಿಕೆ. ಪುಟ. ೧೭೮.

೪೫. ಶಿವು ಹಿರೇಮಠ: ಬೆಳಗಾವಿ ಸಿರಿ, ಪು.೧೫೫.

೪೬. ಡಿ.ಎಸ್. ಚೌಗಲೆ: ಬೆಳಗಾವಿ ಜಿಲ್ಲೆಯ ಚಿತ್ರಕಲೆ, ವಿಶ್ವಕನ್ನಡ ಸಮ್ಮೇಳನ ಸಂಪುಟ, ಪುಟ. ೪೯೦.

೪೭. ಶಿವು ಹಿರೇಮಠ: ಬೆಳಗಾವಿ ಸಿರಿ, ಪುಟ. ೧೫೬.

೪೮. ಅದೇ. ಪುಟ. ೧೫೬.

೪೯. ಡಿ.ಎಸ್. ಚೌಗಲೆ: ಬೆಳಗಾವಿ ಜಿಲ್ಲೆಯ ಚಿತ್ರಕಲೆ, ವಿಶ್ವಕನ್ನಡ ಸಮ್ಮೇಳನ ಸಂಪುಟ, ಪುಟ. ೪೯೩.

೫೦. ಶಿವು ಹಿರೇಮಠ: ಬೆಳಗಾವಿ ಸಿರಿ, ಪುಟ. ೧೫೬.

೫೧. ಶಿವು ಹಿರೇಮಠ: ಬೆಳಗಾವಿ ಸಿರಿ, ಪುಟ. ೧೫೭.

೫೨. ಪಾಪು-ನಾಡುನುಡಿ, ಪುಟ. ೨೫೦.

೫೩. ಶಿ.ಬಾ. ಪಾಟೀಲ: ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ, ಪುಟ. ೮೬.

೫೪. ಇಪಿ. ಸಂಪುಟ-೧೩, ಪುಟ. ೧೮, ೨೮.

೫೫. ಬೊಮ್ಮರಸ ಪಂಡಿತ: ಪಾರ್ಶ್ವನಾಥ ಪುರಾಣಂ, ಆಶ್ವಾಸ. ೯. ಪದ್ಯ ೯೧.

೫೬. ಅದೇ. ಆಶ್ವಾಸ.೧೦. ಪದ್ಯ ೪೮.

೫೭. ಜೆ.ಬಿ.ಬಿ.ಆರ್.ಎಸ್. ಸಂಪುಟ-೧೦. ಪುಟ. ೨೪೦.

೫೮. ಬಿ.ವಿ. ಕೆ. ಶಾಸ್ತ್ರೀ: ಕರ್ನಾಟಕದಲ್ಲಿ ಸಂಗೀತ ಅವಲೋಕನ, ಪುಟ. ೩೪೨.

೫೯. ಶಿರೀಷ್ ಜೋಶಿ: ಬೆಳಗಾವಿ ಸಂಸ್ಕೃತಿ. ಸಂಸ್ಮರಣ ಸಂಪುಟ. ಪುಟ. ೪೮೨.

೬೦. ಅದೇ. ಪುಟ. ೪೮೩. ೫೭. ಶಿರೀಷ್ ಜೋಶಿ: ಬೆಳಗಾವಿ ಭಾಗ್ಯ. ಸ್ಮರಣ ಸಂಪುಟ. ಪುಟ. ೬೫

೬೧. ಚಂದ್ರಕಾಂತ ಕುಸನೂರ: ವಿಜಯ ದುಂದುಭಿ, ಸಂಸ್ಮರಣ ಸಂಚಿಕ, ಪುಟ. ೮೦.

೬೨. ಗುರುರಾಜ ಕುಲಕರ್ಣಿ: ಬೆಳಗಾವಿ ಸಂಗೀತ ಪರಂಪರೆ, ಬೆಳಗಾವಿ ಬೆಡಗು, ಪುಟ. ೫೯.

೬೩. ಅದೇ. ಪುಟ. ೬೧.

೬೪. ಚಂದ್ರಕಾಂತ ಕುಸನೂರ: ವಿಜಯ ದುಂದುಭಿ, ಸಂಸ್ಮರಣ ಸಂಚಿಕ, ಪುಟ. ೯೧.

೬೫. ಗುರುರಾಜ ಕುಲಕರ್ಣಿ: ಬೆಳಗಾವಿ ಸಂಗೀತ ಪರಂಪರೆ, ಬೆಳಗಾವಿ ಬೆಡಗು, ಪುಟ. ೬೦.

೬೬. ಶಿರೀಷ್ ಜೋಶಿ: ಬೆಳಗಾವಿ ಭಾಗ್ಯ. ಸ್ಮರಣ ಸಂಪುಟ. ಪುಟ. ೬೬.

೬೭. ಗುರುರಾಜ ಕುಲಕರ್ಣಿ: ಬೆಳಗಾವಿ ಸಂಗೀತ ಪರಂಪರೆ, ಬೆಳಗಾವಿ ಬೆಡಗು, ಪುಟ. ೬೩.

೬೮. ಅದೇ ಪುಟ. ೬೧.

೬೯. ಚಂದ್ರಕಾಂತ ಕುಸನೂರ: ವಿಜಯ ದುಂದುಭಿ, ಸಂಸ್ಮರಣ ಸಂಚಿಕ, ಪುಟ. ೮೭

೭೦. ಶಿರೀಷ್ ಜೋಶಿ: ಬೆಳಗಾವಿ ಭಾಗ್ಯ. ಸ್ಮರಣ ಸಂಪುಟ. ಪುಟ. ೬೮.

೭೧. ಗುರುರಾಜ ಕುಲಕರ್ಣಿ: ಬೆಳಗಾವಿ ಸಂಗೀತ ಪರಂಪರೆ, ಬೆಳಗಾವಿ ಬೆಡಗು, ಪುಟ. ೬೧.

೭೨. ಚಂದ್ರಕಾಂತ ಕುಸನೂರ: ವಿಜಯ ದುಂದುಭಿ, ಸಂಸ್ಮರಣ ಸಂಚಿಕೆ, ಪುಟ. ೯೨.

೭೩. ಅದೇ ಪುಟ. ೮೮.



## ಅಧ್ಯಾಯ : ಆರು

# ಧಾರ್ಮಿಕ ಪರಂಪರೆ

### ೧. ಧರ್ಮ-ಜಾತಿ-ಜನಾಂಗ:

ಭಾರತದ ಪ್ರಾಚೀನ ನೆಲೆಗಳಲ್ಲಿ ಒಂದಾದ ಬೆಳಗಾವಿಯು ಶಿಲಾಯುಗದ ಕಾಲದಿಂದಲೂ ಅಸ್ತಿತ್ವದಲ್ಲಿದೆ. ಇದು ನಾಗರಿಕತೆಗಳ ಕಾಲದಲ್ಲಿ ಬೆಳವಣಿಗೆಯನ್ನು ಹೊಂದಿ, ಇತಿಹಾಸ ಕಾಲದ ಶಾತವಾಹನರ ಆಳ್ವಿಕೆಗೆ ಒಳಪಟ್ಟು ಪ್ರಮುಖ ಪಟ್ಟಣವಾಗಿ, ವ್ಯಾಪಾರಿ ಕೇಂದ್ರವಾಗಿ ಮಹತ್ವವನ್ನು ಪಡೆದುಕೊಂಡಿತ್ತು. ಭೌಗೋಳಿಕವಾಗಿಯೂ ಮಹತ್ವವನ್ನು ಪಡೆದುಕೊಂಡ ಬೆಳಗಾವಿ ಕರ್ನಾಟಕ, ಮಹಾರಾಷ್ಟ್ರ, ಗೋವಾ ರಾಜ್ಯಗಳ ಮಧ್ಯದ ಪ್ರಮುಖ ಪಟ್ಟಣವಾಗಿ ಮೂರು ರಾಜ್ಯಗಳ ರಾಯಭಾರಿಯಂತೆ ಕಾರ್ಯನಿರ್ವಹಿಸುತ್ತಿದೆ. ಬೆಳಗಾವಿಯ ಈ ಭೌಗೋಳಿಕ, ಸಾಂಸ್ಕೃತಿಕ ಬೆಳವಣಿಗೆಯಲ್ಲಿ ಧರ್ಮವು ಅತ್ಯಂತ ಪ್ರಮುಖ ಪಾತ್ರವನ್ನು ವಹಿಸಿದೆ. ಪ್ರಾಕೃತಿಕ ವೈಶಿಷ್ಟ್ಯಗಳಿಂದಾಗಿ ಎಲ್ಲ ಧರ್ಮಗಳನ್ನು ಆಕರ್ಷಿಸಿ ವಿಶಿಷ್ಟ ಸಾಂಸ್ಕೃತಿಕ ನಗರವಾಗಿ ರೂಪತಾಳಿದೆ. ವೇದಕಾಲಕ್ಕಿಂತ ಪ್ರಾಚೀನವಾದ 'ನಾಗಧರ್ಮ'ದಿಂದ ಹಿಡಿದು ಕಾಲಕಾಲಕ್ಕೆ ಹಲವಾರು ಧರ್ಮಗಳು ಬೆಳಗಾವಿಯಲ್ಲಿ ಆಶ್ರಯ ಪಡೆದವು. ಇದರಿಂದ ಬೆಳಗಾವಿಯು ಸರ್ವಧರ್ಮ ಸಮನ್ವಯದ ಆದರ್ಶಕ್ಕೆ ಸಮೃದ್ಧವಾದ ವೇದಿಕೆಯಾಗಿ ಪರಿಣಮಿಸಿತು.

ಬೆಳಗಾವಿಯಲ್ಲಿ ಕಂಡು ಬಂದ ಅತ್ಯಂತ ಪ್ರಾಚೀನವಾದ ಒಂದು ಧರ್ಮಾಚರಣೆಯೆಂದರೆ ನಾಗಗಳ ಉಪಾಸನೆ. ಪ್ರಾಚೀನ ಕರ್ನಾಟಕದ ಹಲವಾರು ಕಡೆಗಳಲ್ಲಿ ಈ ನಾಗಾರಾಧನೆ ಪ್ರಚಲಿತವಿತ್ತೆಂದು ಡಾ. ಎಚ್. ತಿಪ್ಪೇರುದ್ರಸ್ವಾಮಿಯವರು ಅಭಿಪ್ರಾಯ ಪಟ್ಟಿದ್ದಾರೆ.[೧] ಬೆಳಗಾವಿಯಲ್ಲಿ ನಾಗರ ಸಂಸ್ಕೃತಿಗೆ ಸಂಬಂಧಪಟ್ಟ ಹಲವಾರು ಅವಶೇಷಗಳು ದೊರೆಯುತ್ತವೆ. ಶಾತವಾಹನರ ಕಾಲದ ಹಿಂದಿನ ಬೆಳಗಾವಿಯನ್ನು ಗುರುತಿಸಲು ಈ ಅವಶೇಷಗಳು ಸಹಕಾರಿಯಾಗಿವೆ. ಬೆಳಗಾವಿ ನಗರದ ಹೊರವಲಯಗಳಲ್ಲಿರುವ ದೇವಾಲಯಗಳಲ್ಲಿ ಈ ಅವಶೇಷಗಳನ್ನು

ಕಾಣಬಹುದಾಗಿದೆ. ಈಗಿನ ರೇಲ್ವೆ ನಿಲ್ದಾಣದ ಉತ್ತರ ಬದಿಯಲ್ಲಿ ದಂಡಿನ ಶಿಬಿರದ ಪೂರ್ವಕ್ಕೆ ಈ ಸಂಸ್ಕೃತಿಯ ವಾಸ್ತವ್ಯವಿದ್ದಿರಬಹುದೆಂದು ಡಾ. ಎಂ. ಬಿ. ನೇಗಿನಹಾಳರು ಅಭಿಪ್ರಾಯ ಪಟ್ಟಿದ್ದಾರೆ.[೨] ಈ ಪ್ರದೇಶವು ಈಗಲೂ ನಾಗರ ಪ್ರದೇಶವೆಂದೇ ಕರೆಯಲ್ಪಡುತ್ತದೆ. ಇಲ್ಲಿಯ ಕೆರೆಗೆ 'ನಾಗರಕೆರೆ' ಎಂದು, ಇಲ್ಲಿರುವ ಶಾಲೆಗೆ 'ನಾಗಝರಿ ಶಾಲೆ' ಎಂದು, ಬಾವಿಗೆ 'ನಾಗರಬಾವಿ' ಎಂಬ ಹೆಸರುಗಳಿವೆ. ಇಲ್ಲಿರುವ ಪುರಾತನ ಬಾವಿಯ ಅವಶೇಷಗಳ ಅಕ್ಕಪಕ್ಕದಲ್ಲಿಯೇ ಈ ವಾಸ್ತವ್ಯವಿದ್ದಿರಬಹುದಾದ ಸಾಧ್ಯತೆಗಳಿವೆ. ಈ ನಾಗರಕೆರೆಯ ದಕ್ಷಿಣ ದಿಕ್ಕಿಗೆ ಅರ್ಧಕಿಲೋಮೀಟರ ಅಂತರದಲ್ಲಿರುವ ಕಪಿಲೇಶ್ವರ ದೇವಾಲಯದ ಹಿಂದಿರುವ ಕೆರೆಯ ಮಧ್ಯದಲ್ಲಿರುವ ಶಿವ ದೇವಾಲಯವು ಪ್ರಾಚೀನವಾದದ್ದಾಗಿದೆ. ಇದೇ ಮೂಲ ಕಪಿಲೇಶ್ವರ ದೇವಾಲಯವೆಂಬ ನಂಬಿಕೆ ಇದೆ. ಇಲ್ಲಿಯೂ ಕೆಲವು ನಾಗಶಿಲ್ಪಗಳು ಕಂಡುಬರುತ್ತವೆ. ಕಪಿಲೇಶ್ವರ ದೇವಾಲಯದ ಆವರಣದಲ್ಲಿ ಹಲವಾರು ಪ್ರಾಚೀನ ಕುರುಹುಗಳು ಕಂಡುಬರುತ್ತವೆ. ದೇವಾಲಯದ ಎಡಪಾರ್ಶ್ವದಲ್ಲಿ ಅನೇಕ ನಾಗಶಿಲ್ಪಗಳು ಕಂಡುಬರುತ್ತವೆ. ಈ ದೇವಾಲಯವು ಪುರಾಣೇತಿಹಾಸ ಕಾಲದಿಂದಲೂ ಅಸ್ತಿತ್ವದಲ್ಲಿತ್ತೆಂದು ನಂಬಲಾಗಿದೆ.[೩] ಅಗಸ್ತ್ಯ ಋಷಿಯು ಇಲ್ಲಿ ಯಜ್ಞಯಾಗಗಳನ್ನು ಮಾಡಿದ್ದನೆನ್ನುವ ನಂಬಿಕೆ ಇದೆ. ಅದಕ್ಕೆ ಸಾಕ್ಷಿಯಾಗಿ ಅಂದು ಅಗಸ್ತ್ಯ ಯಜ್ಞಕ್ಕಾಗಿ ಹೊತ್ತಿಸಿದ ಅಗ್ನಿಕುಂಡವಿದ್ದು, ಇಲ್ಲಿ ಬೆಂಕಿಯನ್ನು ನಂದಗೊಡದೆ ಅಂದಿನಿಂದಲೂ ಮುಂದುವರೆಸಿಕೊಂಡು ಬರಲಾಗಿದೆ ಎಂದು ಹೇಳಲಾಗುತ್ತದೆ.

ಬೆಳಗಾವಿಯಲ್ಲಿ ನಾಗಸಂಸ್ಕೃತಿಯ ಪ್ರಬಲವಾದ ಕುರುಹುಗಳು ದೊರೆಯುವುದು ಇಲ್ಲಿಯ ಜತ್ತಿಮಠದಿಂದ. ನಗರದ ಹೃದಯ ಭಾಗವಾದ ಕಿರ್ಲೋಸ್ಕರ ರಸ್ತೆಯ ಅಂಚಿನಲ್ಲಿರುವ ಈ ಜತ್ತಿಮಠವು ಸಾವಿರಾರು ವರ್ಷಗಳ ಇತಿಹಾಸವನ್ನು ಹೊಂದಿದೆ. ಈ ಮಠಕ್ಕೆ ಜತ್ತಿಮಠವೆಂದು ಹೆಸರು ಬರಲು ಕಾರಣ ತಿಳಿದುಬರುವುದಿಲ್ಲ. ಈ ಮಠದ ವೈಶಿಷ್ಟ್ಯಗಳಲ್ಲಿ ಮುಖ್ಯವಾದುದೆಂದರೆ ಇಲ್ಲಿ ಪ್ರತಿವರ್ಷ ಉತ್ತರ ಭಾರತದಿಂದ ನಾಗಾಸಾಧುಗಳು ಬಂದು ನೆಲೆಸುತ್ತಾರೆ. ಈ ನಾಗಾಸಾಧುಗಳಲ್ಲಿ ಕೆಲವರು ಇಲ್ಲಿಯೇ ಉಳಿದು ತಪಸ್ಸು, ಹೋಮ, ಯಜ್ಞಗಳನ್ನು ಮಾಡಿ ಇಲ್ಲಿಯೇ ಸಮಾಧಿಸ್ತರಾಗುತ್ತಾರೆ. ಈ ಮಠದ ಒಳಗೆ ಈಗಲೂ ಸಮಾಧಿಗಳೇ ತುಂಬಿಕೊಂಡಿವೆ. ಈ ನಾಗಾಸಾಧುಗಳಲ್ಲಿ ಇನ್ನು ಕೆಲವರು ಸಹ್ಯಾದ್ರಿ ಬೆಟ್ಟಕ್ಕೆ ಹೋಗುತ್ತಾರೆ. ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ ತಾಲೂಕಿನ ಅಭಯಾರಣ್ಯದ ಮಧ್ಯದಲ್ಲಿ ಯಾರಿಗೂ ಕಾಣದ ನಾಗಾಸಾಧುಗಳ ತಾಣವಿದ್ದು, ಅಲ್ಲಿ ಅರಣ್ಯ ಮಧ್ಯದಲ್ಲಿ ತಪಸ್ಸನ್ನಾಚರಿಸುತ್ತಾರೆ. ಅಲ್ಲಿ ಒಂದು ಸುಂದರ ದೇವಾಲಯವಿರುವುದನ್ನು ಅರುಣಕುಮಾರ ಹಬ್ಬು ಅವರು ಉಲ್ಲೇಖಿಸಿದ್ದಾರೆ.[೪]

ನಾಗಾ ಜನಾಂಗವು ವಿಶೇಷವಾಗಿ ಊರ ಹೊರವಲಯದಲ್ಲಿ ವಾಸ್ತವ್ಯ ಹೂಡುತ್ತಾರೆ. ಬೆಳಗಾವಿಯ ಜತ್ತಿಮಠವು ಇಂದು ನಗರದ ಮಧ್ಯದಲ್ಲಿದ್ದರೂ ನಗರ ಬೆಳವಣಿಗೆಯಾಗುವ ಪೂರ್ವದಲ್ಲಿ ಇದು ಕಾಡಿನ ಮಧ್ಯದಲ್ಲಿಯೇ ಇದ್ದಿರಬಹುದಾಗಿದೆ. ಈಗಲೂ ಈ ಮಠದ ಹಿಂದಿನ ಭಾಗವೆಲ್ಲ ಗಿಡ ಮರಗಳಿಂದ ಕಾಡಿನ ಸ್ವರೂಪದಲ್ಲಿಯೇ ಇದೆ. ಬೋಗಾರವೇಸ್ ಪಕ್ಕದಲ್ಲಿಯೇ ಈ ಜತ್ತಿಮಠವು ಸ್ಥಾಪನೆಗೊಂಡಿದೆ. ಮಠದ ಒಳಗೆ ಹಲವಾರು ಪ್ರಾಚೀನ

ವಿಗ್ರಹಗಳನ್ನು ಕಾಣಬಹುದು. ಇಲ್ಲಿ ದೊಡ್ಡದಾದ ಅಗ್ನಿಕುಂಡವಿದ್ದು, ಇಲ್ಲಿ ಸತತವಾಗಿ ಬೆಂಕಿ ಉರಿಯುತ್ತಲೇ ಇರುತ್ತದೆ.[೫] ಇಲ್ಲಿರುವ ಅತ್ಯಂತ ಹಳೆಯದಾದ ಬಾವಿಯು ಬಹು ಆಳವಾಗಿದೆ. ಈ ಬಾವಿಯಲ್ಲಿ ಸತತವಾಗಿ ನೀರಿರುತ್ತದೆ. ಈ ಬಾವಿಯಿಂದಲೇ ಮೊದಲು ಬೆಳಗಾವಿ ನಗರಕ್ಕೆ ನೀರು ಪೂರೈಕೆಯಾಗುತ್ತಿತ್ತು. ಅತ್ಯಂತ ಸಿಹಿಯಾದ ನೀರನ್ನು ಈ ಬಾವಿ ಹೊಂದಿದೆ. ನಗರದ ಹೊರವಲಯದಲ್ಲಿರುವ ವೀರಭದ್ರ ದೇವಾಲಯದಲ್ಲಿಯೂ ಅತ್ಯಂತ ಪ್ರಾಚೀನವಾದ ನಾಗಶಿಲ್ಪಗಳನ್ನು ಕಾಣಬಹುದು. ಸರ್ಪಗಳ ಆರಾಧನೆ ಇಂದಿಗೂ ಇಲ್ಲಿ ಪ್ರಚಲಿತವಿದೆ. ಎಲ್ಲಾ ಧರ್ಮಗಳಲ್ಲಿಯೂ ಇದು ವಿಶೇಷವಾಗಿ ಕಂಡುಬರುತ್ತದೆ. ಬೆಳಗಾವಿ ಪ್ರದೇಶದಲ್ಲಿಯ ಈ ಕುರುಹುಗಳಿಂದ ಇಲ್ಲಿ ನಾಗಾರಾಧನೆ ಪ್ರಭಾವವಿತ್ತೆಂದು ತಿಳಿದುಬರುತ್ತದೆ.

ಭಾರತದ ಪ್ರಾಚೀನ ಧರ್ಮಗಳಲ್ಲಿ ಒಂದಾದ ಬೌದ್ಧಧರ್ಮವು ಬೆಳಗಾವಿಯಲ್ಲಿದ್ದ ಬಗೆಗೆ ಹಲವಾರು ಐತಿಹ್ಯಗಳು ದೊರೆಯುತ್ತವೆ.

ಶಾತವಾಹನರಿಗಿಂತ ಪೂರ್ವದಲ್ಲಿ ಬೆಳಗಾವಿಯು ಮೌರ್ಯರ ಆಡಳಿತಕ್ಕೆ ಒಳಪಟ್ಟು ಬೌದ್ಧಧರ್ಮವು ಇಲ್ಲಿ ಪ್ರಸಾರ ಹೊಂದಿರುವುದನ್ನು ಡಾ. ಎಂ. ಬಿ. ನೇಗಿನಹಾಳರು ತಿಳಿಸಿದ್ದಾರೆ.[೬] ಕರ್ನಾಟಕದ ಬನವಾಸಿ, ಬಾದಾಮಿ ಮುಂತಾದ ಕಡೆಗಳಲ್ಲಿ ಬೌದ್ಧಧರ್ಮವು ಪ್ರಸಾರವನ್ನು ಹೊಂದಿದ್ದು ಬೆಳಗಾವಿಯಲ್ಲಿಯೂ ಸ್ವಲ್ಪ ಮಟ್ಟಿನ ಪ್ರಭಾವ ಇದ್ದಿರಬಹುದೆಂದಿದ್ದಾರೆ.

ಶಾತವಾಹನರ ಕಾಲದ ವಡಗಾಂವಿ-ಮಾಧವಪುರ ಪ್ರದೇಶದಲ್ಲಿ ದೊರೆತ ಹಲವಾರು ಕಟ್ಟಡಗಳು, ಮೂರ್ತಿಗಳು, ಬೌದ್ಧಧರ್ಮಕ್ಕೆ ಸಂಬಂಧಿಸಿದವುಗಳಾಗಿವೆ. ಇಲ್ಲಿ ದೊರೆತ ಮನುಷ್ಯನ ರುಂಡವು ಸುಟ್ಟ ಮಣ್ಣಿನಿಂದ ಮಾಡಲಾಗಿದ್ದು ಗೊಂಬೆಯ ತಲೆಯ ಮೇಲೆ ಕಪ್ಪು ಲೇಪನ ಮಾಡಲಾಗಿದೆ. ಈ ಮೂರ್ತಿಯ ಲಕ್ಷಣಗಳ ಮೇಲಿಂದ ಇದು ಬುದ್ಧನ ಮೂರ್ತಿಯೆಂದು ಡಾ. ಅ. ಸುಂದರ ತಿಳಿಸಿದ್ದಾರೆ.[೭]

ಬೆಳಗಾವಿಯಲ್ಲಿ ಗಣನೀಯ ಪ್ರಮಾಣದಲ್ಲಿ ಬೌದ್ಧರು ನೆಲೆಸಿದ್ದರು. ಉತ್ಖನನದಲ್ಲಿ ದೊರೆತ ದೊಡ್ಡ ಕಟ್ಟಡವು ಬೌದ್ಧ ಭಿಕ್ಷುಗಳ ವಾಸ್ತವ್ಯದ ಚೈತ್ಯಾಲಯವಾಗಿದ್ದು, ಅವರು ಜೀವನೋಪಾಯಕ್ಕೆ ಬಳಸುತ್ತಿದ್ದ ಮಣ್ಣಿನ ತೋಟಗಳು, ಮೃತ್ ಪಾತ್ರೆಗಳು, ಮಣಿಗಳು, ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತವೆ. ಈ ಎಲ್ಲ ಆಧಾರಗಳಿಂದ ಬೆಳಗಾವಿಯು ಬೌದ್ಧಧರ್ಮದ ಪ್ರಮುಖ ನೆಲೆಯಾಗಿತ್ತೆಂದು ಸ್ಪಷ್ಟವಾಗುತ್ತದೆ.

ಮೌರ್ಯರ ಆಳ್ವಿಕೆಯ ನಂತರ ಶಾತವಾಹನರ ಆಳ್ವಿಕೆಗೆ ಒಳಪಟ್ಟ ಬೆಳಗಾವಿಯಲ್ಲಿ ವೈದಿಕಧರ್ಮವು ಪ್ರಚಲಿತದಲ್ಲಿತ್ತು. ಕ್ರಿ. ಪೂ. ಸುಮಾರು ಒಂದನೆಯ ಶತಮಾನದ ಬ್ರಾಹ್ಮೀ ಲಿಪಿ ಮತ್ತು ಪ್ರಾಕೃತಭಾಷೆಯಲ್ಲಿರುವ ಒಂದು ಶಾಸನವು ಕಾಶ್ಯಪಗೋತ್ರದ 'ಧಸ' ಎಂಬ ಬ್ರಾಹ್ಮಣನು ವಾಜಪೇಯ ಮುಂತಾದ ಯಜ್ಞ ಮಾಡಿದ

ವಿಷಯ ಹೇಳುತ್ತದೆ.[೮] ಬ್ರಾಹ್ಮಣರಾದ ಶಾತವಾಹನರ ಕಾಲದಲ್ಲಿ ಸಹಜವಾಗಿಯೇ ವೈದಿಕಧರ್ಮವು ಬೆಳವಣಿಗೆಯನ್ನು ಪಡೆದುಕೊಂಡಿತು.

ಯಜ್ಞ, ಯಾಗಗಳ ಮೂಲಕ ವೈದಿಕಧರ್ಮವು ಆಚರಣೆಗೊಳ್ಳುತ್ತಿತ್ತು. ವಡಗಾಂವ್ ಮಾಧವಪುರದಲ್ಲಿ ಯಜ್ಞಗಳನ್ನು ಮಾಡಿದ ವ್ಯಕ್ತಿಯು ಸಾಕೇತ (ಅಯೋಧ್ಯೆ)ದಿಂದ ಬಂದ ಕಾಶ್ಯಪಗೋತ್ರದ ಕಠ ಶಾಖೆಯ 'ಸೋಮಯಶಸ್' ಎಂಬ ಬ್ರಾಹ್ಮಣನಾಗಿದ್ದು ಈತನು ಇಲ್ಲಿ ವಾಜಪೇಯ ಮೊದಲಾದ ೮೦ ಕ್ರತುಗಳನ್ನು ಮಾಡಿದನೆಂದು ಬೆಳಗಾವಿಯಲ್ಲಿ ದೊರೆತ ಯೂಪಸ್ತಂಭ ಶಾಸನದಿಂದ ತಿಳಿದು ಬರುತ್ತದೆ.[೯]

ವಿಷ್ಣುವಿನ ಆರಾಧಕರಾದ ವೈಷ್ಣವರು ವಿಷ್ಣುವಿನ ಮೊದಲಿನ ಒಂದೆರಡು ಅವತಾರಗಳನ್ನು ಪೂರ್ಣ ಪ್ರಾಣಿರೂಪದಲ್ಲಿ ತೋರಿಸುವ ಪದ್ಧತಿ ಶಾತವಾಹನರ ಕಾಲದಲ್ಲಿತ್ತು. ವಡಗಾವಿ-ಮಾಧವಪುರದಲ್ಲಿ ದೊರೆತ ತಾಮ್ರದ ಸಿಂಹದ ಗೊಂಬೆಯು ವಿಷ್ಣುವಿನ ಅವತಾರವನ್ನು ತಿಳಿಸುತ್ತದೆ. ಇದು ವಿಷ್ಣುವಿನ ಅವತಾರಗಳಲ್ಲೊಂದಾದ ನರಸಿಂಹ ಅವತಾರದ ಪೂರ್ವಭಾವಿ ಹಂತವ ರೂಪವನ್ನು ಸೂಚಿಸುತ್ತದೆ ಎಂದು ಡಾ. ಅ. ಸುಂದರ ಅಭಿಪ್ರಾಯ ಪಟ್ಟಿದ್ದಾರೆ.[೧೦]

ಇಲ್ಲಿ ದೊರೆತ ಮತ್ತೊಂದು ಮೂರ್ತಿಯು ಗಮನಾರ್ಹವಾಗಿದೆ. ಮನುಷ್ಯನ ಮುಖದ ಸ್ವರೂಪದಲ್ಲಿರುವ ಈ ಮೂರ್ತಿಯನ್ನು ಸುಟ್ಟ ಮಣ್ಣಿನಿಂದ ಮಾಡಲಾಗಿದ್ದು. ಉದ್ದವಾದ ಮುಖ, ಅಗಲವಾದ ಹಣೆ ಬೊಗಸೆಕಣ್ಣು, ದೊಡ್ಡ ಮೂಗು ಹೊಂದಿದೆ. ಈ ಮೂರ್ತಿಯ ಮತ್ತೊಂದು ಮಹತ್ವದ ವೈಶಿಷ್ಟ್ಯವೆಂದರೆ ಹಣೆಯ ಮೇಲೆ ಮೂರು ನಾಮಗಳನ್ನು ಕೊರೆಯಲಾಗಿದೆ. ವೈಷ್ಣವರು ಈ ಚಿಹ್ನೆಯನ್ನು ಧಾರ್ಮಿಕವಾಗಿ ಬಳಸುತ್ತಾರೆ. ಆದರೆ ಪ್ರಾಗೈತಿಹಾಸಿಕ ಅಥವಾ ಕಾಡು ಜನಾಂಗದವರೂ ತಮ್ಮ ಧಾರ್ಮಿಕ ಕಟ್ಟಳೆಗಳಲ್ಲಿ ಭಾಗವಹಿಸುತ್ತಿದ್ದಾಗ ಇಂತಹ ಹಲವಾರು ಚಿಹ್ನೆಗಳನ್ನು ಬಳಸುತ್ತಿದ್ದರು. ಈ ನಾಮದ ಚಿಹ್ನೆಯು ಅದೇ ಆಗಿದ್ದಲ್ಲದೆ ಹರಪ್ಪಾ ಸಂಸ್ಕೃತಿಯಲ್ಲಿ ಇಂತಹ ಚಿಹ್ನೆಗಳನ್ನು ಬಳಸುತ್ತಿದ್ದರು ಎಂಬ ಅಭಿಪ್ರಾಯವಿದೆ.[೧೧] ಇದು ಕುತೂಹಲಕಾರಿಯಾಗಿದ್ದು ಹೆಚ್ಚಿನ ಅಧ್ಯಯನ ಬೇಡುತ್ತದೆ.

ಇಲ್ಲಿ ದೊರೆತ ಮತ್ತೊಂದು ಮನುಷ್ಯನ ಮೂರ್ತಿಯು ನಿಂತ ಭಂಗಿಯಲ್ಲಿದೆ. ನೋಡಲು ಆಕರ್ಷಣಿಯವಾಗಿರುವ ಈ ಮನುಷ್ಯ ಮೂರ್ತಿಯು ವಿಶಾಲವಾದ ಭುಜ, ಅಗಲವಾದ ಎದೆ, ಕಿವಿಯಲ್ಲಿ ಕಮಲ ಮೊಗ್ಗಿನ ಕುಂಡಲಗಳು, ಕಂಠಾಭರಣ ಮತ್ತು ಯಜ್ಞೋಪವೀತವನ್ನು ಹೊಂದಿದೆ. ಬಹುಶಃ ಇದು ಬ್ರಾಹ್ಮಣದ ಚಿತ್ರವಾಗಿರಬಹುದಾಗಿದೆ. ಒಟ್ಟಿನಲ್ಲಿ ಈ ಮೇಲಿನ ಎಲ್ಲ ನಿದರ್ಶನಗಳನ್ನು ಗಮನಿಸಿದಾಗ ವೈದಿಕಧರ್ಮವು ಶಾತವಾಹನರ ಕಾಲದಲ್ಲಿ ಪ್ರಸಿದ್ಧಿಯನ್ನು ಪಡೆದುಕೊಂಡಿದ್ದು ಕಂಡುಬರುತ್ತದೆ. ಕ್ರಿ. ಶ. ಪೂರ್ವದಲ್ಲಿ ಯಜ್ಞ-ಯಾಗಗಳು ಬೆಳಗಾವಿ

ನೆಲದಲ್ಲಿ ನಿರಂತರವಾಗಿ ನಡೆಯುತ್ತಿದ್ದು ವೈದಿಕಧರ್ಮದ ಪ್ರಮುಖವಾದ ನೆಲೆಯಾಗಿದ್ದು ಸ್ಪಷ್ಟಗೊಳ್ಳುತ್ತದೆ. ಅಲ್ಲದೆ ಇವರು ಇತರ ಧರ್ಮಗಳನ್ನು ಪ್ರೀತಿಯಿಂದ ಕಾಣುತ್ತಿದ್ದರು ಎನ್ನುವುದು ಮಹತ್ವದ ಸಂಗತಿಯಾಗಿದೆ. ಶಾತವಾಹನರು ಬ್ರಾಹ್ಮಣರಾಗಿದ್ದರೂ ಶಾತವಾಹನರಲ್ಲಿಯ ಕೆಲವು ರಾಣಿಯರು ಬೌದ್ಧಧರ್ಮಕ್ಕೆ ಆಕರ್ಷಣೆ ಹೊಂದಿದ್ದರು. ಶಾತವಾಹನ ಅರಸರು ಸ್ತ್ರೀಯರಿಗೆ ಧಾರ್ಮಿಕ ಸ್ವಾತಂತ್ರ್ಯವನ್ನು ನೀಡಿದ್ದರು ಎನ್ನುವುದು ಇದರಿಂದ ತಿಳಿದುಬರುತ್ತದೆ. ಕ್ರಿ. ಶ. ಪೂರ್ವದಿಂದಲೂ ಬೆಳಗಾವಿಯಲ್ಲಿ ನೆಲೆಗೊಂಡಿದ್ದ ಬ್ರಾಹ್ಮಣರು ಬೆಳಗಾವಿಯ ಸಾಂಸ್ಕೃತಿಕ ವಿಕಾಸದಲ್ಲಿ ಮಹತ್ವದ ಪಾತ್ರವನ್ನು ವಹಿಸಿದ್ದಾರೆ.

ವೈದಿಕಧರ್ಮದ ಹಲವಾರು ಮಠಗಳು, ದೇವಾಲಯಗಳು ಧರ್ಮ ಜಾಗೃತಿಯ ಕೇಂದ್ರಗಳಾಗಿವೆ. ಹಲವಾರು ವಿಶಿಷ್ಟ ಆಚರಣೆ, ಸಂಪ್ರದಾಯಗಳಿಂದ ಕರ್ನಾಟಕ ಸಂಸ್ಕೃತಿಯನ್ನು ಶ್ರೀಮಂತಗೊಳಿಸಿವೆ. ಇಂದು ಬ್ರಾಹ್ಮಣ ಸಮುದಾಯದಲ್ಲಿ ಹಲವಾರು ವರ್ಗ, ಪಂಗಡಗಳು ಬೆಳೆದು ಬಂದಿವೆ. ಹೀಗಾಗಿ ಧಾರ್ಮಿಕ ನೀತಿ ನಿಯಮಗಳಲ್ಲಿ ವ್ಯತ್ಯಾಸಗಳು ಕಂಡು ಬರುತ್ತವೆ. ಪ್ರಮುಖವಾಗಿ ದ್ವೈತ ಮತ್ತು ಅದ್ವೈತ ಎಂಬ ಎರಡು ವರ್ಗಗಳನ್ನು ಕಾಣಬಹುದು. ಇವುಗಳಲ್ಲದೆ ಋಗ್ವೇದಿಗಳು, ಆಪಸ್ತಂಬರು, ಯಜುರ್ವೇದಿಗಳೂ, ಕಣ್ವರು, ಮಾಧ್ಯಂದಿಗರೂ ಇತ್ಯಾದಿ ಭೇದಗಳು ಕಂಡುಬರುತ್ತವೆ. ಇವರ ಜೊತೆಗೆ ದೇಶದ ಬೇರೆ ಬೇರೆ ಭಾಗಗಳಿಂದ ಬೆಳಗಾವಿಗೆ ಬಂದು ನೆಲೆಸಿದ ಬ್ರಾಹ್ಮಣರೂ ಕಂಡುಬರುತ್ತಾರೆ. ಕನೋಜರು, ಕರಾಡಸ್ಥರು, ಕೊಂಕಣಸ್ಥರು, ತೆಲುಗರು, ಗುಜರಾತಿ ಬ್ರಾಹ್ಮಣರು, ಮಾರವಾಡಿ ಬ್ರಾಹ್ಮಣರು–ಹೀಗೆ ಬ್ರಾಹ್ಮಣರಲ್ಲಿಯ ಹಲವಾರು ವರ್ಗಗಳನ್ನು ಬೆಳಗಾವಿಯಲ್ಲಿ ಕಾಣಬಹುದಾಗಿದೆ. ಇವರೆಲ್ಲರ ರೀತಿ, ನೀತಿ, ಆಚರಣೆ, ಸಂಪ್ರದಾಯಗಳಲ್ಲಿಯೂ ವೈವಿಧ್ಯತೆ ಕಂಡುಬರುತ್ತದೆ.

ಕ್ರಿ. ಶ. ೧೨ನೆಯ ಶತಮಾನದಲ್ಲಿ ಮಧ್ವಾಚಾರ್ಯರು ವೈಷ್ಣವ ಮತವನ್ನು ಬಲಗೊಳಿಸಿ ನಾಡಿನ ತುಂಬೆಲ್ಲಾ ಪ್ರಚಾರಗೊಳಿಸಿದರು. ಬೆಳಗಾವಿಯಲ್ಲಿಯೂ ಮಧ್ವಾಚಾರ್ಯರ ಅನುಯಾಯಿಗಳು ಕಂಡುಬರುತ್ತಾರೆ. ಉಡಪಿ, ಮಂಗಳೂರು ಪ್ರಾಂತ್ಯಗಳಿಂದ ಉದ್ಯೋಗ, ವ್ಯಾಪಾರಕ್ಕಾಗಿ ಬೆಳಗಾವಿಗೆ ಬಂದು ಇಲ್ಲಿಯೇ ನೆಲೆನಿಂತಿರುತ್ತಾರೆ. ಬ್ರಾಹ್ಮಣರು ವಿಶೇಷವಾಗಿ ಉಡಪಿಯ ಶ್ರೀಕೃಷ್ಣ, ನರಸಿಂಹ, ರಂಗನಾಥ, ತಿರುಪತಿಯ ವೆಂಕಟರಮಣ, ಶ್ರೀರಾಮ ಮುಂತಾದ ದೇವರನ್ನು ಆರಾಧಿಸುತ್ತಾರೆ. ಇವರು ಶ್ರೀ ಮುದ್ರೆಗಳನ್ನು ಉದ್ದ ನಾಮಗಳನ್ನು ಧರಿಸುತ್ತಾರೆ. ಆದರೆ ಸ್ಮಾರ್ತ ಬ್ರಾಹ್ಮಣರು ಹಣೆಯ ಮೇಲೆ ವಿಭೂತಿಯನ್ನು ಹಚ್ಚಿ ಮೇಲೆ ಅಡ್ಡ ಗಂಧವನ್ನು ಹಚ್ಚಿಕೊಳ್ಳುತ್ತಾರೆ.

ವೈಷ್ಣವರ ಮುಖ್ಯವಾದ ಹಬ್ಬಗಳೆಂದರೆ ಯುಗಾದಿ (ಚೈತ್ರ ಶುದ್ಧ ಪ್ರತಿಪದೆ), ರಾಮ ನವಮಿ (ಚೈತ್ರ ಶುದ್ಧ ನವಮಿ), ಅಕ್ಷಯ ತೃತೀಯೆ (ವೈಶಾಖ ಶುದ್ಧ ತೃತೀಯೆ), ಗೋಕುಲಾಷ್ಟಮಿ (ಶ್ರಾವಣ ವದ್ಯ ಅಷ್ಟಮಿ), ಗಣೇಶ ಚತುರ್ಥಿ (ಭಾದ್ರಪದ ಶುದ್ಧ ಚತುರ್ಥಿ), ನವರಾತ್ರಿ(ಅಶ್ವಿನ ಶುದ್ಧ ಪ್ರತಿಪದದಿಂದ ದಶಮಿಯವರೆಗೆ), ದೀಪಾವಳಿ

(ಅಶ್ವಿನ ಬಹುಳ ಚತುರ್ದಶಿಯಿಂದ ಕಾರ್ತಿಕ ಶುದ್ಧ ತೃತೀಯೆ ವರೆಗೆ), ಮಕರ ಸಂಕ್ರಾಂತಿ (ಪೇಶ ಮಾಸದಲ್ಲಿ), ಮಹಾ ಶಿವರಾತ್ರಿ (ಮಾಘ ವದ್ಯ ಚತುದರ್ಶಿ), ಹೋಳಿ ಹುಣ್ಣಿಮೆ (ಫಾಲ್ಗುಣ ಶುದ್ಧ ಪೌರ್ಣಿಮೆ)–ಹೀಗೆ ವರ್ಷಪೂರ್ತಿಯಾಗಿ ಹಬ್ಬಗಳನ್ನು ಆಚರಿಸುತ್ತಾರೆ. ಈ ಸಂದರ್ಭದಲ್ಲಿ ವಿಶೇಷವಾದ ಪೂಜೆ, ವ್ರತ, ಜಪ, ಉಪವಾಸಗಳನ್ನು ಕೈಗೊಳ್ಳುವರು. ದೇವಾಲಯಗಳಲ್ಲಿ ವಿಶೇಷವಾದ ಪೂಜೆಯನ್ನು ಕೈಗೊಂಡು, ಎಲ್ಲರೂ ಭಾಗವಹಿಸುತ್ತಾರೆ. ಇವರ ಮಾತೃಭಾಷೆ ಕನ್ನಡ. ಮನೆಯಲ್ಲಿ ಎಲ್ಲರೂ ಕನ್ನಡ ಮಾತನಾಡುತ್ತಾರೆ.

ಅದ್ವೈತರಾದ ಸ್ಮಾರ್ತ ಬ್ರಾಹ್ಮಣರು ಬೆಳಗಾವಿಯಲ್ಲಿ ನೆಲೆಗೊಂಡಿರುವರು. ಇವರು ಶಿವ, ಪಾರ್ವತಿಯರನ್ನು ತಮ್ಮ ಕುಲದೈವವಾಗಿ ಆರಾಧಿಸುತ್ತಾರೆ. ಇವರಲ್ಲಿ ವ್ಯಾಪಾರಸ್ಥರು, ನೌಕರರು, ಅಲ್ಲದೆ ಇನ್ನು ಕೆಲವರು ಭೂಮಿಯನ್ನು ಹೊಂದಿದ್ದು ಒಕ್ಕಲುತನವನ್ನು ಮಾಡುತ್ತಾರೆ. ಇವರ ಮಾತೃಭಾಷೆ ಕನ್ನಡ.

ಬೆಳಗಾವಿಯಲ್ಲಿ ನೆಲೆಸಿರುವ ಬ್ರಾಹ್ಮಣರಲ್ಲಿ ಕೊಂಕಣಸ್ಥ ಬ್ರಾಹ್ಮಣರು ಸ್ವಲ್ಪ ಪ್ರಮಾಣದಲ್ಲಿರುವರು. ಇವರ ಮೂಲಸ್ಥಾನ ಕೊಂಕಣ ಪ್ರದೇಶ. ೧೮ನೆಯ ಶತಮಾನದಲ್ಲಿ ಮರಾಠರ ಬಾಳಾಜೀ ಬಾಜೀರಾವ ಪೇಶ್ವೆಯು ಬೆಳಗಾವಿಯನ್ನು ಗೆದ್ದುಕೊಂಡು ಆಳ್ವಿಕೆ ನಡೆಸಿದ ಸಂದರ್ಭದಲ್ಲಿ ಇವರು ಬೆಳಗಾವಿಯಲ್ಲಿ ನೆಲೆಸಿದರು. ಇವರ ಮಾತೃ ಭಾಷೆ ಕೊಂಕಣಿ ಮತ್ತು ಮರಾಠಿ. ಇವರು ಹೆಚ್ಚಾಗಿ ವ್ಯಾಪಾರ ನಡೆಸುತ್ತಾರೆ. ಇವರು ಶಂಕರಾಚಾರ್ಯರನ್ನು ಧರ್ಮಗುರು ಎಂದು ಆರಾಧಿಸುತ್ತಾರೆ.

ಇನ್ನು ವ್ಯಾಪಾರವನ್ನೇ ಮೂಲ ಉದ್ಯೋಗವನ್ನಾಗಿ ಮಾಡಿಕೊಂಡು ಬೆಳಗಾವಿಗೆ ಬಂದು ನೆಲೆಸಿದ ಬ್ರಾಹ್ಮಣರಲ್ಲಿ ಗುಜರಾತಿ ಬ್ರಾಹ್ಮಣರು, ಮಾರವಾಡಿ ಬ್ರಾಹ್ಮಣರು ಮುಂತಾದವರು ಕಂಡುಬರುತ್ತಾರೆ.

'ಲೇಖಕರು' ಎನ್ನುವ ವರ್ಗ ಬ್ರಾಹ್ಮಣರಲ್ಲಿದ್ದು ಸುಮಾರು ಐವತ್ತು ಕುಟುಂಬಗಳು ಬೆಳಗಾವಿಯಲ್ಲಿ ಕಂಡು ಬರುತ್ತವೆ. ಬ್ರಾಹ್ಮಣ ಸಮಾಜದ ಆಚರಣೆ ಪದ್ಧತಿಗಳನ್ನು ಪಾಲಿಸುವ ಇವರು ಮಾಂಸಾಹಾರಿಗಳಾಗಿದ್ದಾರೆ. ಇವರ ಮಾತೃಭಾಷೆ ಮರಾಠಿ; ಖಂಡೋಬಾ, ಭವಾನಿ ದೇವರುಗಳನ್ನು ಆರಾಧಿಸುತ್ತಾರೆ. ಇವರಲ್ಲಿ ವಿಧವೆಯರು ತಲೆಯ ಕೂದಲನ್ನು ತೆಗೆಸಿಕೊಳ್ಳುವರು. ಆದರೆ ಇತ್ತೀಚೆಗೆ ಈ ಪದ್ಧತಿ ಕಡಿಮೆಯಾಗಿದೆ. ಆದರೂ ಕೆಲವು ಸಂಪ್ರದಾಯಸ್ಥ ಮನೆತನಗಳಲ್ಲಿ ಇದು ಕಂಡು ಬರುತ್ತದೆ. ಇವರು ಶಿವಾಜಿಯ ಕಾಲಕ್ಕೆ ಮಹಾರಾಷ್ಟ್ರದಿಂದ ಬೆಳಗಾವಿಗೆ ವಲಸೆ ಬಂದು ನೆಲೆಸಿದ್ದಾರೆ. ಲೇಖಕ ಬ್ರಾಹ್ಮಣ ವರ್ಗದಲ್ಲಿ ಮೂರು ಉಪವರ್ಗಗಳು ಕಂಡುಬರುತ್ತವೆ: ಕಾಯಸ್ಥ ಪ್ರಭುಗಳು, ಮದ್ಲಿಯಾರರು ಮತ್ತು ನಾಯಡುಗಳು.

ಕಾಯಸ್ಥ ಪ್ರಭುಗಳು ಬೆಳಗಾವಿಯಲ್ಲಿ ವಿಶೇಷವಾಗಿ ಕಂಡುಬರುತ್ತಾರೆ. ಇವರು ಬೆಳಗಾವಿಗೆ ಶಿವಾಜಿಯ ಕಾಲಕ್ಕೆ ಬಂದು ನೆಲಸಿದರು. ಇವರು ಉಡುಗೆ-ತೊಡುಗೆಯಲ್ಲಿ ಬ್ರಾಹ್ಮಣರನ್ನು ಹೋಲುತ್ತಾರೆ. ಆದರೆ ಆಹಾರದಲ್ಲಿ ಮಾಂಸಾಹಾರಿಗಳಾಗಿದ್ದಾರೆ. ಮೀನು, ಕುರಿ, ಪಕ್ಷಿಗಳನ್ನು ತಿನ್ನುತ್ತಾರೆ. ಇವರು ಖಂಡೋಬಾ, ಭವಾನಿ ದೈವಗಳನ್ನು ಆರಾಧಿಸುತ್ತಾರೆ. ದೇಶಸ್ಥ ಬ್ರಾಹ್ಮಣರನ್ನು ಪುರೋಹಿತರನ್ನಾಗಿ ಧಾರ್ಮಿಕ ವಿಧಿ ವಿಧಾನಗಳಿಗೆ ಕರೆಸುತ್ತಾರೆ. ಬೆಳಗಾವಿಯಲ್ಲಿ ಸು. ೬೫ ರಿಂದ ೭೦ ಕುಟುಂಬಗಳು ನೆಲಸಿವೆ. ವ್ಯಾಪಾರ ವ್ಯವಸಾಯ ಹಾಗೂ ಸರಕಾರಿ ನೌಕರಿಗಳಲ್ಲಿ ಕೆಲಸ ಕಾರ್ಯಗಳನ್ನು ಕೈಕೊಂಡಿದ್ದಾರೆ. ಮಾತೃ ಭಾಷೆ ಮರಾಠಿಯಾಗಿದ್ದರೂ ಕನ್ನಡವನ್ನು ಮಾತನಾಡುತ್ತಾರೆ,

ಮದ್ಲಿಯಾರರ ನೂರಾರು ಕುಟುಂಬಗಳು ಬೆಳಗಾವಿಯಲ್ಲಿ ಕಂಡುಬರುತ್ತವೆ. ಇವರ ಮಾತೃಭಾಷೆ ತಮಿಳು. ವ್ಯಾಪಾರಕ್ಕಾಗಿ ಬೆಳಗಾವಿಗೆ ಬಂದು ನೆಲೆಸಿದ್ದಾರೆ. ಇವರ ಆಚರಣೆ, ಸಂಪ್ರದಾಯಗಳೆಲ್ಲವೂ ಬ್ರಾಹ್ಮಣರಂತೆಯೇ ಇವೆ.

ನಾಯಡುಗಳು ಮದ್ರಾಸಿನಿಂದ ಬಂದು ಬೆಳಗಾವಿಯಲ್ಲಿ ನೆಲೆಸಿದ್ದಾರೆ. ಸುಮಾರು ಇಪ್ಪತ್ತು ಕುಟುಂಬಗಳು ಬೆಳಗಾವಿಯಲ್ಲಿ ಕಂಡುಬರುತ್ತವೆ. ಇವರು ಮೂಲತಃ ಆಂಧ್ರಪ್ರದೇಶದವರಾಗಿದ್ದು, ಆಂಧ್ರದಿಂದ ತಮಿಳುನಾಡಿಗೆ ಬಂದು ಅಲ್ಲಿಂದ ಬೆಳಗಾವಿಗೆ ಬಂದು ನೆಲೆಸಿದ್ದಾರೆ. ಇವರ ಮಾತೃಭಾಷೆ ತೆಲುಗು. ಇವರಲ್ಲಿ ಹೆಚ್ಚಿನವರು ವ್ಯಾಪಾರಿಗಳಾಗಿದ್ದಾರೆ. ದಾಬಾ, ಗ್ಯಾರೇಜುಗಳನ್ನು ಇಟ್ಟುಕೊಂಡು ಕೆಲವರು ಉಪಜೀವನ ಸಾಗಿಸುತ್ತಾರೆ. ಮಧ್ಯಮ ವರ್ಗದ ಜೀವನವನ್ನು ಸಾಗಿಸುತ್ತಿರುವ ಇವರು ತಮ್ಮ ವರ್ಗದ ಜನರನ್ನು ಬಹಳಷ್ಟು ಆತ್ಮೀಯದಿಂದ ಸತ್ಕರಿಸುತ್ತಾರೆ. ಇವರು ತಮ್ಮ ಮಕ್ಕಳನ್ನು ಕನ್ನಡ ಶಾಲೆಗಳಿಗೆ ಕಳುಹಿಸುತ್ತಾರೆ.

'ಲೇಖಕರು' ಎನ್ನುವ ವರ್ಗದಲ್ಲಿಯ ಈ ಮೂರು ಉಪವರ್ಗಗಳ ಮಧ್ಯದಲ್ಲಿ ಯಾವುದೇ ವಿವಾಹ ಸಂಬಂಧ ಏರ್ಪಡುವುದಿಲ್ಲ. ನಿತ್ಯ ಜೀವನವನ್ನು ಮಿತವಯ್ಯದಿಂದ ಸಾಗಿಸುತ್ತಾ ಹಬ್ಬ ಮತ್ತು ಮದುವೆ ಸಮಾರಂಭಗಳನ್ನು ವೈಭವದಿಂದ ನಡೆಸುತ್ತಾರೆ. ಬೆಳಗಾವಿಯಲ್ಲಿ ಇವರು ಕನ್ನಡಿಗರ ಜೊತೆಗೆ ಹೆಚ್ಚು ಹೊಂದಾಣಿಕೆಯಿಂದ ನಡೆದುಕೊಳ್ಳುತ್ತಾರೆ. ಕನ್ನಡ ಸಂಸ್ಕೃತಿಯ ಛಾಯೆ ಇವರ ಹಲವು ಆಚರಣೆಗಳಲ್ಲಿ ಕಂಡುಬರುತ್ತದೆ.

ಸುಮಾರು ೧೮ನೆಯ ಶತಮಾನದಲ್ಲಿ ಗೋವ ಪ್ರದೇಶದ ನಾರ್ವೆಯೆಂಬ ಗ್ರಾಮದಿಂದ ಬೆಳಗಾವಿಗೆ ಬಂದು ನೆಲೆಸಿದ ನಾರ್ವೇಕರರಲ್ಲಿ ಬ್ರಾಹ್ಮಣರು ಕೆಲವರಿದ್ದಾರೆ. ಇವರ ಮಾತೃಭಾಷೆ ಕೊಂಕಣಿ. ಇವರು ಮುಖ್ಯವಾಗಿ ವ್ಯಾಪಾರಿಗಳಾಗಿದ್ದಾರೆ. ಕೆಲವರು ಭೂಮಿಯನ್ನು ಹೊಂದಿದ್ದಾರೆ.

ಕಚ್ಛ ಪ್ರಾಂತದಿಂದ ಸುಮಾರು ೨೦೦ ವರ್ಷಗಳ ಹಿಂದೆ ಬಂದ ಭಾಟಿಯರು ಬೆಳಗಾವಿ ಹಾಗೂ ಸುತ್ತಲಿನ ಹಳ್ಳಿಗಳಲ್ಲಿ ವಾಸಿಸುತ್ತಿದ್ದಾರೆ. ಇವರು ತಮ್ಮ ಮಾತೃಭಾಷೆ 'ಕಚ್ಛೀ'ಯನ್ನು ಮನೆಯಲ್ಲಿ ಹಾಗೂ ಕನ್ನಡ,

ಮರಾಠಿ ಭಾಷೆಯನ್ನು ವ್ಯವಹಾರಿಕವಾಗಿ ಮಾತನಾಡುತ್ತಾರೆ. ಇವರು ವಲ್ಲಭಾಚಾರ್ಯ ಮತದ ವೈಷ್ಣವರು; ಸುಮಾರು ೧೫ ರಿಂದ ೨೦ ಕುಟುಂಬಗಳು ಬೆಳಗಾವಿಯಲ್ಲಿ ನೆಲೆಸಿವೆ. ಇವರ ಕುಲದೈವ ಕೃಷ್ಣ. ಆದರೂ ಎಲ್ಲ ಹಿಂದೂ ದೇವರುಗಳಿಗೆ ನಡೆದುಕೊಳ್ಳುವರು. ಇವರು ಮದುವೆ ಮುಂತಾದ ಕಾರ್ಯಕ್ರಮಗಳಿಗೆ ತಮ್ಮ ಕುಲದ ಪೋಕರ್ಣರೆಂಬ ಬ್ರಾಹ್ಮಣರನ್ನು ಮುಂಬಯಿಯಿಂದ ಕರೆಸಿ ಧಾರ್ಮಿಕ ವಿಧಿ ವಿಧಾನಗಳನ್ನು ನೆರವೇರಿಸುವರು. ಇವರು ಮುಖ್ಯವಾಗಿ ವ್ಯಾಪಾರವನ್ನು ಮಾಡುತ್ತಾರೆ. ಇವರು ಮಾಂಸವನ್ನು ಮುಟ್ಟುವುದಿಲ್ಲ. ಧಾರ್ಮಿಕ ವಿಧಿ ವಿಧಾನಗಳಲ್ಲಿ ಸಡಿಲಿಕೆ ಇದೆ. ಸಂಪ್ರದಾಯಗಳಲ್ಲಿ ನಂಬಿಕೆ ಕಡಿಮೆ.

ಕಾಲವಾಡಿಗಳು ಸುಮಾರು ೨೦೦ ವರ್ಷಗಳ ಹಿಂದೆ ಖಾನಾಪುರದಿಂದ ಬೆಳಗಾವಿಗೆ ಬಂದು ನೆಲೆಸಿದ್ದಾರೆ. ಇವರು ಮಹಾದೇವನ ಭಕ್ತರಾಗಿದ್ದು, ಬ್ರಾಹ್ಮಣರಿಗೆ ನಡೆದುಕೊಳ್ಳುತ್ತಾರೆ. ಇವರ ವೇಷಭೂಷಣವು ಮಾರವಾಡಿಗಳಂತಿರುತ್ತದೆ. ಮದುವೆಯಾದ ಹೆಣ್ಣು ಮಕ್ಕಳು ಮಂಗಳಸೂತ್ರವನ್ನು ಕಟ್ಟಿಕೊಳ್ಳುವುದಿಲ್ಲ. ಆದರೆ ಕುಂಕುಮ ಹಚ್ಚಿಕೊಳ್ಳುತ್ತಾರೆ.

ಉತ್ತರ ಭಾರತದಿಂದ ಬಂದ ರಜಪೂತರ ಕೆಲವು ಮನೆತನಗಳು ಬೆಳಗಾವಿಯಲ್ಲಿ ಕಂಡು ಬರುತ್ತವೆ. ಮೂಲತಃ ಇವರು ಕ್ಷತ್ರಿಯರಾದರೂ ಬ್ರಾಹ್ಮಣರಲ್ಲಿರುವ ೧೬ ಸಂಸ್ಕಾರಗಳು ಇವರಲ್ಲಿಯೂ ಕಂಡುಬರುತ್ತವೆ. ಮುಖ್ಯವಾಗಿ ಇವರು ರಾಮ, ಕೃಷ್ಣ, ವೆಂಕಟರಮಣ ದೇವರುಗಳಿಗೆ ನಡೆದುಕೊಳ್ಳುತ್ತಾರೆ. ಇವರು ಮನೆಯಲ್ಲಿ ಹಿಂದಿ ಭಾಷೆ ಆಡುತ್ತಾರೆ. ಇವರು ತಮ್ಮ ಮಕ್ಕಳಿಗೆ ಕನ್ನಡ ಮಾಧ್ಯಮದಲ್ಲಿಯೇ ಶಿಕ್ಷಣವನ್ನು ಕೊಡಿಸುತ್ತಾರೆ. ಇವರ ಹೆಸರಿನ ಮುಂದೆ 'ಸಿಂಗ' ಎಂಬ ಉಪಪದವು ಸಾಮಾನ್ಯವಾಗಿ ಕಂಡುಬರುತ್ತದೆ.

ರಜಪೂತರ ಉಡುಪುಗಳು ವಿಶೇಷವಾಗಿರುತ್ತವೆ. ಮಹಿಳೆಯರು ಹೊರಗೆ ಬರಬೇಕಾದರೆ ಮುಖದ ಮೇಲೆ ಸೆರಗನ್ನು ಎಳೆದುಕೊಂಡು ಬರುತ್ತಾರೆ. ಇವರು ಕುಂಕುಮವನ್ನು ಹಚ್ಚಿಕೊಳ್ಳುತ್ತಾರೆ. ರಜಪೂತ ಮಹಿಳೆಯರ ಮುಖ್ಯ ಕುರುಹು ಎಂದರೆ ಮೂಗಿನ ನತ್ತು. ದೊಡ್ಡ ಗಾತ್ರದ ನತ್ತನ್ನು ಇವರು ಧರಿಸುತ್ತಾರೆ.

ರಜಪೂತರು ಹೆಚ್ಚಾಗಿ ಮಿಲಿಟರಿ, ಪೊಲೀಸ ಇಲಾಖೆಯಲ್ಲಿ ಸೇರಿಸಿಕೊಳ್ಳುತ್ತಾರೆ. ವ್ಯಾಪಾರ, ಒಕ್ಕಲುತನವನ್ನು ಹಲವರು ಮಾಡುತ್ತಾರೆ. 'ಕುಸ್ತಿ' ಇವರಿಗೆ ಪ್ರಿಯವಾದ ಹವ್ಯಾಸವಾಗಿದೆ.

ಮಾಂಸಾಹಾರಿಗಳಾದ ಇವರು ಧಾರ್ಮಿಕ ಕಾರ್ಯಗಳಿಗೆ ಬ್ರಾಹ್ಮಣರನ್ನು ಕರೆಯಿಸುತ್ತಾರೆ. ಹೆಚ್ಚಾಗಿ 'ಭವಾನಿ' ದೇವಿಗೆ ನಡೆದುಕೊಳ್ಳುತ್ತಾರೆ. ಇವರಲ್ಲಿ ಹಲವಾರು ಉಪಜಾತಿಗಳುಂಟು. ಸೂರ್ಯವಂಶಿ, ಚಂದ್ರವಂಶಿ ಎಂಬ ಎರಡು ಮುಖ್ಯ ಕುಲಗಳಿವೆ. ಇವರು ತಮ್ಮ ಧರ್ಮದ ಸಂಪ್ರದಾಯವನ್ನು ಹೆಚ್ಚಾಗಿ ಪಾಲಿಸಿಕೊಂಡು ಬರುತ್ತಾರೆ. ಬೆಳಗಾವಿಯಲ್ಲಿ ಸುಮಾರು ೨೫ ರಿಂದ ೩೦ ರಜಪೂತ ಕುಟುಂಬಗಳು ಕಂಡುಬರುತ್ತವೆ. ಬೆಳಗಾವಿಯ ಸಂಸ್ಕೃತಿಯ ವೈವಿಧ್ಯತೆಯಲ್ಲಿ ರಜಪೂತರೂ ಪ್ರಭಾವ ಬೀರಿದ್ದಾರೆ.

**ಲಿಂಗವಂತರು:** ಬೆಳಗಾವಿಯ ಮೂಲ ನಿವಾಸಿಗಳಲ್ಲಿ ಪ್ರಮುಖವಾದ ಧರ್ಮವೆಂದರೆ ವೀರಶೈವಧರ್ಮ. ಇವರನ್ನು ಲಿಂಗವಂತರು, ಲಿಂಗಾಯತರು ಎಂದೂ ಕರೆಯಲಾಗುತ್ತದೆ. ನಗರದ ಪ್ರತಿಶತ ೪೦ ರಷ್ಟಿರುವ ಇವರಲ್ಲಿ ಹಲವಾರು ಉಪಪಂಗಡಗಳಿವೆ. ಅದರಲ್ಲಿ ಮುಖ್ಯವಾಗಿ ಪಂಚಮಸಾಲಿಗಳು, ಬಣಜಿಗರು, ಜಂಗಮರು, ಶೀಲವಂತರು, ಗಾಣಿಗರು ಮುಂತಾದವರು ಹೆಚ್ಚಿನ ಪ್ರಮಾಣದಲ್ಲಿದ್ದಾರೆ.

ಬೆಳಗಾವಿಯ ವಿಕಾಸದಲ್ಲಿ ಪ್ರಮುಖ ಪಾತ್ರ ವಹಿಸಿದ ಲಿಂಗವಂತರು ಶಿಕ್ಷಣ, ವ್ಯಾಪಾರ ಕ್ಷೇತ್ರಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡು ಬರುತ್ತಾರೆ. ಒಕ್ಕಲುತನವನ್ನು ಕೈಗೊಂಡ ಹಲವಾರು ಕುಟುಂಬಗಳಿವೆ. ಹನ್ನೆರಡನೆಯ ಶತಮಾನದಲ್ಲಿ ಉಂಟಾದ ಕಲ್ಯಾಣ ಕ್ರಾಂತಿಯ ಸಂದರ್ಭದಲ್ಲಿ ಕಲ್ಯಾಣದಲ್ಲಿದ್ದ ಲಕ್ಷಾಂತರ ಲಿಂಗವಂತರು ದೇಶದ ಬೇರೆ ಬೇರೆ ಭಾಗಗಳಿಗೆ ಹೋಗಿ ನೆಲೆಸಿದರು. ಈ ಹಿನ್ನೆಲೆಯಲ್ಲಿ ಬೆಳಗಾವಿಯಲ್ಲಿಯೂ ಹಲವಾರು ಲಿಂಗವಂತರ ಕುಟುಂಬಗಳು ಬಂದು ನೆಲೆಸಿದವು. ಕಲ್ಯಾಣವನ್ನು ತೊರೆದ ಒಂದು ಶರಣರ ತಂಡವು ಚನ್ನಬಸವೇಶ್ವರ ನೇತೃತ್ವದಲ್ಲಿ ಉಳವಿಯ ಕಡೆಗೆ ಹೊರಟಾಗ ಅವರು ಬೆಳಗಾವಿಯ ಮಾರ್ಗವಾಗಿ ಸಾಗಿರಬಹುದೆಂದು ಹಲವಾರು ನಂಬಿಕೆಗಳು ಈ ಪ್ರದೇಶದಲ್ಲಿ ಕಂಡುಬರುತ್ತವೆ.[೨] ಇಂದು ಬೆಳಗಾವಿ ನಗರ ಪ್ರದೇಶದ ವ್ಯಾಪ್ತಿಯಲ್ಲಿ ಬರುವ ಬಸವನ ಕುಡಚಿಯಲ್ಲಿ ಚನ್ನಬಸವಣ್ಣನು ನೂರಾರು ಶರಣರೊಂದಿಗೆ ತಂಗಿದ್ದನು. ಅದರ ಕುರುಹಾಗಿ ಇಂದಿನ ಬಸವಣ್ಣನ ದೇವಾಲಯವು ಸ್ಥಾಪಿತವಾಗಿದೆ ಎಂದು ಸ್ಥಳೀಯರು ಅಭಿಪ್ರಾಯ ಪಡುತ್ತಾರೆ.

ವೀರಶೈವಧರ್ಮವು ಶೈವಧರ್ಮದ ಪ್ರಭಾವದಿಂದ ಬೆಳೆದು ಬಂದಿದ್ದರಿಂದ ಶೈವಧರ್ಮದ ಆಚರಣೆ ಪದ್ಧತಿಗಳು ಮುಂದುವರೆದು ಬಂದವು. ಬೆಳಗಾವಿಯಲ್ಲಿ ಶೈವಧರ್ಮವು ಪ್ರಾಚೀನ ಕಾಲದಿಂದಲೂ ಇದ್ದುದರ ಬಗೆಗೆ ಹಲವಾರು ಆಧಾರಗಳಿವೆ.

'ಬೇಡ' ಜನಾಂಗದವರು ಹೆಚ್ಚಾಗಿ ಕಂಡು ಬರುವ ಪ್ರದೇಶವೆಂದರೆ ಉತ್ತರ ಕರ್ನಾಟಕ. ಅದರಂತೆ ಬೆಳಗಾವಿಯಲ್ಲಿಯೂ ಬೇಡ ಜನಾಂಗವು ನೆಲೆಗೊಂಡಿದೆ. ಇವರಿಗೆ ನಾಯಕ, ತಳವಾರ, ಪರಿವಾರ, ರಾಮೇಶಿ ಎಂಬ ಪರ್ಯಾಯ ಹೆಸರುಗಳಿವೆ. ಬೆಳಗಾವಿಯ ಸುತ್ತಮುತ್ತಲಿನ ಗ್ರಾಮಗಳಲ್ಲಿಯೂ ಹೆಚ್ಚಾಗಿ ಕಂಡುಬರುತ್ತಾರೆ. ಹುಕ್ಕೇರಿ, ಗೋಕಾಕ, ತಾಲೂಕಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಇವರು ಹೆಚ್ಚಾಗಿ ಸವದತ್ತಿಯ ಎಲ್ಲಮ್ಮ, ಮಲ್ಲಯ್ಯ, ಮೈಲಾರಲಿಂಗ ಮುಂತಾದ ದೇವರುಗಳಿಗೆ ನಡೆದುಕೊಳ್ಳುತ್ತಾರೆ. ಇವರು ಬೆಳಗಾವಿಯಲ್ಲಿ ತಮ್ಮದೇ ಆದ ಪ್ರದೇಶವನ್ನು ಆಯ್ಕೆ ಮಾಡಿಕೊಂಡಿಲ್ಲ. ಎಲ್ಲಾ ಪ್ರದೇಶಗಳಲ್ಲಿಯೂ ಕಂಡುಬರುತ್ತಾರೆ. ಹೆಚ್ಚಾಗಿ ಯಮುನಾಪುರ, ಹಳೆ ಬೆಳಗಾವಿ, ಕಾಳಿ ಅಂಬ್ರಾಯಿ, ಶಹಪುರ, ಅನಿಗೋಳ ಪ್ರದೇಶಗಳಲ್ಲಿ ಕಂಡುಬರುತ್ತಾರೆ.

'ಪಾತರದವರು' ಎನ್ನುವ ಬುಡಕಟ್ಟು ಜನಾಂಗದ ಹಲವಾರು ಮನೆತನಗಳು ಬೆಳಗಾವಿಯಲ್ಲಿ ನೆಲೆಸಿವೆ. ವಿಶೇಷವಾಗಿ ಬೆಳಗಾವಿ ಸಮೀಪದ ಹಳ್ಳಿಗಳಲ್ಲಿ ಹೆಚ್ಚಾಗಿ ಕಂಡುಬರುವ ಇವರು ನಗರದ ಆಕರ್ಷಣೆಗೊಳಗಾಗಿ ಉದ್ಯೋಗ ಹುಡುಕಿಕೊಂಡು ಬಂದು ನೆಲೆಸಿದ್ದಾರೆ. ಗ್ಯಾಂಗವಾಡಿ, ರುಕ್ಮೀಣಿನಗರ, ಗಣೇಶಪುರ, ವಿಜಯನಗರ, ಯಮುನಾಪುರ, ಆನಿಗೋಳ ಮುಂತಾದ ಪ್ರದೇಶಗಳಲ್ಲಿ ಹಲವು ಕುಟುಂಬಗಳು ವಾಸಿಸುತ್ತಿವೆ. ಬೆಳಗಾವಿಯ ಪಕ್ಕದಲ್ಲಿರುವ ಅಳತಗಾದಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಇವರನ್ನು ಪಾತರವಾಟಿಯವರು, ಪಾತ್ರೋಟಿಯವರು, ಕೊರವರು, ಉಪ್ಪಾರರು, ಗಾಡಿ ವಡ್ಡರು, ಬಂಡಿವಡ್ಡರು ಎಂದು ಕರೆಯುತ್ತಾರೆ. ಮೊದಲು ಇವರು ಪಾತರದ ಕೆಲಸವನ್ನು ಮಾಡುತ್ತಿದ್ದರು. ಪಾತರದ ಕೆಲಸಕ್ಕೆ ಬಿಡುವ ಹೆಣ್ಣುಮಕ್ಕಳನ್ನು ಹನುಮಂತ ದೇವರ ಜೊತೆ ಮದುವೆ ಮಾಡಿಸುತ್ತಿದ್ದರು. ಈಗ ಈ ಪದ್ಧತಿಯು ಇಲ್ಲ. ಬೇರೆ ಬೇರೆ ಉದ್ಯೋಗಗಳನ್ನು ಕೈಕೊಂಡು ಸಾಮಾಜಿಕ ಜೀವನವನ್ನು ನಡೆಸುತ್ತಿದ್ದಾರೆ. ಇವರು ಹನುಮಂತ, ಯಲ್ಲಮ್ಮ, ದುರ್ಗವ್ವ, ಕರೆವ್ವ ಮುಂತಾದ ದೇವರುಗಳಿಗೆ ನಡೆದುಕೊಳ್ಳುತ್ತಾರೆ.

'ಕುರುಬ' ಜನಾಂಗವು ಬೆಳಗಾವಿಯ ಮೂಲ ನಿವಾಸಿಗಳಲ್ಲಿ ಒಂದಾಗಿದೆ. ಕುರಿ ಸಾಗಾಣಿಕೆ ಇವರ ಮೂಲ ಕಸುಬು. ನೂರರಿಂದ ಐದುನೂರರವರೆಗೆ ಕುರಿಗಳನ್ನು ಕಟ್ಟಿಕೊಂಡು ಊರೂರು ಅಲೆಯುವವರು ಹೆಚ್ಚಾಗಿ ಕಾಡು ಗುಡ್ಡಗಳಲ್ಲಿ ತಿರುಗಾಡಿ ಕುರಿಗಳನ್ನು ಸಾಕುತ್ತಿದ್ದರು. ಆದರೆ ಈಗ ಯಾವುದೇ ಕುರಿಗಳ ತಂಡ ಕಂಡುಬರುವುದಿಲ್ಲ. ಆರ್ಥಿಕವಾಗಿ, ಶೈಕ್ಷಣಿಕವಾಗಿ ಪ್ರಗತಿಯನ್ನು ಹೊಂದಿದ್ದಾರೆ. ಕೆಲವರು ಸ್ವಂತ ಉದ್ಯೋಗಗಳನ್ನು ಕೈಕೊಂಡು ಉತ್ತಮವಾದ ಜೀವನವನ್ನು ಸಾಗಿಸುತ್ತಿದ್ದಾರೆ. ಕೃಷಿ ಭೂಮಿಯನ್ನು ಕೆಲವರು ಹೊಂದಿದ್ದಾರೆ. ಕೆಲವರು ಉದ್ಯೋಗಪತಿಗಳೂ ಆಗಿದ್ದಾರೆ. ಧಾರ್ಮಿಕ ಆಚರಣೆಯಲ್ಲಿಯೂ ಇವರು ಆಧುನಿಕತೆಗೆ ಒಳಗಾಗಿದ್ದಾರೆ. ಮೂಲ ಧರ್ಮದ ಸಂಪ್ರದಾಯಗಳ ಪಾಲನೆ ಬಹಳಷ್ಟು ಕುಟುಂಬಗಳಲ್ಲಿ ಕಂಡುಬರುವುದಿಲ್ಲ. ಆದರೂ ಕೆಲವು ಕುಟುಂಬಗಳಲ್ಲಿ ವೀರಶೈವ ಮತದ ಆಚರಣೆಗಳು ಕಂಡುಬರುತ್ತವೆ. ಈ ಸಮೂದಾಯದಲ್ಲಿ ಹಾಲುಮತ, ಕಾಡುಕುರುಬ, ಜೇನುಕುರುಬ, ಅಂಡೆ ಕುರುಬ ಎಂಬ ಇತ್ಯಾದಿ ಒಳ ಪಂಗಡಗಳು ಕಂಡುಬರುತ್ತವೆ. ಜನನ, ಮದುವೆ, ಸಾವು ಮುಂತಾದ ಧಾರ್ಮಿಕ ನಡಾವಳಿಗಳಲ್ಲಿ ಕುಲದ 'ಒಡೆಯರು' ಪುರೋಹಿತತ್ವ ವಹಿಸುತ್ತಾರೆ. ಹಿಂದೂ ಧರ್ಮ ಪದ್ಧತಿಯಂತೆಯೇ ಎಲ್ಲಾ ಆಚರಣೆಗಳನ್ನು ಹೊಂದಿದ್ದಾರೆ. ಈ ಜನಾಂಗದಲ್ಲಿ ವಿಧವಾ ವಿವಾಹವೂ ಇದ್ದು ಇದಕ್ಕೆ 'ಸೀರೆ ಉಡಿಕೆ' ಅಥವಾ 'ಕೂಡಿಕೆ' ಪದ್ಧತಿ ಎಂದು ಕರೆಯುತ್ತಾರೆ. ಮಹಾಲಯ ಅಮವಾಸೆಯ ದಿನ 'ಹಿರಿಯರ' ಹಬ್ಬವೆಂದು ಮಾಡಿ ಪೂರ್ವಜರಿಗೆ ನೈವೇದ್ಯ ನೀಡಿ ಪೂಜೆ ಮಾಡುತ್ತಾರೆ. ರೇವಣಸಿದ್ದೇಶ್ವರ, ಬೀರೇಶ್ವರ, ಮಾಳಿಂಗರಾಯ, ಅಮೋಘಸಿದ್ಧ, ಮೈಲಾರಲಿಂಗ ಮುಂತಾದವುಗಳು ಇವರ ಅಧಿದೇವತೆಗಳಾಗಿವೆ. ಡೊಳ್ಳನ್ನು ಬಾರಿಸುವುದು, ಡೊಳ್ಳಿನ ಪದ ಹಾಡುವುದು ಮುಂತಾದ ಕಾರ್ಯಗಳನ್ನು ಮದುವೆ, ಸಮಾರಂಭ, ಉತ್ಸವ, ಜಾತ್ರೆಗಳಲ್ಲಿ ನಡೆಸುತ್ತಾರೆ. ಇವರು ಹಳೆ ಬೆಳಗಾವಿ, ವಡಗಾವಿ, ಆನಿಗೋಳ ಪ್ರದೇಶಗಳಲ್ಲಿ ಕಂಡುಬರುತ್ತಾರೆ.

'ಸಾರಸ್ವತ ಬ್ರಾಹ್ಮಣ'ರು ಮೂಲ ಕೊಂಕಣ ಪ್ರದೇಶದಿಂದ ಬೆಳಗಾವಿಗೆ ಬಂದು ನೆಲೆಸಿದವರಾಗಿದ್ದಾರೆ. ಗೋವೆಯಲ್ಲಿ ಪೋರ್ಚುಗೀಸರ ಧರ್ಮಾಂಧತೆಯಿಂದ ಹೆದರಿ ಕರ್ನಾಟಕದ ಬಹುಭಾಗದಲ್ಲಿ ಬಂದು ನೆಲೆಸಿದರು. ಇವರ ಮಾತೃಭಾಷೆ ಕೊಂಕಣಿ. ಇವರು ಪ್ರಧಾನವಾಗಿ ಬ್ರಾಹ್ಮಣರೇ ಆಗಿದ್ದರೂ ಮಾಂಸಾಹಾರಿಗಳಾಗಿದ್ದಾರೆ. ವೇದಾಧ್ಯಯನ ಅಧ್ಯಾಪನ, ಶಾಸ್ತ್ರ, ಗೃಹಸೂತ್ರ ಆಚರಣೆ ಮುಂತಾದ ಧಾರ್ಮಿಕ ಆಚರಣೆಗಳನ್ನು ಪಾಲಿಸುತ್ತಾರೆ. ಇವರು ಶಹಪೂರ, ಹಳೆ ಬೆಳಗಾವಿ, ವಡಗಾಂವಿ ಪ್ರದೇಶದಲ್ಲಿ ಹೆಚ್ಚಾಗಿದ್ದಾರೆ. ಕನ್ನಡ, ಮರಾಠಿ ಎರಡೂ ಭಾಷೆಯನ್ನು ವ್ಯವಹಾರಿಕವಾಗಿ ಬಳಸುತ್ತಾರೆ. 'ಸಾರಸ್ವತ ಬ್ರಾಹ್ಮಣ' ರ ಹಲವಾರು ಸಂಘಟನೆಗಳು ಬೆಳಗಾವಿಯಲ್ಲಿ ಕಂಡುಬರುತ್ತವೆ. 'ಗೋಳಕರ' ಎಂಬ ಮನೆ ಹೆಸರಿನ ಹಲವು ಮನೆತನಗಳಿವೆ. ಇವರು ಬ್ರಾಹ್ಮಣರ ಉಪವರ್ಗದವರು ಇವರಲ್ಲಿ ಬ್ರಾಹ್ಮಣರಂತೆ ನಡುವಳಿಕೆ ಇದ್ದರೂ ಉಳಿದ ಬ್ರಾಹ್ಮಣರ ಜೊತೆಗೆ ವೈವಾಹಿಕ ಸಂಬಂಧಗಳಿಲ್ಲ. ಮರಾಠಿ, ಕನ್ನಡ ಎರಡೂ ಭಾಷೆಯಲ್ಲಿ ಪರಿಣತಿಯನ್ನು ಹೊಂದಿರುತ್ತಾರೆ. ವಿಶೇಷವಾಗಿ ಇವರು ಜ್ಯೋತಿಷ್ಯ ಹೇಳುವುದು, ಕೃಷಿ ಮುಂತಾದ ಕೆಲಸಗಳನ್ನು ಮಾಡುತ್ತಾರೆ. ಇತ್ತಿತ್ತಲಾಗಿ ವ್ಯಾಪಾರದಲ್ಲಿಯೂ ತೊಡಗಿದ್ದಾರೆ.

ತೈಲಂಗರು ವಿಶೇಷವಾಗಿ ಬೆಳಗಾವಿಯಲ್ಲಿ ಕಂಡುಬರುತ್ತಾರೆ. ಮದ್ರಾಸಿನಿಂದ ದೇಶಾವರಿಯಾಗಿ ಅಲೆಯುತ್ತ ಬೆಳಗಾವಿಗೆ ಬಂದು ನೆಲೆಸಿದ್ದಾರೆ. ಇವರಲ್ಲಿ ಪ್ರಾದೇಶಿಕ ಪ್ರಬೇಧಗಳೂ ಕಂಡುಬರುತ್ತವೆ. ಶಂಕರಾಚಾರ್ಯರರು ಇವರ ಧರ್ಮಗುರುಗಳು ಗಂಡಸರು ಪಂಜೆ, ಗಿಡ್ಡನೆಯ ಅಂಗಿ, ತಲೆಯ ಮೇಲೆ ರುಮಾಲು ಧರಿಸುವರು. ಹೆಂಗಸರು ಸೀರೆ ಕುಪ್ಪಸ ತೊಡುತ್ತಾರೆ. ಇವರ ಮುಖ್ಯ ಕಸುಬು ವ್ಯಾಪಾರ. ಗ್ಯಾರೇಜ್, ದಾಬಾ, ಸೇವ್-ಚೋಡಾ, ಬಟ್ಟೆ ಮುಂತಾದ ಉದ್ಯೋಗಗಳನ್ನು ಮಾಡುತ್ತಾರೆ. ಹಳೆ ಬೆಳಗಾವಿ, ಗಾಂಧಿನಗರ ಮುಂತಾದ ಪ್ರದೇಶದಲ್ಲಿ ನೆಲೆಸಿದ್ದಾರೆ. ಇವರ ಸಂಸ್ಕಾರಗಳು ಬ್ರಾಹ್ಮಣರಂತಿವೆ.

'ಬಾಂದೇಕರ' ಎನ್ನುವ ಕುಟುಂಬಗಳೂ ಹಲವಾರು. ಇವರು ಗೋವಾದಲ್ಲಿ ಪೋರ್ಚುಗೀಸರು ಮತಾಂತರ ಕಾರ್ಯವನ್ನು ಚುರುಕುಗೊಳಿಸಿದಾಗ ಅಲ್ಲಿಂದ ಬೆಳಗಾವಿಗೆ ಬಂದು ನೆಲೆಸಿದರು. ಇವರನ್ನು ಶೂದ್ರರಲ್ಲಿ ಪರಿಗಣಿಸುತ್ತಾರೆ. ಇವರ ಮುಖ್ಯ ಉದ್ಯೋಗ ಮಂಡಕ್ಕಿಯನ್ನು ಹುರಿಯುವುದು. ಶಹಪೂರ, ಪೋರ್ಟ ರೋಡ, ಗಾಂಧಿನಗರ, ಆನಿಗೋಳ, ವಡಗಾವಿ ಮುಂತಾದ ಪ್ರದೇಶಗಳಲ್ಲಿ ಕೆಲವು ಮನೆತನಗಳು ಕಂಡುಬರುತ್ತವೆ.

'ಹಣಬರು' ಎಂಬ ವಿಶಿಷ್ಟ ಜಾತಿಗೆ ಸೇರಿದ ಜನಾಂಗವು ಬೆಳಗಾವಿಯಲ್ಲಿ ಕಂಡುಬರುತ್ತದೆ. ಉತ್ತರ ಕರ್ನಾಟಕದಲ್ಲಿ ವಿಶೇಷವಾಗಿ ಕಂಡುಬರುವ ಇವರು ಬೆಳಗಾವಿ ಹಾಗೂ ಸುತ್ತಮುತ್ತಲಿನ ಹಳ್ಳಿಗಳಲ್ಲಿ ನೆಲೆಸಿದ್ದಾರೆ. ಮೂಲತಃ ಇವರು ಕನ್ನಡಿಗರಾಗಿದ್ದರೂ ಬೆಳಗಾವಿಯಲ್ಲಿ ಮಾತ್ರ ಮರಾಠಿಗರಾಗಿದ್ದಾರೆ. ಇವರಲ್ಲಿ ಹಲವಾರು ಒಳಪಂಗಡಗಳಿವೆ. ಬಿಳಿ ಸೀರೆಯವರು, ಬಣ್ಣದ ಸೀರೆಯವರು, ಹಳೆ ಹಣಬರು, ಹೊಸ ಹಣಬರು ಮುಂತಾದ ವರ್ಗಗಳಿವೆ. ಹನುಮಂತ, ಎಲ್ಲಮ್ಮ, ಮಂಗಳಮ್ಮ ಮುಂತಾದ ದೇವರನ್ನು ಪೂಜಿಸುತ್ತಾರೆ. ಇವರ ಆಚಾರ

ಸಂಪ್ರದಾಯಗಳು ಭಿನ್ನವಾಗಿವೆ. ಲಗ್ನ ಮುಂತಾದ ಕಾರ್ಯಗಳಿಗೆ ಬ್ರಾಹ್ಮಣರನ್ನು ಕರೆಯುತ್ತಾರೆ. ಇವರು ಮುಖ್ಯವಾಗಿ ಆನಿಗೋಳ, ರುಕ್ಮಿಣಿ ನಗರ, ಕಾಳಿ ಅಂಬ್ರಾಯಿ, ಗಾಂಧಿನಗರ, ಪ್ರದೇಶಗಳಲ್ಲಿ ಹೆಚ್ಚಾಗಿ ನೆಲೆಸಿದ್ದಾರೆ.

'ಸಿದ್ಧಿ'ಗಳೆನ್ನುವ ಬುಡಕಟ್ಟು ಜನಾಂಗದವರು ಬೆಳಗಾವಿ ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಕಂಡುಬರುತ್ತಾರೆ. ಆಫ್ರಿಕಾದ ನಿಗ್ರೋಗಳನ್ನು ಅತಿ ಸಮೀಪದಿಂದ ಹೋಲುವ ಇವರು ಗಟ್ಟುಮುಟ್ಟಾದ ದೇಹವನ್ನು ಹೊಂದಿದ್ದಾರೆ. ಇವರನ್ನು ಈ ಪ್ರದೇಶದಲ್ಲಿ ಸಿದ್ಧಿಗಳೆಂದು ಕರೆಯುತ್ತಾರೆ. ಇವರು ಈ ಪ್ರದೇಶಕ್ಕೆ ಬಂದಿರುವ ಹಿನ್ನೆಲೆ ರೋಚಕವಾಗಿದೆ. ಆಫ್ರಿಕಾದಲ್ಲಿನ ಜನರನ್ನು ಸೆರೆ ಹಿಡಿದು ಗುಲಾಮರನ್ನಾಗಿ ಮಾಡಿಕೊಂಡು ಅವರನ್ನು ವಿವಿಧ ಕಾರ್ಯಗಳಲ್ಲಿ ಬಳಸುವ ಕಾರ್ಯವನ್ನು ಹಲವಾರು ದೇಶಗಳು ಕೈಕೊಂಡವು. ಈ ಕಾರ್ಯವು ಕೈಗಾರಿಕಾ ಕ್ರಾಂತಿ ಮತ್ತು ವಸಾಹತುಶಾಹಿ ಬೆಳವಣಿಗೆಯ ಒಂದು ಪ್ರಮುಖ ಅಂಗವಾಗಿ ಮಾರ್ಪಟ್ಟಿತು. ಅಮೇರಿಕಾ, ಕೆನಡಾ, ದಕ್ಷಿಣ ಅಮೇರಿಕಾ ಯುರೋಪಿಯನ್ ಮುಂತಾದ ವಸಾಹತುಶಾಹಿ ರಾಷ್ಟ್ರಗಳು ತಮ್ಮ ತಮ್ಮ ವಸಾಹತುಗಳಲ್ಲಿನ ವ್ಯವಸಾಯ ಮುಂತಾದ ಕಷ್ಟಕರ ಕೆಲಸಗಳಿಗೆ ಇವರನ್ನು ಬಳಸತೊಡಗಿದರು. ಮುಂದೆ ಅರಬ್ಬರು ಐರೋಪ್ಯ ರಾಷ್ಟ್ರಗಳಿಂದ ಈ ಬಗೆಯ ಗುಲಾಮರನ್ನು ಕೊಂಡುಕೊಂಡು ತಮ್ಮ ವ್ಯಾಪಾರಿ ಹಡಗುಗಳಲ್ಲಿನ ಕಷ್ಟಕರ ಕೆಲಸಗಳಿಗೆ ಹಚ್ಚಿದರು. ಅರಬ್ಬರು ಭಾರತದೊಂದಿಗೆ ವ್ಯಾಪಾರ ಸಂಬಂಧವನ್ನು ಹೊಂದಿದ್ದರಿಂದ ಭಾರತದ ಬೇರೆ ಬೇರೆ ಪ್ರದೇಶಗಳಲ್ಲಿ ಈ ಜನಾಂಗ ಕಂಡುಬರುತ್ತದೆ. ಬೆಳಗಾವಿಗೆ ಇವರು ಬಂದದ್ದು ಕಾರವಾರ, ಗೋವಾ, ಹೊನ್ನಾಪುರ ಬಂದರುಗಳ ಮೂಲಕ. ಈ ಸಿದ್ಧಿಗಳು ಕಡಲತಡಿಯ ಬಂದರುಗಳ ಆಸುಪಾಸಿನಲ್ಲಿ ಕಂಡುಬರುವುದಿಲ್ಲ. ಮೊದಲು ಇವರು ಕಾಡುಗಳಲ್ಲಿಯೇ ವಾಸವಾಗಿ ಮುಂದೆ ನಗರಗಳತ್ತ ಬಂದು ನೆಲೆಸಿರುವರು. ಬೆಳಗಾವಿಯಲ್ಲಿ ನೆಲೆಸಿರುವ ಈ ಜನಾಂಗದವರು ಹೆಚ್ಚಾಗಿ ಮರಾಠಿ ಭಾಷೆ, ಸಂಸ್ಕೃತಿಯನ್ನು ಹೊಂದಿದ್ದಾರೆ. ತಮ್ಮ ಮೂಲ ಭಾಷೆ, ಸಂಸ್ಕೃತಿಯನ್ನು ಬಿಟ್ಟು ಸ್ಥಾನಿಕ ಪ್ರಭಾವಕ್ಕೆ ಒಳಗಾಗಿರುವುದು ಕಂಡುಬರುತ್ತದೆ. ಹೀಗಾಗಿ ಇವರು ಹಿಂದೂ, ಮುಸ್ಲಿಂ, ಕ್ರೈಸ್ತ ಎಲ್ಲ ಧರ್ಮಗಳ ಪ್ರಭಾವಕ್ಕೆ ಒಳಗಾದರು. ವಿಜಾಪುರದ ಆದಿಲ್ ಶಾಹಿಗಳು ಈ ಸಿದ್ಧ ಜನಾಂಗದವರನ್ನು ಸೇರಿಸಿ ಒಂದು ಸೈನ್ಯವನ್ನು ಕಟ್ಟಿ ಬೆಳಗಾವಿಯ ಪಶ್ಚಿಮ ಘಟ್ಟದಲ್ಲಿಟ್ಟರೆಂದು ತಿಳಿದುಬರುತ್ತದೆ.[೧೩] ಇವರು ಸ್ಥಳೀಯ ಕಾಡು ಜನರೊಂದಿಗೆ ವೈವಾಹಿಕ ಸಂಬಂಧವನ್ನು ಹೊಂದಿ ತಮ್ಮದೇ ಆದ ಒಂದು ಸಮಾಜವನ್ನು ನಿರ್ಮಿಸಿಕೊಂಡಿದ್ದಾರೆ. ಬೆಳಗಾವಿಯ ಸಿದ್ಧಿಗಳು ಮರಾಠಿ, ಕನ್ನಡ ಮತ್ತು ಕೊಂಕಣಿ ಭಾಷೆಗಳ ಜ್ಞಾನವನ್ನು ಹೊಂದಿದ್ದಾರೆ. ಇವರ ಮುಖ್ಯ ಉದ್ಯೋಗ ಕೃಷಿ, ಕೂಲಿ, ಜೇನು ಸಂಗ್ರಹಣೆ, ಬಿದಿರಿನ ಚಾಪೆ, ಬುಟ್ಟಿ ತಯಾರಿಕೆ, ಮರದ ಕೆಲಸ ಇತ್ಯಾದಿ ಕೆಲಸ ಕಾರ್ಯಗಳನ್ನು ಮಾಡಿ ಜೀವಿಸುತ್ತಾರೆ. ಇವರು ಬೆಳಗಾವಿಯ ಸುತ್ತಮುತ್ತಲಿರುವ ಗುಡ್ಡ, ಕಣಿವೆ, ಕಾಡಿನಲ್ಲಿ ಗುಡಿಸಲುಗಳನ್ನು ಕಟ್ಟಿಕೊಂಡು ವಾಸಿಸುತ್ತಾರೆ.

'ಭಂಡಾರಿಗಳು' ಗೋವಾದಿಂದ ಬೆಳಗಾವಿಗೆ ಬಂದು ನೆಲೆಸಿದ್ದಾರೆ.[೧೪] ಕೆಲವು ಕುಟುಂಬಗಳು ಮಾತ್ರ ವಡಗಾವಿಯಲ್ಲಿ ಕಂಡುಬರುತ್ತವೆ. ಗಂಡಸರು ಲಂಗೋಟಿ-ಧೋತ್ರ ಉಟ್ಟರೆ, ಹೆಂಗಸರು ಕಚ್ಚೆ ಹಾಕಿ ಸೀರೆ ಉಡುತ್ತಾರೆ. ಕೊಂಕಣಿ ಮಾತನಾಡುವರು. ರವಳನಾಥನನ್ನು ಮನೆದೇವರನ್ನಾಗಿ ಮಾಡಿಕೊಂಡಿದ್ದಾರೆ. ಲಗ್ನ ಮುಂತಾದ ಧಾರ್ಮಿಕ ಕಾರ್ಯಗಳಿಗೆ ಬ್ರಾಹ್ಮಣರನ್ನು ಕರೆಸುತ್ತಾರೆ. ಕೃಷಿ, ತೋಟ, ಕೂಲಿ ಕೆಲಸಗಳನ್ನು, ಸಣ್ಣಪುಟ್ಟ ಉದ್ಯೋಗಗಳನ್ನು ಮಾಡುತ್ತಾರೆ.

'ದೇಶಾವಳರು' ಬೆಂಗಳೂರು ಕಡೆಯಿಂದ ಬಂದು ಬೆಳಗಾವಿಯಲ್ಲಿ ನೆಲೆಸಿದ್ದಾರೆ.[೧೫] ಇವರು ಸಣ್ಣಪುಟ್ಟ ಉದ್ಯೋಗಗಳನ್ನು ಕೈಕೊಂಡು ಉಪಜೀವನ ನಡೆಸುತ್ತಾರೆ. ಬಿಸ್ಕೀಟು, ಸೇವ್, ಚಕ್ಕಲಿ ಮುಂತಾದ ತಿಂಡಿ ತಿನಸುಗಳನ್ನು ಮನೆಯಲ್ಲಿಯೇ ತಯಾರಿಸಿ ಸಣ್ಣ ಅಂಗಡಿಗಳಿಗೆ ಮಾರುವವರು. ಇವರು ಮಾಡುವ ಲೋಪೆಯೆಂಬ ಕಣದ ಉಂಡೆಯು ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ಹೆಂಗಸರು ಕಚ್ಚೆ ಹಾಕಿ ಸೀರೆ ಉಡುವುದು, ತಲೆಯ ಕೂದಲನ್ನು ತುರುಬ ಕಟ್ಟಿ ಬಲಗಡೆ ಇಳಿ ಬಿಡುವುದು, ಮುಂತಾದ ವಿಶಿಷ್ಟವಾದ ಅಲಂಕಾರಗಳನ್ನು ಮಾಡಿಕೊಳ್ಳುತ್ತಾರೆ. ಇವರ ಕುಲದೇವತೆ ಇರುಪತಿ ವೆಂಕಟರಮಣ. ಲಗ್ನ ಮುಂತಾದ ಕಾರ್ಯಗಳಿಗೆ ಬ್ರಾಹ್ಮಣರನ್ನು ಕರೆಸುತ್ತಾರೆ. ತೆಲುಗು ಭಾಷೆಯನ್ನು ಮಾತನಾಡುತ್ತಾರೆ.

ಪಾರ್ಸಿ ಜನಾಂಗದವರು ಬೆಳಗಾವಿಯ ಬೊಗಾರವೇಸ ಹತ್ತಿರ ಜೆನಸ್‌ಸ್ಮಿತ್ ಹಾಯಸ್ಕೂಲಿನ ಎದುರಿನ ಪ್ರದೇಶದಲ್ಲಿ ನೆಲೆಸಿದ್ದಾರೆ. ಇಲ್ಲಿಯೇ ಅಗ್ನಿ ದೇವಾಲಯವನ್ನೂ ಕಟ್ಟಿಸಿದ್ದಾರೆ. ಮನೆಯಲ್ಲಿ ಗುಜರಾತಿ ಭಾಷೆಯನ್ನು ಮಾತನಾಡುತ್ತಾರೆ. ಅಗ್ನಿಯನ್ನು ಪೂಜಿಸುತ್ತಾರೆ. ಇವರಲ್ಲಿ ಸತ್ತವರನ್ನು ಅಂತ್ಯಸಂಸಕಾರ ಮಾಡುವ ಪದ್ಧತಿಯು ವಿಶಿಷ್ಟವಾಗಿದೆ. ಒಂದು ಬಾವಿಯ ಆಕಾರದ ತೆಗ್ಗನ್ನು ತೆಗೆದು ಅದರೊಳಗೆ ಕಟ್ಟೆಯಾಕಾರದಲ್ಲಿ ಹೆಣ ಇಡಲು ಸ್ಥಳವನ್ನು ಮಾಡುತ್ತಾರೆ. ಹೆಣವನ್ನು ಅದರಲ್ಲಿ ಇಟ್ಟ ಬಳೀಕ ಪಕ್ಷಿಗಳು ಅವುಗಳನ್ನು ತಿನ್ನುತ್ತಾ ಹೋದ ಹಾಗೆ ಅಸ್ಥಿಗಳು ಉಳಿಯುತ್ತವೆ. ಇತ್ತಿತ್ತಲಾಗಿ ಈ ಪದ್ಧತಿಯನ್ನು ಅನುಸರಿಸುವುದು ಕಡಿಮೆಯಾಗಿ ಹೆಣಗಳನ್ನು ಹುಗಿಯುತ್ತಾರೆ. ಇವರು ಮದುವೆಗಳನ್ನು ಅಗ್ಯಾರಿ (ಅಗ್ನಿ ಗುಡಿ) ಯಲ್ಲಿಯೇ ನೆರವೆರಿಸುತ್ತಾರೆ. 'ಯಹೂದಿ'ಯರ ನಾಲ್ಕಾರು ಕುಟುಂಬಗಳೂ ಕ್ಯಾಂಪ ಪ್ರದೇಶದಲ್ಲಿವೆ. ಇವರು ಬ್ರಿಟಿಷರ ಕಾಲದಲ್ಲಿ ವ್ಯಾಪಾರಕ್ಕಾಗಿ ಇಲ್ಲಿಗೆ ಬಂದಿದ್ದಾರೆ. ಇವರು ಮುಸ್ಲಿಮ್‌ರಂತೆ ನಿರಾಕಾರನಾದ ದೇವರನ್ನು ಆರಾಧಿಸುತ್ತಾರೆ.

ಈ ಎಲ್ಲ ಜಾತಿ, ಧರ್ಮ, ಮತ, ಪಂಗಡದವರಲ್ಲದೆ ಇನ್ನೂ ಹಲವಾರು ಜನರು ಬೆಳಗಾವಿಯಲ್ಲಿ ವಾಸಿಸುತ್ತಿದ್ದಾರೆ. ಬೇರೆ ಬೇರೆ ಕಾರಣಗಳಿಂದ ಬೇರೆ ಬೇರೆ ಪ್ರದೇಶಗಳಿಂದ ಆಗಮಿಸಿ ಬೆಳಗಾವಿ ನಿವಾಸಿಗಳಾಗಿದ್ದಾರೆ. ಇಲ್ಲಿಯೇ ತಮ್ಮ ಸಂಸ್ಕೃತಿ, ಸಂಪ್ರದಾಯ, ಆಚರಣೆಗಳನ್ನು ಮುಂದುವರೆಸಿಕೊಂಡು ಉಳಿದ ಸಮಾಜದವರೊಡನೆ

ಸಹಕಾರದಿಂದ ಬದುಕುತ್ತಿದ್ದಾರೆ. ಬೆಳಗಾವಿಯ ಧಾರ್ಮಿಕ ವ್ಯವಸ್ಥೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಒಂದೊಂದು ಗಲ್ಲಿಯಲ್ಲಿ, ಪ್ರದೇಶದಲ್ಲಿ ಹತ್ತಾರು ತರಹದ ಜಾತಿ, ಮತದವರು ಇದ್ದದ್ದು ತಿಳಿದು ಬರುತ್ತದೆ. ಹೀಗಾಗಿಯೇ ಇಲ್ಲಿ ವಿಶಿಷ್ಟವಾದ ಸಂಸ್ಕೃತಿ ಬೆಳೆಯಲು ಕಾರಣವಾಗಿದೆ. ಇಷ್ಟಿದ್ದರೂ ಈ ಸಂಕೀರ್ಣತೆ ಹೊರನೋಟಕ್ಕೆ ಕಂಡು ಬರುವುದಿಲ್ಲ. ಇಲ್ಲಿ ಎಂದೂ ಧಾರ್ಮಿಕ ಕಲಹಗಳು ನಡೆದಿಲ್ಲ. ಪ್ರಬಲ ಸಂಸ್ಕೃತಿಯಲ್ಲಿ ಕೊಚ್ಚಿ ಹೋಗಿಲ್ಲ. ಆಚರಣೆ, ಸಂಪ್ರದಾಯಗಳಲ್ಲಿ ಸಾಂಸ್ಕೃತಿಕ ವಿನಿಮಯ ನಡೆದಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ.

**ಇಸ್ಲಾಂ ಧರ್ಮ** : ಇಸ್ಲಾಂ ಧರ್ಮ ಬೆಳಗಾವಿಗೆ ಬಂದದ್ದು ಅರಬ್, ಸಿದ್ದಿ, ಪರ್ಷಿಯನ್ ವ್ಯಾಪಾರಿಗಳಿಂದ. ಬೆಳಗಾವಿ ಹಾಗೂ ಜಿಲ್ಲೆಯ ಹಲವಾರು ಸ್ಥಳಗಳಲ್ಲಿ ಇವರು ವ್ಯಾಪಾರಕ್ಕಾಗಿ ಬಂದು ಇಲ್ಲಿಯೇ ನೆಲೆಸಿದರು. ಇದರಿಂದ ಇಸ್ಲಾಂ ಧರ್ಮ ಇಲ್ಲಿ ನೆಲೆಗೊಂಡಿತು. ವ್ಯಾಪಾರದ ಜೊತೆಗೆ ಧರ್ಮವನ್ನು ಬೆಳೆಸತೊಡಗಿದರು. ಮಸೀದಿ, ದರ್ಗಾಗಳನ್ನು ಕಟ್ಟಿಸಿ ಧಾರ್ಮಿಕವಾಗಿ ತಮ್ಮದೇ ಆದ ಆಚರಣೆ, ಸಂಪ್ರದಾಯಗಳನ್ನು ಬೆಳೆಸಿಕೊಂಡರು. ೧೪ನೆಯ ಶತಮಾನದ ಮಧ್ಯಭಾಗದ ವೇಳೆಗೆ ಮುಸ್ಲಿಂ ರಾಜ್ಯ ಮನೆತನಗಳಾದ ಬಹಮನಿ ಸುಲ್ತಾನರು, ಬಿಜಾಪುರದ ಆದಿಲ್ ಷಾಹಿಗಳು, ಮೊಗಲರು, ಸವಣೂರಿನ ನವಾಬರು ಬೆಳಗಾವಿಯಲ್ಲಿ ಆಳ್ವಿಕೆಯನ್ನು ನಡೆಸಿ ಮುಸ್ಲಿಂ ಧರ್ಮ ಪ್ರಸಾರ ಹೊಂದಲು ಕಾರಣರಾದರು. ಬೆಳಗಾವಿ, ರಾಯಬಾಗ, ಹುಕ್ಕೇರಿ ಮುಂತಾವ ಪ್ರದೇಶಗಳಲ್ಲಿ ತಮ್ಮ ಆಡಳಿತ ಕೇಂದ್ರಗಳನ್ನು ಸ್ಥಾಪಿಸಿ ಆಳ್ವಿಕೆಯನ್ನು ನಡೆಸಿದರು. ಇದರಿಂದ ಬೆಳಗಾವಿ ಜಿಲ್ಲೆಯಾದ್ಯಂತ ಮುಸ್ಲಿಂರು ನೆಲೆ ನಿಲ್ಲುವಂತಾಯಿತು.

ಬೆಳಗಾವಿ ಹಾಗೂ ಬೆಳಗಾವಿ ಜಿಲ್ಲೆಯ ಮುಸ್ಲಿಂರು ಸುನ್ನಿ ಮತ್ತು ಷಿಯಾ ಪಂಥದ ಇಸ್ಮಾಯಿಲ್ ಶಾಖೆಗೆ ಸೇರಿದವರು.[೨] ಮೊಗಲರು ಹಾಗೂ ಬಿಜಾಪುರದ ಸುಲ್ತಾನರು ಈ ಎರಡೂ ಪಂಥಗಳಿಗೆ ಮಹತ್ವವನ್ನು ನೀಡಿದರು. ಪರ್ಷಿಯಾದೇಶದ ಅನೇಕ ಮುಖಂಡರು ದಾರ್ಶನಿಕರೂ ತತ್ವಜ್ಞಾನಿಗಳು ಬೆಳಗಾವಿಗೆ ಬಂದು ಷಿಯಾ ಪಂಥವನ್ನು ಬೆಳೆಸಲು ಜನರಿಗೆ ಮಾರ್ಗದರ್ಶನ ನೀಡಿದರು. ಮಸೀದಿಗಳನ್ನು, ಗೋರಿಗಳನ್ನು, ದರ್ಗಾಗಳನ್ನು, ಈದ್ಗಾಗಳನ್ನು ನಿರ್ಮಿಸಿ ಜನರಲ್ಲಿ ಧಾರ್ಮಿಕ ಮನೋಭಾವನೆಗಳನ್ನು ವರ್ಧಿಸಿದರು. ಮುಸಲ್ಮಾನರಲ್ಲಿ ಹಲವಾರು ಒಳಜಾತಿಗಳು ಬರುತ್ತವೆ. ಮುಖ್ಯವಾಗಿ ಸೈಯ್ಯದ, ಶೇಖ, ಮೊಗಲ, ಪಠಾಣ, ಸೌದಾಗಾರ ಅತ್ತಾರ, ಮಣಿಯಾರ, ಕಾಗದಿ, ಕಲಾಯಿ, ನಾಲಬಂದ, ಬೆಡಾರ, ಹಕೀಮ, ಮಹಾವತ, ಸಾರವಾನ ಮುಂತಾದ ಒಳಜಾತಿಗಳ ಜನರು ಬೆಳಗಾವಿಯಲ್ಲಿ ನೆಲೆಸಿದ್ದಾರೆ. ಎಲ್ಲಾ ಪಂಗಡದವರ ಭಾಷೆ, ಉಡುಗೆ ತೊಡುಗೆ, ಅಹಾರ ಆಚರಣೆಗಳು ಒಂದೇ ಆಗಿರುತ್ತವೆ.

ಸಂಪ್ರದಾಯ ಆಚರಣೆಗಳು : ಧರ್ಮದ ಆಚರಣೆಯಲ್ಲಿ ಮುಸ್ಲಿಂರು ಕಟ್ಟುನಿಟ್ಟಿನ ಆಚರಣೆಗಳನ್ನು ಪಾಲಿಸುತ್ತಾರೆ. ಇವರಲ್ಲಿ ಕೆಲವು ಸಂಪ್ರದಾಯಸ್ಥ ಮನೆತನಗಳು ಧರ್ಮದ (ಕುರಾನಿನ) ನಿಯಮದ ಪ್ರಕಾರವೇ ಬದುಕುತ್ತಾರೆ.

ಸತ್ಯ, ನಿಷ್ಠ ಸಹಕಾರ, ಸಹಬಾಳ್ವೆ, ಪ್ರೀತಿ, ವಿಶ್ವಾಸ ಮುಂತಾದ ಮೌಲ್ಯಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡ ಮುಸ್ಲಿಂ ಸಂಪ್ರದಾಯಸ್ಥ ಮನೆತನಗಳು ಸಮಾಜದಲ್ಲಿ ಸಹಬಾಳ್ವೆಯಿಂದ ಬದುಕುತ್ತಾರೆ.

ಮುಸ್ಲಿಂ ನಡಾವಳಿಯಲ್ಲಿ ಕೆಲವು ಸಂಪ್ರದಾಯಗಳು ಕಂಡು ಬರುತ್ತವೆ. ಕುರಾನ ಓದುವುದು, ನಮಾಜ ಮಾಡುವುದು, ವಿವಾಹ, ಮರಣ ಮುಂತಾದ ಸಂದರ್ಭಗಳಲ್ಲಿಯ ನಡಾವಳಿಗಳು ಎಲ್ಲಾ ಪ್ರದೇಶಗಳಲ್ಲಿ ಕಂಡುಬರುವ ನಿಯಮಗಳೇ ಆಗಿವೆ. ಬೆಳಗಾವಿ ಮುಸ್ಲಿಂ ಮುಖ್ಯ ಉದ್ಯೋಗ ವ್ಯಾಪಾರ ಮತ್ತು ಕೃಷಿ. ಕೃಷಿಯನ್ನು ಮುಖ್ಯ ಕಸಬುವಾಗಿರಿಸಿಕೊಂಡ ಹಲವಾರು ಮನೆತನಗಳು ಕಂಡುಬರುತ್ತವೆ. ಪಠಾಣ, ಖಾಲೆ, ಅತ್ತಾರ ಸೌದಾಗಾರ, ಜಾಗೀರದಾರ ಮುಂತಾದ ಮನೆತನಗಳು ಕೃಷಿ ಭೂಮಿಯನ್ನು ಹೊಂದಿವೆ. ವಿಜಾಪುರದ ಸುಲ್ತಾನರ ಆಳ್ವಿಕೆಯ ಸಂದರ್ಭದಲ್ಲಿ ಬೆಳಗಾವಿಯ ಮುಸ್ಲಿಂರು ಹೆಚ್ಚು ಭೂಮಿಯನ್ನು ಹೊಂದಿದ್ದರು. ಕೃಷಿ ಪದ್ಧತಿಯಲ್ಲಿ ಉತ್ತರಕರ್ನಾಟಕದ ಪದ್ಧತಿಗಳೇ ಕಂಡಬರುತ್ತವೆ.

ನಮಾಜ ಮಾಡುವುದನ್ನು ಎಲ್ಲರೂ ಪಾಲಿಸುತ್ತರಾದರೂ ಕೃಷಿಕರು, ನೌಕರರಿಗೆ ಅನಿವಾರ್ಯವಾಗಿ ಪಾಲಿಸಲು ಆಗುವುದಿಲ್ಲ. ರಮಜಾನ್, ಬಕ್ರೀದ್ ಮುಂತಾದ ಹಬ್ಬಗಳಲ್ಲಿ ಬೆಳಗಾವಿಯ ಮುಸ್ಲಿಂರು ಅತ್ಯಂತ ಉತ್ಸಾಹದಿಂದ ಪಾಲ್ಗೊಳ್ಳುತ್ತಾರೆ. ಮೊಹರಂ ಸಂದರ್ಭದಲ್ಲಿ ಡೊಲಿಗಳ ಮೆರವಣಿಗೆಯು ಬೆಳಗಿನವರೆಗೂ ಸಾಗುತ್ತದೆ. ಈ ಸಂದರ್ಭದಲ್ಲಿ ಲೇಜಿಮ್, ಕರಬಲ್, ಕತ್ತಿವರಸೆ, ಹಾಡು, ಕುಣಿತದ ಮೂಲಕ ಮೆರವಣಿಗೆಯು ನಡೆಯುತ್ತದೆ. ಮಸೀದಿಯಲ್ಲಿ ಖಾಜೀಯು ಮುಖ್ಯ ಧರ್ಮಾಧಿಕಾರಿಯೆನಿಸುವನು. ಆದಿಲ್ ಶಾಹಿಗಳ ಆಡಳಿತದ ಕಾಲದಲ್ಲಿ ದಿವಾಣೀ ಫೌಜದಾರೀ ನ್ಯಾಯದ ವಿಚಾರಣೆಯನ್ನು ಖಾಜೀಗಳೇ ಮಾಡುತ್ತಿದ್ದರು. ಖಾಜೀಗಳಿಗೆ ಧರ್ಮಶಾಸ್ತ್ರ ಹೇಳಿ ಸಹಾಯ ಮಾಡುವ ವಿದ್ವಾಂಸರಿಗೆ ಮೌಲ್ವಿಗಳೆನ್ನುವರು. ಖಾಜಿಯ ಕೈ ಕೆಳಗೆ ಮುಲ್ಲಾಯೆಂಬ ಉಪಾಧ್ಯಾಯರಿರುವರು. ಇವರನ್ನು ಖಾಜಿಯು ಬಡಜನರೊಳಗಿಂದ ಆರಿಸಿ ನೇಮಿಸುವನು. ಮುಸ್ಲಿಂರಲ್ಲಿ ಕೆಲವರು ಫಕೀರರು ಇರುವರು. ಇವರು ಭಿಕ್ಷೆ ಬೇಡಿ ಜೀವನವನ್ನು ಸಾಗಿಸುತ್ತಾರೆ.

ಬೆಳಗಾವಿಯ ಮುಸ್ಲಿಂರು ಹೆಚ್ಚಾಗಿ ಕನ್ನಡಿಗರ ಕೂಡ ಹೊಂದಿಕೊಳ್ಳುತ್ತಾರೆ. ಕನ್ನಡ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿಯಲ್ಲಿ ಮಹತ್ವದ ಸಾಧನೆಯನ್ನು ಮಾಡಿದ ಮುಸ್ಲಿಂರೂ ಇದ್ದಾರೆ. ಒಕ್ಕಲುತನದ ಪದ್ಧತಿ, ಬೆಳೆ, ಅಹಾರಪದ್ಧತಿಯಲ್ಲಿ ಕನ್ನಡ ಸಂಸ್ಕೃತಿ ಹಾಸು ಹೊಕ್ಕಾಗಿದೆ. ಮೂಲ ಬೆಳಗಾವಿಯ ಪರಿಸರದಲ್ಲಿ ಕನ್ನಡಿಗರ ಮತ್ತು ಮುಸ್ಲಿಂರ ಮನೆಗಳಲ್ಲಿ ಓಣಿಗಳು ಅಕ್ಕಪಕ್ಕದಲ್ಲಿವೆ.

ಬೆಳಗಾವಿಯಲ್ಲಿ ಮುಸ್ಲಿಂರ ಜನಸಂಖ್ಯೆಯು ಏರಿಕೆಯಲ್ಲಿದೆ. ೧೯೭೧ ರ ಜನಗಣತಿಯ ಪ್ರಕಾರ ೨೬.೬೫% ೧೯೮೧ ರ ಜನಗಣತಿಯ ಪ್ರಕಾರ ೨೬.೪೦% ೧೯೯೧ ರಲ್ಲಿ ೨೯.೩%, ೨೦೦೧ ರಲ್ಲಿ ೨೮.೮೯%, ೨೦೧೧ ರ

ಜನಗಣತಿಯ ಪ್ರಕಾರ ೩೨.೫೦% ರಷ್ಟಿರುವುದು ಕಂಡುಬಂದಿದೆ. ೧೯೮೧ ರಲ್ಲಿ ಮಾತ್ರ ಜನಸಂಖ್ಯೆಯಲ್ಲಿ ಕಡಿಮೆಯಾಗಿರುವುದು ಕಂಡುಬರುತ್ತದೆ. ಈ ಸಮಯದಲ್ಲಿಯೇ ಬೆಳಗಾವಿಯಿಂದ ಬೇರೆ ಬೇರೆ ಪ್ರದೇಶಗಳಿಗೆ ವ್ಯಾಪಾರಕ್ಕಾಗಿ ಹೋಗಿರುವುದು ತಿಳಿದುಬರುತ್ತದೆ.[೧೭]

ಬೆಳಗಾವಿಯಲ್ಲಿ ಮುಸ್ಲಿಂ ಜನಾಂಗದವರು ಬೆಳಗಾವಿಯ ಬೆಳವಣಿಗೆಯಲ್ಲಿ ಮಹತ್ವದ ಪಾತ್ರವನ್ನು ವಹಿಸಿದ್ದಾರೆ. ಮುಖ್ಯವಾಗಿ ವ್ಯಾಪಾರವನ್ನು ಅವಲಂಬಿಸಿರುವ ಇವರು ಬೆಳಗಾವಿಯ ಆರ್ಥಿಕ ಸ್ಥಿತಿಯ ಮೇಲೆ ಮಹತ್ವದ ಪರಿಣಾಮವನ್ನು ಬೀರಿದ್ದಾರೆ. ತಮ್ಮ ಧರ್ಮ ಆಚರಣೆ, ಸಂಪ್ರದಾಯಗಳಿಂದ ಬೆಳಗಾವಿಯ ಸಾಂಸ್ಕೃತಿಕ ವಲಯಕ್ಕೆ ವಿಶಿಷ್ಟವಾದ ಕೊಡುಗೆಯನ್ನು ನೀಡಿದ್ದಾರೆ. ಇಲ್ಲಿಯ ಎಲ್ಲ ಧರ್ಮ ಜಾತಿ, ಪಂಗಡದವರೊಡನೆ ಬೆರೆತು ಸಾಮರಸ್ಯದ ಬದುಕನ್ನು ಸಾಗಿಸುತ್ತಿದ್ದಾರೆ.

**ಕ್ರಿಶ್ಚಿಯನ್ನರು:** ೧೫೧೦ ರಲ್ಲಿ ಗೋವೆಯು ಪೋರ್ಚುಗೀಸರ ವಶವಾದ ಬಳಿಕ ಮತಾಂತರ ಕಾರ್ಯವನ್ನು ತ್ವರಿತಗೊಳಿಸಿದ ಬಳಿಕ ವಿಜಯನಗರ, ಇಕ್ಕೇರಿ ರಾಜರೊಡನೆ ಸಂಪರ್ಕ ಬೆಳೆಸಿ ಕರ್ನಾಟಕಕ್ಕೂ ಕಾಲಿಟ್ಟರು. ಕ್ರಿ.ಶ. ೧೫೬೦ ರಲ್ಲಿ ಗೋವಾದ ಪೋರ್ಚುಗೀಸರು ಮತಾಂತರಗೊಂಡ ಕ್ರೈಸ್ತರನ್ನು ಶಿಕ್ಷಿಸಲು ಇನ್ಕ್ವಿಜಿಷನ್ (ಧಾರ್ಮಿಕ ವಿಚಾರಣೆ) ಆರಂಭಿಸಿದರು. ಮತಾಂತರ ಗೊಂಡಿದ್ದ ಕ್ರೈಸ್ತರು ಅಂತರಂಗದಲ್ಲಿ ಹಿಂದಿನ ಆಚರಣೆಗಳನ್ನೇ ದೇವರುಗಳನ್ನೇ ಆರಾಧಿಸುತ್ತ ಹೊರಗೆ ಮಾತ್ರ ಕ್ರೈಸ್ತರಂತೆ ನಟಿಸುತ್ತಿದ್ದುದನ್ನು ತಪ್ಪಿಸುವುದೇ ಈ ಉಗ್ರ ವಿಚಾರಣೆಯ ಉದ್ದೇಶವಾಗಿತ್ತು. ಈ ವಿಚಾರಣಾ ಕ್ರಮವು ಭಯಾನಕವೂ, ಅಮಾನುಷವೂ ಆಗಿದ್ದರಿಂದ ಗೋವೆಯಿಂದ ಓಡಿ ಕರ್ನಾಟಕವನ್ನು ಪ್ರವೇಶಿಸಿದರು. ಹೀಗೆ ಅವರು ಗುಂಪು-ಗುಂಪುಗಳಾಗಿ ಸಹ್ಯಾದ್ರಿ ಬೆಟ್ಟ ಏರಿ ಬೆಳಗಾವಿ ಪ್ರದೇಶಕ್ಕೆ ವಲಸೆ ಬಂದರು.[೧೮] ಅವರು ಕೆಥೋಲಿಕ್ ಕ್ರೈಸ್ತರಾಗಿದ್ದರೂ ತಮ್ಮ ಭಾರತೀಯ ಸಂಸ್ಕೃತಿಯನ್ನು ಇಟ್ಟುಕೊಂಡಿದ್ದರು. ಕ್ರಿ.ಶ. ೧೬೫೦ ರಿಂದ ೧೭೫೦ ರವರೆಗೆ ಗೋವಾದಿಂದ ಒಂದು ಸಾವಿರ ಕುಟುಂಬಗಳು ಘಟ್ಟ ಪ್ರದೇಶಗಳಿಗೆ ವಲಸೆ ಬಂದವು.[೧೯] ಹೀಗೆ ಬಂದವರು ಬೆಳಗಾವಿಯ ಸುತ್ತಮುತ್ತಲಿನ ಪ್ರದೇಶಗಳಲ್ಲಿ ನೆಲೆ ನಿಂತರು.

೧೬ನೆಯ ಶತಮಾನದ ಆರಂಭದಲ್ಲಿ ಪಣಜಿ ಮತ್ತು ಗೋವಾ ಪ್ರದೇಶದ ಜನರು ಕ್ರೈಸ್ತ ಮತಾವಲಂಬಿಗಾದರು. ಪೋರ್ಚುಗೀಸರು ಇವರನ್ನು ತಮ್ಮ ಕೆಲಸಗಳಿಗೆ ಉಪಯೋಗಿಸಿಕೊಳ್ಳತೊಡಗಿದರು. ಕಿತ್ತೂರ ಸಂಸ್ಥಾನಕ್ಕೂ ಪೋರ್ಚುಗೀಸರಿಗೂ ಮುಂದೆ ರಾಜಕೀಯ ಮತ್ತು ವ್ಯಾಪಾರ ಸಂಬಂಧ ಬೆಳೆಯಿತು. ಆಗ ಗೋವಾದ ಕ್ರೈಸ್ತರು ಕಿತ್ತೂರ, ಬೀಡಿ ಮತ್ತು ನಂದಗಡಗಳಿಗೆ ಬಂದು ನೆಲೆ ನಿಂತರು. ೧೭ನೆಯ ಶತಮಾನದಲ್ಲಿ ಶಿವಾಜಿ ಹಾಗೂ ಸಂಬಾಜಿಯವರು ಗೋವಾದ ಮೇಲೆ ದಾಳಿ ನಡೆಸಿದಾಗ ಅಲ್ಲಿದ್ದ ಕ್ಯಾಥೋಲಿಕ ಕ್ರಿಶ್ಚಿಯನ್ನರು ಬೆಳಗಾವಿ ಜಿಲ್ಲೆಯಲ್ಲಿ ನೆಲೆ ನಿಂತರು. ಬೆಳಗಾವಿ ಗೋದೋಲಿ, ಖಾನಾಪುರ, ನಂದಗಡ, ಶಹಪೂರ ಮುಂತಾದ ಪ್ರದೇಶಗಳಲ್ಲಿ ನೆಲೆಸಿ ಧರ್ಮ ಪ್ರಚಾರವನ್ನು ಕೈಕೊಂಡರು. ಬ್ರಿಟಿಷರು ಮಿಶನರಿಗಳ ಮೂಲಕ ಧರ್ಮ ಪ್ರಚಾರವನ್ನು ಕೈಕೊಂಡರು.

ಜೊತೆಗೆ ಶಿಕ್ಷಣ, ಸಾಹಿತ್ಯ, ಸಮಾಜದ ಕಾರ್ಯಗಳಲ್ಲಿ ತೊಡಗಿ ಮಹತ್ವದ ಕಾರ್ಯಗಳನ್ನು ಕೈಕೊಂಡರು. ಹೀಗೆ ಬಂದ ಮಿಶನರಿಗಳು ಅಲ್ಲಿಯೇ ನೆಲೆನಿಂತು ತಮ್ಮದೇ ಆದ ವಿಶಿಷ್ಟ ಧಾರ್ಮಿಕ ಪರಂಪರೆಯನ್ನು ಬೆಳೆಸಿದರು. ಈ ಹಿನ್ನೆಲೆಯಲ್ಲಿಯೇ ಬೆಳಗಾವಿಯಲ್ಲಿಯೂ ಕ್ರೈಸ್ತಧರ್ಮವು ಪ್ರಚಾರವನ್ನು ಪಡೆದುಕೊಂಡಿತು.

ಬೆಳಗಾವಿಗೆ ಬಂದ ಮೊಟ್ಟ ಮೊದಲ ಮಿಶನರಿಯೆಂದರೆ ಲಂಡನ್ ಮಿಶನ್. ಕ್ರಿ.ಶ. ೧೮೨೦ರಲ್ಲಿ ಬೆಳಗಾವಿಯಲ್ಲಿ ಸ್ಥಾಪಿತವಾಗಿ ಬೆಳಗಾವಿ ಸುತ್ತ ಮುತ್ತ ತನ್ನ ಕಾರ್ಯವನ್ನು ಆರಂಭಿಸಿತು.[೨೦] ಮುಂದೆ ಹಲವಾರು ಜನ ಕ್ರೈಸ್ತ ಪಾದ್ರಿಗಳು, ಆಡಳಿತ ಅಧಿಕಾರಿಗಳು, ಬೆಳಗಾವಿಗೆ ಆಗಮಿಸಿ ಧರ್ಮ ಪ್ರಚಾರದ ಜೊತೆಗೆ ಸಾಮಾಜಿಕ ಕಾರ್ಯಗಳನ್ನು ಕೈಗೊಂಡರು. ಇವರಲ್ಲಿ ಮುಖ್ಯವಾಗಿ ರೆವರೆಂಡೆರ ಟೇಲರ್, ರೆವರೆಂಡೆ ವಿಲಿಯಮ್ ಬೇನನ್, ರೆವರೆಂಡೆ ಜೇಮ್ಸ್ ಸ್ಮಿತ್ ಹಾಗೂ ರೆವೆರೆಂಡ್ ಡಬ್ಲ್ಯೂ ಹಾಕರ್ ಮುಂತಾದವರು ಬಳ್ಳಾರಿಯಿಂದ ಬೆಳಗಾವಿಗೆ ಬಂದು ಲಂಡನ್ ಮಿಶನರಿ ಸೊಸೈಟಿ ಆಶ್ರಯದಲ್ಲಿ ಕಾರ್ಯನಿರತರಾದರು. ಶಾಲೆ, ಕಾಲೇಜ, ಪತ್ರಿಕೆ, ಮುದ್ರಣಾಲಯಗಳನ್ನು ಗ್ರಂಥಸಂಪಾದನೆ, ಪರಿಷ್ಕರಣೆ ಮುಂತಾದ ಕಾರ್ಯಗಳ ಜೊತೆಗೆ ಚರ್ಚುಗಳನ್ನು ಕಟ್ಟಿದರು. ಹೀಗೆ ಬೆಳಗಾವಿಯಲ್ಲಿ ಕ್ರೈಸ್ತರು ನೆಲೆ ನಿಂತು ಧರ್ಮ ಪ್ರಸಾರ ಕಾರ್ಯವನ್ನು ಕೈಗೊಂಡರು. ೧೮೧೮ ರಲ್ಲಿ ಬೆಳಗಾವಿಯು ಬ್ರಿಟಿಷರ ವಶವಾದ ಮೇಲೆ ಇಲ್ಲಿ ಸೈನಿಕ ನೆಲೆಯನ್ನು ಸುಸಜ್ಜಿತವಾಗಿ ಸ್ಥಾಪಿಸಿ, ಕಂಟೋನಮೆಂಟ್ ಪ್ರದೇಶವನ್ನು ನಿರ್ಮಿಸಿ ಬ್ರಿಟಿಷ ಅಧಿಕಾರಿಗಳು, ಸೈನಿಕರು ಹೆಚ್ಚಿನ ಪ್ರಮಾಣದಲ್ಲಿ ನೆಲೆಸಿದರು. ಇಂದಿನ ಕ್ಯಾಂಪ್ ಪ್ರದೇಶದಲ್ಲಿ ಶಾಲೆ, ಕಾಲೇಜುಗಳನ್ನು ಚರ್ಚಗಳನ್ನು ಪ್ರಾರಂಭಿಸಿದರು. ಬೆಳಗಾವಿಯ ಹವಾಮಾನ ಬ್ರಿಟಿಷ್ ಅಧಿಕಾರಿಗಳನ್ನು ಆಕರ್ಷಿಸಿತು. ಹೀಗಾಗಿ ಬೆಳಗಾವಿಯಲ್ಲಿಯೇ ವಾಸ್ತವ್ಯ ಹೂಡಿದರು. ಇದರಿಂದ ಹಂತಹಂತವಾಗಿ ಕ್ರೈಸ್ತರ ಸಂಖ್ಯೆ ಹೆಚ್ಚುತ್ತಾ ಹೋಯಿತು. ಈ ಸಮಯದಲ್ಲಿ ಹಲವಾರು ಮಹತ್ವದ ಚರ್ಚುಗಳು ಸ್ಥಾಪನೆಗೊಂಡವು. ಅವುಗಳಲ್ಲಿ ಪ್ರಮುಖವಾದವುಗಳೆಂದರೆ–ಸಂತ ಅಂಥೋನಿ ಚರ್ಚ, ಇಮ್ಮಾಕ್ಯುಲೆಟ್ ಕನ್ಸೆಕ್ಷನ್ ಚರ್ಚ, ಕೆಥೆಡ್ರಲ್ ಆಫ್ ಅವರ್ ಲೇಡಿ ಆಫ್ ದಿ ಫ್ಯಾಮಿಲಿ ರೋಸರಿ ಆಫ್ ಫಾತಿಮಾ, ಸೇಂಟ್ ಮೇರಿ ಚರ್ಚ, ಮೆಥೋಡಿಸ್ಟ್ ಮಿಶನ ಸಂಸ್ಥೆ, ಮುಂತಾದ ಚರ್ಚುಗಳು, ಸಂಸ್ಥೆಗಳು ಬೆಳಗಾವಿಯಲ್ಲಿ ಕಾರ್ಯಾರಂಭ ಮಾಡಿದವು.

ಇಂದು ಬೆಳಗಾವಿಯಲ್ಲಿ ಕ್ರಿಶ್ಚಿಯನ್ನರ ಜನ ಸಂಖ್ಯೆಯಲ್ಲಿ ಏರಿಕೆ ಕಂಡುಬರುತ್ತಿದೆ. ಎರಡು ಶತಮಾನಕ್ಕಿಂತಲೂ ಹೆಚ್ಚಿನ ಅವಧಿಯಲ್ಲಿದ್ದ ಬೆಳಗಾವಿಯಲ್ಲಿ ನೆಲೆಸಿರುವ ಇವರು ಎಲ್ಲ ಮತ ಧರ್ಮದವರೊಂದಿಗೆ ಸೌಹಾರ್ದತೆಯಿಂದ ಬದುಕುತ್ತಿದ್ದಾರೆ. ೧೯೯೧ ರ ಜನಗಣತಿಯ ಪ್ರಕಾರ ೧೮.೪೭% ರಷ್ಟು, ೨೦೦೧ ರಲ್ಲಿ ೧೭.೪೫% ರಷ್ಟು ಇದ್ದರು. ೨೦೦೧ರ ಅವಧಿಯಲ್ಲಿ ಮಾತ್ರ ಇಳಿಕೆಯಾದದ್ದು ಕಂಡುಬರುತ್ತದೆ. ೨೦೧೧ ರ ಜನಗಣತಿಯ ಪ್ರಕಾರ ೨೦.೭೦% ಶೇಕಡಾವಾರು ಇರುವುದು ಕಂಡುಬರುತ್ತವೆ.

## ೨. ಮಠ-ಬಸದಿ-ಮಸೀದಿ-ಚರ್ಚ್:

**ಮಠಗಳು :** ಬೆಳಗಾವಿಯಲ್ಲಿ ಹಲವು ಧರ್ಮಗಳು ಸಂಗಮಗೊಂಡು ವಿಶಿಷ್ಟ ಸಾಂಸ್ಕೃತಿಕ ನೆಲೆಯಾಗಿದೆ. ಧರ್ಮ ಜಾತಿಗಳ ವೈವಿಧ್ಯತೆಯ ಜೊತೆಗೆ ಭಾಷೆಯ ವೈವಿಧ್ಯತೆಯೂ ಕೂಡಿಕೊಂಡಿದೆ. ಹೀಗಾಗಿ ಹಲವಾರು ಮಠಗಳು ಬೆಳಗಾವಿಯಲ್ಲಿ ಸ್ಥಾಪನೆಗೊಂಡವು. ಮಠ ಎಂಬುದು ಸಮಾಜವನ್ನು ನಿಯಂತ್ರಿಸುವ ಸಾಂಸ್ಕೃತಿಕ ಬೆಳೆಸುವ ಧಾರ್ಮಿಕ ಸಂಸ್ಥೆ. ಧರ್ಮ, ಜಾತಿ ಪಂಗಡಗಳ ಹಿನ್ನೆಲೆಯಲ್ಲಿ ಬೆಳಗಾವಿಯಲ್ಲಿ ಹುಟ್ಟಿಕೊಂಡ ಮಠಗಳಲ್ಲಿ ಲಿಂಗವಂತ ಧರ್ಮದ ಮಠಗಳು ಪ್ರಸ್ತುತ ಸಂದರ್ಭದಲ್ಲಿ ಹೆಚ್ಚು ಕ್ರಿಯಾಶೀಲವಾಗಿವೆ. ಈ ಹಿನ್ನೆಲೆಯಲ್ಲಿ ಈ ಮಠಗಳನ್ನು ಮುಖ್ಯವಾಗಿಟ್ಟುಕೊಂಡು ವಿಶ್ಲೇಷಿಸಲಾಗಿದೆ.

ಬೆಳಗಾವಿ ನಗರದಲ್ಲಿ ಮುಖ್ಯವಾಗಿ ಮೂರು ವೀರಶೈವ ಮಠಗಳು ಬೆಳಗಾವಿಯ ಸಾಂಸ್ಕೃತಿಕ ವಲಯದಲ್ಲಿ ಪ್ರಮುಖವಾಗಿ ಕಂಡುಬರುತ್ತವೆ. ಅವುಗಳೆಂದರೆ ೧. ಕಲ್ಮಠ ೨. ನಾಗನೂರು ರುದ್ರಾಕ್ಷಿಮಠ ೩. ಕಾರಂಜಿಮಠ.

**ಕಲ್ಮಠ :** ಬೆಳಗಾವಿಯ ಅತ್ಯಂತ ಹಳೆಯ ವೀರಶೈವ ಮಠವಾದ ಕಲ್ಮಠವು ವಿಶಿಷ್ಟವಾದ ಇತಿಹಾಸ ಪರಂಪರೆಯನ್ನು ಹೊಂದಿದೆ. ಗುರುಮಠ ಪರಂಪರೆಯಲ್ಲಿ ಬರುವ ಈ ಮಠವು ರವಿವಾರ ಪೇಟೆಯಲ್ಲಿದೆ. ಗುರುಮಠವು ಮುಖ್ಯವಾಗಿ ಸಾರ್ವಜನಿಕರ ಧಾರ್ಮಿಕ ಆಚರಣಾ ನಿಷ್ಠೆಗೆ ಸ್ಪಂದಿಸುವಂಥದ್ದು. ಲಿಂಗಧಾರಣ ಅಯ್ಯಾಚಾರ ಮುಂತಾದ ಧಾರ್ಮಿಕ ವಿಧಿವಿಧಾನಗಳನ್ನು ನಡೆಸುವುದು. ಧರ್ಮಪ್ರಚಾರ, ಧರ್ಮ ರಕ್ಷಣೆ ಮುಂತಾದ ಕಾರ್ಯಗಳನ್ನು ಗುರುಮಠಗಳು ನಡೆಸುತ್ತವೆ.

ಸ್ಥಾಪನೆ : ಬೆಳಗಾವಿಯಲ್ಲಿ ಕಲ್ಮಠ ಸ್ಥಾಪನೆಯಾಗಿದ್ದರ ಹಿಂದೆ ಕೆಲವು ಘಟನೆಗಳು ನಡೆದವು. ಈ ಘಟನೆಗಳು ದಂತ ಕಥೆಯಂತೆ ಕಂಡು ಬಂದರೂ ಐತಿಹಾಸಿಕವಾಗಿ ಮಹತ್ವವನ್ನು ಪಡೆದುಕೊಂಡಿವೆ.

ಬೆಳಗಾವಿಯ ಕಲ್ಮಠವು ಕೆಳದಿ ರಾಜಗುರುಮಠದ ಶಾಖಾ ಮಠವಾಗಿದೆ. ಕೆಳದಿ ಇತಿಹಾಸದಲ್ಲಿ ಪ್ರಮುಖ ಧಾರ್ಮಿಕ ಪೀಠವಾಗಿದ್ದ ರಾಜಗುರು ಪೀಠವು ಕ್ರಿ.ಶ. ೧೫೮೨-೧೬೨೯ ರಲ್ಲಿ ಆಳಿದ ಕೆಳದಿ ನಾಯಕರಿಗೆ ಮುಖ್ಯ ಧಾರ್ಮಿಕ ನೆಲೆಯಾಗಿತ್ತು. ಈ ಮಠದ ಪರಂಪರೆಯಲ್ಲಿ ಶ್ರೀ ಶಿವಲಿಂಗ ಸ್ವಾಮಿಗಳು ಎನ್ನುವವರು ಪ್ರಸಿದ್ಧಿಯನ್ನು ಪಡೆದಿದ್ದರು.

ಕೆಳದಿನಾಯಕರ ಬಿದನೂರು ಪ್ರಾಂತವನ್ನು ಮುದಿಮಲ್ಲಪ್ಪನು ಆಳುತ್ತಿದ್ದನು. ಈತನ ಮಕ್ಕಳು ದೆಹಲಿ ಸುಲ್ತಾನನ ಆಮಂತ್ರಣದ ಮೇರೆಗೆ ದೆಹಲಿಗೆ ಹೋಗಿ ಬರುವಾಗ ಬೆಳಗಾವಿ ಬಳಿಯ ಕಾಗತಿಯಲ್ಲಿ ಬೀಡುಬಿಟ್ಟರು.

ಆಗ ಇವರ ಬಳಿಯಿದ್ದ ಆಕಳುಗಳ ಹಿಂಡು ಬೆಳಗಾವಿಯ ಕಿಲ್ಲೆಯ ಎದುರಿಗಿರುವ ಕೆರೆಗೆ  ನೀರು ಕುಡಿಯಲು ಹೋದವು. ಆಗ ಬೆಳಗಾವಿಯನ್ನು ಆಳುತ್ತಿದ್ದ ಅಸದಖಾನನು ಬೆಳಗಾವಿ ಕೋಟೆಯನ್ನು ದುರಸ್ಥಿಗೊಳಿಸುತ್ತಿದ್ದನು. ಆಕಳುಗಳ ಹಿಂಡು ನೀರು ಕುಡಿದು ಕೋಟೆಯತ್ತ ಬಂದಾಗ ಅಸದಖಾನನು ಗುಂಡು ಹಾರಿಸಿ ಒಂದು ಆಕಳನ್ನು ಕೊಂದನು. ಈ ಸುದ್ದಿಯನ್ನು ತಿಳಿದು ನಾಯಕರು ಅಸದಖಾನನ ಮೇಲೆ ಯುದ್ಧ ಸಾರಿದರು. ಹೋರಾಟದಲ್ಲಿ ಬಸವನಾಯಕ ಎನ್ನುವವನು ಮಡಿದನು. ಇದರಿಂದ ನಾಯಕರು ಕೆರಳಿ ಅಸದಖಾನನ ಮೇಲೆ ದಂಡೆತ್ತಿ ಹೋಗಿ ಅಸದಖಾನನನ್ನು ಸೋಲಿಸಿದರು. ಆಗ ನಾಯಕರು ನಮ್ಮ ಆಕಳನ್ನು  ನೀವು ಕೊಂದಿದ್ದಿರಿ. ಅದನ್ನು ಮರಳಿ ಬದುಕಿಸಬೇಕು ಇಲ್ಲದಿದ್ದರೆ ನಿಮ್ಮ ಪ್ರಾಣಕ್ಕೆ ಅಪಾಯವೆಂದು ಹೇಳಿದರು. ಆಗ ಅಸದಖಾನನು ಅದು ಬದುಕಬೇಕಾದರೆ ಏನು ಮಾಡಬೇಕು ಎಂದು ಕೇಳಿದಾಗ ನಮ್ಮ ಕುಲಗುರುಗಳಾದ ಕೆಳದಿಯ ಶ್ರೀ ಶಿವಲಿಂಗ ಸ್ವಾಮಿಗಳನ್ನು ಕರೆಯಿಸುವಂತೆ ಕೇಳಿದರು. ಅದರಂತೆ ಕೆಳದಿ ಗುರುಗಳನ್ನು ಕರೆಸಲಾಯಿತು. ಅವರು ಬಂದು ಸತ್ತ ಆಕಳಿಗೆ ಭಸ್ಮವನ್ನು ಹಚ್ಚಿದರು. ಆಗ ಆಕಳು ಮತ್ತೆ ಬದುಕಿತು. ಈ ಪವಾಡವನ್ನು ಕಂಡು ಅಸದಖಾನನು ಸ್ವಾಮಿಗಳ ಮಹಿಮೆಯನ್ನು ಕೊಂಡಾಡಿ ಅವರಿಗೆ ಆತಿಥ್ಯವನ್ನು ನೀಡಿದನು. ಆಗ ಸ್ವಾಮಿಗಳು  ನೀನು ಗೋಹತ್ಯೆ ಪಾಪವನ್ನು ಮಾಡಿದ್ದರಿಂದ ಅದರ ಪರಿಹಾರಕ್ಕಾಗಿ ಇಲ್ಲಿ ಒಂದು ಕಲ್ಲುಮಠವನ್ನು ಕಟ್ಟಿಸುವಂತೆ ಸಲಹೆ  ನೀಡಿದರು. ಅದರಂತೆ ಈಗಿನ ಕಲ್ಮಠವು ಸ್ಥಾಪನೆಗೊಂಡಿತು.[೨೧] ಈ ಘಟನೆಯಿಂದ ಸ್ವಾಮಿಗಳೀಗೆ ಕರಿಗೂಳಿ ವರಗೂಳಿ ಎಂದು ಕರೆಯತೊಡಗಿದರು. ಹೀಗಾಗಿ ಬೆಳಗಾವಿಯ ಕಲ್ಮಠಕ್ಕೆ ವರಗೂಳಿ ಪಟ್ಟದೇವರ ಮಠ ಎಂದು ಹೆಸರು ಬಂದಿತು. ಅಸದಖಾನನು ಏಳು ಜನ ನಾಯಕರಿಗೆ ಏಳು ಗ್ರಾಮಗಳನ್ನು ಉಂಬಳಿಯಾಗಿ ಕೊಟ್ಟನು. ಆ ಏಳು ಗ್ರಾಮಗಳೆಂದರೆ ಮುರಕಿಬಾವಿ, ಹಣ್ಣಿಕೇರಿ, ಮೊಹರೆ, ಇಂಚಲ, ಮುತವಾಡ, ಯಡಾಲ, ನಾಗನೂರು. ಈಗಲೂ ಈ ಏಳು ಗ್ರಾಮಗಳಲ್ಲಿ ಕೆಳದಿ ರಾಜಗುರು ಮಠದ ಶಾಖಾ ಮಠಗಳು ಕಂಡುಬರುತ್ತವೆ(ಮೂರು ಮಠಗಳು ಸುಸ್ಥಿತಿಯಲ್ಲಿವೆ).

ಬೆಳಗಾವಿಯ ಕಲ್ಮಠಕ್ಕೆ ಅಸದಖಾನನು ಭೂಮಿಯನ್ನು ಉಂಬಳಿಯಾಗಿ ನೀಡಿದನು. ಮುಂದೆ ಈ ಭೂಮಿಯನ್ನು ಮಠದ ಸ್ವಾಮಿಗಳು ಶಿಕ್ಷಣ ಸಂಸ್ಥೆಗಳಿಗೆ ದಾನ ನೀಡಿದರು ಎನ್ನಲಾಗುತ್ತದೆ.

ಬೆಳಗಾವಿಯ ಕಲ್ಮಠದಲ್ಲಿ ಕೆ.ಎಲ್.ಇ. ಸಂಸ್ಥೆಯ ಹುಟ್ಟು : ಇಂದು ದೇಶದ ಪ್ರತಿಷ್ಠಿತ ವಿದ್ಯಾ ಸಂಸ್ಥೆಯಾಗಿ ದೇಶ ವಿದೇಶಗಳಲ್ಲಿ ಖ್ಯಾತಿ ಹೊಂದಿದ ಕೆ.ಎಲ್.ಇ. ಸಂಸ್ಥೆಯ ಸ್ಥಾಪನೆಯಾದದ್ದು ರವಿವಾರ ಪೇಠೆಯಲ್ಲಿರುವ ಕಲ್ಮಠದಲ್ಲಿ ಎನ್ನುವುದು ಅವಿಸ್ಮರಣೀಯ ಸಂಗತಿಯಾಗಿದೆ. ಹಿಂದುಳಿದ ಜನಾಂಗದ ಶ್ರೇಯೋಭಿವೃದ್ಧಿಗಾಗಿ ಒಂದು ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಬೇಕೆಂಬ ಹಂಬಲವನ್ನು ವೀರಶೈವ ಸಮಾಜದ ತರುಣ ಪದವೀಧರರು ನಿರ್ಧರಿಸಿದರು. ಅದರಂತೆ ಕ್ರಿ.ಶ. ೧೯೧೬ ಅಕ್ಟೋಬರ ೧೧ ರಂದು ಬೆಳಗಾವಿಯ ಕಲ್ಮಠದಲ್ಲಿ ಸಭೆ ಸೇರಿತು.[೨೨]

ಈ ಸಭೆಯಲ್ಲಿ ಅಂದಿನ ವೀರಶೈವ ಸಮಾಜದ ಮುಂದಾಳುಗಳೂ, ಬೆಳಗಾವಿ ಜಿಲ್ಲೆಯ ಡೆಪ್ಯುಟಿ ಕಲೆಕ್ಟರರೂ ಆಗಿದ್ದ ರಾವಬಹಾದ್ದೂರ ಅರಟಾಳ ರುದ್ರಗೌಡರು, ಸರ್ವಶ್ರೀ ಪಂಡಿತಪ್ಪ ಚಿಕ್ಕೋಡಿ, ಎಮ್. ಆರ್. ಸಾಖರೆ, ಎಚ್.ಎಫ್. ಕಟ್ಟೀಮನಿ, ಶಿ.ಶಿ.ಬಸವನಾಳ, ಬಿ. ಎಸ್. ಹಂಚಿನಾಳ, ಬಿ.ಬಿ. ಮಮದಾಪುರ, ವೀರನಗೌಡ ಪಾಟೀಲರು ಹಾಗೂ ಹಿರಿಯರಾದ ಚಚಡಿಯ ಶ್ರೀ ವಿ.ಜಿ.ನಾಯಕ ಬಹಾದ್ದೂರ ದೇಸಾಯಿಯವರು, ಶ್ರೀ ಶ್ರೀಮಂತ ವೈಜಪ್ಪ ಅನಿಗೋಳ ಮುಂತಾದವರು ಉಪಸ್ಥಿತರಿದ್ದರು. ಈ ಸಂದರ್ಭದಲ್ಲಿ ದೀರ್ಘವಾದ ಚರ್ಚೆ ನಡೆದು ಪುಣೆಯ ಡೆಕ್ಕನ್ ಎಜ್ಯುಕೇಶನ್ ಸೊಸಾಯಿಟಿಯ ಮಾದರಿಯಲ್ಲಿ ಸತ್ಯ-ಪ್ರೇಮ-ಸೇವೆ-ಸ್ವಾರ್ಥತ್ಯಾಗ ಎಂಬ ನಾಲ್ಕು ಧ್ಯೇಯಗಳನ್ನಿಟ್ಟುಕೊಂಡು ಕರ್ನಾಟಕ ಲಿಂಗಾಯತ ಎಜ್ಯುಕೇಶನ್ ಸೊಸಾಯಿಟಿ ಎನ್ನುವ ಹೆಸರಿನಲ್ಲಿ ಶಿಕ್ಷಣ ಸಂಸ್ಥೆಯನ್ನು ಆರಂಭಿಸುವ ಐತಿಹಾಸಿಕ ನಿರ್ಣಯ ಕೈಕೊಳ್ಳಲಾಯಿತು. ಕಲ್ಮಠದಲ್ಲಿ ನಡೆದ ಸಭೆಯಲ್ಲಿಯೇ ಸಂಸ್ಥೆಯ ಆಡಳಿತ ಮಂಡಳಿಯನ್ನು ರಚಿಸಲಾಯಿತು.[೨೩] ಸಂಸ್ಥೆಯ ಸಂಸ್ಥಾಪಕ ಅಧ್ಯಕ್ಷರನ್ನಾಗಿ ಅರಟಾಳ ರುದ್ರಗೌಡರು, ಹಾಗೂ ಸಂಸ್ಥೆಯ ಸಂಸ್ಥಾಪಕ ಸಾಮಾನ್ಯ ಸದಸ್ಯರನ್ನಾಗಿ ಚಚಡಿಯ ಶ್ರೀಮಂತ ಸರದಾರ ವೀರಭದ್ರಪ್ಪ ನಾಯಕ ಬಹಾದ್ದೂರ ದೇಸಾಯಿಯವರನ್ನು, ಬೆಳಗಾವಿಯ ಗೌರವ ನ್ಯಾಯಾಧೀಶರೂ ಧನಕರೂ ಆಗಿದ್ದ ಶ್ರೀ ವೈಜಪ್ಪ ಅಡಿವೆಪ್ಪ ಅನಿಗೋಳ ಅವರನ್ನು ಮತ್ತು ಸಂಸ್ಥಾಪಕ ಆಜೀವ ಸದಸ್ಯರನ್ನಾಗಿ ಶ್ರೀ ಪಂಡಿತಪ್ಪ ಚಿಕ್ಕೋಡಿ, ಶ್ರೀ ಎಂ. ಆರ್. ಸಾಖರೆ, ಶ್ರೀ ಎಚ್.ಎಫ್. ಕಟ್ಟೀಮನಿ, ಶ್ರೀ ಎಸ್. ಎಸ್. ಬಸವನಾಳ , ಶ್ರೀ ಬಿ. ಬಿ. ಮಮದಾಪೂರ ಮತ್ತು ಶ್ರೀ ಬಿ. ಎಸ್. ಹಂಚಿನಾಳ ಅವರನ್ನು ಒಳಗೊಂಡ ಆಡಳಿತ ಮಂಡಳೀ ಸ್ಥಾಪನೆಗೊಂಡಿತು. ಕಲ್ಮಠದಲ್ಲಿ ದಿನಾಂಕ: ೧೧-೧೧-೧೯೧೬ ರಂದು ಸಭೆ ಜರುಗಿ ಮುಂದೆ ೧೩-೧೧-೧೯೧೬ ರಂದು ಬೆಳಗಾವಿಯ ಕೋಟೆಯೊಳಗೆ ಒಂದು ಚಿಕ್ಕ ಮನೆಯನ್ನು ಬಾಡಿಗೆ ಹಿಡಿದು ಆಂಗ್ಲೋವರ್ನಾಕ್ಯುಲರ ಶಾಲೆಯನ್ನು ಪ್ರಾರಂಭಿಸಲಾಯಿತು. ಈ ಹಿನ್ನೆಲೆಯಲ್ಲಿ ಕೆ.ಎಲ್.ಇ. ಸಂಸ್ಥೆಯ ಇತಿಹಾಸದೊಂದಿಗೆ ಕಲ್ಮಠದ ಹೆಸರು ಹಾಸುಹೊಕ್ಕಾಗಿದೆ.

**ನಾಗನೂರು ರುದ್ರಾಕ್ಷಿಮಠ :** ಬೆಳಗಾವಿಯ ಧಾರ್ಮಿಕ, ಸಾಮಾಜಿಕ, ಸಾಹಿತ್ಯಿಕ, ಶೈಕ್ಷಣಿಕ ವಲಯದಲ್ಲಿ ನಾಗನೂರು ರುದ್ರಾಕ್ಷಿಮಠವು ಮಹತ್ವದ ಬದಲಾವಣೆಗಲನ್ನುಂಟು ಮಾಡಿದೆ. ಸಾಂಸ್ಕೃತಿಕವಾಗಿ ಬೆಳಗಾವಿಯು ಮಹತ್ವವನ್ನು ಪಡೆಯುವಲ್ಲಿ ಶ್ರೀಮಠದ ಪಾತ್ರ ಪ್ರಮುಖವಾಗಿದೆ. ಧಾರ್ಮಿಕವಾಗಿ ಲಿಂಗವಂತರ ಮಠವಾಗಿದ್ದರೂ ಗಡಿಭಾಗದಲ್ಲಿ ಕನ್ನಡ ಕಟ್ಟುವ ಕಾರ್ಯದಲ್ಲಿ ತೊಡಗಿ ಎಲ್ಲ ಧರ್ಮ, ಜಾತಿಯವರನ್ನು ತನ್ನ ತೆಕ್ಕೆಗೆ ತೆಗೆದುಕೊಂಡು ಬೆಳಗಾವಿಯಲ್ಲಿ ಕನ್ನಡ ಸಂಸ್ಕೃತಿಯನ್ನು ಉಳಿಸಿ ಬೆಳೆಸುವಲ್ಲಿ ನಿರತವಾಗಿದೆ.

ಮೂಲತಃ ಇದು ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲೂಕಿನ ನಾಗನೂರಿನ ಮಠವಾಗಿದ್ದರಿಂದ ಇದಕ್ಕೆ ನಾಗನೂರು ಮಠವೆಂದೇ ಕರೆಯಲಾಗುತ್ತದೆ. ನಾಗನೂರಿನಲ್ಲಿರುವ ಮಠದಲ್ಲಿ ರುದ್ರಾಕ್ಷಿಯ ಕಿರೀಟವಿರುದರಿಂದ ಈ ಮಠಕ್ಕೆ ರುದ್ರಾಕ್ಷಿಮಠವೆಂಬ ಹೆಸರು ಬಂದಿದೆ.

ಈ ಮಠದ ಏಳನೆಯ ಪೀಠಾಧಿಪತಿಗಳಾದ ಡಾ. ಶಿವಬಸವ ಮಹಾಸ್ವಾಮಿಗಳು ಬೆಳಗಾವಿಯನ್ನು ಕರ್ಮಭೂಮಿಯನ್ನಾಗಿ ಮಾಡಿಕೊಂಡು ಬೆಳಗಾವಿಯ ಸರ್ವತೋಮುಖ ಅಭಿವೃದ್ಧಿಗೆ ಕಾರಣರಾದರು. ಧರ್ಮ ರಕ್ಷಣೆ–ಪ್ರಸಾರದ ಜೊತೆಗೆ ಸ್ವಾತಂತ್ರ್ಯ ಹೋರಾಟ, ಏಕೀಕರಣ ಚಳುವಳಿ, ಸಾಮಾಜಿಕ ಕಾಳಜಿ, ಶಿಕ್ಷಣ, ದಾಸೋಹ ಮುಂತಾದ ಮಹತ್ವದ ಕಾರ್ಯದಲ್ಲಿ ತೊಡಗಿಕೊಂಡರು.

ವಿದ್ಯಾರ್ಥಿ ಪ್ರಸಾದ ನಿಲಯ ಸ್ಥಾಪನೆ : ದಿನಾಂಕ ೬–೬–೧೯೩೨ ರಂದು ಬೆಳಗಾವಿಯಲ್ಲಿ ವಿದ್ಯಾರ್ಥಿ ಪ್ರಸಾದ ನಿಲಯವನ್ನು ಸ್ಥಾಪಿಸುವುದರ ಮೂಲಕ ಬೆಳಗಾವಿಯಲ್ಲಿ ಶಿಕ್ಷಣಕ್ರಾಂತಿಗೆ ಕಾರಣರಾದರು. (ಈ ವಿಷಯವನ್ನು ಶಿಕ್ಷಣ ಅಧ್ಯಾಯದಲ್ಲಿ ವಿವರಿಸಲಾಗಿದೆ) ಈ ಪ್ರಸಾದ ನಿಲಯದ ಪ್ರಮುಖವಾದ ಸಾಮಾಜಿಕ ಮಹತ್ವವೆಂದರೆ ಇಲ್ಲಿ ಎಲ್ಲ ಜಾತಿ, ಧರ್ಮ, ಮತದವರಿಗೆ ಅವಕಾಶವನ್ನು ಕಲ್ಪಿಸಲಾಯಿತು. ಎಲ್ಲರಿಗೂ ಒಂದೇ ತೆರನಾದ ಊಟ ಉಪಚಾರ ಪ್ರೀತಿ ದೊರೆಯುತ್ತಿತ್ತು. ಹೀಗಾಗಿ ಇಲ್ಲಿ ವಿದ್ಯಾರ್ಥಿಗಳು ಸೌಹಾರ್ದತೆಯಿಂದ ಇರುತ್ತಿದ್ದರು. ಬಸವಣ್ಣನವರ ಸಮಾನತೆಯ ತತ್ವವನ್ನು ಈ ವಿದ್ಯಾರ್ಥಿ ಪ್ರಸಾದ ನಿಲಯದ ಮೂಲಕ ಜಾರಿಗೊಳಿಸಿದರು.

ಈ ವಿದ್ಯಾರ್ಥಿ ನಿಲಯದಲ್ಲಿ ನಿತ್ಯ ಪ್ರಾರ್ಥನೆ ನಡೆಯುತ್ತಿತ್ತು. ವಚನ, ಮಂತ್ರಗಳನ್ನು ವಿದ್ಯಾರ್ಥಿಗಳು ನಿತ್ಯ ಪಠಣ ಮಾಡುತ್ತಿದ್ದರು. ಶ್ರಾವಣ ಮಾಸವಂತೂ ವೈಭವದಿಂದ ಆಚರಣೆಗೊಳ್ಳುತ್ತಿತ್ತು. ಆನ ಭಕ್ತರು ಸ್ವಾಮಿಗಳನ್ನು ಪೂಜೆ, ಪ್ರಸಾದಕ್ಕೆ ಆಮಂತ್ರಿಸುತ್ತಿದ್ದರು. ಆ ಸಂದರ್ಭದಲ್ಲಿ ಶ್ರೀಗಳ ಜೊತೆಗೆ ಹೋಗಲು ವಿದ್ಯಾರ್ಥಿಗಳು ಸ್ನಾನ ಮಾಡಿ ಹಣೆಯ ಮೇಲೆ ಭಸ್ಮ ಧರಿಸಿ, ಮೈಮೇಲೆ ಬಿಳಿ ವಸ್ತ್ರ ಹೊದ್ದು ಬಿಳಿ ಲುಂಗಿಯನ್ನು ಸುತ್ತಿಕೊಂಡು, ಕೈಯಲ್ಲಿ ತಾಟು ಚರಿಗೆ ತೆಗೆದುಕೊಂಡು ಸಾಲಾಗಿ ಹೋಗುವ ದೃಶ್ಯ ಬೆಳಗಾವಿ ಜನರಲ್ಲಿ ಭಕ್ತಿಯ ಭಾವವನ್ನು ಬೆಳೆಸುತ್ತಿತ್ತು. ನಾಗನೂರು ಮಠವು ಮಕ್ಕಳಲ್ಲಿ ಒಳ್ಳೆಯ ಸಂಸ್ಕಾರವನ್ನು ಬೆಳೆಸಿತು. ಈ ವಾತಾವರಣದಿಂದ ಪ್ರೇರಿತರಾದ ಎಷ್ಟೋ ಜನ ಶ್ರೀಮಂತರೂ ಕೂಡ ತಮ್ಮ ಮಕ್ಕಳನ್ನು ಪ್ರಸಾದ ನಿಲಯದಲ್ಲಿ ಶಿಕ್ಷಣ ಪಡೆಯಲು ಕಳುಹಿಸಿದರು. ಈ ಪ್ರಸಾದ ನಿಲಯವು ಕೆಲವು ವರ್ಷ ಶಹಪೂರದಲ್ಲಿ ಸ್ಥಳಾಂತರಗೊಂಡು ಮುಂದೆ ಬೆಳಗಾವಿಯ ಮಾರುತಿ ಬೀದಿಯಲ್ಲಿಯ ಮನೆಗೆ ಸ್ಥಳಾಂತರಗೊಂಡಿತು. ಅಂದು ಈ ಮನೆಯು ದೆವ್ವದ ಮನೆಯೆಂದು ಪ್ರಚಾರ ಪಡೆದಿತ್ತು. ಮೂಢನಂಬಿಕೆಗಳಲ್ಲಿ ವಿಶ್ವಾಸವಿಲ್ಲದ ಶಿವಬಸವ ಸ್ವಾಮಿಗಳು ಅದೇ ಮನೆಯಲ್ಲಿಯೇ ವಿದ್ಯಾರ್ಥಿಗಳ ಜೊತೆಗೆ ಉಳಿದು ಮೂಢನಂಬಿಕೆಗಳಿಗೆ ಕಡಿವಾಣ ಹಾಕಿದರು. ವಿದ್ಯಾರ್ಥಿಗಳ ಸಂಖ್ಯೆ ಬೆಳೆದಂತೆ ಈ ಮನೆಯು ಸಾಲದಾಯಿತು. ಹೀಗಾಗಿ ಊರ ಹೊರಗಿನ ಪುಣೆ–ಬೆಂಗಳೂರ ಹೆದ್ದಾರಿಯ ಪಕ್ಕದಲ್ಲಿ ಕುಮಾರೇಶ್ವರ ಪ್ರಸಾದ ನಿಲಯವನ್ನು ಕಟ್ಟಿಸಿದರು. ಭವ್ಯವಾಗಿ ನಿರ್ಮಾಣಗೊಂಡ ಈ ಕಟ್ಟಡವು ಬೆಳಗಾವಿಯ ಪ್ರಮುಖ ವಿದ್ಯಾರ್ಥಿ ತಾಣವಾಯಿತು. ಅಂದಿನಿಂದ ಇಂದಿನವರೆಗೂ ಈ ಪ್ರಸಾದ ನಿಲಯವು ಬೆಳಗಾವಿಯ ಬೆಳವಣಿಗೆಯಲ್ಲಿ ಮಹತ್ವದ ಪಾತ್ರವನ್ನು ವಹಿಸಿತು. ಅಷ್ಟೇ ಅಲ್ಲ ಉತ್ತರ

ಕರ್ನಾಟಕ ಭಾಗದ ಸಾವಿರಾರು ಜನ ವಿದ್ಯಾರ್ಥಿಗಳು ಇಲ್ಲಿ ಉಳಿದು ಶಿಕ್ಷಣಪಡೆದು ಇಂದು ದೇಶ ವಿದೇಶಗಳಲ್ಲಿ ದೊಡ್ ದೊಡ್ಡ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಹೀಗೆ ನಾಗನೂರು ರುದ್ರಾಕ್ಷಿಮಠದ ಪ್ರಸಾದ ನಿಲಯವು ಶೈಕ್ಷಣಿಕ, ಸಾಮಾಜಿಕ, ಸಾಂಸ್ಕೃತಿಕವಾಗಿ ಮಹತ್ವವನ್ನು ಪಡೆದುಕೊಂಡಿತು.

ಖಾದಿ ಸಂಸ್ಕಾರ : ದೇಶವು ಸ್ವಾತಂತ್ರ್ಯ ಹೋರಾಟದಲ್ಲಿ ಮಗ್ನವಾಗಿದ್ದ ಕಾಲದಲ್ಲಿ ಬೆಳಗಾವಿಯ ಹತ್ತಿರದ ಹುದಲಿಗೆ ಮಹಾತ್ಮಾ ಗಾಂಧೀಜಿಯವರು. ಬೆಳಗಾವಿಯ ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ಶ್ರೀ ಗಂಗಾಧರರಾವ್ ದೇಶಪಾಂಡೆಯವರ ಆಮಂತ್ರಣದ ಮೇರೆಗೆ ೧೯೩೭ ರಲ್ಲಿ  ಬಂದಿದ್ದರು. ಈ ಸಂದರ್ಭದಲ್ಲಿ ದೇಶಪಾಂಡೆಯವರು ಶ್ರೀಗಳನ್ನು ಅಲ್ಲಿನ ಕಾರ್ಯಕ್ರಮಕ್ಕೆ ಬರಮಾಡಿಕೊಂಡು ಗಾಂಧೀಜಿಯವರ ಭೇಟಿ ಮಾಡಿಸಿ, ಶ್ರೀಗಳು ಜಾತಿ-ಧರ್ಮ ಭೇದವಿಲ್ಲದೆ ಮಾಡುತ್ತಿರುವ ಸಾಮಾಜಿಕ ಶೈಕ್ಷಣಿಕ ಸೇವೆಯನ್ನು ತಿಳಿಸಿದರು. ಗಾಂಧೀಜಿಯವರು ಸಂತೋಷದಿಂದ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿ ಶ್ರೀಗಳಿಗೆ ಖಾದಿ ಬಟ್ಟೆ ಧರಿಸಲು ತಿಳಿಸಿದರು. ಅಂದಿನಿಂದ ಶ್ರೀಗಳು ಕೊನೆಯವರೆಗೂ ಖಾದಿ ಬಟ್ಟೆಯನ್ನೇ ಧರಿಸಿದರು.

ವೀರಶೈವ ಮಠದ ಸ್ವಾಮಿಗಳು ಕಾವಿ ಬಟ್ಟೆಯನ್ನೇ ಧರಿಸುವ ಸಂಪ್ರದಾಯವಿದೆ. ಕಾವಿ ಬಟ್ಟೆಗೆ ಸಮಾಜದಲ್ಲಿ ಗೌರವದ ಸ್ಥಾನವೂ ಇದೆ. ಅದು ವೈರಾಗ್ಯದ ಸಂಕೇತವೆಂದೇ ಅದನ್ನು ಧರಿಸುತ್ತಾರೆ. ಆದರೆ ಶಿವಬಸವ ಸ್ವಾಮಿಗಳು ಈ ಸಂಪ್ರದಾಯವನ್ನು ದೇಶಸೇವೆಯ ಸಲುವಾಗಿ ಬದಲಾಯಿಸಿದರು. ಜಾತಿ, ಧರ್ಮಕ್ಕಿಂತಲೂ ದೇಶ ದೊಡ್ಡದು ಎನ್ನುವುದನ್ನು ಈ ಮೂಲಕ ಸಾಧಿಸಿ ತೋರಿಸಿದರು. ಅಂತೆಯೇ ಬೆಳಗಾವಿಯಲ್ಲಿ ನಡೆದ ಸ್ವಾತಂತ್ರ್ಯ ಹೋರಾಟದ ಬೆನ್ನೆಲುಬಾಗಿ  ನಿಂತರು. ಎಷ್ಟೋ ಜನ ಸ್ವಾತಂತ್ರ್ಯಯೋಧರು ಮಠದಲ್ಲಿ ಆಶ್ರಯವನ್ನು ಪಡೆದು ಸ್ವಾತಂತ್ರ್ಯ ಹೋರಾಟದಲ್ಲಿ ತೊಡಗಿದರು. ಹೀಗೆ ನಾಗನೂರು ಮಠವು ಕೇವಲ ಪೂಜೆ, ಪ್ರಸಾದ, ಮಂತ್ರ ಮುಂತಾದ ಧಾರ್ಮಿಕ ಸಂಪ್ರದಾಯಗಳನ್ನು ಆಚರಿಸದೆ ವಿಭಿನ್ನವಾದ ಸಾಮಾಜಿಕ ಕಾರ್ಯಗಳಲ್ಲಿ ತೊಡಗಿಕೊಂಡಿದ್ದು ಗಮನಾರ್ಹವಾಗಿದೆ.

ಕರ್ನಾಟಕದ ಏಕೀಕರಣ ಸಂದರ್ಭದಲ್ಲಿಯೂ ಶಿವಬಸವಸ್ವಾಮಿಗಳವರ ಕಾರ್ಯ ಶ್ಲಾಘನೀಯವಾಗಿದೆ. ೧೯೫೬ ರ ಭಾಷಾವಾರು ರಾಜ್ಯಗಳ ಪುನರ್ ರಚನೆಯ ಸಂದರ್ಭದಲ್ಲಿ ಬೆಳಗಾವಿಯನ್ನು ಮರಾಠಿಗರು ಮಹಾರಾಷ್ಟ್ರಕ್ಕೆ ಸೇರಿಸಬೇಕೆಂದು ಹೋರಾಟ ನಡೆಸಿದ್ದರು. ಕನ್ನಡಿಗರೂ ಕೂಡ ಮರಾಠರ ವಿರುದ್ಧ ತೀವ್ರ ಹೋರಾಟ ನಡೆಸಿದ್ದರು. ಈ ವಿವಾದವನ್ನು ಬಗೆಹರಿಸಲು ಕೇಂದ್ರ ಸರಕಾರ ನೇಮಿಸಿದ ಫಜಲ್-ಅಲಿ ಆಯೋಗವು ಬೆಳಗಾವಿಗೆ ಬಂದಾಗ ಆಯೋಗದ ಮುಂದೆ ಸ್ವಾಮೀಜಿಯವರು ಧೈರ್ಯವಾಗಿ ತಮ್ಮ ವಾದವನ್ನು ಮಂಡಿಸಿದರು. ಕರ್ನಾಟಕ ಎಂದೆಂದಿಗೂ ಕರ್ನಾಟಕದ್ದು ಎಂದು ತಿಳಿಸಿದರು (ಇವರ ಅಭಿಪ್ರಾಯವನ್ನು ರಂಗನಾಥ ದಿವಾಕರರು, ಗುದ್ಲೆಪ್ಪ ಹಳ್ಳಿಕೇರಿಯವರು ಆಯೋಗದವರ ಮುಂದೆ ಇಂಗ್ಲಿಷಿಗೆ ಭಾಷಾಂತರಿಸಿ ಹೇಳಿದರು).

ಶ್ರೀಗಳಿಂದ ಶಿವಾಲಯ ಸ್ಥಾಪನೆ : ಜವಾಹರಲಾಲ ನೆಹರು ಮೆಡಿಕಲ್ ಕಾಲೇಜಿನಲ್ಲಿ ಅಖಿಲ ಕರ್ನಾಟಕ ಕನ್ನಡ ವೈದ್ಯಕೀಯ ಸಾಹಿತ್ಯ ಸಮ್ಮೇಳನವನ್ನು ೧೯೭೩ ರಲ್ಲಿ ಏರ್ಪಡಿಸಲಾಗಿತ್ತು. ಈ ಸಂದರ್ಭದಲ್ಲಿ ಹಣ ಸಂಗ್ರಹಿಸಲಾಗಿತ್ತು. ಸಮ್ಮೇಳನದ ನಂತರ ಹೆಚ್ಚಿನ ಹಣ ಉಳಿಯಿತು. ಆಗ ಶ್ರೀಗಳು ಕಾಲೇಜಿನ ಆವರಣದಲ್ಲಿ ಶಿವಾಲಯವನ್ನು ಸ್ಥಾಪಿಸುವಂತೆ ಸಲಹೆ ನೀಡಿದರು. ಅದರಂತೆ ಕಾಶಿಯಿಂದ ನರ್ಮದೇಶ್ವರ ಲಿಂಗವನ್ನು ತಂದು ಪ್ರತಿಷ್ಠಾಪಿಸಲಾಯಿತು. ಇಂದು ಈ ಶಿವಾಲಯವು ನಗರದ ಪ್ರಮುಖ ಧಾರ್ಮಿಕ ನೆಲೆಯಾಗಿದೆ. ಶಿವರಾತ್ರಿ ಆಚರಣೆಯ ಸಂದರ್ಭದಲ್ಲಿ ವಿಶೇಷವಾದ ಪೂಜೆ ನೆರವೆರುತ್ತದೆ.

ಕಲ್ಯಾಣ ಮಂಟಪ ಸ್ಥಾಪನೆ : ಬೆಳಗಾವಿಯಲ್ಲಿ ವೀರಶೈವ ಸಮಾಜದವರು ಹೆಚ್ಚಿನ ಸಂಖ್ಯೆಯಲ್ಲಿರುವರು. ಆದರೆ ಅವರ ಮದುವೆ ಕಾರ್ಯಗಳಿಗೆ ಒಂದು ಕಾರ್ಯಾಲಯವಾಗಲಿ ಸುಸಜ್ಜಿತ ದೇವಾಲಯವಾಗಲಿ ಇರಲಿಲ್ಲ. ಇದನ್ನರಿತ ಶ್ರೀಗಳು ಮಠದ ಮಗ್ಗುಲಲ್ಲಿಯೇ ಒಂದು ಕಲ್ಯಾಣ ಮಂಟಪವನ್ನು ಕಟ್ಟಿಸಿದರು. ಅದಕ್ಕೆ ಪ್ರಭುದೇವ ಕಲ್ಯಾಣ ಮಂಟಪ ಎಂದು ನಾಮಕರಣ ಮಾಡಲಾಯಿತು. ಇದರ ನಿರ್ಮಾಣದಿಂದ ಬೆಳಗಾವಿ ನಗರ ಹಾಗೂ ಜಿಲ್ಲೆಯ ಬಹುಭಾಗದ ಜನರಿಗೆ ಮದುವೆ ಕಾರ್ಯಕ್ರಮಕ್ಕೆ ಅನುಕೂಲವಾಯಿತು. ಇದರಿಂದ ಲಿಂಗವಂತ ಸಮಾಜಕ್ಕೆ ಬಲ ಬಂದಂತಾಯಿತು. ಈ ಕಲ್ಯಾಣ ಮಂಟಪದಲ್ಲಿ ಮದುವೆ ಕಾರ್ಯಕ್ರಮಗಳಲ್ಲದೆ ರಾಜಕೀಯ, ಸಾಹಿತ್ಯಿಕ, ಸಾಂಸ್ಕೃತಿಕ, ಕಾರ್ಯಕ್ರಮಗಳು ನಡೆದು ಬೆಳಗಾವಿಯಲ್ಲಿ ಕನ್ನಡ ವಾತಾವರಣ ನಿರ್ಮಾಣಕ್ಕೆ ಕಾರಣವಾಯಿತು.

ಪ್ರಭು ಮಹಾ ಸ್ವಾಮಿಗಳು : ಇವರು ರುದ್ರಾಕ್ಷಿಮಠದ ಎಂಟನೆಯ ಪೀಠಾಧಿಕಾರಿಗಳು ಶಿವಬಸವ ಸ್ವಾಮಿಗಳು ತಮಗೆ ವಯಸ್ಸಾಯಿತೆಂದು ರುದ್ರಾಕ್ಷಿಮಠಕ್ಕೆ ಪ್ರಭುಸ್ವಾಮಿಗಳನ್ನು ಪಟ್ಟಾಧಿಕಾರಿಗಳನ್ನಾಗಿ ನೇಮಿಸಿ ಅವರಿಗೆ ಮಠದ ನಿರ್ವಹಣೆಯನ್ನು ಒಪ್ಪಿಸಿದರು. ಆದರೆ ಇವರು ತೀವ್ರ ಹೃದಯಾಘಾತದಿಂದ ಬಹು ಬೇಗನೆ ಲಿಂಗೈಕ್ಯರಾದರು. ಆದರೂ ತಮ್ಮ ಅಧಿಕಾರ ಅವಧಿಯಲ್ಲಿ ಶ್ರೀಮಠದ ಏಳ್ಗೆಗಾಗಿ ಹಲವಾರು ಮಹತ್ವದ ಕಾರ್ಯಗಳನ್ನು ಕೈಕೊಂಡರು. ಶಿಶುವಿಹಾರ, ಪ್ರಾಥಮಿಕ ಶಾಲೆ, ಸಂಸ್ಕೃತ ಪಾಠ ಶಾಲೆ, ಪ್ರೌಢಶಾಲೆ ಮುಂತಾದ ಶಾಲೆ, ಕಾಲೇಜುಗಳನ್ನು ಸ್ಥಾಪಿಸುವಲ್ಲಿ ಪರಿಶ್ರಮವಹಿಸಿದರು.

ಸಿದ್ಧರಾಮ ಮಹಾಸ್ವಾಮಿಗಳು : ಇವರು ರುದ್ರಾಕ್ಷಿಮಠದ ಒಂಬತ್ತನೆಯ ಪೀಠಾಧಿಕಾರಿಗಳಾಗಿ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಇವರ ಆಗಮನದಿಂದ ಶ್ರೀಮಠಕ್ಕೆ ಹೊಸ ಚೈತನ್ಯ ಮೂಡಿ ಬಂದಿದೆ. ಪೂಜ್ಯ ಡಾ. ಶಿವಬಸವಸ್ವಾಮಿಗಳವರ ಮಾರ್ಗದಲ್ಲಿಯೇ ಸಾಗಿ ಅನ್ನದಾಸೋಹ, ಜ್ಞಾನದಾಸೋಹ, ಮಠದ ಸಾಂಪ್ರದಾಯಿಕ ಕಾರ್ಯಗಳಾದ ಪುರಾಣ ಪ್ರವಚನಗಳು. ಶಿವಾನುಭವ ತರಬೇತಿ, ಶ್ರಾವಣ ಮಾಸದ ಮಹಾಪಾದ ಪೂಜೆ–ಮುಂತಾದವುಗಳನ್ನು ನಡೆಸಿಕೊಂಡು ಬರುವುದರ ಜೊತೆಗೆ ಹೊಸ ಹೊಸ ಯೋಜನೆಗಳನ್ನು ಕಾರ್ಯಗಳನ್ನು ಕೈಕೊಂಡು ಶ್ರೀಮಠದ ಬೆಳವಣಿಗೆಗೆ

ಕಾರಣರಾಗಿದ್ದಾರೆ. ಬೆಳಗಾವಿಯಲ್ಲಿ ಜರಗುವ ಪ್ರತಿಯೊಂದು ಕನ್ನಡ ಕಾರ್ಯಕ್ರಮಗಳಿಗೆ ಶ್ರೀಮಠದ ಸಹಾಯ ಸಹಕಾರ, ಪ್ರೇರಣೆ, ಪ್ರೋತ್ಸಾಹ ಇರುತ್ತದೆ. ಅಂತೆಯೇ ಬೆಳಗಾವಿಯಲ್ಲಿ ಜರುಗಿದ ಸಾಹಿತ್ಯ ಸಮ್ಮೇಳನಗಳು, ವಿಧಾನ ಮಂಡಲದ ಅಧಿವೇಶನಗಳು, ವಿಶ್ವಕನ್ನಡ ಸಮ್ಮೇಳನ ಹೀಗೆ ಪ್ರತಿಯೊಂದು ಕಾರ್ಯಕ್ರಮಗಳು ಅತ್ಯಂತ ಯಶಸ್ವಿಯಾಗುತ್ತವೆ. ಇಂದು ನಾಗನೂರು ರುದ್ರಾಕ್ಷಿಮಠವು ಹಲವಾರು ಶಿಕ್ಷಣ ಸಂಸ್ಥೆಗಳನ್ನು ಹೊಂದಿದೆ. ಶಿಶುವಿಹಾರದಿಂದ ಹಿಡಿದು ಇಂಜನಿಯರಿಂಗ್ ವಿದ್ಯಾಭ್ಯಾಸದವರೆಗಿನ ಶಾಲೆ, ಕಾಲೇಜಿಗಳನ್ನು ನಿರ್ವಹಿಸುತ್ತಿದೆ. ಅವುಗಳಲ್ಲಿ ಮುಖ್ಯವಾಗಿ ಶಿಶುವಿಹಾರ, ಸಂಸ್ಕೃತ ಪಾಠ ಶಾಲೆ, ಪ್ರಾಥಮಿಕ, ಮಾಧ್ಯಮಿಕ ಶಾಲೆಗಳು, ಪದವಿಪೂರ್ವ ಮಹಾವಿದ್ಯಾಲಯ, ಅಂಗನವಾಡಿ ಕಾರ್ಯಕರ್ತೆಯರ ತರಬೇತಿ, ಕೈಗಾರಿಕಾ ತರಬೇತಿ ಕೇಂದ್ರಗಳು, ತಾಂತ್ರಿಕ ಶಿಕ್ಷಣಾಲಯ, ಮಾರ್ಗದರ್ಶಿ ಕೇಂದ್ರಗಳು, ಸಂಶೋಧನ ಗ್ರಂಥಾಲಯ, ವಿಜ್ಞಾನ ಕೇಂದ್ರ, ವೀರಶೈವ ಅಧ್ಯಯನ ಅಕಾಡೆಮಿ–ಹೀಗೆ ಮಹತ್ವದ ಶಿಕ್ಷಣ ಕೇಂದ್ರಗಳನ್ನು ತೆರೆದು ಬೆಳಗಾವಿಯ ಶೈಕ್ಷಣಿಕ ವಲಯವನ್ನು ಗಟ್ಟಿಗೊಳಿಸಿದೆ.

ಜಯಂತಿ ಉತ್ಸವ: ಪೂಜ್ಯ ಡಾ. ಶಿವಬಸವ ಮಹಾಸ್ವಾಮಿಗಳ ಜಯಂತಿ ಉತ್ಸವವನ್ನು ಪ್ರತಿವರ್ಷ ಭಕ್ತಿ ಗೌರವ, ಶ್ರದ್ಧೆಯಿಂದ ಆಚರಿಸಲಾಗುತ್ತಿದೆ. ಈ ಉತ್ಸವದ ಅಂಗವಾಗಿ ವಿಶೇಷ ಕಾರ್ಯಕ್ರಮಗಳು ಜರುಗುತ್ತವೆ. ಕಲೆ, ಸಾಹಿತ್ಯ, ಸಂಸ್ಕೃತಿಯನ್ನು ಕುರಿತ ವಿಚಾರ ಸಂಕಿರಣಗಳು, ಗೋಷ್ಠಿಗಳು, ನಾಡಿನ ಪ್ರಸಿದ್ಧ ವಿದ್ವಾಂಸರಿಂದ ಉಪನ್ಯಾಸಗಳು ನಡೆಯುತ್ತವೆ. ವಿವಿಧ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸಿದ ಮಹನೀಯರನ್ನು ಗುರುತಿಸಿ ಸತ್ಕಾರ, ಪ್ರಶಸ್ತಿಗಳನ್ನು ವಿತರಿಸಲಾಗುತ್ತದೆ. ಹೀಗೆ ಶ್ರೀ ಶಿವಬಸವ ಸ್ವಾಮಿಗಳ ಜಯಂತಿಯನ್ನು ಅರ್ಥಪೂರ್ಣವಾಗಿ ಆಚರಿಸಲಾಗುತ್ತದೆ.

ಹೀಗೆ ಬೆಳಗಾವಿಯ ಧಾರ್ಮಿಕ, ಸಾಮಾಜಿಕ, ಸಾಹಿತ್ಯಕ ಸಾಂಸ್ಕೃತಿಕ ವಲಯದಲ್ಲಿ ಶ್ರೀಮಠವು ಮಹತ್ವದ ಕಾರ್ಯಗಳನ್ನು ಕೈಗೊಂಡಿದೆ. ಅಂತೆಯೇ ಈ ಮಠದ ಸೇವೆಯನ್ನು ಗುರುತಿಸಿ ಏಕೀಕರಣ ಪ್ರಶಸ್ತಿಯನ್ನು ಕರ್ನಾಟಕ ಸರಕಾರ ನೀಡಿತು.

ಕಾರಂಜಿಮಠ : ಬೆಳಗಾವಿಯ ಪ್ರಮುಖ ಲಿಂಗವಂತ ಮಠಗಳಲ್ಲಿ ಕಾರಂಜಿಮಠವು ವಿಭಿನ್ನ ಕಾರ್ಯಗಳನ್ನು ಕೈಕೊಂಡ ವಿಶಿಷ್ಟವಾದ ಮಠವಾಗಿದೆ. ಶಿವಬಸವನಗರದ ಹೊರವಲಯದಲ್ಲಿರುವ ಈ ಮಠವು ಶಿವಾನುಭವಗೋಷ್ಠಿಗಳನ್ನು ನಡೆಸುವ ಮೂಲಕ ಧರ್ಮ ಜಾಗೃತಿಯನ್ನುಂಟು ಮಾಡುತ್ತಿದೆ. ಈ ಮಠದ ಪೀಠಾಧಿಕಾರಿಗಳಾದ ಪೂಜ್ಯ ಶ್ರೀ ಗುರುಸಿದ್ಧ ಮಹಾಸ್ವಾಮಿಗಳು ಜನಪರ ಕಾರ್ಯಗಳನ್ನು ಕೈಕೊಂಡು ಬೆಳಗಾವಿಯ ಸಾಂಸ್ಕೃತಿಕ ವಲಯದಲ್ಲಿ ಹೊಸ ಬೆಳಕನ್ನು ಮೂಡಿಸಿದ್ದಾರೆ.

ಕಾರಂಜಿಮಠವು ಎರಡು ನೂರು ವರ್ಷಗಳ ಇತಿಹಾಸವನ್ನು ಹೊಂದಿದೆ. ಶಹಪುರದ ಹಟ್ಟಿಹೊಳಿ ಓಣಿಯಲ್ಲಿ ಮೊದಲು ಕಾರಂಜಿಮಠ ಸ್ಥಾಪನೆಯಾಯಿತು. ನಿಸರ್ಗ ಉದ್ಯಾನದ ಮಧ್ಯದಲ್ಲಿದ್ದ ಅಂದಿನ ಮಠದ ಸುತ್ತಲೂ ಕಾರಂಜಿ ಬುಗ್ಗೆಗಳಿದ್ದವು. ಹೀಗಾಗಿ ಅದಕ್ಕೆ ಕಾರಂಜಿಮಠವೆಂದು ಕರೆಯಲಾಯಿತು. ಮುಂದೆ ಈ ಮಠದ ಮತ್ತೊಂದು ಶಾಖೆ ಬೆಳಗಾವಿಯ ರವಿವಾರ ಪೇಟೆಯಲ್ಲಿ ಆರಂಭಗೊಂಡಿತು(ಮೊದಲು ಬೆಳಗಾವಿ ಮತ್ತು ಶಹಪೂರ ಪ್ರತ್ಯೇಕವಾದ ಊರುಗಳಾಗಿದ್ದವು)

ಪೀಠ ಪರಂಪರೆ : ಇದುವರೆಗೆ ಹಲವಾರು ಪೂಜ್ಯರು ಈ ಮಠದ ಪೀಠಾಧಿಕಾರಿಗಳಾಗಿ ಸೇವೆ ಸಲ್ಲಿಸಿರುವರು. ಆಧಾರಗಳ ಕೊರತೆಯಿಂದ ಮಠದ ಪರಂಪರೆಯ ಗುರುಗಳ ಕೆಲವು ಹೆಸರುಗಳನ್ನು ಮಾತ್ರ ದಾಖಲಿಸಲಾಗಿದೆ. ಅವರೆಂದರೆ

೧. ಶ್ರೀ. ಮ.ನಿ.ಪ್ರ ಮುರುಘೇಂದ್ರ ಸ್ವಾಮಿಗಳು

೨. ಶ್ರೀ. ಮ.ನಿ.ಪ್ರ ಗುರುಸಿದ್ಧ ಸ್ವಾಮಿಗಳು

೩. ಶ್ರೀ ಮ.ನಿ.ಪ್ರ ಬಸವಲಿಂಗ ಸ್ವಾಮಿಗಳು

೪. ಶ್ರೀ ಮ.ನಿ.ಪ್ರ ಗುರುಸಿದ್ಧ ಸ್ವಾಮಿಗಳು

ಶ್ರೀ ಮುರುಘೇಂದ್ರ ಸ್ವಾಮಿಗಳ ಹಾಗೂ ಶ್ರೀ ಗುರುಸಿದ್ಧ ಸ್ವಾಮಿಗಳ ಗದ್ದುಗೆಗಳು ಶಹಾಪುರದಲ್ಲಿ ಸ್ಥಾಪನೆಯಾಗಿವೆ. ಶ್ರೀ ಬಸವಲಿಂಗ ಸ್ವಾಮಿಗಳು ಮೂಲ ಮಠ ಹಾಗೂ ರವಿವಾರ ಪೇಟೆಯ ಮಠವನ್ನು ಅಭಿವೃದ್ಧಿಪಡಿಸಿ ಅನೇಕ ಧಾರ್ಮಿಕ, ಸಾಮಾಜಿಕ ಕಾರ್ಯಗಳನ್ನು ಕೈಕೊಂಡಿದ್ದರು.

ಇವರು ಹಲವಾರು ಸಂಘ ಸಂಸ್ಥೆಗಳಿಗೆ ಉದಾರವಾದ ದೇಣಿಗೆಯನ್ನು ನೀಡಿದ್ದಾರೆ. ಲಿಂಗರಾಜ ಕಾಲೇಜಿನ ಆಟದ ಬಯಲಲ್ಲಿರುವ ಜಮಖಾನಾ ಹಾಲ್ ಕಾರಂಜಿಮಠ ಜಮಖಾನಾ ಹಾಲ್ ಎಂದು ಹೆಸರುಹೊತ್ತಿದೆ. ಕೆ. ಎಲ್.ಇ. ಸಂಸ್ಥೆಯು ನೀಡಿದ ದೇಣಿಗೆಯನ್ನು ಸ್ಮರಿಸಲು ಅವರ ಹೆಸರಿನ್ನಿಟ್ಟಿದೆ. ಶಹಪೂರದ ಮೂಲ ಮಠದ ಹಿಂದಿನ ಜಾಗದಲ್ಲಿ ಭಕ್ತರ ಬೇಡಿಕೆಯಂತೆ ದಾನಮ್ಮದೇವಿ ದೇವಾಲಯವನ್ನು ನಿರ್ಮಿಸಲು ದಾನವನ್ನು ನೀಡಿದರು. ಇದು ಅವರ ಉದಾರ ಹೃದಯಕ್ಕೆ ಸಾಕ್ಷಿಯಾಗಿದೆ.

ಪೂಜ್ಯ ಶ್ರೀ ಬಸವಲಿಂಗ ಮಹಾಸ್ವಾಮಿಗಳು ಲಿಂಗೈಕ್ಯರಾದ ನಂತರ ಪೂಜ್ಯ ಶ್ರೀ ಗುರುಸಿದ್ಧ ಸ್ವಾಮಿಗಳು ಅಧಿಕಾರವಹಿಸಿಕೊಂಡರು. ಪೂಜ್ಯ ಶ್ರೀ ಶಿವಬಸವ ಮಹಾಸ್ವಾಮಿಗಳ ಅಮೃತ ಹಸ್ತದಿಂದ ಶ್ರೀ ಗುರುಸಿದ್ಧ ಸ್ವಾಮಿಗಳಿಗೆ ೧೯೯೧ ರಂದು ಷಟ್‌ಸ್ಥಲ ಬ್ರಹ್ಮೋಪದೇಶ ಹಾಗೂ ನಿರಂಜನ ಪಟ್ಟಾಧಿಕಾರ ಕಾರ್ಯ ನೆರವೇರಿತು. ನಿಡಸೋಸಿಯ ಸ್ವಾಮೀಜಿಯವರು ಗುರುಸಿದ್ಧ ಸ್ವಾಮಿಗಳಿಗೆ ಚಿನ್ಮಯಾನುಗ್ರಹ ದಯಪಾಲಿಸಿದರು.

ಇವರು, ಬೆಳಗಾವಿ ನಗರದ ಅದರಲ್ಲೂ ನೆಹರುನಗರ, ಶಿವಬಸವನಗರ, ಅಶೋಕನಗರ, ಮಹಾಂತೇಶ ನಗರ, ಆಂಜನೇಯನಗರ, ರುಕ್ಮೀಣಿನಗರ, ಮಾಳಮಾರುತಿ ಬಡಾವಣೆಗಳ ಮನೆಮನೆಯ ಗುರುಗಳಾಗಿದ್ದಾರೆ. ಹಿಂಡಲಗಾ ಜೈಲಿನ ಕೈದಿಗಳ ಮನ ಪರಿವರ್ತಿಸಿ ಅವರು ಉತ್ತಮ ನಾಗರಿಕರಾಗಿ ಬಾಳುವಂತೆ ಮಾಡಿದ್ದರೆ.

ಪ್ರತಿ ಸೋಮವಾರ ಸಂಜೆ ಪ್ರಾರ್ಥನೆ ಹಾಗೂ ಧ್ಯಾನ, ಪ್ರತಿ ತಿಂಗಳು ಮೊದಲನೇ ಸೋಮವಾರ ವಿವಿಧ ವಿದ್ವಾಂಸರಿಂದ ಶಿವಾನುಭವ ಗೋಷ್ಠಿ ನಿರಂತರವಾಗಿ ನಡೆದುಕೊಂಡು ಬರುತ್ತಿವೆ. ಅಲ್ಲದೆ ವಿವಿಧ ರಂಗಗಳಲ್ಲಿ ಗಣನೀಯ ಸೇವೆ ಸಲ್ಲಿಸಿದ ಸಾಹಿತಿ, ಕಲಾವಿದ, ಶಿಕ್ಷಕ, ಡಾಕ್ಟರ್, ಇಂಜನೀಯರ್ ಮತ್ತು ಸಾಮಾಜಿಕ ಸೇವಾ ಕರ್ತರನ್ನು ಗುರುತಿಸಿ ಅವರನ್ನು ಸತ್ಕರಿಸುವ ಕಾರ್ಯಕ್ರಮವನ್ನು ಪ್ರತಿವರ್ಷ ನಡೆಸುತ್ತಾರೆ.

ಮಠದಲ್ಲಿ ಅರ್ಥಪೂರ್ಣವಾದ ಮಾತೃಮಂಡಳಿ ಇದ್ದು ಇಲ್ಲಿ ವರ್ಗ ಭೇದವಿಲ್ಲ. ಲಿಂಗಭೇದವಿಲ್ಲ. ಇಲ್ಲಿಯ ಸಂಗೀತ ಬಳಗವು ಹಲವಾರು ಸಂಗೀತ ಕಾರ್ಯಕ್ರಮಗಳನ್ನು ನಡೆಸುತ್ತ ಬಂದಿದೆ. ಶಿವರಾತ್ರಿಯ ವಿಶೇಷ ಶಿವಾನುಭವ, ಶ್ರಾವಣ ಮಾಸದ ಸೋಮವಾರಗಳಲ್ಲಿ ಧರ್ಮ ಸಂಸ್ಕಾರ ಕಾರ್ಯಗಳು ಹಾಗೂ ಮುಸ್ಸಂಜೆ ಸಾಹಿತ್ಯ ಸಂಗೀತ ಸಮಾರಾಧನೆ ಕಾರ್ಯಕ್ರಮಗಳು ನಿರಂತರವಾಗಿ ನಡೆಯುತ್ತವೆ. ಬೌದ್ಧಿಕ ವಿಕಾಸ ಮತ್ತು ಆದರ್ಶ ಬದುಕನ್ನು ಕಟ್ಟಿಕೊಳ್ಳಲು ಸಹ ಕಾರಂಜಿಮಠ ಅನೇಕ ರಚನಾತ್ಮಕ ಯೋಜನೆಗಳನ್ನು ಹಾಕಿಕೊಂಡಿದೆ. ಮಕ್ಕಳ ಸಾಹಿತಿಗಳನ್ನು ಪ್ರೋತ್ಸಾಹಿಸಲು ಡೆಪ್ಯೂಟಿ ಚನ್ನಬಸಪ್ಪ ಪ್ರತಿಷ್ಠಾನ ನಿರ್ಮಿಸಿ ೫೦೦೦ ರೂ. ಬಹುಮಾನವನ್ನು ನೀಡಿ ಸತ್ಕರಿಸಲಾಗುತ್ತದೆ.

ವಿದ್ಯಾರ್ಥಿಗಳನ್ನು ಪ್ರೊತ್ಸಾಹಿಸಲು ಲಿಂಗರಾಜ ಮಹಾವಿದ್ಯಾಲಯದ ಆದರ್ಶ ವಿದ್ಯಾರ್ಥಿ ಹಾಗೂ ವಿದ್ಯಾರ್ಥಿನಿಗೆ ತಲಾ ೧೦೦೦ ರೂ. ಬಹುಮಾನವನ್ನು ಪ್ರತಿವರ್ಷ ನೀಡಲಾಗುತ್ತಿದೆ. ಅಲ್ಲದೆ ಯೋಗ, ಧ್ಯಾನ, ಇಷ್ಟಲಿಂಗ ಪೂಜಾವಿಧಾನ, ಷಟ್‌ಸ್ಥಲದ ಬಗೆಗೆ ಪ್ರವಚನ, ಅಂತರಜಾತಿ ವಿವಾಹ, ವಿಧವಾ ವಿವಾಹ, ಹೀಗೆ ಹಲವಾರು ಮಹತ್ವದ ಕಾರ್ಯಗಳು ಕಾರಂಜಿಮಠದಿಂದ ಜರುಗುತ್ತಿವೆ. ಈ ಎಲ್ಲ ಕಾರ್ಯಗಳನ್ನು ಶ್ರೀ ಮಠದ ಪೂಜ್ಯ ಗುರುಸಿದ್ಧ ಸ್ವಾಮಿಗಳು ಅನುಷ್ಠಾನಗೊಳಿಸಿ ಸಾಮಾಜಿಕ ಜಾಗೃತಿಯನ್ನುಂಟು ಮಾಡಿ ಬೆಳಗಾವಿಯ ಉತ್ತಮ ಸಂಸ್ಕೃತಿಯ ನಿರ್ಮಾಣಕ್ಕೆ ಕಾರಣರಾಗಿದ್ದಾರೆ.

**ಬಸದಿಗಳು :**

ಬೆಳಗಾವಿಯ ಪ್ರಾಚೀನ ಧರ್ಮಗಳಲ್ಲಿ ಪ್ರಮುಖವಾದ ಜೈನಧರ್ಮವು ಬಸದಿಗಳ ಮೂಲಕ ಧಾರ್ಮಿಕ ಚಟುವಟಿಕೆಗಳನ್ನು ನಡೆಸುತ್ತಿತ್ತು. ಜೈನ ಮುನಿಗಳ ವಾಸಸ್ಥಾನವಾದ ಬಸದಿಗಳು ಧಾರ್ಮಿಕ ಕೇಂದ್ರಗಳಾಗಿದ್ದವು. ಬೆಳಗಾವಿ ನಗರದಲ್ಲಿ ಇಂದು ಒಟ್ಟು ಹದಿನಾರು ಬಸದಿಗಳು ಅಸ್ತಿತ್ವದಲ್ಲಿವೆ. ಇನ್ನೂ ಹಲವಾರು ಬಸದಿಗಳು

ಇದ್ದುದರ ಬಗೆಗೆ ಐತಿಹ್ಯಗಳು, ಸ್ಮಾರಕಗಳು, ಉಲ್ಲೇಖಗಳು ಕಂಡುಬರುತ್ತವೆ. ಈಗಿನ ಕಪಿಲೇಶ್ವರ ದೇವಾಲಯಕ್ಕೆ ಹೋಗುವ ದಾರಿಯಲ್ಲಿ ಸಾಲು ಬಸದಿಗಳು ಇದ್ದವು ಎನ್ನುವ ಉಲ್ಲೇಖವು ಬೆಳಗಾವಿ ಶಾಸನದಲ್ಲಿ ಉಲ್ಲೇಖಗೊಂಡಿದೆ.[೨೪] ಈ ಬಸದಿಗಳು ಹಾಗೂ ಈಗಿನ ಬಸ್ ನಿಲ್ದಾಣದ ಪಕ್ಕದಲ್ಲಿರುವ ಕೋಟೆಯೊಳಗೆ ಇದ್ದವೆಂದು ಹೇಳುವ ೧೦೮ ಬಸದಿಗಳು ಮತ್ತು ಸದ್ಯದಲ್ಲಿರುವ ೧೬ ಬಸದಿಗಳು ಇವೆಲ್ಲವು ಕೂಡಿ ಸುಮಾರು ೨೦೦ ಬಸದಿಗಳು ಬೆಳಗಾವಿಯಲ್ಲಿದ್ದವು ಎನ್ನುವುದನ್ನು ಡಾ. ಬಿ. ಆರ್. ಹಂದೂರವರು ಉಲ್ಲೇಖಿಸಿದ್ದಾರೆ.[೨೫] ಕ್ರಿ.ಶ. ೧೨೦೦ ಹೊತ್ತಿಗೆ ರಟ್ಟರ ಕಾಲದಲ್ಲಿ ಕಮಲ ಬಸದಿಯ ಜೊತೆಗೆ ಇನ್ನೂ ಎರಡು ಬಸದಿಗಳು ನಿರ್ಮಾಣಗೊಂಡಿದ್ದವು.[೨೬] ಆದರೆ ಈಗ ಎರಡು ಬಸದಿಗಳು ಮಾತ್ರ ಕಂಡುಬರುತ್ತವೆ. ಬಹುಶಃ ಮತ್ತೊಂದು ಬಸದಿಯನ್ನು ಹಾಳು ಮಾಡಿರಬಹುದಾಗಿದೆ. ವಿಜಾಪುರದ ಆದಿಲ್‌ಶಹಾಗಳ ಕಾಲದಲ್ಲಿ ಬೆಳಗಾವಿಯಲ್ಲಿ ಆಳ್ವಿಕೆ ನಡೆಸಿದ ಅಸದಖಾನನು ಕೋಟೆಯೊಳಗಿನ ಬಸದಿಗಳನ್ನೆಲ್ಲ ನಾಶಮಾಡಿರುವನೆಂದು ಉಲ್ಲೇಖಿಸುತ್ತಾರೆ.[೨೭]ಆದರೆ ಒಂದು ವೇಳೆ ಆತನು ಬಸದಿಗಳನ್ನು ನಾಶಮಾಡಿದ್ದೇ ಆದರೆ ಕಮಲಬಸದಿಯನ್ನು ನಾಶ ಮಾಡುತ್ತಿದ್ದನು. ಅಲ್ಲದೆ ಅಸದಖಾನನ ವ್ಯಕ್ತಿತ್ವವನ್ನು ಕುರಿತು ಉಲ್ಲೇಖಗೊಂಡಿರುವ ವಿಷಯವನ್ನು ಗಮನಿಸಿದಾಗ ಅಸದಖಾನನು ಸರ್ವಧರ್ಮವನ್ನೂ ಸಮಾನದೃಷ್ಟಿಯಿಂದ ಕಾಣುತ್ತಿದ್ದನೆನ್ನುವುದು ತಿಳಿದುಬರುತ್ತದೆ.[೨೮] ಕೋಟೆಯೊಳಗಿನ ಕುರುಹುಗಳನ್ನು ಗಮನಿಸಿದಾಗ ಹಲವಾರು ಬಸದಿಗಳು ಇದ್ದಿರಬಹುದಾದ ಸಾಧ್ಯತೆಗಳಿವೆ.

ಈಗಿರುವ ಕಮಲ ಬಸದಿಯನ್ನು ರಟ್ಟರ ನಾಲ್ಕನೆಯ ಕಾರ್ತವೀರ್ಯನ ಮಂತ್ರಿಯಾದ ಬೀಚಿರಾಜನು ಕ್ರಿ.ಶ.೧೨೦೪ ರಲ್ಲಿ ಕಟ್ಟಿಸಿದನು.[೨೯] ಈ ಬಸದಿಯನ್ನು ಕಟ್ಟಲು ಮೂಲ ಪ್ರೇರಣೆ ಶಾಂತಿನಾಥ ತೀರ್ಥಂಕರ. ಈತನು ಈ ಜಿನಾಲಯದ ಪ್ರಥಮ ಆಚಾರ್ಯನಾಗಿ ಜೈನಧರ್ಮ ಪ್ರಸಾರದ ಕಾರ್ಯವನ್ನು ಕೈಕೊಂಡನು. ಅನುಪಮ ತಪಸ್ವಿಯಾದ ಈತನು ಕಮಲ ಬಸದಿಯ ಜೀರ್ಣೋದ್ಧಾರಕ್ಕಾಗಿ ಶ್ರಮಿಸಿದನು. ಈತನನ್ನು ಬೆಳಗಾವಿ ಶಾಸನದಲ್ಲಿ "ನಿರೂಪಯ ತಪೋನಿಧಾನದ್ಧರಣೀಶ್ವರ ಜಾವಿ ಮೌವರಲಾವಿತ ಪದರೆಂದುರುಮದದಿಂದ ಕೀರ್ತಿಪುರ್ವ್ವರೆ ವಿಭು ಶುಭಚಂದ್ರದೇವ ಭಟ್ಟಾರಕರಂ[೩೦] ಎಂದು ಸ್ತುತಿಸಲಾಗಿದೆ. ರಟ್ಟರ ನಾಲ್ಕನೆಯ ಕಾರ್ತವೀರ್ಯನ ಕಾಲದಲ್ಲಿ ಇನ್ನೂ ಹಲವಾರು ಮುನಿಗಳು ಜೈನಧರ್ಮವನ್ನು ಪ್ರಸಾದ ಮಾಡಿದ್ದಾರೆ. ಮುನಿಚಂದ್ರ, ಜಿನಮುನಿ, ಮಾಧವಚಂದ್ರ, ಮಲಧಾರಿಮುನಿ ನೇಮಿಚಂದ್ರ, ಮುಂತಾದವರು ಜೈನ ಮುನಿಗಳಾಗಿ, ಕವಿಗಳಾಗಿ ಪಂಡಿತರಾಗಿ, ರಾಜರಾಗಿ ಜೈನಧರ್ಮ, ಸಾಹಿತ್ಯ ಸಾಂಸ್ಕೃತಿಕ ವಿಶಿಷ್ಟವಾದ ಕೊಡುಗೆಯನ್ನು ನೀಡಿದ್ದಾರೆ.

ಜೈನರು ಸ್ತ್ರೀ ದೇವತೆಯರನ್ನು ಭಕ್ತಿ ಶ್ರದ್ಧೆಗಳಿಂದ ಆರಾಧಿಸುತ್ತಿದ್ದರು. ಹೀಗಾಗಿ ಯಕ್ಷಿಣಿ, ಪದ್ಮಾವತಿಯರ ಬಸದಿಗಳೂ ನಿರ್ಮಾಣಗೊಂಡವು. ಬೆಳಗಾವಿಯಲ್ಲಿ ಕೋಟೆಯ ಆವರಣದಲ್ಲಿ ಕಮಲ ಬಸದಿಯ ಎದುರಿಗೆ

ಇರುವ ಬಸದಿಯು ಯಕ್ಷಿಯ ಬಸದಿಯಾಗಿರಬಹುದೆಂದು ಡಾ. ಬಿ. ಆರ್. ಹಂದೂರರು ಉಲ್ಲೇಖಿಸುತ್ತಾರೆ.[೨೧] ಈ ಬಸದಿಯ ಕೆತ್ತನೆಯಲ್ಲಿ ಯಕ್ಷಿಯ ಹಲವಾರು ಮೂರ್ತಿಗಳನ್ನು ಕಾಣಬಹುದು. ಶೆಟ್ಟಿಗಲ್ಲಿಯಲ್ಲಿರುವ ಪದ್ಮಾವತಿ ಬಸದಿಯು ಅತ್ಯಂತ ಪ್ರಸಿದ್ಧಿಯನ್ನು ಹೊಂದಿದೆ. ಬೆಳಗಾವಿ ನಗರದಲ್ಲಿ ಇನ್ನೂ ಹಲವಾರು ಬಸದಿಗಳು ಕಂಡುಬರುತ್ತವೆ. ಅವುಗಳಲ್ಲಿ ಮುಖ್ಯವಾಗಿ ಪಾರ್ಶ್ವನಾಥ, ಚಂದ್ರಪ್ರಭ, ನೇಮಿನಾಥ ಮುಂತಾದವರ ಹೆಸರಿನಲ್ಲಿವೆ. ಶಹಪುರದಲ್ಲಿ ಲೇಂಗಡೆ ಬಸದಿ (ಇದನ್ನು ದಿಗಂಬರ ಜೈನ ಬಸದಿ ಎಂದು ಕರೆಯುತ್ತಾರೆ) ಶಹಪುರದ ಹೊಸೂರ ಭಾಗದಲ್ಲಿ ಒಂದು ಜೈನಮಠ ಹೀಗೆ ಬೆಳಗಾವಿ ನಗರದ ಎಲ್ಲ ಧಾರ್ಮಿಕ ನೆಲೆಗಳಲ್ಲಿ ನಿತ್ಯ ಪೂಜೆ, ಜಪ, ಸ್ತುತಿ ಮುಂತಾದ ಧಾರ್ಮಿಕ ಕಾರ್ಯಚಟುವಟಿಕೆಗಳು ನಡೆಯುತ್ತವೆ. ಬಸದಿಗಳಲ್ಲಿ ಹೇಳಲ್ಪಡುವ ಮಂತ್ರಗಳು ಸಂಸ್ಕೃತದಲ್ಲಿರುತ್ತವೆ. ಪಂಡಿತರು ಮಂತ್ರಗಳನ್ನು ಪಠಿಸುತ್ತ ಪೂಜೆಯಲ್ಲಿ ತೊಡಗುತ್ತಾರೆ.

ಬೆಳಗಾವಿಯ ಬಸದಿಗಳಲ್ಲಿ ನವರಾತ್ರಿಯ ಸಂದರ್ಭದಲ್ಲಿ ನಡೆಯುವ ವಿಶೇಷವಾದ ಪೂಜೆಯು ಆಕರ್ಷಣೀಯವಾಗಿರುತ್ತದೆ. ಆಶ್ವಿನ ಮಾಸದಲ್ಲಿ ಸಾಮಾನ್ಯವಾಗಿ ಎಲ್ಲಾ ಧರ್ಮದ ದೇವಾಲಯಗಳಲ್ಲಿ ವಿಶೇಷ ಪೂಜೆ ನಡೆಯುತ್ತದೆ. ಆಶ್ವಿನ ಶುದ್ಧ ಪ್ರತಿಪದೆಯಿಂದ ಘಟಸ್ಥಾಪನೆಯಿಂದ ಆರಂಭವಾಗಿ ನವಮಿಯವರೆಗೆ ಈ ವಿಶೇಷ ಪೂಜೆಯು ಬಸದಿಗಳಲ್ಲಿ ಕಂಡುಬರುತ್ತದೆ.

**ಮಹಾವೀರ ಜಯಂತಿ :** ಮಹಾವೀರ ಜಯಂತಿಯನ್ನು ಬೆಳಗಾವಿಯಲ್ಲಿ ಅತ್ಯಂತ ವಿಜ್ರಂಭಣೆಯಿಂದ ಆಚರಿಸುತ್ತಾರೆ. ಶಹಪೂರ, ಹೊಸೂರ, ಬಸವನಗಲ್ಲಿ, ಪಾಂಡೂಳಗಲ್ಲಿ ಭೆಂಡಿಬಜಾರ–ಹೀಗೆ ಅನೇಕ ಕಡೆಗಳಲ್ಲಿ ಮಹಾವೀರ ತೀರ್ಥಂಕರ ಜಯಂತಿ ಉತ್ಸವವು ನಡೆಯುತ್ತದೆ. ಈ ಸಂದರ್ಭದಲ್ಲಿ ಪಲ್ಲಕ್ಕಿ ಮೆರವಣಿಗೆ ನಡೆಯುತ್ತದೆ. ಜೈನ ಮುನಿಗಳು, ಪಂಡಿತರು, ಜೈನಬಾಂಧವರಲ್ಲದೆ ಬೇರೆ ಧರ್ಮ, ಜಾತಿಯ ಜನರೂ ಮೆರವಣಿಗೆಯಲ್ಲಿ ಪಾಲ್ಗೊಳ್ಳುತ್ತಾರೆ. ಶಹಪುರದ ಶ್ರೀ ಜಿನಸೇನ ಮಹಾರಾಜರ ಮಠ(ಜೈನಮಠ) ಹಾಗೂ ಹೊಸೂರ ಭಾಗದಲ್ಲಿರುವ ಶ್ರೀ ಲಕ್ಷ್ಮೀಸೇನ ಮಹಾರಾಜರ ಮಠದಲ್ಲಿ ವಿಶೇಷವಾದ ಕಾರ್ಯಕ್ರಮಗಳನ್ನು ಆಯೋಜಿಸಲಾಗುತ್ತದೆ.

**ಮಸಿದಿಗಳು :**

ಬೆಳಗಾವಿ ನಗರ ಒಂದರಲ್ಲೇ ಸುಮಾರು ೨೫ ರಿಂದ ೩೦ ಹಳೆಯ ಕಾಲದ ಮಸೀದಿಗಳಿವೆ. ಕೋಟೆಯೊಳಗೆ ಸಫಾ ಮಸೀದಿ, ಜಾಮಿಯಾ ಮಸೀದಿಗಳಿವೆ. ದರ್ಬಾರಗಲ್ಲಿ ಜಮ್ಮ ಮಸೀದಿಯಿದೆ, ಮಾಲಿಗಲ್ಲಿ ಭಗವಾನ್ ಗಲ್ಲಿ, ಚಾಂದುಗಲ್ಲಿ, ಖಾದರ್ ಗಲ್ಲಿ, ಶಿವಾಜಿನಗರ, ಅಜಂ ನಗರ, ಮುಜಾವರ ಗಲ್ಲಿ, ಪೋಲೀಸ್ ಕ್ವಾಟರ್ಸ್, ಬಾಪಟ ಗಲ್ಲಿ, ಖಾಸಬಾಗ್, ಆನಿಗೋಳ ಮುಂತಾದ ಪ್ರದೇಶಗಳಲ್ಲಿ ವಿಜಾಪುರದ ಆದಿಲ್ ಶಾಹಿ ಕಾಲದಲ್ಲಿ ನಿರ್ಮಿಸಿದ ಮಸೀದಿಗಳು ಕಂಡುಬರುತ್ತವೆ.

**ಸುಫಾ ಮಸೀದಿ :** ನಗರದ ಕೋಟೆಯೊಳಗಿರುವ ಸುಫಾ ಮಸೀದಿಯು ಬೆಳಗಾವಿಯ ಪ್ರಾಚೀನ ಮಸೀದಿಗಳಲ್ಲಿ ಮಹತ್ವದ್ದಾಗಿದೆ. ಈ ಮಸೀದಿಯ ಒಳಗಿರುವ ಕಂಬಗಳ ಮೇಲೆ ಎರಡು ಅರೇಬಿಕ್ ಮತ್ತು ಪರ್ಶಿಯನ್ ಭಾಷೆಯ ಶಾಸನಗಳು ಇವೆ. ೧೬ನೆಯ ಶತಮಾನದ ಲಿಪಿಯಲ್ಲಿರುವ ಈ ಶಾಸನಗಳು ಖುರಾನಿನ ಪದ್ಯಗಳನ್ನು ಒಳಗೊಂಡಿವೆ.

ಈ ಮಸೀದಿಯು ಅಸದಖಾನ (ವಿಜಾಪುರ ಸುಲ್ತಾನರ ಮಂತ್ರಿ)ನ ಆಳ್ವಿಕೆಯಲ್ಲಿ ನಿರ್ಮಾಣಗೊಂಡು ಮುಸ್ಲಿಂ ಧರ್ಮದ ಆಚರಣೆಯ ಪ್ರಮುಖ ಕೇಂದ್ರವಾಗಿ ಮಾರ್ಪಟ್ಟಿತ್ತು. ಈ ಮಸೀದಿಯ ನಿರ್ವಹಣೆಗಾಗಿ, ಅಸದಖಾನನು ಭೂಮಿಯನ್ನು ನೀಡಿದ್ದನು.[೩೨] ಈ ಭೂಮಿಯಿಂದ ಬಂದ ಆದಾಯದಿಂದ ಮಸೀದಿಯ ರಮಜಾನ್ ಮುಂತಾದ ಧಾರ್ಮಿಕ ಆಚರಣೆಗಳನ್ನು ನಡೆಸಿಕೊಂಡು ಹೋಗಲಾಗುತ್ತಿತ್ತು. ಮಸೀದಿಯ ಮುಖ್ಯಸ್ಥನು ಧರ್ಮದ ನಿಯಮಗಳನ್ನು ಸರಿಯಾಗಿ ಪಾಲಿಸಿಕೊಂಡು ಈ ಭೂಮಿಯ ಉತ್ಪನ್ನದಲ್ಲಿಯೇ ತನ್ನ ಜೀವನವನ್ನು ಪಾಲಿಸುತ್ತಿದ್ದನು. ನಿತ್ಯ ಪ್ರಾರ್ಥನೆ, ಜನರಲ್ಲಿ ಧರ್ಮ ಜಾಗೃತಿ ಮುಂತಾದ ಕಾರ್ಯಗಳನ್ನು ಮಾಡುತ್ತಿದ್ದನು. ಅಲ್ಲದೆ ಸಮಾಜದಲ್ಲಿಯ ಸಣ್ಣ ಪುಟ್ಟ ಕಾರಣಕ್ಕೆ ನಡೆಯುವ ಜಗಳ, ವೈಮನಸ್ಸು, ಅಸಮಾಧಾನ ಮುಂತಾದವುಗಳನ್ನು ಬಗೆಹರಿಸಿ ಜನರ ಮಧ್ಯದಲ್ಲಿ ಸ್ನೇಹ ಬಾಂಧವ್ಯ ಬೆಳೆಯುವಂತೆ ಮಾಡುತ್ತಿದ್ದನು.

**ಜಾಮೀಯ ಮಸೀದಿ :** ದರಬಾರ ಗಲ್ಲಿಯ ಜಾಮೀಯ ಮಸಿದಿಯು ಬೆಳಗಾವಿಯ ಮುಸ್ಲಿಂ ಸಮುದಾಯದವರ ಧಾರ್ಮಿಕ ಚಟುವಟಿಕೆಗಳ ಮಸೀದಿಯಾಗಿದೆ. ಈ ಮಸೀದಿಯಲ್ಲಿರುವ ಒಂದು ಶಾಸನದ ಪ್ರಕಾರ ಇದನ್ನು ಶೇರ್‌ಖಾನ ಎಂಬುವನು(೧೫೮೫–೮೬) ಕಟ್ಟಿಸಿದ ಬಗ್ಗೆ ಉಲ್ಲೇಖವಿದೆ. ವಿಜಾಪುರದ ಎರಡನೆಯ ಆದಿಲ್‌ಶಾಹಿಯ ಅಧಿಕಾರಿಯಾಗಿದ್ದ ಶೇರಖಾನನು ಬೆಳಗಾವಿಯ ಆಡಳಿತದ ನಿರ್ವಹಣೆಯನ್ನು ಮಾಡುತ್ತಿದ್ದನು. ಈ ಮಸೀದಿಯಲ್ಲಿ ಮತ್ತೊಂದು ಶಾಸನವು ಮೊದಲನೆಯ ಆಲಿ ಆದಿಲ್ ಷಾಹನ ಕಾಲದ್ದಾಗಿದ್ದು ಅದು ಅಮಿನ್ ಅಲ್–ಮುಲ್ಕನ ಮಸೀದಿಗೆ ದೀಪದ ವ್ಯವಸ್ಥೆ ನೀರಿನ ವ್ಯವಸ್ಥೆ ಮತ್ತು ಹಾಸುಗೆಗಳ ನಿರ್ವಹಣೆಗಾಗಿ ದಿನವೊಂದಕ್ಕೆ ಒಂದು ಟಂಕವನ್ನು ಖಾನ್ ಜನ್ನತ್ ಖಾನನು ತಾನು ಕಟ್ಟಿಸಿದ ಅಂಗಡಿಗಳಿಂದ ಬರುವ ಆದಾಯದಲ್ಲಿ ದಾನರೂಪದಲ್ಲಿ ಕೊಡಬೇಕೆಂಬುದನ್ನು ತಿಳಿಸುತ್ತದೆ.[೩೩] ಅಂದರೆ ಧಾರ್ಮಿಕ ಕಾರ್ಯಗಳನ್ನು ನಿರ್ವಹಿಸಲು ಬೇಕಾದ ಖರ್ಚಿನ ಹಣವನ್ನು ತೆರಿಗೆ, ದಾನದ ರೂಪದಲ್ಲಿ ರಾಜರು ನೀಡುವ ವ್ಯವಸ್ಥೆಯನ್ನು ಮಾಡುತ್ತಿದ್ದರು. ಇದರಿಂದ ಧಾರ್ಮಿಕ ಕಾರ್ಯಗಳು ಯಾವುದೇ ಆರ್ಥಿಕ ತೊಂದರೆಗಳಿಲ್ಲದೆ ನಡೆಯುತ್ತಿದ್ದವು. ಜಾಮಿಯ ಮಸಿದಿಯು ಬೆಳಗಾವಿಯ ಮಸೀದಿಗಳಲ್ಲಿಯೇ ದೊಡ್ಡದಾಗಿದೆ. ಈ ಮಸೀದಿಯಲ್ಲಿ ಏಕಕಾಲಕ್ಕೆ ಒಂದು ಸಾವಿರ ಜನ ಪ್ರಾರ್ಥನೆ ಸಲ್ಲಿಸಬಹುದಾಗಿದೆ. ಮಸೀದಿಯು ರಂಜನ್ ಹಬ್ಬದ ಸಂದರ್ಭದಲ್ಲಿ ಒಂದು ತಿಂಗಳವರೆಗೆ ಪ್ರತಿನಿತ್ಯ ಜನರಿಂದ ತುಂಬಿಕೊಂಡಿರುತ್ತದೆ. ದರಬಾರಗಲ್ಲಿಗೆ ಒಂದು ರೀತಿಯ ಹಬ್ಬದ ವಾತಾವರಣ ನಿರ್ಮಾಣಗೊಂಡಿರುತ್ತದೆ. ಇಲ್ಲಿ ಎಲ್ಲಾ ತರಹದ ವಸ್ತುಗಳು ದೊರೆಯುವುದರಿಂದ ವ್ಯಾಪಾರಿ ಕೇಂದ್ರವೂ ಆಗಿದೆ. ಎಲ್ಲಾ ಜಾತಿ ಧರ್ಮದ ಜನರು ಇಲ್ಲಿ ವಸ್ತುಗಳನ್ನು ಖರೀದಿಸುತ್ತಾರೆ. ಇದರಿಂದ

ದಿನಕ್ಕೆ ಲಕ್ಷಾಂತರ ರೂಪಾಯಿಗಳ ವಹಿವಾಟು ನಡೆಯುತ್ತದೆ. ಬೆಳಗಾವಿಯ ಸಾಮರಸ್ಯ ಬದುಕಿಗೆ ಈ ಮಸಿದಿಯು ಮಹತ್ವದ ಪಾತ್ರವನ್ನು ವಹಿಸುತ್ತಿದೆ.

**ಅಸದಖಾನ ದರ್ಗಾ:** ಬೆಳಗಾವಿ ನಗರದ ಪ್ರಮುಖ ದರ್ಗಾಗಳಲ್ಲಿ ಅಸದಖಾನ ದರ್ಗಾ ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ. ಹಿಂದೂ, ಮುಸ್ಲಿಂ, ಕ್ರೈಸ್ತ ಎಲ್ಲಾ ಧರ್ಮದವರು ಈ ದರ್ಗಾಕ್ಕೆ ನಡೆದುಕೊಳ್ಳುತ್ತಾರೆ. ಕರ್ನಾಟಕದ ಬೇರೆ ಬೇರೆ ಭಾಗಗಳಿಂದಲೂ ಇಲ್ಲಿ ಬಂದು ಭೆಟ್ಟಿಕೊಡುತ್ತಾರೆ. ಅಸದಖಾನನು ವಿಜಾಪುರದ ಆದಿಲ್ ಶಾಹಿಗಳ ಅತ್ಯಂತ ಪ್ರಾಮಾಣಿಕ ಅಧಿಕಾರಿಯಾಗಿದ್ದನು. ಇದರಿಂದ ಬೆಳಗಾವಿ ಪ್ರದೇಶದ ಆಡಳಿತವನ್ನು ಅವನಿಗೆ ವಹಿಸಿಕೊಡಲಾಯಿತು. ಇಸ್ಮಾಯಿಲ್ ಶಹನ ಆಳ್ವಿಕೆಯ ಸಂದರ್ಭದಲ್ಲಿ (ಕ್ರಿ.ಶ.೧೫೧೧ ರಲ್ಲಿ) ಈತನು ಬೆಳಗಾವಿಯಲ್ಲಿ ಆಳ್ವಿಕೆ ನಡೆಸಿದನು. ಅಸದಖಾನನು ಬೆಳಗಾವಿಯನ್ನು ೩೮ ವರ್ಷಗಳ ಕಾಲ ಆಳಿದನು.[೩೪] ಈತನ ಆಳ್ವಿಕೆಯ ಕಾಲದಲ್ಲಿ ಎಲ್ಲಾ ಧರ್ಮದವರನ್ನು ಸಮಾನ ದೃಷ್ಟಿಕೋನದಿಂದ ಕಂಡನು. ಹೀಗಾಗಿ ಈತನಲ್ಲಿ ಇಲ್ಲಿಯ ಜನರು ದೈವತ್ವವನ್ನು ಕಂಡರು.

ಈತನ ಮರಣದ ನಂತರ ಈ ಗೋರಿಯನ್ನು ಬೆಳಗಾವಿಯಲ್ಲಿ ನಿರ್ಮಿಸಲಾಯಿತು. ಈಗಿನ ಕ್ಯಾಂಪ್ ಪ್ರದೇಶದಲ್ಲಿ ಈತನ ಗೋರಿಯು ಕಂಡುಬರುತ್ತದೆ. ಇಲ್ಲಿ ಹಲವಾರು ನಂಬಿಕೆಗಳು ಸಂಪ್ರದಾಯಗಳು ಬೆಳೆದು ಬಂದಿವೆ. ಈ ದರ್ಗಾಕ್ಕೆ ಬೇಡಿಕೊಂಡರೆ ಚರ್ಮ ರೋಗವು ವಾಸಿಯಾಗುತ್ತದೆ ಎನ್ನುವ ನಂಬಿಕೆ ಇದೆ. ಹೀಗಾಗಿ ಎಲ್ಲಾ ಜಾತಿಯ ಜನರು ಇಲ್ಲಿ ಬಂದು ಬೇಡಿಕೊಳ್ಳುತ್ತಾರೆ. ಮಕ್ಕಳಿಲ್ಲದವರು, ದೀರ್ಘವಾದ ಖಾಯಿಲೆಗಳಿಂದ ಬಳಲುತ್ತಿರುವವರು, ಭೂತ, ಪಿಶಾಚಿಕಾಟವಿದ್ದವರು ಹೀಗೆ ಹಲವಾರು ಸಮಸ್ಯೆಗಳನ್ನು ಹೊತ್ತು ಈ ದರ್ಗಾಕ್ಕೆ ಬರುತ್ತಾರೆ.

ವಿಶೇಷವಾದ ನಂಬಿಕೆ, ಭಕ್ತಿ, ಶ್ರದ್ಧೆಗಳನಿಟ್ಟುಕೊಂಡವರು ಈ ದರ್ಗಾಕ್ಕೆ ನಡೆದುಕೊಳ್ಳುತ್ತಾರೆ. ದರ್ಗಾದ ಉರುಸ ನಡೆಯುವ ಸಂದರ್ಭದಲ್ಲಿ ಹಿಂದುಗಳು ಪೂಜೆ ಸಲ್ಲಿಸುತ್ತಾರೆ. ಹೀಗಾಗಿ ಬೆಳಗಾವಿಯ ಧಾರ್ಮಿಕ ಪರಂಪರೆಯಲ್ಲಿ ಅಸದಖಾನ ದರ್ಗಾಕ್ಕೆ ವಿಶಿಷ್ಟವಾದ ಸ್ಥಾನವಿದೆ ಹಿಂದೂ, ಮುಸ್ಲಿಂರ ಸಾಮರಸ್ಯವು ಈ ದರ್ಗಾದ ಮೂಲಕ ಗಟ್ಟಿಗೊಂಡಿದೆ.

ಬೆಳಗಾವಿ ನಗರದಲ್ಲಿರುವ ಇನ್ನುಳಿದ ಪ್ರಮುಖ ದಗಾಗಳೆಂದರೆ ಕಂಜರವಾಲಿ ದರ್ಗಾ, ಖಥಾಲ್ ವಲಿ ದರ್ಗಾ, ಕಿಸ್ವರ್ ಖಾನ್ ದರ್ಗಾ, ಭಾಷಿಬನ್ ದರ್ಗಾ, ಮುಂದ ಅಲಿ ಶಹಾದರ್ಗಾ, ಮಹಬೂಬ್ ಸುಭಾನಿದರ್ಗಾ ಮುಂತಾದವುಗಳ ಮೂಲಕ ಬೆಳಗಾವಿಯಲ್ಲಿ ಮುಸ್ಲಿಂ ಧರ್ಮದ ಆಚರಣೆಗಳು ವಿಶಿಷ್ಟ ರೀತಿಯಿಂದ ಸಾಗಿ ಬೆಳಗಾವಿಯ ಧಾರ್ಮಿಕ ವಲಯದಲ್ಲಿ ಮಹತ್ವವನ್ನು ಪಡೆದುಕೊಂಡಿವೆ. ಮುಸ್ಲಿಂರು ಇಂದು ಬೆಳಗಾವಿ ನಗರದ

ಪ್ರಮುಖ ಕ್ಷೇತ್ರಗಳಲ್ಲಿ, ವೈದ್ಯಕೀಯ, ರಾಜಕೀಯ, ವಾಣಿಜ್ಯ, ಶಿಕ್ಷಣ ಕ್ಷೇತ್ರಗಳಲ್ಲಿ ಕಾಣಿಸಿಕೊಂಡು ಬೆಳಗಾವಿಯ ಸಾಂಸ್ಕೃತಿಕ ವಿಕಾಸದಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತಿದ್ದಾರೆ.

**ಚರ್ಚ್‌ಗಳು :**

ಪೋರ್ಚುಗೀಸ ಮತ್ತು ಬ್ರಿಟಿಷರ ಕಾಲದಲ್ಲಿ ಹಲವಾರು ಜನರು ಬೆಳಗಾವಿಗೆ ಬಂದು ನೆಲೆಸಿದರು. ಈ ಸಂದರ್ಭದಲ್ಲಿ ಮಿಶನರಿಗಳನ್ನು ಸ್ಥಾಪಿಸಿ ಸಾಮಾಜಿಕ ಸಾಹಿತ್ಯಿಕ, ಶೈಕ್ಷಣಿಕ ಕಾರ್ಯಗಳನ್ನು ಕೈಕೊಂಡು ಅದರ ಮೂಲಕ ಧರ್ಮ ಪ್ರಸಾರವನ್ನು ಆರಂಭಿಸಿದರು. ಈ ಸಂದರ್ಭದಲ್ಲಿ ಹಲವಾರು ಚರ್ಚಗಳು ಬೆಳಗಾವಿಯಲ್ಲಿ ನಿರ್ಮಾಣಗೊಂಡವು.

**ಸಂತ ಅಂತೋನಿ ಚರ್ಚು :** ರೈಲ್ವೆ ಮತ್ತು ಮಿಲಿಟರಿ ಪಡೆಯ ಸೇವೆಗಾಗಿ ಬೆಳಗಾವಿಗೆ ಬಂದ ತಮಿಳು ಮೂಲದ ಕೈಸ್ತರಿಗಾಗಿ ಈಗಿನ ಕ್ಯಾಂಪ ಪ್ರದೇಶದಲ್ಲಿ ಸಂತ ಅಂತೋನಿ ಚರ್ಚ್ ನಿರ್ಮಿಸಲಾಯಿತು. ಇಲ್ಲಿ ಪ್ರತಿ ಮಂಗಳವಾರ ಸಂತ ಅಂತೋನಿಯರ ಭಕ್ತಿ ಕಾರ್ಯಕ್ರಮಗಳು ನಡೆಯುತ್ತವೆ. ಈ ಕಾರ್ಯಕ್ರಮದಲ್ಲಿ ಎಲ್ಲಾ ಸಮಾಜದವರು ಭಾಗವಹಿಸುವುದೊಂದು ವಿಶೇಷ. ಸಂಗೀತ ವಾದ್ಯಗಳೊಂದಿಗೆ ಪ್ರಾರ್ಥನೆಯನ್ನು ಮಾಡಲಾಗುತ್ತದೆ. ಏಸು ಕ್ರಿಸ್ತನ ಸ್ತುತಿ, ಧರ್ಮ ಗ್ರಂಥ ಪಠಣ, ಮುಂತಾದ ಕಾರ್ಯಕ್ರಮಗಳ ಮೂಲಕ ಕ್ರೈಸ್ತರಲ್ಲಿ ಸಂಘಟನೆ, ಬಾಂಧವ್ಯವನ್ನು ಬೆಳೆಸುವಲ್ಲಿ ಕಾರ್ಯನಿರತವಾಗಿದೆ. ಮುಂಬಯಿಯಲ್ಲಿರುವ ಜಸೂಟ ಬಿಶಪನೆಂಬ ಧರ್ಮಾಧ್ಯಕ್ಷನಿಗೆ ಮದ್ರಾಸಿ ಕ್ಯಾಥೋಲಿಕರು ಅಂಕಿತರಾಗಿರುತ್ತಾರೆ. ಇವರ ಧರ್ಮ ಸಂಬಂಧದ ಆಚರಣೆಗಳೆಲ್ಲ ಗೋಮಂತಕ ಕ್ಯಾಥೊಲಿಕರಂತೆ ಇರುತ್ತವೆ.

**ಸೇಂಟ್ ಮೇರಿ ಚರ್ಚ್ :** ನಗರದ ಅತ್ಯಂತ ಹಳೆಯ ಚರ್ಚ ಎಂಬ ಹಿರಿಮೆಗೆ ಪಾತ್ರವಾದ ಈ ಚರ್ಚ ೧೮೬೯ ರಲ್ಲಿ ನಿರ್ಮಾಣಗೊಂಡಿದೆ. ಈ ಚರ್ಚ್ ಸ್ಥಾಪನೆಗೊಂಡ ಮೇಲೆ ಬೆಳಗಾವಿಯಲ್ಲಿ ಕ್ರೈಸ್ತರ ಚಟುವಟಿಕೆಗಳು ಹೆಚ್ಚಾದವು. ಆಕರ್ಷಕ ಶೈಲಿಯಲ್ಲಿ ನಿರ್ಮಾಣಗೊಂಡಿರುವ ಈ ಚರ್ಚ್‌ನ್ನು ನೋಡುವುದಕ್ಕಾಗಿಯೇ ಬೇರೆ ಬೇರೆ ಊರಿನಿಂದ ಜನರು ಈಗಲೂ ಬಂದು ಹೋಗುತ್ತಾರೆ. ಬೆಳಗಾವಿಯ ಪ್ರೇಕ್ಷಣೀಯ ಸ್ಥಳಗಳಲ್ಲಿ ಇದೂ ಕೂಡ ಒಂದಾಗಿದೆ. ಕ್ರಿಸ್‌ಮಸ್ ಮತ್ತು ಹೊಸವರ್ಷದ ಆಚರಣೆ ಈ ಎರಡೂ ಸಂದರ್ಭಗಳಲ್ಲಿ ಚರ್ಚನಲ್ಲಿ ಹಬ್ಬದ ವಾತಾವರಣವಿರುತ್ತದೆ; ಸಾವಿರಾರು ಜನರು ಇಲ್ಲಿ ಪಾಲ್ಗೊಳ್ಳುತ್ತಾರೆ. ವಿಶೇಷವಾಗಿ ಹಿಂದೂ ಮುಸ್ಲಿಂ ಜನರು ಹೆಚ್ಚಿನ ಸಂಖ್ಯೆಯಲ್ಲಿ ಸೇರಿರುತ್ತಾರೆ. ಕ್ರಿಸ್‌ಮಸ್ ದಂದು ಸಾಮೂಹಿಕ ಪ್ರಾರ್ಥನೆ, ತತ್ವೋಪದೇಶ, ಕಾರ್ಯಕ್ರಮಗಳು ಜರುಗುತ್ತವೆ. ಹೊಸ ವರ್ಷಾಚರಣೆಯನ್ನು ಓಲ್ಡ್ ಮ್ಯಾನ್ ಸುಡುವುದು, ನೃತ್ಯ, ಸಂಗೀತದೊಂದಿಗೆ ಆಚರಿಸಲಾಗುತ್ತದೆ. ಸುಮಾರು ಐದಾರು ಸಾವಿರ ಜನರು ಅಲ್ಲಿ ಸೇರಿರುತ್ತಾರೆ. ಒಟ್ಟಿನಲ್ಲಿ ಬೆಳಗಾವಿಗೆ ಹೊಸ ಸಂಸ್ಕೃತಿಯ ಗಾಳಿ ಕೈಸ್ತರ

ಚರ್ಚಗಳಿಂದ ಬೀಸತೊಡಗಿತು. ಕ್ರಿಶ್ಚಿಯನ್ನರ ಆಧುನಿಕ ಜೀವನ ಶೈಲಿಯು ಬೆಳಗಾವಿಯ ಜನಜೀವನದ ಮೇಲೆ ಮಹತ್ವದ ಪರಿಣಾಮವನ್ನು ಬೀರಿತು.

**ಮೆಥೋಡಿಸ್ಟ್ ಮಿಶನ್ ಸಂಸ್ಥೆ :** ನಗರದ ಸಂಗೊಳ್ಳಿ ರಾಯಣ್ಣ ವೃತ್ತದ ಹತ್ತಿರವಿರುವ ಮೆಥೋಡಿಸ್ಟ್ ಮಿಶನ್ ಸಂಸ್ಥೆಯು ಮಹತ್ವದ ಕಾರ್ಯಗಳನ್ನು ಮಾಡಿದೆ. ರೆವರೆಂಡ್ ವಿಲಿಯಂ ಬೆನಸ್ ಮತ್ತು ರೆವರೆಂಡ್ ಜೇಮ್ಸ್ ಸ್ಮಿತ್, ರೆವರೆಂಡ್ ಜೆ. ಟಿ. ಸೀಮನ್ಸ್ ಮುಂತಾದವರು ದೀರ್ಘಕಾಲದವರೆಗೆ ಇಲ್ಲಿ ಸೇವೆ ಸಲ್ಲಿಸಿ ಬೆಳಗಾವಿಯ ಶೈಕ್ಷಣಿಕ ವಿಕಾಸಕ್ಕೆ ಕಾರಣರಾದರು. ಅಲ್ಲದೆ ಬೆಳಗಾವಿ ಜಿಲ್ಲೆಯ ಬೇರೆ ಬೇರೆ ಗ್ರಾಮ, ಪಟ್ಟಣಗಳಲ್ಲಿ ಚರ್ಚ್‌ಗಳನ್ನು ಸ್ಥಾಪಿಸಿ ಧರ್ಮ ಪ್ರಚಾರವನ್ನು ಕೈಕೊಂಡರು. ಧೂಪದಾಳ, ದೇವರ ಸೀಗೆಹಳ್ಳಿ, ತೇಗೂರು, ತೇಗಳ್ಳಿ, ಸುತಗಟ್ಟಿ, ಸತ್ತಿಗೇರಿ ಮುಂತಾದ ಸ್ಥಳಗಳಲ್ಲಿ ಚರ್ಚಗಳನ್ನು ಸ್ಥಾಪಿಸಿದರು.[೨೫] ಈ ಎಲ್ಲ ಚರ್ಚ್‌ಗಳಿಗೆ ಬೆಳಗಾವಿಯು ಕೇಂದ್ರವಾಗಿ ಧಾರ್ಮಿಕ ಕಾರ್ಯಗಳನ್ನು ರೂಪಿಸಿ ಧರ್ಮಪ್ರಸಾರ ಕಾರ್ಯವನ್ನು ಕೈಕೊಂಡಿತು.

**ನ್ಯೂ ಆಪೋಸ್ಟಲ್ ಪ್ರಾಟಸ್ಟೆಂಟ್ ಚರ್ಚ :** ಬೆಳಗಾವಿ ಜಿಲ್ಲೆಯಾದ್ಯಂತ ಪ್ರಾಟಸ್ಟೆಂಟ್ ಕ್ರೈಸ್ತ ಪಂಗಡದ ಹಲವಾರು ಶಾಖೆಗಳು ಪ್ರಾರಂಭಗೊಂಡಿವೆ. ಹಿಂದೊಮ್ಮೆ ಮೆಥೋಡಿಸಟ್ರ ಚರ್ಚ ಸೇರಿದ್ದ ದಲಿತ ವರ್ಗದ ಜನ ಆ ಚರ್ಚ್‌ನೊಂದಿಗೆ ಸಂಪರ್ಕ ಕಳೆದುಕೊಂಡು ನ್ಯೂ ಅಪೋಸ್ಟಲ್ ಮಿಷನ್‌ಗೆ ಸೇರಿಕೊಂಡರು.[೨೬] ಇವರು ಗ್ರಾಮಗಳಲ್ಲಿ ಸಣ್ಣ ಸಣ್ಣ ಚರ್ಚಗಳನ್ನು ಸ್ಥಾಪಿಸಿಕೊಂಡು ಧರ್ಮ ಪ್ರಚಾರವನ್ನು ಕೈಗೊಳ್ಳುತ್ತಾರೆ.

**ಬಿಷಪ್ ಧರ್ಮಪೀಠ :** ಕ್ಯಾಂಪ ಪ್ರದೇಶದ ಸೆಂಟಪಾಲ ಶಾಲೆಯ ಪಕ್ಕದಲ್ಲಿರುವ ಬಿಷಪ್‌ರ ಧರ್ಮಪೀಠವು ಬೆಳಗಾವಿ ಮತ್ತು ಜಿಲ್ಲೆಯ ಕ್ರೈಸ್ತರ ಧರ್ಮಕ್ಷೇತ್ರದ ಕೇಂದ್ರವಾಗಿದೆ. ಈ ಬಿಷಪ್‌ರ ಧರ್ಮಪೀಠದಲ್ಲಿ ಮೊದಲು ಗೋವಾ ಮೂಲದ ಬಿಷಪ್ಪರುಗಳು ಆಡಳಿತ ನಡೆಸಿದರು. ಮುಂದೆ ಸಂತ ಪೌಲ ಗುರುಕುಲವು ಈ ಕಾರ್ಯವನ್ನು ಮುನ್ನಡೆಸಿತು.[೨೭] ಇವರ ಅವಧಿಯಲ್ಲಿ ಮಹತ್ವದ ಕಾರ್ಯಗಳು ನಡೆದವು. ಚರ್ಚ್‌ಗಳ ಸ್ಥಾಪನೆ, ಧರ್ಮಪ್ರಚಾರ, ಶಾಲೆ, ಕಾಲೇಜುಗಳ ಸ್ಥಾಪನೆ ಮುಂತಾದ ಕಾರ್ಯಗಳನ್ನು ಕೈಗೊಂಡರು. ಈಗ ಈ ಪೀಠದ ಬಿಷಪ್ಪರಾದ ಬರ್ನಾಡ್ ಮೋರಾಸ್ ಅವರು ಮೂಲತಃ ಕರ್ನಾಟಕದವರೇ ಆಗಿದ್ದು ಕನ್ನಡ ಭಾಷೆ, ಸಾಹಿತ್ಯದ ಮೇಲೆ ಅಭಿಮಾನವನ್ನು ಹೊಂದಿವರಾಗಿದ್ದಾರೆ.

ಹೀಗೆ ಬೆಳಗಾವಿಯ ಚರ್ಚ್‌ಗಳು ಕೇವಲ ಧರ್ಮ ಪ್ರಚಾರ ಕಾರ್ಯದಲ್ಲಷ್ಟೇ ತೊಡಗದೆ ಶೈಕ್ಷಣಿಕವಾಗಿ ಮಹತ್ವದ ಕೊಡುಗೆ ನೀಡಿದ್ದಾರೆ. ಇಂದು ಬೆಳಗಾವಿಯ ಪ್ರತಿಷ್ಠಿತ ಕಾನ್ವೆಂಟ್ ಶಾಲೆಗಳೆಲ್ಲವೂ ಕ್ರೈಸ್ತರ ಆಡಳಿತವನ್ನು ಹೊಂದಿದವುಗಳಾಗಿವೆ. ಸೆಂಟಪಾಲ್, ಸೆಂಟ್ ಝೆವಿಯರ್, ಸೆಂಟ್ ಮೇರಿ, ಸೆಂಟ್ ಜೋಸೆಪ್, ಶರ್ಮನ್ ಸ್ಕೂಲ್ ಮುಂತಾದ ಶಾಲೆ, ಕಾಲೇಜುಗಳಲ್ಲಿ ಬೆಳಗಾವಿಯ ಎಲ್ಲಾ ಧರ್ಮದ ಜನರು ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಹೀಗೆ ಇವು ಬೆಳಗಾವಿಯ ಶೈಕ್ಷಣಿಕ, ಸಾಂಸ್ಕೃತಿಕ ವಿಕಾಸದಲ್ಲಿ ಮಹತ್ವದ ಪಾತ್ರವನ್ನು ವಹಿಸಿವೆ.

### ೩. ಸಂಪ್ರದಾಯ–ಆಚರಣೆಗಳು:

ಬೆಳಗಾವಿಯಲ್ಲಿ ಹಬ್ಬಗಳ ಆಚರಣೆ ಸಮನ್ವಯ ಹಾಗೂ ಸಂಸ್ಕೃತಿಗಳ ಕೊಡುಕೊಳ್ಳುವಿಕೆಯಲ್ಲಿ ಪ್ರಮುಖ ಪಾತ್ರವಹಿಸಿವೆ. ಆಧುನಿಕತೆಯ ಭರಾಟೆಯಲ್ಲಿ ಆಚರಣೆಗಳು ಮೊದಲಿನ ವೈಭವವನ್ನು ಕಳೆದುಕೊಂಡಿದ್ದರೂ ಹೊಸ ಪದ್ಧತಿಯಲ್ಲಿ ಅರ್ಥಪೂರ್ಣವಾಗಿ ಆಚರಿಸಲ್ಪಡುತ್ತವೆ. ಇವುಗಳಲ್ಲಿ ಸಂಕ್ರಾಂತಿ, ಹೋಳಿ, ಯುಗಾದಿ, ನಾಗರ ಪಂಚಮಿ, ಗಣೋಶೋತ್ಸವ, ಮಹಾನವಮಿ, ದೀಪಾವಳಿ ಮುಂತಾದ ಹಬ್ಬಗಳನ್ನು ವಿಶಿಷ್ಟವಾಗಿ ಆಚರಿಸಲಾಗುತ್ತದೆ. ಕನ್ನಡ–ಮರಾಠಿ–ಗುಜರಾತಿ–ಕೊಂಕಣಿ ಮುಂತಾದ ಸಂಸ್ಕೃತಿಗಳು ಕೂಡಿಕೊಂಡು ಆಚರಣೆಗೊಳ್ಳುವ ಇಲ್ಲಿಯ ಹಬ್ಬ, ಜಾತ್ರೆ, ಉತ್ಸವಗಳಲ್ಲಿ ಹಲವಾರು ಸಂಪ್ರದಾಯಗಳು ಕಂಡುಬರುತ್ತವೆ. ಇದರಿಂದಾಗಿಯೇ ಇವು ಗಮನ ಸೆಳೆಯುತ್ತವೆ.

**ಸಂಕ್ರಾಂತಿ:** ಮಕರ ಸಂಕ್ರಾಂತಿ ಅಥವಾ ಮಕರ ಸಂಕ್ರಮಣವು ಸೂರ್ಯನ ಪಥ ಬದಲಾವಣೆಗೆ ಸಂಬಂಧಿಸಿದ ಪರ್ವದಿನ. ಸಂಕ್ರಾಂತಿ ಎಂದರೆ ದಾಟು ಅಥವಾ ಮುನ್ನಡೆ. ಸೂರ್ಯನು ಮಕರರಾಶಿಗೆ ಇಂದು ಪ್ರವೇಶಿಸಿ ದಕ್ಷಿಣದಿಂದ ಉತ್ತರಾಭಿಮುಖವಾಗಿ ಆರು ತಿಂಗಳು ಪ್ರಯಾಣ ಬೆಳೆಸುತ್ತಾನೆ. ಈ ದಿನವನ್ನು ಮಕರ ಸಂಕ್ರಾಂತಿ ಎಂದು ಕರೆಯುವರು. ಈ ದಿನವನ್ನು 'ಉತ್ತರಾಯಣ ಪುಣ್ಯಕಾಲ'ವೆಂದು ಭಾವಿಸಲಾಗುತ್ತದೆ. ಈ ದಿನ ಸ್ವರ್ಗದ ಬಾಗಿಲು ತೆರೆಯುತ್ತದೆಂಬ ನಂಬಿಕೆಯೂ ಇದೆ.

ಸಂಕ್ರಮಣವನ್ನು ಬೆಳಗಾವಿಯಲ್ಲಿ ಮೂರು ದಿನದ ಹಬ್ಬವನ್ನಾಗಿ ಆಚರಿಸಲಾಗುತ್ತದೆ. ಭೋಗಿ, ಸಂಕ್ರಮಣ ಮತ್ತು ಕನುಹಬ್ಬ. ಭೋಗಿಯ ದಿನದಂದು ಸುಮಂಗಲೆಯರು ನಿತ್ಯಜೀವನ ವಸ್ತುಗಳನ್ನು ಮರದಲ್ಲಿರಿಸಿ ಮರದ ಬಾಗಿನಗಳನ್ನು ಕೊಡುವ ಪದ್ಧತಿಯನ್ನು ಪಾಲಿಸುವುದು ಕಂಡು ಬರುತ್ತದೆ. ಭೋಗಿಯ ದಿನ ವಿಶೇಷವಾದ ಅಡಿಗೆಯನ್ನು ಮಾಡುವರು. ಹುಗ್ಗಿ–ಗೊಜ್ಜು, ಸಜ್ಜೆಯ ರೊಟ್ಟಿ, ಮಾದೋಲಿ, ವಡೆ–ಪಾಯಸ ಹೀಗೆ ಹಲವಾರು ತರಹದ ಬಕ್ಷ್ಯವನ್ನು ಮಾಡುವರು. ಭೋಗಿ ಮುಗಿದ ಮರುದಿನ ಸೂರ್ಯ ಮಕರರಾಶಿಯವನ್ನು ಪ್ರವೇಶಿಸುವ ಸಮಯವೇ ಸಂಕ್ರಮಣದ ಪುಣ್ಯಕಾಲ. ನದಿಗಳಲ್ಲಿ ಸ್ನಾನ ಮಾಡುವುದು ಎಲ್ಲ ಕಡೆಯಲ್ಲಿ ಕಂಡುಬರುತ್ತದೆ. ಬೆಳಗಾವಿಯ ಜನರು ಪುಣ್ಯಸ್ನಾನಕ್ಕಾಗಿ ಮಲಪ್ರಭಾ, ಘಟಪ್ರಭಾ, ಕೃಷ್ಣಾನದಿಗಳಿಗೆ ಹೋಗುವರು. ವಿಶೇಷವಾಗಿ ಬೆಳಗಾವಿಗೆ ಅತಿ ಸಮೀಪವಿರುವ ಖಾನಾಪೂರ, ಎಂ. ಕೆ. ಹುಬ್ಬಳ್ಳಿ ಪ್ರದೇಶಗಳಿಗೆ ಹೆಚ್ಚಿನ ಜನರು ಹೋಗುವರು. ಅಂದು ಸ್ನಾನದಲ್ಲಿ ಎಳ್ಳು ಅರಿಶಿನವನ್ನು ಮೈಗೆ ಹಚ್ಚಿಕೊಂಡು ಸ್ನಾನ ಮಾಡುವರು. ಇಂದಿನ ಹಬ್ಬದ ಸವಿಯೂಟದಲ್ಲಿ ಎಳ್ಳು ಬೆಲ್ಲದ ತಿಂಡಿ–ತಿನಿಸುಗಳಿಗೆ ಹೆಚ್ಚಿನ ಪ್ರಾಶಸ್ತ್ಯವಿರುವುದು. ಸಂಕ್ರಮಣದ ದಿನ ಸಂಜೆಯ ಹೊತ್ತಿಗೆ ಎಲ್ಲರೂ ಒಬ್ಬರಿಗೊಬ್ಬರು 'ಎಳ್ಳು ಬೆಲ್ಲ' ಕೊಡುವರು. ಮಹಾರಾಷ್ಟ್ರದ ಸಂಸ್ಕೃತಿಯ ಪ್ರಭಾವದಿಂದ ಬೆಳಗಾವಿಯಲ್ಲಿ 'ಎಳ್ಳು

ಬೆಲ್ಲ' ಕೊಡುವ ಪದ್ಧತಿಯು ವಿಶೇಷವಾಗಿಯೇ ನಡೆಯುತ್ತದೆ. ಎಲ್ಲರೂ ಮನೆಮನೆಗೆ ತೆರಳಿ ಎಳ್ಳುಬೆಲ್ಲವನ್ನು ಹಂಚುವರು. ಎಳ್ಳುಬೆಲ್ಲವನ್ನು ಹಂಚುವಾಗ ಕನ್ನಡಿಗರು 'ಎಳ್ಳು-ಬೆಲ್ಲ ತಿಂದು ಒಳ್ಳೆಯ ಮಾತನಾಡೋಣ' ಎಂದು ಹೇಳಿದರೆ ಮರಾಠಿಗರು "ತಿಳಗೂಳ ಗ್ಯಾ ಗೋಡ ಗೋಡ ಬೋಲಾ" ಎಂದು ಹೇಳಿ ಕುಸುರೆಳ್ಳು ಕೈಯಲ್ಲಿ ಕೊಟ್ಟು ಹಿರಿಯರಿಗೆ ನಮಸ್ಕಾರ ಮಾಡುವರು. ಪೇಟೆಯಲ್ಲಿ ಬಣ್ಣ ಬಣ್ಣದ ಕುಸುರೆಳ್ಳುಗಳ ಮಾರಾಟ ಹೆಚ್ಚಾಗಿ ನಡೆಯುತ್ತದೆ. ಶಾಲೆ, ಕಾಲೇಜುಗಳಲ್ಲಿ ವಿದ್ಯಾರ್ಥಿಗಳು ಸಂಕ್ರಮಣದ ಮರುದಿನ (ಸಂಕ್ರಮಣದಂದು ರಜೆ ಇರುವುದರಿಂದ) ಎಳ್ಳುಬೆಲ್ಲವನ್ನು ಹಂಚುವುದರಲ್ಲಿ ಕಳೆಯುತ್ತಾರೆ. ಬೆಳಗಾವಿಯಲ್ಲಿ ಕುಸುರೆಳ್ಳುಗಳನ್ನು ಹಂಚುವುದೇ ಒಂದು ವಿಶಿಷ್ಟ ಆಚರಣೆಯಾಗಿ ಕಂಡುಬರುತ್ತದೆ. ಯಾವುದೇ ಭಾಷೆ, ಧರ್ಮ, ಜಾತಿಯ ತಾರತಮ್ಯವಿಲ್ಲದೆ ಸೌಹಾರ್ದತೆಯಿಂದ ಎಳ್ಳು ಬೆಲ್ಲವನ್ನು ಹಂಚಲಾಗುತ್ತದೆ.

ದಕ್ಷಿಣ ಕರ್ನಾಟಕದಿಂದ ಬೆಳಗಾವಿಗೆ ಬಂದು ನೆಲೆಸಿದ ಜನರು ಎಳ್ಳು ಬೀರುವ ಸಂಪ್ರದಾಯವನ್ನು ವಿಭಿನ್ನವಾಗಿ ಆಚರಿಸುತ್ತಾರೆ. ಸುಮಂಗಲೆಯರು ತಮಗೆ ಬೇಕಾದವರ ಮನೆಗಳಿಗೆ ಮಾತ್ರ ಹೋಗಿ ಎಳ್ಳು-ಸಕ್ಕರೆ, ಸಕ್ಕರೆಯ ಅಚ್ಚಿನ ಗೊಂಬೆಗಳನ್ನು ಕೊಡುತ್ತಾರೆ.

ಸಂಕ್ರಮಣದ ಮರುದಿನ ಪರ್ವಕಾಲದ ಕರಿ. ಇದನ್ನು ಕರಿ ಎರೆಯುವ ಹಬ್ಬ, 'ಕನು ಹಬ್ಬ'ವೆಂದು ಆಚರಿಸುತ್ತಾರೆ. ಉತ್ತರ ಕರ್ನಾಟಕದ ಬಹಳಷ್ಟು ಪ್ರದೇಶಗಳಲ್ಲಿ ರೂಢಿಯಲ್ಲಿರುವಂತೆ ಮಗುವನ್ನು ಹಸೆಯ ಮೇಲೆ ಕುಳ್ಳಿರಿಸಿ, ಕಬ್ಬು, ಕಡಲೆಕಾಯಿ, ಸವಿ ದಿನಸು, ಗಜ್ಜರಿಯ ಹೋಳು ಇವುಗಳನ್ನು ಮಗುವಿನ ತಲೆಯ ಮೇಲೆ ಎರೆದು ಆರತಿ ಮಾಡಿ, ಸುಮಂಗಲೆಯರಿಗೆ ಅರಿಸಿಣ ಕುಂಕುಮ, ಎಳ್ಳು ಜಿಗುಳೆಗಳನ್ನು ಕೊಡುವರು. ಕೆಲವರು ಭೋಗಿಹಣ್ಣುಗಳನ್ನು ಎರೆಯುವರು. ತಮಿಳುನಾಡಿನಿಂದ ಬಂದು ಬೆಳಗಾವಿಯಲ್ಲಿ ನೆಲೆಸಿದ ಹಲವಾರು ಜನರು ಸಂಕ್ರಾಂತಿಯನ್ನು 'ಪೊಂಗಲ್' ಎಂದು ಆಚರಿಸುವರು. ಇವರು ಸೂರ್ಯನಿಗೆ ಪೂಜೆ ಸಲ್ಲಿಸುತ್ತಾರೆ. ಹಾಲು ಬೆಲ್ಲಗಳಿಂದ ಕೂಡಿದ ಅಕ್ಕಿಯ ಪಾಯಸವನ್ನು ಸೂರ್ಯನಿಗೆ ನೈವೇದ್ಯ ಹಿಡಿಯುತ್ತಾರೆ. ಅಲ್ಲದೆ ಪೊಂಗಲ ತೃತೀಯ ದಿನ ಪಶುಗಳಿಗೆ ಪೂಜೆ ಮಾಡುತ್ತಾರೆ. ಪೊಂಗಲಿನ (ಹುಗ್ಗಿ) ಉಂಡೆಗಳಿಗೆ ಬಣ್ಣ ಹಾಕಿ ಚೆಂಡುಗಳಂತೆ ಮಾಡಿ ಹಕ್ಕಿಗಳಿಗೆ ತಿನ್ನಲು ಹೊರಬಯಲಿನಲ್ಲಿ ಇಟ್ಟುಬರುತ್ತಾರೆ.

**ಶಿವರಾತ್ರಿ ಆಚರಣೆ** : ಬಹು ಸಂಸ್ಕೃತಿಯ ವಿಶಿಷ್ಟವಾದ ನಗರ ಬೆಳಗಾವಿಯಲ್ಲಿ ಶಿವರಾತ್ರಿ ಆಚರಣೆ ವಿಶೇಷವಾಗಿರುತ್ತದೆ. ಶಿವರಾತ್ರಿ ಸಂದರ್ಭದಲ್ಲಿ ನಗರದ-ಬಹುತೇಕ ಎಲ್ಲ ದೇವಾಲಯಗಳು ಭಕ್ತರಿಂದ ತುಂಬಿರುತ್ತವೆ. ಧರ್ಮ, ದೇವರ ವಿಷಯದಲ್ಲಿ ಬೆಳಗಾವಿಯ ಜನರು ಮೊದಲಿನಿಂದಲೂ ಶ್ರದ್ಧೆ, ಭಕ್ತಿಯನ್ನು ಹೊಂದಿದ್ದಾರೆ. ಆಧುನಿಕ ಜೀವನದ ಜಂಜಾಟದಲ್ಲಿಯೂ ದೇವರ ಮೇಲಿನ ನಂಬಿಕೆಯನ್ನು ಕಳೆದುಕೊಂಡಿಲ್ಲ. ಭಾಷೆ, ಧರ್ಮ,

ಜಾತಿಯ ಭೇದ ಭಾವವನ್ನು ಮರೆತು ಸೌಹಾರ್ದತೆಯಿಂದ ಎಲ್ಲರೂ ಪಾಲ್ಗೊಳ್ಳುವುದು ಬೆಳಗಾವಿ ಜನರ ವೈಶಿಷ್ಟ್ಯವಾಗಿದೆ. ಕನ್ನಡ ಮರಾಠಿ ಭಾಷಾ ಗೊಂದಲಗಳಿದ್ದರೂ ಧಾರ್ಮಿಕ ಆಚರಣೆಯ ಸಂದರ್ಭದಲ್ಲಿ ಎಲ್ಲರೂ ಒಂದಾಗುವುದು ಬೆಳಗಾವಿಯಲ್ಲಿ ನಿರಂತರವಾಗಿ ಸಾಗಿಕೊಂಡು ಬಂದಿದೆ.

ಬೆಳಗಾವಿ ನಗರದ ಪ್ರಸಿದ್ಧ ದೇವಾಲಯ ದಕ್ಷಿಣ ಕಾಶಿ ಎಂದೇ ಖ್ಯಾತಿ ಹೊಂದಿರುವ ಕಪಿಲೇಶ್ವರ ಮಂದಿರದಲ್ಲಿ ಶಿವರಾತ್ರಿಯ ಆಚರಣೆಯ ಸಂದರ್ಭದಲ್ಲಿ ವಿಶೇಷವಾದ ಪೂಜೆ, ಯಜ್ಞ, ಜಪ, ಅಭಿಷೇಕ ಹೀಗೆ ಹಲವಾರು ಕಾರ್ಯಗಳು ನಡೆಯುತ್ತವೆ. ಕರ್ಪೂರ, ದೀಪ ಬೆಳಗುವುದು, ಕಾಯಿ-ಹಣ್ಣು ನೈವೇದ್ಯ, ಪ್ರದಕ್ಷಿಣೆ ಹಾಕುವುದು, ಧ್ಯಾನ, ಭಜನೆ ಹೀಗೆ ಶಿವನನ್ನು ಆರಾಧಿಸುವ ಚಟುವಟಿಕೆಗಳು ನಡೆಯುತ್ತವೆ. ಈ ದೇವಾಲಯಕ್ಕೆ ಮಹಾರಾಷ್ಟ್ರದ ಕೊಲ್ಲಾಪುರ, ಸಾಂಗ್ಲಿಗಳಿಂದ ಹಾಗೂ ಗೋವಾ ರಾಜ್ಯದಿಂದ ಭಕ್ತರು ಶಿವರಾತ್ರಿಯ ಸಂದರ್ಭದಲ್ಲಿ ದರ್ಶನಕೊಡುತ್ತಾರೆ. ಶಿವನ ಪ್ರತಿಮೆಗೆ ನೀರು, ಹಾಲು, ಮಜ್ಜನ ಮಾಡುವ ವಿಶೇಷ ಸಂಪ್ರದಾಯಗಳು ನಡೆಯುತ್ತವೆ. ನಗರದ ಕ್ಯಾಂಪ್ ಪ್ರದೇಶದಲ್ಲಿರುವ ಮಿಲಿಟರಿ ಮಹಾದೇವ, ರಾಮಲಿಂಗಖಿಂಡ ಬೀದಿಯ ರಾಮಲಿಂಗೇಶ್ವರ, ಬಸವಣ್ಣ ಬೀದಿಯ ಬಸವಣ್ಣ, ವೀರಭದ್ರ ದೇವಾಲಯ, ಕೆ.ಎಲ್.ಇ. ವೈದ್ಯಕೀಯ ಕಾಲೇಜಿನ ಆವರಣದಲ್ಲಿರುವ ಶಿವಮಂದಿರ ಸೆಂಟೆ ಜೇವಿಯರ್ ಸ್ಕೂಲ್ ಬಳಿ ಇರುವ ಬಿಸ್ಕಿಟ್ ಮಹಾದೇವ ಮಂದಿರ ಹೀಗೆ ನಗರದ ಎಲ್ಲ ದೇವಾಲಯಗಳಲ್ಲಿ ವಿಶೇಷವಾದ ಪೂಜೆ ಆರಾಧನೆ ನಡೆಯುತ್ತದೆ.

ಜಲಮಜ್ಜನ : ಶಿವರಾತ್ರಿ ಅಂಗವಾಗಿ ಕಪಿಲೇಶ್ವರ ಮಂದಿರದಲ್ಲಿ ಶಿವನಿಗೆ (ಕಪಿಲೇಶ್ವರ) ಜಲ ಮಜ್ಜನವನ್ನು ನೆರವೇರಿಸಲಾಗುತ್ತದೆ. ಈ ಸಂಪ್ರದಾಯವು ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿದೆ.[೫೮] ಶಿವನಿಗೆ ಜಲ ಮಜ್ಜನ ನೆರವೇರಿಸಲು ಪ್ರತ್ಯೇಕವಾದ ಹೊಂಡದ ಆಕಾರದಲ್ಲಿ ಕಟ್ಟೆಯನ್ನು ಕಟ್ಟಿ ಮಧ್ಯದಲ್ಲಿ ಶಿವನನ್ನು ಕೂಡ್ರಿಸಿ ಎಲ್ಲರೂ ಬೊಗಸೆಯಿಂದ ಶಿವನ ಪ್ರತಿಮೆಗೆ ನೀರನ್ನು ಅರ್ಪಿಸುತ್ತಾರೆ. ಈ ಹೊಂಡದ ನೀರಿನಲ್ಲಿ ಹಾಲು, ತುಪ್ಪ, ಮೊಸರು, ಗಂಧ ಮುಂತಾದವುಗಳನ್ನು ಕೂಡಿಸಿ ಹೊಂಡಕ್ಕೆ ಪೂಜೆ ಮಾಡಿ ಶಿವನಿಗೆ ಜಲ ಮಜ್ಜನವನ್ನು ಮಾಡಿಸಲಾಗುತ್ತದೆ.

ರಥೋತ್ಸವ : ಮಹಾಶಿವರಾತ್ರಿಯ ನಿಮಿತ್ತ ಬೆಳಗಾವಿಯ ಪೊಲೀಸ್ ಹೆಡ್ ಕ್ವಾಟರ್ಸ್ ಬಳಿ ಇರುವ ಶ್ರೀ ವೀರಭದ್ರೇಶ್ವರ ದೇವರ ರಥೋತ್ಸವವು ಜರುಗುತ್ತದೆ. ಇದು ಬೆಳಗಾವಿಯಲ್ಲಿ ನಡೆಯುವ ಜಾತ್ರೆ ಮಹೋತ್ಸವಗಳಲ್ಲಿಯೇ ವಿಶಿಷ್ಟವಾಗಿದೆ. ಹತ್ತಾರು ಸಾವಿರ ಜನರು ಈ ಸಂದರ್ಭದಲ್ಲಿ ಸೇರಿರುತ್ತಾರೆ. ಈ ಜಾತ್ರೆಯು ನೂರಾರು ವರ್ಷಗಳ ಹಿಂದಿನಿಂದಲೂ ನಡೆಯುತ್ತ ಬಂದಿದೆ. ಕಟ್ಟಿಗೆಯಿಂದ ನಿರ್ಮಿಸಿದ ರಥದಲ್ಲಿ ವೀರಭದ್ರದೇವರ ಮೂರ್ತಿಯನ್ನಿಟ್ಟು ರಥವನ್ನು ಹೂವಿನಿಂದ ಅಲಂಕರಿಸಿರಿ ರಥವನ್ನು ಎಳೆಯಲಾಗುತ್ತದೆ. ರಥೋತ್ಸವದ ಸಂದರ್ಭದಲ್ಲಿ ಹಲವಾರು

ತರಹದ ಜಾನಪದ ವಾದ್ಯಗಳನ್ನು ಊದುತ್ತ ಬಾರಿಸುತ್ತ ಸಾಗುವರು. ರಥೋತ್ಸವದ ಸಂದರ್ಭದಲ್ಲಿ ಅತ್ಯಂತ ಆಕರ್ಷಣೀಯವಾದುದ್ದೆಂದರೆ ಪುರವಂತಿಕೆ ಹೇಳುವುದು. ಕೈಯಲ್ಲಿ ಖಡ್ಗ ಹಿಡಿದು ಕೆಂಪು ಬಣ್ಣದ ಪೋಷಾಕುಗಳನ್ನು ಧರಿಸಿ ಮೈಗೆಲ್ಲ ಅಸ್ತ್ರಗಳನ್ನು ಚುಚ್ಚಿಕೊಳ್ಳುವುದನ್ನು ನೋಡಿದರೆ ಮೈರೋಮಾಂಚನಗೊಳ್ಳುತ್ತದೆ. ವಿಶೇಷವಾಗಿ ವೀರಭದ್ರದೇವರ ಜಾತ್ರೆಯಲ್ಲಿ ಅಸ್ತ್ರಗಳನ್ನು ಚುಚ್ಚಿಕೊಳ್ಳುವುದು ಸಾಮಾನ್ಯವಾಗಿರುತ್ತದೆ. ಗ್ರಾಮೀಣ ಪ್ರದೇಶಗಳಲ್ಲಿ ಕಂಡು ಬರುವ ಈ ಪುರವಂತಿಕೆಯ ಕಲೆ ಬೆಳಗಾವಿ ನಗರದಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಶಾಸ್ತ್ರ ಹೇಳುವುದು, ಮುಳ್ಳಿನ ತಂತಿಯ ಮೇಲೆ ಗಂಟೆಗಟ್ಟಲೆ ನಿಲ್ಲುವುದು ಮುಂತಾದ ಆಚರಣೆಗಳು ನಡೆಯುತ್ತವೆ. ವಿಶೇಷವಾಗಿ ಲಿಂಗಾಯತ ಸಮುದಾಯದವರು ಈ ಜಾತ್ರೆಯಲ್ಲಿ ಪಾಲ್ಗೊಳ್ಳುತ್ತಾರೆ.

**ಹೋಳಿ ಹಬ್ಬ:** ಫಾಲ್ಗುಣ ಶುಕ್ಲಪಕ್ಷದ ಹುಣ್ಣಿಮೆ ದಿನ ಹೋಳಿ ಹಬ್ಬ ಆಚರಿಸುವುದು ಸಂಪ್ರದಾಯ. ಕೆಟ್ಟದನ್ನು ಸುಟ್ಟುಬಿಡುವುದು, ಹಳೆಯದನ್ನು ಮರೆತು ಹೊಸ ಬಾಳಿಗೆ ತಮ್ಮನ್ನು ತೊಡಗಿಸಿಕೊಳ್ಳುವುದು, ಆಚರಣೆಯ ಉದ್ದೇಶ. ಏಳೇಳು ಬಣ್ಣಗಳ ರಂಗು ಸಾಮಾಜಿಕ ಸಂಬಂಧದ ಸೇತುವೆಯಾಗಿದೆ. ಸಂಯುಕ್ತ ಬಣ್ಣಗಳಂತೆ ಪರಸ್ಪರ ಸಂಬಂಧ ಬೆಳೆಸುವ ಸಂಭ್ರಮ ನೀಡುವುದು ಬಣ್ಣದ ಓಕುಳಿ ಆಟದ ವೈಶಿಷ್ಟ್ಯವಾಗಿದೆ.

ಬೆಳಗಾವಿ ನಗರದಲ್ಲಿ ಆಚರಿಸಲಾಗುವ ಹೋಳಿ ಹಬ್ಬಕ್ಕೆ ಪಾರಂಪರಿಕ ಹಿನ್ನೆಲೆ ಇದೆ. ಹೀಗಾಗಿ ಇಲ್ಲಿ ಹೋಳಿ ಹುಣ್ಣಿಮೆಯನ್ನು ವೈಶಿಷ್ಟ್ಯಪೂರ್ಣವಾಗಿ ಆಚರಿಸಲಾಗುತ್ತದೆ. ಬಹುಸಂಸ್ಕೃತಿಯ ನೆಲೆಯಾದ ಬೆಳಗಾವಿಯಲ್ಲಿ ಮಹಾರಾಷ್ಟ್ರ, ಗೋವಾ ರಾಜ್ಯಗಳ ಪ್ರಭಾವ ಈ ಹಬ್ಬದ ಆಚರಣೆಯಲ್ಲಿ ಕಂಡುಬರುತ್ತದೆ. ಸನಾತನ ಮತ್ತು ಆಧುನಿಕ ಎರಡೂ ರೀತಿಯಲ್ಲಿ ಹೋಳಿ ಆಚರಿಸುವುದು ಬೆಳಗಾವಿಯ ವೈಶಿಷ್ಟ್ಯ. ಭಾಷೆ, ಗಡಿ, ಧರ್ಮ, ಜಾತಿಗಳ ತಾರತಮ್ಯವಿಲ್ಲದೆ ಸಾಮರಸ್ಯದಿಂದ ಆಚರಣೆಗೊಳ್ಳುವ ಹಬ್ಬಗಳಲ್ಲಿ ಹೋಳಿ ಮಹತ್ವದ್ದಾಗಿದೆ.

ಬೆಳಗಾವಿಯಲ್ಲಿ ಹೋಳಿ ಹಬ್ಬ ಪ್ರಮುಖವಾಗಿ ಮೂರು ರೀತಿಯಲ್ಲಿ ಆಚರಣೆಗೊಳ್ಳುತ್ತದೆ. ಬೆಳಗಾವಿ ನಗರ ಒಂದೇ ಆದರೂ ಪ್ರದೇಶದಿಂದ ಪ್ರದೇಶಕ್ಕೆ ವೈವಿಧ್ಯತೆ ಕಂಡುಬರುತ್ತದೆ. ೧. ಸಂಪ್ರದಾಯದಂತೆ ಹೋಳಿ ಹುಣ್ಣಿಮೆಯ ದಿನ ಕಾಮದಹನ ಮಾಡಿ ಮರುದಿನ ಬಣ್ಣದ ಓಕುಳಿಯನ್ನು ಆಡುವುದು. ೨. ಹೋಳಿ ಹುಣ್ಣಿಮೆ ದಿನವೇ ಬೆಳಿಗ್ಗೆ ಕಾಮದಹನ ಮಾಡಿ ಅನಂತರ ಹೋಳಿ (ಬಣ್ಣ) ಆಚರಿಸುವುದು. ೩. ಕಾಮದಹನ ಮಾಡಿದ ಐದು ದಿನಕ್ಕೆ ಬಣ್ಣದ ಓಕುಳಿಯನ್ನು ಆಚರಿಸುವುದು. ಹೀಗೆ ವೈವಿಧ್ಯಮಯವಾಗಿ ಹೋಳಿ ಹುಣ್ಣಿಮೆಯು ಆಚರಿಸಲ್ಪಡುತ್ತದೆ.

ನಗರದ ಪಾಂಗೂಳ ಗಲ್ಲಿಯಲ್ಲಿ ಹೋಳಿ ಹಬ್ಬವನ್ನು ವಿಶಿಷ್ಟವಾಗಿ ಆಚರಿಸಲಾಗುತ್ತದೆ. ಇಲ್ಲಿರುವ ಅಶ್ವತ್ಥಾಮ (ಪಾಂಗೂಳ) ದೇವಾಲಯವು ಅತ್ಯಂತ ಪ್ರಾಚೀನ ದೇವಾಲಯವಾಗಿದ್ದು, ದೇಶದ ಅಪರೂಪದ ದೇವಸ್ಥಾನವಾಗಿದೆ.

ಅಶ್ವತ್ಥಾಮನ ದೇವಾಲಯಗಳು ಭಾರತದಲ್ಲಿ ಎರಡು ಮಾತ್ರ ದೊರೆಯುತ್ತವೆ. ಒಂದು ಉತ್ತರಭಾರತದಲ್ಲಿದ್ದರೆ, ಇನ್ನೊಂದು ಬೆಳಗಾವಿಯಲ್ಲಿದೆ. ಹೋಳಿ ಹಬ್ಬದಂದು ಅಶ್ವತ್ಥಾಮನಿಗೆ ವಿಶೇಷವಾದ ಪೂಜೆ ಜರುಗುತ್ತದೆ. ಎಲ್ಲ ಕಡೆಗೆ ರತಿ–ಮನ್ಮಥರ ಮೂರ್ತಿಗಳನ್ನು ಪೂಜಿಸಿದರೆ ಪಾಂಗೂಳ ಗಲ್ಲಿಯಲ್ಲಿ ಮಾತ್ರ ಅಶ್ವತ್ಥಾಮವನ್ನು ಪೂಜಿಸುತ್ತಾರೆ.

ಹೋಳಿ ಹಬ್ಬದ ಸಂದರ್ಭದಲ್ಲಿ ಈ ದೇವಾಲಯದಲ್ಲಿ ಹಲವಾರು ಸಂಪ್ರದಾಯಗಳು ನಡೆದುಬಂದಿವೆ. ಉರುಳುಸೇವೆ ಹೋಳಿ ಹಬ್ಬದ ಸಂದರ್ಭದಲ್ಲಿ ಪ್ರಮುಖವಾಗಿ ಜರುಗುವ ಆಚರಣೆ. ಇದು ಪ್ರಾಚೀನ ಕಾಲದಿಂದಲೂ ಇಲ್ಲಿ ನಿರಂತರವಾಗಿ ನಡೆದುಕೊಂಡು ಬಂದಿದೆ. ಹೋಳಿ ಹುಣ್ಣಿಮೆಯ ಮಾರನೆಯ ದಿನ ಬೆಳಿಗ್ಗೆ ಕಾಮಣ್ಣನ ದಹನ ಮಾಡಿದ ಮೇಲೆ ಅಶ್ವತ್ಥಾಮನಿಗೆ ವಿಶೇಷ ಪೂಜೆ ಜರುಗುತ್ತದೆ. ಇದಾದ ಮೇಲೆ ಉರುಳು ಸೇವೆ ನಡೆಯುತ್ತದೆ. ಈ ಸಂದರ್ಭದಲ್ಲಿ ಪಾಂಗುಳಗಲ್ಲಿಯ ಪ್ರತಿಯೊಂದು ಮನೆಯಿಂದ ಒಬ್ಬೊಬ್ಬರು ಉರುಳು ಸೇವೆಯಲ್ಲಿ ಪಾಲ್ಗೊಳ್ಳುತ್ತಾರೆ. ಅಲ್ಲದೆ ಹರಕೆ ಹೊತ್ತವರು ಬಂದು ಉರುಳು ಸೇವೆಯನ್ನು ಮಾಡುತ್ತಾರೆ. ಈ ಉರುಳು ಸೇವೆಯು ಹೋಳಿ ಹಬ್ಬದ ಸಂದರ್ಭದಲ್ಲಿ ಮಾತ್ರ ನಡೆಯುತ್ತದೆ. ಕಾಮದಹನ ನಡೆದ ಮೇಲೆ ಬಣ್ಣದ ಒಕುಳಿಯನ್ನು ಆಡುತ್ತಾರೆ. ಇದಾದ ನಂತರ ಈ ಉರುಳು ಸೇವೆಯು ನಡೆಯುತ್ತದೆ. ಇದು ಬೆಂಡಿಬಜಾರ್ ವೃತ್ತದಿಂದ ಅಶ್ವತ್ಥಾಮಮಂದಿರದ ವರೆಗೆ ನಡೆಯುತ್ತದೆ. ಉರುಳಸೇವೆಯನ್ನು ಮಾಡುತ್ತಲೇ ದೇವಾಲಯಕ್ಕೆ ಪ್ರದಕ್ಷಿಣೆಯನ್ನು ಹಾಕಿ ಎಲ್ಲರೂ ಸೇರಿ ಸಾಮೂಹಿಕ ಪೂಜೆಯನ್ನು ಸಲ್ಲಿಸುತ್ತಾರೆ. ಅಶ್ವತ್ಥಾಮ ದೇವಾಲಯದಲ್ಲಿ ಕೆಲವು ಸಂಪ್ರದಾಯ, ನಂಬಿಕೆಗಳು ಇಂದಿಗೂ ಉಳಿದುಕೊಂಡು ಬಂದಿವೆ. ಇಲ್ಲಿ ಹೋಳಿ ಹುಣ್ಣಿಮೆಯ ದಿನ ಮಾತ್ರ ತೆಂಗಿನಕಾಯಿಯನ್ನು ಒಡೆಯುತ್ತಾರೆ. ದೇವರಿಗೆ ಹರಕೆ ಹೊತ್ತವರು ಬೆಳ್ಳಿಯ ಕುದುರೆಗಳನ್ನು ದೇವರಿಗೆ ಸಮರ್ಪಿಸುತ್ತಾರೆ. ಹಿಂದೂ, ಮುಸ್ಲಿಂ, ಕ್ರೈಸ್ತ, ಪಾರ್ಸಿ ಎಲ್ಲ ಸಮುದಾಯದವರು ಈ ದೇವಾಲಯಕ್ಕೆ ನಡೆದುಕೊಳ್ಳುತ್ತಾರೆ.

ನಗರದ ಕಂಗ್ರಾಳಗಲ್ಲಿ ಮತ್ತು ಚವಾಟಗಲ್ಲಿಯಲ್ಲಿಯ ಹೋಳಿ ಹಬ್ಬದ ಆಚರಣೆ ವಿಶಿಷ್ಟವಾಗಿದೆ. ಇಲ್ಲಿ ಕಾಮದಹನಗೊಂಡ ನಂತರ ಇಲ್ಲಿಯ ಬೆಂಕಿಯನ್ನು ತೆಗೆದುಕೊಂಡು ಹೋಗಿ ಬೇರೆ ಬೇರೆ ಭಾಗಗಳಲ್ಲಿಯ ಕಾಮಣ್ಣನ ಪ್ರತಿಕೃತಿಗಳನ್ನು ದಹಿಸಲಾಗುತ್ತದೆ. ಕಾಮದಹನದ ಸಂದರ್ಭದಲ್ಲಿ ಉತ್ತರ ಕರ್ನಾಟಕದ ಎಲ್ಲ ಭಾಗಗಳಲ್ಲಿ ಕಂಡು ಬರುವ ಪದ್ಧತಿಯೆಂದರೆ ಹರಿಜನ ಕೇರಿಯಲ್ಲಿ ಮೊದಲು ಕಾಮದಹನಗೊಂಡ ನಂತರ ಉಳಿದ ಕಡೆ ಅಲ್ಲಿಯ ಬೆಂಕಿಯಿಂದ ಕಾಮದಹನಗೊಳ್ಳಬೇಕು. ಇದು ಇಂದಿಗೂ ಬಹಳಷ್ಟು ಹಳ್ಳಿಗಳಲ್ಲಿ ಜಾರಿಯಲ್ಲಿದೆ. ಬೇರೆಡೆಯಿಂದ ಬೆಂಕಿ ಒಯ್ದು ಕಾಮದಹನ ಪ್ರಾರಂಭಸುವ ಸಂಪ್ರದಾಯವು ಈಗಲೂ ಬೆಳಗಾವಿಯಲ್ಲಿ ಕಂಡುಬರುತ್ತದೆ.

ಇಂದಿನ ಬೆಳಗಾವಿ ಮಹಾನಗರವು ರೂಪುಗೊಳ್ಳುವ ಮೊದಲು ಕಂಗ್ರಾಳಗಲ್ಲಿ ಮತ್ತು ಚಟಾಟಗಲ್ಲಿಗಳು ಪ್ರತ್ಯೇಕ ಊರುಗಳಾಗಿರಬಹುದಾಗಿದೆ. ಊರಿಗೊಂದು ಹರಿಜನಕೇರಿ ಇರುವುದು ಊರಿನ ಅಸ್ತಿತ್ವವನ್ನು ಸೂಚಿಸುತ್ತದೆ.

ಹೀಗಾಗಿ ಈ ಎರಡೂ ಪ್ರದೇಶಗಳು ಪ್ರತ್ಯೇಕ ಹಳ್ಳಿಗಳಾಗಿರಬಹುದೆಂಬುದನ್ನು ನಿರ್ದಿಷ್ಟ ಪಡಿಸಬಹುದಾಗಿದೆ. ಡಾ. ಎಂ. ಬಿ. ನೇಗಿನಹಾಳ ಅವರು ಒಟ್ಟು ಎಂಟು ಹರಿಜನಕೇರಿಗಳನ್ನು ಬೆಳಗಾವಿ ನಗರದಲ್ಲಿ ಗುರುತಿಸಿದ್ದಾರೆ.[೪] ಅವುಗಳನ್ನು ಈ ಮೇಲಿನ ಎರಡೂ ಪ್ರದೇಶಗಳು ಒಳಗೊಂಡಿವೆ.

ಬೆಳಗಾವಿ ನಗರದ ಹಬ್ಬದ ಆಚರಣೆಯ ಮತ್ತೊಂದು ವೈಶಿಷ್ಟ್ಯ ರಂಗಪಂಚಮಿ. ಇದು ಖಾಸಬಾಗ, ವಡಗಾವಿ ಮತ್ತು ಶಹಾಪೂರ ಪ್ರದೇಶಗಳಲ್ಲಿ ಕಂಡುಬರುತ್ತದೆ. ಇಲ್ಲಿ ಕಾಮದಹನವಾದ ಐದನೆಯ ದಿನಕ್ಕೆ ಬಣ್ಣವನ್ನು ಆಡುತ್ತಾರೆ. ಈ ಪ್ರದೇಶಗಳಲ್ಲಿ ಕನ್ನಡ ಮತ್ತು ಮರಾಠಿ ಎರಡೂ ಭಾಷೆಯ ಜನರಿರುವುದರಿಂದ ಹೋಳಿ ಆಚರಣೆಯು ವೈಶಿಷ್ಟ್ಯವನ್ನು ಪಡೆದುಕೊಂಡಿದೆ. ಎರಡೂ ಭಾಷೆಯ ಜನರು ಸೌಹಾರ್ದತೆಯಿಂದ ಈ ಹಬ್ಬವನ್ನು ಆಚರಿಸುತ್ತಾರೆ. ಎಲ್ಲಿಯೂ ಭಾಷೆ, ಗಡಿಗಳ ತಾರತಮ್ಯ ಕಂಡುಬರುವುದಿಲ್ಲ. ಇದೇ ಬೆಳಗಾವಿಯಲ್ಲಿಯ ಹಬ್ಬಗಳ ವೈಶಿಷ್ಟ್ಯ

**ಹೋಳಿ ಮಿಲನ್** : ಬೆಳಗಾವಿ ಹೋಳಿಹಬ್ಬಕ್ಕೆ ಹೊಸ ಮೆರಗು ಕಳೆ ತಂದು ಕೊಟ್ಟಿರುವುದು 'ಹೋಳಿ ಮಿಲನ್' ಕಾರ್ಯಕ್ರಮ. ಈ ಆಚರಣೆಯಲ್ಲಿ ಸುಮಾರು ೨೫ ರಿಂದ ೩೦ ಸಾವಿರ ಜನರು ಏಕಕಾಲಕ್ಕೆ ಬಣ್ಣದಾಟವನ್ನು ಆಡುತ್ತಾರೆ. ಟಿಳಕವಾಡಿಯ ಲೀಲೆ ಮೈದಾನದಲ್ಲಿ ಆಯೋಜಿಸಲಾಗುವ ಈ ಕಾರ್ಯಕ್ರಮದಲ್ಲಿ ಮಹಾರಾಷ್ಟ್ರ, ಗೋವಾ ರಾಜ್ಯದಿಂದಲೂ ಕಲಾವಿದರು, ಆಸಕ್ತರು ಆಗಮಿಸಿ ವೈವಿಧ್ಯಮಯವಾಗಿ ಹೋಳಿ ಆಚರಿಸುತ್ತಾರೆ.

ಸಾಂಪ್ರದಾಯಿಕವಾಗಿ ಆಚರಿಸಲ್ಪಡುತ್ತಿದ್ದ ಹೋಳಿ ಹಬ್ಬವು ಆಧುನಿಕ ಶೈಲಿಯ ಮೆರಗನ್ನು ಪಡೆದುಕೊಂಡು ವಿಶಿಷ್ಟ ಸಂಪ್ರದಾಯವನ್ನು ಹುಟ್ಟು ಹಾಕಿದೆ. ಈ ಬೆಳವಣಿಗೆಯು ಬೆಳಗಾವಿಯಲ್ಲಿ ಸಾಂಸ್ಕೃತಿಕ ಬಾಂಧವ್ಯಕ್ಕೆ ಕಾರಣವಾಗಿದೆ.

ಬೆಳಗಾವಿಯಲ್ಲಿಯ ಹೋಳಿ ಹಬ್ಬದ ಆಚರಣೆಯು ಒಂದು ಕಡೆ ಧರ್ಮ, ಸಂಪ್ರದಾಯ, ನಂಬಿಕೆಗಳನ್ನು ಪ್ರತಿನಿಧಿಸುತ್ತಿದ್ದರೆ ಮತ್ತೊಂದು ಕಡೆ ಆಧುನಿಕ ಜೀವನ ಶೈಲಿಯ ಆಕರ್ಷಣೆಗೆ ಒಳಗಾಗಿ ಹೊಸಪದ್ಧತಿ, ಪರಂಪರೆಯನ್ನು ಉಂಟುಮಾಡುತ್ತಿದೆ. ಆದರೆ ಎರಡೂ ಆಚರಣೆಗಳ ಉದ್ದೇಶ ಒಂದೇ ಆಗಿದೆ. ಅಲ್ಲದೆ ಬಹುಸಂಸ್ಕೃತಿಯ ನೆಲೆಯಾಗಿರುವ ಬೆಳಗಾವಿಗೆ ಇದು ಅನಿವಾರ್ಯ

**ಯುಗಾದಿ ಹಬ್ಬ:** ಯುಗಾದಿ ಸೃಷ್ಟಿಯ ಆರಂಭದ ಸೂಚನೆ ಹೊಸತನ. ಸಂಭ್ರಮದ ಪ್ರತೀಕದ ಶ್ರೀಮಂತ ಹಬ್ಬವಿದು. ಕರ್ನಾಟಕದಲ್ಲಿ ಇದನ್ನು 'ಯುಗಾದಿ' ಎಂದು ಆಚರಿಸಿದರೆ ಮಹಾರಾಷ್ಟ್ರದಲ್ಲಿ 'ಗುಡಿಪಾಡವಾ' ಎಂದು ಆಚರಿಸುತ್ತಾರೆ. ಬಹುಸಂಸ್ಕೃತಿಯ ಬೆಳಗಾವಿಯಲ್ಲಿ ಎರಡೂ ರೀತಿಯ ಆಚರಣೆ ಕಂಡುಬರುತ್ತದೆ.

ಹಿಂದೂ ಪಂಚಾಂಗದ ಪ್ರಕಾರ ಚೈತ್ರ ಶುದ್ಧಪಾಡ್ಯ ಯುಗದ ಆದಿಯ ದಿನ. ಬ್ರಹ್ಮಸೃಷ್ಟಿ ಆರಂಭಿಸಿದ ಮೊದಲ ದಿನ. ವೇದಾಂಗ ಜ್ಯೋತಿಷ್ಯದ ಪ್ರಕಾರ ಭಾರತದಲ್ಲಿ ಸೌರಮಾನ ಹಾಗೂ ಚಂದ್ರಮಾನ ಯುಗಾದಿಗಳ ಆಚರಣೆಯಿದೆ. ಚಂದ್ರನ ಕಾಲಗತಿಯನ್ನು ಲೆಕ್ಕಕ್ಕೆ ತೆಗೆದುಕೊಂಡು ಸೃಷ್ಟಿಯ ದಿನವನ್ನು ಆಚರಿಸುವ ಚಂದ್ರಮಾನ ಯುಗಾದಿಯನ್ನು ಕರ್ನಾಟಕ, ಮಹಾರಾಷ್ಟ್ರಗಳಲ್ಲಿ ಆಚರಿಸುತ್ತಾರೆ. ಅದರಂತೆ ಬೆಳಗಾವಿಯಲ್ಲಿಯೂ ಚಂದ್ರಮಾನ ಯುಗಾದಿಯ ಆಚರಣೆ ಕಂಡುಬರುತ್ತದೆ.

ನೀರು ತುಂಬುವ ಹಬ್ಬ: ಚಂದ್ರಮಾನ ಯುಗಾದಿ ಹಬ್ಬವನ್ನು ಬೆಳಗಾವಿಯಲ್ಲಿ ವಿಶಿಷ್ಟವಾಗಿ ಆಚರಿಸುತ್ತಾರೆ. ಕನ್ನಡ ಮತ್ತು ಮರಾಠಿ ಜನರು ಸೇರಿ ಸೌಹಾರ್ದತೆಯಿಂದ ಇದನ್ನು ಆಚರಿಸುತ್ತಾರೆ. ಯುಗಾದಿಯ ಮುನ್ನಾದಿನ ನೀರು ತುಂಬುವ ಹಬ್ಬವನ್ನು ಆಚರಿಸಲಾಗುತ್ತದೆ. ಅಂದು ಮನೆಯನ್ನೆಲ್ಲ ಸ್ವಚ್ಛಗೊಳಿಸಿ ಸ್ನಾನಗೃಹ ಹಾಗೂ ಅಡುಗೆ ಕೋಣೆಗಳಲ್ಲಿ ಹಳೆಯ ನೀರನ್ನು ತೆಗೆದು ಹೊಸ ನೀರನ್ನು ತುಂಬುತ್ತಾರೆ. ಯುಗಾದಿಯ ಅಭ್ಯಂಜನಕ್ಕಾಗಿ ನೀರು ಕಾಯಿಸುವ ಪಾತ್ರೆಗಳನ್ನು ಒಲೆಯ ಮೇಲಿಟ್ಟು ಅದರ ಸುತ್ತಲೂ ರಂಗವಲ್ಲಿಯನ್ನು ಹಾಕಿ ಅರಿಶಿಣ, ಕುಂಕುಮವನ್ನು ಹಚ್ಚುತ್ತಾರೆ. ಪಾತ್ರೆಗೆ ಹಸಿ ಬಳ್ಳಿಯನ್ನು ಕಟ್ಟುತ್ತಾರೆ. ಇದನ್ನು 'ನೀರು ತುಂಬುವ ಹಬ್ಬ'ವೆಂದೇ ಆಚರಿಸುತ್ತಾರೆ. ಇದು ಕನ್ನಡ–ಮರಾಠಿ ಎರಡೂ ಸಮುದಾಯದವರಲ್ಲಿ ಕಂಡುಬರುತ್ತದೆ.

ಅಭ್ಯಂಜನ ಸ್ನಾನ: ಯುಗಾದಿಯ ದಿನದಂದು ಅಭ್ಯಂಜನ ಸ್ನಾನ ಎಲ್ಲಾ ಕಡೆಯು ನಡೆದುಕೊಂಡು ಬಂದ ಸಂಪ್ರದಾಯವಾಗಿದೆ. ಆದರೆ ಬೆಳಗಾವಿಯಲ್ಲಿ ಒಂದು ಮಹತ್ವ ಬಂದಿದ್ದು ಇಲ್ಲಿ ತಯಾರಾಗುವ ಅಂಗಮರ್ಧನ ಎಣ್ಣೆಯನ್ನು ಬಳಸುವುದರಲ್ಲಿ. ಎಣ್ಣೆಯನ್ನು ಆಯುರ್ವೇದ ಪದ್ಧತಿಯಿಂದ ತಯಾರಿಸಲಾಗಿರುವುದರಿಂದ ಇದು ವಿಶೇಷವಾಗಿ ಬೆಳಗಾವಿಯಲ್ಲಿ ಮಹತ್ವ ಪಡೆದುಕೊಂಡಿದೆ. ಹಲವಾರು ವಾತರೋಗ ನಿವಾರಣೆಗೆ ಇಲ್ಲಿ ಎಣ್ಣೆಯನ್ನು ತಯಾರಿಸಲಾಗುತ್ತದೆ. ಬೆಳಗಾವಿಯ ಸುತ್ತಮುತ್ತಲಿನ ಊರಿನ ಜನರೆಲ್ಲಾ ಇಲ್ಲಿಯ ಎಣ್ಣೆಯನ್ನೇ ಬಳಸುತ್ತಾರೆ. ಸ್ನಾನದಲ್ಲಿ ಬೇವಿನ ಎಲೆಗಳನ್ನು ಬಳಸುತ್ತಾರೆ. ಆದರೆ ನಗರದೊಳಗೆ ಎಲ್ಲಿಯೂ ಬೇವಿನ ಮರಗಳು ಕಂಡುಬರುವುದಿಲ್ಲ. ಹೀಗಾಗಿ ಯುಗಾದಿಯ ಸಂದರ್ಭದಲ್ಲಿ ಬೇವಿನ ಎಲೆ, ಹೂವುಗಳ ಮಾರಾಟವು ಇಲ್ಲಿ ಹೆಚ್ಚಾಗಿರುತ್ತದೆ.

ಮರಾಠಿಗರ ಗುಡಿ ಪಾಡವಾ: 'ಯುಗಾದಿ' ಹಬ್ಬವನ್ನು ಮರಾಠಿಗರು 'ಗುಡಿ ಪಾಡವಾ' ಎಂದು ಆಚರಿಸುತ್ತಾರೆ. ಮಹಾರಾಷ್ಟ್ರದಲ್ಲಿ ಆಚರಿಸುವ ಪದ್ಧತಿಯಂತೆ ಬೆಳಗಾವಿಯಲ್ಲಿ ಮರಾಠಿಗರು ಆಚರಿಸುತ್ತಾರೆ. ಯುಗಾದಿಯ ದಿನದಂದು ಅಭ್ಯಂಜನ ಸ್ನಾನವಾದ ಬಳಿಕ ಉದ್ದವಾದ ಬಿದಿರಿನ ಕಂಬಕ್ಕೆ ತಾಮ್ರದ ತಂಬಿಗೆಯನ್ನು ಬೊರಲಾಗಿ ಹಾಕಿ ಮೇಲಿನ ತುದಿಗೆ ಕೇಸರಿ ಧ್ವಜ (ಭಗವಾಧ್ವಿಜ)ವನ್ನು ಕಟ್ಟಿ ಅದನ್ನು ಮನೆಯ ಮುಂದೆ ನಿಲ್ಲಿಸುತ್ತಾರೆ. ಈ ಕಂಬಕ್ಕೆ ಮನೆ ಮಂದಿಯೆಲ್ಲ ಸೇರಿ ಪೂಜೆ ಮಾಡಿ ಆರತಿ ಬೆಳಗುತ್ತಾರೆ. ಮರಾಠಿಗರ ಈ ಆಚರಣೆ ಇಂದು ಬೆಳಗಾವಿಯಲ್ಲಿ ಎಲ್ಲ ಜನಸಮುದಾಯದಲ್ಲಿ ಕಂಡುಬರುತ್ತದೆ.

ಬಸವನ ಬೀದಿಯ ಬಸವಣ್ಣನ ಜಾತ್ರೆ: ಪ್ರಾಚೀನ ಕಾಲದಿಂದಲೂ ಈ ಜಾತ್ರೆ ಮಹತ್ವವನ್ನು ಪಡೆದುಕೊಂಡಿದೆ. ಯುಗಾದಿಯ ಸಂದರ್ಭದಲ್ಲಿ ಜರುಗುವ ಬಸವನ ಬೀದಿಯ ಬಸವಣ್ಣ ದೇವರ ಜಾತ್ರೆಯು ಬೆಳಗಾವಿಯ ಜನಜೀವನದಲ್ಲಿ ಒಂದು ಮಹತ್ವದ ಪಾತ್ರವನ್ನು ವಹಿಸಿದೆ. ಧರ್ಮ, ಭಾಷೆಯ ಗೊಂದಲವಿಲ್ಲದೆ ಜರುಗುವ ಈ ಜಾತ್ರೆಯಲ್ಲಿಯ ಹಲವಾರು ಆಚರಣೆ ಪದ್ಧತಿಗಳು ನಡೆದುಬಂದಿವೆ. ಯುಗಾದಿಯ ಸಂಭ್ರಮದ ಜೊತೆಯಲ್ಲಿಯೇ ಈ ಜಾತ್ರೆಯು ಜರುಗುತ್ತದೆ.

ಯುಗಾದಿಯ ದಿನದಂದು ನಗರದ ತುಂಬೆಲ್ಲಾ ವಿವಿಧ ಧಾರ್ಮಿಕ ಕಾರ್ಯಗಳೂ ಜರುಗುತ್ತವೆ. ಸಾಮೂಹಿಕವಾಗಿ ಪಂಚಾಂಗ ಶ್ರವಣ ವರ್ಷದ ಫಲವನ್ನು ಕೇಳುವುದು, ಸಂಜೆ ಚಂದ್ರ ದರ್ಶನ. ಪಗಟೆ ಆಟ, ಇಸ್ಪಿಟ್ ಆಟ ಮುಂತಾದ ಆಟಗಳು ಮನರಂಜನೆಗಾಗಿ ನಡೆಯುತ್ತವೆ.

ಬೇವು-ಬೆಲ್ಲ : ಯುಗಾದಿಯ ಹಬ್ಬಕ್ಕೂ ಬೇವಿಗೂ ಅತ್ಯಂತ ಅರ್ಥಪೂರ್ಣವಾದ ಸಂಬಂಧವಿದೆ. ಸಿಹಿ ಕಹಿಗಳು ಸುಖ-ದುಃಖಗಳ ಅರ್ಥವನ್ನು ಹೊಂದಿದ್ದಲ್ಲದೆ ವೈದ್ಯಕೀಯ ಮಹತ್ವವನ್ನು ಒಳಗೊಂಡಿದೆ. ಹೀಗಾಗಿ ಎಲ್ಲ ಕಡೆಗಳಂತೆ ಬೆಳಗಾವಿಯಲ್ಲಿಯೂ ಯುಗಾದಿಯ ಸಂದರ್ಭದಲ್ಲಿ ಬೇವು-ಬೆಲ್ಲವನ್ನು ಹಂಚಿ ತಿನ್ನುತ್ತಾರೆ. ಬೇವು-ಬೆಲ್ಲ-ಮೆಣಸು-ಜೀರಿಗೆಗಳ ಮಿಶ್ರಣವನ್ನು ಸೇವಿಸುತ್ತಾರೆ.

ಬದಲಾದ ಯುಗಾದಿಹಬ್ಬದ ಆಚರಣೆ: ಆಧುನಿಕ ಯುಗದಲ್ಲಿ ಜೀವನಕ್ರಮ ಬದಲಾವಣೆಗೊಂಡಿದ್ದರಿಂದ ಹಬ್ಬಗಳ ಆಚರಣೆಯಲ್ಲಿಯೂ ಹೊಸತನ ಕಂಡುಬರುತ್ತದೆ. ಬೆಳಗಾವಿಯಲ್ಲಿಯೂ ಈ ಹೊಸತನದ ಛಾಯೆಯನ್ನು ಕಾಣಬಹುದಾಗಿದೆ. ಸಾಂಪ್ರದಾಯಿಕವಾಗಿ ಆಚರಣೆ ಒಂದು ಕಡೆ ಕಂಡು ಬಂದರೆ ಮತ್ತೊಂದು ಕಡೆ ಯುವಜನಾಂಗ ಯುಗಾದಿಯನ್ನು ಬೇರೆ ರೀತಿಯಲ್ಲಿಯೇ ಆಚರಿಸುತ್ತಾರೆ. ಪಿಕನಿಕ್ ಹೋಗುವುದು, ಸಿನಿಮಾ, ಚಾರಣ-ಹೀಗೆ ಯುಗಾದಿಹಬ್ಬವನ್ನು ಆಚರಿಸುತ್ತಾರೆ.

ಒಟ್ಟಿನಲ್ಲಿ ಬೆಳಗಾವಿಯಲ್ಲಿ ಯುಗಾದಿ ಹಬ್ಬದ ಆಚರಣೆಗೆ ವಿಶೇಷತೆ ಕಂಡುಬರುತ್ತದೆ. ಬಹುಸಂಸ್ಕೃತಿಯ ನೆಲೆಯ ಹಿನ್ನೆಲೆಯಲ್ಲಿ ಸಾಂಪ್ರದಾಯಿಕ ವೈವಿಧ್ಯತೆ ಕಂಡುಬಂದರೆ, ಆಧುನಿಕ ಫ್ಯಾಶನ್ ಯುಗದ ಪರಿಣಾಮ ಕಾರಣವಾಗಿ ಯುವಜನರಲ್ಲಿ ಹೊಸತನವನ್ನು ಕಾಣಬಹುದಾಗಿದೆ.

**ನಾಗರ ಪಂಚಮಿ :** ಶ್ರಾವಣ ಮಾಸದ ಆರಂಭದಲ್ಲಿ ಬರುವ ನಾಗರ ಪಂಚಮಿ ಹಬ್ಬವನ್ನು ಬೆಳಗಾವಿಯಲ್ಲಿ ಮೂರು ದಿನ ಆಚರಿಸಲಾಗುತ್ತದೆ. ಮೊದಲ ದಿನ ತೃತೀಯ ಅತಿಥಿಯಂದು ರೊಟ್ಟಿ ಹಬ್ಬ. ಅಂದು ಜೋಳದ ರೊಟ್ಟಿ, ಪಲ್ಯ, ಚಟ್ನಿ, ಸಾಲಾಡ್‌ಗಳಿಂದ ರುಚಿಕರ ಅಡಿಗೆಯನ್ನು ಮಾಡಿ ಆಹಾರವನ್ನು ಸೇವಿಸುತ್ತಾರೆ. ಎರಡನೆಯ ದಿನ ಚತುರ್ಥಿಯಂದು ನಾಗಪೂಜೆ, ನಾಗಾರಾಧನೆ ನಡೆಯುತ್ತದೆ. ಹಾವಿನ ಹುತ್ತಗಳ ಪೂಜೆ ಇಲ್ಲವೇ ಹುತ್ತದ

ಮಣ್ಣಿನಲ್ಲಿ ತಯಾರಿಸಿದ ನಾಗಮೂರ್ತಿಗೆ ಪೂಜೆ ನಡೆಯುತ್ತದೆ. ಮೂರನೆಯ ದಿನ ಪಂಚಮಿಯಂದು ಹುರಕ್ಕಿ, ಮಂಡಕ್ಕಿ, ಗೋದಿ, ರವೆ, ಸಕ್ಕರೆ, ಬುಂದೆ, ಕೊಬ್ಬರಿ, ಶೇಂಗಾ, ಚಕ್ಕಲಿ ಹೀಗೆ ನಾನಾ ಬಗೆಯ ಉಂಡಿಗಳನ್ನು ಕಟ್ಟಿ ತಿನ್ನುವುದೇ ವಿಶೇಷ. ಶ್ರಾವಣ ಮಾಸದಲ್ಲಿ ಸುರಿಯುವ ಮಳೆಯಲ್ಲಿ ದೇಹಸ್ಥಿತಿ ತಂಪಾಗಿರುತ್ತದೆ. ಹೀಗಾಗಿ ಬೆಲ್ಲ ಹಾಗೂ ಗೋದಿ ಪದಾರ್ಥಗಳು ದೇಹದ ಆರೋಗ್ಯ ಸ್ಥಿತಿಯನ್ನು ಸಮತೋಲನವಾಗಿ ಕಾಪಾಡಲು ಇಂಥ ಉಂಡಿಗಳು ಸೂಕ್ತ ಎನ್ನುವುದು ಮೊದಲಿನಿಂದ ಬೆಳೆದು ಬಂದಿರುವ ತಿಳುವಳಿಕೆ. ನಂತರ ಸಂಬಂಧಿಕರಿಗೆ ಉಂಡಿಗಳನ್ನು ಹಂಚಿ ಸಂಭ್ರಮಪಡುವುದರೊಂದಿಗೆ ಸಂಬಂಧಗಳನ್ನು ಇನ್ನಷ್ಟು ಗಟ್ಟಿಗೊಳಿಸುವ ಕ್ರಮಗಳನ್ನು ಅನುಸರಿಸುತ್ತಾರೆ. ನಾಗಮೂರ್ತಿಗಳನ್ನು ಹುತ್ತದ ಮಣ್ಣಿನಿಂದ ಮಾಡಿ ನಗರದ ಪೇಟೆಯಲ್ಲಿ ಮಾರಾಟ ಮಾಡಲಾಗುತ್ತದೆ. ರವಿವಾರ ಪೇಟೆ, ಗಣಪತಿಗಲ್ಲಿ, ಮಾರುತಿಗಲ್ಲಿ ಮುಂತಾದ ಕಡೆಗಳಲ್ಲಿ ನಾಗಮೂರ್ತಿಗಳು ಮಾರಾಟಕ್ಕೆ ಸಿಗುತ್ತವೆ. ಇನ್ನು ಕೆಲವರು ಮನೆಮನೆಗಳಿಗೆ ಹೋಗಿ ಮಾರಾಟ ಮಾಡುತ್ತಾರೆ. ಕೆಲವು ಮನೆತನಗಳಿಗೆ ಬಡಿಗರು, ಕುಂಬಾರರು ನಾಗಮೂರ್ತಿಗಳನ್ನು ತಂದು ಕೊಡುತ್ತಾರೆ. ಇವರಿಗೆ ವರ್ಷದ ಬಾಬತ್ತು ಇರುತ್ತದೆ. ನಾಗಮೂರ್ತಿಗಳನ್ನು ತಂದವರಿಗೆ ಉಂಡಿ, ಚಕ್ಕಲಿಗಳನ್ನು ಕೊಡುವರು. ನಾಗರ ಪಂಚಮಿಗೆ ಗಂಡನ ಮನೆಯಿಂದ ತವರುಮನೆಗೆ ಹೆಣ್ಣುಮಕ್ಕಳು ಬರುತ್ತಾರೆ. ಹಬ್ಬದ ಉಡುಗೊರೆಯಾಗಿ ಸೀರೆ, ಬಂಗಾರವನ್ನು ತವರುಮನೆಯವರು ನೀಡುತ್ತಾರೆ.

ನಾಗರಪಂಚಮಿ ಹಬ್ಬಕ್ಕೂ ಜೋಕಾಲಿಗೂ ಅವಿನಾಭಾವ ಸಂಬಂಧವಿದೆ. ಪಂಚಮಿ ಹಬ್ಬ ಬಂದರೆ ಪ್ರತಿ ಮನೆಯಲ್ಲಿಯೂ ಬೀದಿಯಲ್ಲಿ ಜೋಕಾಲಿಗಳ ಬರಾಟೆ ಆರಂಭವಾಗುತ್ತದೆ. ಉಂಡಿ, ಚಕ್ಕಲಿ ತಿನ್ನುತ್ತಾ ಜೋಕಾಲಿ ಆಡುವುದೇ ಒಂದು ಹಬ್ಬವಾಗಿ ಪರಿಣಮಿಸಿರುತ್ತದೆ. ಅದರಲ್ಲಿಯೂ ಹೆಣ್ಣು ಮಕ್ಕಳು, ಚಿಕ್ಕ ಮಕ್ಕಳಿಗೆ ಜೋಕಾಲಿ ಬೇಕೆ ಬೇಕು. ಪಂಚಮಿಯಂದು ನಾಗಮೂರ್ತಿಗೆ ಹಾಲುಣಿಸುವುದು ಸಾಮಾನ್ಯವಾಗಿ ಎಲ್ಲ ಕಡೆಗೂ ಕಂಡು ಬರುವಂತೆ ಬೆಳಗಾವಿಯಲ್ಲಿಯೂ ಕಂಡುಬರುತ್ತದೆ. ಮಣ್ಣಿನ ನಾಗಮೂರ್ತಿಗೆ, ಕೆಲವರು ಬೆಳ್ಳಿಯ ನಾಗಮೂರ್ತಿಗೆ ಹಾಲೆರೆಯುತ್ತಾರೆ. ಕರಕಿಯ ಕುಡಿಯನ್ನು ತಂದು ಅದನ್ನು ಬಟ್ಟಲಲ್ಲಿಯ ಹಾಲಲ್ಲಿ ಎದ್ದಿ ನಾಗಮೂರ್ತಿಯ ಮೇಲೆ ಹಾಲೆರೆಯುತ್ತಾರೆ. ಹೀಗೆ ಹಾಲನ್ನು ಎರೆಯುವಾಗ ಎಲ್ಲರ ಪಾಲನ್ನು ಎರೆಯುತ್ತಾರೆ. ತಂದೆ, ತಾಯಿ, ಅಣ್ಣ, ತಮ್ಮ ಹೀಗೆ ಎಲ್ಲ ಸಂಬಂಧಗಳನ್ನು ನೆನೆಸುತ್ತಾ ಹಾಲನ್ನು ಎರೆಯುತ್ತಾರೆ. ಮನೆದೇವರ ಪಾಲು, ಇಷ್ಟದೈವದ ಪಾಲು, ಗಣಪತಿ, ಬಸವಣ್ಣ, ಗ್ರಾಮದೇವರು ಹೀಗೆ ಎಲ್ಲ ದೇವರ ಪಾಲನ್ನು ಎರೆದು ಕೊನೆಗೆ ತಮ್ಮ ಪಾಲಿನ ಹಾಲನ್ನು ಎರೆಯುತ್ತಾರೆ. ನಾಗಪ್ಪನಿಗೆ ಎಂದೇ ದೊಡ್ಡ ದೊಡ್ಡ ಗಾತ್ರದ ಉಂಡಿಗಳನ್ನು ಕಟ್ಟಿರುತ್ತಾರೆ. ಉಂಡಿ, ಎಳ್ಳು, (ಎಳ್ಳಿನ ಜೋಳದಿಂದ ಹುರಿದು ಮಾಡಿದ್ದು) ನೆನಸಿದ ಕಡಲೆ, ತಂಬಿಟ್ಟು, ಅಳ್ಳಿಟ್ಟು ಮುಂತಾದವುಗಳನ್ನು ನೈವೇದ್ಯ ಹಿಡಿಯುತ್ತಾರೆ. ನಾಗಪ್ಪನ ದೊಡ್ಡ ಗಾತ್ರದ ಉಂಡಿಗಳನ್ನು ಮನೆಯಲ್ಲಿಯ ಎಲ್ಲಾ ಉಂಡಿಗಳು ತೀರಿದ ಮೇಲೆ ತಿನ್ನುತ್ತಾರೆ. ನಾಗಪಂಚಮಿಯ ದಿನದಂದು ಕೆಲವರು ಹೊಲಕ್ಕೆ ಹೋಗಿ ಹುತ್ತಕ್ಕೆ ಪೂಜೆ ಸಲ್ಲಿಸಿ ಹಾಲು ಎರೆದು ಬರುತ್ತಾರೆ. ದೇವಾಲಯಗಳಲ್ಲಿರುವ ನಾಗಮೂರ್ತಿಗಳಿಗೆ ಹೆಣ್ಣು ಮಕ್ಕಳು ಪೂಜೆ ಸಲ್ಲಿಸಿ ಹಾಲು ಎರೆಯುತ್ತಾರೆ.

**ಗಣೇಶೋತ್ಸವ:** ಬೆಳಗಾವಿಯಲ್ಲಿ ಜರಗುವ ಗಣೇಶೋತ್ಸವಕ್ಕೆ ಐತಿಹಾಸಕ ಮಹತ್ವವಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ಗಣೇಶೋತ್ಸವ ಹಬ್ಬ ಕೇವಲ ಕುಟುಂಬದ ಆಚರಣೆಯಾಗಿತ್ತು. ಆದರೆ ೧೮೯೦ರಲ್ಲಿ ಸಮಾಜ ಸುಧಾರಕ ಸ್ವಾತಂತ್ರ್ಯಯೋಧ ಲೋಕಮಾನ್ಯ ಬಾಲಗಂಗಾಧರ ಟಿಳಕರು ಈ ಹಬ್ಬಕ್ಕೆ ಸಾರ್ವಜನಿಕ ಸ್ವರೂಪ ನೀಡಿದರು. ಬೆಳಗಾವಿಯಲ್ಲಿ ಬ್ರಿಟಿಷರ ವಿರುದ್ಧದ ಸ್ವಾತಂತ್ರ್ಯ ಸಂಗ್ರಾಮವು ತೀವ್ರವಾದ ಹೋರಾಟದಿಂದ ಕೂಡಿತ್ತು. ಈ ಸಂದರ್ಭದಲ್ಲಿ ಗಂಗಾಧರರಾಯ ದೇಶಪಾಂಡೆಯವರ ಆಹ್ವಾನದ ಮೇರೆಗೆ ೧೮೯೦ರಲ್ಲಿ ಬೆಳಗಾವಿಗೆ ಬಂದ ಟಿಳಕರು ಮಾರ್ಕೇಟಿನ ಝುಂಡಾ ಚೌಕ ಪ್ರದೇಶದಲ್ಲಿ ಗಣೇಶನ ಪ್ರತಿಷ್ಠಾಪನೆ ಮಾಡಿ ಸ್ವಾತಂತ್ರ್ಯ ಹೋರಾಟಕ್ಕೆ ಹೊಸ ಸ್ವರೂಪವನ್ನು ನೀಡಿದರು. ಅಂದಿನಿಂದ ಪ್ರಾರಂಭವಾದ ಬೆಳಗಾವಿಯ ಸಾರ್ವಜನಿಕ ಗಣೇಶೋತ್ಸವವು ಇಂದು ದೇಶದ ಗಮನವನ್ನು ಸೆಳೆದಿದೆ. ಪುಣೆ, ಮುಂಬೈ ನಂತರ ಅತ್ಯಂತ ವಿಶಿಷ್ಟವಾಗಿ ವಿಜೃಂಭಣೆಯಿಂದ ಈ ಹಬ್ಬವನ್ನು ಆಚರಿಸಲಾಗುತ್ತದೆ. ಕರ್ನಾಟಕದಲ್ಲಿಯೇ ಇಲ್ಲಿಯಷ್ಟು ಸಂಭ್ರಮ, ವೈವಿಧ್ಯತೆ ಬೇರೆಲ್ಲಯೂ ಕಂಡುಬರುವುದಿಲ್ಲ. ಅಂದು ಪ್ರಾರಂಭಗೊಂಡ ಒಂದೇ ಒಂದು ಸಾರ್ವಜನಿಕ ಗಣೇಶೋತ್ಸವ ಮಂಡಳಿಯು ಇಂದು ೩೫೦ಕ್ಕೂ ಹೆಚ್ಚು ಸಾರ್ವಜನಿಕ ಮಂಡಳಿಗಳನ್ನು ಹೊಂದಿದೆ.

ಅಂದು ಗಣೇಶಮೂರ್ತಿಯನ್ನು ಸಾರ್ವಜನಿಕವಾಗಿ ಆಚರಿಸಲು ಬ್ರಿಟಿಷರು ಅನುವುಮಾಡಿಕೊಡಲಿಲ್ಲ. ಹೀಗಾಗಿ ಝುಂಟಾಚೌಕದಲ್ಲಿ ಎಸ್.ಬಿ. ಪಾಟ್ನೇಕರ ಎಂಬುವವರ ಅಂಗಡಿಯಲ್ಲಿ ಗಣೇಶನನ್ನು ಸ್ಥಾಪನೆಮಾಡಿ ಪೂಜಾ ಕಾರ್ಯಕ್ರಮವನ್ನು ಟಿಳಕರು ಹಮ್ಮಿಕೊಂಡರು. ಈ ಸಂದರ್ಭದಲ್ಲಿ ಗಂಗಾಧರ ದೇಶಪಾಂಡೆ, ಎಸ್.ವಿ. ಪಾಟ್ನೇಕರ, ವೈಜಪ್ಪಣ್ಣ ಸಿದ್ದಣ್ಣವರ, ಬಿ.ಎಲ್. ಘಸಾರಿ, ಪ್ರಭಾಕರ ಕಲಘಟಗಿ ಮುಂತಾದವರು ಸೇರಿ ಗಣೇಶಮೂರ್ತಿಯನ್ನು ಪ್ರತಿಷ್ಠಾಪಿಸಿದರು. ಮುಂದೆ ೧೮೯೬ರಲ್ಲಿ ರವಿವಾರಪೇಟೆಯಲ್ಲಿ ಗಣೇಶನ ಪ್ರತಿಷ್ಠಾಪನೆ ಮಾಡಲಾಯಿತು. ರವಿವಾರಪೇಟೆಯ ಗಣೇಶೋತ್ಸವ ಮಂಡಳಿಯು ೧೧೬ ವರ್ಷಗಳನ್ನು ಪೂರೈಸಿ ಇಂದಿಗೂ ಅತ್ಯಂತ ವೈಭವದಿಂದ ಗಣೇಶ ಹಬ್ಬವನ್ನು ಆಚರಿಸುತ್ತಿದೆ. ಮಂಡಳಿಯು ಗಣೇಶ ಪ್ರತಿಷ್ಠಾಪನೆಗೆ ಚಂದಾ ಎತ್ತುವುದಿಲ್ಲ. ಪೂಜೆಗೆ ಇಟ್ಟ ೫೧ ಕಾಯಿಗಳನ್ನು ಲೀಲಾವು(ಸವಾಲ)ಮಾಡಿ ಅದರಿಂದ ಬಂದ ಹಣದಿಂದ ಉತ್ಸವವನ್ನು ಖರ್ಜು-ವೆಚ್ಚಗಳನ್ನು ನಡೆಸುತ್ತಾರೆ. ಶತಮಾನೋತ್ಸವವನ್ನು ಕಂಡ ಝುಂಡಾಚೌಕದ ಮಧ್ಯವರ್ತಿ ಸಾರ್ವಜನಿಕ ಶ್ರೀಗಣಪತಿ ಉತ್ಸವ ಮಂಡಳಿಯು ಗಣೇಶ ಪ್ರತಿಷ್ಠಾಪನೆಯ ಜತೆಗೆ ಹತ್ತು ಹಲವು ಸಾಮಾಜಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತ ಬಂದಿದೆ. ಕ್ಯಾನ್ಸರ್ ಸೇರಿದಂತೆ ವಿವಿಧ ಬಡ ರೋಗಿಗಳ ಚಿಕಿತ್ಸೆಗೆ ನೆರವಾಗಿದೆ. ಕೆಳದ ಆರೇಳು ವರ್ಷದಿಂದ ಬಾಡಿ ಬಿಲ್ಡಿಂಗ್ ಸ್ಪರ್ಧೆ ಏರ್ಪಡಿಸುತ್ತಿದೆ.

**ಸಮರಸ ಸಹಬಾಳ್ವೆಯ ಹಬ್ಬ:** ಗಣೇಶ ಹಬ್ಬವು ಕೇಲವ ಆಚರಣೆಗೆ ಸೀಮಿತವಾಗದೆ ಆಚರಣೆಯಲ್ಲಿಯೇ ಹಲವು ಅರ್ಥ ಸಾಧ್ಯತೆಗಳನ್ನು ಹೊಂದಿ ಆಚರಿಸಲ್ಪಡುತ್ತದೆ. ಸ್ವಾತಂತ್ರ್ಯ ಪೂರ್ವದಲ್ಲಿ ಹೋರಾಟಗಾರರನ್ನು

ಸಂಘಟಿಸಲು ಪ್ರಾರಂಭಗೊಂಡು ಸ್ವಾತಂತ್ರ್ಯದ ನಂತರವೂ ಈ ಹಬ್ಬವು ಮುಂದುವರೆದು ಹಬ್ಬದ ಸಂದರ್ಭದಲ್ಲಿ ಸೇರುವ ಬಂಧು, ಬಳಗ, ಸ್ನೇಹಿತರು ಸಮರಸದಿಂದ ಜೀವನ ಸಾಗಿಸುವಲ್ಲಿ ಪರಿಣಾಮ ಬೀರಿದೆ. ಧರ್ಮ, ಜಾತಿ, ಭಾಷೆಗಳ ಸಹಬಾಳಿತ್ವಕ್ಕೂ ಈ ಹಬ್ಬ ಕಾರಣವಾಗಿದೆ. ಗಡಿಸಮಸ್ಯೆಯಿಂದ ವೈಷಮ್ಯದ ಭಾವನೆ ಹೊಂದಿದ್ದ ಕನ್ನಡ-ಮರಾಠಿಗರು ಗಣೇಶನ ಹಬ್ಬದಂದು ಒಂದಾಗುತ್ತಾರೆ. ಭಾಷೆಯ ದ್ವೇಷವನ್ನು ಮರೆತು ಭಕ್ತಿ ಸಡಗರದಿಂದ ಆಚರಿಸುತ್ತಾರೆ. ಎಲ್ಲಿಯೂ ಭಾಷೆಯ ಜಗಳ ಕಂಡುಬರುವುದಿಲ್ಲ. ಇದು ಬೆಳಗಾವಿಯ ವೈಶಿಷ್ಟ್ಯ.

ಗಣಪತಿ ಪ್ರತಿಷ್ಠಾಪನೆಯ ಸಡಗರದಷ್ಟೇ ಸಂಭ್ರಮವು ಗಣಪತಿಯ ವಿಸರ್ಜನೆಯ ಸಂದರ್ಭದಲ್ಲಿಯೂ ಇರುತ್ತದೆ. ಬೆಳಗಾವಿಯ ಗಣಪತಿ ವಿಸರ್ಜನೆಯನ್ನು ನೋಡಲೆಂದೆ ನಾಡಿನ ಹಾಗೂ ಗೋವಾ ಮತ್ತು ಮಹಾರಾಷ್ಟ್ರದ ಮೊದಲಾದ ಪ್ರದೇಶಗಳಿಂದ ಸಾವಿರಾರು ಜನ ಆಗಮಿಸುತ್ತಾರೆ. ವಿಸರ್ಜನೆಯ ದಿನದಂದು ಮುಂಜಾನೆಯ ಪೂಜೆ ಮುಗಿಸಿ ಪ್ರಾರಂಭವಾದ ಮೆರವಣಿಗೆ ಮರುದಿನ ಬೆಳಗಿನವರೆಗೂ ಅಂದರೆ ಸುಮಾರು ೨೪ ಗಂಟೆಗಿಂತಲೂ ಹೆಚ್ಚು ಅವಧಿಯವರೆಗೆ ಮೆರವಣಿಗೆ ನಗರದ ತುಂಬೆಲ್ಲ ನಡೆಯುತ್ತದೆ. ನಗರದ ಸಾರ್ವಜನಿಕ ಗಣಪತಿಗಳನ್ನೆಲ್ಲ ಸಾಲುಸಾಲಾಗಿ ಪ್ರಮುಖ ಬೀದಿಗಳಲ್ಲಿ ಮೆರವಣಿಗೆಯ ಮೂಲಕ ವಾದ್ಯವೃಂದಗಳ ಜೊತೆಗೆ ಸಾಗಿಸಲಾಗುತ್ತದೆ. ಈ ಸಂದರ್ಭದಲ್ಲಿ ಪಟಾಕಿ ಸಿಡಿಸುವುದು ಕುಣಿಯುವುದು ಜಾನಪದ ಕಲಾತಂಡಗಳ ಕಲಾ ಪ್ರದರ್ಶನ ಮುಂತಾದವುಗಳು ಜರುಗುತ್ತವೆ. ಅಂದು ನಗರದ ಶಾಲೆ ಕಾಲೇಜುಗಳು, ವ್ಯಾಪಾರ ವಹಿವಾಟು, ವಾಹನ ಸಂಚಾರ ಇವರುವುದಿಲ್ಲ. ಗಣಪತಿಯ ವಿಸರ್ಜನೆಯು ಕಪಿಲೇಶ್ವರ ಹೊಂಡದಲ್ಲಿ ಜರುಗುತ್ತದೆ. ಇದಕ್ಕಾಗಿಯೇ ಹೊಂಡವನ್ನು ಪ್ರತಿವರ್ಷ ಸ್ವಚ್ಛಗೊಳಿಸಿ ನೀರು ತುಂಬಿಸಿ ತಳಿರು ತೋರಣಗಳಿಂದ ಅಲಂಕಾರಗೊಳಿಸಲಾಗುತ್ತದೆ. ಗಣಪತಿ ಹಬ್ಬವು ಸಾಮಾನ್ಯವಾಗಿ ೧೧ದಿನಗಳ ಕಾಲವಿರುತ್ತದೆ. ಸಾರ್ವಜನಿಕ ಗಣಪತಿಗಳನ್ನು ೧೧ ದಿನಕ್ಕೂ ಮತ್ತು ಮನೆಯಲ್ಲಿನ ಗಣಪತಿಗಳನ್ನು ಒಂದು, ಮೂರು, ಐದು, ಏಳು, ಒಂಬತ್ತು, ಹನ್ನೊಂದು-ಹೀಗೆ ಬೆಸ ಸಂಖ್ಯೆಯ ದಿನಗಳಂದು ವಿಸರ್ಜಿಸಲಾಗುತ್ತದೆ.

ಒಟ್ಟಿನಲ್ಲಿ ಗಣೇಶೋತ್ಸವದ ಸಂದರ್ಭದಲ್ಲಿ ಬೆಳಗಾವಿ ನಗರವು ಹಬ್ಬದ ವಾತಾವರಣವನ್ನು ಹೊಂದಿರುತ್ತದೆ. ಬೇರೆ ಬೇರೆ ಊರುಗಳಿಂದ ಸಾವಿರಾರು ಜನರು ಬೆಳಗಾವಿ ನಗರಕ್ಕೆ ಗಣಪತಿಯನ್ನು ನೋಡುವುದಕ್ಕಾಗಿಯೇ ಬಂದು ಹೋಗುತ್ತಾರೆ.

ನಂಬಿಕೆ ಆಚರಣೆಗಳು: ಗಣೇಶೋತ್ಸವದ ಸಂದರ್ಭದಲ್ಲಿ ಹಲವಾರು ಸಂಪ್ರದಾಯ, ಆಚರಣೆ, ನಂಬಿಕೆಗಳು ರೂಢಿಯಲ್ಲಿವೆ. ಗಣೇಶ ಚತುರ್ಥಿಯ ಮರುದಿನ ಇಲಿವಾರವೆಂದು ಆಚರಣೆಗೊಳ್ಳುತ್ತ ಬಂದಿವೆ. ಗಣೇಶ ಚತುರ್ಥಿಯ ಮರುದಿನ ಇಲಿವಾರ ಆಚರಿಸುತ್ತಾರೆ. ವಿಶೇಷವಾಗಿ ಇದನ್ನು ನೇಕಾರ ಸಮಾಜದವರು ಆಚರಿಸುತ್ತಾರೆ. ಇಲಿ ನೇಕಾರಿಗೆ ವೈರಿ. ಕಾರಣ ಅವರ ಮಗ್ಗದ ಎಳೆಗಳನ್ನು ಕಡಿದು ನಾಶ ಮಾಡುತ್ತದೆ. ಅದಕ್ಕಾಗಿಯೇ ಇಲಿಯನ್ನು ಆರಾಧಿಸುತ್ತಾರೆ. ಹೀಗೆ ಆರಾಧಿಸುವುದರಿಂದ ಇಲಿ ನಮ್ಮ ತಂಟೆಗೆ ಬರುವುದಿಲ್ಲವೆನ್ನುವುದು ನಂಬಿಕೆ ಬೆಳೆದುಬಂದಿದೆ.

ಇಲಿವಾರದಂದು ಕಣಕ(ಗೋಧಿಹಿಟ್ಟು)ದ ಎರಡು ಇಲಿಗಳನ್ನು ಮಾಡಿ ಅದಕ್ಕೆ ಹೂರಣತುಂಬಿ ಪೂಜೆ ಮಾಡಿ ಮಗ್ಗದ ಬಳಿ ಇಡುತ್ತಾರೆ. ಪೂಜೆ ನಂತರ ಅದರೊಳಗಿನ ಒಂದು ಇಲಿಯನ್ನು ಮನೆಯವರೆಲ್ಲರೂ ಪ್ರಸಾದ ರೂಪದಲ್ಲಿ ಹಂಚಿ ತಿನ್ನುತ್ತಾರೆ. ಒಂದನ್ನು ಇಲಿಗಳಿಗೆ ತಿನ್ನಲು ಬಿಡುತ್ತಾರೆ. ಜೊತೆಗೆ ಅಳ್ಳು, ಪುಟಾಣಿ, ಕೊಬ್ಬರಿ, ಕರೆದ ಎಣ್ಣೆ ತಿಂಡಿಗಳನ್ನು ಇಡುತ್ತಾರೆ. ಇಲಿವಾರದಂದು ನೇಕಾರರು ಮಗ್ಗದ ಕೆಲಸದಲ್ಲಿ ತೊಡಗುವುದಿಲ್ಲ. ಒಂದು ವೇಳೆ ಆ ದಿನ ಕೆಲಸಮಾಡಿದರೆ ಇಲಿಗಳು ಎಳೆಗಳನ್ನು ಕಡಿಯುತ್ತವೆ ಎನ್ನುವ ನಂಬಿಕೆ ಬೆಳೆದುಬಂದಿದೆ.

**ನವರಾತ್ರಿ ಉತ್ಸವ:** ಬೆಳಗಾವಿಯ ಸಾಂಸ್ಕೃತಿಕ ನೆಲೆ ಶ್ರೀಮಂತವಾಗಿರುವುದು ಇಲ್ಲಿ ಆಚರಿಸಲ್ಪಡುವ ಹಬ್ಬ, ಉತ್ಸವಗಳ ಮೂಲಕ. ಇಂತಹ ಹಬ್ಬಗಳಲ್ಲಿ ತುಂಬಾ ವಿಶಿಷ್ಟವಾಗಿ ಆಚರಿಸಲ್ಪಡುವ ಹಬ್ಬವೆಂದರೆ ನವರಾತ್ರಿ ಉತ್ಸವ.

ಹಿನ್ನೆಲೆ: ನವರಾತ್ರಿ ಅಪ್ಪಟ ದೇಶಿ ಹಬ್ಬ. ಮಹಾನವಮಿ, ಮಾನವಮಿ, ಮಾರ್ಲಮ್ಮಿ, ಮಾರ್ನೋಮಿ, ದಸರಾ, 'ವಿಜಯದಶಮಿ', 'ಬನ್ನಿಹಬ್ಬ', 'ಆಯುಧ ಪೂಜಾ', 'ಶರನ್ನವರಾತ್ರಿ' ನಾಡಹಬ್ಬ-ಹೀಗೆ ಹಲವು ಹೆಸರುಗಳಿಂದ ಕರೆಯಲಾಗುತ್ತದೆ. ಮೈಸೂರು ಭಾಗದಲ್ಲಿ 'ದಸರಾ' ಎಂಬ ಹೆಸರು ಹೆಚ್ಚು ಪ್ರಸಿದ್ಧಿಯನ್ನು ಪಡೆದುಕೊಂಡಿದೆ.

ನವರಾತ್ರಿ ಉತ್ಸವವು ಭಾರತೀಯ ಪಂಚಾಂಗದ ಪ್ರಕಾರ ಅಶ್ವಯುಜ ಮಾಸದ ಶುಕ್ಲಪಕ್ಷ ಪ್ರತಿಪದೆಯಿಂದ ನವಮಿಯವರೆಗೆ ಆಚರಿಸಲಾಗುತ್ತದೆ. ಸ್ತ್ರೀ ದೇವತಾರಾಧನೆಯೇ ನವರಾತ್ರಿಯ ವೈಶಿಷ್ಟ್ಯ ಮೂಲ ಪ್ರಕೃತಿಯೆನಿಸಿದ ಬ್ರಹ್ಮ, ವಿಷ್ಣು, ಮಹೇಶ ಇವರ ಶಕ್ತಿಯನ್ನು ಧರಿಸಿದ ಆದಿಪರಾಶಕ್ತಿಯನ್ನು ವಿವಿಧ ಸ್ವರೂಪಗಳಲ್ಲಿ ಒಂಬತ್ತು ದಿನವೂ ಪೂಜಿಸಲಾಗುತ್ತದೆ. ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿಯ ಆಗರವಾದ ಈ ದೇವಿ ಜೀವಕಂಟಕರನ್ನು ಕೊಂದು ಶಿಷ್ಟರನ್ನು ರಕ್ಷಿಸುತ್ತಾಳೆಂಬುದು ನಂಬಿಕೆ. ಶರನ್ನವರಾತ್ರಿಯ ಒಂಬತ್ತು ದಿನಗಳು ದೇವಿಯನ್ನು ವಿವಿಧ ಹೆಸರುಗಳಿಂದ ಪೂಜಿಸುವರು. ಮಹಾಕಾಳಿ, ಮಹಾಲಕ್ಷ್ಮೀ, ಕಾಳರಾತ್ರಿ, ಕಾತ್ಯಾಯಿನಿ, ಮಹಾಗೌರಿ, ಸಿದ್ಧಿದಾತ್ರಿ, ಮಹಾಸರಸ್ವತಿ, ದುರ್ಗೆ ಹಾಗೂ ಶಾಖಾಂಬರಿ ಎಂದು ದೇವಿಯನ್ನು ವಿವಿಧ ಒಂಬತ್ತು ಅವತಾರಗಳಲ್ಲಿ ಪೂಜಿಸಲಾಗುವುದು. ಒಟ್ಟಾರೆ ಇದು ಶಕ್ತಿದೇವತೆಯ ಆರಾಧನ, ಶಕ್ತಿಯ ಆರಾಧನೆ.

ಬೆಳಗಾವಿಯಲ್ಲಿ ನವರಾತ್ರಿ ಹಬ್ಬದ ಆಚರಣೆ ವಿಶಿಷ್ಟವಾಗಿದೆ. ಧರ್ಮ, ಜಾತಿ, ಭಾಷೆಗಳ, ಭೇದ-ಭಾವವಿಲ್ಲದೆ ಎಲ್ಲರೂ ಸೇರಿ ಆಚರಿಸುವ ಹಬ್ಬಗಳಲ್ಲಿ ಇದು ಒಂದಾಗಿದೆ. ಈ ಹಬ್ಬದ ಸಂದರ್ಭದಲ್ಲಿ ಆಚರಿಸುವ ಆಚರಣೆಗಳು ಬೆಳಗಾವಿಗೆ ಒಂದು ವಿಶಿಷ್ಟ ಸಂಸ್ಕೃತಿಯನ್ನು ಒದಗಿಸಿಕೊಟ್ಟಿವೆ. ಕನ್ನಡ-ಮರಾಠಿ, ಗುಜರಾತಿ ಭಾಷಿಕರಿಂದ ವೈವಿಧ್ಯಮಯವಾಗಿ ಕಂಡುಬರುತ್ತದೆ. ಹೆಚ್ಚಾಗಿ ಮರಾಠಿ ಸಂಸ್ಕೃತಿಯ ದಟ್ಟ ಪ್ರಭಾವ ಕಂಡುಬರುತ್ತದೆ. ಸೀಮೋಲ್ಲಂಘನ, ದುರ್ಗಾಮಾತಾ ಅಥವಾ ದಾಂಡಿಯಾ ದೌಡು, ದಾಂಡಿಯಾ ನೃತ್ಯ, ಗಾರ್ಬಾ ನೃತ್ಯ, ಭುವನೇಶ್ವರಿ ಮೆರವಣಿಗೆ-ಹೀಗೆ ವಿಭಿನ್ನ ಆಚರಣೆಗಳು ಜರುಗುತ್ತವೆ.

ನವರಾತ್ರಿಯ ಸಂದರ್ಭದಲ್ಲಿ ನಗರದ ಎಲ್ಲ ದೇವಾಲಯಗಳಲ್ಲಿ ಒಂಬತ್ತು ದಿನಗಳವರೆಗೆ ವಿಶಿಷ್ಟವಾದ ಪೂಜೆ ಜರುಗುತ್ತದೆ. ಮುಂಜಾನೆ, ಮಧ್ಯಾಹ್ನ ಮತ್ತು ಸಂಜೆ ಹೊತ್ತಿಗೆ ಅತ್ಯಂತ ಭಕ್ತಿಭಾವದಿಂದ ಪೂಜೆ ಜರುಗುತ್ತದೆ. ಮುಂಜಾನೆ ಐದು ಗಂಟೆಗೆ ಕಕ್ಕಡಾರತಿ ಹಚ್ಚಿಪೂಜೆ ಪ್ರಾರಂಭಗೊಳ್ಳುತ್ತದೆ. ಮಧ್ಯಾಹ್ನದ ವೇಳೆಗೆ ವೇದೋಕ್ತ ಮಂತ್ರಗಳ ಘೋಷಣೆಯಲ್ಲಿ ವಿಧಿವತ್ತಾದ ಪೂಜೆ ಮತ್ತು ದೇವರ ಮೂರ್ತಿಗೆ ಪಂಚಾಮೃತಾಭಿಷೇಕ ನಡೆಯುತ್ತದೆ. ಪೂಜಾವಿಧಾನ ಮುಗಿದ ಮೇಲೆ ದೇವತಾವಿಗ್ರಹಕ್ಕೆ ಬೇರೆ ಬೇರೆ ಅವತಾರಗಳ ರೂಪಗಳ ಮೆರಗು ಕೊಡುತ್ತಾರೆ. ವಿಷ್ಣುಭಕ್ತರು ಮತ್ಸ್ಯಾವತಾರದಿಂದ ಕಲ್ಕಿ ಅವತಾರದ ವರೆಗೆ ಒಂದೊಂದು ದಿನ ಒಂದೊಂದು ರೂಪದಲ್ಲಿ ದೇವತಾವಿಗ್ರಹವನ್ನು ಅಲಂಕರಿಸುತ್ತಾರೆ. ದುರ್ಗಾಷ್ಟಮಿಯ ದಿವಸ ಗಂಡು ದೇವತೆಗಳೂ ದುರ್ಗೆಯ ರೂಪದಲ್ಲಿ ಅಲಂಕಾರಗೊಳ್ಳುತ್ತವೆ. ಬಸದಿಗಳಲ್ಲಿಯೂ ವಿಶೇಷವಾದ ಪೂಜೆ ಜರುಗುತ್ತದೆ. ಬಸದಿಗಳಲ್ಲಿ ಪಂಡಿತರು ತೀರ್ಥಂಕರರ ಮೂರ್ತಿಗಳಿಗೆ ವಿಶೇಷವಾದ ಸೇವಂತಿಗೆ ಹೂವಿನ ಅಲಂಕಾರವನ್ನು ಮಾಡುತ್ತಾರೆ.

**ಸೀಮೋಲ್ಲಂಘನ:** ಬೆಳಗಾವಿ ನಗರದಲ್ಲಿ ಸೀಮೋಲ್ಲಂಘನ ಕಾರ್ಯ ತನ್ನದೇ ಆದ ಸಂಪ್ರದಾಯ ಹೊಂದಿದೆ. ಮಹಾರಾಷ್ಟ್ರ ಸಂಸ್ಕೃತಿಯ ಪ್ರಭಾವದ ಹಿನ್ನೆಲೆಯಲ್ಲಿ ಬೆಳಗಾವಿಯಲ್ಲಿ ವಿಜಯ ದಶಮಿಯ ಸೀಮೋಲ್ಲಂಘನ ಕಾರ್ಯ ಒಂದು ರೀತಿಯ ಮೈಸೂರು ದಸರಾ ಉತ್ಸವದಷ್ಟೇ ಸಂಭ್ರಮವನ್ನು ಸೃಷ್ಟಿಸಿರುತ್ತದೆ.

ಸೀಮೋಲ್ಲಂಘನ ಕಾರ್ಯ ನಡೆಯುವ ಪೂರ್ವದಲ್ಲಿ ನಗರದ ವಿವಿಧ ಕಾಲನಿಗಳಲ್ಲಿಯ ರೂಪಕ ವಾಹನಗಳಲ್ಲಿ, ಪಲ್ಲಕ್ಕಿಗಳಲ್ಲಿ ದುರ್ಗಾಮಾತೆಯ ಪ್ರತಿಮೆಯನ್ನಿಟ್ಟು ಮೆರವಣಿಗೆಯನ್ನು ಮಾಡುತ್ತಾರೆ. ಭವ್ಯವಾದ ರಥದಲ್ಲಿ ವಿರಾಜಮಾನವಾದ ದೇವಿಯ ಮೂರ್ತಿಯ ರೂಪಕ ವಾಹನಗಳಿಗೆ ಕೆಲವೊಂದು ಕಡೆ ಹಗ್ಗ ಕಟ್ಟಿ ಜನರೇ ಎಳೆಯುತ್ತಾರೆ. ಮೈಸೂರು ದಸರಾ ಉತ್ಸವದ ಮಾದರಿಯಲ್ಲಿಯೇ ಆನೆಯ ಅಂಬಾರಿ ಮೇಲೆ ಕುಳಿತ ದೇವಿಯ ಮೂರ್ತಿಯ ಮೆರವಣಿಗೆಯು ಮುಖ್ಯ ಆಕರ್ಷಣೆಯಾಗಿ ಮೈಸೂರು ದಸರಾ ವೈಭವವನ್ನು ನೆನಪಿಸುತ್ತದೆ.

ನವರಾತ್ರಿ ಉತ್ಸವದಲ್ಲಿ ಕಂಡು ಬರುವ ಮತ್ತೊಂದು ಆಕರ್ಷಣೆಯೆಂದರೆ ಗ್ರಾಮೀಣ ಪರಿಸರದ ಕಲೆಗಳ ಪ್ರದರ್ಶನ. ಮೆರವಣಿಗೆಯಲ್ಲಿ ಕಂಡುಬರುವ ನಂದಿಕೋಲು, ಡೊಳ್ಳು ಕುಣಿತ, ಪಲ್ಲಕ್ಕಿ ಮೆರವಣಿಗೆ ಮುಂತಾಗಿ ಗ್ರಾಮೀಣ ಪರಿಸರದಲ್ಲಿ ಮಾತ್ರ ಕಂಡುಬರುವ ಈ ಕಲೆಗಳು ನಗರ ಪ್ರದೇಶದಲ್ಲಿ ಆಕರ್ಷಕವಾಗಿ ಕಂಡುಬರುತ್ತದೆ.

ಸೀಮೋಲ್ಲಂಘನವು ಹಿಂದಿನ ಕಾಲದಲ್ಲಿ ರಾಜ ಮಹಾರಾಜರು ದುಷ್ಟ ಶಕ್ತಿಗಳನ್ನು ಹಾಗೂ ವಿರೋಧಿಗಳನ್ನು ತಮ್ಮ ರಾಜ್ಯದ ಗಡಿಯಿಂದ ಹೊರಗೆ ಓಡಿಸಿದ ಪ್ರತೀಕ. ಯುದ್ಧಮಾಡಿ ಸಂಸ್ಥಾನಕ್ಕೆ ಆಗಮಿಸಿದಾಗ ಆಯಾ ಸೈನಿಕರನ್ನು ಮನೆಗಳಲ್ಲಿ ಆರತಿ ಮಾಡಿ ತಿಲಕವಿಟ್ಟು ಸ್ವಾಗತಿಸಿಕೊಳ್ಳುತ್ತಿದ್ದರು. ದಸರಾ ಸಂದರ್ಭದಲ್ಲಿ ಸೀಮೋಲ್ಲಂಘನ ಕೈಗೊಳ್ಳುತ್ತಿದ್ದರು. ಈ ಪರಂಪರೆ ಆಧುನಿಕ ಯುಗದಲ್ಲಿ ವಿಭಿನ್ನವಾಗಿ ನಡೆದುಕೊಂಡು ಬರುತ್ತಿದೆ.

ಬೆಳಗಾವಿಯಲ್ಲಿ ಇಂದು ಲಿಂಗರಾಜ ಕಾಲೇಜಿನ ಮೈದಾನದಲ್ಲಿ ಈ ಸೀಮೋಲ್ಲಂಘನ ಕಾರ್ಯ ಜರುಗುತ್ತದೆ. ನಗರದ ಬೇರೆ ಬೇರೆ ಭಾಗಗಳಿಂದ ಆಗಮಿಸಿದ ರೂಪಕಗಳು, ದೇವಿಯ ಮೂರ್ತಿಯನ್ನು ಹೊತ್ತ ಪಲ್ಲಕ್ಕಿಗಳಿಗೆ ಪೂಜೆಯನ್ನು ನೆರವೇರಿಸಿದ ಮೇಲೆ ಪಲ್ಲಕ್ಕಿಗಳನ್ನು ಹೊತ್ತು ಓಡುವ ಸ್ಪರ್ಧೆಯನ್ನು ಏರ್ಪಡಿಸಲಾಗುತ್ತದೆ. ಇದಾದ ಮೇಲೆ ಬನ್ನಿಮರವನ್ನು ಕಡಿದು ತಂದು ಇಟ್ಟಿರುವಲ್ಲಿ ಬಂದು ಪೂಜೆ ಮಾಡಿದ ಬಳಿಕ ಸಾಂಪ್ರದಾಯಿಕವಾಗಿ ನಡೆದುಕೊಂಡು ಬಂದಿರುವ ಪದ್ಧತಿಯಂತೆ ಎಮ್ಮೆಯನ್ನು ಓಡಿಸಲಾಗುತ್ತದೆ. ನಂತರ ಎಲ್ಲರೂ ಬನ್ನಿಯನ್ನು ಹಂಚಿಕೊಳ್ಳುತ್ತಾರೆ. ತಾವು ಪಡೆದುಕೊಂಡ ಬನ್ನಿಯನ್ನು ಮನೆಗೆ ತೆಗೆದುಕೊಂಡು ಹೋಗುತ್ತಾರೆ. ಮನೆಯಲ್ಲಿ ಬನ್ನಿ ತೆಗೆದುಕೊಂಡು ಬಂದವರನ್ನು ಕಾಲು ತೊಳೆದು ಆರತಿ ಮಾಡಿ ಒಳಗೆ ಬರಮಾಡಿಕೊಳ್ಳುತ್ತಾರೆ. ಬನ್ನಿಯನ್ನು ದೇವರ ಜಗುಲಿಯ ಮೇಲೆ ಇಟ್ಟು ಪೂಜೆ ಮಾಡಿದ ಬಳಿಕವೇ ಬನ್ನಿಯನ್ನು ಹಂಚಿಕೊಳ್ಳುತ್ತಾರೆ. ಬನ್ನಿಯನ್ನು ವಿನಿಮಯ ಮಾಡಿಕೊಳ್ಳುವಾಗ ಕನ್ನಡಿಗರು 'ನಾವು ನೀವು ಬಂಗಾರದಿಂದ ಇರೋಣ' ಎಂದೂ ಮರಾಠಿಗರು 'ಸೋನ್ ಗ್ಯಾ ಸೋನ್ಯಾ ಸಾರಕೇ ರಾಹುಯ್ಯಾ' ಎಂದು ಅನ್ನುತ್ತ ವಿನಿಮಯ ಮಾಡಿಕೊಳ್ಳುತ್ತಾರೆ. ಹೀಗೆ ಹೇಳುವ ಬಗೆಯಲ್ಲಿ ಭಾಷೆ ಬೇರೆ ಬೇರೆಯಾಗಿದ್ದರೂ ಸಂಭ್ರಮದಲ್ಲಿ ಮಾತ್ರ ಯಾವುದೇ ವ್ಯತ್ಯಾಸವಿರುವುದಿಲ್ಲ. ಹೀಗಾಗಿ ಕನ್ನಡ ಹಾಗೂ ಮರಾಠಿಗರು ಸೇರಿಕೊಂಡು ಉತ್ಸಾಹದಿಂದ ಬಂಗಾರ ವಿನಿಮಯ ಮಾಡಿಕೊಂಡು ನವರಾತ್ರಿ ಹಬ್ಬವನ್ನು ಆಚರಿಸುತ್ತಾರೆ.

ಬೆಳಗಾವಿಯಲ್ಲಿ ಸೀಮೋಲ್ಲಂಘನದ ಸಂದರ್ಭದಲ್ಲಿ ಎಮ್ಮೆಯನ್ನು ಓಡಿಸುವ ಸಂಪ್ರದಾಯವು ವಿಶೇಷವಾಗಿ ಕಂಡುಬರುತ್ತದೆ. ಬಹುಶಃ ಹಿಂದಿನ ದಿನಗಳಲ್ಲಿ ಈ ಸಂದರ್ಭದಲ್ಲಿ ಪ್ರಾಣಿಬಲಿ ನಡೆಯುತ್ತಿತ್ತು ಎನ್ನುವುದು ಸ್ಪಷ್ಟವಾಗುತ್ತದೆ. ನವರಾತ್ರಿಯ ಆಯುಧಪೂಜೆಯ ಸಂದರ್ಭದಲ್ಲಿ ದುರ್ಗೆಗೆ ಪ್ರಾಣಿಬಲಿಯು ಹಿಂದಿನ ಕಾಲದಲ್ಲಿ ಅನೇಕ ಕಡೆಗಳಲ್ಲಿ ನಡೆಯುತ್ತಿತ್ತು. ಇತ್ತೀಚಿನ ದಿನಗಳಲ್ಲಿ ಅದು ಎಲ್ಲ ಕಡೆಯು ನಿಷೇಧಗೊಂಡಿದೆ. ಆ ಪರಂಪರೆಯನ್ನು ಮುಂದುವರಿಸಲು ಕುಂಬಳಕಾಯಿಯನ್ನು ಒಡೆಯುವುದು, ಹಿಟ್ಟಿನ ಪ್ರಾಣಿಗಳನ್ನು ಮಾಡಿ ಅವುಗಳನ್ನು ಬಲಿಕೊಡುವುದು ಮುಂತಾದ ರೀತಿಯ ಆಚರಣೆಗಳು ಈಗ ಕಂಡುಬರುತ್ತವೆ. ಅದೇ ರೀತಿ ಬೆಳಗಾವಿಯಲ್ಲಿಯೂ ಪ್ರಾಣಿಬಲಿ ಸಂಪ್ರದಾಯವನ್ನು ಮುಂದುವರಿಸಲು ಸೀಮೋಲ್ಲಂಘನದ ಸಂದರ್ಭದಲ್ಲಿ ಎಮ್ಮೆಯನ್ನು ಓಡಿಸುವ ಸಂಪ್ರದಾಯವು ಬೆಳೆದು ಬಂದಿದೆ.

ದಾಂಡಿಯಾ ನೃತ್ಯ: ಬೆಳಗಾವಿಯಲ್ಲಿ ನವರಾತ್ರಿ ಉತ್ಸವ ವಿಶೇಷವಾಗಿ ಆಚರಣೆಗೊಳ್ಳಲು ಮುಖ್ಯ ಕಾರಣ ಇಲ್ಲಿಯ ವೈವಿಧ್ಯಮಯವಾದ ಆಚರಣೆಗಳು. ಬಹುಸಂಸ್ಕೃತಿಯ ಈ ನಗರದಲ್ಲಿ ಸಾಮರಸ್ಯದ ಸಮಾಜ ನಿರ್ಮಾಣಗೊಂಡದ್ದು ಇಲ್ಲಿಯ ಹಬ್ಬಗಳಿಂದ. ಇಂತಹ ಆಚರಣೆಯಲ್ಲಿ ಪ್ರಮುಖವಾಗಿ ಕಂಡು ಬರುವ ದಾಂಡಿಯ್ಯಾ ನೃತ್ಯವು ಮಹತ್ವದ್ದಾಗಿದೆ. ಗುಜರಾತಿನಲ್ಲಿ ಹೆಚ್ಚು ಆಚರಣೆಯಲ್ಲಿರುವ ಈ ನೃತ್ಯವು ಬೆಳಗಾವಿಗೆ ಬಂದದ್ದು ಗುಜರಾತದಿಂದ

ಆಗಮಿಸಿ ಬೆಳಗಾವಿಯಲ್ಲಿ ನೆಲೆ ನಿಂತ ವ್ಯಾಪಾರಿಗಳಿಂದ. ನವರಾತ್ರಿ ಹಬ್ಬದ ಸಂದರ್ಭದಲ್ಲಿ ಬೆಳಗಾವಿಯಲ್ಲಿ ವಿಶೇಷ ಆಕರ್ಷಣೆಯನ್ನು ಹೊಂದಿದ ಈ ನೃತ್ಯವು ವಿವಿಧ ಜನರನ್ನು ಒಂದುಗೂಡಿಸುವಲ್ಲಿ ಮಹತ್ವದ ಪಾತ್ರವಹಿಸಿದೆ. ಮೊದಮೊದಲು ಕೇವಲ ಗುಜರಾತಿಗಳು ಮಾತ್ರ ಆಚರಿಸುತ್ತಿದ್ದ ಈ ಆಚರಣೆಯು ಇಂದು ಇಡೀ ಬೆಳಗಾವಿ ನಗರವನ್ನೆಲ್ಲ ವ್ಯಾಪಿಸಿದೆ. ಗಲ್ಲಿಗಲ್ಲಿಗಳಲ್ಲಿ ಸಂಜೆಯ ಹೊತ್ತು ಚಿಕ್ಕಮಕ್ಕಳು, ಹಿರಿಯರು ಎಲ್ಲರೂ ಸೇರಿ ಈ ನೃತ್ಯದಲ್ಲಿ ಪಾಲ್ಗೊಳ್ಳುತ್ತಾರೆ. ಹೆಚ್ಚಾಗಿ ಯುವಕ-ಯುವತಿಯರು ಈ ನೃತ್ಯದಲ್ಲಿ ಪಾಲ್ಗೊಳ್ಳುತ್ತಾರೆ. 'ದಾಂಡಿಯಾ ರಾಸ್' (ನೃತ್ಯ) ಎಂದು ಕರೆಯಲ್ಪಡುವ ಈ ನೃತ್ಯದಲ್ಲಿ ಕೋಲುಗಳನ್ನು ಹಿಡಿದು ಬಾರಿಸುತ್ತ ನೃತ್ಯವನ್ನು ಮಾಡುತ್ತಾರೆ.

ಇತ್ತೀಚೆಗೆ ಈ ನೃತ್ಯವು ಕೆಲವು ಸಂಘಟನೆಗಳಿಂದ ಆಯೋಜಿಸಲ್ಪಡುತ್ತಿದೆ. ಆಕರ್ಷಕ ಬಹುಮಾನಗಳೊಂದಿಗೆ ಸ್ಪರ್ಧೆಯನ್ನು ಏರ್ಪಡಿಸಲಾಗುತ್ತದೆ. ಈ ನೃತ್ಯವನ್ನು ನೋಡಲು ಶುಲ್ಕವನ್ನು ವಿಧಿಸಲಾಗುತ್ತಿದೆ. ಹೀಗಾಗಿ ಧಾರ್ಮಿಕ ಆಚರಣೆಯ ಈ ನೃತ್ಯವು ಲಾಭದಾಯಕ ಕ್ರೀಡೆಯಾಗಿ ಮಾರ್ಪಾಡು ಹೊಂದಿದೆ.

**ಗಾರ್ಬಾ ನೃತ್ಯ:** ದಾಂಡಿಯಾ ರಾಸ್ ಹಾಗೂ ಗಾರ್ಬಾ ನೃತ್ಯ ಎರಡೂ ಒಂದೇ ವೇದಿಕೆಯಲ್ಲಿ ಜರಗುತ್ತವೆ. ಮೊದಲು ಗಾರ್ಬಾ ನೃತ್ಯವನ್ನು ಮಾಡಿ ದಾಂಡಿಯಾ ರಾಸ್‌ವನ್ನು ಆಡಲಾಗುತ್ತದೆ.

ಗಾರ್ಬಾ ನೃತ್ಯಕ್ಕಾಗಿಯೇ ಒಂದು ಸ್ಥಳವನ್ನು ನಿಗದಿ ಮಾಡಿ ವಿದ್ಯುತ್ ದೀಪಗಳಿಂದ ವೇದಿಕೆಯನ್ನು ಅಲಂಕರಿಸಿ, ಸಂಗೀತ ಅಳವಡಿಸಿ ಎಲ್ಲರೂ ಸೇರಿ ನೃತ್ಯ ಮಾಡುತ್ತಾರೆ. ಗಾರ್ಬಾ ನೃತ್ಯಕ್ಕಾಗಿಯೇ ಕೆಲವು ಹಾಡುಗಳನ್ನು ಆಯ್ಕೆ ಮಾಡಲಾಗುತ್ತದೆ. ಸಾಂಪ್ರದಾಯಿಕ ಪೋಷಾಕು ತೊಟ್ಟ ಎಲ್ಲ ವಯಸ್ಸಿನವರು ಹಾಡಿಗೆ ತಕ್ಕಂತೆ ಹೆಜ್ಜೆ ಹಾಕುತ್ತಾರೆ.

ನಗರದ ಮಿಲೇನಿಯಂ ಗಾರ್ಡನ್‌ನಲ್ಲಿ ನಡೆಯುವ ಗಾರ್ಬಾ ನೃತ್ಯ ಸ್ಪರ್ಧೆ ಅತ್ಯಂತ ಮಹತ್ವವನ್ನು ಪಡೆದುಕೊಂಡಿದೆ. ಪಕ್ಕದ ಜಿಲ್ಲೆಯವರಲ್ಲದೇ ನೆರೆ ರಾಜ್ಯಗಳಿಂದಲೂ ಈ ಸ್ಪರ್ಧೆಯಲ್ಲಿ ಭಾಗವಹಿಸುತ್ತಾರೆ. ಹೀಗಾಗಿ ಈ ಕಾರ್ಯಕ್ರಮ ಹಲವಾರು ಪ್ರತಿಭೆಗಳಿಗೆ ವೇದಿಕೆಯಾಗಿದೆ. ನಗರದ ವಿವಿದೆಡೆ ಗಾರ್ಬಾ ನೃತ್ಯದ ಮೇಳಗಳು ಕಂಡುಬರುತ್ತವೆ. ಮಿಲೇನಿಯಂ ಗಾರ್ಡನ್, ಪಾಪಾಮಾಳ, ಶಹಾಪುರದ ಗುಜರಾತ ಭವನ, ಶಾಸ್ತ್ರಿನಗರದ ಪಾಟಿದಾರ ಭವನ, ಭಾಗ್ಯನಗರ, ಸಹ್ಯಾದ್ರಿನಗರ, ತೆಲುಗು ಕಾಲಿನಿ, ಕ್ಯಾಂಪ್ ಪ್ರದೇಶ, ಗಣೇಶಪುರದ ಲಕ್ಷ್ಮೀನಗರ, ಕಪಿಲೇಶ್ವರ ಕಾಲನಿ, ಮಾಳಮಾರುತಿ ಬಡಾವಣೆ, ವಿಶ್ವೇಶ್ವರಯ್ಯನಗರ, ನೆಹರುನಗರ ಮುಂತಾದ ಕಡೆಗಳಲ್ಲಿ ವಿವಿಧ ಸಂಘ-ಸಂಸ್ಥೆಗಳು ದಾಂಡಿಯಾ ನೃತ್ಯದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತವೆ.

ದಾಂಡಿಯಾ ನೃತ್ಯ ಹಾಗೂ ಗಾರ್ಬಾ ನೃತ್ಯಗಳ ತಯಾರಿ ನವರಾತ್ರಿ ಇನ್ನೂ ಎರಡು ಮೂರು ತಿಂಗಳುಗಳಿರುವಾಗಲೇ ಪ್ರಾರಂಭವಾಗುತ್ತದೆ. ಸ್ಪರ್ಧೆಯಲ್ಲಿ ಭಾಗವಹಿಸುವ ತಂಡವನ್ನು ರಚಿಸಿ ಅದಕ್ಕೆ ವಿಶೇಷವಾದ

ತರಬೇತಿಯನ್ನು ನೀಡಲಾಗುತ್ತದೆ. ಈ ತಂಡದಲ್ಲಿ ಕನ್ನಡ, ಮರಾಠಿ, ಗುಜರಾತಿ ಎಲ್ಲಾ ಭಾಷಿಕರು ಇರುತ್ತಾರೆ. ಸ್ತ್ರೀಯರು, ಪುರುಷರು ಯಾವುದೇ ಭೇದ ಭಾವವಿಲ್ಲದೆ ಈ ಕಾರ್ಯಕ್ರಮದಲ್ಲಿ ಭಾಗವಹಿಸುತ್ತಾರೆ. ಹೀಗಾಗಿ ಬೆಳಗಾವಿಯ ಸಾಂಸ್ಕೃತಿಕ ಸಾಮರಸ್ಯಕ್ಕೆ ನವರಾತ್ರಿ ಹಬ್ಬ ಅತ್ಯಂತ ಮಹತ್ವವನ್ನು ಒದಗಿಸಿದೆ.

ದಾಂಡಿಯಾ ದೌಡ: ಬೆಳಗಾವಿಯ ನವರಾತ್ರಿ ಉತ್ಸವದ ಮೆರುಗು ಹೆಚ್ಚಿಸಿದ ಆಚರಣೆಗಳಲ್ಲಿ ದುರ್ಗಾಮಾತಾ ದೌಡ ಅಥವಾ ದಾಂಡಿಯಾ ದೌಡ ವಿಶೇಷ ಮಹತ್ವವನ್ನು ಪಡೆದುಕೊಂಡಿದೆ. ಕಳೆದ ಹದಿನೈದು ವರ್ಷಗಳಿಂದ ಈ ಆಚರಣೆ ಬೆಳಗಾವಿಯಲ್ಲಿ ಜಾರಿಯಲ್ಲಿದೆ. ದಾಂಡಿಯಾ ದೌಡ ಪ್ರಾರಂಭಗೊಂಡದ್ದು ಸಾಂಗ್ಲಿಯಲ್ಲಿ. ಸಂಭಾಜಿರಾವ್ ಭಿಡೆ ಎನ್ನುವವರು ಇದನ್ನು ಪ್ರಾರಂಭಿಸಿದರು. ಬೆಳಗಾವಿಯಲ್ಲಿ ಇದು ಶಿವಪ್ರತಿಷ್ಠಾನ ಸಂಘಟನೆಯ ಮೂಲಕ ಆಚರಿಸಲ್ಪಡುತ್ತಿದೆ.

ಈ ದೌಡಿನ ಮುಖ್ಯ ಉದ್ದೇಶ ದೈಹಿಕ ಆರೋಗ್ಯ ಕಾಯ್ದುಕೊಳ್ಳುವುದಾಗಿದ್ದರೂ ಅದಕ್ಕೆ ಧಾರ್ಮಿಕ ಮಹತ್ವ ನೀಡಲಾಗಿದೆ. 'ದೌಡ' ಎಂದರೆ 'ಓಡು' ಎಂದರ್ಥ. ಈ ಓಟದಲ್ಲಿ ಮಕ್ಕಳು ಯುವಕರು, ವೃದ್ಧರು, ಮಹಿಳೆಯರು ಎಲ್ಲರೂ ಸೇರಿರುತ್ತಾರೆ. ಅಲ್ಲದೆ ಮೊದಲು ಮರಾಠಿಗರಷ್ಟೇ ಆಚರಿಸುತ್ತಿದ್ದ ಈ ಆಚರಣೆಯಲ್ಲಿ ಈಗ ಕನ್ನಡಿಗರು ಸೇರಿಕೊಂಡಿದ್ದಾರೆ. ಹೀಗಾಗಿ 'ದಾಂಡಿಯಾ ದೌಡ' ಆಚರಣೆಯು ಸಾಂಸ್ಕೃತಿಕ ಬಾಂಧವ್ಯವನ್ನು ಉಂಟು ಮಾಡಿದೆ.

ದಸರಾ ಸಂದರ್ಭದಲ್ಲಿ ಒಂಬತ್ತು ದಿನಗಳ ವರೆಗೆ ಆಚರಣೆಗೊಳ್ಳುವ ಈ ಸಂಪ್ರದಾಯವು ದಿನಾಲು ಬೆಳಗಿನ ಐದು ಗಂಟೆಯ ಸುಮಾರಿಗೆ ಪ್ರಾರಂಭಗೊಳ್ಳುತ್ತದೆ. ಇದರಲ್ಲಿ ಭಾಗವಹಿಸುವವರಿಗೆ ಸಮವಸ್ತ್ರವನ್ನು ನಿಗದಿ ಮಾಡಲಾಗಿದೆ. ಬಿಳಿವಸ್ತ್ರ ತೊಟ್ಟು ಕೇಸರಿ ರುಮಾಲನ್ನೂ ಸೊಂಟಕ್ಕೆ ಮತ್ತು ತಲೆಗೆ ಸುತ್ತುಕೊಂಡು ಬರಬೇಕು ಎನ್ನುವ ನಿಯಮ ಮಾಡಲಾಗಿದೆ. ದೌಡ್ ಕ್ರಮಿಸುವ ಮಾರ್ಗದಲ್ಲಿ ರಸ್ತೆಯನ್ನು ಸಿಂಗರಿಸಲಾಗುತ್ತದೆ. ಅಲ್ಲಲ್ಲಿ ರಂಗೋಲಿ, ತೋರಣಗಳು, ಬ್ಯಾನರ್‌ಗಳನ್ನು ಕಟ್ಟಿರುತ್ತಾರೆ. ಜೊತೆಗೆ ಸಿಡಿಮದ್ದುಗಳನ್ನು ಹಾರಿಸುತ್ತಾರೆ. ಒಂಬತ್ತು ದಿನಗಳ ನಂತರ ಸಮಾರೋಪಗೊಳ್ಳುತ್ತದೆ. ಸಮಾರೋಪದ ಸಂದರ್ಭದಲ್ಲಿ ಪ್ರಸಿದ್ಧ ವ್ಯಕ್ತಿಗಳು ಅತಿಥಿಗಳಾಗಿ ಆಗಮಿಸಿರುತ್ತಾರೆ. ಸಾವಿರಾರು ಜನರು ಈ ಸಮಾರೋಪದಲ್ಲಿ ಭಾಗವಹಿಸುತ್ತಾರೆ. ದಾಂಡಿಯಾ ದೌಡ ಧಾರ್ಮಿಕ ಆಚರಣೆಯಾಗಿರುವುದರಿಂದ ಇದರಲ್ಲಿ ಎಲ್ಲಾ ಭಾಷಿಕ ಜನರು ಪಾಲ್ಗೊಳ್ಳುತ್ತಾರೆ. ಮಹಾರಾಷ್ಟ್ರ ಸಂಸ್ಕೃತಿ ಇಲ್ಲಿ ಎದ್ದು ಕಾಣುತ್ತಿದ್ದರೂ ಕನ್ನಡಿಗರು ಈ ಸಂಸ್ಕೃತಿಯನ್ನು ಸ್ವೀಕರಿಸಿದ್ದಾರೆ. ಹೀಗಾಗಿ ಇದೊಂದು ಸಾಮರಸ್ಯದ ಆಚರಣೆಯಾಗಿ ಬೆಳೆಯುತ್ತಿದೆ.

**ದೀಪಾವಳಿ:** ಹಟ್ಟಿಹಬ್ಬ, ದೀವಳಿಗೆ, ದೀಪಾವಳಿ ದೊಡ್ಡಹಬ್ಬ, ಪಣತಿ ಹಬ್ಬ–ಹೀಗೆ ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡುವ ದೀಪಾವಳಿಯು ನಮ್ಮ ದೇಶದ ಪ್ರಮುಖ ಹಬ್ಬ. ದೇಶ, ವಿದೇಶಗಳಲ್ಲಿಯೂ ಈ ಹಬ್ಬದ ಆಚರಣೆ

ಕಂಡುಬರುತ್ತದೆ. ಜಾತಿ, ಧರ್ಮಗಳ ಭೇದ ಭಾವವಿಲ್ಲದೆ ಎಲ್ಲ ಜನ ಸಮುದಾಯಗಳಲ್ಲಿ ಈ ಹಬ್ಬದ ಆಚರಣೆ ಕಂಡುಬರುತ್ತದೆ. ಅದರಂತೆ ಬೆಳಗಾವಿಯಲ್ಲಿಯೂ ದೀಪಾವಳಿ ಹಬ್ಬವು ವಿಶೇಷವಾಗಿ ಆಚರಿಸಲ್ಪಡುತ್ತದೆ. ಬೆಳಗಾವಿಯ ಸಾಮರಸ್ಯದ ಬದುಕಿನಲ್ಲಿ ಈ ಹಬ್ಬವು ಬೆರೆತುಕೊಂಡಿದೆ. ಹಿಂದೂ, ಮುಸ್ಲಿಂ, ಕ್ರೈಸ್ತ, ಪಾರ್ಸಿ ಹೀಗೆ ಎಲ್ಲ ಜನ ಸಮುದಾಯಗಳಿಂದಲೂ ಆಚರಿಸಲ್ಪಟ್ಟ ಇದು ಬೆಳಗಾವಿಯಲ್ಲಿ ವಿಶಿಷ್ಟ ಸಂಸ್ಕೃತಿಯನ್ನು ನಿರ್ಮಿಸಿದೆ. ದೀಪಾವಳಿಯ ಸಂದರ್ಭದಲ್ಲಿ ಬೆಳಗಾವಿಗೆ ವಿಶೇಷವಾದ ಕಳೆ ಮೂಡಿರುತ್ತದೆ. ಈ ದಿನಗಳಲ್ಲಿ ಬೆಳಗಾವಿಯನ್ನು ನೋಡುವುದೇ ಒಂದು ಹಬ್ಬವಾಗಿ ಪರಿಣಮಿಸಿರುತ್ತದೆ. ಬೆಳಗಾವಿಯಲ್ಲಿ ದೀಪಾವಳಿಯು ಮೂರು ದಿನಗಳ ಹಬ್ಬವಾಗಿ ಆಚರಿಸಲ್ಪಡುತ್ತದೆ. ಕೆಲವಡೆ ಐದು ದಿನ ಆಚರಿಸುತ್ತಾರೆ. ನರಕ ಚತುರ್ದಶಿ, ಲಕ್ಷ್ಮಿಪೂಜೆ ಹಾಗೂ ಬಲಿಪಾಡ್ಯಮಿ ಎಂದು ಮೂರು ದಿನಗಳ ವರೆಗೆ ದೀಪಾವಳಿಯು ಆಚರಿಸಲ್ಪಡುತ್ತದೆ. ನರಕಾಸುರ ಎನ್ನುವ ದೈತ್ಯನನ್ನು ಶ್ರೀಕೃಷ್ಣ ಸಂಹರಿಸಿದ ದಿನದ ನೆನಪಿಗೆ ನರಕ ಚತುರ್ದಶಿಯನ್ನು 'ನೀರು ತುಂಬುವ ಹಬ್ಬ' ಎಂದು ಆಚರಿಸಲಾಗುತ್ತದೆ. ಮಾರನೆಯ ದಿನ ಲಕ್ಷ್ಮೀಪೂಜೆ ನಡೆಯುತ್ತದೆ. ವಿಶೇಷವಾಗಿ ಎಲ್ಲಾ ಅಂಗಡಿಗಳಲ್ಲಿ ಲಕ್ಷ್ಮಿಪೂಜೆ ನಡೆಯುತ್ತದೆ. ಕೆಲವರು ದೊಡ್ಡ ಮಂಟಪಗಳನ್ನು ನಿರ್ಮಿಸಿ ಲಕ್ಷ್ಮಿದೇವಿಯನ್ನು ಪ್ರತಿಷ್ಠಾಪಿಸಿ ಪೂಜೆ ಮಾಡುತ್ತಾರೆ. ದೀಪಾವಳಿಯ ಸಂದರ್ಭದಲ್ಲಿ ಇಡೀ ನರಗವೇ ವಿದ್ಯುತ್ ದೀಪಗಳಿಂದ ಶೃಂಗಾರಗೊಂಡಿರುತ್ತದೆ. ನಗರದ ಎಲ್ಲ ದೇವಾಲಯಗಳಲ್ಲಿಯೂ ವಿಶೇಷವಾದ ಅಲಂಕಾರ, ಪೂಜೆ ನಡೆಯುತ್ತದೆ. ಭಟ್ಟ-ಜಂಗಮ-ಭಿಕ್ಷುಕರಿಗೆ ದಾನ ದಕ್ಷಿಣೆಗಳನ್ನು ಕೊಡುವುದಲ್ಲದೆ ಚುರಮುರಿ, ಕೊಬ್ಬರಿ, ಪುಟಾಣಿ, ಸಕ್ಕರೆಯ ಪ್ರಸಾದವನ್ನು ಹಂಚುವರು. ಪಟಾಕಿ, ಮದ್ದಿನ ಸದ್ದು ಇಡೀ ನಗರವನ್ನು ಆವರಿಸುತ್ತದೆ. ಪಟಾಕಿ ಮಾರಾಟಕ್ಕಾಗಿಯೇ ಸರದಾರ ಮೈದಾನದಲ್ಲಿ ಹಲವು ಅಂಗಡಿಗಳನ್ನು ತೆರೆಯಲಾಗುತ್ತದೆ. ಲಕ್ಷ್ಮೀಪೂಜೆಯ ದಿನ ಯಾರೂ ಅಂಗಡಿಯಲ್ಲಿ ಉದ್ರಿ ಕೊಡುವುದಾಗಲಿ, ಸಾಲ ಕೊಡುವುದಾಗಲಿ ಮಾಡುವುದಿಲ್ಲ. ಅಂದು ಸಾಲಕೊಟ್ಟರೆ ತಾವು ವರ್ಷಪೂರ್ತಿ ಸಾಲಗಾರರಾಗಿಯೇ ಉಳಿಯುತ್ತೇವೆ ಎನ್ನುವ ನಂಬಿಕೆ ಇದೆ.

ಮೂರನೆಯ ದಿನ ಬಲಿಪಾಡ್ಯಮಿ. ಅಂದು ಸಗಣೆಯಿಂದ ಬಲಿ, ಗೋವರ್ಧನ ಗಿರಿ, ಪಾಂಡವರು ಮುಂತಾದ ಮೂರ್ತಿಗಳನ್ನು ಮಾಡುವರು. ಪ್ರತಿಯೊಂದು ಬಾಗಿಲಿನ ಎರಡೂ ಬದಿಗೆ ಸೆಗಣಿಯ ಮೂರ್ತಿಯನ್ನು ಇಡುವರು. ಮುಖ್ಯ ಬಾಗಿಲಿನ ಹೊರಗೆ ಅಂಗಳದಲ್ಲಿ ಒಂದು ಸೆಗಣಿಯ ಮೂರ್ತಿಯನ್ನು ಇಡುವರು. ದೇವರಮನೆಯಲ್ಲಿ ಅಥವಾ ನಡುಮನೆಯಲ್ಲಿ ನೂರಾ ಒಂದು ಸೆಗಣಿಯ ಮೂರ್ತಿಗಳನ್ನು ಮಾಡುವರು. ಇವು ಕೌರವ-ಪಾಂಡವರೆಂದು ನಂಬಿಕೆಯಿಂದ ಅವುಗಳಿಗೆ ಪೂಜೆಯನ್ನು ಸಲ್ಲಿಸುವರು. ಹೊರಗೆ ಅಂಗಳದಲ್ಲಿ ಇಟ್ಟ ಸೆಗಣಿಯ ಗೊಂಬೆಯಿಂದ ಹೆಜ್ಜೆಯನ್ನು ಹೊಯ್ಯಲಾಗುತ್ತದೆ. ಎರಡೂ ಕೈಗಳನ್ನು ಮುಷ್ಠಿ ಮಾಡಿ ಅವುಗಳನ್ನು ಸುಣ್ಣದ ನೀರಿನಲ್ಲಿ ಎದ್ದಿ ನೆಲಕ್ಕೆ ಊರಿ, ಹೆಜ್ಜೆಯನ್ನು ಮೂಡಿಸುತ್ತಾರೆ. ಕೆಲವರು ಬೆರಳುಗಳಿಂದ ಕಂಸಿನ ಆಕೃತಿಯಲ್ಲಿ ಹೆಜ್ಜೆಗಳನ್ನು ಹೊಯ್ಯುತ್ತಾರೆ. ಇವಕ್ಕೆ ಪಾಂಡವರ ಹೆಜ್ಜೆಗಳೆಂದು ನಂಬಿಕೆ ಇದೆ. ಸೆಗಣಿಗೊಂಬೆಗಳ ಮೇಲೆ, ಹಾಲು, ತುಪ್ಪವನ್ನು ಹಾಕುತ್ತಾರೆ.

ಅವುಗಳಿಗೆ ಚೆಂಡು ಹೂವಿನಿಂದ ಅಲಂಕಾರವನ್ನು ಮಾಡುತ್ತಾರೆ. ಅಲ್ಲದೆ ಉತ್ತರಾಣಿಗೆ ಕಡ್ಡಿಯನ್ನು ಪ್ರತಿಯೊಂದಕ್ಕೂ ಚುಚ್ಚಿ ಇಡುತ್ತಾರೆ. ಬಲಿಪಾಡ್ಯದ ಈ ಸೆಗಣಿ ಗೊಂಬೆಗಳಿಗೆ ಚೆಂಡು ಹೂವು ಕಡ್ಡಾಯವಾಗಿ ಬೇಕೇ ಬೇಕು. ಹೀಗಾಗಿ ದೀಪಾವಳಿಯ ಸಂದರ್ಭದಲ್ಲಿ ನಗರದ ಮಾರುಕಟ್ಟೆಯಲ್ಲೆಲ್ಲಾ ಈ ಹೂವಿನ ಮಾರಾಟ ಹೆಚ್ಚಾಗುತ್ತದೆ. ಈ ಸೆಗಣಿಗೊಂಬೆಗಳಿಗೆ 'ಹಟ್ಟೆವ್ವ'ನೆಂದು ಕರೆಯುತ್ತಾರೆ. ಹಟ್ಟೆವ್ವನ ಸುತ್ತ ಕೆಮ್ಮಣ್ಣಿನಿಂದ ಪಟ್ಟಿಯನ್ನು ಎಳೆಯುತ್ತಾರೆ.

ಹಟ್ಟೆವ್ವನನ್ನು ಕೂಡ್ರಿಸುವ ಪದ್ಧತಿ ಇತ್ತೀಚೆ ಕಡಿಮೆಯಾಗಿದೆ. ಬೆಳೆಯುತ್ತಿರುವ ನಗರದಲ್ಲಿ ಆಧುನಿಕ ಜೀವನ ಶೈಲಿಯಿಂದ ಹೊಸ ಪದ್ಧತಿಗಳು ಬರುತ್ತಿವೆ. ಆದರೂ ಕೆಲವು ಸಂಪ್ರದಾಯಸ್ಥ ಮನೆತನಗಳಲ್ಲಿ, ರೈತಾಪಿ ಮನೆತನಗಳಲ್ಲಿ ಈ ಪದ್ಧತಿಯು ಬೆಳಗಾವಿಯಲ್ಲಿ ಇಂದಿಗೂ ಕಂಡು ಬರುತ್ತದೆ. ವಿಶೇಷವಾಗಿ ತಳವರ್ಗದ ಕೇರಿಗಳಲ್ಲಿ ಈ ಎಲ್ಲ ಪದ್ಧತಿಯನ್ನು ಇಂದಿಗೂ ಆಚರಿಸುವುದು ಕಂಡು ಬರುತ್ತದೆ.

ಮರಾಠಿಗರು ಬಲಿಪಾಡ್ಯವನ್ನು ಬೇರೆ ತೆರನಾಗಿಯೇ ಆಚರಿಸುತ್ತಾರೆ. ಮನೆಯ ಮುಂದೆ ಮಣ್ಣಿನಿಂದ ಕೋಟೆಯನ್ನು ಕಟ್ಟಿ ಅಲ್ಲಿ ಗೊಂಬೆಗಳನ್ನು ಇಡುತ್ತಾರೆ. ವಿಶೇಷವಾಗಿ ಶಿವಾಜಿಯ ಗೊಂಬೆಗಳನ್ನು ಇಡುತ್ತಾರೆ. ರಾತ್ರಿಯ ಸಮಯದಲ್ಲಿ ವಿದ್ಯುತ್ ದೀಪಗಳಿಂದ ಅಲಂಕಾರ ಮಾಡಿ ಮೈಕ್ ಹಚ್ಚಿ ಕೋಟೆಯ ಮುಂದೆ ಯುವಕರು, ಬಾಲಕರು ಕುಣಿಯುತ್ತಾರೆ.

ಎಮ್ಮೆಗಳ ಜಾತ್ರೆ : ದೀಪಾವಳಿಯ ಸಂದರ್ಭದಲ್ಲಿ ಬೆಳಗಾವಿಯಲ್ಲಿ ಕಂಡು ಬರುವ ವಿಶೇಷ ಆಚರಣೆಯೆಂದರೆ ಎಮ್ಮೆಗಳ ಜಾತ್ರೆ[೪೦] ಅಂದು ಎಮ್ಮೆಗಳಿಗೆ ವಿಶೇಷವಾದ ಎಣ್ಣೆ ಸ್ನಾನ ಮಾಡಿಸಿ, ಕೋಡುಗಳಿಗೆ ಬಣ್ಣ ಬಳಿದು, ಮೈಗೆಲ್ಲ ಗುಲಾಲ ಹಚ್ಚಿ, ಕೊರಳಲ್ಲಿ ಗಂಟೆಕಟ್ಟಿ ನಗರದ ಹೊರಗಿನ ಬಯಲಿಗೆ ಬಂದು ಎಮ್ಮೆಗಳನ್ನು ಉತ್ಸಾಹದಿಂದ ಅತ್ತಿತ್ತ ಓಡಾಡಿಸುವರು. ಕೆಲವರು ಶರತ್ತುಗಳನ್ನು ಇಡುವರು. ಸಂಜೆಯವರೆಗೂ ಈ ಎಮ್ಮೆಗಳ ಆಟ ನಡೆಯುತ್ತದೆ. ಹೆಚ್ಚಾಗಿ ಇದನ್ನು ಮರಾಠಿಗರು ಆಚರಿಸುತ್ತಾರೆ.

ಗೌಳಿಗ ಸಮಾಜದ ವಿಶೇಷ ದೀಪಾವಳಿ ಆಚರಣೆ: ದೀಪಾವಳಿಯ ಸಂದರ್ಭದಲ್ಲಿ 'ಧನಗಾರ ಗೌಳಿ'ಗಳ ಸಾಂಪ್ರದಾಯಿಕ ದೀಪಾವಳಿ ಆಚರಣೆ ವಿಶೇಷವಾಗಿ ಕಂಡುಬರುತ್ತದೆ. ಪ್ರತಿವರ್ಷ ದೀಪಾವಳಿ ಸಂದರ್ಭದಲ್ಲಿ ಪಾರಂಪರಿಕ ನೃತ್ಯ, ಪೂಜೆಯ ಮೂಲಕ ನಡೆಯುತ್ತದೆ. ಗೌಳಿ ಸಮಾಜ ಹೈನುಗಾರಿಕೆಯನ್ನೇ ಮುಖ್ಯವಾಗಿ ಅವಲಂಬಿಸಿದೆ. ವಿಶೇಷವಾಗಿ ಬೆಳಗಾವಿ ಸುತ್ತಮುತ್ತಲಿನ ಕಾಡಿನ ಮಧ್ಯದಲ್ಲಿಯೇ ವಾಸಿಸುವ ಈ ಗೌಳಿಗ ಜನರು ದೀಪಾವಳಿಗಾಗಿ ಕಾದು ಕುಳಿತಿರುತ್ತಾರೆ. ಅವತ್ತೊಂದು ದಿನ ಅತ್ಯಂತ ಉತ್ಸಾಹದಿಂದ ದೀಪಾವಳಿಯನ್ನು ಆಚರಿಸುತ್ತಾರೆ.

ಬೆಳಗಾವಿ ಹಾಗೂ ಬೆಳಗಾವಿಯ ಸುತ್ತಮುತ್ತಲಿನ ೨೦-೩೦ ಗ್ರಾಮಗಳಲ್ಲಿ ವಾಸಿಸುತ್ತಿರುವ ಗೌಳಿಗರು ಅಂದು ನಿಗದಿತ ಗ್ರಾಮದಲ್ಲಿ ಸೇರುತ್ತಾರೆ. ಗೌಳಿಗರು ಪ್ರತಿವರ್ಷ ಒಂದೊಂದು ಬೇರೆ ಬೇರೆ 'ಗೌಳಿವಾಡಾ'ಗಳಲ್ಲಿ

ಸಮಾವೇಶಗೊಳ್ಳುತ್ತಾರೆ. ಗೌಳಿಗರಿರುವ ಗ್ರಾಮಗಳ ಪ್ರಮುಖರಿಗೆ ವೀಳ್ಯ ನೀಡುವ ಮೂಲಕ ನೃತ್ಯ ಕಾರ್ಯಕ್ರಮಕ್ಕೆ ಆಮಂತ್ರಿಸಲಾಗುತ್ತದೆ. ಈ ಕಾರ್ಯಕ್ರಮವನ್ನು ನಡೆಸುವ ಗ್ರಾಮದವರೆ ಎಲ್ಲ ಜನರ ಊಟದ ಖರ್ಚನ್ನು ನಿಭಾಯಿಸುತ್ತಾರೆ. ಹಾಲಿನಲ್ಲೆ ಊಟದ ಪದಾರ್ಥಗಳನ್ನು ತಯಾರಿಸುವುದು ವಿಶೇಷ. ಈ ಪದಾರ್ಥಗಳನ್ನು 'ಆಮ್ಕ', 'ತಾಕ' ಹಾಗೂ 'ದೂಧ ಬಾತ್' ಎಂದು ಕರೆಯುತ್ತಾರೆ.

ಎಲ್ಲ ಗೌಳಿಗರು ಗ್ರಾಮದ ದ್ವಾರದಲ್ಲಿಂದಲೇ 'ಹರಹರ ಚೋಂಗಬಲೆ' ಎನ್ನುತ್ತ ಡೊಳ್ಳು ಬಾರಿಸುತ್ತಾ ಊರೊಳಗೆ ಪ್ರವೇಶಿಸುತ್ತಾರೆ. ವಿಶೇಷವಾದ ಜಾನಪದ ಉಡಿಗೆಯಲ್ಲಿ ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಕುಣಿಯುತ್ತಾ ಊರ ಹೊರಗಿನ ನಿಗದಿತ ಸ್ಥಳಕ್ಕೆ ಬಂದು ಎಲ್ಲರೂ ಸೇರಿ ಸಾಮೂಹಿಕ ನೃತ್ಯವನ್ನು ಮಾಡುತ್ತಾರೆ. ಈ ನೃತ್ಯದಲ್ಲಿ ಊರಿನ ಜನರು ಮಹಿಳೆಯರು, ಮಕ್ಕಳು, ಯುವಕರು ಎಂಬ ಭೇದ ಭಾವವಿಲ್ಲದೆ ಎಲ್ಲರೂ ಸೇರಿಕೊಳ್ಳುವರು. ನೃತ್ಯ ಮುಗಿದ ಮೇಲೆ ಎಲ್ಲರೂ ಸೇರಿ ಸಾಮೂಹಿಕ ಭೋಜನವನ್ನು ಮಾಡಿ ತಮ್ಮ ತಮ್ಮ ಊರುಗಳಿಗೆ ಹಿಂತಿರುಗುತ್ತಾರೆ. ಬೆಳಗಾವಿಯಲ್ಲಿ ವಾಸಿಸುವ ನೂರಾರು ಜನ ಗೌಳಿಗರು ಈ ನೃತ್ಯದಲ್ಲಿ ಪ್ರತಿವರ್ಷ ಪಾಲ್ಗೊಂಡು ವಿಶೇಷವಾದ ದೀಪಾವಳಿಯನ್ನು ಆಚರಿಸುತ್ತಾರೆ. ವಿಶಿಷ್ಟ ಶೈಲಿಯ ಭಾಷೆಯ ಹಾಡು ಹಾಗೂ ಅದಕ್ಕೆ ತಕ್ಕಂತೆ ಹೆಜ್ಜೆ ಹಾಕುವ ನೃತ್ಯ ಮನಸೂರೆಗೊಳ್ಳುತ್ತದೆ. ಈ ನೃತ್ಯ ಪುರುಷರಿಗೆ ಮಾತ್ರ ಸೀಮಿತವಾಗಿರದೆ ಮಹಿಳೆಯರೂ ವಿಭಿನ್ನ ರೀತಿಯ ನೃತ್ಯಗಳನ್ನು ಮಾಡುತ್ತಾರೆ. 'ಪುಗಡಿ' ಹಾಗೂ 'ಸಾದಾಪುಗಡಿ' ಎಂಬ ನೃತ್ಯವನ್ನು ಮಾಡುತ್ತಾರೆ. ಪೂಜಾರಿಗಳಿಂದ ವೀಳ್ಯ ಪಡೆದ ನಂತರವೇ ನೃತ್ಯದಲ್ಲಿ ಭಾಗವಹಿಸುತ್ತಾರೆ. 'ಜಪಯ', 'ಡೋಳು ಜಪಯ', 'ಸಾಪರ' ಎಂಬ ವಿಭಿನ್ನ ನೃತ್ಯ ಮನಸೆಳೆಯುತ್ತದೆ.

ಈ ನೃತ್ಯವು ತಮ್ಮ ಆರಾಧ್ಯ ದೈವವಾದ ವಿಠ್ಠಲನಲ್ಲಿ ಮೊರೆ ಇಡುವುದಾಗಿದೆ. ಶಿವಾಜಿಯ ಕಾಲಕ್ಕೆ ಈ ಗೌಳಿಗರು ಬೆಳಗಾವಿ ಪ್ರದೇಶಕ್ಕೆ ಬಂದಿರಬಹುದೆಂದು ಪ್ರೊ. ಚಂದ್ರಕಾಂತ. ಪೋಕಳೆಯವರು ಅಭಿಪ್ರಾಯ ಪಡುತ್ತಾರೆ.[೪೧]

**ಗುಳ್ಳವ್ವನ ಹಬ್ಬ** : ಉತ್ತರ ಕರ್ನಾಟಕದ ಗ್ರಾಮೀಣ ಪ್ರದೇಶಗಳಲ್ಲಿ ಕಂಡುಬರುವ ಗುಳ್ಳವ್ವನ ಹಬ್ಬವನ್ನು ಬೆಳಗಾವಿಯ ಕೆಲವು ಪ್ರದೇಶಗಳಲ್ಲಿ ಆಚರಿಸುತ್ತಾರೆ. ಸಾಂಪ್ರದಾಯಿಕವಾಗಿ ಬಂದ ಈ ಹಬ್ಬದ ಆಚರಣೆಯು ನಗರದ ಗ್ರಾಮೀಣ ಪರಿಸರದಿಂದ ಬಂದು ನೆಲೆಸಿದ ಕೆಲವು ಮನೆತನಗಳಲ್ಲಿ ಕಂಡುಬರುತ್ತದೆ. ಅದರಲ್ಲಿಯೂ ಜೀವನ ನಿರ್ವಹಣೆಗಾಗಿ ಕೆಲಸ ಹುಡುಕಿಕೊಂಡು ಬಂದ ಜನಸಾಮಾನ್ಯರಲ್ಲಿ ಈ ಹಬ್ಬದ ಆಚರಣೆಯು ಕಂಡುಬರುತ್ತದೆ.

ಆಷಾಢ ಮಾಸದ ನಾಲ್ಕು ಮಂಗಳವಾರಗಳಂದು ಗುಳ್ಳವ್ವನನ್ನು ಪೂಜಿಸಲಾಗುತ್ತದೆ. ಅದರಲ್ಲಿಯೂ ಆಷಾಢ ಮಾಸದ ಕಡೆಯ ಮಂಗಳವಾರವನ್ನು ಕಡೆ ಗುಳ್ಳವ್ವನ ವಾರವೆಂದು ಆಚರಿಸಲಾಗುತ್ತದೆ. ಈ ಹಬ್ಬವನ್ನು ಹೆಣ್ಣುಮಕ್ಕಳು ಹಾಗೂ ಚಿಕ್ಕಮಕ್ಕಳು ಹೆಚ್ಚಾಗಿ ಆಚರಿಸುತ್ತಾರೆ.

ಗುಳ್ಳವನನ್ನು ಮಣ್ಣಿನಿಂದ ಮಾಡುತ್ತಾರೆ. ಊರ ಹೊರಗಿನಿಂದ ಮಣ್ಣನ್ನು ತಂದು ಗುಳ್ಳವ್ವನನ್ನು ಮಾಡುತ್ತಾರೆ. ಗುಳ್ಳವ್ವನ ಮಣ್ಣು ತರಲು ಹೋಗುವಾಗ ಜೊತೆಯಲ್ಲಿ ಪೂಜಾ ಸಾಮಗ್ರಿಗಳನ್ನು ಮತ್ತು ತಿನ್ನುವ ಫಳಾರವನ್ನು ತೆಗೆದುಕೊಂಡು ಹೋಗುತ್ತಾರೆ. ನೆಲಕ್ಕೆ ಪೂಜೆ ಮಾಡಿದ ತರುವಾಯವೇ ಮಣ್ಣನ್ನು ತೆಗೆಯುತ್ತಾರೆ. ಹೀಗೆ ಮಣ್ಣನ್ನು ತರುವಾಗ ಕೆಲವು ಹುಡುಗರು ಗುಳ್ಳವ್ವನ ಚೆಂಡು ಕಡಿಯುತ್ತೇವೆ ಇಲ್ಲದಿದ್ದರೆ ನಮಗೆ ತಿನ್ನಲು ಏನಾದರೂ ಕೊಡಬೇಕು ಎಂದು ಕೇಳುತ್ತಾರೆ. ಆಗ ತಮ್ಮಲ್ಲಿಯ ಫಳಾರವನ್ನು ಹುಡುಗರಿಗೆ ಕೊಡುತ್ತಾರೆ. ಹೀಗೆ ಪೋಲಿ ಹುಡುಗರಿಂದ ಗುಳ್ಳವ್ವನ ಚೆಂಡನ್ನು ಕಡಿಯುವುದನ್ನು ತಪ್ಪಿಸಲೇ ಹೋಗುವಾಗ ತಿನ್ನಲು ಫಳಾರವನ್ನು ಒಯ್ಯುತ್ತಾರೆ.

ಮಣ್ಣಿನಿಂದ ಗುಳ್ಳವ್ವನನ್ನು ಮಾಡಿ ಮನೆಯ ಮೇಲೆ ಇಟ್ಟು ಪೂಜೆ ಮಾಡಲಾಗುತ್ತದೆ. ಗುಳ್ಳವ್ವನಿಗಾಗಿಯೇ ವಿಶೇಷವಾದ ಅಡಿಗೆಯನ್ನು ಮಾಡಲಾಗಿರುತ್ತದೆ. ಅದನ್ನು ನೈವೇದ್ಯ ಹಿಡಿದು ಮನೆಯವರೆಲ್ಲಾ ಸೇರಿ ಊಟ ಮಾಡುತ್ತಾರೆ. ಹೆಣ್ಣು ಮಕ್ಕಳು ಮನೆ ಮನೆಗೆ ಹೋಗಿ ಗುಳ್ಳವ್ವನಿಗೆ ಆರತಿಯನ್ನು ಮಾಡಿ ಬರುತ್ತಾರೆ. ಕೆಲವು ಮನೆಗಳಲ್ಲಿ ವೈವಿಧ್ಯಮಯವಾದ ಗುಳ್ಳವ್ವನನ್ನು ಮಾಡಿರುತ್ತಾರೆ. ಗುಳ್ಳವ್ವಳಿಗೆ ಮನೆಯನ್ನು ಕಟ್ಟಲು ಕಟ್ಟಿಗೆಯಿಂದ ಮಾಡಿದ ಬಾಗಿಲುಗಳನ್ನು ಕೆಲವು ಮನೆಗಳಲ್ಲಿ ಇಂದಿಗೂ ಕಾಣಬಹುದು. ಇವುಗಳಿಗೆ ಗುಳ್ಳವ್ವನ ಮನೆಗಳು ಎಂದೇ ಕರೆಯಲಾಗುವುದು. ಹಲವು ಚಿತ್ತಾರದ ಬಾಗಿಲುಗಳನ್ನು ಗುಳ್ಳವ್ವನ ಮನೆಕಟ್ಟಲು ಉಪಯೋಗಿಸುತ್ತಾರೆ. ಕಡೆಯ ಗುಳ್ಳವ್ವನ ಮಂಗಳವಾರದಂದು ದೊಡ್ಡದಾದ ಗುಳ್ಳವ್ವನನ್ನು ಕೂಡ್ರಿಸಿ ಅವಳಿಗೆ ಸೀರೆಯನ್ನು ಉಡಿಸಲಾಗುತ್ತದೆ. ಹೂವುಗಳಿಂದ ಅಲಂಕರಿಸಲಾಗುತ್ತದೆ. ಮನೆಯವರೆಲ್ಲಾ ಸೇರಿ ಪೂಜೆಯನ್ನು ಮಾಡುತ್ತಾರೆ. ಮರುದಿನ ಗುಳ್ಳವ್ವನನ್ನು ಮರಳಿ ಕಳುಹಿಸುವ ವಾಡಿಕೆ. ಅಂದು ಹೋಳಿಗೆ, ಕಡಬು–ಹೀಗೆ ವಿಧ ವಿಧವಾದ ಭಕ್ಷ್ಯಗಳನ್ನು ಮಾಡಿಕೊಂಡು ಊರ ಹೊರಗಿನ ತೋಟಗಳಿಗೆ ಹೋಗುವರು. ಎಲ್ಲರೂ ಒಂದೇ ಕಡೆಗೆ ಗುಳ್ಳವ್ವಗಳನ್ನು ಇಟ್ಟು ಪೂಜೆ ಮಾಡಿ ಎಲ್ಲರೂ ಸೇರಿ ಊಟ ಮಾಡುವರು. ಈ ಸಮಯದಲ್ಲಿ ಹಲವಾರು ತರಹದ ಆಟಗಳನ್ನು ಆಡುವರು. ಪಗಡೆ ಆಟ, ಹಾಡು, ಒಗಟು, ಕಥೆ–ಹೀಗೆ ಮನರಂಜನೆಯ ಆಟಗಳನ್ನು ಆಡಿ ಸಂಜೆಯ ಹೊತ್ತಿಗೆ ಮನೆಗೆ ಬರುವರು. ಗ್ರಾಮೀಣ ಪರಿಸರದ ಈ ಹಬ್ಬವು ನಗರ ಪ್ರದೇಶಗಳಲ್ಲಿ ತೀರ ಕಡಿಮೆ ಜನರಲ್ಲಿ ಕಂಡುಬರುತ್ತದೆ. ಸ್ನೇಹ, ಪ್ರೀತಿ ಸೌಹಾರ್ದತೆಯ ಈ ಹಬ್ಬದ ಆಚರಣೆಯು ಗ್ರಾಮೀಣ ಪ್ರದೇಶಗಳಲ್ಲಿಯೇ ಕಡಿಮೆಯಾಗಿದೆ. ಈ ಹಬ್ಬದ ಆಚರಣೆಯಲ್ಲಿ ಯಾವುದೇ ಜಾತಿ, ಧರ್ಮದ ಭೇದ ಭಾವ ಕಂಡುಬರುವುದಿಲ್ಲ. ಎಲ್ಲ ಜನಾಂಗದವರೂ ಈ ಹಬ್ಬವನ್ನು ಆಚರಿಸುತ್ತಾರೆ. ನಗರದ ಗೊಂದಳಿಗಲ್ಲಿ, ಬಾಂದೂರ ಗಲ್ಲಿ, ಶಹಾಪೂರ, ಅನಿಗೋಳ, ವಡಗಾವಿ ಪ್ರದೇಶಗಳಲ್ಲಿ ಕೆಲವು ಮನೆತನಗಳಲ್ಲಿ ಈಹಬ್ಬದ ಆಚರಣೆಯನ್ನು ಕಾಣಬಹುದು. ಬೆಳಗಾವಿ ನಗರ ವ್ಯಾಪ್ತಿಗೆ ಒಳಪಟ್ಟ ಬಸವನ ಕುಡಚಿ ಭಾಗದಲ್ಲಿ ಈ ಹಬ್ಬವನ್ನು ಕೆಲವು ಜನರು ಆಚರಿಸುವುದು ಕಂಡುಬರುತ್ತದೆ. ವಿಶೇಷವಾಗಿ ಒಕ್ಕಲುತನ ಮನೆತನಗಳಲ್ಲಿ ಈ ಹಬ್ಬದ ಆಚರಣೆ ಕಂಡುಬರುತ್ತದೆ.

**ಕಾರಹುಣ್ಣಿಮೆ ಆಚರಣೆ :** ರೈತರ ಮೊದಲ ಹಬ್ಬ ಕಾರಹುಣ್ಣಿಮೆಯು ವಿಶೇಷವಾಗಿ ಆಚರಣೆಗೊಳ್ಳುತ್ತದೆ. ಬೆಳಗಾವಿ ನಗರದಲ್ಲಿರುವ ರೈತಾಪಿ ವರ್ಗವು ಈ ಹಬ್ಬದ ಸಂದರ್ಭದಲ್ಲಿ ವಿಶೇಷವಾದ ಪೂಜೆ, ಆಚರಣೆಗಳನ್ನು ಕೈಗೊಳ್ಳುತ್ತಾರೆ. ತಮ್ಮ ಎತ್ತುಗಳು ಸೇರಿದಂತೆ ಎಲ್ಲ ಜಾನುವಾರುಗಳ ಮೈತೊಳೆದು ಅವುಗಳಿಗೆ ಬಣ್ಣ ಬಳಿದು, ಕೊಡುಗಳಿಗೆ ರಿಬ್ಬನ್ ಕಟ್ಟಿ ಕೊರಳಲ್ಲಿ ಗಗ್ಗರಿ ಹಾಕಿ ಸಂಭ್ರಮಿಸುತ್ತಾರೆ.

ಕೃಷಿಕರಿಗೆ ಎತ್ತುಗಳೆಂದರೆ ಬಸವಣ್ಣ ಎಂದೇ ಪೂಜಿಸುತ್ತಾರೆ. ಸಾಮಾನ್ಯವಾಗಿ ಹಳ್ಳಿಗಳಲ್ಲಿ ಕಂಡು ಬರುವ ಈ ಆಚರಣೆಯನ್ನು ಬೆಳಗಾವಿಯ ಕೆಲವು ರೈತವರ್ಗದವರು ಆಚರಿಸುತ್ತಾರೆ. ಆದರೆ ಕೇವಲ ಬೆರಳೆಣಿಕೆಯಲ್ಲಿ ಮಾತ್ರ ಕಂಡು ಬರುವ ಎತ್ತುಗಳು ಇತ್ತೀಚೆಗೆ ಆಧುನಿಕ ಯಂತ್ರೋಪಕರಣಗಳ ಭರಾಟೆಯಲ್ಲಿ ಮರೆಯಾಗಿ ಹೋಗುತ್ತಿವೆ. ಸಾಂಪ್ರದಾಯಿಕವಾಗಿ ಒಕ್ಕುಲತನವನ್ನು ಮಾಡುತ್ತಾ ಬಂದಿರುವ ಹಾಗೂ ಯಂತ್ರಗಳನ್ನು ಖರೀದಿಸಲು ಸಾಧ್ಯವಾಗದ ಬಡ ರೈತರು ಎತ್ತುಗಳನ್ನು ಅವಲಂಬಿಸಿದ್ದಾರೆ. ಬೆಳಗಾವಿ ಮಹಾನಗರವಾಗಿ ಬೆಳವಣಿಗೆಯನ್ನು ಹೊಂದುತ್ತಿರುವುದರಿಂದ ನಗರದೊಳಗಿನ ಮನೆಗಳಲ್ಲಿ ದನಕರುಗಳನ್ನು ಸಾಕಲು ತೊಂದರೆಯಾಗುತ್ತಿರುವುದರಿಂದ ಹಲವಾರು ರೈತರು ಹೊಲಗಳಲ್ಲಿಯೇ ಮನೆಗಳನ್ನು ಕಟ್ಟಿ ಅಲ್ಲಿಯೇ ಅವುಗಳನ್ನು ಸಾಕುತ್ತಾರೆ. ವಿಶೇಷವಾದ ಹಬ್ಬ, ಪೂಜೆ, ಆಚರಣೆಗಳ ಸಂದರ್ಬದಲ್ಲಿ ತಮ್ಮ ಮನೆಗೆ ತಂದು ಪೂಜೆಯನ್ನು ಮಾಡುತ್ತಾರೆ. ನಗರದ ಶಹಪೂರ, ಅನಿಗೋಳ, ವಡಗಾವಿ ಮತ್ತು ಮಹಾನಗರ ವ್ಯಾಪ್ತಿಯ ಬಸವನಕುಡಚಿ, ಅಲಾರವಾಡ ಮುಂತಾದ ಪ್ರದೇಶಗಳಲ್ಲಿ ಕಾರಹುಣ್ಣಿಮೆಯು ಆಚರಣೆಗೊಳ್ಳುತ್ತದೆ.

**೪. ಜಾತ್ರೆ-ಮಹೋತ್ಸವಗಳು:**

**ಬಸವಣ್ಣದೇವರ ಜಾತ್ರೆ:** ನಗರದ ಬಸವನ ಬೀದಿಯ ಬಸವಣ್ಣನ ಜಾತ್ರೆಯು ವಿಶಿಷ್ಟ ಸಂಪ್ರದಾಯ, ಆಚರಣೆಗಳಿಂದ ಗಮನಸೆಳೆಯುತ್ತದೆ. ಯುಗಾದಿಯ ದಿನದಂದು ಜರಗುವ ಈ ಜಾತ್ರೆಯು ಒಂದು ಕಾಲದಲ್ಲಿ ಬೆಳಗಾವಿಯ ಜನಜೀವನದ ಮೇಲೆ ಗಾಢವಾದ ಪರಿಣಾಮವನ್ನು ಬೀರಿತ್ತು. ಅಂದು ಬೆಳಗಾವಿಯಲ್ಲಿ ಕೃಷಿ ಒಂದು ಪ್ರಧಾನ ಉದ್ಯೋಗ. ಇವರ ಮನೆಗಳಲ್ಲಿರುವ ಎತ್ತುಗಳಿಗೆಲ್ಲ ಅಂದು ವಿಶೇಷವಾದ ಅಲಂಕಾರ ಮಾಡುತ್ತಿದ್ದರು. ಈ ಜಾತ್ರೆಯ ವಿಶೇಷತೆ ಎಂದರೆ 'ಅಂಬಲಿ ಬಂಡಿ' ಚಕ್ಕಡಿಯಲ್ಲಿ ಅಂಬಲಿ ತುಂಬಿದ ದೊಡ್ಡ ದೊಡ್ಡ ಕೊಳಗಳನ್ನು ಇಟ್ಟು ಚಕ್ಕಡಿಗೆ ಕೊಳಗಳಿಗೆ ಹಾಗೂ ಎಳೆಯುವ ಎತ್ತುಗಳಿಗೆಲ್ಲ ವಿಶೇಷವಾದ ಅಲಂಕಾರ ಮಾಡಿ ಬೀದಿ ಬೀದಿಯಲ್ಲಿ ಸಂಚರಿಸಿ ಮಧ್ಯರಾತ್ರಿಯ ವರೆಗೂ ಮೆರವಣಿಗೆ ನಡೆಯುತ್ತಿತ್ತು. ಈ ಸಂದರ್ಭದಲ್ಲಿ ಬೆಂಕಿಯ ಹೊಂಡವನ್ನು ತಯಾರಿಸಿ ಅದರಲ್ಲಿ ಕಿಚ್ಚ ಹಾಯುವ ಸಂಪ್ರದಾಯವೂ ಇತ್ತು. ಈಗಲೂ ಜಾತ್ರೆ ವೈಭವದಿಂದ ನೆರವೇರುತ್ತದೆ. ಆದರೆ ಕಿಚ್ಚ ಹಾಯುವ ಪದ್ಧತಿ ಕಡಿಮೆಯಾಗಿದೆ. ಅಂಬಲಿ ಬಂಡಿಯು ಮೆರವಣಿಗೆ ಮೂಲಕ ಸಾಗುತ್ತದೆ. ಇಲ್ಲಿ ವೀರಶೈವಧರ್ಮದ ಆಚರಣೆಗಳು ಕಂಡುಬಂದರೂ ಈ ಜಾತ್ರೆಯಲ್ಲಿ ಎಲ್ಲಾ ಮತಧರ್ಮದವರು ಪಾಲ್ಗೊಳ್ಳುತ್ತಾರೆ.

**ನಾರಳೀ ಪೌರ್ಣಿಮಾ ಜಾತ್ರೆ:** ನಾರಳೀ ಪೌರ್ಣಿಮೆಯ ದಿನ ಅಂದರೆ ನೂಲು ಹುಣ್ಣಿಮೆಯಂದು ನಗರದ ಕೆರೆಯ ಪಕ್ಕದ ಕೋಟೆ ಮುಂದಿನ ಬಯಲಿನಲ್ಲಿ ಈ ಜಾತ್ರೆ ಸೇರುತ್ತದೆ. ಕಿಲ್ಲೆಯ ಹೆಬ್ಬಾಗಿಲ ಹತ್ತಿರ ಇರುವ ದುರ್ಗಾದೇವಿಗೆ ಜನರು ವಿಶೇಷವಾಗಿ ಪೂಜೆ ಮಾಡಿ ತಾವು ತಂದ ತಿಂಡಿ ತಿನಿಸುಗಳನ್ನು ಹಂಚಿತಿಂದು ಜಾತ್ರೆಯಲ್ಲಿ ಉತ್ಸಾಹದಿಂದ ಪಾಲ್ಗೊಳ್ಳುವರು. ಹಿಂದೆ ಈ ಸಂದರ್ಭದಲ್ಲಿ ಕೆರೆಯಲ್ಲಿ ಟೆಂಗಿನಕಾಯಿ ಎಸೆಯುವ ಸ್ಪರ್ಧೆ ನಡೆಯುತ್ತಿತ್ತು. ಒಬ್ಬರು ಕಾಯಿಯನ್ನು ನೀರಲ್ಲಿ ಎಸೆಯುವರು ಅದನ್ನು ಈಜುತ್ತ ಹೋಗಿ ತರುವ ಸ್ಪರ್ಧೆ ನಡೆಯುತ್ತಿತ್ತು. ಈಗ ಅತ್ಯಲ್ಪ ಪ್ರಮಾಣದಲ್ಲಿ ಇದು ನೆರವೇರುತ್ತದೆ.

ಈ ಜಾತ್ರೆಯ ಹಿನ್ನೆಲೆ ತಿಳಿದು ಬರುವುದಿಲ್ಲ. ಆದರೆ ಕೋಟೆಯೊಳಗೆ ಮೊದಲು ಗ್ರಾಮದೇವತೆಯ ದೇವಾಲಯವಿದ್ದು ಅದರ ಜಾತ್ರೆ ನೆರವೇರುತ್ತಿತ್ತೆನ್ನುವುದನ್ನು ಡಾ. ಎಂ. ಚಿದಾನಂದಮೂರ್ತಿ ಅವರು ಉಲ್ಲೇಖಿಸಿದ್ದಾರೆ.[೪೨] ಇಲ್ಲಿಯ ದೇವಾಲಯವನ್ನು ಹದಿನೈದನೆಯ ಶತಮಾನದಲ್ಲಿ ಮಹಮ್ಮದ್ ಗವಾನನು ನಾಶಮಾಡಿದನು. ಆದರೆ ಸಂಪ್ರದಾಯ ಪರಂಪರೆ ಹಾಗೆಯೇ ಮುಂದುವರೆದು ಬಂದಿರುವುದು. ಈ ಗ್ರಾಮದೇವತೆಯ ಜಾತ್ರೆಯ ಸಂದರ್ಭದಲ್ಲಿ ಕುರಿ ಕೋಳಿ, ಮೇಕೆ ಹಾಗೂ ಎಮ್ಮೆಗಳ ಬಲಿ ನಡೆಯುತ್ತಿತ್ತೆಂದು ತಿಳಿದುಬರುತ್ತದೆ.[೪೩] ಆದರೆ ಇಂದು ಯಾವುದೇ ಬಲಿ ಇಲ್ಲಿ ನಡೆಯುವುದಿಲ್ಲ. ಬಹುಶಃ ನಾರಳೀ ಪೌರ್ಣಿಮೆಯೆಂದು ನಡೆಯುವ ಜಾತ್ರೆಯೇ ಅಂದಿನ ಗ್ರಾಮ ದೇವತೆಯ ಜಾತ್ರೆಯಾಗಿರಬಹುದು.

**ವೆಂಟಕರಮಣ ದೇವರ ಜಾತ್ರೆ:** ಮಾರುಕಟ್ಟೆ ಪ್ರದೇಶದಲ್ಲಿರುವ ವೆಂಕಟರಮಣ ದೇವರ ಜಾತ್ರೆ ಹಾಗು ರತೋತ್ಸವ ದಸರೆಯ ದಿನದಂದು ನಡೆಯುತ್ತದೆ. ಮೊದಲು ಎಲ್ಲಾ ಓಣಿಗಳಲ್ಲಿ ರಥ ಸಂಚಾರಗೊಳ್ಳುತ್ತಿತ್ತು. ಈಗ ಮೊದಲಿನ ವೈಭೋಗ ಇಲ್ಲದಿದ್ದರೂ ರಥವನ್ನು ಎಳೆಯುತ್ತಾರೆ. ಅಂದು ನಗರದ ವಿಷ್ಣುಭಕ್ತರೆಲ್ಲ ಸೇರುತ್ತಾರೆ, ಬೇರೆ ಬೇರೆ ಊರುಗಳಿಂದಲೂ ಬಂದು ಸೇರುತ್ತಾರೆ. ಒಂದು ವಿಶಿಷ್ಟ ಮತದವರದೇ ಉತ್ಸವ ಎನಿಸಿದ್ದರೂ ಎಲ್ಲ ಧರ್ಮದ ಭಕ್ತರೂ ಭಕ್ತಿಶ್ರದ್ಧೆಯಿಂದ ಭಾಗವಹಿಸುತ್ತಾರೆ.

**ಶ್ರೀ ವೀರಭದ್ರೇಶ್ವರ ದೇವರ ರಥೋತ್ಸವ :** ಮಹಾಶಿವರಾತ್ರಿಯ ನಿಮಿತ್ತ ಬೆಳಗಾವಿಯ ಪೊಲೀಸ್ ಹೆಡ್ ಕ್ವಾಟರ್ಸ್ ಬಳಿ ಇರುವ ಶ್ರೀ ವೀರಭದ್ರೇಶ್ವರ ದೇವರ ರಥೋತ್ಸವವು ಜರುಗುತ್ತದೆ. ಇದು ಬೆಳಗಾವಿಯಲ್ಲಿ ನಡೆಯುವ ಜಾತ್ರೆ ಮಹೋತ್ಸವಗಳಲ್ಲಿಯೇ ವಿಶಿಷ್ಟವಾಗಿದೆ. ಹತ್ತಾರು ಸಾವಿರ ಜನರು ಈ ಸಂದರ್ಭದಲ್ಲಿ ಸೇರಿರುತ್ತಾರೆ. ಈ ಜಾತ್ರೆಯು ನೂರಾರು ವರ್ಷಗಳ ಹಿಂದಿನಿಂದಲೂ ನಡೆಯುತ್ತ ಬಂದಿದೆ. ಕಟ್ಟಿಗೆಯಿಂದ ನಿರ್ಮಿಸಿದ ರಥದಲ್ಲಿ ವೀರಭದ್ರದೇವರ ಮೂರ್ತಿಯನ್ನಿಟ್ಟು ರಥವನ್ನು ಹೂವಿನಿಂದ ಅಲಂಕರಿಸಿ ಎಳೆಯಲಾಗುತ್ತದೆ. ರಥೋತ್ಸವದ ಸಂದರ್ಭದಲ್ಲಿ ಹಲವಾರು ತರಹದ ಜಾನಪದ ವಾದ್ಯಗಳನ್ನು ಊದುತ್ತ ಬಾರಿಸುತ್ತ ಸಾಗುವರು. ರಥೋತ್ಸವದ

ಸಂದರ್ಭದಲ್ಲಿ ಅತ್ಯಂತ ಆಕರ್ಷಣೀಯವಾದುದೆಂದರೆ ಪುರವಂತಿಕೆ ಹೇಳುವುದು. ಕೈಯಲ್ಲಿ ಖಡ್ಗ ಹಿಡಿದು ಕೆಂಪು ಬಣ್ಣದ ಪೋಷಾಕುಗಳನ್ನು ಧರಿಸಿ ಮೈಗೆಲ್ಲ ಅಸ್ತ್ರಗಳನ್ನು ಚುಚ್ಚಿಕೊಳ್ಳುವುದನ್ನು ನೋಡಿದರೆ ಮೈರೋಮಾಂಚನಗೊಳ್ಳುತ್ತದೆ. ವಿಶೇಷವಾಗಿ ವೀರಭದ್ರದೇವರ ಜಾತ್ರೆಯಲ್ಲಿ ಅಸ್ತ್ರಗಳನ್ನು ಚುಚ್ಚಿಕೊಳ್ಳುವುದು ಸಾಮಾನ್ಯವಾಗಿರುತ್ತದೆ.

**ಚಿದಂಬರ ಜಯಂತಿ ಉತ್ಸವ :** ಹದಿನೆಂಟನೆಯ ಶತಮಾನದಲ್ಲಿ ಬದುಕಿನ ಮಹಾಪುರುಷ ಚಿದಂಬರರು ತಮ್ಮ ತತ್ವ, ಬೋಧನೆಗಳಿಂದ ಪ್ರಸಿದ್ಧರಾದವರು. ಲಕ್ಷಾಂತರ ಭಕ್ತರನ್ನು ಹೊಂದಿದ ಇವರು ಧಾರ್ಮಿಕ ಜಾಗೃತಿಯನ್ನುಂಟು ಮಾಡಿದರು. ದೇಶ-ವಿದೇಶಗಳಲ್ಲಿ ಇವರ ಭಕ್ತ ಸಮೂಹವಿದೆ. ಹೆಚ್ಚಾಗಿ ಮಹಾರಾಷ್ಟ್ರ, ಗೋವಾ ರಾಜ್ಯಗಳಲ್ಲಿ ಇವರ ಅನುಯಾಯಿಗಳಿದ್ದಾರೆ. ಈ ಮಹಾಪುರುಷನ ಜಯಂತಿ ಉತ್ಸವ ಪ್ರತಿವರ್ಷ ಬೆಳಗಾವಿಯ ಭವಾನಿ ನಗರದಲ್ಲಿ ಜರುಗುತ್ತದೆ. ಚಿದಂಬರ ಮಹಾಸ್ವಾಮಿಗಳ ಆರಾಧಕರಾದ ಮೂಲತಃ ಪಾಶ್ಚಾಪುರದವರಾದ ದಿವಾಕರ ದೇಶಪಾಂಡೆಯವರು ಕಳೆದ ಇಪ್ಪತ್ತು ವರ್ಷಗಳಿಂದ ಚಿದಂಬರ ಜಯಂತಿ ಉತ್ಸವವನ್ನು ನಡೆಸಿಕೊಂಡು ಬಂದಿದ್ದಾರೆ. ವಿಶೇಷವಾದ ಪೂಜೆ, ಪ್ರವಚನಗಳು ಈ ಸಂದರ್ಭದಲ್ಲಿ ಜರುಗುತ್ತವೆ. ಸಾವಿರಾರು ಜನ ಭಕ್ತರು ಈ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುತ್ತಾರೆ

ದಿವಾಕರ ದೇಶಪಾಂಡೆಯವರು ಆಧ್ಯಾತ್ಮದಲ್ಲಿ ಒಲವು ಹೊಂದಿ ಔದುಂಬರ ಶಂಕರಾಚಾರ್ಯ ಮಠದಿಂದ ಗುರೂಪದೇಶ ಪಡೆದು ಬೆಳಗಾವಿಯಲ್ಲಿ ಧರ್ಮ ಜಾಗೃತಿಯಲ್ಲಿ ತೊಡಗಿದ್ದಾರೆ. ಬೆಳಗಾವಿಯ ಭವಾನಿಗಲ್ಲಿಯಲ್ಲಿರುವ ಇವರ ಮನೆಯಲ್ಲಿ ಪ್ರತಿ ರವಿವಾರ ಭಕ್ತರ ಸಮಸ್ಯೆಗಳನ್ನು ಕೇಳಿ ಪರಿಹಾರ ನೀಡುತ್ತಾರೆ. ಆಧುನಿಕ ವೈಜ್ಞಾನಿಕ ಯುಗದಲ್ಲಿಯೂ ಜನರು ಧರ್ಮದ ನಂಬಿಕೆಗಳನ್ನು ಪಾಲಿಸುತ್ತಿದ್ದಾರೆ. ಇತ್ತೀಚಿನ ದಿನಗಳಲ್ಲಿ ದೇವರ ಮೇಲಿನ ನಂಬಿಕೆ ಕಡಿಮೆಯಾಗಿದ್ದರೂ ಬೆಳಗಾವಿಯಂತಹ ಫ್ಯಾಶನ್ ನಗರದಲ್ಲಿ ಹಳೆಯ ಪದ್ಧತಿಯನ್ನು ನಂಬಿಕೊಂಡು ಬರಲಾಗುತ್ತಿದೆ.

ಟಿಳಕವಾಡಿಯ ಕವಳೇಮಠದಲ್ಲಿಯೂ ಶಿವ ಚಿದಂಬರ ಸ್ವಾಮೀಜಿಯವರ ಜಯಂತಿಯನ್ನು ಭಕ್ತಿ ಭಾವದಿಂದ ಆಚರಿಸಲಾಗುತ್ತದೆ. ಈ ಜಯಂತಿ ಉತ್ಸವದ ಸಂದರ್ಭದಲ್ಲಿ ವಿಶಿಷ್ಟವಾದ ಆಚರಣೆಗಳು ಜರುಗುತ್ತವೆ. ಅವುಗಳಲ್ಲಿ ಮುಖ್ಯವಾದದ್ದು ಬಾಲ ಶಿವ ಚಿದಂಬರನನ್ನು ಹೂವಿನಿಂದ ಅಲಂಕರಿಸಿದ್ದ ತೊಟ್ಟಿಲಿನಲ್ಲಿ ಹಾಕಿ ಮುತ್ತೈದೆಯರೆಲ್ಲರು ಕೂಡಿ ಜೋಗುಳವನ್ನು ಹಾಡುತ್ತಾ ತೂಗುವದು. ಇದಾದ ಮೇಲೆ ಆಧ್ಯಾತ್ಮಿಕ ಚಿಂತನೆ ಸಂಗೀತ, ಪ್ರವಚನ ಕಾರ್ಯಗಳು ನಡೆಯುತ್ತವೆ.

**ಜಗನ್ನಾಥ ರಥಯಾತ್ರೆ :** ಇಸ್ಕಾನ್ ಸಂಘಟನೆಯವತಿಯಿಂದ ದಿನಾಂಕ ೨೯-೧-೨೦೧೧ ರಂದು ಜಗನ್ನಾಥ ರಥಯಾತ್ರಾ ಮಹೋತ್ಸವವನ್ನು ಆಚರಿಸಲಾಯಿತು. ಈ ರಥಯಾತ್ರೆಯು ಪ್ರತಿವರ್ಷ ನಡೆಯುವ ರಥೋತ್ಸವವಲ್ಲ.

ಧರ್ಮ ಜಾಗೃತಿಗಾಗಿ ಇಸ್ಕಾನ್ ಸಂಘಟನೆಯು ಆಯೋಜಿಸಿದ ರಥಯಾತ್ರೆ, ಆದರೆ ಈ ರಥಯಾತ್ರೆಯು ಬೆಳಗಾವಿ ಜನರಲ್ಲಿ ಧಾರ್ಮಿಕ ಜಾಗೃತಿಯನ್ನುಂಟು ಮಾಡಿತು. ಜಗನ್ನಾಥನ ಭವ್ಯವಾದ ರಥವನ್ನು ನಗರದ ಧರ್ಮವೀರ ಸಂಭಾಜಿ ಚೌಕದಿಂದ ಪ್ರಾರಂಭಿಸಿ ನಗರದ ಪ್ರಮುಖ ಬೀದಿಗಳಲ್ಲಿ ಸಂಚರಿಸುತ್ತ ಟಿಳಕವಾಡಿಯ ಇಸ್ಕಾನ ದೇವಾಲಯದಲ್ಲಿ ಸಮಾರೋಪಗೊಳಿಸಲಾಯಿತು. ಈ ರಥಯಾತ್ರೆಯಲ್ಲಿ ಬೆಳಗಾವಿಯ ಎಲ್ಲ ಸಮುದಾಯದವರು ಪಾಲ್ಗೊಂಡಿದ್ದು ವಿಶೇಷವಾಗಿದೆ. ಅಲ್ಲದೆ ದೇಶದ ನಾನಾ ಭಾಗಗಳಿಂದ ಹಾಗೂ ವಿದೇಶಗಳಿಂದಲೂ ಕೆಲವು ಭಕ್ತರು ಆಗಮಿಸಿ ಈ ರಥೋತ್ಸವದಲ್ಲಿ ಪಾಲ್ಗೊಂಡಿದ್ದರು. ಈ ರಥೋತ್ಸವದ ಸಂದರ್ಭದಲ್ಲಿ ಬೆಳಗಾವಿ ನಗರವೇ ಹಬ್ಬದ ಗುಂಗಿನಲ್ಲಿತ್ತು. ಬೀದಿಗಳ ತುಂಬ ರಂಗೋಲಿ, ತಳಿರು ತೋರಣಗಳನ್ನು ಕಟ್ಟಿ ಸ್ವಾಗತಿಸಲಾಗಿತ್ತು.

**ಮಂಗಾಯಿ ದೇವಿ ಜಾತ್ರೆ :** ಬೆಳಗಾವಿಯ ವಡಗಾವಿ ಭಾಗದ ಗ್ರಾಮದೇವತೆಯಾದ ಮಂಗಾಯಿ ದೇವತೆಯ ಜಾತ್ರೆ ವಿಶಿಷ್ಟವಾಗಿದೆ. ಈ ಜಾತ್ರೆಯ ಸಂದರ್ಭದಲ್ಲಿ ಕಂಡು ಬರುವ ಆಚರಣೆಗಳು ಸಂಪ್ರದಾಯಗಳು ಪರಂಪರಾಗತವಾಗಿ ನಡೆದುಕೊಂಡು ಬಂದಿವೆ. ಮಂಗಾಯಿ ದೇವಿ (ಮಂಗಲಾದೇವಿ)ಯ ಜಾತ್ರೆಯು ಪ್ರತಿವರ್ಷ ನಾಗರ ಪಂಚಮಿ ಅಮವಾಸ್ಯೆಯ ಮುಂಚಿನ ಮಂಗಳವಾರದಂದು ಆರಂಭಗೊಂಡು ಐದು ದಿನಗಳ ಕಾಲ ನಡೆಯುತ್ತದೆ. ಈ ಜಾತ್ರೆಯ ಹಿನ್ನೆಲೆಯಲ್ಲಿ ಒಂದು ತಿಂಗಳವರೆಗೆ ವಡಗಾವಿಯಲ್ಲಿ ವಾರ (ಘರಾಣೆ) ಬಿಡುವ ಪದ್ಧತಿ ಇದೆ. ಜಾತ್ರೆ ಪ್ರಾರಂಭವಾಗುವದಕ್ಕಿಂತ ಮೊದಲು ಒಂದು ತಿಂಗಳಿನ ಈ ಅವಧಿಯಲ್ಲಿ ದೇವರಿಗೆ ಯಾರು ತೆಂಗಿನಕಾಯಿಯನ್ನು ಒಡೆಯಬಾರದು ಮತ್ತು ಮಾಂಸಾಹಾರ ಅಡಿಗೆಯನ್ನು ಮಾಡಬಾರದು ಎನ್ನುವ ಸಂಪ್ರದಾಯ ಬೆಳೆದು ಬಂದಿದೆ. ಆದರೆ ಜಾತ್ರೆಯ ಸಂದರ್ಭದಲ್ಲಿ ಐದು ದಿನ ಕುರಿ, ಕೋಳಿಗಳ ಊಟ ಸಾಮಾನ್ಯವಾಗಿ ಎಲ್ಲರ ಮನೆಯಲ್ಲಿರುತ್ತದೆ. ವಡಗಾವಿ, ಹಿಂದವಾಡಿ, ಶಹಪೂರ, ಅನಿಗೋಳ ಈ ಭಾಗದಲ್ಲಿ ಜಾತ್ರೆಯ ಸಂದರ್ಭದಲ್ಲಿ ಎಲ್ಲಿ ನೋಡಿದಲ್ಲೆಲ್ಲಾ ಮಾಂಸಾಹಾರಿ ಅಡಿಗೆಯ ವಾಸನೆಯೇ ತುಂಬಿಕೊಂಡಿರುತ್ತದೆ. ವಿಶೇಷವಾಗಿ ಎಲ್ಲಾ ಜಾತಿಯ ಜನರು ಮಾಂಸಾಹಾರ ಅಡಿಗೆಯನ್ನು ಮಾಡಿ ಉಣ್ಣುತ್ತಾರೆ.

ಕೋಳಿ ಮರಿಗಳನ್ನು ಹಾರಿಬಿಡುವುದು : ಮಂಗಾಯಿ ದೇವಿಯ ಜಾತ್ರೆಯಲ್ಲಿ ಕಂಡುಬರುವ ವಿಶಿಷ್ಟ ಸಂಪ್ರದಾಯವೆಂದರೆ ದೇವಿಯ ಗುಡಿಯ ಮೇಲೆ ಕೋಳಿ ಮರಿಗಳನ್ನು ಹಾರಿ ಬಿಡುವುದು. ತಮ್ಮ ಇಷ್ಟಾರ್ಥ ಸಿದ್ಧಿಗಾಗಿ, ದೇವಿಯಲ್ಲಿ ಬೇಡಿಕೊಂಡವರು, ಹರಕೆ ಹೊತ್ತವರು ಜಾತ್ರೆಯ ದಿನದಂದು ಕೋಳಿಮರಿಗಳನ್ನು ದೇವಾಲಯದ ಮೇಲೆ ಹಾರಿ ಬಿಡುತ್ತಾರೆ. ದೇವಾಲಯದ ಆವರಣದಲ್ಲಿ ಕುರಿ, ಕೋಳಿಗಳನ್ನು ಬಲಿಕೊಡುವ ಪದ್ಧತಿ ಇಲ್ಲ. ಜೀವಂತ ಕೋಳಿಮರಿಗಳನ್ನು ಹಾರಿಬಿಡುತ್ತಾರೆ. ಆದರೆ ಮನೆಗಳಲ್ಲಿ ಮಾತ್ರ ಕಡ್ಡಾಯವಾಗಿ ಮಾಂಸದಡಿಗೆ ಎಲ್ಲರ ಮನೆಯಲ್ಲಿರುತ್ತದೆ. ಎಲ್ಲರ ಮನೆಗಳಿಗೂ ನೆಂಟರು, ಸಂಬಂಧಿಕರು, ಸ್ನೇಹಿತರು ಬಂದಿರುತ್ತಾರೆ. ಎಲ್ಲರಿಗೂ ಈ ಮಾಂಸದಡಿಗೆಯನ್ನು ಬಡಿಸುತ್ತಾರೆ. ಇದು ಮಾಂಗಾಯಿದೇವಿಯ ವಿಶಿಷ್ಟವಾದ ಸಂಪ್ರದಾಯವಾಗಿದೆ.

ಜಾತ್ರೆಯು ಪ್ರಾರಂಭವು ದೇವಿಯ ಉಡಿ ತುಂಬುದುದರೊಂದಿಗೆ ಪ್ರಾರಂಭವಾಗುತ್ತದೆ. ಮಧ್ಯಾಹ್ನ ೧೨ ಗಂಟೆಯ ಸುಮಾರಿಗೆ ದೇವಾಲಯದ ಮುಖ್ಯ ಪೂಜಾರಿಯು ಘರಾಣೆ ಇಳಿಸಿ ಕಾಯಿ ಒಡೆಯುತ್ತಿದ್ದಂತೆಯೇ ಭಕ್ತರು ಸಹ ತಾವು ತಂದ ಕಾಯಿಗಳನ್ನು ಒಡೆಯುತ್ತಾರೆ. ಜಾತ್ರೆಯ ಪ್ರಾರಂಭದ ದಿನವು ಮಂಗಳವಾರದಂದಿರುತ್ತದೆ. ಅಂದು ವಡಗಾವಿಯ ಜನರು ಬಂದು ದೇವಿಗೆ ಉಡಿ ತುಂಬಿ ಹೋಗುತ್ತಾರೆ. ಬುಧವಾರದಂದು ಉಳಿದ ಮೂರು ದಿನಗಳ ಕಾಲ ವಿವಿಧ ಪೂಜಾ ಕಾರ್ಯಕ್ರಮಗಳು ನಡೆಯುತ್ತವೆ. ಮಂಗಾಯಿ ದೇವಿಯು ಸವದತ್ತಿ ಎಲ್ಲಮ್ಮಳ ಸಹೋದರಿ ಎನ್ನುವ ಪ್ರತೀತಿ ಇದೆ. ಹೀಗಾಗಿ ಯಲ್ಲಮ್ಮನ ಭಕ್ತರು ಈ ಜಾತ್ರೆಯ ದಿನದಂದು ವಿಶೇಷವಾದ ಪೂಜೆಯನ್ನು ಮಾಡುತ್ತಾರೆ. ಅಲ್ಲದೆ ಸವದತ್ತಿಗೆ ಹೋಗುವ ಮೊದಲು ಇಲ್ಲಿ ಪೂಜೆ ಮಾಡಿಕೊಂಡು ಹೋಗುತ್ತಾರೆ. ಮುಂದೆ ಎಲ್ಲಮ್ಮಳ ದರ್ಶನ ಪಡೆದು ತಿರುಗಿ ಬಂದಾಗಲೂ ಇಲ್ಲಿ ಬಂದು ದೇವಿಯ ದರ್ಶನವನ್ನು ಪಡೆದುಕೊಂಡೇ ಮನೆಗೆ ಹೋಗುತ್ತಾರೆ. ಈ ಜಾತ್ರೆಯಲ್ಲಿ ತಾವು ಕೇಳಿದ ವರವನ್ನು ದೇವಿ ಮುಂದಿನ ಜಾತ್ರೆಯ ಹೊತ್ತಿಗೆ ಈಡೇರಿಸುತ್ತಾಳೆ ಎಂಬ ನಂಬಿಕೆಯೂ ಸಹ ಇಲ್ಲಿಗೆ ಬರುವ ಭಕ್ತರಲ್ಲಿದೆ.

ಹಿನ್ನೆಲೆ : ಮಂಗಾಯಿ ದೇವಿಯು ಹನ್ನೆರಡನೆಯ ಶತಮಾನದ ಮಂಗಲಾದೇವಿ ಎನ್ನುವ ಶಿವಶರಣಿ ಎನ್ನುವ ನಂಬಿಕೆ ಕೆಲವರಲ್ಲಿದೆ. ಈ ದೇವಾಲಯದಲ್ಲಿ ಯಾವುದೇ ಮೂರ್ತಿಗಳು ಇಲ್ಲ. ಮೂರು ಕಲ್ಲುಗಳು ಒಂದರ ಪಕ್ಕದಲ್ಲೊಂದು ಇವೆ. ಇವುಗಳನ್ನೇ ಮಂಗಾಯಿ ಎಂದು ಪೂಜಿಸುತ್ತಾರೆ. ಶರಣರ ಕಾಲದಿಂದಲೂ ಇರುವುದಕ್ಕೆ ಇಲ್ಲಿ ಯಾವುದೇ ಸಾಕ್ಷ್ಯಾಧಾರಗಳು ಇಲ್ಲ. ಬಟ್ಟ ಬಯಲಿನಲ್ಲಿ ಚಿಕ್ಕದಾದ ಆಕಾರದಲ್ಲಿರುವ ಗುಡಿ ಇದಾಗಿದೆ. ಅದನ್ನು ಇತ್ತಿತ್ತಲಾಗಿ ಕಟ್ಟಲಾಗಿದೆ. ಈ ದೇವಿಗೆ ದೇವಾಲಯವನ್ನು ಕಟ್ಟುವಂತಿಲ್ಲ. ಒಂದು ವೇಳೆ ಕಟ್ಟಿದರೆ ಒಂದೇ ರಾತ್ರಿಯಲ್ಲಿ ಪೂರ್ತಿಯಾಗಿ ಕಟ್ಟಬೇಕು. ಇಲ್ಲದಿದ್ದರೆ ದೇವಿಯ ಶಾಪ ತಟ್ಟುತ್ತದೆ. ಎನ್ನುವ ನಂಬಿಕೆಯು ಬೆಳೆದು ಬಂದಿದ್ದರಿಂದ ಇದುವರೆಗೆ ದೇವಾಲಯವಿಲ್ಲದೆ ಬಯಲಿನಲ್ಲಿಯೇ ಮಂಗಾಯಿ ದೇವಿ ಇರುವಳು. ಮಂಗಾಯಿ ದೇವಿಯ ಹತ್ತಿರದಲ್ಲಿ ಎದುರಿಗೆ ಹಲವು ವೀರಶೈವ ಮನೆತನಗಳು ಕಂಡುಬರುತ್ತವೆ. ಮೊದಲು ಈ ದೇವಾಲಯದ ಒಡೆತನ ವೀರಶೈವ ಜನಾಂಗದವರಿಗಿತ್ತು ಎನ್ನುವುದು ತಿಳಿದು ಬರುತ್ತದೆ. ಮುಂದೆ ಜೈನರು ಈ ದೇವಾಲಯದ ಹಕ್ಕನ್ನು ಹೊಂದಿದರು. ಈಗ ಮರಾಠರು ಈ ದೇವಾಲಯದ ಉಸ್ತುವಾರಿಯನ್ನು ವಹಿಸಿಕೊಂಡಿದ್ದಾರೆ.

ದೇವಾಲಯದಲ್ಲಿನ ಕೆಲವು ಸಂಪ್ರದಾಯಗಳನ್ನು ನೋಡಿದರೆ ಈ ದೇವಾಲಯವು ವೀರಶೈವ ಸಂಪ್ರದಾಯಕ್ಕೆ ಸೇರಿದ ಶರಣೆಯದ್ದಾಗಿರಬಹುದೆಂಬುದು ಸ್ಪಷ್ಟವಾಗುತ್ತದೆ. ದೇವಾಲಯದ ಆವರಣದೊಳಗೆ ಎಲ್ಲಿಯೂ ಕುರಿ, ಕೋಳಿಗಳನ್ನು ಬಲಿಕೊಡುವ ಪದ್ಧತಿ ಇಲ್ಲ. ದೇವಾಲಯದ ಸುತ್ತಲೂ ನಡೆಯುವ ಬಲಿಕೊಡುವ ಪದ್ಧತಿಯು ಇತ್ತಿತ್ತಲಾಗಿ (ಮರಾಠಿಗರ) ಪೂಜಾರಿಗಳಾದ ಮೇಲೆ) ಬೆಳೆದು ಬಂದಿರಬಹುದಾಗಿದೆ. ಹನ್ನೆರಡನೆಯ ಶತಮಾನದ

ನಂತರ ವೀರಶೈವ ಸಂಪ್ರದಾಯದ ಈ ದೇವಿಯು (ಮೊದಲು ದೇವಾಲಯವಿದ್ದಿರಬಹುದು) ಜೈನ ಧರ್ಮದ ಪ್ರಭಾವಕ್ಕೆ ಒಳಗಾಗಿರಬಹುದು. ಹನ್ನೆರಡನೆಯ ಶತಮಾನದ ನಂತರ ಜೈನರ ಪ್ರಭಾವ ಈ ಪ್ರದೇಶದಲ್ಲಿ ಹೆಚ್ಚಾಗಿತ್ತು. ರಟ್ಟರು, ಗೋವಾ ಕದಂಬರು, ಮುಂತಾದವರೆಲ್ಲ ಈ ಪ್ರದೇಶದಲ್ಲಿ ಜೈನ ಧರ್ಮವನ್ನು ಪ್ರಚಾರ ಮಾಡಿದ್ದಾರೆ. ಸವದತ್ತಿ ಎಲ್ಲಮ್ಮದೇವಿಯ ಸಂಪ್ರದಾಯಕ್ಕೂ ಈ ಮಂಗಾಯಿದೇವಿಯ ಸಂಪ್ರದಾಯಕ್ಕೂ ಸಾಕಷ್ಟು ವ್ಯತ್ಯಾಸಗಳಿವೆ. ಹೀಗಾಗಿ ಮಂಗಾಯಿದೇವಿಯು ಎಲ್ಲಮ್ಮಳ ಸಹೋದರಿ ಎನ್ನುವುದು ಕೇವಲ ಒಂದು ವರ್ಗದ ಧಾರ್ಮಿಕ ನಂಬಿಕೆಯಾಗಿದೆ. ಸವದತ್ತಿ ಎಲ್ಲಮ್ಮಳ ಭಕ್ತರು ಮಹಾರಾಷ್ಟ್ರದಲ್ಲಿ ಹೆಚ್ಚಿದ್ದಾರೆ. ಬೆಳಗಾವಿಗೆ ಬಂದು ನೆಲೆಸಿದ ಮರಾಠರು ಎಲ್ಲಮ್ಮದೇವಿಯ ಆರಾಧನೆಯ ಜೊತೆಗೆ ಊರ ಹೊರಗೆ ಪಾಳು ಬಿದ್ದ ಈ ಮಂಗಾಯಿ ದೇವಿಯನ್ನು ಆರಾಧಿಸತೊಡಗಿದರು. ಜೊತೆಗೆ ಎಲ್ಲಮ್ಮದೇವಿಯ ಸಹೋದರಿ ಎನ್ನುವ ಭಕ್ತಿಯಿಂದ ಸೇವೆಯನ್ನು ಸಲ್ಲಿಸತೊಡಗಿದರು. ಮೂಲ ಶರಣೆಯಾದ ಮಂಗಳಾದೇವಿಯು ಜೈನಧರ್ಮದ ಉಚ್ಛ್ರಾಯ ಕಾಲದಲ್ಲಿ ಯಕ್ಷಿಣಿದೇವಿಯಾಗಿ ಈ ಮಂಗಾಯಿದೇವಿಯಾಗಿರಬಹುದಾಗಿದೆ.

**ಮೌನೇಶ್ವರ ಜಯಂತಿ** : ಬೆಳಗಾವಿಯ ಅನಿಗೋಳ ಪ್ರದೇಶದಲ್ಲಿರುವ ಮೌನೇಶ್ವರ ದೇವಾಲಯದಲ್ಲಿ ಪ್ರತಿವರ್ಷ ಡಿಸೆಂಬರ ತಿಂಗಳಿನಲ್ಲಿ ಮೌನೇಶ್ವರ ಜಯಂತಿಯನ್ನು ಆಚರಿಸಲಾಗುತ್ತದೆ. ಬಡಿಗ ಜನಾಂಗದ ಆರಾಧ್ಯ ದೇವನಾದ ಮೌನೇಶ್ವರನ ಮೂರ್ತಿಯನ್ನು ವಿಶೇಷವಾಗಿ ಅಲಂಕರಿಸಿದ ಪಲ್ಲಕ್ಕಿಯಲ್ಲಿಟ್ಟು ಮೆರವಣಿಗೆಯನ್ನು ಮಾಡಲಾಗುತ್ತದೆ. ಅನಿಗೋಳದ ಬೀದಿಗಳಲ್ಲಿ ಈ ಪಲ್ಲಕ್ಕಿಯು ಸಂಚರಿಸುವಾಗ ಎಲ್ಲ ಜಾತಿ ಧರ್ಮದವರು ಪಲ್ಲಕ್ಕಿಗೆ ನೀರನ್ನು ಹಾಕಿ ನಮಸ್ಕರಿಸುತ್ತಾರೆ. ಗ್ರಾಮೀಣ ಪ್ರದೇಶಗಳಲ್ಲಿ ಕಂಡು ಬರುವ ಈ ಸಂಪ್ರದಾಯವು ಬೆಳಗಾವಿ ನಗರದಲ್ಲಿ ಇಂದಿಗೂ ಉಳಿದುಕೊಂಡು ಬಂದಿದೆ. ಪಲ್ಲಕ್ಕಿ ಉತ್ಸವದ ನಂತರ ಮೌನೇಶ್ವರ ದೇವಾಲಯದಲ್ಲಿ ಮಹಾಪ್ರಸಾದದ ವ್ಯವಸ್ಥೆಯನ್ನು ಮಾಡಿ ಎಲ್ಲರೂ ಸಹ ಭೋಜನವನ್ನು ಮಾಡುತ್ತಾರೆ.

**ಕೃಷ್ಣ ಜನ್ಮಾಷ್ಟಮಿ:** ಶ್ರೀ ಕೃಷ್ಣ ಜನ್ಮಾಷ್ಟಮಿಯನ್ನು ಬೆಳಗಾವಿಯಲ್ಲಿ ವಿಶೇಷವಾಗಿ ಆಚರಿಸಲಾಗುತ್ತದೆ. ನಗರದ ವಿವಿಧ ಸಂಘ ಸಂಸ್ಥೆಗಳು, ಧಾರ್ಮಿಕ ಸಂಸ್ಥೆಗಳು, ದೇವಾಲಯಗಳಲ್ಲಿ ವಿಶೇಷವಾದ ಪೂಜೆ, ಭಜನೆ, ಅಲ್ಲದೆ ಸಾಂಸ್ಕೃತಿಕ ಕಾರ್ಯಕ್ರಮಗಳು ಜರುಗುತ್ತವೆ. ಇವೆಲ್ಲದರ ಜೊತೆಗೆ ಕೆಲವು ಆಚರಣೆಗಳು ಸಾಗಿಕೊಂಡು ಬಂದಿವೆ. ಅಂತಹವುಗಳಲ್ಲಿ ಮೊಸರು ಗಡಿಗೆ ಒಡೆಯುವ ಸ್ಪರ್ಧೆಯು ವಿಶಿಷ್ಟ ಧಾರ್ಮಿಕ ಆಚರಣೆಯಾಗಿ ಸಾಗಿ ಬಂದಿದೆ.

ಬೆಳಗಾವಿ ನಗರದ ಮಹಾದ್ವಾರ ರಸ್ತೆಯ ಸಂಭಾಜಿ ಉದ್ಯಾನವನದಲ್ಲಿ ಈ ಮೊಸರು ಗಡಿಗೆ ಒಡೆಯುವ ಸ್ಪರ್ಧೆಯನ್ನು ಹಮ್ಮಿಕೊಳ್ಳಲಾಗುತ್ತದೆ. ಸುಮಾರು ೨೫ ಅಡಿ ಎತ್ತರದ ಮೇಲೆ ಕಟ್ಟಲಾಗಿರುವ ಮೊಸರು ತುಂಬಿದ ಗಡಿಗೆಯನ್ನು ಒಡೆಯಲು ತಂಡಗಳಲ್ಲಿ ಪೈಪೋಟಿ ನಡೆಯುತ್ತದೆ. ಸರದಿಯ ಪ್ರಕಾರ ಒಂದೊಂದೇ ತಂಡಗಳು ಬಂದು ಒಬ್ಬರ ಹೆಗಲ ಮೇಲೆ ಇನ್ನೊಬ್ಬ ಏರಿ ಗಡಿಗೆಯವರೆಗೆ ಗೋಪುರವನ್ನು ರಚಿಸಿ ಗಡಿಗೆಯನ್ನು ಒಡೆಯಬೇಕು. ಪ್ರತಿಯೊಂದು ತಂಡದಲ್ಲಿ ಹತ್ತು ಜನರಿರಬೇಕು. ಅದಕ್ಕಿಂತಲೂ ಹೆಚ್ಚಿಗೆ ಅವಕಾಶವಿಲ್ಲ.

ಶ್ರೀ ಕೃಷ್ಣನು ಬಾಲಕನಾಗಿದ್ದಾಗ ತನ್ನ ಸ್ನೇಹಿತರ ತಂಡವನ್ನು ಕಟ್ಟಿಕೊಂಡು ಬೆಣ್ಣೆಯನ್ನು ಕದ್ದು ತಿನ್ನುತ್ತಿದ್ದನು. ಇದು ಶ್ರೀ ಕೃಷ್ಣನ ಬಾಲಲೀಲೆಗಳಲ್ಲಿ ಮೋಜಿನ ರೀತಿಯಾಗಿದೆ. ಶ್ರೀ ಕೃಷ್ಣ ಜನ್ಮಾಷ್ಟಮಿಯ ಸಂದರ್ಭದಲ್ಲಿ ಇದನ್ನು ಶ್ರೀ ಕೃಷ್ಣನ ಬಾಲ ಲೀಲೆಯನ್ನಾಗಿ ಅನುಕರಿಸುವ ಸಂಪ್ರದಾಯ ಬೆಳೆದು ಬಂದಿದೆ.

ಮೊಸರು ಗಡಿಗೆ ಒಡೆಯುವ ಸಂಪ್ರದಾಯವು ಸ್ಪರ್ಧೆಯಾಗಿ ಮನರಂಜನೆಯನ್ನು, ಸಾಹಸವನ್ನು, ಸಮಾಜಗಳ ನಡುವೆ ಬಾಂಧವ್ಯವನ್ನು, ಮನುಷ್ಯರ ಮಧ್ಯದಲ್ಲಿ ಪ್ರೀತಿಯನ್ನು ಬೆಳೆಸುವ ಕ್ರೀಡೆಯಾಗಿ ಬೆಳೆದು ಬಂದಿದೆ. ಜಾತಿ, ಧರ್ಮ, ಭಾಷೆಗಳ ಭೇದಭಾವವಿಲ್ಲದೆ ಎಲ್ಲರೂ ಈ ಸ್ಪರ್ಧೆಯಲ್ಲಿ ಭಾಗವಹಿಸುತ್ತಾರೆ. ಬೆಳಗಾವಿ ನಗರವಲ್ಲದೆ ಸುತ್ತಮುತ್ತಲಿನ ಗ್ರಾಮ, ನಗರಗಳ ತಂಡಗಳು, ಅಲ್ಲದೆ ಪಕ್ಕದ ಮಹಾರಾಷ್ಟ್ರದಿಂದಲೂ ಕೆಲವು ತಂಡಗಳು ಈ ಸ್ಪರ್ಧೆಯಲ್ಲಿ ಭಾಗವಹಿಸುತ್ತವೆ. ಸ್ಪರ್ಧೆಯಲ್ಲಿ ವಿಜಯಿಯಾದ ತಂಡಕ್ಕೆ ನಗದು ಬಹುಮಾನ, ನೆನಪಿನ ಕಾಣಿಕೆ, ಪ್ರಮಾಣ ಪತ್ರಗಳನ್ನು ನೀಡಲಾಗುತ್ತದೆ. ನಗರದ ಹಲವಾರು ಬೀದಿಗಳಲ್ಲಿ ಈ ಕ್ರೀಡೆ ನಡೆಯುತ್ತದೆ. ಮಹಾರಾಷ್ಟ್ರ ಮೂಲದ ಈ ಸಂಪ್ರದಾಯವು ಬೆಳಗಾವಿಯಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಕನ್ನಡ–ಮರಾಠಿ ಎರಡೂ ಭಾಷೆಯ ಜನರು ವಿಶೇಷವಾಗಿ ಆಚರಿಸುವ ಆಚರಣೆಗಳಲ್ಲಿ ಶ್ರೀ ಕೃಷ್ಣ ಜನ್ಮಾಷ್ಟಮಿಯು ಒಂದಾಗಿದೆ.

ಶ್ರೀ ಕೃಷ್ಣ ಜನ್ಮಾಷ್ಟಮಿಯ ಅಂಗವಾಗಿ ನಗರದ ಇಸ್ಕಾನ್ ಮಂದಿರ, ಪ್ರಜಾಪಿತ ಬ್ರಹ್ಮಕುಮಾರಿ ಈಶ್ವರಿಯ ವಿಶ್ವವಿದ್ಯಾಲಯ, ರಾಮಕೃಷ್ಣಾಶ್ರಮ, ಸಮಾದೇವಿ ಬೀದಿಯ ಪಂತ ಮಹಾರಾಜ ಮಂದಿರ ಮುಂತಾದ ಮಠ–ಮಂದಿರಗಳಲ್ಲಿ ವಿಶೇಷ ಪೂಜೆ, ಧಾರ್ಮಿಕ ಕಾರ್ಯಕ್ರಮಗಳು ಜರಗುತ್ತವೆ.

**ಶ್ರೀ ಬನಶಂಕರಿ ದೇವಾಲಯ:** ಬೆಳಗಾವಿ ನಗರದಲ್ಲಿ ಎರಡು ಬನಶಂಕರಿ ದೇವಾಲಯಗಳು ಕಂಡುಬರುತ್ತವೆ. ಒಂದು ಬಡಕಲ್ಲ ಗಲ್ಲಿಯಲ್ಲಿ ಇನ್ನೊಂದು ವಡಗಾಂವ ಪ್ರದೇಶ ಶರಾಫ ಬೀದಿಯಲ್ಲಿದೆ. ಬಡಕಲ್ಲ ಗಲ್ಲಿಯೂ ಮೊದಲು ನೇಕಾರ ಜನಾಂಗದಿಂದ ತುಂಬಿಕೊಂಡಿತ್ತು. ಆದರೆ ಈಗ ಇಲ್ಲಿ ಒಂದು ನೆಯ್ಯುವ ಯಂತ್ರಗಳು ಕಾಣ ಸಿಗುವುದಿಲ್ಲ. ಈ ನೇಕಾರರಿರುವುದರಿಂದಲೇ ಇಲ್ಲಿ ಬನಶಂಕರಿ ದೇವಾಲಯ ಸ್ಥಾಪನೆಗೊಂಡಿತು. ಅದರಂತೆ ವಡಗಾಂವಿಯಲ್ಲಿ ನೇಕಾರರು ಹೆಚ್ಚಾಗಿರುವುದರಿಂದ ಇಲ್ಲಿಯೂ ಬನಶಂಕರಿ ದೇವಾಲಯ ಸ್ಥಾಪನೆಗೊಂಡಿತು. ಬನಶಂಕರಿದೇವಿಯೂ ನೇಕಾರರ ಆರಾಧ್ಯ ದೇವಿಯಾಗಿದ್ದಾಳೆ.

ನವರಾತ್ರಿ ಹಬ್ಬದ ಸಂದರ್ಭದಲ್ಲಿ ವಿಶೇಷವಾದ ಆಚರಣೆಗಳು, ಸಂಪ್ರದಾಯಗಳು ಕಂಡುಬರುತ್ತವೆ. ದಸರೆಯ ದಿನದಂದು ಬನಶಂಕರಿಗೆ ವಿಶೇಷವಾದ ಪೂಜೆಯನ್ನು ಏರ್ಪಡಿಸುತ್ತಾರೆ. ದೇವಿಯ ಪುರಾಣ ಪಠಣ ನಡೆಯುತ್ತದೆ. ದೇವಿಯ ಮೂರ್ತಿಯನ್ನು ಪಾಲಕಿಯಲ್ಲಿಟ್ಟು ಮೆರವಣಿಗೆ ಮಾಡುವುದರ ಜೊತೆಗೆ ದೇವಿ ಪುರಾಣವನ್ನೂ ಪಾಲಕಿಯಲ್ಲಿ ಇಟ್ಟು ಮೆರವಣಿಗೆ ಮಾಡುತ್ತಾರೆ. ಬನಶಂಕರಿದೇವಿಗೆ ದೇವಾಂಗ ಸಮಾಜದ ಸುಮಂಗಲೆಯರು ಸಹಸ್ರ ಕುಂಕುಮಾರ್ಚನೆ, ಸಹಸ್ರ ಪುಷ್ಪಾರ್ಚನೆ, ಸಹಸ್ರ ಗಾಯತ್ರಿ ಮಂತ್ರ ಪಠಣವನ್ನು ಕೈಕೊಳ್ಳುತ್ತಾರೆ.

❖❖

**ಸಂದರ್ಭ ಸೂಚಿ :**

೧. ಡಾ. ಎಚ್. ತಿಪ್ಪೇರುದ್ರಸ್ವಾಮಿ: ಕರ್ನಾಟಕ ಸಂಸ್ಕೃತಿ ಸಮೀಕ್ಷೆ. ಪುಟ. ೧೯೭.

೨. ಡಾ. ಎಂ. ಬಿ. ನೇಗಿನಹಾಳ: ನೇಗಿನಹಾಳರ ಪ್ರಬಂಧಗಳು. ಪುಟ. ೮೬.

೩. ವಿಜಯ ಕರ್ನಾಟಕ: ನಮ್ಮ ಬೆಳಗಾವಿ. ಪುರವಣಿ. ದಿನಾಂಕ: ೧೫-೦೪-೨೦೧೧. ಪುಟ. ೨.

೪. ಅರುಣಕುಮಾರ ಹಬ್ಬು: ಬೆಳಗಾವಿಯ ಕಿರ್ಲೋಸ್ಕರ ರಸ್ತೆ, ತರಂಗ ವಿಶೇಷಾಂಕ-೨೦೦೭.

೫. ಸಂದರ್ಶನ-ರಾಮಚಂದ್ರ ದಳವಿ. ವಯಸ್ಸು. ೫೦. ವಡಗಾವಿ. ದಿನಾಂಕ: ಜುಲೈ ೧೦, ೨೦೦೯.

೬. ಡಾ. ಎಂ. ಬಿ. ನೇಗಿನಹಾಳ: ನೇಗಿನಹಾಳರ ಪ್ರಬಂಧಗಳು. ಪುಟ. ೫೮.

೭. ಡಾ. ಅ. ಸುಂದರ: ವಡಗಾಂವ-ಮಾಧವಪುರದಲ್ಲಿ ೨೦೦೦ ವರ್ಷದ ಹಿಂದಿನ ವ್ಯಾಪಾರ ಕೇಂದ್ರದ ಮಹಾನಗರ, ವೇಣುನಾದ ವಿಶೇಷ ಸಂಪುಟ. ಪುಟ. ೧. ೧೯೮೦.

೮. ಡಾ. ಎಂ. ಬಿ. ನೇಗಿನಹಾಳ: ನೇಗಿನಹಾಳರ ಪ್ರಬಂಧಗಳು. ಪುಟ. ೫೨.

೯. ಬಿ. ಷೇಕಲಿ(ಸಂ): ಕರ್ನಾಟಕ ಚರಿತ್ರೆ-೧. ಪುಟ. ೩೧೬.

೧೦. ಅದೇ.

೧೧. ಡಾ. ಅ. ಸುಂದರ: ವಡಗಾಂವ-ಮಾಧವಪುರದಲ್ಲಿ ೨೦೦೦ ವರ್ಷದ ಹಿಂದಿನ ವ್ಯಾಪಾರ ಕೇಂದ್ರದ ಮಹಾನಗರ, ವೇಣುನಾದ ವಿಶೇಷ ಸಂಪುಟ. ಪುಟ. ೧೪. ೧೯೮೦.

೧೨. ಡಾ. ಎಚ್. ಚಂದ್ರಶೇಖರ: ಬೆಳಗಾವಿ ಜಿಲ್ಲೆಯ ಶರಣ ಕ್ಷೇತ್ರಗಳು. ಶರಣ ಕಿರಣ. ಪುಟ. ೨.

೧೩. ಸುರೇಶ ತಾಂಡೆಲ್, ಲ.ನ. ಸ್ವಾಮಿ: ಬೆಳಗಾವಿ ಜಿಲ್ಲೆಯ ಸಿದ್ಧಿಗಳು. ಬೆಳಗಾವಿ ಇತಿಹಾಸ ಮತ್ತು ಪುರಾತತ್ತ್ವ ಪುಟ. ೪೪೬.

೧೪. ಡಾ. ಯಶೋಧಾ ರಾಜಶೇಖರಪ್ಪ: ಬೆಳಗಾವಿ ಜಿಲ್ಲೆಯ ಕೆಲವು ಜಾತಿ-ಜನಾಂಗಗಳು. ಬೆಳಗಾವಿ ಇತಿಹಾಸ ಮತ್ತು ಪುರಾತತ್ತ್ವ ಪುಟ. ೭೫೫.

೧೫. ಅದೇ. ಪುಟ. ೭೫೬.

೧೬. ಬೆಂ. ಶಾ. ಶ್ಯಾಮಲಾ ರತ್ನಕುಮಾರಿ: ಬೆಳಗಾವಿ ಜಿಲ್ಲೆಯ ಧಾರ್ಮಿಕ ಸ್ಥಿತ್ಯಂತರಗಳು. ಬೆಳಗಾವಿ ಇತಿಹಾಸ ಮತ್ತು ಪುರಾತತ್ತ್ವ ಪುಟ. ೩೫೧.

೧೭. ಡಾ. ಧ್ರುವ ಬಿ. ಜ್ಯೋತಿ: ಬೆಳಗಾವಿ ನಗರ ಜನ ವಸತಿ ಒಂದು ಅಧ್ಯಯನ. ಬೆಳಗಾವಿ ಇತಿಹಾಸ ಮತ್ತು ಪುರಾತತ್ತ್ವ. ಪುಟ. ೭೬೩.

೧೮. ಡಾ. ಜೆ. ಬಿ. ಡಿಸೆಲ್ ವಾ : ಬೆಳಗಾವಿ ಜಿಲ್ಲೆಯಲ್ಲಿ ಕ್ರೈಸ್ತ ಚರ್ಚಗಳು. ಬೆಳಗಾವಿ ಬೆಳಕು. ಪುಟ. ೧೬೫.

೧೯. ಅದೇ ಪುಟ. ೧೬೬.

೨೦. ಡಾ. ಶ್ರೀನಿವಾಸ ಹಾವನೂರ: ಹೊಸಗನ್ನಡ ಅರುಣೋದಯ. ಪುಟ. ೧೯.

೨೧. ಕೆಳದಿ ವೆಂಕಟೇಶ ಜೋಯಿಸ: ಬೈಲಹೊಂಗಲ ತಾಲೂಕಿನಲ್ಲಿರುವ ಕೆಳದಿ ಹಿರೇಮಠದ ಶಾಖಾ ಮಠಗಳು. ಬೆಳಗಾವಿ ಇತಿಹಾಸ ಮತ್ತು ಪುರಾತತ್ತ್ವ. ಪುಟ .೪೨೩.

೨೨. ಡಾ. ಎಸ್. ಛವಾರಿ: ವಂಟಮುರಿಯ ರಾಜಾ ಲಖಮಗೌಡರು. ಪುಟ. ೪೫.

೨೩. ಅದೇ.

೨೪. ಇಪಿ. ಇಂಡಿಯಾ. ಸಂಪುಟ.೧೩. ಪುಟ. ೧೮, ೨೮.

೨೫. ಡಾ. ಬಿ. ಆರ್. ಹಂದೂರ: ಜೈನ ಪರಂಪರೆಗೆ ಬೆಳಗಾವಿ ಪ್ರಾದೇಶಿಕ ಕೊಡುಗೆ. ಪುಟ. ೧೭೫.

೨೬. ASWI. p.1

೨೭. ಡಾ. ಬಿ. ಆರ್. ಹಂದೂರ, ಜೈನ ಪರಂಪರೆಗೆ ಬೆಳಗಾವಿ ಪ್ರಾದೇಶಿಕ ಕೊಡುಗೆ. ಪುಟ. ೧೬೪.

೨೮. ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ: ಬುಸಾತಿನೆ-ಸಲಾತಿನ. ಪುಟ. ೫೬.

೨೯. ಇಪಿ. ಇಂಡಿಯಾ. ಸಂಪುಟ.೧೩. ಪುಟ. ೧೮, ೨೮.

೩೦. ಅದೇ (ಎ. ಶಾಸನ)

೩೧. KI.vol.21. p 18.

೩೨. ಡಾ. ವಾರಿಜಾ ಆರ್. ಬೋಳಾರ: ಬೆಳಗಾವಿ ಜಿಲ್ಲೆಯ ಮುಸ್ಲಿಂ ಸ್ಮಾರಕಗಳು. ಬೆಳಗಾವಿ ಇತಿಹಾಸ ಮತ್ತು ಪುರಾತತ್ತ್ವ ಪುಟ. ೩೧೦.

೩೩. ಅದೇ ಪುಟ. ೩೧೦.

೩೪. ಗ್ಯಾಝಟಿಯರ್, ಪುಟ. ೩೫೩.

೩೫. ಡಾ. ಜೆ. ಬಿ. ಡಿಸೆಲ್ ವಾ : ಬೆಳಗಾವಿ ಜಿಲ್ಲೆಯಲ್ಲಿ ಕ್ರೈಸ್ತ ಚರ್ಚಗಳು. ಬೆಳಗಾವಿ ಬೆಳಕು. ಪುಟ. ೧೪೭.

೩೬. ಅದೇ.

೩೭. ಅದೇ. ಪುಟ. ೧೪೬.

೩೮. ಸಂದರ್ಶನ: ಶಿವಪ್ರಸಾದ ಪಾಟೀಲ, ವಯಸ್ಸು: ೬೩. ಮಹಾಂತೇಶ ನಗರ, ದಿನಾಂಕ: ನವ್ಹಂಬರ್ ೦೭, ೨೦೧೦.

೩೯. ಡಾ. ಎಂ. ಬಿ. ನೇಗಿನಹಾಳ: ನೇಗಿನಹಾಳರ ಪ್ರಬಂಧಗಳು. ಪುಟ. ೫೧.

೪೦. ರಾಮಚಂದ್ರ ಹುಟಗಿ: ಬೆಳಗಾವಿ ಭೂಗೋಲ. ಪುಟ. ೯೧.

೪೧. ಚಂದ್ರಕಾಂತ ಪೋಕಳೆ: ವಿಜಯ ಕರ್ನಾಟಕ. ನಮ್ಮ ಬೆಳಗಾವಿ. ಪುರವಣಿ. ನವಂಬರ್ ೧, ೨೦೦೮.

೪೨. ಡಾ. ಎಂ. ಚಿದಾನಂದಮೂರ್ತಿ: ಭಾಷಿಕ ಬೃಹತ್ ಕರ್ನಾಟಕ. ಪುಟ. ೧೩೦.

೪೩. ಅದೇ.



ಅಧ್ಯಾಯ : ಏಳು

# ಸಾಮಾಜಿಕ ವ್ಯವಸ್ಥೆ

ಅಲೆಮಾರಿಯಾಗಿದ್ದ ಮನುಷ್ಯ ಒಂದೆಡೆನೆಲೆ ನಿಂತಮೇಲೆ ತನ್ನದೇ ಆದ ಬದುಕು ರೂಪಿಸಿಕೊಂಡ. ಇಂಥದೊಂದು ಸ್ಥಿರ ಬದುಕಿನ ಅಪೇಕ್ಷೆಯ ಹಿಂದೆ ಅವನ ಮಾನಸಿಕ ಪಾತಳಿಯಲ್ಲಿ ನಡೆದಿರುವ ಎರಡು ಪ್ರಕ್ರಿಯೆಗಳನ್ನು ನಾವು ಅಭ್ಯಸಿಕೊಳ್ಳಬೇಕಾಗುತ್ತದೆ. ಒಂದು ಭಯಗೊಳಿಸುವ ಪ್ರಾಕೃತ ಅವಗಡಗಳಿಂದ ತಾನು ಸುರಕ್ಷಿತವಾಗಿ ಉಳಿಯಬೇಕು. ಎರಡು ಭಾವನಾತ್ಮಕವಾಗಿ ಬೆಸೆದುಕೊಳ್ಳಲು ಮನುಷ್ಯ ಸಂಬಂಧಗಳನ್ನು ಬೆಳೆಸಬೇಕು. ಹೀಗೆ ನಿಂತವನೊಂದಿಗೆ ಇದೇ ವಾಂಛೇಯನ್ನಿಟ್ಟುಕೊಂಡ ಹಲವಾರು ಜನ ಬಂದು ಕೂಡಿದರು. ಕ್ರಮೇಣ ಹೊಟ್ಟೆ ತುಂಬಿಸಿಕೊಳ್ಳಲು ಉದ್ಯೋಗ, ವಾಸಿಸಲು ಮನೆ, ತೊಡಲು ಬಟ್ಟೆ ಎಲ್ಲವನ್ನೂ ಎಲ್ಲರೂ ಕೂಡಿ ಹೊಂದಿಸಿಕೊಳ್ಳುತ್ತ ಸಮುದಾಯದ ಬದುಕು ಆಕಾರ ಪಡೆಯಿತು. ತರುವಾಯ ಸಮಾಜಯೆನ್ನುವುದೊಂದು ರೂಪುಗೊಂಡು ತಮ್ಮದೇ ಆದ ವಸತಿ ವಿನ್ಯಾಸ, ಊಟ–ಉಪಚಾರ, ಸಂಪ್ರದಾಯ–ಆಚರಣೆ, ಉಡಿಗೆ–ತೊಡಿಗೆ ಎನ್ನೆಲ್ಲ ಸೇರಿಕೊಂಡವು; ಸಂಗಡವೇ ನಿಬಂಧನೆಗಳು ಸೃಷ್ಟಿಗೊಂಡವು. ಇಂದಿನ ಯಾವುದೇ ಹಳ್ಳಿ–ಪಟ್ಟಣಗಳ ಹಿಂದಿರುವ ಆರಂಭದ ಹೆಜ್ಜೆಗಳಿವು. ನಾಗರಿಕತೆ ಬೆಳೆದಂತೆ ಹಳ್ಳಿಯೊಂದು ಪಟ್ಟಣ್ಣವಾಗಿರಬಹುದು. ಅಂಥ ಪಟ್ಟಣಕ್ಕೆ ಸಾಮಾಜಿಕ ವ್ಯವಸ್ಥೆಯೊಂದಿರುತ್ತದೆ. ಬೆಳಗಾವಿಯು ಈ ಸಾಮಾಜಿಕ ವ್ಯವಸ್ಥೆಯನ್ನು ಅವರು ವಾಸಿಸುವ ಮನೆ ಮತ್ತು ನೀರಿನ ವ್ಯವಸ್ಥೆಯ ವಿವರಣೆಯೊಂದಿಗೆ ನೋಡಬಹುದು.

ಬೆಳಗಾವಿಯು ಕರ್ನಾಟಕದ ಅತ್ಯಂತ ಪ್ರಾಚೀನ ಪಟ್ಟಣಗಳಲ್ಲಿ ಒಂದು. ಭಾಷೆ, ಜನಾಂಗ, ಆಚರಣೆ, ಸಂಪ್ರದಾಯ, ಊಟ–ಉಪಚಾರ, ಉಡಿಗೆ–ತೊಡುಗೆಗಳ ವೈವಿಧ್ಯತೆ ಕಂಡುಬಂದಂತೆ ಇಲ್ಲಿಯ ಮನೆಗಳಲ್ಲಿಯೂ

ವೈವಿಧ್ಯತೆಯನ್ನು ಕಾಣಬಹುದಾಗಿದೆ. ಇವು ಬೆಳಗಾವಿಯ ಸಾಂಸ್ಕೃತಿಯ ಒಂದು ಭಾಗವೇ ಆಗಿವೆ. ಬೆಳಗಾವಿಯೂ ಮೂಲತಃ ಗ್ರಾಮೀಣ ಸಂಸ್ಕೃತಿ ಹೊಂದಿರುವುದನ್ನು ಇಲ್ಲಿಯ ಮನೆಗಳು ಸ್ಪಷ್ಟಗೊಳಿಸುತ್ತವೆ. ಧರ್ಮ, ಜಾತಿ ಜನಾಂಗಗಳ ಹಿನ್ನೆಲೆಯಲ್ಲಿ ಇಲ್ಲಿಯ ಮನೆಗಳು ವೈವಿಧ್ಯತೆಯನ್ನು ಪಡೆದುಕೊಂಡಿರುವುದು ವಿಶೇಷವಾಗಿದೆ.

**೧. ಮನೆ, ಬಾವಿಗಳು:**

ಬೆಳಗಾವಿಯ ಮನೆಗಳಿಗೆ ವಿಶಿಷ್ಟವಾದ ಐತಿಹಾಸಿಕ ಮಹತ್ವವಿದೆ. ಶಾತವಾಹನರ ಕಾಲದಲ್ಲಿ ನಿರ್ಮಾಣಗೊಂಡಿರುವ ಬೆಳಗಾವಿಯ ಮನೆಗಳು, ಬೀದಿಗಳು ದಕ್ಷಿಣ ಭಾರತದಲ್ಲಿಯೇ ಅತ್ಯಂತ ವ್ಯವಸ್ಥಿತವಾಗಿ ನಿರ್ಮಾಣಗೊಂಡಂತಹವುಗಳಾಗಿವೆ. ಎಂದು ಡಾ. ಅ. ಸುಂದರ ಅಭಿಪ್ರಾಯಪಟ್ಟಿದ್ದಾರೆ.[೧] ಕ್ರಿ.ಶ. ಸುಮಾರು ಒಂದನೆಯ ಶತಮಾನದ ಕಾಲದಲ್ಲಿಯೇ ಮಹಾನಗರವಾಗಿ ರೂಪಗೊಂಡಿದ್ದರ ಬಗೆಗೆ ಪ್ರಮುಖ ಅವಶೇಷಗಳು ದೊರೆತಿವೆ. ಸಾರ್ವಜನಿಕ ಬೀದಿ, ರಾಜಬೀದಿ, ವ್ಯಾಪಾರಸ್ಥರ ಬೀದಿ ಹೀಗೆ ಸುವ್ಯವಸ್ಥಿತವಾದ ನಗರ ರಚನೆಯ ಲಕ್ಷಣಗಳು ಸ್ಪಷ್ಟವಾಗಿ ಕಂಡು ಬಂದಿವೆ. ಬೀದಿಯ ಎರಡೂ ಬದಿಯಲ್ಲಿರುವ ದೊಡ್ಡ ದೊಡ್ಡ ಕಟ್ಟಡಗಳ ಅವಶೇಷಗಳು ವ್ಯಾಪಾರ, ವಸತಿ, ಧಾರ್ಮಿಕ ವಿಧಿವಿಧಾನಗಳಿಗೆ ಬಳಕೆಗೊಂಡವುಗಳಾಗಿವೆ.

ಕಟ್ಟಡಗಳನ್ನು ಕಟ್ಟಲು ಕೆಳಗೆ ಕಲ್ಲು ಗುಂಡುಗಳ ಹಾಸನ್ನು ಹಾಕಿ ಅದರ ಮೇಲೆ ಇಟ್ಟಿಗೆಗಳಿಂದ ಒಂದು ಮಿಟರ್ ದಪ್ಪವಾಗಿರುವ ಗೋಡೆಯನ್ನು ಕಟ್ಟಿರುವುದು ಕಂಡುಬರುತ್ತದೆ. ವಾಸದ ಮನೆಯು ಸಾಮಾನ್ಯವಾಗಿ ಮೂರು ನಾಲ್ಕು ಕೊಠಡಿಯನ್ನು ಹೊಂದಿದಂತಹವುಗಳಾಗಿವೆ. ಎರಡು ಚಿಕ್ಕ ಕೊಠಡಿ, ಒಂದು ಮೊಗಸಾಲೆ, ಕಾಳುಗಳನ್ನು ಸಂಗ್ರಹಿಸಲು ಹಗೆ, ಪೂಜಾ ಕಾರ್ಯಕ್ಕೆ ಜಗುಲಿ. ಬಾವಿ ಹೀಗೆ ಅತ್ಯಂತ ಸುವ್ಯವಸ್ಥಿತವಾಗಿ ಮನೆಗಳನ್ನು ಕಟ್ಟಿಕೊಂಡಿದ್ದು ತಿಳಿದು ಬರುತ್ತದೆ.

ಸಾಮಾನ್ಯ ಜನರು ಮನೆಗಳಲ್ಲಿ ವಾಸಮಾಡುತ್ತಿದ್ದರು. ಧಾರ್ಮಿಕ ಮುಖಂಡರು, ಸನ್ಯಾಸಿಗಳೂ, ಮನೆಯಿಂದ ಹೊರಗೆ ಧಾರ್ಮಿಕ ಕಟ್ಟಡಗಳಲ್ಲಿ ವಾಸಿಸುತ್ತಿದ್ದರು. ವಿಹಾರಗಳೂ, ಚೈತ್ರಾಲಯಗಳು, ದೇವಾಲಯಗಳು, ಬಸದಿಗಳು ಇದ್ದವು. ಆದರೆ ಇಂದು ಇವುಗಳ ಅವಶೇಷಗಳು ಮಾತ್ರ ಕಂಡುಬರುತ್ತವೆ.

ಬೆಳಗಾವಿಯ ಪಾರಂಪರಿಕ ಕಟ್ಟಡಗಳಲ್ಲಿ ಒಂದಾದ ಬೆಳಗಾವಿಯ ಇಂದಿನ ಬಸ್ ನಿಲ್ದಾಣದ ಪಕ್ಕದಲ್ಲಿರುವ ಕೋಟೆಯು ರಾಜ್ಯಾಡಳಿತಗಾರರ ರಕ್ಷಣೆಗೆ ನಿರ್ಮಾಣಗೊಂಡ ಕೋಟೆಯಾಗಿದೆ. ಅಂದರೆ ರಾಜ, ಮಂತ್ರಿ, ಅಧಿಕಾರಿಗಳಷ್ಟೇ ಕೋಟೆಯೊಳಗಿನ ಮನೆಗಳಲ್ಲಿ ವಾಸಿಸುತ್ತಿದ್ದರು. ಇನ್ನುಳಿದ ಪ್ರಜೆಗಳು ಕೋಟೆಗೆ ಹೊಂದಿಕೊಂಡೆ ಬೆಳೆದ ಊರಿನಲ್ಲಿ ವಾಸಿಸುತ್ತಿದ್ದರು.

ಬೆಳಗಾವಿಯು ಕೋಟೆಯ ಸುತ್ತಲೂ ಬೆಳೆದ ವ್ಯವಸ್ಥಿತವಾಗಿ ನಿರ್ಮಾಣಗೊಂಡಿರುವುದು ಕಂಡುಬರುತ್ತದೆ. ಪಾಟೀಲ ಗಲ್ಲಿ, ತಹಶೀಲ್ದಾರ್ ಗಲ್ಲಿ, ಭಾಂದೂರ ಗಲ್ಲಿ, ಶೆಟ್ಟಿ ಗಲ್ಲಿ, ಖಡೇ ಬಜಾರ, ಭಡಕಲ ಗಲ್ಲಿ, ಚವಾಟ ಗಲ್ಲಿ, ಜಾಲಗಾರ ಗಲ್ಲಿ, ಕಸಾಯಿ ಗಲ್ಲಿ, ಕೊತವಾಲ ಗಲ್ಲಿ ಈ ಎಲ್ಲವೂ ಕೋಟೆಯ ಕಡೆಗೆ ಮುಕ್ತಾಯಗೊಳ್ಳುವ ಬೀದಿಗಳಾಗಿವೆ. ಇಲ್ಲಿ ಪ್ರತಿಯೊಂದು ಬೀದಿಯಲ್ಲಿಯೂ ಒಂದೊಂದು ಧರ್ಮದ ಜಾತಿಯ ಜನರು ವಾಸಿಸುತ್ತಿದ್ದಾರೆ. ಹೀಗಾಗಿ ಅವರ ವಾಸದ ಮನೆಗಳೂ ಭಿನ್ನವಾಗಿವೆ. ಸಾಮಾನ್ಯವಾಗಿ ಮೇಲ್ನೋಟಕ್ಕೆ ಒಂದೇ ರೂಪದಲ್ಲಿ ಕಂಡು ಬಂದರೂ ಮನೆಯ ಒಳಗಿನ ವಿನ್ಯಾಸ, ಧರ್ಮ, ಜಾತಿ ಕಸಬು, ಇವುಗಳಿಗೆ ಸಂಬಂಧಿಸಿದಂತೆ ನಿರ್ಮಾಣಗೊಂಡಿವೆ.

ಹಿಂದೂಗಳ ಮನೆಗಳು ವಾಸ್ತುಪ್ರಕಾರದಲ್ಲಿ ನಿರ್ಮಾಣಗೊಂಡಿರುವುದು ಕಂಡುಬರುತ್ತದೆ. ಮನೆಯ ಬಾಗಿಲು, ಒಳಾಂಗಣ, ಪಡಸಾಲೆ, ಅಡಿಗೆ ಮನೆ, ದೇವರ ಮನೆ, ಸ್ನಾನದ ಗೃಹ, ಮಲಗುವ ಕೋಣೆ, ಇವು ಸಾಮಾನ್ಯವಾಗಿ ಎಲ್ಲಾ ಮನೆಗಳಲ್ಲಿ ಕಂಡು ಬರುತ್ತವೆ. ಇನ್ನು ಒಕ್ಕಲಿಗರ ಮನೆಗಳಲ್ಲಿ ದನದ ಕೊಟ್ಟಿಗೆ ಮತ್ತು ದವಸ ಧಾನ್ಯಗಳನ್ನಿಡಲು ದೊಡ್ಡದಾದ ಕಟ್ಟೆಯು ಕಂಡುಬರುತ್ತದೆ.

ಮನೆಗಳ ನಿರ್ಮಾಣ ಕಲ್ಲು, ಮಣ್ಣಿನ ಹೆಂಟೆ, ಇಟ್ಟಂಗಿ ಹಾಗೂ ಗೊರಚಿನಿಂದ ಕಟ್ಟಿದವುಗಳಾಗಿವೆ. ಮನೆಯ ಹೊದಿಕೆ ವಿಶೇಷವಾಗಿ ಕರಿಯ ಹಂಚಿನಿಂದ ಕೂಡಿವೆ.

ಬೀದಿಯ ಎರಡೂ ಬದಿಗೆ ಮನೆಗಳು ಒಂದಕ್ಕೊಂದು ಹೊಂದಿಕೊಂಡೇ ನಿರ್ಮಾಣವಾಗಿವೆ. ಪ್ರತಿಯೊಂದು ಮನೆಗೆ ಹಿತ್ತಲವು ಕಂಡುಬರುತ್ತದೆ. ಹಿತ್ತಲಿನಲ್ಲಿ ನೀರಿನ ವ್ಯವಸ್ಥೆಗಾಗಿ ಬಾವಿಗಳು ಹೆಚ್ಚಿನ ಮನೆಗಳಿಗಿವೆ. ಅದರಲ್ಲಿಯೂ ವಿಶೇಷವಾಗಿ ಬ್ರಾಹ್ಮಣರ ಮನೆಗಳಿಗೆ ಬಾವಿಗಳು ಕಂಡು ಬರುತ್ತವೆ.

ಬೆಳಗಾವಿಯ ಮನೆಗಳಲ್ಲಿ ಕಂಡು ಬರುವ ಒಂದು ಮುಖ್ಯವಾದ ವಿಶೇಷವೆಂದರೆ ಇಲ್ಲಿಯ ಬಡಾವಣೆಗಳಿಗನುಸಾರವಾಗಿ ಪ್ರದೇಶಕ್ಕೆ ಭಿನ್ನತೆಯನ್ನು ಹೊಂದಿದ ಮನೆಗಳು ಕಂಡುಬರುತ್ತವೆ. ಈ ಮನೆಗಳ ಮೇಲಿಂದಲೇ ಬೆಳಗಾವಿ ನಗರ ರಚನೆಯ ಸ್ಪಷ್ಟವಾದ ಚಿತ್ರಣ ದೊರೆಯುತ್ತದೆ. ಬೆಳಗಾವಿ ನಗರವು ಹಲವಾರು ಹಳ್ಳಿಗಳಿಂದ ಕೂಡಿದ ನಗರವಾಗಿದ್ದು ಇದರಿಂದ ಮನೆಗಳ ರಚನೆಯಲ್ಲಿ ವೈವಿಧ್ಯತೆ ಕಂಡುಬರುತ್ತದೆ.

ಸಾಂಗಲಿ ಸಂಸ್ಥಾನದ ಭಾಗವಾಗಿದ್ದ ಶಹಾಪೂರದ ಮನೆಗಳ ರಚನೆಯು ವಿಶಿಷ್ಟವಾಗಿದೆ. ವಿಶೇಷವಾಗಿ ದೊಡ್ಡ ದೊಡ್ಡ ಮನೆಗಳು ಈ ಪ್ರದೇಶದಲ್ಲಿ ಕಂಡುಬರುತ್ತವೆ. ಶಹಾಪೂರವು ಗಟ್ಟಿ ಮುಟ್ಟಾದ ಕೋಟೆಯನ್ನು ಕಟ್ಟಿ ನಿರ್ಮಿಸಿದ್ದಾಗಿದೆ. ಈ ಗೋಡೆಯನ್ನು ಸರದಾರ ಶೇರ್‌ಖಾನನು ಕ್ರಿ.ಶ. ೧೫೫೦ ರಲ್ಲಿ ಕಟ್ಟಿಸಿದನು. ಶಹಾಪೂರವು ಮುಖ್ಯವಾಗಿ ವ್ಯಾಪಾರ ಕೇಂದ್ರವಾಗಿತ್ತು. ಮುತ್ತು, ರತ್ನ, ವಜ್ರ, ಮಾಣಿಕ್ಯ, ನೀಲ, ಹವಳ, ಬೆಳ್ಳಿ ಬಂಗಾರಗಳ ವ್ಯಾಪಾರಕ್ಕೆ ಪ್ರಸಿದ್ಧಿಯನ್ನು ಪಡೆದುಕೊಂಡಿತ್ತು. ಹೀಗಾಗಿ ಇಲ್ಲಿಯ ಮನೆಗಳು ಹೆಚ್ಚಾಗಿ ಶ್ರೀಮಂತರ ಮನೆಗಳೇ

ಆಗಿದ್ದವು. ಈಗ ಸುತ್ತಲಿನ ಕೋಟೆ ಹಾಳಾಗಿದ್ದರೂ ಅದರ ಅವಶೇಷಗಳು ಕಂಡುಬರುತ್ತವೆ. ಅಲ್ಲದೆ ಅತ್ಯಂತ ಭದ್ರವಾಗಿ ಕಟ್ಟಲ್ಪಟ್ಟ ಮನೆಗಳು ಇಂದಿಗೂ ಕಂಡುಬರುತ್ತವೆ. ಇತ್ತೀಚೆಗೆ ಇಲ್ಲಿನ ಖಾಸಭಾಗ ಪ್ರದೇಶವು ಜವಳಿ ಉದ್ಯಮದಲ್ಲಿ ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ಹೀಗಾಗಿ ಬಟ್ಟೆ ನೇಯುವ ಯಂತ್ರಗಳು ಹೆಚ್ಚಿನ ಮನೆಗಳಲ್ಲಿ ಕಂಡುಬರುತ್ತವೆ. ಇದರಿಂದ ಮನೆಯ ಸ್ವರೂಪದಲ್ಲಿಯೂ ಬದಲಾವಣೆ ಕಂಡು ಬಂದಿದೆ. ವಿಶೇಷವಾಗಿ ತಮ್ಮ ವಾಸದ ಮನೆಗಳನ್ನೇ ನೇಯ್ಗೆಯ ಕಾರ್ಯಕ್ಕೆ ಬಳಸಿಕೊಂಡಿರುವುದು ಕಂಡುಬರುತ್ತದೆ. ಇಲ್ಲಿಯ ಮನೆಗಳು ಹೆಚ್ಚು ಎತ್ತರವಾಗಿ ಮತ್ತು ಉದ್ದವಾಗಿವೆ. ಹೆಚ್ಚಿನ ಮನೆಗಳು ಕರಿ ಹಂಚನ್ನು ಹೊಂದಿವೆ. ಇಲ್ಲಿಯ ಮನೆಗಳ ಮುಂದೆ ಬಾವಿಯು ಕಂಡು ಬರುತ್ತವೆ. ಕೆಲವರು ಹಿತ್ತಲಿನಲ್ಲಿ ಬಾವಿಗಳನ್ನು ತೆಗೆಸಿದ್ದಾರೆ. ಇಲ್ಲಿಯ ಕೆಲವು ಬೀದಿಗಳಲ್ಲಿ ಅಡ್ಡಾಡಿದರೆ ಹಳ್ಳಿಯೊಳಗೆ ಬಂದಂತೆ ಬಾಸವಾಗುತ್ತದೆ. ತೀರ ಸಂಪ್ರದಾಯಿಕವಾದ ಮನೆಗಳು ಇಂದಿಗೂ ಕಾಣಸಿಗುತ್ತವೆ. ಇಲ್ಲಿಯ ಮನೆಗಳಿಗೆ ಕಟ್ಟಿಗೆಯ ಬಳಕೆ ಹೆಚ್ಚಿದೆ. ತೇಗು, ಸಾಗವಾಣಿ, ಮತ್ತಿ, ಹಲಸಿನ ಮರದ ದೊಡ್ಡ ದೊಡ್ಡ ತೊಲೆಗಳು ಕಂಡುಬರುತ್ತವೆ. ಕೆಲವೊಂದು ಮನೆಗಳು ಬಿದ್ದು ಹೋಗಿವೆ. ಆದರೆ ಅವುಗಳಲ್ಲಿಯ ಕಟ್ಟಿಗೆಯೇ ಲಕ್ಷಾಂತರ ರೂಪಾಯಿ ಬೆಲೆ ಬಾಳುವುದಾಗಿದೆ.

ಕ್ಯಾಂಪ್ ಪ್ರದೇಶದಲ್ಲಿಯ ಮನೆಗಳೂ ತೀರ ಭಿನ್ನವಾಗಿವೆ. ಈ ಪ್ರದೇಶದಲ್ಲಿ ಮೊದಲು ಯುರೋಪಿಯನ್ ಜನರು ವಾಸಿಸುತ್ತಿದ್ದರು. ಹೀಗಾಗಿ ಕ್ರಿಶ್ಚಿಯನ್‌ರ ಮನೆಗಳು ಹಿಂದೂ ಜನರ ಮನೆಗಳಿಗಿಂತ ತೀರ ಭಿನ್ನವಾಗಿರುವುದು ಸಾಮಾನ್ಯವಾಗಿದೆ. ಅಚ್ಚುಕಟ್ಟಾದ ಮನೆಗಳನ್ನು ನಿರ್ಮಿಸಿಕೊಂಡು ಸುಖ ಜೀವನವನ್ನು ಇವರು ಕಳೆಯುತ್ತಿದ್ದರು. ಈ ಪ್ರದೇಶದ ಕೆಲವೊಂದು ಮನೆಗಳು ಒಂದೊಂದು ಎಕರೆ ಪ್ರದೇಶವನ್ನು ಹೊಂದಿವೆ. ಒಂದೊಂದು ಮನೆಗಳು ಸಣ್ಣ ಅರಮನೆಯಂತೆ ಕಂಡು ಬರುತ್ತವೆ. ಕ್ಯಾಂಪ್ ಪ್ರದೇಶವು ಇಂದು ಮಿಲಟರಿ ಆಡಳಿತಕ್ಕೆ ಒಳಪಟ್ಟಿದ್ದರಿಂದ ಈ ಮನೆಗಳಲ್ಲಿ ಸೈನ್ಯಾಧಿಕಾರಿಗಳು ವಾಸಿಸುತ್ತಾರೆ. ಕೆಲವೊಂದು ಮನೆಗಳು ಹಾಳು ಬಿದ್ದಿವೆ.

ಮುಸಲ್ಮಾನರ ಮನೆಗಳು ಅವರ ಧರ್ಮಕ್ಕನುಸಾರವಾಗಿ ಕಟ್ಟಲ್ಪಟ್ಟವುಗಳಾಗಿವೆ. ಹೊರಗಿನ ಜನರ ದೃಷ್ಟಿಗೆ ಒಳಗಿನ ಜನರು ಬೀಳದ ಹಾಗೆ ಕೋಣೆಗಳನ್ನು ಕಟ್ಟಿರುತ್ತಾರೆ. ನಮಾಜ ಮಾಡಲು ಪ್ರತ್ಯೇಕವಾದ ಕೋಣೆಗಳನ್ನು ಕೆಲವು ಮನೆಗಳಲ್ಲಿ ಕಾಣಬಹುದು. ನಗರದ ಒಳಗೆ ಕೆಲವು ವಾಡೆಗಳು ವಿಶೇಷ ಆಕರ್ಷಣೆಗಳಾಗಿವೆ. ಗಂಗಾಧರರಾಯ ದೇಶಪಾಂಡೆಯವರ ವಾಡೆ ರಾಮದೇವ ಗಲ್ಲಿಯಲ್ಲಿದೆ. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಈ ಮನೆಯೇ ಹೋರಾಟಗಾರರಿಗೆ ಲಾಜಿಂಗ್ ಆಗಿತ್ತು. ನೂರಾರು ಜನರು ಇಲ್ಲಿ ವಾಸ್ತವ್ಯವನ್ನು ಮಾಡುಬಹುದಾದಷ್ಟು ದೊಡ್ಡದಾಗಿದೆ.

ಕೇಳಕರ ಭಾಗದಲ್ಲಿರುವ ನಾರಾಯಣರಾವ ಜೋಶಿಯವರ ವಾಡೆ ಈ ಮನೆಯು ಒಂದು ಬೀದಿಯಿಂದ (ರಾಮದೇವ ಬೀದಿಯ ತುದಿಯಿಂದ ನವಗ್ರಹ ಗುಡಿಯ ಬೀದಿಯವರೆಗೆ) ಮತ್ತೊಂದು ಬೀದಿಗೆ ಸೇರುವಷ್ಟು ವಿಶಾಲವಾಗಿದೆ. ಕೋರ್ಟು ಕಚೇರಿಯ ಕೆಲಸಕ್ಕೆ ಬರುವ ಜನಕ್ಕೆಲ್ಲ ಅನ್ನ ಆಶ್ರಯ ಕೊಟ್ಟು ಅವರಿಗೆ ನ್ಯಾಯ

ಒದಗಿಸುವ ಕೇಂದ್ರವಾಗಿತ್ತು. ಇಲ್ಲಿಯೇ ಇರುವ ಲೋಕೂರವರ ಮನೆಯು ದೊಡ್ಡದಾಗಿದೆ. ಇದು ಜಿಲ್ಲೆಯ ಸ್ವಾತಂತ್ರ್ಯ ಹೋರಾಟದ ಕೇಂದ್ರ ಸ್ಥಾನವಾಗಿತ್ತು. ಬೆಳವಿ ದತ್ತರಾಯರ ಮನೆ, ಟೈಗರ ವಕೀಲರ ಮನೆ, ಕಡೋಲಕರ ಗಲ್ಲಿಯ ಮಾಳಗಿಯವರ ಮನೆ, ಪಾಟೀಲ ಗಲ್ಲಿಯ ಪಾಟೀಲರ ವಾಡೆ ಮುಂತಾದ ಮನೆಗಳು ನಮ್ಮ ಹಳೆಯ ಸಾಂಸ್ಕೃತಿಕ ಪರಂಪರೆಯನ್ನು ತಿಳಿಸಿಕೊಡುವ ಮನೆಗಳಾಗಿವೆ. ಇಂತಹ ನೂರಾರು ಮನೆಗಳನ್ನು ಬೆಳಗಾವಿಯಲ್ಲಿ ಕಾಣಬಹುದಾಗಿದೆ.

ಈ ಮನೆಗಳ ತಲೆಬಾಗಿಲ ಅತ್ಯಂತ ಗಟ್ಟಿಮುಟ್ಟಾಗಿರುತ್ತವೆ. ಇದಕ್ಕೆ ಸಾಕ್ಷಿಯಾಗಿ ಬೆಳಗಾವಿಯಲ್ಲಿ ಭಾಷಾ ಗದ್ದಲ ನಡೆದಾಗ ಟೈಗರ ವಕೀಲರ ಮನೆಯ ಬಾಗಿಲನ್ನು ಮುರಿಯಲು ನೂರಾರು ಜನರು ಪ್ರಯತ್ನಿಸಿದರೂ ಅದು ಸ್ವಲ್ಪವೂ ಕೂಡ ಅಲುಗಾಡಲಿಲ್ಲವಂತೆ.[೨]

ಟಿಳಕವಾಡಿಯಲ್ಲಿರುವ ಮನೆಗಳ ರಚನೆ ಭಿನ್ನವಾಗಿದೆ. ೧೯೨೦-೩೦ ರ ದಶಕದಲ್ಲಿ ಬೆಳಗಾವಿಗೆ ಪ್ಲೇಗರೋಗದ ಹಾವಳಿ ಹೆಚ್ಚಾದಾಗ ಕೆಲವು ಶ್ರೀಮಂತ ವರ್ಗದ ಜನರು ಬೆಳಗಾವಿಯ ಹೊರವಲಯದಲ್ಲಿ ಸ್ವಚ್ಚವಾದ ವಾತಾವರಣದಲ್ಲಿ ದೊಡ್ಡದಾದ ಬಂಗಲೆಯನ್ನು ಕಟ್ಟಿಕೊಂಡು ವಾಸಿಸತೊಡಗಿದರು. ಹೀಗಾಗಿ ಈ ಮನೆಗಳು ಅತ್ಯಂತ ವ್ಯವಸ್ಥಿತವಾಗಿ ಕಟ್ಟಲ್ಪಟ್ಟಿವೆ. ಹೆಚ್ಚಿನ ಮನೆಗಳಲ್ಲಿ ಎರಡು ಅಂತಸ್ತಿನ ಮನೆಗಳೇ ಆಗಿವೆ. ಸುತ್ತಲೂ ಕಂಪೌಂಡ ಗೋಡೆಯನ್ನು ಹೊಂದಿದ್ದು ಮರ-ಗಿಡಗಳನ್ನು ಬೆಳೆಸಿರುವುದು ಮನೆಗಳಿಗೆ ವಿಶೇಷವಾದ ಸೌಂದರ್ಯವನ್ನು ಒದಗಿಸಿದೆ.

ಕೆಲವು ಸಂಸ್ಥಾನಿಕರ ವಾಡೆಗಳು ಬೆಳಗಾವಿಯ ಆಕರ್ಷಣೀಯ ಮನೆಗಳಾಗಿವೆ. ಶಿರಸಂಗಿ ಲಿಂಗರಾಜರ ವಾಡೆ, ವಂಟಮೂರಿ ದೇಸಾಯರ ವಾಡೆ, ರಂಗೂಬಾಯಿ ಪ್ಯಾಲೆಸ್, ವಡಗಾವಿಯ ಕುರುಂದವಾಡ ಸಂಸ್ಥಾನಿಕರ ವಾಡೆ, 'ಜಮಖಂಡಿ ಸಂಸ್ಥಾನಿಕರ ವಾಡೆ' ಕೊಲ್ಲಾಪೂರದ ಶಾಹಿ ಮಹಾರಾಜರ ವಾಡೆ, ಮಿರಜ ಸಂಸ್ಥಾನಿಕರ ವಾಡೆ(ಈಗಿನ ಆರ್.ಪಿ.ಡಿ. ಕಾಲೇಜು) ಮುಂತಾದ ವಾಡೆಗಳು ಗತಕಾಲದ ಇತಿಹಾಸ, ಸಂಸ್ಕೃತಿಯನ್ನು ಪರಿಚಯಿಸುವ ಸ್ಮಾರಕಗಳಾಗಿವೆ.

ಬೆಳಗಾವಿಯು ಇಂದು ಮಹಾನಗರವಾಗಿ ಬೆಳವಣಿಗೆಯನ್ನು ಹೊಂದಿದೆ. ಹೀಗಾಗಿ ಹೊಸ ಹೊಸ ಬಡಾವಣೆಗಳು ನಿರ್ಮಾಣಗೊಳ್ಳುತ್ತಿವೆ. ಈ ಬಡಾವಣೆಗಳಲ್ಲಿಯ ಮನೆಗಳು ಅತ್ಯಾಧುನಿಕ ಸೌಕರ್ಯವನ್ನು ಹಾಗೂ ಹೊಸ ಶೈಲಿಯಲ್ಲಿ ಕಟ್ಟಿದವುಗಳಾಗಿವೆ. ಅಲ್ಲದೆ ನಗರದ ಮಧ್ಯದಲ್ಲಿ, ಹೊರವಲಯದಲ್ಲಿ ನಿರ್ಮಾಣಗೊಂಡಿರುವ ಅಪಾರ್ಟಮೆಂಟ್‌ಗಳು ಬೆಳಗಾವಿಗೆ ಹೊಸ ಸ್ವರೂಪವನ್ನು ತಂದಿವೆ. ಬಡಾವಣೆಗಳಲ್ಲಿ ವಿಶೇಷವಾಗಿ ಸಿಮೆಂಟಿನ ಮನೆಗಳು ಕಂಡುಬರುತ್ತವೆ. ಕೆಲವೊಂದು ಮನೆಗಳು ಒಂದೆರಡು ಎಕರೆಗಳಷ್ಟು ವಿಶಾಲವಾದ ಜಾಗೆಯಲ್ಲಿ ಕಟ್ಟಲ್ಪಟ್ಟಿವೆ. ಹೂವಿನ ತೋಟ, ಈಜುಗೋಳ, ಆಟದ ಮೈದಾನ ಹೊಂದಿದ ಮನೆಗಳು ಕಂಡುಬರುತ್ತವೆ. ಶ್ರೀಮಂತರ ಬಡಾವಣೆಗಳೆಂದೇ ಗುರುತಿಸಲ್ಪಡುವ ಸದಾಶಿವನಗರ, ಶಿವಬಸವನಗರ, ಮಹಾಂತೇಶ ನಗರ, ಟಿ.ವಿ. ಸೆಂಟರ್,

ಹನುಮಾನ ನಗರ, ಚನ್ನಮ್ಮಾ ನಗರ ಮುಂತಾದ ಪ್ರದೇಶಗಳಲ್ಲಿ ಆಧುನಿಕ ಶೈಲಿಯ ಐಶಾರಾಮಿ ಬಂಗಲೆಗಳು ಬೆಳಗಾವಿಯ ಸೌಂದರ್ಯವನ್ನು ಹೆಚ್ಚಿಸಿವೆ.

ಬೆಳಗಾವಿಯ ಮನೆಗಳಿಗಿರುವ ವೈವಿಧ್ಯತೆ ಇಲ್ಲಿಯ ಸಂಸ್ಕೃತಿಯ ಅಧ್ಯಯನಕ್ಕೆ ಮಹತ್ವದ ಆಕರ ಸಾಮಗ್ರಿಯಾಗಿದೆ. ಸುಮಾರು ನಾಲ್ಕನೂರು ವರ್ಷದ ಹಿಂದಿನ ಮನೆಗಳು ಇಂದಿಗೂ ಗಟ್ಟಿಮುಟ್ಟಾಗಿ ಸುಸ್ಥಿತಿಯಲ್ಲಿವೆ. ಬಹು ಸಂಸ್ಕೃತಿಯ ಸಂಗಮ ತಾಣವಾದ ಬೆಳಗಾವಿಯಲ್ಲಿ ಊಟ–ಉಪಚಾರ, ವೇಷ–ಭೂಷಣ, ಭಾಷೆ, ಸಂಪ್ರದಾಯ–ಆಚರಣೆಗಳಲ್ಲಿ ಕಂಡು ಬರುವ ವೈವಿಧ್ಯತೆ ಇಲ್ಲಿಯ ಮನೆಗಳ ರಚನೆಯಲ್ಲಿಯೂ ಕಂಡುಬರುತ್ತದೆ. ಒಂದು ಕಡೆ ಹಳೆಯ ಸಂಸ್ಕೃತಿಯನ್ನು ಬಿಡದೆ, ಹೊಸ ಸಂಸ್ಕೃತಿಗೆ ಜೋತು ಬೀಳದೆ ತನ್ನತನವನ್ನು ಉಳಿಸಿಕೊಂಡು ಹೊಸದನ್ನು ಸ್ವೀಕರಿಸುವ ಬೆಳಗಾವಿ ಜನರ ಮನೋಭಾವನೆ ಅವರ ವಾಸಸ್ಥಾನಗಳ ಮೇಲಿಂದ ಸ್ಪಷ್ಟವಾಗಿ ಗುರುತಿಸಲ್ಪಡುತ್ತದೆ. ಬೆಳಗಾವಿ ನಗರದೊಳಗೆ ಸುತ್ತಾಡಿದರೆ ಒಂದು ಕಡೆ ಹಳ್ಳಿಗೆ ಹೋದ ಹಾಗೆ, ಮತ್ತೊಂದು ಕಡೆ ಬಂದರೆ ಪಟ್ಟಣಕ್ಕೆ ಬಂದ ಹಾಗೆ ಅನಿಸುತ್ತದೆ. ಇದರಿಂದ ನಗರದೊಳಗೆ ಜನಪದ ರೀತಿಯೂ ಕಂಡುಬರುತ್ತದೆ.

ಬಾವಿಗಳು : ಬೆಳಗಾವಿಯ ಮನೆಗಳಿಗಿರುವಷ್ಟೇ ವೈಶಿಷ್ಟ್ಯತೆ ಇಲ್ಲಿಯ ಬಾವಿಗಳಿಗೂ ಇದೆ. ಪ್ರಾಚೀನ ಕಾಲದಿಂದಲೂ ಬೆಳಗಾವಿಯಲ್ಲಿ ಬಾವಿಗಳ ಬಳಕೆ ಕಂಡುಬರುತ್ತದೆ. ಶಾತವಾಹನರ ಕಾಲದಲ್ಲಿ ದೊಡ್ಡ ನಗರವಾಗಿದ್ದರೂ ಇದು ಯಾವುದೇ ನದಿಯ ತೀರವನ್ನು ಹೊಂದಿಲ್ಲ. ನಗರಗಳು ವಿಶೇಷವಾಗಿ ನದಿಗಳ ದಂಡೆಯಲ್ಲಿ ಬೆಳೆದಿರುವುದನ್ನು ಕಾಣಬಹುದು. ಆದರೆ ಬೆಳಗಾವಿಯು ಇದಕ್ಕೆ ಹೊರತಾಗಿದೆ. ಹೀಗಾಗಿ ನೀರಿನ ಸೌಲಭ್ಯಕ್ಕಾಗಿ ಬಾವಿಗಳನ್ನೇ ಆಶ್ರಯಿಸಬೇಕಾಯಿತು.

ಬೆಳಗಾವಿ ಬಾವಿಗಳ ಪ್ರಾಚೀನ ಉಲ್ಲೇಖವು ಕ್ರಿ.ಪೂ. ೨೨೫ ರಲ್ಲಿದ್ದ ಜಕ್ಕದೇವ ಎಂಬ ರಾಜನ ಕಾಲದಲ್ಲಿ ಬರುತ್ತದೆ. ಈತನು ಇಂದಿನ ಕೋಟೆಯ ಪ್ರದೇಶದಲ್ಲಿ ನೂರಾ ಒಂದು ಬಸದಿಗಳನ್ನು ಮತ್ತು ಬಾವಿಗಳನ್ನು ಕಟ್ಟಿಸಿದನೆಂದು ತಿಳಿದು ಬರುತ್ತದೆ.[೩] ಆದರೆ ಇಂದು ಬಾವಿಯ ಯಾವುದೇ ಅವಶೇಷಗಳು ಕಂಡುಬರುವುದಿಲ್ಲ. ರಟ್ಟರ ಕಾಲದಲ್ಲಿ ನೀರಿನ ಸೌಕರ್ಯಕ್ಕಾಗಿ ಬಾವಿಗಳೇ ಆಧಾರವಾಗಿದ್ದವು. ಇಂದಿನ ಹಳೆಯ ಬೆಳಗಾವಿ ಪ್ರದೇಶದಲ್ಲಿ ಹಲವಾರು ಬಾವಿಗಳು ಪ್ರಾಚೀನ ಇತಿಹಾಸವನ್ನು ತಿಳಿಸಿಕೊಡುತ್ತವೆ.

ಹಳೆ ಬೆಳಗಾವಿ ಪ್ರದೇಶದ ಮನೆಗಳು ಒಂದೊಂದು ಬಾವಿಯನ್ನು ಹೊಂದಿವೆ. ಕೆಲವು ಬಾವಿಗಳು ಇಂದಿಗೂ ಬಳಕೆಗೊಳ್ಳುತ್ತವೆ. ಮನೆಗಳನ್ನು ಹೊರತು ಪಡಿಸಿ ಬೀದಿಗಳಲ್ಲಿಯೂ ಸಾರ್ವಜನಿಕ ಬಾವಿಗಳಿದ್ದವು. ಪ್ರತಿಯೊಂದು ಬೀದಿಯ ತುದಿಗೆ ಅಥವಾ ಮಧ್ಯದ ಭಾಗದಲ್ಲಿ ದೊಡ್ಡದಾದ ಬಾವಿಗಳಿದ್ದವು (ಈಗ ಅವು ಮುಚ್ಚಲ್ಪಟ್ಟಿವೆ).

ರಾಮದೇವ ಬೀದಿಯ ತುದಿಗೆ ಹನುಮಾನ ಗುಡಿಯ ಸಮೀಪ ಇಂದಿನ ಹುತಾತ್ಮ ಚೌಕದ ಬಳೀ ಇರುವ ಒಂದು ದೊಡ್ಡದಾದ ಬಾವಿಯು ಈ ಭಾಗದ ಜನರಿಗೆಲ್ಲ ನೀರಿನ ಆಸರೆಯಾಗಿತ್ತು. ಈ ಬಾವಿಯು ನೂರಾರು ವರ್ಷಗಳ ಇತಿಹಾಸವನ್ನು ಹೊಂದಿತ್ತೆಂದು ಪ್ರೊ. ಪಿ.ಕೆ. ಬಾಗೋಜಿಯವರು ತಿಳಿಸಿದ್ದಾರೆ.[೪] ಈ ಬಾವಿಗೆ ಹನ್ನೆರಡು ಗಡಗಡೆಗಳಿದ್ದವು. ಹೀಗಾಗಿ ಇದನ್ನು "ಬಾರಾ ಗಡಗಡೆ" ಎಂದೇ ಕರೆಯುತ್ತಿದ್ದರು. ತುಂಬ ಆಳವಾಗಿದ್ದ ಈ ಬಾವಿಯಲ್ಲಿ ಬೇಸಿಗೆಯ ಕಾಲದಲ್ಲಿ ನೀರು ದೂರ ಹೋಗುತ್ತಿತ್ತು. ಹೀಗಾಗಿ ಅರವತ್ತು ಮೊಳದ ಹಗ್ಗವನ್ನು ಬಿಟ್ಟು ನೀರನ್ನು ತುಂಬುತ್ತಿದ್ದರು. ಕೆಲವು ಸಲ ಬೇಸಿಗೆಯಲ್ಲಿ ಬತ್ತಿ ಹೋಗುತ್ತಿತ್ತು. ಈಗ ಈ ಬಾವಿಯು ಕಸದಿಂದ ತುಂಬಿ ಹೋಗಿದೆ.

ಅದೇ ರೀತಿ ಬಾಪಟಗಲ್ಲಿ, ಬಡಕಲ ಗಲ್ಲಿ, ಬೋಗಾರವೆಸ್, ಟಿಳಕಚೌಕ, ರಾಮಲಿಂಗಖಿಂಡ ಗಲ್ಲಿಗಳಲ್ಲಿ ದೊಡ್ಡದಾದ ಸಾರ್ವಜನಿಕ ಬಾವಿಗಳಿದ್ದವು.

ಬೆಳಗಾವಿಯ ಬಾವಿಗಳಲ್ಲಿ ಐತಿಹಾಸಿಕ ಮಹತ್ವವನ್ನು ಪಡೆದುಕೊಂಡ ಬಾವಿಯೆಂದರೆ ಕಾಂಗ್ರೆಸ್ ಬಾವಿ. ೧೯೨೪ ರಲ್ಲಿ ಜರುಗಿದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನದ ಸಂದರ್ಭದಲ್ಲಿ ದೇಶದ ನಾನಾ ಭಾಗಗಳಿಂದ ಬರುವ ಲಕ್ಷಾಂತರ ಜನರಿಗೆ ನೀರಿನ ವ್ಯವಸ್ಥೆಗಾಗಿ ನಿರ್ಮಿಸಿದ 'ಪಂಪಾ ಸರೋವರ' ಎನ್ನುವ ಹೆಸರಿನ ಬಾವಿಯು ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿದೆ. ಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ಅಧಿವೇಶನ ಜರುಗಿದ್ದರಿಂದ ಹೆಚ್ಚಿನ ಸಂಖ್ಯೆಯಲ್ಲಿ ಕಾರ್ಯಕರ್ತರು ಆಗಮಿಸಿದ್ದರು. ಹೀಗಾಗಿ ಕುಡಿಯುವ ನೀರಿನ ವ್ಯವಸ್ಥೆಗಾಗಿ ಈ ಬಾವಿಯನ್ನು ನಿರ್ಮಿಸಲಾಗಿತ್ತು. ಇಂದಿಗೂ ಈ ಬಾವಿಯು ಕಾಂಗ್ರೆಸ್ ಬಾವಿಯೆಂದೇ ಕರೆಯಲ್ಪಡುತ್ತದೆ.

ಬೆಳಗಾವಿಯ ಬಾವಿಗಳ ವಿಶೇಷವೆಂದರೆ ಅತ್ಯಂತ ಸಣ್ಣ ವ್ಯಾಸವುಳ್ಳ ಬಾವಿಗಳು ಕಂಡುಬರುತ್ತವೆ. ಕೆಲವು ಬಾವಿಗಳು ಮನೆಯ ಒಳಗೂ ಕಂಡು ಬರುತ್ತವೆ. ಬಾವಿಗಳ ಮೇಲೆ ದೊಡ್ಡದಾದ ಪೆಟ್ಟಿಗೆಯನ್ನು ಇಟ್ಟರೆ ಬಾವಿ ಇರುವುದೇ ಗೊತ್ತಾಗುವುದಿಲ್ಲ.

ಕೆಲವು ಪ್ರದೇಶದಲ್ಲಿ ಬಾವಿಗಳು ಅತಿ ಆಳವಾಗಿದ್ದರೆ ಇನ್ನು ಕೆಲವು ಪ್ರದೇಶಗಳಲ್ಲಿ ಅತಿ ಕಡಿಮೆ ಆಳವನ್ನು ಹೊಂದಿದ ಬಾವಿಗಳು ಕಂಡುಬರುತ್ತವೆ. ಟಿಳಕವಾಡಿ, ವಡಗಾವಿ, ಶಹಾಪೂರ, ಖಾಸಭಾಗ ಮುಂತಾದ ಪ್ರದೇಶಗಳಲ್ಲಿಯ ಬಾವಿಗಳ ಆಳ ಕಡಿಮೆ ಇದೆ. ಅಲ್ಲದೆ ಈ ಬಾವಿಗಳು ಮಳೆಗಾಲದಲ್ಲಿ ತುಂಬಿ ಹರಿಯುತ್ತವೆ.

ಬೆಳಗಾವಿಯ ಬಾವಿಯ ನೀರಿನ ರುಚಿಯು ವಿಶಿಷ್ಟವಾಗಿದೆ. ಎಷ್ಟು ಕುಡಿದರೂ ಹೊಟ್ಟೆಗೆ ಭಾರವಾಗುವುದಿಲ್ಲ. ಅಲ್ಲದೆ ಇಲ್ಲಿಯ ನೀರಿನಿಂದ ಮಾಡಿದ ಅಡಿಗೆಯು ವಿಶೇಷವಾದ ಸ್ವಾದವನ್ನು ಹೊಂದಿರುತ್ತದೆ. ವಡಗಾಂವಿ,

ಟಿಳಕವಾಡಿಯ ಬಾವಿಗಳು ಎಂದೂ ಬತ್ತದ ಬಾವಿಗಳಾಗಿವೆ. ಬೇಸಿಗೆಯಲ್ಲಿ ನೀರಿನ ಪ್ರಮಾಣ ಕಡಿಮೆಯಾದರೂ ಬಳಕೆಗೆ ಬೇಕಾಗುವಷ್ಟು ನೀರು ಇರುವುದು ಕಂಡುಬರುತ್ತದೆ.

ಇತ್ತೀಚಿನ ದಿನಗಳಲ್ಲಿ ಬೆಳಗಾವಿಗೆ ಹಿಡಕಲ್ ಜಲಾಶಯದಿಂದ ನೀರಿನ ಸರಬರಾಜು ಆಗುತ್ತಿರುವುದರಿಂದ ಬಾವಿಗಳು ಮುಚ್ಚಲ್ಪಟ್ಟಿವೆ. ಆದರೂ ಕೆಲವು ಮನೆಗಳಲ್ಲಿ ಇಂದಿಗೂ ಬಾವಿಯ ನೀರನ್ನು ಪೂಜೆಗೆ, ಅಡುಗೆಗೆ ಬಳಸುತ್ತಾರೆ.

ಒಟ್ಟಿನಲ್ಲಿ ಬೆಳಗಾವಿಯ ಸಾಂಸ್ಕೃತಿಕ ಅಧ್ಯಯನದಲ್ಲಿ ಇಲ್ಲಿಯ ಮನೆಗಳು, ಬಾವಿಗಳು ಮಹತ್ವದ ಪಾತ್ರವನ್ನು ವಹಿಸಿವೆ. ಜನರ ಜೀವನದ ಮೂಲಭೂತ ಅವಶ್ಯಕತೆಗಳಾದ ಮನೆ-ಬಾವಿಗಳು ಬೆಳಗಾವಿಯ ಇತಿಹಾಸದ ಒಂದು ಭಾಗವಾಗಿವೆ.

ಆಧುನಿಕತೆ ಎಷ್ಟೇ ಬಂದರೂ ತಮ್ಮ ಮೂಲ ಸಂಸ್ಕೃತಿಯನ್ನು ಬಿಡದೆ ಬೆಳಗಾವಿಯ ಜನರು ಸಂಪ್ರದಾಯ ಬದ್ಧವಾದ ಜೀವನವನ್ನು ಸಾಗಿಸುತ್ತಿದ್ದಾರೆನ್ನುವುದು ಇಲ್ಲಿಯ ಮನೆ, ಬಾವಿಗಳ ಮೇಲಿಂದ ತಿಳಿದುಬರುತ್ತದೆ.

**೨. ವೇಷ-ಭೂಷಣ:**

ಹಲವು ಸಂಸ್ಕೃತಿಗಳ ಸಂಗಮ ತಾಣವಾದ ಬೆಳಗಾವಿಯಲ್ಲಿ ಭಾಷೆ, ಧರ್ಮ, ಆಚರಣೆ, ಊಟ, ಉಪಚಾರ, ಉಡಿಗೆ-ತೊಡುಗೆಗಳಲ್ಲಿ ವೈವಿಧ್ಯತೆಯನ್ನು ಕಾಣಬಹುದಾಗಿದೆ. ಒಂದೊಂದು ಧರ್ಮ, ಜಾತಿಗಳಿಗೆ ಒಂದೊಂದು ಜೀವನಕ್ರಮವಿರುವುದರಿಂದ ವಿಶಿಷ್ಟವಾದ ಸಾಮಾಜಿಕ ಜೀವನ ಕ್ರಮವು ಬೆಳಗಾವಿಯಲ್ಲಿ ಕಂಡುಬರುತ್ತದೆ. ಇಂಥವುಗಳಲ್ಲಿ ಬೆಳಗಾವಿ ಜನರ ವೇಷ-ಭೂಷಣವು ಎದ್ದು ಕಾಣುವ ಅಂಶವಾಗಿದೆ.

ಬೆಳಗಾವಿ ಜನರ ವೇಷ-ಭೂಷಣವನ್ನು ಪಾರಂಪರಿಕ ವೇಷಭೂಷಣ, ಗ್ರಾಮೀಣ ವೇಷಭೂಷಣ, ನಗರ ವೇಷಭೂಷಣ, ಆಧುನಿಕ ವೇಷ-ಭೂಷಣಗಳ ಹಿನ್ನೆಲೆಯಲ್ಲಿ ಗುರುತಿಸಿಕೊಳ್ಳಬಹುದು.

ಭೌಗೋಳಿಕವಾಗಿ ಅತ್ಯಂತ ಮುಖ್ಯವಾದ ಪ್ರದೇಶದಲ್ಲಿ ನೆಲೆಗೊಂಡಿರುವ ಬೆಳಗಾವಿ ನಗರವು ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಹುಟ್ಟಿಕೊಂಡ ಹೊಸ ಫ್ಯಾಶನ್ ಲೋಕವನ್ನು ಕೆಲವೇ ದಿನಗಳಲ್ಲಿ ಪಡೆದುಕೊಂಡಿದೆ. ಮುಂಬೈ ಹಾಗೂ ಗೋವಾ ಪಟ್ಟಣಗಳ ಮಧ್ಯದಲ್ಲಿರುವ ಬೆಳಗಾವಿಯು ಎರಡೂ ಕಡೆಯಿಂದ ಬರುವ ಹೊಸ ಸಂಸ್ಕೃತಿಯನ್ನು ಸೆಳೆದುಕೊಳ್ಳುತ್ತದೆ. ಹೀಗಾಗಿ ಲಂಡನ್‌ದಿಂದ ಮುಂಬೈಗೆ, ಮುಂಬೈಯಿಂದ ಬೆಳಗಾವಿಗೆ ಎನ್ನುವ ಮಾತು ಇಲ್ಲಿಯ ವೇಷ-ಭೂಷಣಗಳಿಂದ ಪ್ರಚಲಿತವಾಗಿದೆ.

ಬೆಳಗಾವಿಯ ಜನರು ಅಲಂಕಾರ ಪ್ರಿಯರು. ಸೌಂದರ್ಯ ಆರಾಧಕರಾಗಿದ್ದಾರೆ. ಪ್ರಾಚೀನ ಕಾಲದಿಂದಲೂ ವೇಷ-ಭೂಷಣಕ್ಕೆ ಮಹತ್ವವನ್ನು ನೀಡಿದ್ದಾರೆ.

ಮನುಷ್ಯನ ಮೂರ್ತಿಯ ಕಿವಿಯಲ್ಲಿ ಕಮಲ ಮೊಗ್ಗಿನ ಕುಂಡಲಗಳು, ಕಂಠಾಭರಣ, ಯಜ್ಞೋಪವಿತ ಮತ್ತು ಬಿಗಿಯಾಗಿ ಕಚ್ಚೆ ಹಾಕಿ ಧೋತ್ರವನ್ನು ಉಟ್ಟಿರುವುದು ಕಂಡುಬರುತ್ತದೆ. ಈ ಮೂರ್ತಿಯ ವೇಷ-ಭೂಷಣ, ಅಲಂಕಾರಗಳನ್ನು ಗಮನಿಸಿದಾಗ ಪ್ರಾಚೀನ ಕಾಲದಲ್ಲಿ ಪುರುಷರು ಆಭರಣಗಳನ್ನು ಧರಿಸುತ್ತಿದ್ದರು. ಅಲ್ಲದೆ ಧೋತ್ರವನ್ನು ಉಡುವ ಪದ್ಧತಿ ಕ್ರಿ. ಶ. ಪೂರ್ವದಿಂದಲೂ ಬಳಕೆಯಲ್ಲಿರುವುದು ತಿಳಿದು ಬರುತ್ತದೆ.

ಮತ್ತೊಂದು ಮನುಷ್ಯನ ಚಿತ್ರವು ವಿಭಿನ್ನವಾದ ಅಲಂಕಾರಗಳಿಂದ ಕೂಡಿದೆ. ತಲೆಪಟ್ಟಿ, ಕುಂಡಲಗಳು, ಕಂಠಾಭರಣ ಮತ್ತು ಉತ್ತರಿಯ ಅಲಂಕಾರ, ಕಾಲಿಗೆ ಹೊಸೆದ ಹಗ್ಗದಿಂದ ಮಾಡಿದ ಬಳೆ, ಕಾಲಲ್ಲಿ ಪಾದರಕ್ಷೆ ಮುಂತಾದವುಗಳನ್ನು ಧರಿಸಿದ್ದಾನೆ. ಅಲ್ಲದೆ ಕೇಶಾಲಂಕಾರಕ್ಕೂ ಪುರುಷರು ಮಹತ್ವವನ್ನು ನೀಡುತ್ತಿದ್ದರು ಎನ್ನುವುದು ಇಲ್ಲಿಯ ಮತ್ತೊಂದು ಮೂರ್ತಿಯಿಂದ ಕಂಡುಬರುತ್ತದೆ. ಈ ರೀತಿಯ ಕೇಶಾಲಂಕಾರವು ಗುಪ್ತರ ಕಾಲದಲ್ಲಿತ್ತು ಎಂದು ಡಾ. ಅ. ಸುಂದರ ಅಭಿಪ್ರಾಯ ಪಟ್ಟಿದ್ದಾರೆ.[೫]

ಪ್ರಾಚೀನ ಕಾಲದ ರಾಜರ ಉಡುಪುಗಳು ವಿಶೇಷವಾಗಿದ್ದವು. ರಾಜನು ಪ್ರತ್ಯಕ್ಷ ದೇವರು ಎಂದು ನಂಬಿದ್ದ ಜನರು ದೇವತೆಗಳು ತೊಡುವ ಉಡುಪುಗಳನ್ನು ತೊಡುತ್ತಿದ್ದರು. ಅಥವಾ ದೇವರುಗಳ ಸ್ವರೂಪವನ್ನು ಕಲ್ಪಿಸಿಕೊಂಡ ಮನುಷ್ಯ ತಮ್ಮ ರಾಜರು ತೊಡುತ್ತಿದ್ದ ಉಡಿಗೆ-ತೊಡಿಗೆಗಳನ್ನು ತಮ್ಮ ತಮ್ಮ ದೇವರುಗಳಿಗೆ ತೊಡಸಿರಬಹುದು. ರಾಜನನ್ನು ಪ್ರತ್ಯೇಕವಾಗಿ ಗುರುತಿಸಲು ಆತನ ವೇಷ-ಭೂಷಣಗಳು ಸಾಧನವಾಗಿದ್ದವು. ಅಲಂಕಾರ ಪ್ರಿಯರಾದ ಮಹಾರಾಣಿಯರು ದಿನನಿತ್ಯವೂ ಶೃಂಗಾರಗೊಂಡು ರೇಶ್ಮೆಯ ಬಟ್ಟೆಗಳನ್ನು ತೊಡುತ್ತಿದ್ದರು. ರಾಜರು ಇಂದಿನ ದೊತರವನ್ನು ಹೋಲುವ ಸೊಂಟದ ಸುತ್ತ ಸುತ್ತಿಕೊಳ್ಳುವ ಉದ್ದಾದ ಬಟ್ಟೆಯು ಅಂದು ಪ್ರಧಾನವಾಗಿತ್ತು.

ಆಧುನಿಕ ಕಾಲದಲ್ಲಿಯ ವೇಷ-ಭೂಷಣಗಳು ಪ್ರಾಚೀನ ಕಾಲಕ್ಕಿಂತಲೂ ವೈವಿಧ್ಯಮಯವಾಗಿವೆ. ಜಾತಿ, ಧರ್ಮ, ವರ್ಗ, ಪಂಗಡಗಳ ತಾರತಮ್ಯತೆಯಿಲ್ಲದೆ ಎಲ್ಲರೂ ವಿಭಿನ್ನ ಉಡುಗೆ-ತೊಡಿಗೆಗಳನ್ನು ಧರಿಸುವುದು ಕಂಡುಬರುತ್ತವೆ. ಆದರೂ ಕೆಲವು ಸಂಪ್ರದಾಯಸ್ಥ ಕುಟುಂಬಗಳಲ್ಲಿ ಧರ್ಮದ ಸಂಪ್ರದಾಯದ ಪ್ರಕಾರ ಹಳೆಯ ಪದ್ಧತಿಯಲ್ಲಿಯೇ ವೇಷ-ಭೂಷಣಗಳನ್ನು ಧರಿಸುವುದು ಕಂಡು ಬರುತ್ತದೆ.

ಎಲ್ಲಾ ವರ್ಗದ ಜನರಲ್ಲಿ ಸಾಮಾನ್ಯವಾಗಿ ಕಂಡು ಬರುವ ಉಡುಗೆ ತೊಡುಗೆಯೆಂದರೆ ಹೆಂಗಸರು ಸೀರೆ, ಕುಪ್ಪಸ, ಬಳೆ, ಕಾಲುಂಗುರ, ಬೆರಳುಂಗುರ, ಮೂಗಬೊಟ್ಟು, ಓಲೆ ಮತ್ತು ವಿವಾಹಿತರಲ್ಲಿ ತಾಳಿ, ಇವಿಷ್ಟು ಸಾಮಾನ್ಯ ದಿನಗಳಲ್ಲಿ ಮಹಿಳೆಯರು ಧರಿಸುವ ಉಡುಗೆ-ತೊಡುಗೆಗಳಾಗಿವೆ. ಪುರುಷರು ಧೋತರ. ಅಥವಾ ಪಾಯಜಮ್, ಅಂಗಿಗಳನ್ನು ತೊಡುತ್ತಾರೆ. ಆದರೆ ಇತ್ತೀಚೆಗೆ ಧೋತರವನ್ನು ಉಡುವುದು ಕಡಿಮೆಯಾಗಿದೆ. ಯಾವುದಾದರೂ ವಿಶೇಷ ಸಂದರ್ಭಗಳಲ್ಲಿ ಹಬ್ಬ, ಮದುವೆ, ಜಾತ್ರೆಗಳ ಸಂದರ್ಭಗಳಲ್ಲಿ ಮಾತ್ರ ಧೋತರವನ್ನು ಉಡುತ್ತಾರೆ. ರೈತರು

ವಿಶೇಷವಾಗಿ ಕಿರು ಚೊನ್ನವನ್ನು ಹಾಕುವರು. ಇತ್ತಿಚೆಗೆ ಕೆಲವು ರೈತರು ಪ್ಯಾಂಟ್‌ಗಳನ್ನು ತೊಡುತ್ತಾರೆ ಅಥವಾ ಲುಂಗಿಯನ್ನು ಉಡುತ್ತಾರೆ.

ಮರಾಠರ ಸಾಮಾನ್ಯ ಉಡುಪು ಮತ್ತು ವಿಶೇಷ ಸಂದರ್ಭಗಳಲ್ಲಿ ತೊಡುವ ಉಡುಪು ಒಂದೇ ಆಗಿರುತ್ತದೆ. ಮಹಿಳೆಯರು ಕಚ್ಚೆಯನ್ನು ಹಾಕುತ್ತಾರೆ. ಗಂಡಸರು ಗಿಡ್ಡ ಚೋಣ್ಣವನ್ನು ತಲೆಗೆ ಪಟಗಾವನ್ನು ಸುತ್ತುತ್ತಾರೆ. ಮರಾಠರಲ್ಲಿ ಬೈಲುಗಂಬಾರರು ಎನ್ನುವ ಉಪಜಾತಿಯಲ್ಲಿ ಸಾಯುವ ಮನುಷ್ಯನ ಧೋತ್ರವನ್ನು ಕಳೆದು ಅವನಿಗೆ ಚಡ್ಡಿ ಹಾಕುವರು. ಇದಕ್ಕೆ ಕಾರಣ ಏನೆಂಬುದು ಗೊತ್ತಿಲ್ಲ. ಮಾರವಾಡಿಗಳಲ್ಲಿ ಗಂಡಸರು ತಲೆಯ ಮೇಲೆ ವಾಡಿಕೆಯಾಗಿ ಹತ್ತೆಂಟು ಮೊಳ ಉದ್ದವಾದ ಕೆಂಪು ಮುಂಡಾಸ ಸುತ್ತುವರು, ಹೆಣ್ಣು ಮಕ್ಕಳು ಬಲಕ್ಕೆ ಶರಗು ಹೊದ್ದುಕೊಳ್ಳುವರು. ಇವರು ಮೊಣಕೈವರೆಗೆ ಆನೆ ಹಲ್ಲಿನ ಬಳೆಗಳನ್ನು ಇಟ್ಟುಕೊಳ್ಳುವರು.

ಶೀಲವಂತರು, ಮಡಿವಂತರಾಗಿದ್ದು ಅವರ ವೇಷ-ಭೂಷಣಗಳಲ್ಲಿಯೂ ಬಹಳಷ್ಟು ಮಡಿವಂತಿಕೆ ಕಂಡು ಬರುತ್ತವೆ. ಮೈತುಂಬ ಬಟ್ಟೆಗಳನ್ನು ಹೊತ್ತುಕೊಳ್ಳುವರು. ಅಲ್ಲದೆ ಇವರು ಮೈಗೆಲ್ಲ ಹಚ್ಚೆ ಹಾಕಿಸಿಕೊಳ್ಳುವರು. ಕಾಲವಾಡಿಗಳು ಗಂಡುಗಚ್ಚೆಯ ದೋತರವನ್ನು ಉಡುತ್ತಾರೆ. ತಲೆಗೆ ಮಾರವಾಡಿಗಳಂತೆ ಮುಂಡಾಸ ಅಥವಾ ಟೊಪ್ಪಿಗೆಯನ್ನು ಧರಿಸುತ್ತಾರೆ. ಇತ್ತೀಚೆಗೆ ರುಮಾಲನ್ನು ಸುತ್ತಿಕೊಳ್ಳುತ್ತಾರೆ. ಮಹಿಳೆಯರು ಪರಕಾರವನ್ನು ತೊಟ್ಟುಕೊಂಡು ಮಾರವಾಡಿ ಹೆಣ್ಣುಮಕ್ಕಳಂತೆ ಕುಬ್ಬಸ ತೊಟ್ಟುಕೊಂಡು ಬಲಕ್ಕೆ ಶರಗು ಹೊದ್ದುಕೊಳ್ಳುತ್ತಾರೆ. ಬಳೆ, ಕುಂಕುಮಗಳನ್ನು ಬಳಸುತ್ತಾರೆ. ಆದರೆ ಮಂಗಳಸೂತ್ರವನ್ನು ಕಟ್ಟಿಕೊಳ್ಳುವುದಿಲ್ಲ. ಶಿವಾಜಿಯ ಕಾಲದಲ್ಲಿ ಮಹಾರಾಷ್ಟ್ರದಿಂದ ಕರ್ನಾಟಕಕ್ಕೆ ಬಂದು ನೆಲೆಸಿದವರಲ್ಲಿ ಆರೇರು ಬೆಳಗಾವಿಯಲ್ಲಿಯೂ ಕಂಡುಬರುತ್ತಾರೆ. ಇವರಲ್ಲಿ ಹಲವಾರು ಪಂಗಡಗಳಿದ್ದು ಮೂಲ ಆರೇರು ಅಂದರೆ ಉತ್ತಮ ಜಾತಿಯವರು ಜನಿವಾರವನ್ನು ಹಾಕಿಕೊಳ್ಳುವರು. ಆದರೆ ಹೆಚ್ಚಿನವರು ಮುರಿಗೆಯ ಮುಂಡಾಸ ಸುತ್ತುವರು. ಇನ್ನು ಕೆಲವರು ರುಮಾರು ಸುತ್ತಿಕೊಂಡು ಹೆಗಲ ಮೇಲೆ ಕಂಬಳಿಯನ್ನು ಮಡಿಕೆಯಾಗಿ ಇಟ್ಟುಕೊಳ್ಳುವರು. ಇತ್ತೀಚೆಗೆ ಪ್ಯಾಂಟು, ಪಾಯಜಮ್, ಗಿಡ್ಡ ಚೋಣ್ಣಗಳನ್ನು ಹಾಕಿಕೊಂಡು ತಲೆಗೆ ಪಟಗಾ ಸುತ್ತುವುದು ಸಾಮಾನ್ಯವಾಗಿದೆ. ಹೆಂಗಸರು ಕಚ್ಚೆ ಹಾಕಿ ಸೀರೆ ಉಟ್ಟುಕೊಳ್ಳುವರು. ಕುಂಕುಮವನ್ನು ದೊಡ್ಡದಾಗಿ ಹಚ್ಚಿಕೊಳ್ಳುತ್ತಾರೆ. ಕೆಲವು ಸಂಪ್ರದಾಯಸ್ಥ ಪುರುಷರಲ್ಲಿಯೂ ಕುಂಕುಮ, ನಾಮ, ಗಂಧದ ಬೊಟ್ಟು ಕಾಣಬಹುದು. ಮಹಿಳೆಯರು ಹೊರಗೆ ಬರಬೇಕಾದರೆ ಬುರುಕೆ ಇಲ್ಲದೆ ಬರುವುದಿಲ್ಲ.

ಕ್ಷತ್ರಿಯರಾದ ರಜಪೂತರಲ್ಲಿ ಆರೇರು ಜಾತಿಯವರ ಉಡುಗೆ ತೊಡುಗೆಗಳು ಕಂಡು ಬಂದರೂ ಕೆಲವು ವಿಶೇಷವಾದವುಗಳು ಕಂಡುಬರುತ್ತವೆ. ಇವರು ಕಚ್ಚೆ ಹಾಕುವುದಿಲ್ಲ. ರಜಪೂತ ಮಹಿಳೆಯ ಮುಖ್ಯ ಕುರುಹು ಆಕೆಯ ನತ್ತು. ದೊಡ್ಡ ಆಕಾರದಲ್ಲಿರುತ್ತದೆ. ಸುಮಾರು ಆರು ಇಂಚಿನಿಂದ ಒಂದು ಫೂಟು ವ್ಯಾಸವುಳ್ಳ ನತ್ತನ್ನು

ಮೂಗಿಗೆ ಇಟ್ಟುಕೊಳ್ಳುತ್ತಾರೆ. ಅದರ ಭಾರವನ್ನು ಎತ್ತಿ ಹಿಡಿಯುವುದಕ್ಕಾಗಿ ಅದಕ್ಕೆ ಚಿನ್ನದ ಸರಪಣಿಯನ್ನು ಹಚ್ಚಿ ಅದನ್ನು ಕೂದಲಿಗೆ ಇಲ್ಲವೆ ಕಿವಿಗೆ ಸಿಕ್ಕಿಸಿಕೊಳ್ಳುವರು.

ನಾಯರರು ಮಲಿಯಾಳದಿಂದ ಬಂದು ನೆಲೆಸಿದ್ದಾರೆ. ಇವರು ಬಹಳ ಮಡಿವಂತರು. ಗಂಡಸರು ನೆತ್ತಿಯ ಮೇಲೆ ಜಾವಳವನ್ನು ಕಾಯುವರು. ಹೆಂಗಸರ ಕಿವಿಯಲ್ಲಿಯ ಬೆಂಡುವಾಲಿಯ ತೂತು ಬಹಳ ದೊಡ್ಡದಾಗಿರುತ್ತವೆ. ಇವರಲ್ಲಿ ಗಂಡಸರು, ಹೆಂಗಸರು ಮುಂಡವೆಂಬ ವಸ್ತ್ರವನ್ನು ನಡುವಿಗೆ ಸುತ್ತಿಕೊಳ್ಳುವರು. ಹೆಂಗಸರು ಎದೆಯ ಮೇಲೆ ಬೇರೊಂದು ಸಣ್ಣ ಅರಿವೆಯನ್ನು ಕಟ್ಟಿಕೊಳ್ಳುತ್ತಾರೆ.

ಬೆಳಗಾವಿಯ ಪ್ರಮುಖ ಜಾತಿಗಳಲ್ಲಿ ಒಂದಾದ ಮುಸಲ್ಮಾನರ ಉಡುಗೆ–ತೊಡುಗೆಗಳು ಅವರನ್ನು ಪ್ರತ್ಯೇಕವಾಗಿ ಗುರುತಿಸುತ್ತವೆ. ತಮ್ಮ ಧರ್ಮಕ್ಕನುಗುಣವಾಗಿ ಅವರು ವೇಷ–ಭೂಷಣಗಳನ್ನು ಧರಿಸುತ್ತಾರೆ. ಹೆಚ್ಚಿನ ಮುಸ್ಲಿಮರು ಸಂಪ್ರದಾಯಬದ್ಧವಾದ ವೇಷ–ಭೂಷಣಗಳನ್ನು ಧರಿಸಿದರೆ ಕೆಲವರು ಪ್ರಾದೇಶಿಕ ಪ್ರಭಾವಕ್ಕೆ ಒಳಗಾಗಿ ಅಲ್ಲಿಯ ವೇಷ–ಭೂಷಣಗಳನ್ನು ಧರಿಸುತ್ತಾರೆ. ಇಂಥವರನ್ನು ಮುಸ್ಲಿಂರೆಂದು ಗುರುತಿಸಲಿಕ್ಕೂ ಸಾಧ್ಯವಾಗುವುದಿಲ್ಲ. ಮುಸ್ಲಿಂ ಧರ್ಮದಲ್ಲಿಯೂ ಹಲವಾರು ಜಾತಿ ಉಪಜಾತಿಗಳಿದ್ದರೂ ವೇಷ–ಭೂಷಣದಲ್ಲಿ ಅಲ್ಪ–ಸ್ವಲ್ಪ ವ್ಯತ್ಯಾಸಗಳನ್ನು ಹೊರತು ಪಡಿಸಿ ಎಲ್ಲವು ಒಂದೇ ತೆರನಾಗಿರುತ್ತವೆ.

ಮುಸ್ಲಿಂರಲ್ಲಿ ಪುರುಷರು ತಲೆಗೆ ಮುಂಡಾಸ ಹಾಕುವರು. ಇಲ್ಲವೆ ಪಟಕಾ ಸುತ್ತುವರು. ಸೈಯದರು ವಾಡಿಕೆಯಾಗಿ ಮುಂಡಾಸ ಹಾಕುವರು. ಬಹು ಜನರು ಇಜಾರುಗಳನ್ನು ಉದ್ದಂಗಿಗಳನ್ನು ಹಾಕುವರು.

ಹೆಣ್ಣ ಮಕ್ಕಳು ಇವರು ಮನೆ ಬಿಟ್ಟು ಹೊರಗೆ ಹೋಗಬೇಕಾದರೆ ಬುರಿಕೆ (ಗೋಶಾ) ಹಾಕಿಕೊಂಡೇ ಬರುತ್ತಾರೆ. ಕೈಗಳಿಗೆ ಬಳೆಗಳನ್ನು, ಕೊರಳಲ್ಲಿ ಕರೆಮಣಿಗಳ ಸರವನ್ನು ತೊಡುತ್ತಾರೆ. ಬೆಳ್ಳಿಯ ಸರಿಗೆ ಮುಂತಾದ ಆಭರಣಗಳನ್ನು ಹಾಕುತ್ತಾರೆ. ಶ್ರೀಮಂತರ ಆಭರಣಗಳು ವಾಡಿಕೆಯಾಗಿ ಹಿಂದೂ ಹೆಂಗಸರ ಆಭರಣಗಳಂತೆಯೇ ಇರುತ್ತವೆ. ತಲೆಗೆ ಅಲಂಕಾರವನ್ನು ಮಾಡಿಕೊಳ್ಳುವುದಿಲ್ಲ.

ಕ್ರೈಸ್ತಧರ್ಮದವರಲ್ಲಿ ಧರ್ಮದ ಸಾಂಪ್ರದಾಯಿಕ ಉಡುಗೆ ತೊಡುಗೆಗಳು ಕಂಡು ಬರುವುದಿಲ್ಲ. ಇವರು ದೇಶಿ ಉಡಿಗೆಯಲ್ಲಿಯೇ ಇರುತ್ತಾರೆ. ಪಾದ್ರಿಗಳು ಬಿಳಿ ನಿಲುವಂಗಿಯನ್ನು ಹಾಕಿಕೊಳ್ಳುತ್ತಾರೆ. ಸಾಮಾನ್ಯರು ಇಜಾರುಗಳನ್ನು ಹಾಕಿಕೊಳ್ಳುತ್ತಾರೆ. ಕೆಲವು ಮಹಿಳೆಯರು ಸೀರೆಯನ್ನು ಉಡುತ್ತಾರೆ. ಆದರೆ ಬಳೆಗಳನ್ನು ತೊಡುವುದಿಲ್ಲ. ಕರಾವಳಿ ಪ್ರದೇಶದಿಂದ ಬಂದು ನೆಲೆಸಿದ ಕ್ರಿಶ್ಚಿಯನ್ ಮಹಿಳೆಯರು ಕೊಂಕಣಿಗಳಂತೆ ಕೇಶಾಲಂಕಾರವನ್ನು ಮಾಡಿಕೊಂಡು ಹೂ ಮುಡಿಯುತ್ತಾರೆ. ಹೆಚ್ಚಿನ ಮಹಿಳೆಯರು ಪ್ಯಾಂಟು, ಟೀ ಶರ್ಟು, ಮಿಡಿಗಳನ್ನು ಧರಿಸುತ್ತಾರೆ. ಪುರುಷರು ದೋತ್ರವನ್ನು ಉಡುವುದಿಲ್ಲ. ಇವರಿಗೆ ಬಿಳಿ ಬಟ್ಟೆ ಎಲ್ಲಾ ಧಾರ್ಮಿಕ ಕಾರ್ಯಗಳಲ್ಲಿ ಮುಖ್ಯವಾಗಿ ಬೇಕಾಗುತ್ತದೆ.

ಹಿಂದೂಧರ್ಮದ ಮಹಿಳೆಯರಲ್ಲಿ ಸೀರೆ ಕೇವಲ ಉಡುಗೆಯಾಗಿ ಮಾತ್ರವಲ್ಲ ಅದೊಂದು ಧಾರ್ಮಿಕ ಶುಭ ಸಂಕೇತವೂ ಆಗಿದೆ. ಹಲವಾರು ಧಾರ್ಮಿಕ ಕಾರ್ಯಗಳಲ್ಲಿ ಸೀರೆಯನ್ನು ಬಳಸುತ್ತಾರೆ. ಸ್ತ್ರೀಯರು ಮುಖ್ಯ ಉಡಿಗೆ ಸೀರೆಯಾಗಿರುವುದರಿಂದ ಅದಕ್ಕೆ ದೈವತ್ವದ ಸ್ಥಾನವನ್ನು ಕಲ್ಪಿಸಿದ್ದಾರೆ. ಸೀರೆಯು ವಿವಾಹಿತ ಸ್ತ್ರೀಯರಿಗೆ ಮುತ್ತೈದೆತನದ ಸಂಕೇತವೂ ಆಗಿದೆ. ಮೈತುಂಬ ಸೀರೆಉಟ್ಟು ತಲೆಯ ಮೇಲೆ ಸೆರಗು ಹೊತ್ತು ಹಣೆಯ ಮೇಲೆ ಕುಂಕುಮವನ್ನಿಟ್ಟುಕೊಳ್ಳುವುದು ಒಳ್ಳೆಯ ಗರತಿಯ ಲಕ್ಷಣವೆಂಬ ಭಾವನೆಯಿದೆ. ಹೀಗಾಗಿ ಸೀರೆಗೆ ಅತ್ಯಂತ ಮಹತ್ವ ಬಂದಿದೆ.

ಸೀರೆಯ ಒಂದು ತುದಿಗೆ ಸೆರಗು ಮತ್ತೊಂದು ತುದಿಗೆ 'ದಡಿ' ಇವು ಸೀರೆಗೆ ಕಡ್ಡಾಯವಾಗಿ ಇರಲೇಬೇಕು. (ಆದರೆ ಈಗ ಇವೆರಡೂ ಇಲ್ಲದ ಸೀರೆಗಳೇ ಹೆಚ್ಚಾಗಿವೆ) ಅದರಲ್ಲಿಯೂ ಮದುವೆ, ಧಾರ್ಮಿಕ ಆಚರಣೆಗಳಲ್ಲಿ ಸೆರಗು ಇಲ್ಲದ ಸೀರೆ ಉಡುವುದಿಲ್ಲ. ಪೂಜೆ ಪುನಸ್ಕಾರ ಕೆಲವು ಸಂಪ್ರದಾಯಗಳ ಸಂದರ್ಭದಲ್ಲಿ ಸೀರೆಯ ಸೆರಗು ಮಹತ್ವ ಪಡೆದುಕೊಳ್ಳುತ್ತದೆ.

ವಧು ಪರೀಕ್ಷೆಯ ಸಮಯದಲ್ಲಿ ನೋಡಲು ಬಂದವರು ಹುಡುಗಿಯ ಉಡಿಯಲ್ಲಿ ಬಾಳೆಹಣ್ಣು, ಸಕ್ಕರೆ, ಎಲೆ ಅಡಿಕೆ, ಮಲ್ಲಿಗೆ ಹೂವುಗಳನ್ನು ಹಾಕುತ್ತಾರೆ. ಈ ಸಂದರ್ಭದಲ್ಲಿ ಸೀರೆಯನ್ನು ಕಡ್ಡಾಯವಾಗಿ ಧರಿಸಲೇ ಬೇಕಾಗುತ್ತದೆ. ವಸ್ತ್ರ – ವಡವೆಗಳಿಗೆ ಅತಿಪ್ರಾಮುಖ್ಯತೆ ಬರುವುದು ಮದುವೆಯ ಸಂಭ್ರಮದಲ್ಲಿ. ವಿಶೇಷವಾಗಿ ಎಲ್ಲಾ ಧರ್ಮ, ಜಾತಿಗಳಲ್ಲಿ ಇವು ಪ್ರಾಮುಖ್ಯತೆಯನ್ನು ಪಡೆದುಕೊಂಡಿರುತ್ತದೆ. ಗಂಡನ ಕಡೆಯವರು ವಧುವಿಗೆ ಸೀರೆಗಳನ್ನು ತರುವರು. ಹೆಣ್ಣಿನ ಕಡೆಯವರು ವರನಿಗೆ ವಸ್ತ್ರಗಳನ್ನು ಕೊಡವರು. ಕೆಲವು ಸಲ ತಮ್ಮ ತಮ್ಮ ಬಟ್ಟೆ ಬರೆಗಳನ್ನು ತಾವೇ ತೆಗೆದುಕೊಳ್ಳುತ್ತಾರೆ. ಮದುವೆಯ ಸಂದರ್ಭದಲ್ಲಿ ಹಲವಾರು ವಿಧಿವಿಧಾನಗಳು ನಡೆಯುತ್ತವೆ. ಒಂದೊಂದು ಕಾರ್ಯಕ್ಕೂ ಒಂದೊಂದು ಪ್ರತ್ಯೇಕವಾದ ಸೀರೆಯು ಬೇಕೇಬೇಕು. ಸಕ್ಕರಿ ಸೀರೆ, ಬಷ್ಟಗಿ ಸೀರೆ, ಅರಸಿನ ಸೀರೆ, ಸೋದರಮಾವನ ಸೀರೆ, ಅಕ್ಷತಾ ಸೀರೆ, ಗೋದಿ ಉಡಕ್ಕಿ ಸೀರೆ ಹೀಗೆ ಸೀರೆಯು ಮದುವೆ ಸಂಭ್ರಮದಲ್ಲಿ ಪ್ರಮುಖವಾಗಿರುತ್ತದೆ. ಅಲ್ಲದೆ ಗಂಡು ಹೆಣ್ಣಿನ ಎರಡೂ ಕಡೆಯವರು ತಮ್ಮ ತಮ್ಮ ಸಂಬಂಧಿಕರಿಗೆ ಸ್ನೇಹಿತರಿಗೆ ಎಲ್ಲರಿಗೂ ಸೀರೆಯನ್ನು ಉಡುಗರೆಯಾಗಿ ನೀಡುತ್ತಾರೆ. ಮದುವೆಗೆ ಬಂದವರೂ ಮದುಮಕ್ಕಳಿಗೆ ಮತ್ತು ಅವರ ತಂದೆ ತಾಯಿಗಳಿಗೆ ವಸ್ತ್ರ ವಡವೆಗಳನ್ನು ನೀಡುತ್ತಾರೆ. ಒಟ್ಟಿನಲ್ಲಿ ಮದುವೆ ಪ್ರಾರಂಭವಾದಾಗಿನಿಂದ ಮುಗಿಯುವವರೆಗೆ ಬಟ್ಟೆ ಬರೆಯ ಉಡುಗರೆಯೇ ಪ್ರಮುಖವಾಗಿ ಕಂಡು ಬರುತ್ತದೆ.

ಗರ್ಭಿಣೀಯರಿಗೆ ಕುಬಸದ ಕಾರ್ಯ ಮಾಡುವ ಸಂದರ್ಭದಲ್ಲಿ ಸೀರೆ, ಆಭರಣಗಳನ್ನು ಉಡುಗೊರೆಯಾಗಿ ನೀಡುತ್ತಾರೆ. ಗಂಡನ ಮನೆಯವರು ಸೀರೆಯನ್ನು ಕೊಡುತ್ತಾರೆ. ಅಲ್ಲದೆ ಬಂಧು-ಬಳಗದರೂ ಗರ್ಭಿಣಿಗೆ ಉಡುಗೊರೆಯಾಗಿ ಸೀರೆಯನ್ನು ನೀಡುತ್ತಾರೆ. ಮೊದಲ ಹೆರಿಗೆಗೆ ಪೂರ್ವದಲ್ಲಿ ಮಾತ್ರ ಕುಬಸವನ್ನು ಮಾಡುತ್ತಾರೆ.

ಮುಂದೆ ತವರುಮನೆಯಲ್ಲಿ ಹೆರಿಗೆ ಮುಗಿಸಿ ಗಂಡನ ಮನೆಗೆ ಹೋಗುವಾಗಲೂ ಹೊಸ ಸೀರೆಯನ್ನು ಮತ್ತು ಮಗುವಿಗೆ ಹೊಸವಸ್ತ್ರ ಒಡವೆಗಳನ್ನು ಗಂಡನ ಮನೆಯವರು ನೀಡುತ್ತಾರೆ.

ತವರುಮನೆಯಲ್ಲಿ ಹೆರಿಗೆಯಾದ ಸಂದರ್ಭದಲ್ಲಿ ಗಂಡನ ಮನೆಯವರು ಮಗುವನ್ನು ನೋಡಲು ಬರುವಾಗ ಮಗುವಿಗೆ ಹೊಸ ವಸ್ತ್ರ, ಒಡವೆಗಳನ್ನು ಮತ್ತು ತಾಯಿಗೆ ಹೊಸ ಸೀರೆಯನ್ನು ನೀಡುತ್ತಾರೆ. ಮಗುವಿನ ನಾಮಕರಣದಲ್ಲಿಯೂ ಈ ಉಡುಗರೆಯನ್ನು ನೀಡುತ್ತಾರೆ. ಹೀಗೆ ಸ್ತ್ರೀ ಮತ್ತು ಸೀರೆಯ ಸಂಬಂಧ ನಿರಂತರವಾಗಿ ಹಲವಾರು ಸಂದರ್ಭಗಳಲ್ಲಿ ಒದಗಿ ಬರುತ್ತದೆ.

ಧಾರ್ಮಿಕ ಆಚರಣೆಗಳಲ್ಲಿ ಹಬ್ಬ, ಉತ್ಸವ, ಜಾತ್ರೆ, ವ್ರತ, ಪೂಜೆಯ ಸಂದರ್ಭದಲ್ಲಿಯೂ ಹೊಸ ಬಟ್ಟೆಗಳನ್ನು ಉಡುಗರೆಯಾಗಿ ನೀಡುತ್ತಾರೆ. ಯುಗಾದಿ, ಗಣೇಶೋತ್ಸವ, ದೀಪಾವಳಿ, ಮಹಾನವಮಿ, ಮಕರಸಂಕ್ರಾಂತಿ, ಪಂಚಮಿ ಮುಂತಾದ ಸಂದರ್ಭಗಳಲ್ಲಿ ಮನೆಯವರೆಲ್ಲಾ ಹೊಸ ಬಟ್ಟೆಗಳನ್ನು ಧರಿಸುತ್ತಾರೆ. ಮುಸ್ಲಿಂರು ಮೊಹರಂ, ರಮಜಾನಗಳಲ್ಲಿ ಕ್ರಿಶ್ಚಿಯನರು ಕ್ರಿಸ್‌ಮಸ್‌ದಂದು ಹೊಸ ಬಟ್ಟೆಗಳನ್ನು ಉಡುತ್ತಾರೆ.

ಗ್ರಾಮದೇವತೆಯ ಜಾತ್ರೆಯ ಸಂದರ್ಭದಲ್ಲಿ ಗ್ರಾಮದೇವಿಗೆ 'ಉಡಿತುಂಬುವ' ಕಾರ್ಯ ನಡೆಯುತ್ತದೆ. ಈ ಸಂದರ್ಭದಲ್ಲಿ ದೇವಿಗೆ ಹೊಸ ಸೀರೆಯನ್ನು ಉಡಿಸಿ ಶೃಂಗಾರ ಮಾಡುವರು. ಗ್ರಾಮದೇವಿಗೆ ಅಷ್ಟೇ ಅಲ್ಲದೆ ಊರಿನ ಎಲ್ಲಾ ಹೆಣ್ಣು ದೇವರುಗಳಿಗೆ ಹೊಸ ಸೀರೆಯನ್ನು ಉಡುಸುವ ಪದ್ಧತಿಯನ್ನು ಕಾಣಬಹುದು. ಮನೆಯೊಳಗೆ ಮಾಡುವ ವರಲಕ್ಷ್ಮಿ ಪೂಜೆ, ಮಂಗಳ ಗೌರಿ ವೃತ, ಗಜಗೌರಿ ವೃತ ಮುಂತಾದ ಧಾರ್ಮಿಕ ಆಚರಣೆಗಳಲ್ಲಿ ದೇವಿಗೆ ಹೊಸ ಸೀರೆಯನ್ನು ಉಡಿಸುವುದು ಕಂಡುಬರುತ್ತದೆ. ಹೀಗೆ ಸೀರೆಯು ಶುಭ ಸಂಕೇತವಾಗಿ, ಬಂಧು ಬಳಗದ ಪ್ರೀತಿಯ ಉಡುಗೊರೆಯಾಗಿ ಬಳಕೆಗೊಳ್ಳುವುದು ಕಂಡುಬರುತ್ತದೆ.

ಆಧುನಿಕ ಫ್ಯಾಶನ್ ಲೋಕದಲ್ಲಿ ಸ್ತ್ರೀಯರ ವೈವಿಧ್ಯಮಯವಾದ ಉಡುಗೆಗಳು ಕಂಡುಬರುತ್ತಿವೆ. ಅದರಲ್ಲಿಯೂ ಬೆಳಗಾವಿಯಲ್ಲಿ ಫ್ಯಾಶನ್ ಎನ್ನುವುದು ಪ್ರತಿಷ್ಠಿತ ವಿಷಯವೂ ಆಗಿದೆ. ಬೆಳಗಾವಿ ನಗರ ಫ್ಯಾಶನ್ ಸ್ಪಂದನೆ ತೀವ್ರವಾಗಿದೆ. ಮೂರು ರಾಜ್ಯಗಳ ಗಡಿ ಸಂಧಿಸುವ ಕೇಂದ್ರ ಸ್ಥಳದಲ್ಲಿ ಬೆಳಗಾವಿ ಇರುವುದೇ ಇದಕ್ಕೆ ಮುಖ್ಯ ಕಾರಣ. ಕ್ರಿಶ್ಚಿಯನ್ ಸಂಸ್ಕೃತಿಯ ಮತ್ತು ಪೋರ್ಚಗೀಸ್ ಪ್ರಭಾವದ ಗೋವಾದ ಜನ ವ್ಯಾಪಾರಕ್ಕಾಗಿ ಬೆಳಗಾವಿ ಪೇಟೆಗೆ ನಿತ್ಯ ಬರುವುದರಿಂದ ಫ್ಯಾಶನ್ ಸಹಜವಾಗಿ ಒಗ್ಗುತ್ತ ಹೋಗಿದೆ. ಕೊಂಕಣ ಪ್ರದೇಶದ ಸಂಪರ್ಕವೂ ಇರುವುದರಿಂದ ವಿಶ್ವಕ್ಕೆ ಪರಿಚಯವಾದ ಹೊಸ ಫ್ಯಾಶನ್ ಬೆಳಗಾವಿಯಲ್ಲಿ ಬಹುಬೇಗನೆ ಕಾಲಿಡುತ್ತದೆ.

ಬೆಳಗಾವಿಯಲ್ಲಿ ಸೇನಾ ನೆಲೆ ಇರುವುದರಿಂದ ಬ್ರಿಟಿಷ್ ಕಾಲದಲ್ಲೂ ಫ್ಯಾಶನ್ ಅನುಭೂತಿ ಇತ್ತು. ಆದರೆ ದಂಡು ಪ್ರದೇಶ ಬಿಟ್ಟು ಅದು ಹೊರಗಡೆ ಅಷ್ಟು ಪರಿಚಿತವಿರಲಿಲ್ಲ. ೧೯೩೩ರಲ್ಲಿ ಲಿಂಗರಾಜ ಮಹಾವಿದ್ಯಾಲಯ

ಸ್ಥಾಪನೆಯಾದಾಗ ಕ್ರಮೇಣ ಅದು ಹೊರಗಡೆ ಕಾಲಿರಿಸಿತು. ೧೯೪೪ರಲ್ಲಿ ರಾಣಿ ಪಾರ್ವತಿದೇವಿ ಮಹಾವಿದ್ಯಾಲಯ ಸ್ಥಾಪನೆಗೊಂಡಾಗ ಜನಪ್ರಿಯವಾಗುತ್ತ ಹೋಗಿ ಈಗ ಫ್ಯಾಶನ್ ಸಹಜವೆನ್ನುವಂತಾಗಿದೆ. ಆಂಗ್ಲ ಸಂಸ್ಕೃತಿ ಎಲ್ಲರನ್ನೂ ಸೆಳೆದುಕೊಂಡಿದೆ. ಫ್ಯಾಶನ್ ಪ್ರಿಯತೆ ಬೆಳಗಾವಿ ಸುತ್ತಲಿನ ಪರಿಸರದ ಮೇಲೂ ಪ್ರಭಾವ ಬೀರಿದೆ. ಚಲನಚಿತ್ರಗಳು, ಮಾಧ್ಯಮಗಳೂ, ಫ್ಯಾಶನ್ ಬೆಳೆಯಲಿಕ್ಕೆ ಕಾರಣವಾಗಿದೆ. ಬೆಳಗಾವಿ ಪ್ರಮುಖ ಶಿಕ್ಷಣ ಕೇಂದ್ರವಾಗಿ ರೂಪಗೊಂಡಿರುವುದೂ ಫ್ಯಾಶನ್ ಬೆಳೆಯಲಿಕ್ಕೆ ಪ್ರಮುಖ ಕಾರಣವಾಗಿದೆ. ಎರಡು ವೈದ್ಯಕೀಯ ಕಾಲೇಜು, ಐದು ಇಂಜನಿಯರಿಂಗ್ ಕಾಲೇಜು ಮೂರು ದಂತವೈದ್ಯ ಕಾಲೇಜುಗಳು ಹೀಗೆ ಮಹತ್ವದ ಶಿಕ್ಷಣ ಕೇಂದ್ರಗಳಲ್ಲಿ ದೇಶ, ವಿದೇಶಗಳಿಂದ ಆಗಮಿಸುವ ವಿದ್ಯಾರ್ಥಿಗಳ ಹೊಸ ಫ್ಯಾಶನ್ ಬೆಳಗಾವಿ ಜನರಲ್ಲಿ ಅನುಕರಣೆಗೊಳ್ಳುತ್ತದೆ. ಬೆಳಗಾವಿ ಪರಿಸರದಲ್ಲಿ ಪ್ರಸಿದ್ಧ ವಸ್ತ್ರ ವಿನ್ಯಾಸಕರೂ ಇದ್ದಾರೆ. ಸಧ್ಯದ (Letest) ಫ್ಯಾಶನನ್ನು ಅವರು ಸಿದ್ಧಪಡಿಸಿಕೊಡುತ್ತಾರೆ. ವಿದ್ಯಾವಂತರ ಸಂಖ್ಯೆ ಹೆಚ್ಚಿರುವುದರಿಂದ ಫ್ಯಾಶನ್ ಎನ್ನುವುದು ಒಂದು ಸಂಸ್ಕೃತಿ ಎನ್ನುವಂತೆ ಬೆಳೆಯುತ್ತಿದೆ. ಬಹುಸಂಸ್ಕೃತಿಗಳಲ್ಲಿ ಅದೂ ಒಂದು ಸಂಸ್ಕೃತಿ ಎನ್ನುವಷ್ಟರ ಮಟ್ಟಿಗೆ ಇಂದು ಬೆಳೆದುನಿಂತಿದೆ. ಬೆಳಗಾವಿಗೆ ವಿವಿಧ ಕಡೆಗಳಿಂದ ವಲಸೆ ಬಂದು ನೆಲೆಸಿರುವ ಕುಟುಂಬಗಳು ಆರ್ಥಿಕ ಮತ್ತು ಶೈಕ್ಷಣಿಕವಾಗಿ ಸುಸ್ಥಿತಿಯಲ್ಲಿರುವುದರಿಂದ ಫ್ಯಾಶನ್ ನೆಲೆ ಕಂಡುಕೊಂಡಿದೆ.

ಬೆಳಗಾವಿಯಲ್ಲಿ ಬಟ್ಟೆ ಮಳಿಗೆಗಳು ಹೆಚ್ಚಿನ ಪ್ರಮಾಣದಲ್ಲಿವೆ. ಇತ್ತೀಚಿನ ದಿನಗಳಲ್ಲಿ ಸಿದ್ಧ ಉಡುಪುಗಳ ಮಳಿಗೆಗಳು ಹೆಚ್ಚಾಗಿವೆ. ಈಗ ಎನಿದ್ದರೂ 'ಬ್ರಾಂಡೆಡ್' ಅಂದರೆ ಪ್ರತಿಷ್ಠಿತ ಕಂಪನಿಗಳ ಸಿದ್ಧ ಉಡುಪುಗಳನ್ನು ಎಲ್ಲರು ಇಷ್ಟಪಡುತ್ತಾರೆ. ದೇಶ ವಿದೇಶಗಳ ಕಂಪನಿಗಳ ಸಿದ್ಧ ಉಡುಪುಗಳು ದೊರೆಯುತ್ತವೆ. ಚಿಕ್ಕಮಕ್ಕಳಿಗೆ, ಪುರುಷರಿಗೆ, ಮಹಿಳೆಯರಿಗೆ ಹೀಗೆ ಪ್ರತ್ಯೇಕವಾದ ಮಳಿಗೆಗಳು ಪ್ರಾರಂಭವಾಗಿವೆ. ಇದರಿಂದಲೂ ಫ್ಯಾಶನ್ ಹೆಚ್ಚಿಗೆ ಬೆಳೆಯಲು ಕಾರಣವಾಗಿದೆ. ಬೆಳಗಾವಿಯ ಜನರು ವಿದೇಶಿ ಕಂಪನಿಗಳ ಉಡುಪುಗಳನ್ನು ಹೆಚ್ಚು ಇಷ್ಟಪಡುತ್ತಾರೆ.

ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆಗಳಲ್ಲಿ ಸಮವಸ್ತ್ರವು ಮೊದಲಿನಿಂದಲೂ ಕಡ್ಡಾಯವಾಗಿದೆ. ಕೆಲವು ವೃತ್ತಿಪರ ಕಾಲೇಜುಗಳಲ್ಲಿ ಸಮವಸ್ತ್ರವನ್ನು ಕಡ್ಡಾಯಗೊಳಿಸಿದ್ದಾರೆ. ೧೯೩೦-೪೦ರ ದಶಕದಲ್ಲಿ ಶಾಲೆ-ಕಾಲೇಜುಗಳ ವೇಷ-ಭೂಷಣಗಳು ವಿಶೇಷವಾಗಿದ್ದವು. ಗಿಡ್ಡ ಚಲ್ಲಣ (ಚೊಣ್ಣ), ಅಂಗಿ, ತಲೆಯ ಮೇಲೆ ಟೊಪ್ಪಿಗೆ ಮತ್ತು ತಮ್ಮ ಧರ್ಮ ಸಂಕೇತಗಳನ್ನು ಧರಿಸಿಯೇ ಬರುತ್ತಿದ್ದರು.[೬] ಹಣೆಯ ಮೇಲೆ ನಾಮ-ವಿಭೂತಿ, ಕೊರಳಲ್ಲಿ ಜನಿವಾರ, ಶಿವದಾರ, ಲಿಂಗ ಹೀಗೆ ಜಾತಿ ಧರ್ಮಕ್ಕನುಗುಣವಾಗಿ ಧರಿಸುತ್ತಿದ್ದರು. ಕಾಲೇಜುಗಳಲ್ಲಿ ಹುಡುಗಿಯರು ಸೀರೆಗಳನ್ನೇ ಉಟ್ಟುಕೊಂಡು ಬರುತ್ತಿದ್ದರು. ಮರಾಠಿ ಶಾಲೆಗಳಲ್ಲಿ ಪಗಡಿಗಳು, ಟೊಪ್ಪಿಗೆಗಳನ್ನು ಹಾಕುತ್ತಿದ್ದರು. ಉರ್ದು ಶಾಲೆಗಳಲ್ಲಿ ಎತ್ತರವಾದ ಕೆಂಪು ಟೊಪ್ಪಿಗೆ, ಅದಕ್ಕೆ ಗೊಂಡೆ, ಇಲ್ಲವಾದರೆ ಮೆತ್ತಗಿನ ಫರ್‌ಕ್ಯಾಪ್ ಹಾಕಿಕೊಂಡು ಬರುತ್ತಿದ್ದರು. ಇಂದು ಕಾನ್ವೆಂಟ್ ಶಾಲೆಗಳು ಪೈಪೋಟಿಗೆ ಇಳಿದಿದ್ದು ವಿದ್ಯಾರ್ಥಿಗಳ ಆಕರ್ಷಣೆಗಾಗಿ ವಿಭಿನ್ನ ವಿನ್ಯಾಸದ ಸಮವಸ್ತ್ರಗಳನ್ನು

ಹೊಂದಿವೆ. ಕೆಲವೊಂದು ಶಾಲೆಗಳಲ್ಲಿ ಒಂದೊಂದು ದಿನಕ್ಕೆ ಒಂದೊಂದು ತರಹದ ಸಮವಸ್ತ್ರವನ್ನು ಧರಿಸುವ ನಿಯಮ ಮಾಡಿದ್ದಾರೆ. ಕೋಟು, ಪ್ಯಾಂಟು, ಬೆಲ್ಟು, ಕೊರಳಲ್ಲಿ ಪಟ್ಟಿ, ಬ್ಯಾಚ್ ಇವು ಸಾಮಾನ್ಯವಾಗಿ ಎಲ್ಲಾ ಶಾಲೆಗಳಲ್ಲಿ ಕಂಡುಬರುತ್ತಿವೆ. ಜೊತೆಗೆ ವಾರ್ಷಿಕ ದಿನಾಚರಣೆ, ಸಾಂಸ್ಕೃತಿಕ ಕಾರ್ಯಕ್ರಮ, ಬೀಳ್ಕೊಡುವ ಸಮಾರಂಭ ಮುಂತಾದ ಕಾರ್ಯಕ್ರಮಗಳು ಜರುಗಿ ಫ್ಯಾಶನ್ ಬಟ್ಟೆಗಳ ಪ್ರದರ್ಶನಕ್ಕೆ ವೇದಿಕೆ ನಿರ್ಮಾಣಗೊಳ್ಳುತ್ತದೆ.

ಬೆಳಗಾವಿಗೆ ಬಂದವರು ಫ್ಯಾಶನ್ ಸಂಸ್ಕೃತಿಗೆ ಸಹಜವಾಗಿ ಸೇರುತ್ತಾರೆ. ಪಿ.ಯು.ಸಿ. ಕಲೆಯಲು ಬೇರೆ ಬೇರೆ ಊರುಗಳಿಂದ ಬರುವ ವಿದ್ಯಾರ್ಥಿಗಳು ಬರುವಾಗ ಹಳ್ಳಿಯ ವೇಷ ಭೂಷಣದಲ್ಲಿಯೇ ಬರುತ್ತಾರೆ. ಆದರೆ ಆರು ತಿಂಗಳು ಕಳೆಯುವುದರೊಳಗಾಗಿ ಬೆಳಗಾವಿಯ ಫ್ಯಾಶನ್ ಮೋಡಿಗೆ ಸಿಲುಕಿ ಹೊಸ ರೂಪವನ್ನು ತಾಳುತ್ತಾರೆ. ಮಾತು, ನಡಿಗೆ, ಉಡಿಗೆ, ತೊಡುಗೆ ಎಲ್ಲವೂ ಬದಲಾಗುವುದನ್ನು ಕಾಣಬಹುದು. ವಿದ್ಯಾರ್ಥಿಗಳು ಸಹಜವಾಗಿ ಫ್ಯಾಶನ್ ಸೆಳೆತಕ್ಕೆ ತೆರೆದುಕೊಳ್ಳುತ್ತಾರೆ.

ಬೆಳಗಾವಿಯ ಕಾಲೇಜು ಹುಡುಗಿಯರು ಹೆಚ್ಚಿಗೆ ಜಿನ್ಸ್ ಪ್ಯಾಂಟ್, ಮತ್ತು ಟೀ ಶರ್ಟ ಇಷ್ಟಪಡುತ್ತಾರೆ. ಅದರಲ್ಲಿಯೂ ಸಾಯನ್ಸ್ ಮತ್ತು ಕಾಮರ್ಸ ವಿಭಾಗದ ವಿದ್ಯಾರ್ಥಿಗಳು ಹೆಚ್ಚು ಪ್ಯಾಂಟ ಇಷ್ಟಪಡುತ್ತಾರೆ. ಬೆಳಗಾವಿಯಲ್ಲಿ ವಿಭಿನ್ನ ಮಾದರಿಯ ಉಡುಗೆಗಳನ್ನು ನೋಡಬೇಕೆಂದರೆ ಸಾಯಂಕಾಲದ ಹೊತ್ತಿಗೆ ನಗರದ ಹೃದಯಭಾಗದಲ್ಲಿರುವ ರಾಮದೇವಗಲ್ಲಿ, ಕಿರ್ಲೋಸ್ಕರ ರಸ್ತೆ, ಮಾರುತಿಗಲ್ಲಿ, ಗಣಪತಿಗಲ್ಲಿ, ಖಡೇ ಬಜಾರಗಳಲ್ಲಿ ಸುತ್ತಬೇಕು; ಸಾಯಂಕಾಲದ ಹೊತ್ತಿಗೆ ಬೆಳಗಾವಿ ನಗರದ ಜನರು ಸುತ್ತಾಡಲು, ಸಾಮಾನುಗಳನ್ನು ಖರೀದಿಸಲು, ಟೀ, ಕಾಫಿ, ಆಯಸ್ಕ್ರೀಮ ತಿನ್ನಲು ಈ ಪ್ರದೇಶಗಳಲ್ಲಿ ಸುತ್ತುತ್ತಿರುತ್ತಾರೆ. ಯಾವುದೇ ಭಾಷೆ, ಜಾತಿ, ಧರ್ಮದ ಗೊಂದಲವಿಲ್ಲದ ವಾತಾವರಣವೊಂದು ಈ ಸಂದರ್ಭದಲ್ಲಿ ನಿರ್ಮಾಣವಾಗಿರುತ್ತದೆ. ಜೊತೆಗೆ ವಿಭಿನ್ನ ವೇಷ-ಭೂಷಣಗಳ ಪ್ರದರ್ಶನವೂ ಆಗುತ್ತದೆ.

ಒಟ್ಟಿನಲ್ಲಿ ಹೊಸ ವಿನ್ಯಾಸದ ವೇಷ-ಭೂಷಣಗಳ ಬಳಕೆಯಿಂದ ಬೆಳಗಾವಿಯ ಸಾಂಸ್ಕೃತಿಕ ವಲಯದಲ್ಲಿ ವಿಕಾಸವುಂಟಾಗಿರುವುದನ್ನು ಕಾಣಬಹುದು. ಒಂದು ಶತಮಾನದ ಹಿಂದೆ ಗ್ರಾಮೀಣ ಸಂಸ್ಕೃತಿಯನ್ನು ಹೊಂದಿದ್ದ ಬೆಳಗಾವಿಯು ಆಧುನಿಕ ನಗರ ಸಂಸ್ಕೃತಿಯನ್ನು ಹೊಂದಿದ್ದು ಇಲ್ಲಿಯ ವೇಷ-ಭೂಷಣಗಳಿಂದ ಕಂಡು ಬರುತ್ತದೆ. ಬೆಳಗಾವಿ ಶಿಕ್ಷಣ, ವಾಣಿಜ್ಯ, ಸಾಂಸ್ಕೃತಿಕ ವಲಯಗಳಲ್ಲಿ ಬದಲಾವಣೆಗೊಂಡಿದ್ದನ್ನು ಇಲ್ಲಿಯ ಜನರ ವೇಷ-ಭೂಷಣಗಳು ಸಂಕೇತಿಸುತ್ತವೆ.

**೩. ಊಟ-ಉಪಚಾರ :**

ಆಹಾರ ಮಾನವನ ಜೀವನದ ಬಹುಮುಖ್ಯವಾದ ಅಂಶವಾಗಿದೆ. ಆಹಾರದ ಉತ್ಪಾದನೆ, ಬಳಕೆ, ಮನುಷ್ಯನ ಸಾಮಾಜಿಕ ಮತ್ತು ಆರ್ಥಿಕ ಜೀವನದ ಬೆಳವಣಿಗೆಯನ್ನು ಸೂಚಿಸುವ ಪ್ರಮುಖ ಲಕ್ಷಣವಾಗಿದೆ.

ಆಹಾರ ಪದ್ಧತಿ ಮಾನವನ ದೇಹಶಕ್ತಿ ಮತ್ತು ಬುದ್ಧಿಶಕ್ತಿಯೊಂದಿಗೆ ಹಾಸುಹೊಕ್ಕಾಗಿದೆ. ಅಡುಗೆ ಪದ್ಧತಿ ಒಂದು ಪ್ರದೇಶದ ಸಂಸ್ಕೃತಿಯ ಹಲವಾರು ಅಂಶಗಳನ್ನು ಹೊರಗೆಡವುತ್ತದೆ. ಅಡುಗೆಗೆ ಬಳಸುವ ವಸ್ತುಗಳು, ತಯಾರಿಸುವ ವಿಧಾನ. ಉಪಯೋಗಿಸುವ ಬಗೆ, ಶೇಖರಿಸುವ ರೀತಿ, ಅಡುಗೆಗಳ ಹೆಸರುಗಳು ದೇಶದಿಂದ ದೇಶಕ್ಕೆ, ಸಮಾಜದಿಂದ ಸಮಾಜಕ್ಕೆ ಕಾಲದಿಂದ ಕಾಲಕ್ಕೆ ಬೇರೆ ಬೇರೆಯಾಗಿರುತ್ತವೆ. ಇಂದು ಅಡಿಗೆ ದೇಹಕ್ಕೆ ಚೈತನ್ಯ ನೀಡುವಂಥ ವಸ್ತುವಾಗಿ ಮಾತ್ರ ಉಳಿದಿಲ್ಲ. ಅದು ಕಲೆಯಾಗಿ ಉದ್ಯಮವಾಗಿ ಅರಳಿದೆ.

ಬೆಳಗಾವಿ ಬಹು ಸಂಸ್ಕೃತಿಯ ಸಂಗಮವಾಗಿದೆ. ಮಹಾರಾಷ್ಟ್ರ, ಗೋವಾ, ಗುಜರಾತ, ಮುಂತಾದ ಹೊರ ರಾಜ್ಯಗಳ ಜನರು, ಕರ್ನಾಟಕದ ಕರಾವಳಿ ಪ್ರದೇಶ, ಮಲೆನಾಡು, ಬಯಲು ಪ್ರದೇಶದ ಜನರು ಬೆಳಗಾವಿಯಲ್ಲಿ ನೆಲೆಸಿದ್ದರಿಂದ ಅಡುಗೆಯಲ್ಲಿ ವೈವಿಧ್ಯತೆ ಸಹಜವಾಗಿ ಕಂಡು ಬರುತ್ತದೆ. ಮಲೆನಾಡಿನ ಸೆರಗಿನಲ್ಲಿ ಬರುವ ಬೆಳಗಾವಿಯು ಫಲವತ್ತಾದ ಭೂಮಿಯನ್ನು ಹೊಂದಿದೆ. ಕಪ್ಪು ಮಣ್ಣಿನ ಎರೆ ಭೂಮಿ ಹಾಗೂ ಕೆಂಪು ಮಣ್ಣಿನ ಮಸಾರಿ ಭೂಮಿ ಎರಡನ್ನೂ ಹೊಂದಿದೆ. ಹೀಗಾಗಿ ವಿವಿಧ ಬೆಳೆಗಳು, ತರಕಾರಿಗಳು ಈ ಭೂಮಿಯಲ್ಲಿ ಬೆಳೆಯುತ್ತವೆ. ಬೆಳೆವ ಬೆಳೆ ಒಂದೇ ಆಗಿದ್ದರೂ ಅಡುಗೆಯನ್ನು ತಯಾರಿಸುವಲ್ಲಿ ವಿಭಿನ್ನತೆಯನ್ನು ಕಾಣಬಹುದಾಗಿದೆ. ಶ್ರೀಮಂತರು ಎಣ್ಣೆ, ಮಸಾಲೆಗಳನ್ನು ಹೆಚ್ಚು ಉಪಯೋಗಿಸಿದರೆ, ಸಾಮಾನ್ಯ ಜನರು ಕಡಿಮೆ ಪ್ರಮಾಣದಲ್ಲಿ ಬಳಸುತ್ತಾರೆ. ಅಲ್ಲದೆ ಜಾತಿ–ಧರ್ಮಗಳ ಹಿನ್ನೆಲೆಯೂ ಅಡಿಗೆ ತಯಾರಿಕೆ ಭಿನ್ನ ಪಾತ್ರವಹಿಸುತ್ತದೆ. ಬ್ರಾಹ್ಮಣರು ಅಡಿಗೆಗೆ ಉಪ್ಪು–ಖಾರಗಳನ್ನು ಕಡಿಮೆ ಬಳಸಿದರೆ ಉಳಿದವರು (ಲಿಂಗವಂತರು, ಮರಾಠರು ಮುಂತಾದವರು) ಹೆಚ್ಚು ಖಾರ–ಉಪ್ಪುಗಳನ್ನು ಬಳಸುತ್ತಾರೆ. ಇದರಿಂದ ಅಡಿಗೆಯ ರುಚಿಯಲ್ಲಿ ವೈವಿಧ್ಯತೆ ಕಂಡು ಬರುತ್ತದೆ. ಇನ್ನು ಹಬ್ಬ, ಉತ್ಸವ, ಜಾತ್ರೆ, ಆಚರಣೆಯಲ್ಲಿ ಧರ್ಮ–ಜಾತಿಗನುಗುಣವಾಗಿ ಬೇರೆ ಬೇರೆ ವಿಶೇಷವಾದ ಆಹಾರ ಪದಾರ್ಥಗಳು ಬಳಸಲ್ಪಡುತ್ತವೆ. ಕೆಲವು ಧರ್ಮಗಳಲ್ಲಿ ಮಾಂಸಾಹಾರವು ದಿನನಿತ್ಯದ ಊಟವಾಗಿರುತ್ತದೆ. ಇನ್ನು ಕೆಲವರು ವಿಶೇಷವಾದ ಸಂದರ್ಭಗಳಲ್ಲಿ ಮಾಂಸವನ್ನು ಬಳಸುತ್ತಾರೆ. ಕುರಿ, ಕೋಳಿ, ಮೀನು, ಹಂದಿ, ಪಶು–ಪಕ್ಷಿಗಳ ಆಹಾರವನ್ನು ಬಳಸುತ್ತಾರೆ. ಹೀಗೆ ವಿಭಿನ್ನವಾದ ಆಹಾರದ ಬಳಕೆ ಬೆಳಗಾವಿಯಲ್ಲಿ ಕಂಡು ಬರುತ್ತದೆ.

ಬೆಳಗಾವಿಯ ಪ್ರಮುಖ ಬೆಳೆಗಳಾದ ಭತ್ತ, ಕಬ್ಬು, ಗೋದಿ, ಜೋಳ, ಕಡಲೆ, ಶೇಂಗಾ ಮುಂತಾದ ಬೆಳೆಗಳು ಪ್ರಸಿದ್ಧಿಯನ್ನು ಪಡೆದುಕೊಂಡಿವೆ. ಬೆಳಗಾವಿಯ ಬಾಸುಮತಿ ಅಕ್ಕಿಯಂತೂ ದೇಶ–ವಿದೇಶಗಳಿಗೂ ರಫ್ತಾಗುತ್ತದೆ. ಅಲ್ಲದೆ ವಿವಿಧ ತರಕಾರಿಗಳ ಬೆಳೆಗೆ ಬೆಳಗಾವಿ ಪ್ರಸಿದ್ಧಿಯನ್ನು ಹೊಂದಿದೆ. ಮಹಾರಾಷ್ಟ್ರ, ಗೋವಾ ರಾಜ್ಯಗಳಿಗೂ ಇಲ್ಲಿನ ತರಕಾರಿ ರಫ್ತಾಗುತ್ತದೆ. ಹೀಗಾಗಿ ಇಲ್ಲಿಯ ಬೆಳೆಗಳ ಹಿನ್ನೆಲೆಯಲ್ಲಿ ಬೆಳಗಾವಿ ಜನರ ಊಟೋಪಚಾರ ಅವಲಂಬಿತವಾಗಿದೆ. ಬೆಳಗಾವಿಯ ಪ್ರಸಿದ್ಧ ತಿಂಡಿ–ತಿನಿಸುಗಳು ಇಲ್ಲಿಯ ಕಚ್ಚಾ ಉತ್ಪನ್ನಗಳಿಂದ ತಯಾರಾಗುತ್ತವೆ.

ಸದಾ ಹಚ್ಚ ಹಸಿರಿನಿಂದ ಕೂಡಿದ ಗುಡ್ಡ ಬೆಟ್ಟಗಳಿರುವುದರಿಂದ ದನಕರುಗಳು ಹೆಚ್ಚಿನ ಪ್ರಮಾಣದಲ್ಲಿರುವವು. ಇದರಿಂದ ಹಾಲು ಉತ್ಪಾದನೆ ಹೆಚ್ಚಾಗಿದೆ. ಈ ಹಾಲಿನಿಂದ ಜಗತ್ ಪ್ರಸಿದ್ಧವಾದ 'ಕುಂದಾ' ತಯಾರಾಗುತ್ತದೆ. ಅಲ್ಲದೆ ಮಾವಿನ ಗಿಡಗಳು ವಿಫುಲವಾಗಿ ಬೆಳೆದು ಬೆಳಗಾವಿಯು ಉಪ್ಪಿನಕಾಯಿ ತಯಾರಿಕೆಯಲ್ಲಿ ದೇಶ, ವಿದೇಶಗಳಲ್ಲಿ ಪ್ರಸಿದ್ಧಿಯನ್ನು ಪಡೆದಿದೆ. ಹೀಗಾಗಿ ಬೆಳಗಾವಿಯ ಆಹಾರದಲ್ಲಿ ವೈವಿಧ್ಯತೆ ಕಂಡುಬರುತ್ತದೆ.

ಬೆಳಗಾವಿ ಊಟದಲ್ಲಿ ಎರಡು ಪ್ರಕಾರದ ಊಟವು ಕಂಡು ಬರುತ್ತದೆ. ಗ್ರಾಮೀಣ ಪರಿಸರದ ಊಟ, ನಗರದ ಪ್ರದೇಶದ ಊಟ, ಹೀಗೆ ಎರಡು ತೆರನಾಗಿ ಬಳಸಲ್ಪಡುತ್ತದೆ. ಹೆಚ್ಚಾಗಿ ಗ್ರಾಮೀಣ ಪ್ರದೇಶದ ಊಟವನ್ನೇ ಎಲ್ಲ ಮನೆಗಳಲ್ಲಿ ಬಳಸುತ್ತಾರೆ.

ಬೆಳಗಾವಿ ಪ್ರದೇಶದ ಆಹಾರವನ್ನು ೩ ರೀತಿಯಲ್ಲಿ ವಿಂಗಡಿಸಿಕೊಳ್ಳಬಹುದು. ೧. ತಿಂಡಿ-ತಿನಿಸು ೨. ದಿನನಿತ್ಯದ ಊಟ ೩. ಹಬ್ಬ-ಹರಿದಿನದ ವಿಶೇಷ ಸಂದರ್ಭದ ಊಟ.

೧. ತಿಂಡಿ-ತಿನಿಸು: ಉಪ್ಪಿಟ್ಟ ಬೆಳಗಾವಿಯ ವೈಶಿಷ್ಟ್ಯ. ಬೆಳಗಾವಿ ಪ್ರದೇಶದಲ್ಲಿ ಗೋದಿ, ಸದಕು, ನವಣೆ ಮುಂತಾದ ಧಾನ್ಯಗಳನ್ನು ಹೆಚ್ಚಾಗಿ ಬೆಳೆಯುವುದುರಿಂದ ಇವುಗಳಿಂದ ತಯಾರಿಸಿದ ಉಪ್ಪಿಟ್ಟುನ್ನು ಎಲ್ಲ ಜನಾಂಗದವರು ಬಳಸುತ್ತಾರೆ. ಸಾಮಾನ್ಯವಾಗಿ ಮುಂಜಾನೆ ಉಪಹಾರದಲ್ಲಿ ಇದು ಬಳಕೆಯಾಗುತ್ತದೆ.

ಪೋವೆ: ಮಹಾರಾಷ್ಟ್ರದ ಪ್ರಭಾವದಿಂದ ಬೆಳಗಾವಿಯಲ್ಲಿ ಈ ತಿಂಡಿಯನ್ನು ಹೆಚ್ಚಾಗಿ ಬೆಳಸುತ್ತಾರೆ. ಬೆಳಗಾವಿಯಲ್ಲಿ ಹೆಚ್ಚು ಭತ್ತ ಬೆಳೆಯುವುದರಿಂದ ಪೋವೆ(ಅವಲಕ್ಕಿ)ಯನ್ನು ಬಳಸುತ್ತಾರೆ.

ಮಿಸಳ್: ಇದು ಬೆಳಗಾವಿಯ ವಿಶೇಷ ತಿಂಡಿಯಾಗಿದೆ. ಮಹಾರಾಷ್ಟ್ರದ ಪ್ರಭಾವವು ಬೆಳಗಾವಿಯ ತಿಂಡಿ ತಿನಿಸುಗಳ ಮೇಲೆ ಹೆಚ್ಚಾಗಿದೆ. ಬೆಳಗಾವಿಯ ಸುತ್ತ ಮುತ್ತಲೂ ಬೆಳೆಯುವ ದವಸ ಧಾನ್ಯಗಳಿಂದ ಬೆಳಗಾವಿಯ ತಿಂಡಿ ತಿನಿಸುಗಳು ವಿಶಿಷ್ಟವಾಗಿ ಸಿದ್ಧವಾಗುತ್ತವೆ. ಮಿಸಳದಲ್ಲಿ ಕಡ್ಲಿ, ವಟಾಣಿ, ಬಡಗಡ್ಲಿ, ಅಲಸಂದಿ, ಹೆಸರು ಮೊದಲಾದ ನಾಲ್ಕರಿಂದ ಐದರ ವರೆಗೆ ಧಾನ್ಯಗಳ ಕೂಡಿಸಿ ತಯಾರಿಸುತ್ತಾರೆ. ಬೆಳಗಾವಿಗೆ ಬಂದ ಬೇರೆ ಊರಿನ ಜನರು ಮಿಸಳವನ್ನು ತಿನ್ನದೆ ಹೋಗುತ್ತಿರಲಿಲ್ಲ. ಮಿಸಳದ ಜೊತೆಗೆ ಬ್ರೆಡ್, ಚಪಾತಿ ಮುಂತಾದವುಗಳನ್ನು ಸೇರಿಸಿ ತಿನ್ನುವರು.

ಮಹಾರಾಷ್ಟ್ರದ ಪ್ರಭಾವದಿಂದಾಗಿ ಬೆಳಗಾವಿಯಲ್ಲಿ ಕಂಡು ಬರುವ ವಿಶೇಷ ತಿಂಡಿಗಳಾದ ಪಾವಭಾಜಿ, ಮಿರ್ಜಿಭಜಿ, ವಡಾಫಾವ್, ಬೇಲ್‌ಪುರಿ, ಸೇವಪುರಿ ಇತ್ಯಾದಿಗಳನ್ನು ವಿಶೇಷವಾಗಿ ಉಪಯೋಗಿಸುತ್ತಾರೆ.

೨. ದಿನನಿತ್ಯದ ಊಟ: ಸಾಮಾನ್ಯವಾಗಿ ಎಲ್ಲಾ ಜನಸಮುದಾಯದವರ ದಿನನಿತ್ಯದ ಊಟವು ಒಂದೇ ತೆರನಾಗಿ ಕಂಡು ಬಂದರೂ ಮಾಡುವ ವಿಧಾನದಲ್ಲಿ ವೈವಿಧ್ಯತೆ ಕಂಡುಬರುತ್ತದೆ. ದಿನನಿತ್ಯದ ಆಹಾರಕ್ಕೆ ಸಂಬಂಧಿಸಿದಂತೆ

ರೊಟ್ಟಿ ಮತ್ತು ಅನ್ನ ಪ್ರಧಾನವಾಗಿ ಬಳಸಲ್ಪಡುತ್ತದೆ. ಇದರ ಜೊತೆಗೆ ಉಪ್ಪಿಟ್ಟು, ಪೋವೆ, ಇಡ್ಲಿ, ದೋಸೆ, ಮಿಸಳ್ ಮುಂತಾದವುಗಳನ್ನು ದಿನನಿತ್ಯದ ಆಹಾರವನ್ನಾಗಿ ಜನ ಉಪಯೋಗಿಸುತ್ತಾರೆ.

ರೊಟ್ಟಿ: ಜೋಳದ ಹಿಟ್ಟಿನಿಂದ ತಯಾರಿಸಿದ ರೊಟ್ಟಿಯ ಬಳಕೆಯು ಎಲ್ಲಾ ವರ್ಗದ ಜನರಲ್ಲಿ ಕಂಡುಬರುತ್ತದೆ. ಕೆಲವರು ಅಕ್ಕಿ, ಸಜ್ಜೆಯ ಹಿಟ್ಟಿನಿಂದಲೂ ರೊಟ್ಟಿನ್ನು ಮಾಡುತ್ತಾರೆ. ಜೋಳದ ಬೆಳೆಗೆ ಪ್ರಸಿದ್ಧಿಯನ್ನು ಪಡೆದ ಬೆಳಗಾವಿ ಹಾಗೂ ಸುತ್ತಲಿನ ಪ್ರದೇಶದಲ್ಲಿ ಹಲವು ಪ್ರಕಾರದ ಜೋಳಗಳನ್ನು ಬೆಳೆಯುತ್ತಾರೆ. ಬಿಳಿಜೋಳ, ಕೆಂಪುಜೋಳ, ಮುಂಗಾರಿ ಜೋಳ, ಕಡಬಿನ ಜೋಳ, ಅಳ್ಳಿನ ಜೋಳ, ಕಾಡಿಗೆ ಜೋಳ, ಹವಾ ಜೋಳ–ಹೀಗೆ ಬೇರೆ ಬೇರೆ ಪ್ರಕಾರದ ಜೋಳಗಗಳು ಬೆಳೆಯಲ್ಪಡುತ್ತವೆ. ಹೆಚ್ಚಾಗಿ ಬಿಳಿ ಜೋಳವನ್ನು ಇಲ್ಲಿ ಬಳಸಲಾಗುತ್ತದೆ. ಬಿಳಿ ಜೋಳದ ಹಿಟ್ಟಿನಿಂದ ಮಾಡಿದ ರೊಟ್ಟಿಗಳು ರುಚಿಯಾಗಿ ಮತ್ತು ಬೇಗ ಪಚನವಾಗುವುದರಿಂದ ಈ ಜೋಳದ ರೊಟ್ಟಿಯನ್ನು ಹೆಚ್ಚಾಗಿ ಬಳಸುತ್ತಾರೆ. ಕೆಲವರು ಸಜ್ಜೆ ರೊಟ್ಟಿಯನ್ನು ಮಾಡುವ ವಿಧಾನದಲ್ಲಿಯೂ ವೈವಿಧ್ಯತೆ ಕಂಡುಬರುತ್ತದೆ, ಹೀಗಾಗಿ ಹಲವು ಪ್ರಕಾರದ ರೊಟ್ಟಿಗಳು ದಿನನಿತ್ಯದ ಊಟದಲ್ಲಿ ಕಂಡುಬರುತ್ತವೆ. ಕೆದರಿದ ರೊಟ್ಟಿ, ಲಟ್ಟಿಸಿದ ರೊಟ್ಟಿ ಎಂದು ಜೋಳದ ರೊಟ್ಟಿಯ ಊಟವು ವಿಶೇಷವಾಗಿ ಉತ್ತರ ಕರ್ನಾಟಕದ ಊಟವಾಗಿದೆ. ಜೋಳದ ರೊಟ್ಟಿಯ ಊಟವಿಲ್ಲದಿದ್ದರೆ ಅದು ಊಟವೇ ಅಲ್ಲ ಎನ್ನುವಷ್ಟರ ಮಟ್ಟಿಗೆ ರೊಟ್ಟಿಯು ಪ್ರಾಧಾನ್ಯತೆಯನ್ನು ಪಡೆದುಕೊಂಡಿದೆ.

ವೀರಶೈವ, ಬ್ರಾಹ್ಮಣ ಧರ್ಮಗಳಲ್ಲಿ ಅಮವಾಸ್ಯೆಯಂದು ರೊಟ್ಟಿಯನ್ನು ಮಾಡುವುದಿಲ್ಲ. ಅಂದು ರೊಟ್ಟಿ ಮಾಡಿದರೆ ಜೀವನದಲ್ಲಿ ಕಷ್ಟ ಬರುತ್ತದೆ ಎನ್ನುವ ನಂಬಿಕೆ ಇದೆ. ಆದರೆ ಅಮವಾಸ್ಯೆಯ ಹಿಂದಿನ ದಿನ ಮಾಡಿದ ರೊಟ್ಟಿಯನ್ನು ತಿನ್ನಬಹುದು. ಶ್ರಾವಣ ಸೋಮವಾರಗಳಂದು ವಿಶೇಷವಾಗಿ ವೀರಶೈವರಲ್ಲಿ ರೊಟ್ಟಿಯನ್ನು ಮಾಡುವುದಿಲ್ಲ. ಅದರ ಬದಲಿಗೆ ಚಪಾತಿಯನ್ನು ಮಾಡಿ ಊಟ ಮಾಡುತ್ತಾರೆ. ಜಾತ್ರೆ, ಹಬ್ಬ, ಉತ್ಸವಗಳ ಸಂದರ್ಭಗಳಲ್ಲಿ ದೇವರಿಗೆ 'ವಾರ'ವನ್ನು ಬಿಡುವ ಪದ್ಧತಿಯು ಹಲವಾರು ಧರ್ಮ, ಜಾತಿಗಳಲ್ಲಿ ಕಂಡು ಬರುತ್ತದೆ. ವಿಶೇಷವಾಗಿ ಗ್ರಾಮದೇವತೆಯ ಜಾತ್ರೆಯ ಸಂದರ್ಭದಲ್ಲಿ ಈ 'ವಾರ'ನ್ನು ಬಿಡುವ ಪಪ್ಧತಿಯು ಕಂಡುಬರುತ್ತದೆ. ಸಾಮಾನ್ಯವಾಗಿ ಇದು ಗ್ರಾಮೀಣ ಪ್ರದೇಶಗಳಲ್ಲಿ ಇಂದಿಗೂ 'ವಾರ' ಬಿಡುವ ಪದ್ಧತಿಯು ಜಾರಿಯಲ್ಲಿದೆ. ಬೆಳಗಾವಿಯ ಕೆಲವು ಸಂಪ್ರದಾಯಸ್ಥ ಮನೆತನಗಳಲ್ಲಿ ಈ ಪದ್ಧತಿಯನ್ನು ಈಗಲೂ ಅನುಸರಿಸುತ್ತಾರೆ. ರಡ್ಡೇರ ಜನಾಂಗದಲ್ಲಿ ರೊಟ್ಟಿಯನ್ನು ಹೆಚ್ಚಾಗಿ ಬಡಿದು ಮಾಡಿಡುವುದಿಲ್ಲ. ರೊಟ್ಟಿಯನ್ನು ಬಡಿದು ಮಾಡುವುದರಿಂದ ತಿನ್ನುವ ಅನ್ನ ನೆತ್ತಿಯ ಮೇಲೆ ಬಡಿದಂತಾಗುತ್ತದೆ ಇದರಿಂದ ಪಾಪ ಬರುತ್ತದೆ ಎನ್ನುವ ನಂಬಿಕೆ ಇದೆ. ಅವರು ರೊಟ್ಟಿಯನ್ನು ಕೈಯಿಂದ ಅಥವಾ ಅದನ್ನು ಚಪಾತಿಯ ಹಾಗೆ ಲಟ್ಟಿಸಿಮಾಡುತ್ತಾರೆ.

ರೊಟ್ಟಿಯನ್ನು ಮೇಲಕ್ಕೆ ತೂರುವುದಾಗಲಿ, ಬೀಸಿ ಒಗೆಯುವುದಾಗಲಿ ಮಾಡಬಾರದು ಎನ್ನುವ ನಂಬಿಕೆ ವೀರಶೈವಧರ್ಮದಲ್ಲಿ ಕಂಡು ಬರುತ್ತದೆ. ಹೀಗೆ ಮಾಡುವುದರಿಂದ ಮನೆಯಲ್ಲಿ ಅನ್ನ ಕಡಿಮೆಯಾಗುತ್ತದೆ ಎನ್ನುವ

ನಂಬಿಕೆ ಇದೆ. ಹಸಿದು ಬಂದ ಭಿಕ್ಷುಕರಿಗೆ ತುತ್ತು ರೊಟ್ಟಿಯನ್ನು ನೀಡಿದರೆ ಪುಣ್ಯ ಬರುತ್ತದೆ ಎನ್ನುವ ನಂಬಿಕೆಯೊಂದು ಹಲವಾರು ಧರ್ಮಗಳಲ್ಲಿ ಕಂಡು ಬರುತ್ತದೆ.

ರೊಟ್ಟಿಯು ಶುಭ ಸಂಕೇತವಾಗಿಯೂ ಹಲವಾರು ಸಂಪ್ರದಾಯಗಳಲ್ಲಿ ಕಂಡು ಬರುತ್ತದೆ. ಮದುವೆಯಾದ ಕನ್ಯೆಯು ಹೊಸದಾಗಿ ಮೊದಲ ಬಾರಿಗೆ ಗಂಡನ ಮನೆಗೆ ಹೋಗಬೇಕಾದರೆ ತವರುಮನೆಯವರು 'ಬುತ್ತಿರೊಟ್ಟಿ'ಯನ್ನು ಕಟ್ಟಿಕೊಡುತ್ತಾರೆ. ಈ 'ಬುತ್ತಿರೊಟ್ಟಿ'ಯನ್ನು ಊರಿನ ಜನರಿಗೆಲ್ಲಾ ಹಂಚುತ್ತಾರೆ. ಇದು ಸಮೃದ್ಧಿಯ ಪ್ರತೀಕ ಎಂದು ಜನರು ನಂಬಿದ್ದಾರೆ. ಕೆಲವು ಸಲ ಇದು ಪ್ರತಿಷ್ಠೆಯ ವಿಷಯವೂ ಆಗಿದೆ. ಆದೆ ಇತ್ತಿತ್ತಲಾಗಿ ಈ ಸಂಪ್ರದಾಯವು ಕಡಿಮೆಯಾಗಿದ್ದು ಹೊಸ ಪದ್ಧತಿಗಳು ಅನುಕರಣೆಗೊಳ್ಳುತ್ತಿವೆ.

ಪಲ್ಲೆಗಳು: ಬೆಳಗಾವಿಯು ತರಕಾರಿ ಬೆಳೆಗೆ ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ಕರ್ನಾಟಕ, ಮಹಾರಾಷ್ಟ್ರ, ಗೋವಾ ರಾಜ್ಯಗಳಿಗೆ ಬೆಳಗಾವಿಯಿಂದ ತರಕಾರಿ ರಫ್ತಾಗುತ್ತದೆ. ಫಲವತ್ತಾದ ಭೂಮಿಯನ್ನು ಹೊಂದಿದ ಬೆಳಗಾವಿಯ ಸುತ್ತಮುತ್ತಲಿನ ಹಳ್ಳಿಗಳಲ್ಲಿ ವಿಶೇಷವಾಗಿ ತರಕಾರಿಗಳನ್ನು ಬೆಳೆಯುತ್ತಾರೆ. ಹೀಗಾಗಿ ತರಕಾರಿ ಬಳಕೆಯಲ್ಲಿಯೂ ಬೆಳಗಾವಿಯಲ್ಲಿ ವಿಶೇಷತೆಯನ್ನು ಪಡೆದುಕೊಂಡಿದೆ. ರೊಟ್ಟಿಯ ಜೊತೆ ತಿನ್ನುವ ಪದಾರ್ಥಕ್ಕೆ ಸಾಮಾನ್ಯವಾಗಿ 'ಪಲ್ಲೆ' ಎಂದು ಕರೆಯುತ್ತಾರೆ. ಪಲ್ಲೆಗಳಲ್ಲಿ ಹಲವು ಪ್ರಕಾರಗಳನ್ನು ಗುರುತಿಸಬಹುದು. ಕಾಯಿಪಲ್ಲೆ, ಕಾಳಪಲ್ಲೆ, ಹಿಟ್ಟಿನ ಪಲ್ಲೆ ತೊಪ್ಪಲ ಪಲ್ಲೆ, ಬಾಳಕದ ಪಲ್ಲೆ ಈ ರೀತಿಯ ವೈವಿಧ್ಯತೆಯಲ್ಲಿ ಪಲ್ಲೆಗಳು ಬಳಸಲ್ಪಡುತ್ತವೆ. ಇವು ಋತುಮಾನಕ್ಕನುಗುಣವಾಗಿ ಬಳಕೆಗೊಳ್ಳುತ್ತವೆ.

ಬೆಳಗಾವಿಯಲ್ಲಿ ಬಳಸುವ ಕಾಯಿಪಲ್ಲೆಗಳಲ್ಲಿ ಮುಖ್ಯವಾದವುಗಳೆಂದರೆ ಬದನೆಕಾಯಿ, ಹಿರೇಕಾಯಿ, ಬೆಂಡೆಕಾಯಿ,ಚವಳಿಕಾಯಿ (ಗೋರಿಕಾಯಿ), ಅವರೆಕಾಯಿ, ಮೆಕ್ಕಿಕಾಯಿ, ಸವತೆಕಾಯಿ, ಹಾಗಲಕಾಯಿ, ಪಡವಲಕಾಯಿ ಕುಂಬಳಕಾಯಿ, ಡೊಣ್ಣಮೆಣಸಿನಕಾಯಿ. ಕಾಳಪಲ್ಲೆಯಲ್ಲಿ ಬಳಸುವ ಕಾಳುಗಳೆಂದರೆ, ಅಲಸಂದಿ, ಕಡಲೆ, ಬಟಾಣಿ, ಹೆಸರು, ಅವರೆಕಾಳು, ಹುರುಳಿಕಾಳು, ಮಡಿಕೆ(ಮೂಗಣಿ), ಚನ್ನಂಗಿ, ತೊಗರಿ ಬೇಳೆ, ಮುಂತಾದ ಕಾಳುಗಳಿಂದ ತಯಾರಿಸಿದ ಪಲ್ಲೆಯನ್ನು ಬೆಳಗಾವಿಯಲ್ಲಿ ಬಳಸಲಾಗುತ್ತದೆ.

ಬಾಳಕದ ಪಲ್ಲೆಯನ್ನು ಕೆಲವು ಜನರು ಬಳಸುತ್ತಾರೆ. ಕೆಲವು ಕಾಯಿಪಲ್ಲೆ ಮತ್ತು ತೊಪ್ಪಲಪಲ್ಲೆಗಳನ್ನು ಒಣಗಿಸಿ ಬೇರೆ ಋತುಮಾನಗಳಲ್ಲಿ ಬಳಸುತ್ತಾರೆ. ಅವುಗಳಿಗೆ 'ಬಾಳಕ' ಎಂದು ಕರೆಯುತ್ತಾರೆ. ಬಾಳಕದ ಪಲ್ಲೆಯನ್ನು ಮನೆಯಲ್ಲಿ ಪಲ್ಲೆ ಮಾಡಲು ಏನೂ ಇರಲಾರದ ಪ್ರಸಂಗದಲ್ಲಿ ಮಾಡುತ್ತಾರೆ.

ಸಾಮಾನ್ಯವಾಗಿ ಪಲ್ಲೆಗೆ ಸಾಂಬಾರ ಪದಾರ್ಥಗಳನ್ನು ವಿಶೇಷವಾಗಿ ಬಳಸುತ್ತಾರೆ. ಮುಸ್ಲಿಂ ಜನಾಂಗದವರು ಹೆಚ್ಚಾಗಿ ಸಂಬಾರ ಪದಾರ್ಥಗಳನ್ನು ಬಳಸುತ್ತಾರೆ. ಮರಾಠಿ ಜನರು ಪಲ್ಲೆಗೆ ಹೆಚ್ಚು ಕಾರವನ್ನು ಬಳಸುತ್ತಾರೆ. ಬ್ರಾಹ್ಮಣರು ಕಡಿಮೆ ಖಾರ-ಉಪ್ಪುಗಳನ್ನು ಬಳಸುತ್ತಾರೆ. ಇತ್ತಿತ್ತಲಾಗಿ ಹೆಚ್ಚು ಖಾರ ಹಾಕಿ ಪಲ್ಲೆ ತಯಾರಿಸುವುದು

ಸಾಮಾನ್ಯವಾಗಿದೆ. ಇದು ಮಹಾರಾಷ್ಟ್ರದ ಅಡಿಗೆ ಸಂಸ್ಕೃತಿಯಾಗಿದೆ. ಬೇರೆ ಪ್ರದೇಶಗಳಿಂದ ಬೆಳಗಾವಿಗೆ ಬಂದವರಿಗೆ ಇಲ್ಲಿಯ ಪಲ್ಲೆ ಹೆಚ್ಚು ಖಾರವೆಂದು ಅನಿಸುತ್ತದೆ.

'ಹಸಿಚಟ್ನಿ'ಯನ್ನು ಬೆಳಗಾವಿಯಲ್ಲಿ ವಿಶೇಷವಾಗಿ ಬಳಸುತ್ತಾರೆ. ಬೇರೆ ಪ್ರದೇಶಗಳಿಗಿಂತ ತೀರ ವಿಭಿನ್ನವಾಗಿ ಇಲ್ಲಿಯ ಹಸಿಚಟ್ನಿಯು ತಯಾರಿಸಲ್ಪಡುತ್ತದೆ. ಅದಕ್ಕೆ ಮುಖ್ಯ ಕಾರಣ ಹಸಿಚಟ್ನಿ ತಯಾರಿಸಲು ಬೇಕಾದ ಕಾಯಿಪಲ್ಲೆ, ತೊಪ್ಪಲಪಲ್ಲೆ, ಕಡಲೇಪಲ್ಲೆ, ಕಡಲೆಬೇಳೆ, ಬೆಳ್ಳುಳ್ಳಿ, ಉಳ್ಳಾಗಡ್ಡಿ ಮುಂತಾದವು ಹೆಚ್ಚಿನ ಪ್ರಮಾಣದಲ್ಲಿ ದೊರೆಯುತ್ತವೆ. ಅಲ್ಲದೆ ವಿಶೇಷವಾಗಿ ನದಿ ದಂಡೆಯ (ಮಲಪ್ರಭಾ, ಘಟಪ್ರಭಾ, ಮಾರ್ಕಂಡೇಯ, ಕೃಷ್ಣಾ) ಪ್ರದೇಶದಲ್ಲಿ ಕಾಯಿಪಲ್ಲೆಗಳನ್ನು ಬೆಳೆಯುವುದರಿಂದ ಅವುಗಳಲ್ಲಿ ಒಂದು ವಿಶೇಷವಾದ ರುಚಿ ಇರುವುದರಿಂದ ಬೆಳಗಾವಿಯ ಹಸಿಚಟ್ನಿಯಲ್ಲಿ ಈ ವಿಶೇಷತೆ ಕಂಡುಬರುತ್ತದೆ.

ಪಳು: ಅಲಸಂದಿ ಹಿಟ್ಟು ಮತ್ತು ಉದ್ದಿನ ಹಿಟ್ಟುಗಳನ್ನು ಕೂಡಿಸಿ ಅದಕ್ಕೆ ಖಾರ, ಉಪ್ಪು, ಮಸಾಲೆಯನ್ನು ಹಾಕಿ ಕಲಸಿ ರೊಟ್ಟಿಯ ಜೊತೆಗೆ ನಂಜಿಕೊಳ್ಳಲು ಬಳಸುತ್ತಾರೆ. ಮಾವಿನಕಾಯಿ ಪಳು ಪ್ರಸಿದ್ಧವಾದುದು. ಹಸಿ ಮಾವಿನಕಾಯಿಯನ್ನು ಚೆನ್ನಾಗಿ ಕುದಿಸಿ ಅದಕ್ಕೆ ಒಗ್ಗರಣೆಯನ್ನು ಕೊಟ್ಟು ಸಾರಿನ ಹಾಗೆ ತೆಳುವಾಗಿ ಮಾಡುತ್ತಾರೆ. ಇದನ್ನು ರೊಟ್ಟಿ ಮತ್ತು ಅನ್ನ ಎರಡರ ಜೊತೆಗೂ ಬಳಸುತ್ತಾರೆ. ಮಾವಿನ ಕಾಹಿಯ ಸುಗ್ಗಿಯಲ್ಲಿ ಇದು ವಿಶೇಷವಾಗಿ ಕಂಡುಬರುತ್ತದೆ.

ಜುನಕ: ಇದನ್ನು ರೊಟ್ಟಿ, ಚಪಾತಿ, ಅನ್ನದ ಜೊತೆಗೆ ಸೇರಿಸಿ ಸೇವಿಸುತ್ತಾರೆ. ಇದನ್ನು ವಿಶೇಷವಾಗಿ ಕಟಲೆ ಹಿಟ್ಟಿನಿಂದ ತಯಾರಿಸುತ್ತಾರೆ. ಇನ್ನು ಕೆಲವರು ಇದರಲ್ಲಿ ಎರಡು ಮೂರು ತರಹದ (ಗೋದಿ, ಹೆಸರು ಹಿಟ್ಟು) ಸೇರಿಸಿ ತಯಾರಿಸುತ್ತಾರೆ. ಇದನ್ನು ಎರಡು ರೀತಿಯಲ್ಲಿ ತಯಾರಿಸುತ್ತಾರೆ. ೧. ತೆಳವಾಗಿ ಸಾರಿನಂತೆ ತಯಾರಿಸಿ ರೊಟ್ಟಿ, ಅನ್ನಗಳ ಜೊತೆಗೆ ಬಳಸುತ್ತಾರೆ. ೨. ಗಟ್ಟಿಯಾಗಿ ಚಕ್ಕಲಿಯಾಗಿ ಕೊರೆದು ಬುತ್ತಿ ಕಟ್ಟುವ ಸಮಯದಲ್ಲಿ ಬಳಸುತ್ತಾರೆ. ಜುನಕವು ಮಹಾರಾಷ್ಟ್ರದ ಪ್ರಭಾವದಿಂದ ಬೆಳಗಾವಿಯ ಭಾಗದಲ್ಲಿ ವಿಶೇಷವಾಗಿ ಕಂಡು ಬರುತ್ತದೆ.

ನುಚ್ಚು: ಜೋಳದಿಂದ ಮಾಡುವ ಮತ್ತೊಂದು ಪದಾರ್ಥವೆಂದರೆ ನುಚ್ಚು. ಇದನ್ನು ಬೆಳಗಾವಿಯಲ್ಲಿ ಕೆಲವು ಜನರು ಬಳಸುತ್ತಾರೆ. ಕೆಲವರು ಇದನ್ನು ಅಕ್ಕಿ ಗೋದಿಗಳಿಂದಲೂ ತಯಾರಿಸುತ್ತಾರೆ. ಆದರೆ ಜೋಳದಿಂದ ಮಾಡಿದ ನುಚ್ಚು ಹೆಚ್ಚು ಜನಪ್ರಿಯವಾಗಿದೆ. ಇದನ್ನು ಸಪ್ಪನುಚ್ಚು, ಹುಳಿನುಚ್ಚು ಮತ್ತು ಹಾಲಹುಳಿ ನುಚ್ಚು ಎಂದು ಮೂರು ವಿಧದಲ್ಲಿ ಮಾಡುತ್ತಾರೆ.

ಉತ್ತರ ಕರ್ನಾಟಕದ ಭಾಗದಲ್ಲಿ ಕಂಡು ಬರುವ ಈ ಪದಾರ್ಥವನ್ನು ಬೆಳಗಾವಿಯ ಜನರೂ ದಿನ ನಿತ್ಯ ಊಟದಲ್ಲಿ ಬಳಸುತ್ತಾರೆ. ಜೋಳವನ್ನು ಒಡೆದು ಅದರೊಳಗಿನ ಹಿಟ್ಟನ್ನು ತೆಗೆದು ಕೇವಲ ನುಚ್ಚನ್ನು ಮಾತ್ರ ಇದಕ್ಕೆ ಬಳಸುತ್ತಾರೆ. ಕೇವಲ ನುಚ್ಚನ್ನು ಕುದಿಸಿ ಮಾಡುವುದು ಸಪ್ಪನುಚ್ಚು. ಇದಕ್ಕೆ ಹಾಲು, ತುಪ್ಪವನ್ನು ಸೇರಿಸಿ ತಿನ್ನುತ್ತಾರೆ.

ಸ್ವಲ್ಪ ಹುಳಿ ಹಾಕಿ ಮಾಡುವುದು ಹುಳಿನುಚ್ಚು. ಇದನ್ನು ರೈತಾಪಿ ಜನರು ಹೆಚ್ಚು ಸೇವಿಸುತ್ತಾರೆ. ಹುಳಿ ನುಚ್ಚಿಗೆ ನುಚ್ಚಿನ ಜೊತೆಗೆ ಹಿಟ್ಟು ಬೇಕಾಗುತ್ತದೆ. ಹಿಟ್ಟು ಮತ್ತು ನುಚ್ಚನ್ನು ಬೆಚ್ಚಗಿನ ನೀರಿನಲ್ಲಿ ಸ್ವಲ್ಪ ಮಜ್ಜಿಗೆ ಹುಳಿಯೊಂದಿಗೆ ಕಲಸಿಡುತ್ತಾರೆ. ಸುಮಾರು ಎಂಟರಿಂದ ಹತ್ತು ಗಂಟೆಯವರೆಗೆ ಇಟ್ಟರೆ ಹೆಚ್ಚು ಹುಳಿ ಬರುತ್ತದೆ. ಇದಕ್ಕೆ ಖಾರ, ಬಳ್ಳೊಳ್ಳಿ, ಉಳ್ಳಾಗಡ್ಡಿ ಕೂಡಿಸಿ ಕಲಸಿ ರುಚಿಯಾದ ನುಚ್ಚನ್ನು ತಯಾರಿಸುತ್ತಾರೆ. ಕೆಲವರು ನುಚ್ಚು ಮಾಡಲು ಬೇರೆಯವರ ಮನೆಯಿಂದ ನುಚ್ಚಿನ ಹುಳಿ ಮಾತ್ರ ತೆಗೆದುಕೊಂಡು ಬಂದು ಮನೆಯಲ್ಲಿ ಅದಕ್ಕೆ ಇನ್ನುಳಿದ ಪದಾರ್ಥಗಳನ್ನು ಸೇರಿಸಿ ತಿನ್ನುವರು. ಈ ರೀತಿ ಹುಳಿ ತರುವ ಕ್ರಿಯೆಗೆ 'ಯಂಬಲ' ಎಂದು ಕರೆಯುವರು. ನುಚ್ಚಿನ ಊಟವನ್ನು 'ಮೇಲೂಟ' ವೆಂದೂ ಕರೆಯುವ ರೂಢಿ ಇದೆ.

ನುಚ್ಚಿನ ಊಟವನ್ನು ಕೆಲವರು ಕೀಳರಿಮೆಯಿಂದ ಕಾಣುತ್ತಾರೆ. 'ನುಚ್ಚು' ಇದು ಬಡವರ ಊಟವೆನ್ನುವ ನಂಬಿಕೆ ಕೆಲವರಲ್ಲಿ ಇದೆ. ಆದರೆ ಇತ್ತಿತ್ತಲಾಗಿ ಶ್ರೀಮಂತರೂ ಅದರಲ್ಲಿಯೂ ಸಕ್ಕರೆ ಕಾಯಿಲೆ ಇದ್ದವರು ನುಚ್ಚಿನ ಊಟವನ್ನು ಇಷ್ಟಪಡುತ್ತಾರೆ.

ಇನ್ನು ಹಾಲಹುಳಿ, ನುಚ್ಚು ಪೂರ್ತಿಯಾಗಿ ಸಪ್ಪಗೂ ಅಲ್ಲ. ಪೂರ್ಣ ಹುಳಿಯೂ ಅಲ್ಲದ ಹಾಗೆ ತಯಾರಿಸುತ್ತಾರೆ. ಹಾಲಹುಳಿ ನುಚ್ಚಿಗೂ ಹಿಟ್ಟನ್ನು ಮಿಶ್ರಣಮಾಡುವದಿಲ್ಲ. ಇದಕ್ಕೆ ಸ್ವಲ್ಪ ಪ್ರಮಾಣದಲ್ಲಿ ಮಜ್ಜಿಗೆಯನ್ನು ಸೇರಿಸಿ ಅಥವಾ ಮಜ್ಜಿಗೆಯಲ್ಲಿ ನೆನೆಸಿ ಮಾಡುತ್ತಾರೆ.

ನುಚ್ಚನ್ನು ವಿಶೇಷವಾಗಿ ಮಣ್ಣಿನ ಗಡಿಗೆಯಲ್ಲಿ ಮಾಡುತ್ತಾರೆ. ಲೋಹದ ಪಾತ್ರೆಗಳಲ್ಲಿ ಮಾಡಿದರೆ ಪಾತ್ರೆಗಳು ಕೆಡುತ್ತವೆ. ಹೀಗಾಗಿ ಗಡಿಗೆಯಲ್ಲಿಯೇ ಹುಳಿ ಹಾಕಿ ಮಾಡುತ್ತಾರೆ. ಆದರೆ ಎಲ್ಲರೂ ಗಡಿಗೆಗಳನ್ನು ಉಪಯೋಗಿಸುವುದಿಲ್ಲ.

ಕಿಚಡಿ: ಜೋಳದ ಕಿಚಡಿಯನ್ನು ಕೆಲವರು ಅಡಿಗೆ ಪದಾರ್ಥವಾಗಿ ಬಳಸುತ್ತಾರೆ. ಇದು ಜೋಳದ ಬಾನ ಮತ್ತು ನುಚ್ಚು ಮಾಡುವ ವಿಧಾನದಲ್ಲಿಯೇ ಇರುತ್ತದೆ. ಅಲ್ಲದೆ ಅದೇ ತರಹ ರುಚಿಯನ್ನು ಹೊಂದಿರುತ್ತದೆ. ಜೋಳವನ್ನು ಕುಟ್ಟಿದ ನಂತರ ಅದನ್ನು ಬೀಸುಕಲ್ಲಿಗೆ ಹಾಕಿ ಬೀಸಿ ನುಚ್ಚನ್ನು ಒಡೆಯುತ್ತಾರೆ. ಇದನ್ನು ಕುದಿಸಿ ಅದಕ್ಕೆ ಹಾಲು ಅಥವಾ ಮಜ್ಜಿಗೆಯನ್ನು ಹಾಕಿ ಸೇವಿಸುತ್ತಾರೆ. 'ಕಿಚಡಿ'ಯನ್ನು ಹೆಚ್ಚಾಗಿ ವಯಸ್ಸಾದವರಿಗೆ, ಬಾಯಲ್ಲಿ ಹಲ್ಲಿಲ್ಲದವರಿಗೆ, ಅಶಕ್ತರಿಗೆ ಮತ್ತು ಚಿಕ್ಕಮಕ್ಕಳಿಗೆ ಕೊಡುತ್ತಾರೆ. ಆದರೆ ಈಗ ಯಾರೂ ಮನೆಯಲ್ಲಿ ಕುಟ್ಟಿ ಬೀಸಿ ತಯಾರಿಸುವುದಿಲ್ಲ. ಈಗ ಅಂಗಡಿಗಳಲ್ಲಿ ದೊರೆಯುವ ಪಾಕೇಟನ್ನು ತಂದು ಇದನ್ನು ತಯಾರಿಸುತ್ತಾರೆ.

ಚಪಾತಿ: ಗೋದಿಯಿಂದ ತಯಾರಿಸುವ ಬಹುಮುಖ್ಯವಾದ ಆಹಾರ ಪದಾರ್ಥವೆಂದರೆ ಚಪಾತಿ. ದೇಶದ ಎಲ್ಲಾ ಕಡೆಗೆ ಬಳಸುವ ಇದನ್ನು ಬೆಳಗಾವಿಯ ಊಟದಲ್ಲಿಯೂ ಕಾಣಬಹುದಾಗಿದೆ. ಸಾಮಾನ್ಯವಾಗಿ ಗೋದಿಯ ಹಿಟ್ಟನ್ನು ಚಪಾತಿಗೆ ಬಳಸುತ್ತಾರೆ.ಆದರೆ ಲವರು 'ಸದಕ' ಎನ್ನುವ ಕಾಳಿನ (ಗೋದಿಯ ಹಾಗೆಯೇ ಇರುತ್ತದೆ)

ಹಿಟ್ಟನ್ನು ಬಳಸುತ್ತಾರೆ. ಸದಕದಿಂದ ಮಾಡಿದ ಚಪಾತಿಯು ಹೆಚ್ಚು ರುಚಿಕಟ್ಟಾಗಿರುತ್ತದೆ. ಚಪಾತಿಗೆ ಕೆಲವರು ಹಿಟ್ಟನ್ನು ಹಚ್ಚುತ್ತಾರೆ. ಆದರೆ ಹೆಚ್ಚಿನ ಜನ ಎಣ್ಣೆಯನ್ನು (ಶೇಂಗಾ ಅಥವಾ ಕುಸಬಿ) ಹಚ್ಚಿ ಮಾಡುತ್ತಾರೆ.

ಅನ್ನ: ಜಗತ್ತಿನ ಬಹಳಷ್ಟು ಜನರು ಸೇವಿಸುವ ಪದಾರ್ಥವೆಂದರೆ ಅನ್ನ. ಬೆಳಗಾವಿ ಪ್ರದೇಶದಲ್ಲಿ ಭತ್ತ ಬಹುಮುಖ್ಯವಾದ ಬೆಳೆ. ಹೀಗಾಗಿ ಇಲ್ಲಿನ ಜನರು ಅನ್ನವನ್ನು ಹೆಚ್ಚಾಗಿ ಬಳಸುತ್ತಾರೆ. ಅಲ್ಲದೆ ಬೆಳಗಾವಿಯ ಬಾಸುಮತಿ ಅಕ್ಕಿಯು ಪ್ರಸಿದ್ಧಿಯನ್ನು ಪಡೆದುಕೊಂಡಿದೆ.

ಅನ್ನವನ್ನು ತಯಾರಿಸಲು ಬೇರೆ ಬೇರೆ ತರಹದ ಅಕ್ಕಿಯನ್ನು ಬೆಳಗಾವಿಯ ಜನರು ಬಳಸುವುದು ಕಂಡುಬರುತ್ತದೆ. ಸಾವಕ್ಕಿ ಮುಂತಾದ ಅಕ್ಕಿಯನ್ನು ಬಳಸುತ್ತಾರೆ. ನವಣೆ ಮತ್ತು ಸಾವಕ್ಕಿಯ ಅನ್ನವನ್ನು ವಿಶೇಷವಾಗಿ ಮಲೆನಾಡಿನ ಭಾಗದ ಜನರು ಉಪಯೋಗಿಸುತ್ತಾರೆ. ಆದರೆ ಇತ್ತೀಚೆಗೆ ಸಕ್ಕರೆ ಕಾಯಿಲೆಯಿಂದ ಬಳಲುತ್ತಿರುವವರು ಭತ್ತದ ಅಕ್ಕಿಯಿಂದ ತಯಾರಿಸಿದ ಅನ್ನವನ್ನು ಉಣ್ಣದೆ ನವಣೆ ಮತ್ತು ಸಾವಕ್ಕಿಯ ಅನ್ನವನ್ನು ಹೆಚ್ಚು ಬಳಸುತ್ತಾರೆ.

೩. ಹಬ್ಬ-ಹರಿದಿನ ವಿಶೇಷ ಸಂದರ್ಭಗಳ ಊಟ: ನಿತ್ಯದ ಊಟಕ್ಕಿಂತ ಇದು ಭಿನ್ನವಾಗಿದದು. ಹಬ್ಬ-ಹರಿದಿನಗಳಲ್ಲಿ-ಸಿಹಿ ಪದಾರ್ಥ ಇಲ್ಲಿ ಮುಖ್ಯವೆನಿಸುತ್ತದೆ. ವಿಶೇಷ ಸಂದರ್ಭಗಳಾದ ಐದೇಸಿ, ಮೈನರೆಯುವುದು, ಮದುವೆ, ತಿಥಿ-ಊಟಗಳು ಭಿನ್ನರೂಪದಲ್ಲಿವೆ. ಈಗ ಅವುಗಳನ್ನು ಒಂದೊಂದಾಗಿ ಪರಿಶೀಲಿಸಬಹುದು.

ಪಾಯಸ: ಪಾಯಸವನ್ನು ಶ್ಯಾವಿಗೆ, ಸವತೆ ಬೀಜ, ಪರಡಿ, ಉಗರತ್ತ, ದಣಿಕಲ್ಲ, ಗುಳಿಗೆ, ಗೌಲಿಗಳಿಂದ ಮಾಡುತ್ತಾರೆ. ಇವುಗಳನ್ನು ಬೇಸಿಗೆಯ ದಿನಗಳಲ್ಲಿ ತಯಾರು ಮಾಡಿ ಒಣಗಿಸಿ ಸಂಗ್ರಹಿಸಿಟ್ಟಿರುತ್ತಾರೆ. ಪಾಯಸವನ್ನು ಸಣ್ಣ ಹಬ್ಬಗಳಾದ ಹುಣ್ಣಿಮೆ, ಅಮವಾಸ್ಯೆಗಳೆಂದು ಮನೆಗೆ ಅತಿಥಿಗಳು ಬಂದಾಗ ಅದರಲ್ಲಿಯೂ ಬೀಗರು ಮನೆಗೆ ಬಂದಾಗ ಈ ಸಿಹಿ ಪದಾರ್ಥವನ್ನು ಮಾಡುವ ಸಂಪ್ರದಾಯ ಕಂಡು ಬರುತ್ತದೆ.

ಕಡಬು: ಕೆಲವು ಹಬ್ಬಹರಿದಿನಗಳಲ್ಲಿ ಹೋಳಿಗೆಯ ಬದಲಾಗಿ ಕರಿಗಡಬು ಮಾಡುತ್ತಾರೆ. ಕರಗಡಬಿನಲ್ಲಿ ಹೂರಣಗಡಬ, ಕೊಬ್ಬರಿಕಡಬ, ಹಾಲಗಡಬ, ಮಸಾಲೆಕಡಬ, ಮೆಣಸಿನಕಡಬ, ಕುಂಬಳಕಡಬ, ಕುಚ್ಚಗಡಬ, ಗಳಿಗಡಬ, ಎಲಿಗಡಬ, ಗಂಗಾಳಗಡಬ(ಇದನ್ನು ಗೋದಿಯ ಕಸಕದಲ್ಲಿ ಬೆಲ್ಲ ಕಡಲೆಬೇಳೆಯಿಂದ ತಯಾರಿಸಿದ ಹೂರಣ, ಕೊಬ್ಬರಿ, ಬೆಲ್ಲ ಮೆಣಸು ಕೂಡಿಸಿದ ಮಿಶ್ರಣದೊಂದಿಗೆ ಕರಿದು ಅಥವಾ ಕುದಿಸಿ ಮಾಡುತ್ತಾರೆ)ಮುಂತಾದ ಪ್ರಕಾರದ ಕಡಬುಗಳನ್ನು ತಯಾರಿಸುತ್ತಾರೆ. ಮಹಾನವಮಿ ಅಮಾವಾಸ್ಯೆ, ಪಂಚಮಿ ಅಮಾವಾಸ್ಯೆ, ಭರಮಹಬ್ಬ, ಗುಳ್ಳವ್ವನ ಹಬ್ಬ, ಗಣಪತಿ ಹಬ್ಬ ಮೊದಲಾದ ಸಂದರ್ಭಗಳಲ್ಲಿ ಕಡಬು ಮಾಡುವರು. ಇದನ್ನು ಎಲ್ಲಾ ಜಾತಿ ಧರ್ಮದ ಜನರು ಮಾಡುತ್ತಾರೆ. ಮುಸ್ಲಿಂರು ಧಾರ್ಮಿಕ ಆಚರಣೆಯ ಸಂದರ್ಭದಲ್ಲಿ ಮಾದೋಲಿಯನ್ನು ಮಾಡುತ್ತಾರೆ. ಮಾದೋಲಿಯಲ್ಲಿಯೂ ಹಲವಾರು ಪ್ರಕಾರಗಳನ್ನು ಕಾಣಬಹುದು. ಖೋವಾ ಮಾದೋಲಿ, ಕಡಲೆಬೇಳೆ ಮಾದೋಲಿ ಇತ್ಯಾದಿ ವಿಶೇಷವಾಗಿ ಮಾಡುತ್ತಾರೆ.

ಮಂಡಿಗೆ: ಬೆಳಗಾವಿಯ ಪ್ರಸಿದ್ಧ ಸಿಹಿ–ತಿಂಡಿಗಳಲ್ಲಿ ಒಂದಾದ ಮಂಡಿಗೆಯನ್ನು ವಿಶೇಷವಾಗಿ ಬ್ರಾಹ್ಮಣರು ಮದುವೆಗಳಲ್ಲಿ ಮಾಡುತ್ತಾರೆ. ಆದರೆ ಇತ್ತಿತ್ತಲಾಗಿ ಮಂಡಿಗೆಯನ್ನು ಎಲ್ಲ ವರ್ಗದ ಜನರು ಉಪಯೋಗಿಸುತ್ತಾರೆ. ವಾರದಲ್ಲಿ ಒಮ್ಮೆಯಾದರೂ ಬೆಳಗಾವಿಯ ಜನರು ಮಂಡಿಗೆಯ ಊಟವನ್ನು ಮಾಡುತ್ತಾರೆ.

ಗೋಧಿ ಹಿಟ್ಟಿನಿಂದ ಮಾಡುವ ಮಂಡಿಗೆಯನ್ನು ತಯಾರಿಸುವ ವಿಧಾನವೂ ಕಠಿಣವಾಗಿದೆ. ಗೋಧಿ ಹಿಟ್ಟನ್ನು ಮಿದುವಾಗಿ ನಾದಿ ಎರಡು ಮೂರು ತಾಸು ನೆನೆಸಲು ಇಡುವರು. ಇದಕ್ಕೆ ಸಕ್ಕರೆ, ತುಪ್ಪವನ್ನು ಹಾಕಿ ಕಲಸುವರು. ಮೇಲೆ ಏಲಕ್ಕಿ ಪುಡಿಯನ್ನು ಹಾಕುವರು. ಕಲಿಸಿದ ಕನಕವನ್ನು ಸ್ವಲ್ಪ ಲಟ್ಟಿಸಿ ನಂತರ ಕೈಯಲ್ಲಿ ತೆಗೆದುಕೊಂಡು ಕೈಬೆರಳಿನಿಂದ ಹೆಚ್ಚು ಹೆಚ್ಚು ಅಗಲವಾಗಿ ಹಿಗ್ಗಿಸುವರು. ಸುಮಾರು ಪರಾತದಷ್ಟು ದೊಡ್ಡದಾದ ಪ್ರಮಾಣದಲ್ಲಿ ಮಾಡುತ್ತಾರೆ. ಮೇಲೆ ಡಬ್ಬ ಹಾಕಿ ಅದರ ಮೇಲೆ ಮಂಡಿಗೆ ಹಾಗಿ ಬೇಯಿಸುತ್ತಾರೆ. ಇದನ್ನು ಪುನಃ ಸಕ್ಕರೆ ತುಪ್ಪ, ಹಾಲಿನೊಂದಿಗೆ ಬೆರೆಸಿ ಊಟ ಮಾಡುತ್ತಾರೆ.

ವಿಶೇಷವಾಗಿ ಬ್ರಾಹ್ಮಣರ ಮದುವೆ, ಜಾತ್ರೆ, ಉತ್ಸವ, ಹಬ್ಬಗಳಲ್ಲಿ ಮಂಡಿಗೆಯ ಊಟವು ಕಡ್ಡಾಯವಾಗಿರುತ್ತದೆ. ಮಂಡಿಗೆಯ ಜೊತೆಗೆ ಉಪ್ಪಿನಕಾಯಿ, ಸಂಡಿಗೆ, ಹಪ್ಪಳಗಳನ್ನು ಬಳಸಿ ತಿಂದರೆ ಮಂಡಿಗೆಯ ರುಚಿ ಹೆಚ್ಚುತ್ತದೆ. ಸುಮಾರು ಹತ್ತು ಹದಿನೈದು ದಿನದವರೆಗೂ ಮಂಡಿಗೆಯು ಕೆಡುವುದಿಲ್ಲ.

ಸಜ್ಜೆಯ ರೊಟ್ಟಿ: ಸಜ್ಜೆಯ ರೊಟ್ಟಿಯನ್ನು ವಿಶೇಷವಾದ ಸಂದರ್ಭಗಳಲ್ಲಿ ಮಾಡುತ್ತಾರೆ. ಸಂಕ್ರಮಣ, ದೀಪಾವಳಿ, ಛಟ್ಟಿ ಅಮವಾಸ್ಯೆ ಮುಂತಾದ ಹಬ್ಬಗಳಂದು ವಿಶೇಷವಾಗಿ ಸಜ್ಜೆಯ ರೊಟ್ಟಿಯನ್ನು ಮಾಡುತ್ತಾರೆ. ಇತ್ತೀಚೆಗೆ ಮದುವೆ ಸಮಾರಂಭಗಳಲ್ಲಿ ಸಜ್ಜೆಯ ರೊಟ್ಟಿಯ ಊಟವು ಶ್ರೀಮಂತಿಕೆಯ ಪ್ರತೀಕವಾಗಿ ಕಂಡು ಬರುತ್ತಿದೆ. ಸಭೆ–ಸಮಾರಂಭಗಳಲ್ಲಿಯೂ ಸಾವಿರಾರು ಸಜ್ಜೆಯ ರೊಟ್ಟಿಗಳನ್ನು ಮಾಡಲಾಗುತ್ತದೆ. ಬೆಳಗಾವಿಯಲ್ಲಿ ಜರುಗಿದ ಸಾಹಿತ್ಯ ಸಮ್ಮೇಳನಗಳಲ್ಲಿ ಸಜ್ಜೆ ರೊಟ್ಟಿಯ ಊಟವು ವಿಶೇಷವಾಗಿ ಕಂಡು ಬಂದದ್ದನ್ನು ಕಾಣಬಹುದು. ಒಂದು ಕಾಲದಲ್ಲಿ ಸಜ್ಜೆಯ ರೊಟ್ಟಿಯು ಬಡವರ ಊಟವಾಗಿತ್ತು. ಸಜ್ಜೆಯನ್ನು ಬಡವರು ಮಾತ್ರ ಬಳಸುತ್ತಿದ್ದರು. ಇಂದು ಸಜ್ಜೆ ರೊಟ್ಟಿಯು ಬೆಳಗಾವಿ ಪರಿಸರದಲ್ಲಿ ಒಂದು ಫ್ಯಾಶನ್ ಆಗಿ ರೂಪತಾಳಿದೆ.

ಹಬ್ಬಗಳ ಆಚರಣೆಗಳಲ್ಲಿ ಆಹಾರವೂ ಮುಖ್ಯ ಪಾತ್ರ ವಹಿಸುವುದನ್ನು ನಾವು ಭಾರತೀಯ ಸಂಸ್ಕೃತಿಯಲ್ಲಿ ಕಾಣುತ್ತೇವೆ. ಅದರಂತೆ ಬೆಳಗಾವಿಯಲ್ಲಿಯೂ ಈ ಸಂಪ್ರದಾಯವು ಎಲ್ಲಾ ವರ್ಗದಲ್ಲಿ ಕಂಡು ಬರುತ್ತದೆ. ದೀಪಾವಳಿಯ ಎರಡನೆಯ ದಿನ ಅಣ್ಣ–ತಮ್ಮರಿಗೆ, ಅಕ್ಕ–ತಂಗಿಯರು ಆರತಿ ಬೆಳಗುವ ಸಂಪ್ರದಾಯವನ್ನು ಕಾಣುತ್ತೇವೆ. ಈ ಸಂದರ್ಭದಲ್ಲಿ ಆರತಿಯನ್ನು ಮಾಡಿದ ಮೇಲೆ ಅಣ್ಣ–ತಮ್ಮರಿಗೆ 'ಶ್ಯಾವಿಗೆ' ಅಥವಾ ಹೋಳಿಗೆಯನ್ನು ಉಣಿಸುತ್ತಾರೆ. ದೀಪಾವಳಿಯ ಕೊನೆಯ ದಿನದಂದು ಆಕಳ ಸೆಗಣಿಯಿಂದ ಮಾಡಿದ ಪಾಂಡವರಿಗೆ ಹೊಸ ಮಡಿಕೆಯಲ್ಲಿ ಶ್ಯಾವಿಗೆ ಬಸಿದು ಎಡೆ ಹಿಡಿಯುತ್ತಾರೆ. ಗಣಪತಿಗೆ ಕಡಬು, ಉಂಡಿ(ಮೋದಕ)ಗಳನ್ನು ಎಡೆ ಹಿಡಿಯುತ್ತಾರೆ. ಜೋಕುಮಾರನಿಗೆ

ಅಂಬಲಿಯನ್ನು ಎಡೆ ಹಿಡಿಯುತ್ತಾರೆ. ಏಕೆಂದರೆ ಇವನು ಬರಗಾಲದ ಗೋಳನ್ನು ಮಳೆರಾಯನ ಮುಂದೆ ಹೋಗಿ ಹೇಳಿ ಮಳೆ ತರುತ್ತಾನೆಂಬ ನಂಬಿಕೆ ಇದೆ. ಅಲ್ಲದೆ ಈತನು ರಸಿಕನಾಗಿದ್ದರಿಂದ ಇವನಿಗೆ ಉಪ್ಪು, ಖಾರ, ಉಳ್ಳಾಗಡ್ಡಿಯನ್ನು ಎಡೆ ಮಾಡುತ್ತಾರೆ.

ಶೀಗೆ ಹುಣ್ಣಿಮೆಯಂದು ತರತರಹದ ಅಡಿಗೆಯನ್ನು ಮಾಡಿಕೊಂಡು ಹೊಲಗಳಿಗೆ ಹೋಗಿ ಭೂಮಿತಾಯಿಗೆ ಎಡೆಯನ್ನು ಹಿಡಿದು ಎಲ್ಲರೂ ಕೂಡಿ ಊಟಮಾಡುವ ಸಂಪ್ರದಾಯವನ್ನು ರೈತಾಪಿವರ್ಗದಲ್ಲಿ ಕಾಣಬಹುದು. ಈ ಶೀಗಿ ಹುಣ್ಣಿಮೆಗೆಂದೇ ವಿಶೇಷವಾದ 'ಹುರಕ್ಕಿಹೋಳಿಗೆ'ಯನ್ನು ತಯಾರಿಸುತ್ತಾರೆ. ಅದೇ ರೀತಿ ಎಳ್ಳಮವಾಸ್ಯೆಯಲ್ಲಿ ಹೊಲದಲ್ಲಿ ಹಿಂಗಾರಿ ಬೆಳೆಯುತ್ತಾರೆ. ಆ ಬೆಳೆಯು ಫಲವತ್ತಾಗಿ, ಉತ್ತಮ ಫಸಲು ತರಲೆಂದು ತರತರಹದ ಅಡಿಗೆಯನ್ನು ಮಾಡಿ ಹೊಲದ ಎಲ್ಲಾ ದಿಕ್ಕುಗಳಿಗೆ ಚೆಲ್ಲುವರು. ಇದಕ್ಕೆ ಚರಗ ಚೆಲ್ಲುವುದು ಎಂದು ಕರೆಯುತ್ತಾರೆ. ಎಳ್ಳಮವಾಸ್ಯೆಯಂದು ಶೇಂಗಾದ ಹೋಳಿಗೆಗಳನ್ನು ಮಾಡುತ್ತಾರೆ.

ಬೆಳಗಾವಿಯ ಅಡಿಗೆಗಳಲ್ಲಿಯೂ ಧಾರ್ಮಿಕ ಸಾಮರಸ್ಯವು ಕಂಡುಬರುತ್ತದೆ. ಹಿಂದೂ ಮುಸ್ಲಿಂ ಎರಡೂ ಸಮುದಾಯದವರು ಹಲವಾರು ಹಬ್ಬಗಳಲ್ಲಿ ತಯಾರಿಸುವ ಅಡಿಗೆಗಳಲ್ಲಿ ಈ ಸಾಮರಸ್ಯವನ್ನು ಕಾಣಬಹುದು. ಮುಸ್ಲಿಂರು ಹಬ್ಬಗಳಲ್ಲಿ ಹೆಚ್ಚಾಗಿ ಮಾಂಸಾಹಾರವನ್ನು ಮಾಡುತ್ತಾರೆ. ಆದರೂ ಕೆಲವು ತರಹದ ಶಾಖಾಹಾರಿ ಅಡಿಗೆಯನ್ನು ತಯಾರಿಸುತ್ತಾರೆ. ಅದರಲ್ಲಿ ಮುಖ್ಯವಾದದ್ದು 'ಚಂಗೆ' ಎನ್ನುವ ಸಿಹಿ ಪದಾರ್ಥ. ಇದನ್ನು ಗೋದಿ ಹಿಟ್ಟಿನಿಂದ ಮುಸ್ಲಿಂರು ಎಲ್ಲಾ ಹಬ್ಬದಂದು ಮಾಡುತ್ತಾರೆ. ಅಲ್ಲಾದೇವರಿಗೆ ನಡೆದುಕೊಳ್ಳುವ ಹಿಂದೂ ಜನರೂ ಅಂದು ಚಂಗೆಯನ್ನು ಮಾಡುತ್ತಾರೆ. ಅದೇ ರೀತಿ ಮುಸ್ಲಿಂರು ಮಾದೋಲಿಯನ್ನು ರಂಜಾನ ಹಬ್ಬದಲ್ಲಿ ಮಾಡುತ್ತಾರೆ.

ಬೆಳಗಾವಿಯಲ್ಲಿ ಕಂಡು ಬರುವ ಊಟದ ವೈವಿಧ್ಯತೆಯನ್ನು ಇಲ್ಲಿಯ ವಿಶೇಷ ಆಚರಣೆಗಳ ಹಿನ್ನೆಲೆಯಲ್ಲಿಯೂ ಕಾಣಬಹುದಾಗಿದೆ. ಜನನದಿಂದ ಹಿಡಿದು ಮರಣದವರೆಗೆ ಇದು ವ್ಯಾಪಿಸಿದೆ. ಒಂದೊಂದು ಆಚರಣೆಯ ಸಂದರ್ಭದಲ್ಲಿ ಮಾಡುವ ಅಡುಗೆಗಳು ಧರ್ಮ, ಜಾತಿಗನುಗುಣವಾಗಿ ಭಿನ್ನವಾಗಿವೆ.

ಮಗುವಿನ ಜನನ, ನಾಮಕರಣ, ಉಪನಯನ, ಮುಂಜಿವೆಯ ಸಂದರ್ಭದಲ್ಲಿ ವಿಭಿನ್ನ ತರಹದ ಅಡುಗೆಗಳನ್ನು ಮಾಡಿ ಬಂಧು ಬಳಗವೆಲ್ಲ ಸೇರಿ ಊಟ ಮಾಡುವ ಪದ್ಧತಿಯನ್ನು ಕಾಣಬಹುದು.

ಮನೆಯ ಹೆಣ್ಣು ಮಗಳು ದೊಡ್ಡವಳಾದಾಗ (ಮೈ ನೆರೆದಾಗ) ಹಲವು ದಿವಸ ಅವಳಿಗೆ ಕೊಬ್ಬರಿ, ಬೆಲ್ಲ, ಸಕ್ಕರೆ, ತುಪ್ಪ ಮುಂತಾದ ಶಕ್ತಿಯುತವಾದ ಪದಾರ್ಥಗಳನ್ನು ಕೊಡುತ್ತಾರೆ. ಅಲ್ಲದೆ ಊರಿನವರು, ಸಂಬಂಧಿಕರು ಹೋಳಿಗೆ, ಅನ್ನ, ಸಾರು,ರೊಟ್ಟಿ ವಿವಿಧ ತರಹದ ಪಲ್ಲೆ ಮುಂತಾದ ಅಡಿಗೆ ಮಾಡಿ ಕಟ್ಟಿಕೊಂಡು ಬರುತ್ತಾರೆ. ಇದಕ್ಕೆ

'ಎಡಿ ಕೊಡುವುದು' ಎಂದು ಕರೆಯುತ್ತಾರೆ. ಮದುವೆಯ ನಿಶ್ಚಯ ಸಂದರ್ಭದಲ್ಲಿ ಬೀಗರಿಗೆ 'ಶ್ಯಾವಿಗೆ' ಊಟವನ್ನು ಮಾಡಿಸುತ್ತಾರೆ. ಈ ಊಟವು ಎಷ್ಟು ಪ್ರಸಿದ್ಧವೆಂದರೆ ಮಗಳನ್ನು ಕೊಡಲಿಕ್ಕೆ ಹೋಗಿದ್ದೆವು ಅನ್ನದೆ 'ಶ್ಯಾವಿಗೆ' ಉಣ್ಣಲಿಕ್ಕೆ ಹೋಗಿದ್ದೆವು ಅನ್ನುವರು. ಕೆಲವರು ಗೋಧಿ ರವೆಯಲ್ಲಿ ತಯಾರಿಸಿದ 'ಉದರಗಡಬ' ಮಡುತ್ತಾರೆ. ಇದಕ್ಕೆ 'ಗಟ್ಟಿಡಬಿನ ಊಟ'ಎಂದು ಕರೆಯುತ್ತಾರೆ. ಅಂದರೆ ಸಂಬಂಧ ಗಟ್ಟಿ ಆಯಿತೆಂದು ಅವರು ನಂಬುತ್ತಾರೆ. ಬ್ರಾಹ್ಮಣರಲ್ಲಿ 'ಮಂಡಿಗೆ'ಯ ಅಡಿಗೆ ಮಾಡುತ್ತಾರೆ.

ಮದುವೆಯಲ್ಲಿ ಮಧುಮಕ್ಕಳಿಗೆ ಒಂದೇ ಎಲೆ ಅಥವಾ ತಾಟಿನಲ್ಲಿ ಊಟವನ್ನು ಮಾಡಿಸುತ್ತಾರೆ. ಜೀವನದಲ್ಲಿ ಒಂದಾಗಿ ಬಾಳಲಿ ಎಂಬ ನಂಬಿಕೆಯಿಂದ ಹೀಗೆ ಒಂದೇ ಎಡೆಯಲ್ಲಿ ಉಣಿಸುತ್ತಾರೆ. ಮೊದಲರಾತ್ರಿಯೆಂದು ಶ್ಯಾವಿಗೆ ಹಾಲು, ತುಪ್ಪವನ್ನು ಗಂಡ ಹೆಂಡತಿಗೆ ಉಣಿಸುತ್ತಾರೆ. ಸತಿ-ಪತಿಗಳು ಶ್ಯಾವಿಗೆಯಂತೆ ಅನ್ಯೋನ್ಯವಾಗಿರಲಿ ಎಂಬ ನಂಬಿಕೆ ಇದೆ.

ಹೆಣ್ಣು ಮಗಳು ಮೊದಲ ಸಲ ಗಂಡನ ಮನೆಗೆ ಹೋಗುವಾಗ ಸಜ್ಜೆಯ ರೊಟ್ಟಿ, ಸಜ್ಜಕದ ಹೋಳಿಗೆ, ಅನ್ನ, ರೊಟ್ಟಿ, ಮುಂತಾದ ಅಡಿಗೆಯನ್ನು ಕಟ್ಟಿಕೊಂಡು ಹೋಗುವ ಸಂಪ್ರದಾಯವಿದೆ. ಇದಕ್ಕೆ 'ರೊಟ್ಟಿ ಬುತ್ತಿ' ಅಥವಾ 'ಬುತ್ತಿ ರೊಟ್ಟಿ' ಎಂದು ಕರೆಯುತ್ತಾರೆ. ಹೀಗೆ ತಂದ ಅಡಿಗೆಯನ್ನು ಊರಲ್ಲೆಲ್ಲ ಹಂಚುವ ಪದ್ಧತಿಯನ್ನು ಕಾಣಬಹುದು.

ಹೆಣ್ಣು ಮಗಳು ಗರ್ಭಿಣಿಯಾಗುತಲೇ ಆವಳಿಗೆ 'ಬಯಕೆ ಬುತ್ತಿ'ಯನ್ನು ಕಟ್ಟಿಕೊಂಡು ಬಂದು ಎಲ್ಲರೂ ಸಾಮೂಹಕವಾಗಿ ಊಟ ಮಾಡುವರು.

ಹಡೆದಾಗ ಬಾಣತಿಗೆ ಕೊಬ್ಬರಿ, ಮುದ್ದಿಸಕ್ಕರೆ, ಕಾರಿಕ, ಬದಾಮ, ಒಣದ್ರಾಕ್ಷಿ, ಗೋಡಂಬಿಯನ್ನು ಕುಟ್ಟಿ ಅದರಿಂದ ಉಂಡಿಯನ್ನು ತಯಾರಿಸಿ ತಿನ್ನಲು ಕೊಡುತ್ತಾರೆ. ಇದಕ್ಕೆ 'ಕೊಬ್ಬರಿ ಕಾರ'ಎನ್ನುವರು.

ಊಟವನ್ನು ಮಾಡುವಾಗಲೂ ಹಲವಾರು ಪದ್ಧತಿ, ನಿಯಮ, ಸಂಪ್ರದಾಯ, ನಂಬಿಕೆ, ನಿಷೇಧಗಳು ಬೆಳಗಾವಿ ಜನರಲ್ಲಿ ಕಂಡು ಬರುತ್ತವೆ. ಕೆಲವು ಧರ್ಮಗಳಲ್ಲಿ ಊಟವನ್ನು ಮಾಡುವುದಕ್ಕಿಂತ ಮೊದಲು ದೇವರಿಗೆ ನೈವೇದ್ಯ ಮಾಡಿ ಊಟಮಾಡುತ್ತಾರೆ. ಒಂದು ವೇಳೆ ಇನ್ನೂ ಪೂಜೆ ಆಗಿರದಿದ್ದರೆ ದೇವರಿಗೆ ಎಡೆ ಮಾಡಿಟ್ಟು ಆಮೇಲೆ ತಾವು ಉಣ್ಣುತ್ತಾರೆ.

ಕೆಲವರು ಮೊದಲು ಒಂದರಡು ತುತ್ತುಗಳನ್ನು ಹೊರಗೆ ಚೆಲ್ಲಿ ಆಮೇಲೆ ಉಣ್ಣುತ್ತಾರೆ. ಭೂತ, ಪಿಶಾಚಿಗಳು ಅಡಿಗೆ ಮೇಲೆ ಕಣ್ಣು ಹಾಕಿರುತ್ತವೆ ಎನ್ನುವ ನಂಬಿಕೆಯಿಂದ ಹೀಗೆ ಮಾಡುವರು. ಅಲ್ಲದೆ ಊಟವೆಲ್ಲ ಮುಗಿದು ಕೈತೊಳೆದುಕೊಂಡ ಮೇಲೆ ನಮಸ್ಕಾರ ಮಾಡುವರು. ರೊಟ್ಟಿ ಅಥವಾ ಚಪಾತಿಯನ್ನು ಮಾಡುವಾಗ ಮೊದಲು

ಮಾಡಿದ್ದನ್ನು ಮನೆಯ ಹಿರಿಯ ಮಗನಿಗೆ ಕೊಡುವುದಿಲ್ಲ ಮೊದಲು ಮಾಡಿದ್ದನ್ನು ದನಕರುಗಳಿಗೆ ಅಥವಾ ಭಿಕ್ಷುಕರಿಗೆ ಹಾಕುತ್ತಾರೆ. ಕೆಲವು ಸಂಪ್ರದಾಯಸ್ಥ ಮನೆಗಳಲ್ಲಿ ಜಳಕವಿಲ್ಲದೆ, ಪೂಜೆಇಲ್ಲದೆ ಊಟವನ್ನು ಮಾಡುವಂತಿಲ್ಲ. ಊಟವನ್ನು ನಿಂತು ಮಾಡಿದರೆ ಅನಿಷ್ಟ ಎನ್ನುವ ನಂಬಿಕೆಯೂ ಕೆಲವು ಧರ್ಮದಲ್ಲಿದೆ. ವೀರಶೈವರು ಲಿಂಗಪೂಜೆ ಇಲ್ಲದೆ ಉಣ್ಣಬಾರದು. ಮೊದಲು ಲಿಂಗಪೂಜೆಯನ್ನು ಮಾಡಿಕೊಂಡು ಲಿಂಗಕ್ಕೆ ನೈವೇದ್ಯಯನ್ನು ಹಿಡಿದ ಮೇಲೆಯೇ ಊಟವನ್ನು ಮಾಡುವುದು ಇಂದಿಗೂ ಕಂಡುಬರುತ್ತದೆ. ಹಬ್ಬ, ಜಾತ್ರೆ ಮತ್ತು ವಿಶೇಷ ಸಂದರ್ಭಗಳಲ್ಲಿ ಜಂಗಮರನ್ನು ಮನೆಗೆ ಕರೆದು ಅವರ ಪಾದಪೂಜೆ ಮಾಡಿ ಪಾದವನ್ನು ತೊಳೆದು ನೀರನ್ನು ತೀರ್ಥವಾಗಿ ಸೇವಿಸಿ ಉಳಿದ ನೀರನ್ನು ಮನೆಯಲ್ಲೆಲ್ಲಾ ಸಿಂಪಡಿಸಿ ಆಮೇಲೆ ಜಂಗಮರಿಗೆ ಊಟವನ್ನು ಮಾಡಿಸಿದ ಮೇಲೆಯೇ ಉಳಿದವರು ಉಣ್ಣುತ್ತಾರೆ. ಹಾಸಿಗೆಯಲ್ಲಿ ಕುಳಿತು ಉಣ್ಣುವುದು, ಮಲಗಿ ಉಣ್ಣುವುದು, ಉಣ್ಣುವಾಗ ಮಾತನಾಡುವುದು ಇವೆಲ್ಲವು ಅನಿಷ್ಟ ಪದ್ಧತಿಗಳೆಂಬ ನಂಬಿಕೆ ಇದೆ.

ಊಟ ಮಾಡುವಾಗ ಒಂದಗಳ ಅನ್ನವನ್ನು ತಾಟಿನಲ್ಲಿ ಬಿಡಬಾರದು ಎನ್ನುವ ನಂಬಿಕೆ ಇರುತ್ತದೆ. ಹೀಗೆ ತಾಟಿನಲ್ಲಿ ಅನ್ನವನ್ನು ಬಿಟ್ಟರೆ ಮುಂದೆ ಬಡತನ ಬರುತ್ತದೆ ಎಂದು ನಂಬುತ್ತಾರೆ. ಹೀಗಾಗಿ ಊಟವಾದ ಮೇಲೆ ಊಟದ ತಾಟಿನಲ್ಲಿ ನೀರನ್ನು ಹಾಕಿಕೊಂಡು ಕುಡಿಯುತ್ತಾರೆ. ಲಿಂಗವಂತರು ಊಟ ಮಾಡಿದಮೇಲೆ ತಾಟಿಗೆ ಅಧಿಕ ಚಿನ್ನೆಯಲ್ಲಿ ವಿಭೂತಿಯನ್ನು ಹಚ್ಚುತ್ತಾರೆ. ಊಟ ಮಾಡುವಾಗ ಎದ್ದು ಹೋಗಬಾರದು ಎನ್ನುವ ನಂಬಿಕೆ ಇದೆ. ಯಾರೇ ಎಷ್ಟೇ ದೊಡ್ಡ ಅತಿಥಿಗಳು ಮನೆಗೆ ಬಂದರೂ ಊಟದ ಎಡೆಯ ಮೇಲಿಂದ ಎದ್ದು ಹೋಗುವುದಿಲ್ಲ.

ಊಟಮಾಡುವಾಗ ಬಿಕ್ಕಳಿಕೆ ಬಂದರೆ ಯಾರಾದರೂ ನೆಂಟರು ನೆನೆಸುತ್ತಿರಬೇಕು ಎಂಬ ನಂಬಿಕೆ ಇದೆ. ಅಡಿಗೆ ಮಾಡುವಾಗ ಒಲೆ ಒದರಿದರೆ, ರೊಟ್ಟಿ ತೆವೆ ನಕ್ಕರೆ(ಅಂದರೆ ತೆವೆಗೆ ಬೆಂಕಿ ಕಿಡಿ ತಾಗಿದರೆ) ಯಾರಾದರೂ ಮನೆಗೆ ನೆಂಟರು ಬರುವರು ಎಂದು ನಂಬುವರು. ಅಕ್ಕಿ ಆರಿಸುವಾಗ (ಹಸನು ಮಾಡುವಾಗ) ಕಾಗೆ ಒದರಿದರೆ ಯಾರಾದರು ನೆಂಟರು ಬರುವರೆಂದು ನಂಬಿ ಹೆಚ್ಚಿಗೆ ಅಡಿಗೆಯನ್ನು ಮಾಡುವರು. ಊಟಮಾಡುವಾಗ ಕೈಯೊಳಗಿನ ತುತ್ತು ಜಾರಿ ಕೆಳಗೆ ಬಿದ್ದರೆ ಅನಿಷ್ಟ ಎಂದು ಭಾವಿಸುವರು. ಆದಿನ ಯಾವುದೇ ಒಳ್ಳೆಯ ಕೆಲಸಗಳನ್ನು ಮಾಡುವುದಿಲ್ಲ. ಅಲ್ಲದೆ ಹೊರಗೆ ಪ್ರಯಾಣವನ್ನು ಬೆಳಸುವದಿಲ್ಲ.

ರೊಟ್ಟಿ ಮಾಡುವಾಗ ರೊಟ್ಟಿ ಬಹಳ ಹರಿಯತೊಡಗಿದರೆ ಏನಾದರು ಕೆಟ್ಟದ್ದು ನಡೆಯುತ್ತದೆ ಎಂಬ ನಂಬಿಕೆ. ಚಿಕ್ಕ ಮಕ್ಕಳಿಗೆ ಉಣ್ಣಿಸುವಾಗ ಯಾರೂ ಹೊರಗಿನವರು ನೋಡಬಾರದು ಎಂದು ಒಂದು ವೇಳೆ ನೋಡಿದರೆ ಮಕ್ಕಳ ಹೊಟ್ಟೆ ಕೆಡುತ್ತದೆ ಎಂಬ ನಂಬಿಕೆ ಇದೆ. ಊಟಮಾಡುವಾಗ ಊಟದ ತಾಟನ್ನೂ ಅಡ್ಡ ದಾಟಿದರೆ ಬಡತನ ಬರುತ್ತದೆ ಎಂಬ ನಂಬಿಕೆಯಿದೆ. ಹಾಲು ಕಾಸುವಾಗ ಹಾಲು ಉಕ್ಕಿ ಬಿದ್ದರೆ ಶುಭ. ಅನ್ನ

ಮಾಡುವಾಗ ಅನ್ನ ಹೊತ್ತಿದರೆ ಶುಭ. ಕಾಯಿಪಲ್ಲೆಯನ್ನು ಅಡ್ಡ ಹೋಳಿದರೆ ಅಶುಭ. ಸಂಜೆಯ ಹೊತ್ತು ಉಪ್ಪು, ಹುಳಿ, ಕಾರವನ್ನು ಬೇರೆಯವರಿಗೆ ಕೊಟ್ಟರೆ ಅಶುಭ. ಊಟದ ಎಡೆಯಲ್ಲಿ ಉಗುಳಿದರೆ ಅಶುಭ. ನೀರನ್ನು ಕುಡಿದು ಚರಿಗೆಯನ್ನು ದಬ್ಬ ಹಾಕಿದರೆ ಅಶುಭ. ಅನ್ನದಲ್ಲಿ ಕೈ ತೊಳೆದರೆ ಅಶುಭ ಹೀಗೆ ಹಲವಾರು ನಂಬಿಕೆಗಳು ಬೆಳಗಾವಿಯ ಜನಪದರಲ್ಲಿ ಕಂಡುಬರುತ್ತವೆ. ಇವುಗಳಲ್ಲಿ ಕೆಲವು ಮೂಢನಂಬಿಕೆಗಳಾಗಿದ್ದರೂ ಹಲವಾರು ನಂಬಿಕೆಗಳಲ್ಲಿ ವೈಜ್ಞಾನಿಕ ಮಹತ್ವವನ್ನು ಕಾಣಬಹುದಾಗಿದೆ. ಜಾತಿ, ಧರ್ಮಕ್ಕನುಗುಣವಾಗಿ ಕೆಲವು ಸಂಪ್ರದಾಯಗಳನ್ನು ಅಡಿಗೆ ಊಟದ ಸಂದರ್ಭಗಳಲ್ಲಿ ಪಾಲಿಸುತ್ತಾರೆ.

ವೈಷ್ಣವರು ಊಟಕ್ಕೆ ಕುಳಿತಾದ ಮೊದಲು ಉಪ್ಪನ್ನು ಹಾಗೂ ಕೊನೆಗೆ ತುಪ್ಪವನ್ನು ಬಡಿಸುವರು. ಆದರೆ ಅಶುಭ ಕಾರ್ಯಗಳಲ್ಲಿ ಮೊದಲು ತುಪ್ಪವನ್ನು ಬಡಿಸಿ ಉಪ್ಪು ಬಡಿಸುವುದೇ ಇಲ್ಲ. ಉದ್ದು ಮಾಂಸದ ಪ್ರತಿನಿಧಿಯೆಂದು ತಿಳಿದು ಶುಭ ಕಾರ್ಯಗಳಲ್ಲಿ ಉದ್ದನ್ನು ಬಳಸುವುದಿಲ್ಲ. ಆದರೆ ಅಶುಭ ಕಾರ್ಯಗಳಲ್ಲಿ ಉದ್ದಿನ ಪದಾರ್ಥ ಕಡ್ಡಾಯವಾಗಿ ಇರಲೇಬೇಕು. ಅಡಿಗೆಯು ಸಿದ್ಧವಾದ ಬಳಿಕ ಅದನ್ನು ಮೊದಲು ವಿಷ್ಣುವಿಗೆ ನೈವೇದ್ಯ ತೋರಿಸಿ ಆಮೇಲೆ ಇತರ ದೇವರುಗಳಿಗೆ ತೋರಿಸುವರು. ಶುಭ ಕಾರ್ಯಗಳಲ್ಲಿ ಊಟದ ಕಾಲಕ್ಕೆ ಬಾಳೇ ಎಲೆಗಳನ್ನು ಉಪಯೋಗಿಸಿದರೆ ಅವುಗಳ ತುದಿಗಳನ್ನು ಊಟಕ್ಕೆ ಕೂಡ್ರುವವನ ಎದುರಿಗಾಗಲಿ ಎಡಕ್ಕಾಗಲಿ ಮಾಡುವರು. ಆದರೆ ಅಶುಭ ಕಾರ್ಯಗಳಲ್ಲಿ ಎಲೆಯ ತುದಿಯನ್ನು ಬಲಕ್ಕೆ ಮಾಡುವರು. ಕುಣಬಿ ಜಾತಿಯ ಜನರು 'ಮಾಳಲಾವಣೇ' (ಮಾಲೆ ಏರಿಸುವುದು) ಎಂಬ ಪದ್ಧತಿಯನ್ನು ಆಚರಿಸುತ್ತಾರೆ. ಇದು ಮನೆಯಲ್ಲಿ ಯಾರಾದರೂ ಸತ್ತರೆ ಸತ್ತವರ ದಿನ ಕಾರ್ಯ ತೀರಿದ ಬಳಿಕ ಆಚರಿಸುತ್ತಾರೆ. ಅಂದು ಮಾಂಸದ ಊಟವನ್ನು ಮಾಡಿಸುತ್ತಾರೆ. ಇವರ ಮನೆಯ ಅಕ್ಕಪಕ್ಕದಲ್ಲಿ ಯಾರಾದರೂ ಸತ್ತರೆ ಹೆಣವನ್ನು ಒಯ್ಯುವವರೆಗೆ ಊಟವನ್ನು ಮಾಡುವುದಿಲ್ಲ. ಊಟಮಾಡುವಾಗ ದೀಪ ಆರಿದರೆ ಊಟವನ್ನು ಬಿಡುತ್ತಾರೆ. ಇವರಲ್ಲಿ ಕೆಲವರು ಸಾಕಿದ ಪ್ರಾಣಿಗಳ ಮಾಂಸವನ್ನು ತಿನ್ನುವುದಿಲ್ಲ. ಅಡವಿಯ ಪಶುಗಳ ಮಾಂಸವನ್ನು ತಿನ್ನುತ್ತಾರೆ.

ಬ್ರಾಹ್ಮಣರಲ್ಲಿ ಮಂಡಿಗೆಯ ಊಟವು ವಿಶೇಷವಾಗಿ ಮದುವೆ ಸಂದರ್ಭದಲ್ಲಿ ಬಳಕೆಯಾಗುತ್ತದೆ. ಮದುವೆಯ ಮುನ್ನಾದಿನ ವರ, ವರನ ತಾಯಿ, ತಂಗಿ ಮೊದಲಾದ ಐದು ಜನರನ್ನು ಕೂಡ್ರಿಸಿ 'ಕುಬ್ಬೊಂತೆಂಬ' ಊಟ ಮಾಡಿಸುವ ಶಾಸ್ತ್ರವನ್ನು ನೆರವೇರಿಸುತ್ತಾರೆ. ಆತ ಪ್ರತಿಯೊಬ್ಬರಿಗೆ ಒಂದೊಂದು ಮುರಿಯಲಾರದ ಬಾಳೆ ಎಲೆಯಲ್ಲಿ ಒಂದೊಂದು ಇಡಿಯಾಗಿ ಮಂಡಿಗೆಯನ್ನು ಊಟಕ್ಕೆ ನೀಡುತ್ತಾರೆ.

ಮನೆಯಲ್ಲಿ ಯಾರಾದರು ಸತ್ತರೆ ಅವರ ತಿಥಿಯನ್ನು ಮಾಡುವುದು ಎಲ್ಲಾ ಧರ್ಮಗಳಲ್ಲಿ ಸಾಮಾನ್ಯವಾಗಿ ಕಂಡು ಬರುತ್ತದೆ. ಇದನ್ನು ಮೂರು, ಐದು, ಏಳು, ಒಂಬತ್ತು, ಹನ್ನೊಂದು, ಹದಿಮೂರನೇ ದಿನಕ್ಕೆ(ಬೆಸ ಸಂಖ್ಯೆಯ ದಿನ) ಧರ್ಮಕ್ಕನುಗುಣವಾಗಿ ಮಾಡುತ್ತಾರೆ. ತಿಥಿಯ ಸಂದರ್ಭದಲ್ಲಿ ಮಾಡುವ ಅಡಿಗೆಯ ಕ್ರಮ

ಸಂಪ್ರದಾಯಗಳು ಬೇರೆ ಬೇರೆಯಾಗಿವೆ. ಹಿಂದೂ ಸಂಸ್ಕೃತಿಯಲ್ಲಿ ಮರುಜನ್ಮವನ್ನು ನಂಬುವುದರಿಂದ ಈ ತಿಥಿಕಾರ್ಯಕ್ರಮವನ್ನು ಸಂತೋಷದ ಸಮಾರಂಭದಂತೆಯೇ ಆಚರಿಸುತ್ತಾರೆ. ಅಂದು ತರತರಹದ ಅಡಿಗೆಯನ್ನು ಮಾಡಿ ಊರಿನ ಜನರನ್ನು, ಬಂಧು ಬಳಗದವರನ್ನು ಕರೆದು ಉಣಿಸುತ್ತಾರೆ. ಲಿಂಗಾಯತರಲ್ಲಿ ಇದಕ್ಕೆ ಕೈ ಬಾಯಿ ತೊಳೆಸುವುದು ಅನ್ನುತ್ತಾರೆ. ಗೋದಿ ಹುಗ್ಗಿ, ಅನ್ನ ಸಾರಿನ ಅಡಿಗೆಯನ್ನು ಸಾಮಾನ್ಯವಾಗಿ ಎಲ್ಲರೂ ಮಾಡುತ್ತಾರೆ. ಬ್ರಾಹ್ಮಣರಲ್ಲಿ ಇಂಥ ಸಂದರ್ಭದಲ್ಲಿ ರವೆಯ ಉಂಡಿ, ಶ್ಯಾವಿಗೆಯ ಪಲ್ಲೆ, ಸಜ್ಜಕದ ಹೋಳಿಗೆ ಕಡ್ಡಾಯವಾಗಿರುತ್ತದೆ. ಮುಸ್ಲಿಂರು ಮತ್ತು ಕ್ರಿಶ್ಚಿಯನ್ನರು ಹೆಚ್ಚಾಗಿ ಮಾಂಸದ ಅಡಿಗೆಯನ್ನು ಮಾಡುತ್ತಾರೆ.

ಹೀಗೆ ಬೆಳಗಾವಿಯು ಸಾಂಸ್ಕೃತಿಕವಾಗಿ ಬೆಳವಣಿಗೆಯನ್ನು ಹೊಂದಲು, ಬೆಳಗಾವಿಯು ಪ್ರತ್ಯೇಕವಾಗಿ ಗುರುತಿಸಲ್ಪಡಲು ಇಲ್ಲಿಯ ಊಟ-ಉಪಚಾರ, ತಿಂಡಿ-ತಿನಿಸುಗಳು ಪ್ರಮುಖ ಕಾರಣವಾಗಿರುವುದು ಮಹತ್ವಪೂರ್ಣವಾಗಿದೆ. ಬೆಳಗಾವಿಯ ವೈಶಿಷ್ಟ್ಯಗಳಲ್ಲಿ ಒಂದಾದ ಇಲ್ಲಿಯ ಆಹಾರ ಪದ್ಧತಿಯು ಬೆಳಗಾವಿಯ ಜನ-ಜೀವನ, ಸಾಮಾಜಿಕ ಸ್ಥಿತಿಯನ್ನು ತಿಳಿಸಿಕೊಡುವ ಪ್ರಮುಖವಾದ ಅಂಶವಾಗಿದೆ.

**೪. ವಾಣಿಜ್ಯ ಉದ್ಯಮ:**

ವೈವಿಧ್ಯಮಯ ಐತಿಹಾಸ ಮತ್ತು ಸಾಂಸ್ಕೃತಿಕ ಹಿನ್ನೆಲೆ ಹೊಂದಿರುವ ಬೆಳಗಾವಿ ಕರ್ನಾಟಕದ ಐದನೆಯ ಅತ್ಯಂತ ದೊಡ್ಡ ನಗರ. ಕ್ರಿ. ಶ. ಪೂರ್ವದಿಂದಲೇ ಬೆಳಗಾವಿ ಪ್ರಮುಖ ವ್ಯಾಪಾರಿಕೇಂದ್ರವಾಗಿರುವುದು ಆಧಾರಗಳ ಮೂಲಕ ದೃಢಪಟ್ಟಿದೆ. ಶಾತವಾಹನರು, ರಟ್ಟರು, ವಿಜಾಪುರದ  ಬೆಳಗಾವಿ ಸುಲ್ತಾನರು ಮುಂತಾದವರ ಆಡಳಿತದ ಅವಧಿಯಲ್ಲಿ ಬೆಳಗಾವಿ ಅಭಿವೃದ್ಧಿಯನ್ನು ಹೊಂದಿ ದೇಶ ವಿದೇಶಗಳ ಜೊತೆಗೆ ವ್ಯಾಪಾರ ವಾಣಿಜ್ಯ ಸಂಬಂಧವನ್ನಿಟ್ಟುಕೊಂಡಿತ್ತು. ಈ ಹಂತವನ್ನು ಪ್ರಮುಖವಾಗಿ ಶಾಸನ, ನಾಣ್ಯಗಳು, ವಿದೇಶಿ ಪ್ರವಾಸಿಗರ ಉಲ್ಲೇಖಗಳು ಮತ್ತು ಪ್ರಾಚೀನ ಸ್ಮಾರಕಗಳ ವಾಸ್ತವಿಕ ಅಧ್ಯಯನ ಮೂಲಕ ಗುರುತಿಸಬಹುದಾಗಿದೆ.

ಬೆಳಗಾವಿ ಕಾಡು, ಗುಡ್ಡ, ಕಣಿವೆಗಳಿಂದ ಆವೃತ್ತವಾಗಿ ಸಹ್ಯಾದ್ರಿ ಬೆಟ್ಟದ ಬುಡದಲ್ಲಿ ನೆಲೆಗೊಂಡು ಭೌಗೋಳಿಕವಾಗಿ ಮಹತ್ವವನ್ನು ಪಡೆದುಕೊಂಡಿದೆ. ಬಿದಿರಿನ ಬೆಳೆ ಹೆಚ್ಚಾಗಿರುವುದರಿಂದ ಇದಕ್ಕೆ ವೇಣುಗ್ರಾಮವೆಂದು ಕಬ್ಬು ಹೆಚ್ಚಾಗಿ ಬೆಳೆಯುವದರಿಂದ ಇಕ್ಷುಗ್ರಾಮವೆಂದೂ ಅನ್ವರ್ಥನಾಮವು ಬಂದಿತು. ವೇದಗಳ ಕಾಲದಲ್ಲಿಯೇ ಇಲ್ಲಿ ವೇದಗಳ ಹಸ್ತಪ್ರತಿಗಳನ್ನು ತಯಾರಿಸುತ್ತಿದ್ದರು.

ಇಲ್ಲಿ ದೊರೆತ ಶಾತವಾಹನರ ಕಾಲದ ನಾಣ್ಯಗಳಲ್ಲಿ ಪ್ರಾಕೃತ ಭಾಷೆಯಲ್ಲಿ ಬರೆದ ಯಜ್ಞಸಿರಿ ಸಾತಕರ್ಣಿ ಎಂಬ ಉಲ್ಲೇಖ ಬರುತ್ತದೆ.[೭] ಯಜ್ಞಸಿರಿ ಎನ್ನುವುದು ಸಾತಕರ್ಣಿಗೆ ಇದ್ದ ಬಿರುದು. ಅಂದರೆ ಯಜ್ಞಗಳನ್ನು ಹೆಚ್ಚಿನ ಪ್ರಮಾಣದಲ್ಲಿ ನೆರವೇರಿಸುತ್ತಿದ್ದುದರಿಂದ ಈ ಬಿರುದು ಬಂದಿದೆ. ಈ ಎಲ್ಲ ಹಿನ್ನೆಲೆಗಳನ್ನು ಗಮನಿಸಿದಾಗ ಬೆಳಗಾವಿಯ

ಪ್ರಮುಖವಾದ ಧಾರ್ಮಿಕ ಕೇಂದ್ರವಾಗಿದ್ದು ಅಲ್ಲಿ ವೇದಗಳ ಪ್ರತಿಕಾರ್ಯ ನಡೆದು ಅವುಗಳ ಪ್ರಮುಖ ವ್ಯಾಪಾರಿ ಕೇಂದ್ರವೂ ಆಗಿರುವುದು ಸ್ಪಷ್ಟಗೊಳ್ಳುತ್ತದೆ. ಇದು ಶಾತವಾಹನರಕ್ಕಿಂತ ಪೂರ್ವದಲ್ಲಿಯೇ ನಡೆದಿರಬಹುದಾದ ಸಾಧ್ಯತೆಗಳಿವೆ. ಶಾತವಾಹನರ ಕಾಲಕ್ಕೆ ಬೆಳಗಾವಿ ಸುವ್ಯವಸ್ಥಿತ, ಸಂಪದ್ಭರಿತ, ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು.[೮] ಇಲ್ಲಿ ಮುದ್ರಾಂಕಿತ ತಾಮ್ರದ ಮಿಶ್ರಲೋಹದ ಬೇರೆ ಬೇರೆ ಕಾಲದ ವಿವಿಧ ನಾಣ್ಯಗಳಾದ ಕ್ಷತ್ರಪ, ರೋಮನ್, ದೀನಾರ್ ಮುಂತಾದ ನಾಣ್ಯಗಳು ದೊರೆತಿರುವುದರಿಂದ ಇದೊಂದು ದೊಡ್ಡ ವ್ಯಾಪಾರ ಕೇಂದ್ರವಾಗಿದ್ದು ಬೇರೆ ಬೇರೆ ದೇಶಗಳಿಂದ ವ್ಯಾಪಾರಸ್ಥರು ಬರುತ್ತಿದ್ದರು. ದೊಡ್ಡ ದೊಡ್ಡ ಸಾರ್ವಜನಿಕ ಬೀದಿಗಳು, ಕಟ್ಟಡಗಳು ಸುತ್ತಲು ಇರುವ ಕೋಟೆ ಇವೆಲ್ಲ ಅವಶೇಷಗಳು ಪ್ರಾಚೀನ ಬೆಳಗಾವಿ ವ್ಯಾಪಾರಿ ಕೇಂದ್ರವಾಗಿರುವುದನ್ನು ದೃಢಪಡಿಸುತ್ತವೆ. ಅಲ್ಲದೆ ನಾಣ್ಯಗಳ ತಯಾರಿಕೆಯ ಅಚ್ಚುಗಳೂ ದೊರೆತಿರುವುದರಿಂದ ರಾಜಕೀಯವಾಗಿಯೂ ಪ್ರಾಮುಖ್ಯತೆಯನ್ನು ಪಡೆದುಕೊಂಡಿದ್ದು ತಿಳಿದುಬರುತ್ತದೆ. ಬೆಳಗಾವಿಯ ವಡಗಾವಿ-ಮಾಧವಪುರ ನೆಲೆಯ ಸಮಕಾಲೀನವಾದ ಹಲವಾರು ಪಟ್ಟಣಗಳು ಈ ಪ್ರದೇಶದೊಂದಿಗೆ ವ್ಯಾಪಾರ ಸಂಬಂಧವನ್ನು ಹೊಂದಿದ್ದವು.

ಶಾತವಾಹನರು ರೋಮನ್ ಸಾಮ್ರಾಜ್ಯದೊಂದಿಗೆ ಹೆಚ್ಚಿನ ವ್ಯಾಪಾರ ಸಂಬಂಧವನ್ನು ಇಟ್ಟುಕೊಂಡಿದ್ದರು. ಹೀಗಾಗಿ ಸಮೃದ್ಧ ವಾಣಿಜ್ಯದಿಂದಾಗಿ ಎಲ್ಲ ನಗರಗಳೂ ಅಭಿವೃದ್ಧಿಯನ್ನು ಹೊಂದಲು ಸಾಧ್ಯವಾಯಿತು. ಆದರೆ ಕ್ರಿ.ಶ. ಮೂರನೆಯ ಶತಮಾನದಲ್ಲಿ ರೋಮನ್ ಸಾಮ್ರಾಜ್ಯದೊಂದಗಿನ ವ್ಯಾಪಾರ ವಾಣ್ಯಾಜ್ಯದಲ್ಲಿ ಕಂಡು ಬಂದ ಕುಸಿತದಿಂದಾಗಿ[೯] ಹಲವಾರು ನಗರ ಕೇಂದ್ರಗಳು ಅವನತಿಯತ್ತ ಸಾಗುವಲ್ಲಿ ಹಲವಾರು ಕಾರಣಗಳಲ್ಲಿ ಇದು ಪ್ರಮುಖವಾಯಿತು.

ಈ ಎಲ್ಲ ವಿಷಯಗಳಿಂದ ತಿಳಿದು ಬರುವದೇನೆಂದರೆ ವಡಗಾವಿ-ಮಾಧವಪುರ ಪ್ರದೇಶದಲ್ಲಿದ್ದ ನಗರವು(ಯದುಗ್ರಾಮ) ಮಹತ್ವದ ವ್ಯಾಪಾರ ಕೇಂದ್ರವಾಗಿದ್ದು ವ್ಯಾಪಾರ-ವಾಣಿಜ್ಯದ ವಿನಿಮಯ ಸಾಧನವಾಗಿ ನಾಣ್ಯವನ್ನು ಬಳಸಲಾಗುತ್ತಿತ್ತು. ಅಲ್ಲದೆ ವ್ಯಾಪಾರಸ್ಥರು ಉತ್ತರ ಮತ್ತು ದಕ್ಷಿಣ ಭಾರತದ ಮಧ್ಯೆ ಸಂಚರಿಸಿ ವ್ಯಾಪಾರ ನಡೆಸುತ್ತಿದ್ದರು ಎನ್ನುವುದು ಸ್ಪಷ್ಟಗೊಳ್ಳುತ್ತದೆ. ಅಲ್ಲದೆ ನಾಣ್ಯಗಳನ್ನು ತಯಾರಿಸುವ ಅಚ್ಚುಗಳು ದೊರೆತಿರುವುದರಿಂದ ಈ ಭಾಗವು ಶಾತವಾಹನರ ನೇರ ಆಡಳಿತಕ್ಕೆ ಒಳಪಟ್ಟಿರಬಹುದಾಗಿದೆ.

ಸವದತ್ತಿಯ ರಟ್ಟರ ಆಳ್ವಿಕೆಯ ಕಾಲದಲ್ಲಿ ಬೆಳಗಾವಿ (ವೇಣುಗ್ರಾಮ) ಮಹತ್ವವನ್ನು ಪಡೆದುಕೊಂಡಿತು. ಇವರು ಕ್ರಿ.ಶ. ೯೩೦ ರಿಂದ ಕ್ರಿ.ಶ. ೧೨೩೦ ರವರೆಗೆ ಮೂರುನೂರು ವರ್ಷದವರೆಗೆ ಕೂಹೂಂಡಿ ಮಂಡಲವನ್ನು (ಇಂದಿನ ಬೆಳಗಾವಿ ನಾಡು) ಆಳಿದರು.[೧೦] ಕ್ರಿ.ಶ. ೧೨೦೪ ರಿಂದ ಕ್ರಿ.ಶ. ೧೨೨೦ ರವರೆಗೆ ಸುಮಾರು ೧೮ ವರ್ಷಗಳ ಬೆಳಗಾವಿ (ವೇಣುಗ್ರಾಮ) ರಟ್ಟರ ರಾಜಧಾನಿಯಾಗಿತ್ತು.[೧೧] ರಟ್ಟರ ನಾಲ್ಕನೆಯ ಕಾರ್ತವೀರ್ಯನ ಕಾಲದಲ್ಲಿ ಸವದತ್ತಿಯಿಂದ ಬೆಳಗಾವಿಗೆ ರಾಜಧಾನಿ ಸ್ಥಳಾಂತರಗೊಂಡಿತು. ಈ ಅವಧಿಯಲ್ಲಿ ಬೆಳಗಾವಿ ಸಾಹಿತ್ಯ

ವಾಸ್ತು, ಶಿಲ್ಪಕಲೆ, ವಾಣಿಜ್ಯ ಕ್ಷೇತ್ರದಲ್ಲಿ ಮಹತ್ವದ ಬೆಳವಣಿಗೆಯನ್ನು ಹೊಂದಿತು. ಭದ್ರವಾದ ಕೋಟೆಯನ್ನು ಕಟ್ಟಿಸಿ ಸ್ವತಂತ್ರ ರಾಜನಾಗಿ ಆಳುತ್ತಿದ್ದ ಸಮಯದಲ್ಲಿ ಲಾಟ, ಕೇರಳ ದೇಶಗಳಿಂದ ವ್ಯಾಪಾರಸ್ಥರು ಬರುತ್ತಿದ್ದರು. ಬೆಳಗಾವಿಯು ಆಗ ಒಳ್ಳೆ ಸಂಪದ್ಭರಿತ ನಾಡಾಗಿತ್ತು.[೧೨]

ಕ್ರಿ.ಶ. ೧೨೦೪ ರಲ್ಲಿಯ ನಾಲ್ವಡಿ ಕಾರ್ತವೀರ್ಯನ ಶಾಸನವು[೧೩] ಬೆಳಗಾವಿಯ ಅಂದಿನ ವಾಣಿಜ್ಯ ವ್ಯಾಪಾರದ ಸ್ವರೂಪವನ್ನು ಸ್ಪಷ್ಟವಾಗಿ ತೆರೆದಿಡುತ್ತದೆ. ವ್ಯಾಪಾರದ ವಸ್ತುಗಳು ವ್ಯಾಪಾರಿಗಳು ಮತ್ತು ವಸ್ತುಗಳ ಮೇಲೆ ವಿಧಿಸುತ್ತಿದ್ದ ಸುಂಕವನ್ನು ಸಹ ಈ ಶಾಸನವು ತಿಳಿಸುತ್ತದೆ. ಹೀಗಾಗಿ ಇದು ಅಂದಿನ ಬೆಳಗಾವಿಯ ವಾಣಿಜ್ಯದ ಸ್ಪಷ್ಟವಾದ ಚಿತ್ರಣವನ್ನು ನೀಡುವ ಮಹತ್ವದ ದಾಖಲೆಯಾಗಿದೆ.

"ಬಡಗನಿಬಂದ ಕುದುರಗೆನೆಲ ಮೆಟ್ಟು ಹಾಗವೊಂದು, ತೆಂಕಲ್ ನಡೆವರ್ಕ್ಕ ಸುಂಕ ಹಾಗವೊಂದು ಮಲಿಯಾಳರ ಕುದುರೆಗೆ ಹಾಗವೊಂದು ಆರುವತ್ತಯ್ದಿತ್ತು ಕೋಣಂಗಳೊಳೇನಂ ಪೇರಿಗೊಂಡಂ ಸರ್ವಭಾಧಾ ಪರಿಹಾರಂ ಚಿನ್ನ ಗೆಯಿಕದ ಚೀರಕ್ಕೆ ದೊಸಿಗವಸರಕ್ಕೆ ಹತ್ತಿ ವಸರಕ್ಕೆ ಮಣಿಗಾರ ವಸರಕ್ಕೆ, ಗಂಧರ್ವ ವಸರಕ್ಕೆ ಗಂಧ ವರ್ಣಿರಂಗಡಿಗೆ ಅಕ್ಕಸಾಲಿಗ ಮಠಕ್ಕೆ ಬೇರೆ ಬೇರೆ ಬರಿಸಿದರೆ, ಹಿರಿಯ ಹಾಗವೊಂದು ಹೊರಗಿನಿಂ ಬಂದ ಸೀರೆಯ ಕಡೆ ವೀಸವೊಂದವು ಹೊರಗನಿಯಿಂದ ಗಂಧ ವಣಕ್ಕೆ ಕಷ ಬಂಡಕ್ಕೆ ಆಭಂಡಂ ಗದ್ಯಾಣಂ ತೂಕವಯ್ದು ಹತ್ತಯ ಭಂಡಿಗೆ ಅರಂ ಮೂರು ಅಪೇರಿಂಗೆ ಕಾಣಿಯೊಂದು ಭತ್ತದ ಬಂಡಿಗೆ ಭತ್ತವೋರ್ವಳಂ ಭತ್ತ ವೆಸರ ದಂಗಡಿಗೆ ಭತ್ತ ನಿಚ್ಚಸೊಲ್ಲಿಗೆ ಅಕ್ಕಿ ವಸರಕ್ಕೆ ಅಕ್ಕಿಯದ್ದಂ ಮೆಳಸಿನಹೇರಿಂಗೆ ಮೆಳಸೊರ್ಮ್ಮನಂ ಜವಳಕ್ಕೆ ಅಕಿವಾನಂ ಇಂಗಿನ ಪಟ್ಟಿಗೆಗೆ ಇಂಗುಗದ್ಯಾನಂ ತೂಕವಾರು ಅಲ್ಲಿ ಅರಿಸದನಜವಳಕ್ಕೆ ಅಭಂಡಂಫಲವಯ್ದು ಆಹೇರಿಂಗೆ ಅಲ್ಲ ಅರಿಷಿಣಂ ಫಲಂ ಹತ್ತು ಗಾಣಕ್ಕೆ ನಿಚ್ಚ ಎಣ್ಣೆಯದಂ ಅಡಿಕೆಯ ಹೇರಿಂಗೆ ಅಡಕೆ ಇಪ್ಪತ್ತೈಯ್ದು ಆ ಜವಳಕ್ಕೆ ಅಡಿಕೆ ಹನ್ನೆರಡು ಎಲೆಯ ಹೇರಿಂಗೆಲೆ ಸೂರಿ ಹೊರೆಗೆಲೆಯ ಯ್ವತ್ತು ತೆಂಗಿನಕಾಯ ಹೇರಿಂಗಾ ಕಾಯೊಂದು ಓಲೆಯ ಹೇರಿಂಗೆ ಓರೆಯ ಸೂಹೆರಡು ಆ ಹೊರೆಗೆ ಸೂಡೊಂದು ಹೊರಗಿನಿಂ ಬಂದ ಬೆಲ್ಲದ ಬಂಡಿಗೆ ಬೆಲ್ಲದಚ್ಚು ಹದಿನೈದು ಆ ಹೊರೆಗೆ ಕಯ್ಮುರು ನೆಲ್ಲಿಯ ಕಾಯ ಹೆರಿಂಗೆ ಕಾಯ್ಬುಳ್ಳವೊಂದು ಕರ್ವ್ವಿಸ ಹಗೆರಕ್ಕೆ ಒಂದು ಕರ್ವು ಬಹಳದ ಹೇರಿಂಗೆ ಬಳಗೆ ವೊರ್ಪಲಂ"

ಹೀಗೆ ಈ ಶಾಸನವು ಅಂದಿನ ಕಾಲದ ಬೆಳೆಗಳು, ವ್ಯಾಪಾರ, ಸುಂಕ ಅಳತೆಯ ಮಾಪನಗಳು ಮುಂತಾದ ವಿಷಯಗಳ ಮೇಲೆ ಬೆಳಕು ಚಲ್ಲುತ್ತದೆ.

ಬೆಲ್ಲದ ಬಂಡೆಯ ಹೆಸರನನ್ನು ಹೇಳುವುದರಿಂದ ಬೆಲ್ಲ ತಯಾರಿಕೆ ಮತ್ತು ವ್ಯಾಪಾರ ನೆರೆನೂಲಿನೊಳ ಮಗ್ಗದೆರೆಯನು ಎಂಬುದರಿಂದ ನೇಕಾರಿಕೆ ಉದ್ಯೋಗವನ್ನು ಲಾಳ ವ್ಯವಹಾರಿಗಳು ಎಂಬುದು ದನಗಳಿಗೆ ಲಾಳ

ತಯಾರಿಕೆಯನ್ನು ಇಲ್ಲಿ ಕಾಣಬಹುದು. ರೈತನ ಉಪಕರಣಗಳನ್ನು ತಯಾರಿಸುವ ಕಮ್ಮಾರ, ಮಡಿಕೆ ತಯಾರಿಸುವ ಕುಂಬಾರ, ಬೆಳ್ಳಿ ಬಂಗಾರದ ವಡವೆಗಳನ್ನು ನಾಣ್ಯಗಳ ಪಡಿಯಚ್ಚ ಮಾಡುವವರು ಟಂಕ ಸಾಲಿಗರು ಮತ್ತು ಚಿನ್ನಗೇಯಿಕರು ಎಂಬುದು ಅಕ್ಕಸಾಲಿಗರನ್ನು, ತಾಮ್ರ ಹಿತ್ತಾಳೆ ಕಂಚಿನ ಕೆಲಸಗಳನ್ನು ಮಾಡುವ ಕಂಚಗಾರರನ್ನು ಬೀಳೆದೆಲೆಯ ಸಂಗ್ರಹಿಸುವವರು ಅಂತವಟ್ಟಿಗರು ಯಕ್ಕಡ ಸಮಗಾರರನ್ನು, ಬಿದಿರಿನ ಕೆಲಸ ಮಾಡುವ ಮೇದಾರ ಹೀಗೆ ಅಂದಿನ ಪ್ರಮುಖ ವ್ಯಾಪಾರಿ ವಸ್ತುಗಳ ಮೇಲೆ ಬೆಳಕು ಚೆಲ್ಲುತ್ತದೆ. ನಾಲ್ವಡಿ ಕಾರ್ತವೀರ್ಯನ ಕಾಲದಲ್ಲಿ ರಾಜ್ಯದ ಪಶ್ಚಿಮ ದಕ್ಷಿಣ ಹಾಗೂ ಕೇರಳ ಗುಜರಾತಗಳಿಂದ ವರ್ತಕರು ಬರುತ್ತಿದ್ದರು. ಮುತ್ತು ರತ್ನ ವಜ್ರ ವೈಢೂರ್ಯಗಳನ್ನು ತಂದು ವ್ಯಾಪಾರ ಮಾಡುತ್ತಿದ್ದರು. ಸಾಂಬಾರ, ಗಂಧ, ಕರ್ಪೂರ ಮುಂತಾದವುಗಳನ್ನು ವಿದೇಶಗಳಿಗೂ ಕಳುಹಿಸುತ್ತಿದ್ದರು.

ವ್ಯಾಪಾರದಲ್ಲಿ ಕೊಡಕೊಳ್ಳುವ ವ್ಯವಹಾರವನ್ನು ಸುಗಮಗೊಳಿಸುವುದಕ್ಕಾಗಿ ಟಂಕ ಶಾಲೆಗಳಲ್ಲಿ ವಿಶ್ವಕರ್ಮರಿಂದ ರಾಜನ ಮುದ್ರೆಯ ನಾಣ್ಯಗಳನ್ನು ಚಲಾವಣೆಗೆ ತರಲಾಗುತ್ತಿತ್ತು. ನಾಣ್ಯಗಳಲ್ಲಿ ಹೊನ್ನ ಹಾಗ, ಬೆಳ್ಳಿ ಹಾಗ, ಮತ್ತು ಹಿರಿಯ ಹಾಗ ಎಂಬ ಮೂರು ಪ್ರಕಾರಗಳಿದ್ದವು. ಅದರಂತೆ ಪಣ, ಅಡ್ಡ, ವೀಸ, ಬೇಳೆ ಮುಂತಾದ ನಾಣ್ಯಗಳು ವ್ಯವಹಾರದಲ್ಲಿದ್ದವು.

ನಾಣ್ಯಗಳ ಬೆಲೆ ಈ ರೀತಿಯಾಗಿತ್ತು.

ಒಂದು ಗದ್ಯಾಣಕ್ಕೆ-ಹತ್ತು ಪಣ (ಹಣ)

ಒಂದು ಪಣಕ್ಕೆ-ಎರಡು ಅಡ್ಡ

ಒಂದು ಪಣಕ್ಕೆ-ಹದಿನಾರು ವೀಸ ಅಥವಾ ೨೦ ವೀಸ

ಒಂದು ಹಾಗ-ಎರಡು ಬೇಳೆ

ಹಾಗ ಎಂಬುದು ನಾಣ್ಯದ ವಿಶೇಷ. ನಾಲ್ಕು ಹಾಗ ಒಂದು ಹಣ ಹತ್ತು ಪಣ ಒಂದು ಗದ್ಯಾಣ. ರಟ್ಟರ ಕಾಲದಲ್ಲಿ ಬಂಗಾರದ ನಾಣ್ಯಗಳು ಚಲಾವಣೆಯಲ್ಲಿದ್ದವು. ಅವು ೪೮ ಗುಂಜಿ ಎಂದರೆ ಅರ್ಧ ತೊಲೆಯ ತೂಕದಿದ್ದವು. ನಾಣ್ಯಗಳಲ್ಲಿ ವೀಸವೇ ಅತ್ಯಂತ ಕನಿಷ್ಠವಾದದ್ದು. ಬೆಳ್ಳಿ, ಬಂಗಾರ, ಮುತ್ತು ರತ್ನದಂತಹ ಬೆಲೆಯುಳ್ಳ ವಸ್ತುಗಳನ್ನು ತೂಕದಿಂದ ಮಾರುತ್ತಿದ್ದರು. ಅವು ಭಾಗ, ತೊಲೆ, ಜೆಸಗೆ, ಪಲ, ಕರ್ಷ (ಅಂದರೆ ಒಂದು ಭಾಗ-೨೦ ತೊಲೆ, ಒಂದು ತೊಲೆ-೫ ಬೆಸಗೆ, ಒಂದು ಬೆಸಗೆ-೨೦ ಪಲ, ಒಂದು ಪಲ-೪ಕರ್ಷ, ಒಂದು ಕರ್ಷ-೪ ಸಂವರ್ಣ) ಈ ಮುಂತಾದ ಮಾಪಣದಲ್ಲಿ ನಡೆಯುತ್ತಿತ್ತು.

ವ್ಯಾಪಾರಿಗಳು ಧಾನ್ಯಗಳನ್ನು ಅಳತೆಯ ಮೂಲಕ ವ್ಯಾಪಾರ ಮಾಡುತ್ತಿದ್ದರು. ಕಾಳು, ಕಡಿ, ಎಣ್ಣೆ ಮುಂತಾದವುಗಳನ್ನು ಅಳತೆ ಮಾಡಲು ಕೊಳಗ, ಬಳ್ಳ, ಮಾನ, ವಮ್ಮನ, ಸೊಲ್ಲಿಗೆ ಹೇರು, ಖಂಡಗ ಮುಂತಾದ ಅಳತೆಯ ಸಾಧನಗಳನ್ನು ಬಳಸುತ್ತಿದ್ದರು.

ರಟ್ಟರ ಆಳ್ವಿಕೆಯಲ್ಲಿ ವ್ಯಾಪಾರಿಗಳು ಶಕ್ತಿಶಾಲಿಗಳಾಗಿದ್ದರು. ಹೀಗಾಗಿ ವ್ಯಾಪಾರಿಗಳ ಜೊತೆಗೆ ಉತ್ತಮವಾದ ಸಂಬಂಧವನ್ನು ರಾಜರು ಹೊಂದಿದ್ದರು. ಬೆಳಗಾವಿಯ ಕೋಟೆಯೊಳಗಿರುವ ಕಮಲಬಸದಿಗೆ ದತ್ತಿ ಬಿಡುವ ಸಂದರ್ಭದಲ್ಲಿ ಎಲ್ಲ ವ್ಯಾಪಾರಿಗಳ ಸಮ್ಮುಖದಲ್ಲಿ ದತ್ತಿ ಬಿಟ್ಟಿರುವುದನ್ನು ನೋಡಿದರೆ ವ್ಯಾಪಾರಿಗಳ ಜೊತೆಗಿನ ಸಂಬಂಧ ಸ್ಪಷ್ಟಗೊಳ್ಳುತ್ತದೆ.

ಆಗಿನ ವ್ಯಾಪಾರಿಗಳಲ್ಲಿ ಪ್ರಮುಖವಾಗಿ ವೀರ ಬಣಂಜ, ಮುಮ್ಮಡಿ ದಂಡಂಗಳೂ, ಶಟ್ಟಿಗುತ್ತರು, ಐಯ್ಯಾಹೊಳೆ ಐನೂರ್ವರು ಮುಂತಾದವರು ಪ್ರಸಿದ್ಧಿ ಪಡೆದ ವ್ಯಾಪಾರಿಗಳಾಗಿದ್ದರು. "ವೇಣುಗ್ರಾಮದ ಸ್ಥಳದ ಸಮಸ್ತ ಮುಮ್ಮರಿ ದಂಡಂಗಳೂ..." ಎನ್ನುವುದು ಶಾಸನದಲ್ಲಿ ಉಲ್ಲೇಖಗೊಂಡಿದೆ. ಹೀಗೆ ರಟ್ಟರ ಕಾಲದಲ್ಲಿ ಬೆಳಗಾವಿ (ವೇಣುಗ್ರಾಮ) ಪ್ರಮುಖ ವ್ಯಾಪಾರಿ ಕೇಂದ್ರವಾಗಿ ದೇಶ ವಿದೇಶಗಳ ಜೊತೆಗೆ ವ್ಯಾಪಾರಿ ಸಂಬಂಧವನ್ನು ಇಟ್ಟುಕೊಂಡಿತ್ತು. ರಾಜ್ಯದ ಮೂಲ ಆದಾಯದಲ್ಲಿ ವ್ಯಾಪಾರದಿಂದ ಬರುವ ತೆರಿಗೆಯೇ ಮುಖ್ಯವಾಗಿತ್ತು. ತಾಳೆಗರಿ ಮತ್ತು ಬಳಪಗಳೂ ಅಂದು ಬೆಳಗಾವಿಯಲ್ಲಿ ಮಾರಾಟವಾಗುತ್ತಿದ್ದು ಅವುಗಳ ಮೇಲೆಯೂ ಸುಂಕವನ್ನು ವಿಧಿಸಲಾಗುತ್ತಿತ್ತು. ಸರಕುಗಳನ್ನು ಸಾಗಿಸುವ ಪ್ರಮುಖ ಸಾಧನಗಳಾದ ಎತ್ತು, ಕುದುರೆ, ಕತ್ತೆಗಳ ಮೇಲೆಯೂ ಸುಂಕವನ್ನು ವಿಧಿಸುತ್ತಿದ್ದರು. ಒಟ್ಟಿನಲ್ಲಿ ರಟ್ಟರ ಕಾಲದಲ್ಲಿ ಬೆಳಗಾವಿಯು ವ್ಯಾಪಾರದಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಂಡ ನಗರವಾಗಿತ್ತು ಎನ್ನುವುದು ಇದರಿಂದ ತಿಳಿದುಬರುತ್ತದೆ. ರಟ್ಟರ ಆಳ್ವಿಕೆಯ ನಂತರ ಹಲವಾರು ಜನ ರಾಜರ ಆಳ್ವಿಕೆಗೆ ಬೆಳಗಾವಿ ಒಳಪಟ್ಟಿತು. ದೇವಗಿರಿಯ ಯಾದವರು, ಗೋವೆಯ ಕದಂಬರು, ವಿಜಯನಗರದ ಅರಸರು, ದೆಹಲಿ ಸುಲ್ತಾನರು, ಬಹುಮನಿಗಳು ವಿಜಾಪುರದ ಆದಿಲ್ ಶಾಹಿಗಳು ಸವಣೂರಿನ ನವಾಬರು ಮುಂತಾದವರು ಬೆಳಗಾವಿಯನ್ನು ವಶಪಡಿಸಿಕೊಂಡು ಒಬ್ಬರಿಂದ ಮತ್ತೊಬ್ಬರು ಆಳ್ವಿಕೆ ನಡೆಸಿದರು. ಆದರೆ ವಾಣಿಜ್ಯ-ವ್ಯಾಪಾರದಲ್ಲಿ ಬೆಳಗಾವಿಗೆ ಇನ್ನೂ ಪ್ರಾಮುಖ್ಯತೆ ಬಂದಿದ್ದು ವಿಜಾಪುರದ ಆದಿಲ್ ಶಾಹಿಗಳ ಆಳ್ವಿಕೆಯಲ್ಲಿ. ಆಗ ಧಾರ್ಮಿಕ, ಸಾಮಾಜಿಕ, ಆರ್ಥಿಕ ವಲಯದಲ್ಲಿ ಮಹತ್ವದ ಬದಲಾವಣೆಗಳನ್ನು ಕಂಡಿತು.

ವಿಜಾಪುರದ ಆದಿಲ್ ಶಾಹಿಗಳ ಎರಡನೆಯ ಇಬ್ರಾಹಿಂ ಆದಿಲ್ ಶಾಹನು ತನ್ನ ಆಳ್ವಿಕೆಗೆ ಒಳಪಟ್ಟ ಬೆಳಗಾವಿಯಲ್ಲಿ ಶೇರಖಾನ್ ಎಂಬುವವನನ್ನು ಮಂತ್ರಿಯನ್ನಾಗಿ (ಆಡಳಿತ ಅಧಿಕಾರಿ) ನೇಮಿಸಿದನು. ಈತನು ತನ್ನ ಆಳ್ವಿಕೆಯ ಅವಧಿಯಲ್ಲಿ ಬೆಳಗಾವಿಗೆ ವಾಣಿಜ್ಯ ಕ್ಷೇತ್ರದಲ್ಲಿ ಮಹತ್ವದ ಸ್ಥಾನವನ್ನು ಕಲ್ಪಿಸಿದನು. ವ್ಯಾಪಾರಕ್ಕಾಗಿಯೇ ಒಂದು ಪೇಠೆಯನ್ನು ಕಟ್ಟಿಸಿ ಅದಕ್ಕೆ ಶಹಾಪೇಠೆ ಎಂದು ಹೆಸರಿಟ್ಟನು.[೧೪] (ಕ್ರಿ.ಶ.೧೫೫೦). ಅಲ್ಲದೆ ವ್ಯಾಪಾರಿಗಳ ರಕ್ಷಣೆಗಾಗಿ ಪೇಟೆಯ ಸುತ್ತಲೂ ಭದ್ರವಾದ ಕೋಟೆಯನ್ನು ಕಟ್ಟಿಸಿದನು.

ಶಹಾಪೇಟೆಯು ಅಂದು ಮುಖ್ಯವಾಗಿ ವಜ್ರ, ಮಾಣಿಕ್ಯ, ವೈಢೂರ್ಯ, ಬೆಳ್ಳಿ ಬಂಗಾರದ ವ್ಯಾಪಾರವನ್ನು ಹೊಂದಿತ್ತು. ಅಂದು ಗೋವೆಯಲ್ಲಿದ್ದ ಪೋರ್ತುಗೀಸರ ಜೊತೆಗೆ ವ್ಯಾಪಾರ ಸಂಬಂಧವನ್ನು ಇಟ್ಟುಕೊಂಡಿದ್ದ ವಿಜಾಪುರದ ಸುಲ್ತಾನರಿಗೆ ವಿಜಾಪುರ ಮತ್ತು ಗೋವಾ ರಾಜ್ಯಗಳ ಮಧ್ಯದಲ್ಲಿ ಬೆಳಗಾವಿ ಪ್ರಮುಖ ವ್ಯಾಪಾರಿಕೇಂದ್ರವಾಗಿ

ಪ್ರಾಮುಖ್ಯತೆ ಪಡೆದುಕೊಂಡಿತು. ಇಲ್ಲಿಯ ಚಿನಿವಾಲರು ಚಿನ್ನ-ಬೆಳ್ಳಿ ಒಡವೆಗಳನ್ನು ಕೆತ್ತುವಲ್ಲಿ, ಕುಸುರಿನ ಕೆಲಸಕ್ಕೆ ದಕ್ಷಿಣ ಭಾರತದಲ್ಲಿಯೇ ಪ್ರಸಿದ್ಧಿಯನ್ನು ಪಡೆದುಕೊಂಡಿದ್ದರು.[೧೫] ಇವರ ರಕ್ಷಣೆಗಾಗಿಯೇ ಹಾಗೂ ಸಂಪತ್ತಿನ ರಕ್ಷಣೆಗಾಗಿ ಭದ್ರವಾದ ಕೋಟೆಯನ್ನು ಕಟ್ಟಲಾಯಿತು.

ವ್ಯಾಪಾರದ ಮೇಲೆ ವಿಧಿಸುತ್ತಿದ್ದ ಸುಂಕದಿಂದ ಬಂದ ಹಣವನ್ನು ಮಸೀದಿಗಳ ನಿರ್ವಹಣೆಗೆ ಬಳಸುತ್ತಿದ್ದರು ಎನ್ನುವುದು ತಿಳಿದುಬರುತ್ತದೆ. ಬೆಳಗಾವಿ ಕೋಟೆಯೊಳಗಿರುವ ಜಾಮೀ ಮಸೀದಿಯ ದೀಪದ ವ್ಯವಸ್ಥೆ, ನೀರಿನ ವ್ಯವಸ್ಥೆ ಮತ್ತು ನೆಲಕ್ಕೆ ಹಾಸುವ ಚಾಪೆಗಳ ಖರ್ಚಿಗೆ ದಿನವೊಂದಕ್ಕೆ ಒಂದು ಟಂಕವನ್ನು ಖಾನ ಜನ್ನತ್ ಖಾನನು ತಾನು ಕಟ್ಟಿಸಿದ ಅಂಗಡಿಗಳಿಂದ ಬಂದ ಆದಾಯದಿಂದ ದಾನ ಮಾಡಿದ ಬಗ್ಗೆ ಜಾಮೀ ಮಸೀದಿಯಲ್ಲಿರುವ ಕ್ರಿ.ಶ. ೧೫೫೯ ರ ಶಾಸನದಿಂದ ತಿಳಿದು ಬರುತ್ತದೆ.[೧೬] ಕ್ರಿ.ಶ. ೧೫೮೩ರ ಸುಮಾರಿಗೆ ಶಹಪುರವು ಗೋವೆ ಮತ್ತು ವಿಜಾಪುರಗಳ ನಡುವಣ ಅತಿ ದೊಡ್ಡ ವ್ಯಾಪಾರದ ಕೇಂದ್ರವಾಗಿತ್ತೆಂದು ಫೀಜ್ ಎಂಬ ಆಂಗ್ಲ ಪ್ರವಾಸಿ ಬಣ್ಣಿಸಿದ್ದಾನೆ.

ಕ್ರಿ.ಶ. ೧೬೯೬ ರಲ್ಲಿ ಗೆಮೆಲ್ಲಿ ಕಾರೇರಿ ಎಂಬ ಇಟಾಲಿಯನ್ ಪ್ರವಾಸಿಯು ಬೆಳಗಾವಿಯನ್ನು ಸಂದರ್ಶಿಸಿ ಇದು ಜನಭರಿತ ನಗರವಾಗಿದೆ. ಇಲ್ಲಿ ಮಣ್ಣಿನ ಮತ್ತು ತಟ್ಟೆಗೋಡೆಗಳ ಮನೆಗಳಿವೆ. ಇದು ದೊಡ್ಡ ವ್ಯಾಪಾರಕೇಂದ್ರ ಇಲ್ಲಿಯ ಪೇಟೆಯು ದೊಡ್ಡದಿದೆ ಎಂದು ಉಲ್ಲೇಖಿಸಿದ್ದಾನೆ.[೧೭]

ವಿಜಾಪುರದ ಸುಲ್ತಾನರನ್ನು ಸೋಲಿಸಿ ಪೇಶ್ವೆಗಳು ಬೆಳಗಾವಿಯನ್ನು ವಶಪಡಿಸಿಕೊಂಡರು. ಇವರ ಆಡಳಿತದ ಅವಧಿಯಲ್ಲಿ ಯಾವುದೇ ಸುಧಾರಣೆಗಳು ಕಂಡು ಬರಲಿಲ್ಲ. ಸಾಮಾಜಿಕ ಸಮಸ್ಯೆಗಳು ಹೆಚ್ಚಾದವು. ಹೆಚ್ಚಿನ ಜಮೀನು ಜಮೀನುದಾರರ ಒಡೆತನದಲ್ಲಿದ್ದವು. ಇದರಿಂದ ಸಾಮ್ರಾಜ್ಯ ಜನರ ಜೀವನ ಕಷ್ಟದಾಯಕವಾಯಿತು. ಜಮೀನುದಾರರ ಹೊಲದಲ್ಲಿ ದುಡಿಯುವುದು ಅಥವಾ ಸೈನ್ಯದಲ್ಲಿ ಸೇರಿಕೊಳ್ಳುವುದು ಇವೆರಡೇ ಅವರ ಮುಂದಿರುವ ಆಯ್ಕೆಗಳಾಗಿದ್ದವು. ಇದರಿಂದ ಬಡತನ ದಾರಿದ್ರ್ಯ, ಹೆಚ್ಚಾಯಿತು. ಕೆಲವೇ ಜನ ಶ್ರೀಮಂತರು ಸುಖವಾಗಿ ಬದುಕತೊಡಗಿದರು. ಅಲ್ಲದೆ ಈ ಪ್ರದೇಶದಲ್ಲಿ ಹಲವಾರು ಜನ ದೇಸಾಯಿಯರ ಆಳ್ವಿಕೆ ನಡೆಸತೊಡಗಿದರು. ಹೀಗಾಗಿ ಉದ್ಯೋಗ ವ್ಯಾಪಾರ, ವ್ಯವಹಾರಗಳೆಲ್ಲ ಹೇಳಹೆಸರಿಲ್ಲದಂತಾದವು. ಆದಾಗ್ಯೂ ಕೆಲವು ಮೂಲ ಉದ್ಯೋಗಗಳಾದ ನೇಕಾರಿಕೆ, ಕುಂಬಾರಿಕೆ, ಬಡಗಿತನ ಮುಂತಾದವುಗಳು ಮುಂದುವರೆದವು. ಆದರೆ ಶಹಪೂರವು ಉತ್ತಮ ವ್ಯಾಪಾರೀ ಕೇಂದ್ರವಾಗಿಯೇ ಮುಂದುವರೆಯಿತು. ಜಮಖಂಡಿ, ಮುಧೋಳ, ರಬಕವಿ, ಬನಹಟ್ಟಿ ಮುಂತಾದ ಪ್ರದೇಶಗಳಿಂದ ವಿವಿಧ ರೀತಿಯ ಸೀರೆಗಳು ಕುಬುಸದ ಖಣಗಳು ಈ ಭಾಗಕ್ಕೆ ಬರುತ್ತಿದ್ದವು.[೧೮]

ಪೇಶ್ವೆಗಳ ಆಡಳಿತದ ಕಾಲದಲ್ಲಿ ಬೆಳಗಾವಿಗೆ ಬೇರೆ ಬೇರೆ ಭಾಗಗಳಿಂದ ಹಲವಾರು ಜನರು ವ್ಯಾಪಾರಕ್ಕಾಗಿ ಬಂದು ಇಲ್ಲಿಯೇ ನೆಲಸಿದರು. ಖಲೇಜಾ, ಹಬೀಲಾ, ಸೈಯ್ಯದ್‌ಖಾದರ್ ಇವರು ಸರ್ಬಿಯಾದಿಂದ ಬಂದು

ನೆಲಸಿದ ವ್ಯಾಪಾರಿಗಳು[೯] ಅವರಿಗೆ ವಿಶೇಷ ಸೌಲಭ್ಯಗಳು ಹಾಗೂ ತೆರಿಗೆ ರಿಯಾಯಿತಿಯನ್ನು ನೀಡಲಾಗುತ್ತಿತ್ತು.

ಸ್ಥಳೀಯ ವರ್ತಕರು ಇಂದಿನ ಬ್ಯಾಂಕರ್‌ಗಳಂತೆ ಕಾರ್ಯ ನಿರ್ವಹಿಸುತ್ತಿದ್ದರು. ಸಾಲಗಳ ಮೇಲೆ ಬಡ್ಡಿ ವಿಧಿಸಲಾಗುತ್ತಿತ್ತು. ಈ ಬಡ್ಡಿ ವರ್ತಕರನ್ನು ಮಹಾಜನರು ಶೆಟ್ಟಿ ಮಹಾಜನ, ಶೆಟ್ಟರು, ಶೇಟ ಎಂದು ಕರೆಯಲಾಗುತ್ತಿತ್ತು. ಈ ಎಲ್ಲ ವ್ಯಾಪಾರಿಗಳು ದಲ್ಲಾಳಿಗಳು ಒಂದೆಡೆ ಸೇರಿ ವ್ಯಾಪಾರ ವಹಿವಾಟು ನಡೆಸಿದರು. ಶಹಾಪುರದಲ್ಲಿ ಒಂದು ಟಂಕಸಾಲೆಯು ಇದ್ದು ಶಹಾಪುರ ಹೊನ್ನು ಚಲಾವಣೆಯಲ್ಲಿತ್ತು.[೨೦] ಶಹಪುರವು ಅಂದಿನ ಕಾಲದಲ್ಲಿ ಹುಂಡಿ ವ್ಯವಹಾರಕ್ಕೆ ಪ್ರಸಿದ್ಧಿ ಹೊಂದಿತ್ತು. ಇಲ್ಲಿ ನಡೆಯುವಷ್ಟು  ಹುಂಡಿ ವ್ಯವಹಾರ ಬೇರೆ ಯಾವ ಕಡೆಯಲ್ಲಿಯೂ ನಡೆಯುತ್ತಿರಲಿಲ್ಲವೆಂದು ತಿಳಿದುಬರುತ್ತವೆ.[೨೧]

ಮುಂದೆ ೧೮೧೮ ರಲ್ಲಿ ಬೆಳಗಾವಿಯು ಬ್ರಿಟಿಷರ ವಶವಾದ ಮೇಲೆ ವ್ಯಾಪಾರ ವಾಣಿಜ್ಯದಲ್ಲಿ ಮಹತ್ವದ ಬದಲಾವಣೆಗಳಾದವು. ರಸ್ತೆಗಳ ನಿರ್ಮಾಣ, ರೈಲ್ವೆ ಸಂಪರ್ಕ, ಏಕಪ್ರಕಾರದ ವಾಣಿಜ್ಯ-ವ್ಯಾಪಾರ ನೀತಿ, ಹೊಸ ಹೊಸ ಯೋಜನೆಗಳು ಹೊಸ ವಸ್ತುಗಳ ಉತ್ಪನ್ನ ಮುಂತಾದವುಗಳಿಂದ ಬೆಳಗಾವಿಯಲ್ಲಿ ವ್ಯಾಪಾರ ವಹಿವಾಟು ಹೆಚ್ಚಾಯಿತು. ಇದರಿಂದ ಬೆಳಗಾವಿಯ ಆರ್ಥಿಕ ಸ್ಥಿತಿ ಸುಧಾರಿಸುವಂತಾಯಿತು. ಬ್ರಿಟಿಷರ ಆಡಳಿತದ ಅವಧಿಯಲ್ಲಿ ಬೆಳಗಾವಿಯಲ್ಲಿ ನಡೆಯುತ್ತಿದ್ದ ಮುಖ್ಯವಾದ ಕೈಗಾರಿಕೆಗಳೆಂದರೆ ವಸ್ತ್ರಗಳ ನೈಗೆ, ಬೆಲೆಯುಳ್ಳ ರುಮಾಲುಗಳು, ಧೋತ್ರಗಳು, ಸೀರೆಗಳು, ಖಣಗಳು, ಪೀತಾಂಬರಗಳು, ಜಮಖಾನೆಗಳು, ಹಿತ್ತಾಳಿಯ ತಾಮ್ರಗಳ ಪಾತ್ರೆಗಳು ಮುಂತಾದ ಉತ್ಪನ್ನಗಳ ಮೂಲಕ ಪ್ರತಿವರ್ಷ ಸುಮಾರು ಒಂದು ಲಕ್ಷ ಹದಿನೈದು ಸಾವಿರಕ್ಕಿಂತಲೂ ಹೆಚ್ಚಿನ ವಹಿವಾಟು ನಡೆಯುತ್ತಿತ್ತು. ಅಂದು ಬೆಳಗಾವಿಯಲ್ಲಿ ಎಣ್ಣೆ ತೆಗೆಯುವ ಗಾಣಗಳು ಹೆಚ್ಚಿಗೆ ಇದ್ದವು. ಹೀಗಾಗಿ ಗಾಣಿಗರು ಹೆಚ್ಚಿನ ಸಂಖ್ಯೆಯಲ್ಲಿದ್ದರು.[೨೨] ಬಣ್ಣಕೊಡುವ ನೀಲಗಾರರು, ಕುಸಂಬಿಗೆ ಬಣ್ಣಕೊಡುವ ರಂಗಾರಿಗಳು, ಚರ್ಮೋದ್ಯಮ ಮುಂತಾದ ಕೈಗಾರಿಕೆಗಳಿಗೆ ಅಂದು ಬೆಳಗಾವಿ ಪ್ರಸಿದ್ಧಿಯನ್ನು ಪಡೆದುಕೊಂಡಿತ್ತು.

ಬೆಳಗಾವಿಯಲ್ಲಿ ವ್ಯಾಪಾರವೂ ಹೆಚ್ಚಾಗಿ ನಡೆಯುತ್ತಿತ್ತು. ಮುಖ್ಯವಾಗಿ ವಸ್ತ್ರ, ತೊಲೆ (ಕಟ್ಟಿಗೆ), ಕಬ್ಬಿಣದ ಸಾಮಾನು, ಕಾಜಿನ ಪಾತ್ರೆಗಳು, ತಾಮ್ರ ಹಿತ್ತಾಳೆಗಳ ಪಾತ್ರೆಗಳು, ಕಾಳು, ಕಿರಾಣಿ, ತೆಂಗಿನಕಾಯಿ, ಉಪ್ಪು ಮುಂತಾದ ಸರಕುಗಳ ಕೊಡಕೊಳ್ಳುವ ವ್ಯವಹಾರ ಹೆಚ್ಚಾಗಿ ನಡೆಯುತ್ತಿತ್ತು. ಕ್ರಿ.ಶ. ೧೮೭೬ರಲ್ಲಿ ಮುನಸಿಪಾಟಿಯವರು ನಗರದ ಮಧ್ಯದಲ್ಲಿ ಪೇಟೆಯನ್ನು ಕಟ್ಟಿಸಿ ವ್ಯಾಪಾರಕ್ಕೆ ಅನುಕೂಲ ಒದಗಿಸಿಕೊಟ್ಟರು. ಇದರಿಂದ ವ್ಯಾಪಾರದಲ್ಲಿ ಹೆಚ್ಚಳ ಉಂಟಾಯಿತು. ಇಲ್ಲಿ ಕಾಯಿಪಲ್ಲೆ, ಹಣ್ಣು, ಕಾಳು, ಮಣ್ಣಿನ ಪಾತ್ರೆಗಳು, ಹುಲ್ಲು, ಉರುವಲು ಮುಂತಾದವುಗಳ ಮಾರಾಟವು ನಡೆಯತೊಡಗಿತು. ಪ್ರತಿ ಶನಿವಾರ ಸಂತೆ ನಡೆದು ಸುತ್ತಮುತ್ತಲಿನ ಹತ್ತಾರು ಹಳ್ಳಿ ಪಟ್ಟಣದ ಜನರು ಬಂದು ಸೇರುತ್ತಿದ್ದರು. ಸಂತೆಯ ದಿನದಂದು ವ್ಯಾಪಾರವು ಹೆಚ್ಚಾಗುತ್ತಿತ್ತು. ದನದ ವ್ಯಾಪಾರವೂ ನಡೆಯುತ್ತಿತ್ತು. ಊರ ಹೊರಗೆ ಕೋಟೆಯ ಬದಿಗೆ ದನದ ಸಂತೆ ಸೇರುತ್ತಿತ್ತು.

ಈ ವ್ಯಾಪಾರವಲ್ಲದೆ ಮಾಂಸದ ವ್ಯಾಪಾರವೂ ಹೆಚ್ಚಾಗಿ ನಡೆಯುತ್ತಿತ್ತು. ಮುನಸಿಪಾಟಿಯವರು ಇದಕ್ಕಾಗಿಯೇ ಪ್ರತ್ಯೇಕ ಮಾರುಕಟ್ಟೆಯನ್ನು ಕ್ಯಾಂಪ ಪ್ರದೇಶದಲ್ಲಿ ಕಟ್ಟಿಸಿದರು. ಇಲ್ಲಿ ಮೀನು, ಪಶುಗಳ ಮಾಂಸ ಮಾರಾಟ ಮಾಡಲಾಗುತ್ತಿತ್ತು. ಅಂದು ಮುಖ್ಯವಾದ ಪೇಟೆಗಳೆಂದರೆ ಭೆಂಡೀ ಬಜಾರ, ಖಡೇ ಬಜಾರ, ರವಿವಾರ ಪೇಟೆ. ಈ ಪೇಟೆಗಳಲ್ಲಿ ವಸ್ತ್ರದ ವ್ಯಾಪಾರ, ಕಾಳಿನ ವ್ಯಾಪಾರ ಮುಖ್ಯವಾಗಿ ನಡೆಯುತ್ತಿತ್ತು. ಇಷ್ಟು ಹಿನ್ನೆಲೆಯಲ್ಲಿ ಬೆಳಗಾವಿಯ ಪ್ರಸ್ತುತ ವಾಣಿಜ್ಯ ಉದ್ದಮಗಳ ವಿವರವನ್ನು ಈ ಮುಂದೆ ಕೈಗೆತ್ತಿಕೊಳ್ಳಬಹುದು.

**ವಾಣಿಜ್ಯ:**

ಬೆಳಗಾವಿ ಮೊದಲಿನಿಂದಲೂ ವ್ಯಾಪಾರಿ ಕೇಂದ್ರವಾಗಿ ಬೆಳೆದು ಬಂದಿದ್ದು ಇಂದಿಗೂ ಆ ಪರಂಪರೆಯನ್ನು ಕಾಯದಕೊಂಡು ಬಂದಿವೆ. ರಾಜ್ಯ ಹಲವಾರು ನಗರ, ಪಟ್ಟಣ, ಹಳ್ಳಿಗಳ ಪ್ರಮುಖ ವ್ಯಾಪಾರಿ ಕೇಂದ್ರವಾಗಿ ರೂಪಗೊಂಡಿದೆ. ರಾಷ್ಟ್ರೀಯ ಹೆದ್ದಾರೆ ಸಂಖ್ಯೆ-೪ ರ ಮೇಲಿರುವುದರಿಂದ ಉತ್ತಮವಾದ ಸಾರಿಗೆ ಸಂಪರ್ಕವನ್ನು ಹೊಂದಿದೆ. ಅಲ್ಲದೆ ಮೂರು ರಾಜ್ಯಗಳು ಕೂಡುವ ಆಯಕಟ್ಟಿನ ಪ್ರದೇಶದಲ್ಲರುವುದರಿಂದ ಮತ್ತಷ್ಟು ಮಹತ್ವದ ಬಂದಿದೆ. ಬೆಳಗಾವಿಯ ಸುತ್ತಮುತ್ತಲು ಸಂಪದ್ಭರಿತವಾದ ಕೃಷಿ ಭೂಮಿ ಇರುವುದರಿಂದ ನಾನಾ ತರಹದ ಬೆಳೆಗಳು ಹೇರಳವಾಗಿ ಉತ್ಪಾದನೆಗೊಳ್ಳುತ್ತವೆ. ಇವುಗಳ ಪ್ರಮುಖ ಮಾರಾಟ ಕೇಂದ್ರ ಬೆಳಗಾವಿಯಾಗಿರುತ್ತದೆ. ಈ ವ್ಯಾಪಾರಕ್ಕಾಗಿಯೇ ರವಿವಾರ ಪೇಟೆಯು ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ಇಲ್ಲಿ ಹಲವಾರು ಜನರಲ್ ಮರ್ಚಂಟ್ಸ, ಕಮೀಶನ್ ಎಜಂಟ್ಸ ಮೂಲಕ ಈ ವ್ಯಾಪಾರವು ನಡೆಯುತ್ತದೆ. ಜಿಲ್ಲೆಯ ನಾನಾ ಕಡೆಗಳಿಂದ ಹಾಗೂ ಮಹಾರಾಷ್ಟ್ರ, ಗೋವಾ ರಾಜ್ಯಗಳಿಂದ ಬಂದ ದವಸ ಧಾನ್ಯಗಳನ್ನು ಖರೀದಿಸಿ ಅವುಗಳನ್ನು ದೇಶದ ನಾನಾ ಭಾಗಗಳಿಗೆ ರಫ್ತು ಮಾಡಲಾಗುತ್ತದೆ. ಜೋಳ, ಭತ್ತ, ಶೇಂಗಾ, ಕಡಲೆ, ರಾಗಿ, ಹೆಸರು, ಮುಂತಾದ ಧಾನ್ಯಗಳು ಹೆಚ್ಚಿನ ಪ್ರಮಾಣದಲ್ಲಿ ಮಾರಾಟಗೊಳ್ಳುತ್ತವೆ. ಬೆಳಗಾವಿಯ ಬಾಸುಮತಿ ಅಕ್ಕಿ ಪ್ರಸಿದ್ಧಿ ಪಡೆದಿದೆ. ಕರಿ ಬಾಸುಮತಿಯು ಹೆಚ್ಚು ಬೇಡಿಕೆಯುಳ್ಳದ್ದಾಗಿದೆ. ಬೆಳಗಾವಿಯ ಸುತ್ತಲಿನ ಹಳ್ಳಿಗಳಲ್ಲಿ ಇದನ್ನು ಹೆಚ್ಚಾಗಿ ಬೆಳೆಯುತ್ತಾರೆ. ಇದರಿಂದ ಬೆಳಗಾವಿಯಲ್ಲಿ ಅಕ್ಕಿ ಗಿರಣಿಗಳು ಹೆಚ್ಚಿನ ಸಂಖ್ಯೆಯಲ್ಲಿವೆ. ಬೆಲ್ಲದ ಉತ್ಪಾದನೆ ಮತ್ತು ಮಾರಾಟದಲ್ಲಿ ಬೆಳಗಾವಿ ಪ್ರಸಿದ್ಧಿ ಪಡೆದಿದೆ. ಕಬ್ಬು ಹೆಚ್ಚಾಗಿ ಬೆಳೆಯುವುದರಿಂದ ಬೆಲ್ಲದ ಉತ್ಪಾನೆಯು ಹೆಚ್ಚಾಗಿದೆ.

ತರಕಾರಿ ಬೆಳೆ ಮಾರಾಟಕ್ಕೆ ಬೆಳಗಾವಿ ಹೆಸರುವಾಸಿಯಾಗಿದೆ. ಮಹಾರಾಷ್ಟ್ರ, ಗೋವಾ ರಾಜ್ಯಗಳ ಪ್ರಮುಖ ಸ್ಥಳಗಳಿಗೆ ಬೆಳಗಾವಿಯಿಂದಲೇ ತರಕಾರಿ ರಫ್ತಾಗುತ್ತದೆ. ಇಲ್ಲಿಯ ತರಕಾರಿಗೆ ವಿಶೇಷವಾದ ರುಚಿ ಇರುವುದರಿಂದ ಹೆಚ್ಚು ಬೇಡಿಕೆ ಇದೆ. ಬಟಾಟಿ, ಗೆಣಸು, ಮೆಣಸಿನಕಾಯಿ, ಉಳ್ಳಾಗಡ್ಡಿ, ಹಸಿ ತರಕಾರಿಗಳಾದ ಬೆಂಡೆ, ಬದನೆ, ಹಿರೇಕಾಯಿ ಎಲೆ ಕೋಸು, ಹೂ ಕೋಸು-ಹೀಗೆ ಹಲವಾರು ತರಹದ ಕಾಯಿಪಲ್ಲೆಗಳ ಮಾರಾಟವಾಗುತ್ತವೆ.

ಬೆಳಗಾವಿ ನಗರದ ಆಂಜನೇಯ ನಗರದಲ್ಲಿರುವ ನಂದಿನಿ ಹಾಲು ಉತ್ಪಾದಕ ಘಟಕವು ಹಾಲಿನಿಂದ ಹಲವಾರು ಪದಾರ್ಥಗಳನ್ನು ತಯಾರಿಸುತ್ತಿದೆ. ಹಾಲು, ಪೇಡೆ, ಮೊಸರು ಮುಂತಾದವುಗಳ ಮಾರಾಟವು ಉತ್ತಮವಾಗಿದೆ. ಈ ಕಾರಖಾನೆಯಲ್ಲಿ ನೂರಾರು ಜನರು ಉದ್ಯೋಗವನ್ನು ಕೈಕೊಂಡಿದ್ದಾರೆ.

ಹೀಗೆ ಬೆಳಗಾವಿಯಲ್ಲಿ ಹಲವಾರು ಬೃಹತ್ ಪ್ರಮಾಣದ ಉದ್ಯಮಗಳು ಸಣ್ಣ ಪ್ರಮಾಣದ ಉದ್ಯಮಗಳು ಅತಿ ಸಣ್ಣ ಉದ್ಯಮಗಳು (ಕೈ ಚೀಲ ತಯಾರಿಕೆ, ಇತ್ಯಾದಿ) ಬೆಳೆದು ಬೆಳಗಾವಿಯ ಆರ್ಥಿಕ, ಸಾಮಾಜಿಕ, ಪರಿಸರದ ಮೇಲೆ ಪರಿಣಾಮವನ್ನು ಬೀರಿವೆ. ಆದರೆ ನಿಜವಾದ ಬೆಳಗಾವಿ ನಿರ್ಮಾಣಗೊಂಡಿದ್ದು ಈ ಉದ್ಯಮ ವ್ಯಾಪಾರಗಳಿಂದಲ್ಲ. ಇವೆಲ್ಲಕ್ಕಿಂತ ಭಿನ್ನವಾದ ಉತ್ಪಾದನೆ, ಮಾರಾಟ ಬೆಳಗಾವಿಯಲ್ಲಿ ಕಂಡುಬರುತ್ತದೆ. ಸಾಮಾನ್ಯವಾಗಿ ಎಲ್ಲ ನಗರ ಪ್ರದೇಶಗಳಲ್ಲಿ ಕಂಡುಬರುವ ಆಯಸ್ಕ್ರೀಮ ತಯಾರಿಕೆ, ಚುರುಮರಿ ಭಟ್ಟಿಗಳು, ಅವಲಕ್ಕಿ ಭಟ್ಟಿಗಳು ಪಾನ ಬೀಡಿ ಅಂಗಡಿಗಳು, ಸೇವ, ಕಾರ ತಯಾರಿಸುವ ಭಟ್ಟಿಗಳು, ಬ್ರೆಡ್ ತಯಾರಿಕೆ, ಬಟ್ಟೆ ಸಿದ್ಧಪಡಿಸುವ ಟೇಲರ್‌ಗಳು ರಸ್ತೆ ಬದಿಗೆ ಕುಳಿತು ಮಾರುವ ವ್ಯಾಪಾರಿಗಳು, ಚರ್ಮಕಾರರು, ಎತ್ತಿನ ಗಾಡಿಯವರು, ಕೈಗಾಡಿಯವರು, ರಿಕ್ಷಾದವರು, ಕಲಾಯಿ ಮಾಡುವವರು, ಪತ್ರಿಕೆ ಮಾರಾಟಗಾರರು, ಹಾಲು ಮಾರಾಟಗಾರರು–ಹೀಗೆ ಪ್ರತಿಯೊಬ್ಬರು ನಗರದ ಬೆಳವಣಿಗೆಯಲ್ಲಿ ಪಾತ್ರವಹಿಸುತ್ತಾರೆ. ಇವರೂ ನಗರದ ಒಂದು ಭಾಗವಾಗಿ ನಗರದ ಸಾಂಸ್ಕೃತಿಕ ವಿಕಾಸದಲ್ಲಿ ಆರ್ಥಿಕ ಬೆಳವಣಿಗೆಯಲ್ಲಿ ಪ್ರಮುಖ ಪಾಲುದಾರರು. ಈ ಕೆಲಸ ವ್ಯಾಪಾರಗಳಿಂದಲೇ ಲಕ್ಷಾಂತರ ಜನರು ಉಪಜೀವನ ಸಾಗಿಸುತ್ತಿದ್ದಾರೆ. ಇವರೆಲ್ಲರನ್ನು ಹೊರತುಪಡಿಸಿದ ಬೆಳಗಾವಿ ನಗರವನ್ನು ಕಲ್ಪನೆ ಮಾಡಿಕೊಂಡರೆ ಆಸ್ಪೇಸ್‌ನಗರಕ್ಕೆ ಅರ್ಥವೇ ಇರುವುದಿಲ್ಲ. ಇವರೆಲ್ಲರೂ ತುಂಬಿಕೊಂಡಾಗಲೇ ಅದು ನಗರದ ಸ್ವರೂಪವನ್ನು ಪಡೆದುಕೊಳ್ಳುತ್ತವೆ. ಬೆಳಗಾವಿ ನಗರ ಬಹು ಸಂಸ್ಕೃತಿಯನ್ನು ಹೊಂದಿದ ನಗರವೆನ್ನುವುದನ್ನು ಗುರುತಿಸಲು ಇಲ್ಲಿಯ ಪೇಟೆಗಳಲ್ಲಿ ತಿರುಗಾಡಿದಾಗ ತಿಳಿದು ಬರುತ್ತದೆ. ಭಾಷೆ, ಧರ್ಮ, ಪ್ರದೇಶ ಬೇರೆ ಬೇರೆಯಾಗಿದ್ದರೂ ಎಲ್ಲರೂ ಕೂಡಿ ಸಾಗುವ ಮನೋಭಾವನೆ ಬೆಳಗಾವಿಯ ಸಂಸ್ಕೃತಿಯನ್ನು ಶ್ರೀಮಂತಗೊಳಿಸಿದೆ. ವಿಕೃತ ಮನಸ್ಸಿನ ಕೆಲವು ಜನರನ್ನು ಹೊರತು ಪಡಿಸಿದರೆ ಯಾವ ಸಂದರ್ಭದಲ್ಲಿಯೂ ಇಲ್ಲಿ ವೈಷಮ್ಯದ ಹೊಗೆ ಆಡಿಲ್ಲ ಇದುವೇ ಬೆಳಗಾವಿಯ ವಿಶೇಷತೆ.

ಕುಂದಾ: ಕುಂದಾ ಬೆಳಗಾವಿಯ ವೈಶಿಷ್ಟ್ಯ. ಬೆಳಗಾವಿ ಎಂದ ಕೂಡಲೇ ತಟ್ಟನೆ ನೆನಪಿಗೆ ಬರುವ ಸಿಹಿ ಪದಾರ್ಥ ಕುಂದಾ. ಇದಕ್ಕೆ 'ಬೆಳಗಾವಿ ಕುಂದಾ' ಎಂದೇ ಹೆಸರು ಬಂದಿದೆ. ಇದು ದೇಶ ವಿದೇಶಗಳಲ್ಲಿಯೂ ಪ್ರಸಿದ್ಧಿಯನ್ನು ಪಡೆದಿದೆ. ಕುಂದಾ ಹುಟ್ಟಿದ್ದು ಬೆಳಗಾವಿಯಲ್ಲಿಯೇ. ಇದಕ್ಕೆ ೧೪೦ ವರ್ಷಗಳಷ್ಟು ಇತಿಹಾಸವಿದೆ. ನಗರದ ಶಹಾಪುರದ ವಿಠ್ಠಲ ಗಲ್ಲಿಯಲ್ಲಿರುವ ರಘುನಾಥ ಜೋಶಿ ಎಂಬುವವರ ಮನೆಯಲ್ಲಿ ಹಾಲು ಕಾಯಿಸುತ್ತಿದ್ದಾಗ ಆಕಸ್ಮಿಕವಾಗಿ ಒಲೆಯ ಮೇಲಿಟ್ಟ ಹಾಲನ್ನು ಮರೆತುಬಿಡುತ್ತಾರೆ. ಆಗ ಆ ಹಾಲು ಕುದ್ದು ಕುದ್ದು ಸ್ವಲ್ಪ ಗಟ್ಟಿಯಾಗಿತ್ತು.

ಅದೇ ಹೊತ್ತಿನಲ್ಲಿ ಮನೆಯವರು ಒಳಗೆ ಬಂದು ನೋಡಿ ಹಾಲನ್ನು ಚೆಲ್ಲಲು ಮನಸ್ಸಾಗದೆ ಅದಕ್ಕೆ ಸಕ್ಕರೆಯನ್ನು ಕೂಡಿಸಿ ಕಲಿಸಿ ತಿನ್ನುತ್ತಾರೆ. ಅಕ್ಕ-ಪಕ್ಕದವರಿಗೂ ತಿನ್ನಲು ಕೊಡುತ್ತಾರೆ. ಎಲ್ಲರೂ ಆ ಹೊಸರುಚಿಯನ್ನು ಇಷ್ಟಪಡುತ್ತಾರೆ. ಹೇಗೆ ಮಾಡಿದಿರಿ ಎಂದು ಕೇಳುತ್ತಾರೆ. ಹೀಗೆ ಹಾಲು ಕುಂದಿ ಕುಂದಿ ಆಗಿದ್ದರಿಂದ ಇದಕ್ಕೆ 'ಕುಂದಾ' ಎಂದು ಹೆಸರು ಬಂದಿತು. ರಘುನಾಥ ಜೋಶಿಯವರು ಇದನ್ನೇ ಒಂದು ಉದ್ಯೋಗವನ್ನಾಗಿ ಮಾಡಿಕೊಂಡು ಇಂದಿಗೂ ಅದೇ ಉದ್ಯೋಗವನ್ನು ಅವರ ವಂಶದವರು ಮುಂದುವರೆಸಿಕೊಂಡು ಬಂದಿದ್ದಾರೆ. ಇಂದು ಬೆಳಗಾವಿಯಲ್ಲಿ ಎಲ್ಲಿ ನೋಡಿದಲ್ಲೆಲ್ಲಾ ಗಲ್ಲಿಗಲ್ಲಿಗೆ ಸ್ವೀಟ್ ಮಾರ್ಟಗಳನ್ನು ಕಾಣಬಹುದು. ಈ 'ಕುಂದಾ' ದ ಪ್ರಸಿದ್ಧಿಯಿಂದಲೇ ಇಲ್ಲಿ ಈ ಅಂಗಡಿಗಳು ಹೆಚ್ಚಾಗಲು ಕಾರಣವಾಯಿತು. ಇದರಿಂದ ವಾರ್ಷಿಕ ನೂರಾರು ಕೋಟಿ ರೂಪಾಯಿಗಳ ವಹಿವಾಟು ಬೆಳಗಾವಿ ನಗರದಿಂದ ನಡೆಯುತ್ತದೆ. ಬೆಳಗಾವಿಗೆ ಬಂದವರು ತಪ್ಪದೆ ಕುಂದಾ ಒಯ್ಯುತ್ತಾರೆ. ಕುಂದಾ ತಯಾರಿಕೆಗೆ ಬೇಕಾದ ಪ್ರಮುಖವಾದ ವಸ್ತುಗಳೆಂದರೆ ಹಾಲು ಮತ್ತು ಸಕ್ಕರೆ. ಬೆಳಗಾವಿ ನಗರ ಮತ್ತು ಜಿಲ್ಲೆಯಾದ್ಯಂತ ಹಾಲಿನ ಉತ್ಪನ್ನ ಹೆಚ್ಚಿನ ಪ್ರಮಾಣದಲ್ಲಿದೆ. ಅಲ್ಲದೆ ಬೆಳಗಾವಿ ಜಿಲ್ಲೆಯು ಸಕ್ಕರೆ ಉತ್ಪಾದನೆಯಲ್ಲಿ ದೇಶದಲ್ಲಿಯೇ ಪ್ರಮುಖ ಸ್ಥಾನವನ್ನು ಹೊಂದಿದೆ. ಹೀಗಾಗಿ ಕುಂದಾ ತಯಾರಿಕೆಗೆ ಬೇಕಾದ ವಸ್ತುಗಳು ಸುಲಭವಾಗಿ ದೊರೆಯುತ್ತವೆ. ಆದರೆ ಬೆಳಗಾವಿಯ ತಂಪಾದ ವಾತಾವರಣವು ಕುಂದಾದ ರುಚಿ ಹೆಚ್ಚಾಗಲಿಕ್ಕೆ ಮತ್ತು ಹೆಚ್ಚು ದಿನ ಕೆಡದ ಹಾಗೆ ಸಹಕಾರಿಯಾಗಿದೆ.

೧೯೨೪ರಲ್ಲಿ ಬೆಳಗಾವಿಯಲ್ಲಿ ನಡೆದ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನದಲ್ಲಿ ಬೆಳಗಾವಿಯ ಕುಂದಾಕ್ಕೆ ರಾಷ್ಟ್ರೀಯ ಪ್ರಚಾರ ಸಿಕ್ಕಿತು. ಮಹಾತ್ಮಾ ಗಾಂಧೀಜಿಯವರ ಕುಂದಾದ ರುಚಿಯನ್ನು ಸವಿದಿದ್ದರು. ಇತ್ತೀಚೆಗೆ ಜರುಗಿದ ವಿಶ್ವಕನ್ನಡ ಸಮ್ಮೇಳನದ ಊಟದಲ್ಲಿಯೂ ಸಾವಿರಾರು ಜನರಿಗೆ ಕುಂದಾವನ್ನು ಬಳಸಲಾಗಿತ್ತು. ಸುಮಾರು ಸಾವಿರ ಕೆಜಿಯಷ್ಟು ಕುಂದಾವನ್ನು ತಯಾರಿಸಲಾಗಿತ್ತು. ದೇವರಾಜ ಅರಸರು ಕರ್ನಾಟಕದ ಮುಖ್ಯಮಂತ್ರಿಯಾಗಿದ್ದಾಗ ನಿರಂತರವಾಗಿ ಬೆಂಗಳೂರಿಗೆ ಅವರಿಗಾಗಿ ಕುಂದಾ ಹೋಗುತ್ತಿತ್ತು.

ಇತ್ತೀಚೆಗೆ ಕುಂದಾ ತಯಾರಿಕೆಯಲ್ಲಿಯೂ ಆಧುನಿಕತೆ ಕಂಡು ಬರುತ್ತಿದೆ. ಜನರ ಬೇಡಿಕೆಗನುಗುಣವಾಗಿ ವಿವಿಧ ತರಹದ 'ಕುಂದಾ' ತಯಾರಿಸಲಾಗುತ್ತಿದೆ. 'ಟಿನ್ ಪ್ಯಾಕ್ಕುಂದಾ', 'ರೇಟ್ ಪ್ಯಾಕ್ ಕುಂದಾ' ಮುಂತಾದ ಹೆಸರುಗಳಿಂದ ಪ್ಯಾಕೇಟಗಳಲ್ಲಿ ಮಾರಾಟವಾಗುತ್ತಿದೆ. ಸುಮಾರು ಒಂಬತ್ತು ತಿಂಗಳಿಂದ ಒಂದು ವರ್ಷದವರೆಗೆ ಕೆಡದಂತಹ ಕುಂದಾವನ್ನು ತಯಾರಿಸಲಾಗುತ್ತಿದೆ. ಇಂದು ಬೆಳಗಾವಿ ನಗರದಲ್ಲಿ ಸುಮಾರು ೨೦೦ ಕ್ಕಿಂತಲು ಹೆಚ್ಚು ಸ್ವೀಟ್ಸ ಮಳಿಗೆಗಳನ್ನು ಕಾಣಬಹುದು. ಪ್ರತಿಯೊಂದು ಮಳಿಗೆಯಲ್ಲಿಯೂ 'ಕುಂದಾ' ದೊರೆಯುತ್ತದೆ. ದಿನಕ್ಕೆ ಐದರಿಂದ ಹತ್ತು ಲಕ್ಷದಷ್ಟು ವ್ಯಾಪಾರ ಕೇವಲ ಕುಂದಾದಿಂದ ಬೆಳಗಾವಿ ನಗರದಲ್ಲಾಗುತ್ತದೆ. ಹೀಗಾಗಿಯೇ ಇಂದು ಬೆಳಗಾವಿಗೆ 'ಕುಂದಾನಗರ' ಎಂಬ ಪರ್ಯಾಯ ಹೆಸರು ಬಂದಿದೆ. ಕುಂದಾ ತಯಾರಿಕೆಯಲ್ಲಿ ಪ್ರಸಿದ್ಧಿಯನ್ನು

ಪಡೆದ ಅತುಲ ಪುರೋಹಿತ, ಕ್ಯಾಂಪ್ ಪುರೋಹಿತ ಸ್ವೀಟ್ಸ, ರಾಜಪುರೋಹಿತ ಸ್ವೀಟ್ಸ ಮುಂತಾದವುಗಳಲ್ಲಿ ರುಚಿಯಾದ ಕುಂದಾ ಸಿಗುತ್ತದೆ.

**ಉಪ್ಪಿನಕಾಯಿ:** ಬೆಳಗಾವಿಯ ಉಪ್ಪಿನಕಾಯಿಗಳು ವಿಶಿಷ್ಟವಾದ ರುಚಿಯನ್ನು ಹೊಂದಿವೆ. ಅಲ್ಲದೆ ವೈವಿಧ್ಯಮಯವಾದ ಉಪ್ಪಿನಕಾಯಿಗಳೂ ಪ್ರಸಿದ್ಧವಾಗಿವೆ. ಇಲ್ಲಿಯ ಬೆಟ್ಟ ಗುಡ್ಡಗಳಲ್ಲಿ ದೊರೆಯುವ 'ಮಾಗನಿ ಬೇರು' ವಿಶಿಷ್ಟವಾದ ಗಿಡಮೂಲಿಕೆಯಾಗಿದೆ. ಇದರಿಂದ ತಯಾರಾಗುವ ಉಪ್ಪಿನಕಾಯಿಗಳು ದೇಶ ವಿದೇಶಗಳಲ್ಲಿಯೂ ಪ್ರಸಿದ್ಧಿಯನ್ನು ಪಡೆದುಕೊಂಡಿವೆ. ಅಡವಿ ನೆಲ್ಲಿ, ಲಿಂಬು, ಬಳ್ಳೊಳ್ಳಿ, ಕವಳೆ ಕಾಯಿ, ಮಾವಿನಕಾಯಿ, ಮಿಡಿ ಮಾವಿನಕಾಯಿ, ಹಾಗಲಕಾಯಿ, ಹೀಗೆ ವಿಭಿನ್ನವಾದ ಉಪ್ಪಿನಕಾಯಿಗಳು ತಯಾರಾಗುತ್ತವೆ. 'ಊಟಕ್ಕೆ ಮೊದಲು ಉಪ್ಪಿನಕಾಯಿ' ಎಂಬ ಗಾದೆಯಂತೆ ಪ್ರತಿಯೊಬ್ಬರೂ ಊಟದಲ್ಲಿ ಉಪ್ಪಿನಕಾಯಿಗಳನ್ನು ಬಳಸುತ್ತಾರೆ.

ಪಾಟನಕರ ಉಪ್ಪಿನಕಾಯಿ ಇಡೀ ದೇಶದಲ್ಲಿಯೇ ಹೆಚ್ಚು ಬಳಕೆಗೊಳ್ಳುವ ಪಾಟನಕರ ಉಪ್ಪಿನಕಾಯಿಯು ಬೆಳಗಾವಿಯಿಂದ ತಯಾರಾಗುತ್ತದೆ. ಮಾವು ಬೆಳೆಗೆ ಪ್ರಸಿದ್ಧಿ ಪಡೆದ ಬೆಳಗಾವಿ ಜಿಲ್ಲೆಯು ಅದರಿಂದ ತಯಾರಾಗುವ ಉಪ್ಪಿನಕಾಯಿಯಿಂದಲೂ ಪ್ರಸಿದ್ಧಿಯನ್ನು ಪಡೆದಿದೆ. ಖಾಸಭಾಗದಲ್ಲಿರುವ ಈ ಕಾರಖಾನೆಯು ಹಲವಾರು ಜನರಿಗೆ ಉದ್ಯೋಗವನ್ನು ಕಲ್ಪಿಸಿದೆ.

**ಖಾನಾವಳಿಗಳು:** ಇಪ್ಪತ್ತನೆಯ ಶತಮಾನದ ಆರಂಭದಲ್ಲಿ ಒಂದು ಜಾತಿಯ ಜನರು ಇನ್ನೊಂದು ಜಾತಿಯವರ ಮನೆಯಲ್ಲಿ ಊಟ ಮಾಡುತ್ತಿರಲಿಲ್ಲ. ನೀರನ್ನೂ ಕುಡಿಯುತ್ತಿರಲಿಲ್ಲ. ಯಾವುದಾದರೂ ಕೆಲಸ ಕಾರ್ಯಗಳಿಗೆ ಬಂದರೆ ಊಟವನ್ನು ಕಟ್ಟಿಕೊಂಡು ಬರುತ್ತಿದ್ದರು. ಇಲ್ಲವೆ ತಮ್ಮ ಜಾತಿಯವರ ಮನೆಗಳಿಗೆ ಹೋಗುತ್ತಿದ್ದರು. ಅಂಥವರಿಗೆ ಆಯಾ ಜಾತಿಯವರು ಅತಿಥಿ ಸತ್ಕಾರವನ್ನು ನೀಡುತ್ತಿದ್ದರು. ಬ್ರಾಹ್ಮಣರು ಊಟಮಾಡುವ ಸಮಯದಲ್ಲಿ ಯಾರಾದರೂ ಊಟಕ್ಕೆ ಬರಬಹುದು ಎಂದು ಸ್ವಲ್ಪ ಹೊತ್ತು ದಾರಿ ನೋಡಿ ಉಣ್ಣುತ್ತಿದ್ದರು.

ಆದರೆ ಈಗ ಆಧುನಿಕ ಜೀವನ ಶೈಲಿ ಬದಲಾಗಿದೆ. ಲಾಜಿಂಗು, ಬೋರ್ಡಿಂಗು, ಹೊಟೇಲ್ ಖಾನಾವಳಿ, ಮೆಸ್, ರೆಸ್ಟೋರೆಂಟಗಳು ತಲೆಎತ್ತಿ ಯಾರು ಬೇಕಾದರೂ ಎಲ್ಲಿ ಬೇಕಾದರೂ ಊಟ ಮಾಡಬಹುದಾಗಿದೆ. ಬೇರೆ ಊರಿನವರು ಅಷ್ಟೇ ಅಲ್ಲದೆ ನಗರದೊಳಗಿನ ಜನರು ಸಹ ಮನೆ ಮಂದಿಯೆಲ್ಲ ಸೇರಿ ವಾರದಲ್ಲಿ ಒಂದೆರಡು ಬಾರಿ ಹೊಟೇಲಗೆ ಹೋಗಿ ಊಟ ಮಾಡುತ್ತಾರೆ. ಜಾತಿ ಭೇದವಿಲ್ಲದೆ ಎಲ್ಲರೂ ಒಂದೇ ಬದಿಗೆ ಕುಳಿತು ಊಟಮಾಡುತ್ತಾರೆ. ಆದರೆ ಪ್ರಾರಂಭದಲ್ಲಿ(ಇಪ್ಪತ್ತನೆಯ ಶತಮಾನದ ಮೂರು ನಾಲ್ಕನೆಯ ದಶಕದವರೆಗೆ) ಆಯಾ ಜಾತಿಗನುಗುಣವಾಗಿ ಹೊಟೇಲ್, ಖಾನಾವಳಿಗಳು ಬೆಳಗಾವಿಯಲ್ಲಿದ್ದವು. ಈ ಜಾತಿವಾರು ಖಾನಾವಳಿಗಳಲ್ಲಿ ಬೇರೆ ಜಾತಿಯವರಿಗೆ ಪ್ರವೇಶವಿರಲಿಲ್ಲ. ಈಗಲೂ ಕೂಡ ಕೆಲವು ಖಾನಾವಳಿಗಳು ಜಾತಿವಾರು ಇರುವುದನ್ನು ಕಾಣಬಹುದಾಗಿದೆ.

ಬೆಳಗಾವಿ ನಗರದ ಕೋನಾಳ ಗಲ್ಲಿ, ಬಸವನ ಬೀದಿ, ಮಾರುತಿ ಬೀದಿಗಳಲ್ಲಿ ಸ್ಮಾರ್ತ-ವೈಷ್ಣವ ಖಾನಾವಳಿಗಳಿದ್ದವು. ಕುಲಕರ್ಣಿಗಲ್ಲಿ, ಮಠಗಲ್ಲಿಗಳಲ್ಲಿ ಜೈನರ ಖಾನಾವಳಿಗಳು, ಭಡಕಲಗಲ್ಲಿ, ಶೆಟ್ಟಿಗಲ್ಲಿ, ಮುನಿಸಿಪಾಲಿಟಿ ಓಣಿಗಳಲ್ಲಿ ಲಿಂಗಾಯತರ ಖಾನಾವಳಿಗಳು, ಶೇರಿಗಲ್ಲಿಯಲ್ಲಿಯ 'ಮಹಾರಾಷ್ಟ್ರ ಭುವನ'ವು ಕೊಂಕಣಸ್ಥ ಬ್ರಾಹ್ಮಣರ ಖಾನಾವಳಿಯಾಗಿತ್ತು.

ಹನುಮಾನ ಬೀದಿಯಲ್ಲಿದ್ದ 'ಆಯೀ ಖಾನಾವಳಿ' ಬ್ರಾಹ್ಮಣ ಮಡಿವಂತರಿಗೆ ಮೀಸಲಾಗಿತ್ತು. ಇವಳೂ ಬ್ರಾಹ್ಮಣ ಹೆಣ್ಣುಮಗಳಾಗಿದ್ದಳು. ಬ್ರಾಹ್ಮಣರಿಗೆ ಸ್ನಾನ, ಉಟ್ಟುಕೊಳ್ಳಲು ಪಂಜೆ ಮುಂತಾದವುಗಳ ವ್ಯವಸ್ಥೆ ಇತ್ತು. ಊಟಕ್ಕೆ ಮಣೆ ಹಾಕಿ, ಬಾಳೆ ಎಲೆ, ಇಲ್ಲವೆ ಮುತ್ತಲ ಎಲೆಗಳನ್ನು ಶಿಬಿರಿನಿಂದ ಹಚ್ಚಿದ ಪತ್ರಾವಳಿಯಲ್ಲಿ ಊಟ ನೀಡಲಾಗುತ್ತಿತ್ತು. ವೀರಶೈವ ಲಿಂಗಾಯತ ಖಾನಾವಳಿಗಳಲ್ಲಿ ಲಿಂಗಪೂಜೆಗೆ ವ್ಯವಸ್ಥೆ ಕಲ್ಪಿಸಲಾಗುತ್ತಿತ್ತು. ಬಂದವರಿಗೆಲ್ಲ ಹಚ್ಚಿಕೊಳ್ಳಲು ವಿಭೂತಿಯನ್ನು ಕೊಡುತ್ತಿದ್ದರು. ಊಟಕ್ಕೆ ರೊಟ್ಟಿ, ಚಟ್ನಿ, ಪಲ್ಲೆ ಮುಂತಾದ ಮನೆಯ ಅಡಿಗೆಯನ್ನು ಬಿಸಿ ಬಿಸಿಯಾಗಿ ಮಾಡಿ ನೀಡುತ್ತಿದ್ದರು.

ಬೆಳಗಾವಿಯು ಶಿಕ್ಷಣ ಕೇಂದ್ರವಾಗಿ ಬೆಳವಣಿಗೆ ಹೊಂದಿದಾಗ ಬೇರೆ ಬೇರೆ ಭಾಗಗಳಿಂದ ವಿದ್ಯಾರ್ಥಿಗಳು ಬೆಳಗಾವಿಯಲ್ಲಿ ಬಂದು ನೆಲಸಿದರು. ಈ ವಿದ್ಯಾರ್ಥಿಗಳಿಗೆಲ್ಲ ಊಟ ದೊರೆಯುವ ಸ್ಥಳವೆಂದರೆ ಶನಿವಾರ ಕೂಟದಲ್ಲಿದ್ದ ಮಾಸ್ತರ-ಖಾನಾವಳಿ, ಕರ್ನಾಟಕ ಕ್ಲಬ್ಬು, ಖಡೇಬಜಾರನಲ್ಲಿಯ 'ಕೋಮಲ್ ವಿಲಾಸ' ಖಾನಾವಳಿಗಳು ಮುಖ್ಯವಾಗಿದ್ದವು. ಇಲ್ಲಿ ಮನೆಯ ಊಟ ಮಾಡಿದಂತೆಯೇ ಊಟವನ್ನು ಕೊಡುತ್ತಿದ್ದರು.

ವಿದ್ಯಾರ್ಥಿಗಳೆಲ್ಲ ತಿಂಗಳಿಗೊಮ್ಮೆ ಹಣವನ್ನು ಕೊಡುತ್ತಿದ್ದರು. ಬೇರೆ ಊರಿನಿಂದ ಬಂದವರಿಗೆ ಕೆಲವೊಂದು ಮೆಸ್‌ಗಳಲ್ಲಿ ಊಟವನ್ನು ಕೊಡುತ್ತಿರಲಿಲ್ಲ.

ಇತ್ತೀಚೆಗೆ ಪ್ರಾರಂಭವಾದ ಕೆಲವು ಖಾನಾವಳಿಗಳು ಬಹು ಬೇಗ ಪ್ರಸಿದ್ಧಿಯನ್ನು ಪಡೆದುಕೊಂಡಿವೆ. ಇದಕ್ಕೆ ಕಾರಣ ಅಲ್ಲಿ ದೊರೆಯುವ ಊಟವು ಶುದ್ಧ ಶಾಖಾಹಾರಿ ಮತ್ತು ಸ್ವಚ್ಛವಾಗಿರುತ್ತದೆ. ಅಲ್ಲದೆ ಉತ್ತರ ಕರ್ನಾಟಕದ ಜವಾರಿ ಊಟವನ್ನು ಕೊಡುತ್ತಾರೆ. ಅವುಗಳಲ್ಲಿ ಮುಖ್ಯವಾಗಿ ಸಿವಿಲ್ ಹಾಸ್ಪಿಟಲ್ ರೋಡಿನಲ್ಲಿರುವ 'ಪರಶಿವ ಖಾನಾವಳಿ' ಕಾಲೇಜು ರಸ್ತೆಯ 'ಶಿವಪ್ರಸಾದ' ಕಿರ್ಲೋಸ್ಕರ ರಸ್ತೆಯಲ್ಲಿರುವ ಶ್ರದ್ಧಾ ಡೈನಿಂಗ್ ಹಾಲ್', ಬಸ್ ಸ್ಟ್ಯಾಂಡ್ ಬಳಿಯಿರುವ 'ಸಾಯಿ ಬೋರ್ಡಿಂಗ' ಮುಂತಾದವುಗಳು ಹೆಚ್ಚು ಜನಪ್ರಿಯವಾಗಿವೆ. ಇಲ್ಲಿ ಬಿಸಿ ಬಿಸಿ ರೊಟ್ಟಿ, ಮುಳಗಾಯಿ ಪಲ್ಲೆ, ಶೇಂಗಾ ಚಟ್ನಿ, ಕುಟ್ಟಿದ ಖಾರ, ಅಂಬಲಿ, ಮಜ್ಜಿಗೆ, ಕೆನೆ ಮೊಸರು, ಬೆಣ್ಣೆ, ಶ್ಯಾವಿಗೆ ಪಾಯಸ, ಅನ್ನ, ಕಟ್ಟಿನ ಸಾರು ಇತ್ಯಾದಿ ಪದಾರ್ಥಗಳನ್ನು ಸಾಕಾಗುವಷ್ಟು ನೀಡುತ್ತಾರೆ. ಎಷ್ಟೇ ಉಂಡರೂ ಒಂದೇ ರೇಟು. ಹೀಗಾಗಿ ಹಳ್ಳಿಗಳಿಂದ ಬಂದವರಿಗೆ ಪ್ಲೇಟಿನ ಊಟ ಸಾಕಾಗುವದಿಲ್ಲ ಇದರಿಂದ ಇಂತಹ ಖಾನಾವಳಿಗಳಿಗೆ ಹೋಗಿ ಊಟಮಾಡುತ್ತಾರೆ.

**ಉದ್ಯಮ:**

**ಕಿರ್ಲೋಸ್ಕರ ಕೈಗಾರಿಕೆಗಳು :** ಭಾರತದ ಫೋರ್ಡ ಎಂದು ಖ್ಯಾತಿ ಹೊಂದಿದ ಜಗತ್ತಿನ ಕೈಗಾರಿಕೋದ್ಯಮದ ನಕ್ಷೆಯಲ್ಲಿ ಗುರುತಿಸಿಕೊಂಡ ದಿ. ಲಕ್ಷಣರಾಯ ಕಿರ್ಲೋಸ್ಕರ ಅವರು ಮೂಲತಃ ಬೆಳಗಾವಿ ಜಿಲ್ಲೆಯ ಗುರ್ಲಹೊಸೂರಿನವರು. ಇವರು ತೀರಸಾಮಾನ್ಯ ಕುಟುಂಬದಲ್ಲಿ ಜನಿಸಿ ಉದ್ಯೋಗಕ್ಕಾಗಿ ಬೆಳಗಾವಿಗೆ ಬಂದು ಒಂದು ಸೈಕಲ್ ಅಂಗಡಿಯನ್ನು ಪ್ರಾರಂಭಿಸಿದರು. ಬೆಳಗಾವಿಯಲ್ಲಿದ್ದಾಗಲೇ ಅವರು ಕೈಗಾರಿಕಾ ಕ್ಷೇತ್ರದಲ್ಲಿ ಕಾಲಿರಿಸಿದರು. ಅಂದಿನ ರೈತರ ಪರಿಸ್ಥಿತಿಯನ್ನು ಕಣ್ಣಾರೆ ಕಂಡು ಒಕ್ಕಲುತನಕ್ಕೆ ಉಪಯುಕ್ತವಾದ ಯಂತ್ರೋಪಕರಣಗಳನ್ನು ತಯಾರಿಸುವ ಯೋಜನೆಯನ್ನು ಹಾಕಿಕೊಂಡರು. ಹಲವಾರು ರೈತರನ್ನು ಸಂದರ್ಶಿಸಿ ಮೇವು ಕತ್ತರಿಸುವ ಯಂತ್ರವನ್ನು ೧೯೦೫ ರಲ್ಲಿ ತಯಾರಿಸಿದರು.[೨೨] ಕಿರ್ಲೋಸ್ಕರ ನೇಗಿಲು ಎಂದು ಪ್ರಸಿದ್ಧಿಯನ್ನು ಪಡೆದುಕೊಂಡ ಅಂತವೂ ಕಿರ್ಲೋಸ್ಕರ ಕಂಪನಿಯ ಮೊಟ್ಟ ಮೊದಲ ತಯಾರಿಕೆ. ಇದು ಬೆಳಗಾವಿಯಿಂದ ತಯಾರಾದದ್ದು ಬೆಳಗಾವಿಗೆ ಸ್ಮರಣೀಯ ವಿಷಯವಾಗಿದೆ. ಈ ಯಂತ್ರವು ಬಹುಬೇಗನೆ ಪ್ರಸಿದ್ಧಿಯನ್ನು ಹೊಂದಿ ಬೇಡಿಕೆ ಹೆಚ್ಚಾಯಿತು. ಇದರಿಂದ ಉತ್ತೇಜಿತರಾದ ಲಕ್ಷ್ಮಣರಾವ್ ತಮ್ಮ ಕಾರಖಾನೆಯನ್ನು ಅಭಿವೃದ್ಧಿಪಡಿಸುವ ಯೋಜನೆಯನ್ನು ಹಾಕಿಕೊಂಡರು. ಆದರೆ ಇದೇ ಸಮಯದಲ್ಲಿ ಬೆಳಗಾವಿ ನಗರ ಸಭೆಯವರು ರಸ್ತೆ ವಿಸ್ತೀರ್ಣದ ನೆಪದಲ್ಲಿ ೧೯೧೦ ರಲ್ಲಿ ಇವರ ಕಾರಖಾನೆಯನ್ನು ಕಿತ್ತಿಸಿದರು. ಇದರಿಂದ ಅವರು ಮುಂದೆ ಮಹಾರಾಷ್ಟ್ರಕ್ಕೆ ಹೋಗಿ ಅಲ್ಲಿ ಔಂದ ಪ್ರಾಂತದಲ್ಲಿ ತಮ್ಮ ಬೃಹತ್ ಕಾರಖಾನೆಯನ್ನು ತೆರೆದು ಜಗದ್ವಿಖ್ಯಾತಿ ಪಡೆದರು. ಇದರಿಂದ ಬೆಳಗಾವಿ ಕೈಗಾರಿಕಾ ಕ್ಷೇತ್ರದಲ್ಲಿ ಜಾಗತಿಕ ಮಟ್ಟದ ಮನ್ನಣೆ ಪಡೆಯುವುದನ್ನು ತಪ್ಪಿಸಿಕೊಂಡಿತು.

೧೯೧೦-೨೦ ರ ದಶಕದಲ್ಲಿಯೇ ಬೆಳಗಾವಿಯ ಲೋಕಲ್-ಬೋರ್ಡಿನವರು ಕೈಮಗ್ಗ ಹಾಗೂ ಬೆಂಕಿಪೊಟ್ಟಣ ಉದ್ದಿಮೆಗಳನ್ನು ಪ್ರಾರಂಭಿಸಿದರು. ೧೯೨೦ ರ ದಶಕದಲ್ಲಿ ಬೆಳಗಾವಿ-ಶಹಾಪುರ ಭಾಗದಲ್ಲಿ ಶ್ರೀ ಶಾಂತವೀರಪ್ಪ ಬೇಲೂರವರು ಹೊಸೈರಿ ಉದ್ದಿಮೆಯನ್ನು ಪ್ರಾರಂಭಿಸಿದರು. ಇಲ್ಲಿ ಕಾಲುಚೀಲಗಳ ಉತ್ಪಾದನೆಯಿಂದ ಆರಂಭವಾಗಿ ವಿವಿಧ ತರಹದ ಬಟ್ಟೆಗಳನ್ನು ಉತ್ಪಾದಿಸಲಾಯಿತು. ಇದು ೧೯೫೪ ರವರೆಗೆ ನಡೆದು ನಿಂತಿತು.

ಎಣ್ಣೆ (ಖಾದ್ಯ ತೈಲ) ಉತ್ಪಾದನೆಯಲ್ಲಿಯೂ ಬೆಳಗಾವಿ ಪ್ರಸಿದ್ಧಿಯನ್ನು ಪಡೆದುಕೊಂಡಿತ್ತು. ಗೋವಾ, ಮಹಾರಾಷ್ಟ್ರ ಮತ್ತು ಕರ್ನಾಟಕದ ಬೇರೆ ಬೇರೆ ಭಾಗಗಳಿಂದ ಇಲ್ಲಿಯ ಖಾದ್ಯ ತೈಲವನ್ನು ತರಿಸಿಕೊಳ್ಳುತ್ತಿದ್ದರು. ಗುಣಮಟ್ಟದಲ್ಲಿಯೂ ಮೂರು ರಾಜ್ಯಗಳಲ್ಲಿ ಬೇಡಿಕೆಯುಳ್ಳದ್ದಾಗಿತ್ತು. ಶೇಂಗಾ, ಕುಸುಬೆ, ಸೂರ್ಯಪಾನ ಮುಂತಾದ ಕಾಳಿನಿಂದ ಖಾದ್ಯ ತೈಲವನ್ನು ಗಾಣದಿಂದ ತೆಗೆಯುತ್ತಿದ್ದರು. ಎಣ್ಣೆಯನ್ನು ತೆಗೆದು ಉಳಿದ ಚಟ್ಟದಿಂದ ಹಿಂಡಿಯನ್ನು (ದನಕರುಗಳಿಗೆ ಬೇಕಾಗುವ ಆಹಾರ) ತಯಾರಿಸುತ್ತಿದ್ದರು. ಇದೂ ಕೂಡ ಒಳ್ಳೆಯ ವ್ಯಾಪಾರವನ್ನು ಹೊಂದಿತ್ತು. ಬೆಳಗಾವಿ ಸುತ್ತಮುತ್ತಲಿನ ಪ್ರದೇಶದಲ್ಲಿ ಶೇಂಗಾ, ಕುಸುಬಿ, ಸೂರ್ಯಪಾನ ಮುಂತಾದ ಬೆಳೆಗಳನ್ನು ಹೆಚ್ಚಾಗಿ

ಬೆಳೆಯುತ್ತಿದ್ದರು. ಇದರಿಂದಾಗಿಯೇ ಈ ಉದ್ಯಮವು ಹೆಚ್ಚು ಬೆಳವಣಿಗೆಯನ್ನು ಹೊಂದಲು ಕಾರಣವಾಯಿತು. ಈಗ ಕೇವಲ ಬೆರಳೆಣಿಕೆಯ ಖಾದ್ಯ ತೈಲ ಉತ್ಪಾದನಾ ಕಾರಖಾನೆ (ಗಾಣ)ಗಳು ಉಳಿದುಕೊಂಡಿವೆ. ಕಟ್ಟಿಗೆ ಉದ್ಯಮವು ಬೆಳಗಾವಿಯ ಮತ್ತೊಂದು ಮಹತ್ವದ ಉದ್ಯಮವಾಗಿದೆ. ಬೆಳಗಾವಿಯು ಸಹ್ಯಾದ್ರಿ ಬೆಟ್ಟದ ಸಮೀಪವಿರುವುದರಿಂದ ಸಹಜವಾಗಿಯೇ ಈ ಉದ್ಯಮವು ಬೆಳವಣಿಗೆಯನ್ನು ಹೊಂದಿತು. ಮನೆ ಕಟ್ಟಲು ಬೇಕಾದ ಕಿಡಗಿ, ಬಾಗಿಲು, ತೊಲೆಗಳು, ಪೀಠೋಪಕರಣಗಳು ಮುಂತಾದವುಗಳನ್ನು ತಯಾರಿಸುವ ಹಲವಾರು ಮಿಲ್‌ಗಳು ಸ್ಥಾಪನೆಗೊಂಡವು. ೧೯೩೧ ರಲ್ಲಿ ಶ್ರೀ ಎಂ. ಎಂ. ದಳವಿ ಎನ್ನುವವರು ಪೀಠೋಪಕರಣಗಳನ್ನು ತಯಾರಿಸಿ ದೇಶವ್ಯಾಪಿಯಾಗಿ ರಪ್ತು ಮಾಡುತ್ತಿದ್ದರು. ಅತ್ಯಂತ ಉತ್ಕೃಷ್ಟ ಗುಣಮಟ್ಟದ ಐಶಾರಾಮಿ ಪೀಠೋಪಕರಣಗಳು ಬೆಳಗಾವಿಯಲ್ಲಿ ತಯಾರಾಗುತ್ತಿದ್ದವು.

ವಾಹನಗಳಿಗೆ ಕಟ್ಟಿಗೆಯ ಕವಚ ಕಟ್ಟುವ ಉದ್ಯಮವು ಬೆಳಗಾವಿಗೆ ಪ್ರಸಿದ್ಧಿ ತಂದು ಕೊಟ್ಟ ಮತ್ತೊಂದು ಮಹತ್ವದ ಉದ್ಯಮವು. ಹಳೆಯ ಪೂನಾ-ಬೆಂಗಳೂರ ರಸ್ತೆಯ ಎರಡೂ ಬದಿಗೆ ಕಂಡು ಬರುವ ಈ ಕೇಂದ್ರಗಳೂ ಕರ್ನಾಟಕ, ಮಹಾರಾಷ್ಟ್ರ ಮತ್ತು ಗೋವಾ ರಾಜ್ಯಗಳಲ್ಲಿ ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ಕಳೆದ ಐವತ್ತು ವರ್ಷಗಳಿಂದ ಈ ಉದ್ಯೋಗದಲ್ಲಿ ಪರಿಣಿತಿಯನ್ನು ಪಡೆದವರು ಇದರಲ್ಲಿದ್ದಾರೆ. ಇಲ್ಲಿ ಒಮ್ಮೆ ವಾಹನಗಳಿಗೆ ಕವಚ ಕಟ್ಟಿದರೆ ಅದು ಶಾಶ್ವತ ಎನ್ನುವುದು ವಾಹನ ಮಾಲಿಕರಲ್ಲಿ ವಿಶ್ವಾಸ ಮೂಡಿದೆ. ಬೆಳಗಾವಿಯ ಸುತ್ತಲಿರುವ ಕಾಡಿನಿಂದಾಗಿಯೇ ಈ ಉದ್ಯಮವು ಬೆಳೆದಿದೆ. ಅತಿ ಕಡಿಮೆ ಖರ್ಚಿನಲ್ಲಿ ಗುಣಮಟ್ಟದ ಕೆಲಸ ಆಗುವುದರಿಂದ ಹೆಚ್ಚು ಬೇಡಿಕೆ ಬಂದಿದೆ.

ಉದ್ಯಮಭಾಗದ ಫೌಂಡ್ರಿ ಉದ್ಯಮ ಅಂತರಾಷ್ಟ್ರೀಯ ಖ್ಯಾತಿಯನ್ನು ಗಳಿಸಿದೆ. ಈ ಉದ್ಯಮವು ಬೆಳಗಾವಿ ನಗರದ ಬಹಳಷ್ಟು ಜನರ ಜೀವನದ ಆಧಾರ ಸ್ಥಂಭವಾಗಿದೆ. ಪ್ರತಿವರ್ಷ ನೂರಾರು ಕೋಟಿ ರೂಪಾಯಿಗಳಷ್ಟು ವಹಿವಾಟು ಈ ಉದ್ಯಮದಿಂದ ನಡೆದು ಬೆಳಗಾವಿಯನ್ನು ಕೈಗಾರಿಕಾ ಕ್ಷೇತ್ರದಲ್ಲಿ ಕಂಗೊಳಿಸುವಂತೆ ಮಾಡಿದೆ. ಇಲ್ಲಿ ತಯಾರಾಗುವ ವಾಹನಗಳ ಬಿಡಿ ಭಾಗಗಳು ದೇಶ, ವಿದೇಶಗಳಿಗೆ ರಪ್ತಾಗುತ್ತವೆ. ಅಟೊಮೊಬಾಯಿಲ್ ಮತ್ತು ಡಿಸೇಲ್ ಎಂಜಿನಗಳಲ್ಲಿ ಬಳಕೆ ಮಾಡುವ ಬಿಡಿ-ಭಾಗಗಳು ಒಂದು ಗ್ರಾಂ ತೂಕದಿಂದ ೩೦೦೦ ಕೆ. ಜಿ. ಭಾರದ ವರೆಗಿನ ಉಪಕರಣಗಳು ತಯಾರಾಗುತ್ತವೆ. ಹೀಗಾಗಿ ವರ್ಷಕ್ಕೆ ಕನಿಷ್ಠ ಒಂದು ಲಕ್ಷಟನ್ ಫೌಂಡ್ರಿ ಉತ್ಪನ್ನ ಬೆಳಗಾವಿಯಿಂದ ತಯಾರಾಗಿ ರಪ್ತಾಗುತ್ತದೆ.

ಇಲ್ಲಿಯ ಫೌಂಡ್ರಿ ಉತ್ಪನ್ನಗಳನ್ನು ಜರ್ಮನಿ, ಸ್ಪೇನ್, ಬೆಲ್ಜಿಯಮ್, ಅಮೇರಿಕ, ಇಂಗ್ಲೆಂಡ್, ಮಧ್ಯ ಪ್ರಾಚ್ಯ ದೇಶಗಳು ಆಮದು ಮಾಡಿಕೊಳ್ಳುತ್ತವೆ. ಮಹಿಂದ್ರಾ, ಎಸ್ಕಾರ್ಟ್, ಟಾಟಾ, ಬಿ. ಎಂ. ಎಂ. ಎಲ್. ಬಿ. ಎಚ್. ಇ. ಎಲ್, ಅಶೋಕ ಲೇಲ್ಯಾಂಡ್, ಮಾರುತಿ, ಕಮೆನ್ಸ್ ಇಂಡಿಯಾ ಮುಂತಾದ ಬೃಹತ್ ಕಂಪನಿಗಳು ಬೆಳಗಾವಿಯ ಉದ್ಯಮ ಭಾಗದ ಉತ್ಪನ್ನಗಳನ್ನು ನೆಚ್ಚಿಕೊಂಡಿವೆ.

ಇತ್ತೀಚಿನ ದಿನಗಳಲ್ಲಿ ಈ ಉದ್ಯಮ ಇಳಿಮುಖವಾಗುತ್ತಿದೆ. ಫೌಂಡ್ರಿ ಉದ್ಯಮಕ್ಕೆ ಬೇಕಾದ ಕಚ್ಚಾ ವಸ್ತುಗಳಾದ ಸ್ಕ್ರಾಪ್, ಕೋಕ್, ಪಿಗ್ ಐಯರ್ನಗಳ ಬೆಲೆ ಹೆಚ್ಚಾಗಿರುವುದರಿಂದ ಅಲ್ಲದೆ ಆರ್ಥಿಕ ಹಿಂಜರಿತ, ಅಟೋಮೊಬಾಯಿಲ್ ಉತ್ಪಾದನೆಗಳಿಗೆ ಬೇಡಿಕೆ ಇಲ್ಲದಿರುವುದು ಮುಂತಾದ ಕಾರಣಗಳಿಂದ ಈ ಉದ್ಯಮವು ಸಂಕಷ್ಟದಲ್ಲಿ ಸಿಲುಕಿದೆ. ಅಶೋಕಾ ಅಯರ್ನ ಅರುಣ ಇಂಜನಿಯರಿಂಗ ಕಂಪನಿ ಭಾರತ ಕಬ್ಬಿನ ಉಕ್ಕು ಕಂಪನಿ ಹೀಗೆ ಸುಮಾರು ೬೫ ಫೌಂಡ್ರಿಗಳು ಈ ಉತ್ಪನ್ನದಲ್ಲಿ ತೊಡಗಿವೆ.

ಕ್ರಿ.ಶ. ೧೯೬೯ ರಲ್ಲಿ ದೊಡ್ಡ ಪ್ರಮಾಣದ ಉದ್ಯಮವು ಇಂಡಾಲ ಅಲ್ಯುಮಿನಿಯಂ ಕಾರ್ಖಾನೆಯ ಮೂಲಕ ಪ್ರಾರಂಭಗೊಂಡಿತು. ಸುಮಾರು ೧೨೦೦ ಎಕರೆ ಪ್ರದೇಶದ ವ್ಯಾಪ್ತಿಯಲ್ಲಿ ಈ ಬೃಹತ್ ಕಾರ್ಖಾನೆ ಸ್ಥಾಪನೆಯಾಗುವುದರೊಂದಿಗೆ ದೇಶದ ಕೆಲವೇ ಕೆಲವು ಅಲ್ಯುಮಿನಿಯಂ ಕಾರಖಾನೆ ಹೊಂದಿದ ನಗರಗಳಲ್ಲಿ ಬೆಳಗಾವಿಯು ಸೇರಿತು. ಇಲ್ಲಿ ಮೊದಲು ಅಲ್ಯುಮಿನಾ ಮತ್ತು ಸ್ಮೆಲ್ಟರ ಹೀಗೆ ಎರಡು ಪದಾರ್ಥಗಳ ಉತ್ಪಾದನೆಯೊಂದಿಗೆ ಪ್ರಾರಂಭಗೊಂಡಿತು. ಬಾಕ್ಸಾಯಿಟ್‌ನಿಂದ ಅಲ್ಯುಮಿನಾ ತಯಾರಿಸಿ ಅದರಿಂದ ಸ್ಮೆಲ್ಟರನ್ನು ತಯಾರಿಸುತ್ತಾರೆ. ಈ ಸ್ಮೆಲ್ಟರದಿಂದಲೇ ಅಲ್ಯುಮಿನಿಯಂ ಉತ್ಪಾದನೆಗೊಳ್ಳುತ್ತದೆ. ಅಲ್ಯುಮಿನಿಯಂ ತಯಾರಿಕೆಗೆ ಬೇಕಾದ ಕಚ್ಚಾ ವಸ್ತುವಾದ ಬಾಕ್ಸಾಯಿಟ್ ಅದಿರು ಬೆಳಗಾವಿ ಜಿಲ್ಲೆಯಲ್ಲಿ ಹೇರಳವಾಗಿ ದೊರೆಯುತ್ತದೆ. ಬೆಳಗಾವಿ ಹತ್ತಿರ ಇರುವ ಕಿಣೆಯೆಂಬ ಹಳ್ಳಿಯಿಂದ ಬಾಕ್ಸಾಯಿಟ್ ಅದಿರನ್ನು ತರಿಸುತ್ತಾರೆ. ಅಲ್ಲದೆ ಮಹಾರಾಷ್ಟ್ರದ ಕೊಲ್ಲಾಪುರ ಹತ್ತಿರ ಇರುವ ನಾರತಸವಾಡಿಯಿಂದಲೂ 'ಇಲ್ಲಿಗೆ ಅದಿರು ಬರುತ್ತದೆ. ಸುಮಾರು ೫೫ ಕೋಟಿ ರೂಪಾಯಿ ಬಂಡವಾಳ ತೊಡಗಿಸಿದ್ದು ಸುಮಾರು ೧೫೦೦ ಜನರು ಇಲ್ಲಿ ಉದ್ಯೋಗ ಕೈಕೊಂಡಿದ್ದಾರೆ.

**ಹೆಲ್ಮೆಟ್ ಕಾರಖಾನೆಗಳು :**

ಬೆಳಗಾವಿಯ ಭಾರತನಗರ ಪ್ರದೇಶದಲ್ಲಿರುವ ದೇಶದ ಪ್ರತಿಷ್ಠಿತ ಹೆಲ್ಮೆಟ್ ಕಂಪನಿಗಳು ಬೆಳಗಾವಿಯ ಉದ್ಯಮ ಕ್ಷೇತ್ರಕ್ಕೆ ಮಹತ್ವವನ್ನು ತಂದು ಕೊಟ್ಟಿವೆ. ಪ್ರಸಿದ್ಧ ಕಂಪನಿಗಳಾದ ವೇಗಾ, ಓಲ್ಫಾ ಇವು ದೇಶದ ಕೆಲವೇ ಹೆಲ್ಮೆಟ್ ಕಾರಖಾನೆಗಳಲ್ಲಿಯೇ ದೊಡ್ಡವೆನ್ನಲಾಗುತ್ತದೆ. ದಿನಕ್ಕೆ ಸಾವಿರಕ್ಕೂ ಹೆಚ್ಚು ಹೆಲ್ಮೆಟ್ ತಯಾರಿಸುವ ಸಾಮರ್ಥ್ಯವನ್ನು ಹೊಂದಿವೆ. ಇಲ್ಲಿಂದ ಅಮೆರಿಕಾ, ಜರ್ಮನ, ಜಪಾನ, ಮಲೇಸಿಯಾ, ಇಂಡೋನೇಶಿಯಾ, ಹಾಂಕಾಂಗ್ ಮುಂತಾದ ರಾಷ್ಟ್ರಗಳಿಗೂ ಹೆಲ್ಮೆಟಗಳು ರಫ್ತಾಗುತ್ತವೆ. ಅತ್ಯಂತ ಒಳ್ಳೆಯ ಗುಣಮಟ್ಟವನ್ನು ಹೊಂದಿದ್ದರಿಂದ ಈ ಹೆಲ್ಮೆಟಗಳಿಗೆ ಅಂತರಾಷ್ಟ್ರೀಯ ಮಟ್ಟದಲ್ಲಿ ಉತ್ತಮವಾದ ಬೇಡಿಕೆ ಬಂದಿದೆ.

**ಹೊಟೇಲ್ ಉದ್ಯಮ :** ಪ್ರಾರಂಭದಲ್ಲಿ ಜೀವನೋಪಾಯ ವೃತ್ತಿಯಾಗಿದ್ದ ಹೊಟೇಲ್ ವ್ಯವಸಾಯ ಪ್ರಸ್ತುತ ಒಂದು ಬೃಹತ್ ಉದ್ದಿಮೆಯಾಗಿ ಬೆಳಗಾವಿಯ ಸಾಂಸ್ಕೃತಿಕ ಬದಲಾವಣೆಯಲ್ಲಿ ಪ್ರಮುಖ ಪಾತ್ರವಹಿಸಿದೆ.

ಶ್ರೀ ಪರಾಂಜಪೆಯೆನ್ನುವವರು ಸಾವಂತವಾಡಿಯಿಂದ ಬಂದು ಇಲ್ಲಿ ಫರಾಳದುಕಾನ್ ಹೆಸರಿನಲ್ಲಿ ಹೊಟೇಲ್ ಪ್ರಾರಂಭಿಸಿದರು. ಇದು ಬೆಳಗಾವಿಯ ಮೊಟ್ಟ ಮೊದಲ ಹೊಟೇಲ್. ಇಲ್ಲಿಂದ ಪ್ರಾರಂಭಗೊಂಡ ಹೊಟೇಲ್ ಉದ್ಯಮವು ಇಂದು ಬೃಹದಾಕಾರವಾಗಿ ಬೆಳೆದು ನಿಂತಿದೆ. ರಾಷ್ಟ್ರೀಯ, ಅಂತರಾಷ್ಟ್ರೀಯ ಸೌಲಭ್ಯಗಳನ್ನು ಒಳಗೊಂಡ ಸ್ಟಾರ್ ಹೊಟೇಲಗಳು ತಲೆ ಎತ್ತಿವೆ. ಸಂಕಮ್ ರೆಸಿಡೆನ್ಸಿ , ಕೀರ್ತಿ, ರಾಮದೇವ, ಸನ್ಮಾನ ಡೀಲಕ್ಸ್, ಮಿಲನ್, ಆದರ್ಶ ಪ್ಯಾಲೆಸ್, ಹನುಮಾನ ಸತ್ಕಾರ, ಪೈ, ಸುವರ್ಣ ಮಂದಿರ, ಪ್ರಿಯಾಂಕಾ ಪ್ಯಾಲೇಸ್, ವಂದನಾ ಪ್ಯಾಲೇಸ್ ಮುಂತಾದ ಹೊಟೇಲಗಳು ಉತ್ತಮವಾದ ಸೌಲಭ್ಯವನ್ನು ಹೊಂದಿ ಹೆಸರುಗಳಿಸಿವೆ. ಹೊಟೇಲಗಳಲ್ಲಿ ಕೆಲಸ ಮಾಡುವ ನೂರಾರು ಕುಟುಂಬಗಳ ಜೀವನಕ್ಕೆ ಆಧಾರ ದೊರೆತಿದೆ.

ಗ್ರಾಮೀಣ ಸಂಸ್ಕೃತಿಯನ್ನು ಹೊಂದಿದ್ದ ಬೆಳಗಾವಿಯು ಕ್ರಮೇಣ ನಗರ ಸಂಸ್ಕೃತಿಯನ್ನು ಹೊಂದಲು ಮುಖ್ಯ ಕಾರಣ ಇಲ್ಲಿ ಸ್ಥಾಪನೆಗೊಂಡ ಹೊಟೇಲಗಳು. ಬೆಳಗಾವಿಯ ಬೆಳವಣಿಗೆಯ ಹಂತವನ್ನು ಗುರುತಿಸುವಾಗ ಪ್ರಮುಖವಾದ ಪಾತ್ರ ಹೊಟೇಲಗಳಿರುವುದು ಕಂಡುಬರುತ್ತದೆ. ಸಾಮಾಜಿಕ ಜೀವನದಲ್ಲಿ ಪ್ರಮುಖವಾಗಿ ಕಂಡು ಬರುವ ಉಡುಗೆ-ತೊಡುಗೆ, ಊಟ-ಉಪಚಾರ, ಧರ್ಮ-ನಂಬಿಕೆಗಳು, ಅಚರಣೆ-ಸಂಪ್ರದಾಯಗಳು ಇವೆಲ್ಲವುಗಳಿಗೆ ಬದಲಾವಣೆಯನ್ನು ತಂದಿದ್ದು ಇಲ್ಲಿಯ ಹೊಟೇಲಗಳು.

ಊಟ-ತಿಂಡಿ-ತಿನಿಸುಗಳಲ್ಲಿ ಕಟ್ಟಳೆಗಳನ್ನು ಹೊಂದಿ ಬೆಳಗಾವಿಯ ಜನರು ಹೊಟೇಲಗಳಲ್ಲಿ ತಿನ್ನುವುದು ಅಪರಾಧ ಎನ್ನುವ ಮನೋಭಾವನೆಯನ್ನು ಹೊಂದಿದ್ದರು. ಅಂಗಡಿಯಲ್ಲಿ ತಿಂದು ಬಂದವರನ್ನು ತಾತ್ಸಾರದಿಂದ ಕಾಣುತ್ತಿದ್ದ ಹಿರಿಯರು ಹಲವಾರು ಕಟ್ಟಳೆಗಳನ್ನು ವಿಧಿಸಿದ್ದರು. ಕೆಲವೊಂದು ಶಿಷ್ಟ ಮನೆತನಗಳಲ್ಲಿ ಬ್ರೆಡ್-ಬಿಸ್ಕಿಟಗಳಿಗೂ ಪ್ರವೇಶವಿರಲಿಲ್ಲ. ಅನ್ಯಜಾತಿಯವರ ಮನೆಯಲ್ಲಿಯೂ ಕೂಡ ಊಟ ಮಾಡದ ಮಡಿವಂತಿಕೆಯ ಸಮಾಜವನ್ನು ಬೆಳಗಾವಿಯಲ್ಲಿ ಕಾಣಬಹುದಾಗಿತ್ತು. ಇಂತಹ ಸಂದರ್ಭದಲ್ಲಿಯೇ ಹುಟ್ಟಿಕೊಂಡ ಹೊಟೇಲಗಳು ಬಹು ಬೇಗನೆ ಬೆಳಗಾವಿ ಜನರನ್ನು ಆಕರ್ಷಿಸಿದವು. ಇದಕ್ಕೆ ಮುಖ್ಯ ಕಾರಣ ಅಲ್ಲಿ ತಯಾರಾಗುತ್ತಿದ್ದ ರುಚಿಕಟ್ಟಾದ ತಿಂಡಿ ತಿನಿಸುಗಳು.

ಇಪ್ಪತ್ತನೆಯ ಶತಮಾನದ ಪ್ರಾರಂಭದ ಹತ್ತು-ಇಪ್ಪತ್ತರ ದಶಕದಲ್ಲಿ ಪರಾಂಜಪೆಯವರ 'ಫರಾಳಾಚೀ ದುಕಾನ' ಮತ್ತು ಉಡುಪಿ ಬ್ರಾಹ್ಮಣರ 'ಶ್ರೀಕೃಷ್ಣಭವನ' ಹೊಟೇಲಗಳು ತುಂಬ ಪ್ರಸಿದ್ಧಿಯನ್ನು ಪಡೆದಿದ್ದವು. ಬೇರೆ ಊರಿನವರು ಬೆಳಗಾವಿಗೆ ಬರುವುದಿದ್ದರೆ ಮನೆಯಲ್ಲಿ ತಿಂಡಿ ತಿನ್ನದೆ ನೇರವಾಗಿ ಈ ಹೊಟೇಲಗಳಿಗೆ ಬಂದು ಉಪಹಾರ ಮಾಡುತ್ತಿದ್ದರು. ಇನ್ನು ಬೆಳಗಾವಿಯ ಜನರಂತೂ ಇಲ್ಲಿಯ ತಿಂಡಿ-ತಿನಿಸುಗಳಿಗೆ ಮಾರು ಹೋಗಿದ್ದರು. ಪರಾಂಜಪೆಯವರ ಹೊಟೇಲನ 'ಶಿರಾ' ಅಪ್ಪಟ ತುಪ್ಪದಲ್ಲಿ ತಯಾರಾಗುತ್ತಿತ್ತು. 'ಪುರಿಭಾಜೀ', 'ಪೋಹೆ' 'ಇಡ್ಲಿ' ಮುಂತಾದವುಗಳನ್ನು ಒಮ್ಮೆ ತಿಂದವರು ಮತ್ತೊಮ್ಮೆ ಬರಲೇಬೇಕು ಎನ್ನುವಷ್ಟರ ಮಟ್ಟಿಗೆ ರುಚಿಯಾಗಿರುತ್ತಿದ್ದವು.

ಈ ಹೊಟೇಲಗೆ ಧೈರ್ಯದಿಂದ ನೇರವಾಗಿ ಬರುವವರು ಯಾವುದೇ ಅಂಜಿಕೆ ಅಳಕಿಲ್ಲದೆ ಬಂದು ತಿಂಡಿ-ಚಹ ಕುಡಿದು ಹೋಗುತ್ತಿದ್ದರು. ಇನ್ನು ಸಂಪ್ರದಾಯಸ್ಥರು, ಯುವಕರು ನೇರವಾಗಿ ಒಳಗೆ ಬಾರದೆ ಹಿಂದಿನ ಬಾಗಿಲಿನಿಂದ ಬಂದು ಚಹ ಕುಡಿದು ಹೋಗುತ್ತಿದ್ದರು. ಕಾಲೇಜ ರಸ್ತೆಯಲ್ಲಿ ಪ್ರಾರಂಭವಾದ 'ಕೆಫೆ ಇಲಾಯಿಟ' ಎನ್ನುವ ಹೊಟೇಲ್ ಬೆಳಗಾವಿಯ ಸಾಮಾಜಿಕ ಜೀವನದ ಮೇಲೆ ಪರಿಣಾಮವನ್ನು ಬೀರಿದ ಹೋಟೇಲಾಗಿದೆ. ನಗರಕ್ಕೆ ಹೊಸ ಸಂಸ್ಕೃತಿಯನ್ನು ಆಧುನಿಕತೆಯನ್ನು ಬೆಳೆಸಿದ ಹೊಟೇಲ ಆಗಿದೆ. ಇದು ಅಂದಿನ ಕಾಲದ ಪ್ರತಿಷ್ಠಿತರಿಗೆ ಉತ್ತಮ ದರ್ಜೆಯ ಹೊಟೇಲ್ ಎನಿಸಿತ್ತು. ಇದು ಲಿಂಗರಾಜ ಕಾಲೇಜಿನ ಸಮೀಪವೇ ಇದೆ. ಹೀಗಾಗಿ ಇದು ಲಿಂಗರಾಜ ಕಾಲೇಜಿನ ಹುಡುಗ-ಹುಡುಗಿಯರಿಗೆ ವಿನೋದ ಸ್ಥಳವಾಗಿ, ಯುವ ಪ್ರೇಮಿಗಳಿಗೆ ತಾಣವಾಗಿ ಪರಿಣಮಿಸಿತು. ಇಲ್ಲಿ ಬೆಳಗಿನ ಹೊತ್ತು ತಯಾರಾಗುತ್ತಿದ್ದ ದೋಸೆ, ಶಿರಾ, ಉಪ್ಪಿಟ್ಟು ಇಡ್ಲಿ ಮುಂತಾದವುಗಳು ಬೆಳಗಾವಿಯ ಹಿರಿಯ ನಾಗರಿಕರನ್ನು ಆಕರ್ಷಿಸಿದ್ದವು. ಬೆಳಗಿನ ವಾಯುವಿಹಾರಕ್ಕೆ ಬರುತ್ತಿದ್ದ ಹಿರಿಯರು ತಿರುಗಿ ಮನೆಗೆ ಹೋಗಬೇಕಾದರೆ 'ಕೆಫೆ ಇಲಾಯಿಟ'ಗೆ ಭೆಟ್ಟಿ ಕೊಟ್ಟೇ ಹೋಗುತ್ತಿದ್ದರು. ಎಷ್ಟೋ ಜನರು ಇಲ್ಲಿಯ ಚಹಾ-ತಿಂಡಿಗಾಗಿಯೇ ಮುಂಜಾನೆ ವಾಯುವಿಹಾರಕ್ಕೆ ಬರಲು ಆರಂಭಿಸಿದರು. ಮೊದಮೊದಲು ಹಿಂಜರಿಯುತ್ತ ಸಂಕೋಚದಿಂದಲೇ ಅತ್ತಿತ್ತನೋಡಿ ಒಳಗೆ ಬರುತ್ತಿದ್ದವರು ಕೆಲವು ದಿನಗಳಲ್ಲಿ ಯಾವುದೇ ಅಂಜಿಕೆಯಿಲ್ಲದೆ ತಮ್ಮ ಸ್ವಂತ ಮನೆಯೊಳಗೆ ಹೋಗುವ ಹಾಗೆ ಬರತೊಡಗಿದರು. ಈ ರೀತಿಯ ನಡವಳಿಕೆಯ ಬದಲಾವಣೆಯೇ ಹೊಸ ಜೀವನಕ್ರಮದ ಲಕ್ಷಣ. ಸಂಸ್ಕೃತಿಯ ಬದಲಾವಣೆ ಕಣ್ಣಿಗೆ ಕಾಣದ ಹಾಗೆ ನಡೆಯುತ್ತದೆ. ಜನರ ಗುಣ-ಸ್ವಭಾವಗಳು ಬದಲಾದ ಸಂದರ್ಭಕ್ಕೆ ತನ್ನಿಂದತಾನೆ ಹೊಂದಿಕೊಳ್ಳುತ್ತವೆ. ಬೆಳಗಾವಿಯ ನಗರ ಜೀವನ ಶೈಲಿಯ ಮುಂಬೆಳಕು ಮೂಡುವ ಕಾಲಘಟ್ಟದಲ್ಲಿ ಈ ಹೊಟೇಲ್ ಸೇತುವೆಯಾಗಿ ಕಾರ್ಯಮಾಡಿತು. ಕಾಲೇಜು ವಿದ್ಯಾರ್ಥಿಗಳಿಗೆ ಮೋಜಿನತಾಣವಾಯಿತು. ಮುಂಜಾನೆಯ ವೇಳೆಯಲ್ಲಿ ಹಿರಿಯರು ಆಗಮಿಸುತ್ತಿದ್ದರು. ಪ್ರೇಮ, ಸಲ್ಲಾಪ, ಸಿಗರೇಟು ಸೇದುವುದು ಹರಟೆ ಹೊಡೆಯುವುದು ಹೀಗೆ ಸಂಜೆಯ ದಿನಚರಿಯೆಂಬಂತೆ ಈ ಹೊಟೇಲನಲ್ಲಿ ನಡೆಯುತ್ತಿತ್ತು. ಇದರಿಂದ ಬೆಳಗಾವಿಗೆ ಹೊಸ ನಾಗರಿಕತೆಯ ಗಾಳಿ ಬೀಸತೊಡಗಿತು.

'ಕೆಫೆ ಇಲಾಯಿಟ್' ಹೊಟೇಲ್‌ನ ತಿಂಡಿತಿನಿಸುಗಳು ವಿಶೇಷವಾಗಿದ್ದವು. ಹಲವು ಧರ್ಮ, ಭಾಷೆ, ಸಂಸ್ಕೃತಿಗಳ ಸಂಗಮಸ್ಥಾನವಾದ ಬೆಳಗಾವಿಯ ಸಾಂಸ್ಕೃತಿಕ ವಿಕಾಸದಲ್ಲಿ ಇಲ್ಲಿಯ ತಿಂಡಿ-ತಿನಿಸುಗಳು ಪ್ರಭಾವ ಬೀರಿದವು. ಮಹಾರಾಷ್ಟ್ರ, ಗೋವಾ, ಸಂಸ್ಕೃತಿಯು ಮೂಲ ಕನ್ನಡ ಸಂಸ್ಕೃತಿಯ ಜೊತೆಗೆ ಮಿಲನವಾಯಿತು. ಗೋವೆಯ 'ಪಾವ ಭಾಜಿ' ಎನ್ನುವ ತಿಂಡಿ ಪದಾರ್ಥ ಬೆಳಗಾವಿಗೆ ಈ ಹೊಟೆಲ್ ಮೂಲಕ ಕಾಲಿಟ್ಟಿತು.

'ಕೆಫೆ ಇಲಾಯಿಟ' ಹೊಟೇಲನಿಂದ ಬೆಳಗಾವಿ ಯುವ ಜನರ ವೇಷ-ಭೂಷಣಗಳೂ ಬದಲಾಗತೊಡಗಿತು. ಒಬ್ಬರನ್ನೊಬ್ಬರು ಆಕರ್ಷಿಸಲು ಯುವಕ ಯುವತಿಯರು ವಿಭಿನ್ನ ವೇಷ-ಭೂಷಣಗಳನ್ನು ಧರಿಸಲು ಪ್ರಾರಂಭಿಸಿದರು.

ಕಾಲೇಜುಗಳಲ್ಲಿ ಕಟ್ಟಳೆಗಳಿದ್ದುದರಿಂದ 'ಕೆಫೆ ಇಲಾಯಿಟಿ'ಯಲ್ಲಿ ಮುಕ್ತ ಅವಕಾಶ ದೊರೆಯಿತು. 'ಕೆಫೆ ಇಲಾಯಿಟಿ' ಹೊಟೇಲನಿಂದ ಬೆಳಗಾವಿಯ ಹೊಟೇಲ ಉದ್ಯಮದಲ್ಲಿ ಮಹತ್ವದ ಬದಲಾವಣೆ ಉಂಟಾಯಿತು. ಈ ಹೊಟೇಲನಿಂದ ಪ್ರಭಾವಿತರಾಗಿ ಹಲವಾರು ಜನರು ಹೊಟೆಲ ಉದ್ಯಮಕ್ಕೆ ಕೈ ಹಾಕಿದರು. ಇಲ್ಲಿಯ ತಿಂಡಿ–ತಿನಿಸುಗಳನ್ನೆ ಇನ್ನೂ ರುಚಿಕಟ್ಟಾಗಿ ತಯರಿಸುವ ಹೊಟೇಲಗಳು ಪ್ರಾರಂಭಗೊಂಡವು. ಅಲ್ಲದೆ ಗೋವೆಯ 'ಪಾವ ಭಾಜಿ' ಬೆಳಗಾವಿಯ ಮೂಲೆ ಮೂಲೆಗಳಲ್ಲಿ ತಯಾರಾಗತೊಡಗಿತು. ಇಂದು ಎಲ್ಲಿ ನೋಡಿದಲ್ಲೆಲ್ಲಾ 'ಪಾವ ಭಾಜಿ' ಡಬ್ಬಾ ಅಂಗಡಿಗಳು ಹುಟ್ಟಿಕೊಳ್ಳಲು 'ಕೆಫೆ ಇಲಾಯಿಟಿ' ನಾಂದಿಯಾಯಿತು.

'ಕೆಫೆ ಇಲಾಯಿಟಿ' ಯಿಂದ ಉತ್ತೇಜಿತರಾದ ಹೊಟೇಲಿನ ಮಾಲಿಕ ಶ್ರೀನಿವಾಸರು 'ಕೃಷ್ಣ ಕೆಫೆ'ಯನ್ನು ಪ್ರಾರಂಭಿಸಿದರು. ಇದು ಅವರದೇ ಆದ ಶ್ರೀ ಕೃಷ್ಣ ಭವನ ಮತ್ತು ಕೆಫೆ ಇಲಾಯಿಟಿಗಳ ಸಂಗಮವಾಗಿ 'ಕೃಷ್ಣ ಕೆಫೆ'ಯಾಯಿತು. ಈ ಹೊತ್ತಿಗಾಗಲೇ ಬೆಳಗಾವಿಯಲ್ಲಿ ಚಲನಚಿತ್ರ ಮಂದಿರಗಳು ತಲೆ ಎತ್ತುತ್ತಿದ್ದವು. ಪ್ರತಿಯೊಂದು ಟಾಕೀಜಿನ ಹತ್ತಿರ ಒಂದೊಂದು ಹೊಸ–ಅಂಗಡಿಗಳು ಪ್ರಾರಂಭವಾದವು. ರೇಟಿಯೋ ಟಾಕೀಜಿನ ಹತ್ತಿರ 'ಕೆಫೆ ರಿಝ್' ರೇಡಿಯೋ ಟಾಕೀಜಿನ ಹತ್ತಿರ 'ರೇಡಿಯೋ ಕೆಫೆ' ಮುಂತಾದವುಗಳು ಆರಂಭವಾದವು. ಈ ಹೊಟೇಲಗಳನ್ನು ಪ್ರಾರಂಭಿಸಿದವರು ಶ್ರೀನಿವಾಸರ ಹೊಟೇಲನಲ್ಲಿ ಕೆಲಸ ಮಾಡುತ್ತಿದ್ದ ಭಟ್ಟರು, ಮ್ಯಾನೇಜರರು ಹೊಸ ಹೊಟೇಲಗಳ ಮಾಲಿಕರಾದರು.

ಹೀಗೆ ಬೆಳಗಾವಿಯಲ್ಲಿ ಹೊಟೇಲ ಉದ್ಯಮ ಬೆಳೆಯಲಿಕ್ಕೆ ಪರೋಕ್ಷವಾಗಿ 'ಕೆಫೆ ಇಲಾಯಿಟಿ' ಕಾರಣವಾಯಿತು. ಇದರಿಂದ ಬೆಳಗಾವಿಯ ಬೆಳವಣಿಗೆ ಉಂಟಾಯಿತು. ಬೇರೆ ಬೇರೆ ಕಡೆಯಿಂದ ಬರುವ ಜನರಿಗೆ ಊಟ–ಉಪಹಾರಗಳು ದೊರೆಯತೊಡಗಿದವು. ಆರ್ಥಿಕವಾಗಿ ಬೆಳಗಾವಿ ಸುಧಾರಿಸತೊಡಗಿತು. ಸಾಮಾನ್ಯ ಜನರಿಗೆ ಹೊಟೇಲಗಳಲ್ಲಿ ಉದ್ಯೋಗ ದೊರೆತು ಜೀವನ ಸಾಗಿಸತೊಡಗಿದರು. ಹೊಟೇಲಗಳಿಗೆ ಬೇಕಾದ ಕಚ್ಚಾ ಪದಾರ್ಥಗಳಿಗೆ ಹೆಚ್ಚು ಬೇಡಿಕೆ ಉಂಟಾಯಿತು. ಒಟ್ಟಿನಲ್ಲಿ ಎಲ್ಲ ವಲಯಗಳಲ್ಲಿ ಬೆಳಗಾವಿ ಅಭಿವೃದ್ಧಿಯನ್ನು ಹೊಂದತೊಡಗಿತು.

ಹೊಟೇಲಿನ ತಿಂಡಿ–ತಿನಿಸುಗಳಿಗೆ ಬೆಳಗಾವಿಯ ಜನರು ಆಕರ್ಷಿತರಾದಂತೆ ಹೊಟೇಲಗಳ ಸಂಖ್ಯೆ ಗುಣಮಟ್ಟ, ವೈವಿಧ್ಯತೆಗಳು ಕಾಣತೊಡಗಿದವು. ಒಂದೊಂದು ತಿಂಡಿಗೆ ಒಂದೊಂದು ಹೊಟೇಲ ಪ್ರಸಿದ್ಧಿಯನ್ನು ಪಡೆದುಕೊಳ್ಳತೊಡಗಿತು. ಸ್ಟೇಷನ್ ರೋಡದಲ್ಲಿದ್ದ 'ಅಂಬಾಭವನ' ಇಡ್ಲಿ–ದೋಸೆಗಳ ಕೇಂದ್ರವಾಗಿತ್ತು. ಬೆಳಗಾವಿ ಜನರಿಗೆ ಇಡ್ಲಿ ರುಚಿಯನ್ನು ಹಚ್ಚಿದ ಅಯ್ಯರ ಎನ್ನುವವರು ವಿಶಿಷ್ಟವಾದ ಇಡ್ಲಿಯನ್ನು ತಯಾರಿಸುತ್ತಿದ್ದರು. ಬೆಳಗಾವಿಯ ಹೃದಯ ಭಾಗದಲ್ಲಿದ್ದ ಪಾಟೀಲಗಲ್ಲಿಯ ಒಂದು ಸಂದಿಯಲ್ಲಿ ಒಂದು ಮನೆಯಲ್ಲಿ ತನ್ನ ಇಬ್ಬರು ಹೆಣ್ಣು ಮಕ್ಕಳ ಸಹಾಯದಿಂದ ರುಚಿಕಟ್ಟಾದ ಇಡ್ಲಿಯನ್ನು ತಯಾರಿಸುತ್ತಿದ್ದರು. ಬಂದವರಿಗೆ ಮಣೆ ಹಾಕಿ ಕೂಡ್ರಿಸಿ ಬಾಳೆ ಎಲೆಯಲ್ಲಿ ಇಡ್ಲಿ ಹಾಕಿ ಮೇಲೆ ಹಸಿಕೊಬ್ಬರಿಯ ಚಟ್ನಿ, ಹೋಳು ಉಪ್ಪಿನಕಾಯಿ ಬೇಕೆನಿಸಿದವರಿಗೆ ತುಪ್ಪವನ್ನು ನೀಡುತ್ತಿದ್ದರು. ಯುವಕರು, ಮುದುಕರೆನ್ನದೆ ಎಲ್ಲರೂ ಅಯ್ಯರನ ಇಡ್ಲಿಯನ್ನು ಇಷ್ಟ ಪಡುತ್ತಿದ್ದರು.

ಬೆಳಗಾವಿಯಲ್ಲಿ ಹೊಟೇಲಗಳು ಹೆಚ್ಚು ಜನಪ್ರಿಯವಾಗತೊಡಗಿದಂತೆ ಇದೊಂದು ಉದ್ಯಮವಾಗಿ ರೂಪಗೊಳ್ಳತೊಡಗಿತು. ನಗರದ ವಿಕಾಸವಾದಂತೆ ಜನರಿಗೆ ಹೊಟೇಲಗಳ ಅವಶ್ಯಕತೆ ಉಂಟಾಯಿತು. ಹೀಗಾಗಿ ಆಧುನಿಕ ಶೈಲಿಯ ಹೊಟೇಲಗಳು ಪ್ರಾರಂಭಗೊಂಡವು. ಅವುಗಳ ಜೊತೆಗೆ ಲಾಜಿಂಗಗಳು ಕಾರ್ಯಾರಂಭ ಮಾಡಿದವು. ಪೈ ಹೊಟೆಲ್, ಸತ್ಕಾರ ಹೊಟೇಲ, ಹೊಟೇಲ ಬೃಂದಾವನ, ಆನಂದ ಭವನ, ಸನ್ಮಾನ ಹೊಟೇಲ, ರಾಮದೇವ ಹೊಟೇಲ, ಮಿಲನ್ ಹೊಟೇಲ, ಕೀರ್ತಿ ಹೊಟೇಲ, 'ಹೊಟೇಲ ಶೀತಲ್,' 'ಹೊಟೇಲ ಲಲಿತ್', ಹೊಟೇಲ್ ಹನುಮಾನ ಮುಂತಾದವುಗಳು ಬೆಳಗಾವಿಯ ಪ್ರತಿಷ್ಠಿತ ಹೊಟೇಲಗಳಾಗಿವೆ. ಬೆಳಗಾವಿಯಲ್ಲಿ ಹೊಟೇಲಗಳನ್ನು ಸ್ಥಾಪಿಸಿದವರಲ್ಲಿ ಹೆಚ್ಚಿನವರು ದಕ್ಷಿಣ ಕನ್ನಡದವರಾಗಿದ್ದಾರೆ. ಅದರಲ್ಲಿಯೂ ಉಡುಪಿ, ಕಾರ್ಕಳ, ಕಾರವಾರ, ಮಂಗಳೂರು, ಹೊನ್ನಾವರ, ಭಟ್ಕಳ ಮುಂತಾದ ಪ್ರದೇಶಗಳಿಂದ ಬಂದವರಾಗಿದ್ದಾರೆ. ವ್ಯಾಪಾರಕ್ಕಾಗಿ ಬಂದ ಇವರು ಈಗ ಬೆಳಗಾವಿಯ ನಿವಾಸಿಗಳಾಗಿದ್ದಾರೆ. ಬೆಳಗಾವಿಯ ವೈಶಿಷ್ಟ್ಯಪೂರ್ಣವಾದ ಸಂಸ್ಕೃತಿಯ ನಿರ್ಮಾಣಕ್ಕೆ ಈ ಹೊಟೇಲ ಉದ್ಯಮಿದಾರರೂ ಕಾರಣರಾಗಿದ್ದಾರೆ. ಬೆಳಗಾವಿಯ ಊಟ-ಉಪಚಾರದಲ್ಲಿ ಬದಲಾವಣೆ ತಂದಂತೆ ಬೆಳಗಾವಿಯ ಸಾಂಸ್ಕೃತಿ, ಧಾರ್ಮಿಕ ವಲಯಗಳಲ್ಲಿಯೂ ವೈವಿಧ್ಯತೆಯನ್ನು ಮೂಡಿಸಿದರು. ತಮ್ಮ ಮೂಲ ನೆಲದ,ಧರ್ಮದ ನಂಬಿಕೆ, ದೇವರಆರಾಧನೆ, ಸಂಪ್ರದಾಯ ಪರಂಪರೆ, ಆಚರಣೆಯನ್ನು ಅನುಸರಿಸಿ ವೈವಿಧ್ಯತೆಗೆ ಕಾರಣರಾಗಿದ್ದಾರೆ.

ಭಾಷಿಕವಾಗಿಯೂ ಇವರು ಪ್ರಭಾವವನ್ನು ಬೀರಿದರು. ದಕ್ಷಿಣ ಕನ್ನಡ ಭಾಗದ ಕನ್ನಡ, ಕೊಂಕಣಿ ಭಾಷೆಗಳು ಬೆಳಗಾವಿಯಲ್ಲಿ ಕಾಣತೊಡಗಿದವು. ಮನೆಯಲ್ಲಿ ಕೊಂಕಣಿ ಮಾತನಾಡಿದರೂ ಹೊರಗೆ ಕನ್ನಡವನ್ನೇ ಮಾತನಾಡಿ ಬೆಳಗಾವಿಯಲ್ಲಿ ಕನ್ನಡದ ಬೆಳವಣಿಗೆಗೆ ಕಾಣರಾದರು.

**ಚರ್ಮ ಕರಕುಶಲತೆ :** ಬೆಳಗಾವಿಯ ಕ್ಯಾಂಪ ಪ್ರದೇಶವು ಚರ್ಮ ಕರಕುಶಲತೆಗೆ ದೇಶಾದ್ಯಂತ ಹೆಸರು ಪಡೆದಿದೆ. ಇಲ್ಲಿ ತಯಾರಾಗುವ ಚರ್ಮದ ಬೂಟುಗಳು ಇಂದು ದೇಶದ ವಿವಿಧ ಭಾಗಗಳಿಗೆ ರಫ್ತಾಗುತ್ತವೆ. ಕ್ಯಾಂಪ ಷ್ಯೂ ಉದ್ಯಮಕ್ಕೆ ಶತಮಾನದ ಇತಿಹಾಸವಿದೆ. ಬ್ರಿಟಿಷರು ತಮ್ಮ ಸೇನಾ ನೆಲೆಯನ್ನು ಬೆಳಗಾವಿಯಲ್ಲಿ ಸ್ಥಾಪಿಸಿದ ನಂತರ ಸೇನೆಗೆ ಬೇಕಾದ ಅಗತ್ಯ ಪ್ರಮಾಣದ ಚರ್ಮವನ್ನು ಬ್ರಿಟಿಷರು ಪೂರೈಸುತ್ತಿದ್ದರು. ಇದು ತಲೆಮಾರಿನಿಂದ ತಲೆಮಾರಿಗೆ ಬೆಳೆದು ಇಂದು ದೊಡ್ಡ ಉದ್ಯಮವಾಗಿ ಬೆಳೆದಿದೆ. ಇಂದು ಕ್ಯಾಂಪ ಪ್ರದೇಶದಲ್ಲಿ ೩೦ಕ್ಕೂ ಹೆಚ್ಚು ಬೂಟು ತಯಾರಿಕೆ ಘಟಕಗಳು ಮತ್ತು ವ್ಯಾಪಾರ ಮಳಿಗೆಗಳು ಕಂಡುಬರುತ್ತರವೆ. ಸಾವಿರಾರು ಜನರು ಈ ಉದ್ಯೋಗವನ್ನೇ ಅವಲಂಬಿಸಿ ಜೀವನ ಸಾಗಿಸುತ್ತಿದ್ದಾರೆ. ಇಲ್ಲಿ ಅತ್ಯಂತ ಕಡಿಮೆ ಬೆಲೆಯಲ್ಲಿ ಒಳ್ಳೆಯ ಗುಣಮಟ್ಟದ ಬೂಟುಗಳು ದೊರೆಯುತ್ತವೆ. ಬ್ರ್ಯಾಂಡೆಡ್ ಕಂಪನಿಗಳ ಪೈಪೋಟಿಯಲ್ಲಿಯೂ ಇಲ್ಲಿಯ ಬೂಟುಗಳು ಹೆಚ್ಚು ಮಾರಾಟಗೊಳ್ಳುತ್ತಿವೆ. ವಾರ್ಷಿಕ ಕೋಟ್ಯಾಂತರ ರೂಪಾಯಿ ವಹಿವಾಟು ಹೊಂದಿದೆ.

**ಐಟಿ ಉದ್ಯಮ :**

ಬೆಂಗಳೂರಿನಂತೆ ಬೆಳಗಾವಿಯಲ್ಲಿಯೂ ಐಟಿ ಉದ್ಯಮ ಬೆಳೆಯುತ್ತಿದೆ. ಮೂಲತಃ ಬೆಳಗಾವಿಯಲ್ಲೆ ಆರಂಭಗೊಂಡು ವಿಶ್ವದಾದ್ಯಂತ ಸೇವೆ ಸಲ್ಲಿಸುತ್ತಿರುವ ಹಲವಾರು ಕಂಪನಿಗಳು ಇಲ್ಲಿವೆ. ಬಿಟಿಪಿ ಇನಪೋಸೆರ್ವ್, ಕೆಟಿಡಬ್ಲೂ ಟೆಕ್ನಾಲೋಜಿ, ಸೊಲ್ಯುಶೆನ್ಸ್ ಬೆಳಗಮ್ ಐಟಿ ಆನ್‌ಲೈನ ಕ್ಯೂಸ್ಟ ಸೆಜ್, ಕನ್ ಕ್ಯೂಸ್ಟ ಇನಪೊಟೆಕ್ ಆಂಡ್ ಸಾಫ್ಟ್ ವೇರ ಸರ್ವಿಸ್, ಸಿ ಬಾಯ್ ಸಿಸ್ಟಿಮ್ಸ್ ಆಂಡ್ ಸಾಪ್ಟ್‌ವೇರ್ ಇ-ಸಾಪ್ಟ ಜೋನ್ ಟೆಕ್ನಾಲೆಜಿ ಆಂಡ್ ಡಿ. ಆಯ್. ಎ. ಗೋಕುಲ ಸ್ಕಾರಿಬೆಸ್, ಇನ್ವೆಟೀಕಾ ಟೆಕ್ನಾಲಜಿ, ಆಯ್ ಸೋರ್ಸ್ ಬೆಲಗಮ್, ಕ್ವಾಟಾ ಇನ್‌ಪೊಟಿಕ್, ಪಿಪಲ್ ಟೀ, ರಚನಾ ಸಾಪ್ಟ ಲೀ ಲಿಡಿಂಗ್ ಮೈಂಡ್ಸ್ ಡೆಲ್ ಟ್ರಾ ಸಾಪ್ಟವೇರ ಮುಂತಾದ ಕಂಪನಿಗಳು ಮುಖ್ಯವಾದವುಗಳಾಗಿವೆ.

ಇತ್ತೀಚೆಗೆ ಬೆಳಗಾವಿಯ ಹೊರವಲಯದಲ್ಲಿ ವೈಮಾನಿಕ ತಂತ್ರಜ್ಞಾನಕ್ಕೆ ಸಂಬಂಧಪಟ್ಟಂತೆ ಹೊಸ ಉದ್ಯಮವೊಂದು ಕಾರ್ಯಾರಂಭ ಮಾಡಿದೆ. ಈ ಉದ್ಯಮ ವೈಮಾನಿಕ ತಂತ್ರಜ್ಞಾನಕ್ಕೆ ಸಂಬಂಧಪಟ್ಟಂತೆ ದೇಶದಲ್ಲಿಯೇ ಸ್ಥಾಪನೆಗೊಂಡ ಮೊದಲ ಉದ್ಯಮ ಎನ್ನಲಾಗಿದೆ.

**೫. ಸಂಕರ ಸಂಸ್ಕೃತಿ :**

ಸುಮಾರು ಎರಡು ಸಾವಿರ ವರ್ಷಗಳ ಇತಿಹಾಸವನ್ನು ಹೊಂದಿದ ಬೆಳಗಾವಿಯು ದಿನದಿಂದ ದಿನಕ್ಕೆ ಬೆಳೆಯುತ್ತ ಇಂದು ರಾಜ್ಯದ ಐದನೇ ಅತಿದೊಡ್ಡ ನಗರವಾಗಿದೆ. ಈ ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಹಲವಾರು ಧರ್ಮ, ಭಾಷೆ, ಪ್ರದೇಶದ ಜನರು ಬೆಳಗಾವಿಗೆ ಬಂದು ನೆಲೆಸಿದರು. ಇದರಿಂದಾಗಿ ಬೆಳಗಾವಿ ಕಾಸ್ಮೊಪೊಲಿಟಿನ್ ನಗರವಾಗಿ ರೂಪಗೊಂಡಿತು. ಧರ್ಮ, ಸಂಪ್ರದಾಯ, ಆಚರಣೆ, ವೇಷಭೂಷಣ, ಊಟ-ಉಪಚಾರ, ಭಾಷೆ, ಗುಣ ಸ್ವಭಾವಗಳಲ್ಲಿ ಕಂಡು ಬಂದ ವೈವಿಧ್ಯತೆಯು ಕಾಲಾಂತರದಲ್ಲಿ ಮೂಲ ಸಂಸ್ಕೃತಿಯೊಡನೆ ಕೂಡಿಕೊಂಡು ಹೊಸದಾದ ಸ್ವರೂಪವನ್ನು ಪಡೆದು ಸಂಕರ ಸಂಸ್ಕೃತಿ ನಿರ್ಮಾಣಗೊಂಡಿತು. ಈ ಸಂಕರ ಸ್ಥಿತಿಯನ್ನು ಬೆಳಗಾವಿಯಲ್ಲಿ ಆಚರಿಸುವ ಹಲವಾರು ಸಂಪ್ರದಾಯ, ಆಚರಣೆಗಳಲ್ಲಿ ಕಾಣಬಹುದು. ಬೇರೆ ಪ್ರದೇಶಗಳಲ್ಲಿಯ ಆಚರಣೆಗಳಿಗಿಂತ ಭಿನ್ನವಾದ ಆಚರಣೆ ಇಲ್ಲಿ ಕಂಡುಬರುತ್ತದೆ. ಮುಖ್ಯವಾಗಿ ಸಂಕ್ರಾಂತಿ, ಹೋಳಿ, ಯುಗಾದಿ, ದೀಪಾವಳಿ, ಮಹಾನವಮಿ, ರಾಖಿಹಬ್ಬ ಮುಂತಾದವುಗಳಲ್ಲಿ ಇದನ್ನು ಕಾಣಬಹುದು. ರಾಜಕೀಯ ಕಾರಣಗಳಿಗಾಗಿ ಆಗಾಗ ಕರ್ನಾಟಕ-ಮಹಾರಾಷ್ಟ್ರದ ಗಡಿ ಸಮಸ್ಯೆಯ ಗಲಾಟೆ ತಾರಕಕ್ಕೇರಿದರೂ ಸಾಹಿತ್ಯಿಕವಾಗಿ, ಭಾಷಿಕವಾಗಿ, ಸಾಂಸ್ಕೃತಿಕವಾಗಿ ಇವೆರಡು ರಾಜ್ಯಗಳ ನಡುವಿನ ಸಂಬಂಧ ಹೊಕ್ಕಳು ಬಳ್ಳಿಯ ಸಂಬಂಧವೇ ಆಗಿದೆ.

ಧಾರ್ಮಿಕವಾಗಿ ಕನ್ನಡ-ಮರಾಠಿ ಸಂಸ್ಕೃತಿಯು ಅನ್ಯೋನ್ಯವಾಗಿದೆ. ಬೆಳಗಾವಿಯ ಎಲ್ಲಾ ದೇವಾಲಯಗಳಲ್ಲಿ ಭಾಷಾ ಭೇದ ಕಂಡುಬರುವುದಿಲ್ಲ. ಇದು ಕನ್ನಡದ್ದು, ಅದು ಮರಾಠಿಯದ್ದು ಎನ್ನುವ ಭೇದ ಒಮ್ಮೆಯೂ ಮೂಡಿಲ್ಲ.

ದೇವರ ಪೂಜೆ, ಆರಾಧನೆ, ಜಾತ್ರೆ, ಉತ್ಸವಗಳಲ್ಲಿ ಎರಡು ಸಂಸ್ಕೃತಿಯು ಕೂಡಿಕೊಳ್ಳುವುದನ್ನು ಕಾಣಬಹುದು. ವಿಶೇಷವಾಗಿ ಮಾರುತಿ, ಗಣಪತಿ, ಕಪಿಲೇಶ್ವರ, ಶನಿದೇವರು, ಬಸವಣ್ಣ ಮುಂತಾದ ದೇವಾಲಯಗಳಲ್ಲಿ ಈ ಸಂಕರ ಸಂಸ್ಕೃತಿಯನ್ನು ಕಾಣಬಹುದು. ದೇವರ ಸ್ತುತಿಯ ಪದಗಳು ಹೆಚ್ಚಾಗಿ ಮರಾಠಿಯದಾಗಿದ್ದರೂ ಕನ್ನಡಿಗರು ಎರಡೂ ಭಾಷೆಯ ಮಂಗಳಾರತಿ ಪದ್ಯಗಳನ್ನು ಹೇಳುತ್ತಾರೆ. ಪೂಜಾ ವಿಧಾನದಲ್ಲಿ ಯಾವುದೇ ಭಿನ್ನತೆ ಕಾಣುವುದಿಲ್ಲ; ಹಿಂದೂಧರ್ಮ ಸಂಸ್ಕೃತಿಯ ಪದ್ಧತಿಯಂತೆಯೇ ಕಂಡುಬರುತ್ತದೆ. ಅನಂತಶಯನ, ವೆಂಕಟರಮಣ, ಬಸವಣ್ಣ, ಗ್ರಾಮದೇವತೆ, ಶನಿದೇವರು, ಕಪಿಲೇಶ್ವರ, ದಾನಮ್ಮ, ಶಿವಾಲಯ, ವೀರಭದ್ರ, ಮಾಳಮಾರುತಿ ಇವರೆಲ್ಲ ಅಪ್ಪಟ ಕನ್ನಡ ದೇವರುಗಳಾಗಿದ್ದರೂ ಇವುಗಳಿಗೆ ಮರಾಠಿಗರೂ ಹೆಚ್ಚಿನ ಸಂಖ್ಯೆಯಲ್ಲಿ ನಡೆದುಕೊಳ್ಳುತ್ತಾರೆ.

ಕರ್ನಾಟಕದ ಬೆಳಗಾವಿ ಜಿಲ್ಲೆಯಲ್ಲಿ ಹುಟ್ಟಿ ಮಹಾರಾಷ್ಟ್ರದಲ್ಲಿ ಪವಾಡ ಪುರುಷರಾಗಿ ಮೆರೆದ ಅವಧೂತ ಚಿದಂಬರ ದೀಕ್ಷಿತರು ಎರಡೂ ಜನಾಂಗದ ಭಕ್ತರನ್ನು ಹೊಂದಿದ್ದಾರೆ. ಈ ಚಿದಂಬರರ ಶಿಷ್ಯರಲ್ಲಿ ಒಬ್ಬರಾದ ರಾಜಾರಾಮರು ಮಹಾರಾಷ್ಟ್ರದವರು. ಇವರು ಅನೇಕ ಅಂಭಗಗಳನ್ನು ಬರೆದಿದ್ದಾರೆ. ಇವರ ಸಮಾಧಿಯು ಬೆಳಗಾವಿಯಲ್ಲಿಯೇ ಇದೆ. ಇಲ್ಲಿಯೇ ರಾಜಾರಾಮರ ಮಠ ಸ್ಥಾಪನೆಯಾಗಿದೆ. ಇಲ್ಲಿಯೂ ದಟ್ಟವಾದ ಸಂಕರ ಸಂಸ್ಕೃತಿಯನ್ನು ಕಾಣಬಹುದಾಗಿದೆ. ಬೆಳಗಾವಿ ಸಮೀಪದ ಪಂತ ಬಾಳೆಕುಂದರಗಿಯ ಪಂತಮಹಾರಾಜರು ಎರಡೂ ಭಾಷೆಯ ಭಕ್ತರನ್ನು ಹೊಂದಿದ್ದಾರೆ. ಪಂತಮಹಾರಾಜರ ಗುರುಗಳಾದ ಬಾಲಾವಧೂತರು ಅಚ್ಚಕನ್ನಡಿಗರು. ಶ್ರೀ ಪಂತಮಹಾರಾಜರೂ ಕನ್ನಡಿಗರೇ ಆದರೂ ಅವರು ಮರಾಠಿ ಸಾಹಿತ್ಯ, ಸಂಸ್ಕೃತಿಗೆ ಹೊಂದಿಕೊಂಡರು. ಹೀಗೆ ಅನೇಕ ಧಾರ್ಮಿಕ ಪುರುಷರು ಎರಡೂ ಸಂಸ್ಕೃತಿಗಳನ್ನು ಮೈಗೂಡಿಸಿಕೊಂಡು ಬೆಳೆದರು.

ಬೆಳಗಾವಿಯಲ್ಲಿ ಮರಾಠಿಗರು ಕರ್ನಾಟಕದ ಹಲವಾರು ದೇವರುಗಳನ್ನು ತಮ್ಮ ಆರಾಧ್ಯ ದೈವವನ್ನಾಗಿ ಸ್ವೀಕರಿಸಿದ್ದಾರೆ. ಸವದತ್ತಿ ಎಲ್ಲಮ್ಮ, ಗೊಡಚಿ ವೀರಭದ್ರ, ಚಿಂಚಲಿ ಮಾಯಕ್ಕ, ಸಿರಸಂಗಿ ಕಾಳಮ್ಮ, ಖಾನಗಾವಿ ಕನ್ನಮ್ಮ, ಕಕ್ಕೇರಿ ಬಿಷ್ಟವ್ವ ಮುಂತಾದ ದೇವರುಗಳನ್ನು ಭಕ್ತಿಯಿಂದ ಪೂಜಿಸುತ್ತಾರೆ. ಈ ಸಂದರ್ಭದಲ್ಲಿ ಅವರ ಆಚರಣೆಗಳು ದೇವಾಲಯದ ಪದ್ಧತಿಯಂತೆ ಕರ್ನಾಟಕದ ಸಂಸ್ಕೃತಿಯನ್ನೇ ಹೊಂದಿರುತ್ತವೆ. ಅದೇ ರೀತಿಯಾಗಿ ಬೆಳಗಾವಿ ಕನ್ನಡಿಗರು ಮಹಾರಾಷ್ಟ್ರದ ಹಲವಾರು ದೇವರುಗಳನ್ನು ಮನೆ ದೇವರನ್ನಾಗಿ ಹೊಂದಿದ್ದಾರೆ. ಪಂಡರಪುರದ ವಿಠಲ, ಕೊಲ್ಲಾಪುರದ ಮಹಾಲಕ್ಷ್ಮಿ, ಸೊಲ್ಲಾಪುರದ ಸಿದ್ಧರಾಮ, ಗುಡ್ಡಾಪುರದ ದಾನಮ್ಮ ಇಲ್ಲಿಯೂ ಕೂಡ ಕನ್ನಡಿಗರು ಮಹಾರಾಷ್ಟ್ರದ ಸಂಸ್ಕೃತಿಯ ಪ್ರಭಾವವನ್ನು ಹೊಂದುತ್ತಾರೆ. ಒಟ್ಟಿನಲ್ಲಿ ಧಾರ್ಮಿಕವಾಗಿ ಎರಡೂ ಸಂಸ್ಕೃತಿಗಳ ಆದಾನ-ಪ್ರದಾನ ಕ್ರಿಯೆ ಸಂಕರ ಸಂಸ್ಕೃತಿಯನ್ನು ನಿರ್ಮಿಸಿದೆ. ಭಾಷಿಕವಾಗಿಯೂ ಈ ಸ್ವೀಕರಣ ಎರಡೂ ಭಾಷೆಗಳಲ್ಲಿ ನಡೆದಿದೆ. ಕನ್ನಡದ ಶಬ್ದಗಳು ಮರಾಠಿಗೆ, ಮರಾಠಿಯ ಶಬ್ದಗಳು ಕನ್ನಡಕ್ಕೆ ನೇರವಾಗಿ, ಇಲ್ಲವೆ ಅಪಭ್ರಂಶಗೊಂಡು ಹೊಸ ಶಬ್ದವಾಗಿಯೇ ರೂಪತಾಳುತ್ತದೆ. ಬೆಳಗಾವಿ ಪ್ರದೇಶದ ಕನ್ನಡ-ಮರಾಠಿ ಎರಡೂ

ಭಾಷೆಗಳು ಬೆಂಗಳೂರು ಪುಣೆಯವರಿಗೆ ಬೇಗ ಅರ್ಥೈಸಿಕೊಳ್ಳಲು ತೊಂದರೆಯಾಗುತ್ತದೆ. ಹಬ್ಬ-ಸಂಪ್ರದಾಯ ಆಚರಣೆಗಳಲ್ಲಂತೂ ಬಹು ಸಂಸ್ಕೃತಿಗಳ ದಟ್ಟವಾದ ಛಾಯೆಯು ಕಂಡುಬರುತ್ತದೆ. ಕನ್ನಡ, ಮರಾಠಿ, ಗುಜರಾತಿ, ಕೊಂಕಣಿ, ಉರ್ದು ಮುಂತಾದ ಭಾಷೆಗಳ ಪ್ರದೇಶದ ಸಂಸ್ಕೃತಿಯು ಬೆಳಗಾವಿಯಲ್ಲಿ ಸಮಾವೇಶಗೊಂಡು ಅದು ವಿಶಿಷ್ಟವಾಗಿ ತೋರಿಬರುತ್ತದೆ.

ನೂಲ ಹುಣ್ಣಿಮೆಯನ್ನು ಕರ್ನಾಟಕಾದ್ಯಂತ ಆಚರಿಸುತ್ತಾರೆ. ಅದರಂತೆ ಬೆಳಗಾವಿಯಲ್ಲಿಯೂ ಅದನ್ನು 'ನಾರಳೀ ಪೌರ್ಣಿಮೆ' ಎಂದು ಆಚರಿಸಲಾಗುತ್ತದೆ. ಈ ಹಬ್ಬದಂದು ಚಿಕ್ಕದಾದ ಜಾತ್ರೆಯೇ ಮೊದಲು ಸೇರುತ್ತಿತ್ತು. ಇತ್ತೀಚೆಗೆ ತೀರ ಅಲ್ಪ ಪ್ರಮಾಣದಲ್ಲಿ ಕೂಡುತ್ತದೆ.(ಕೋಟೆ ಕೆರೆಯ ಪಕ್ಕದಲ್ಲಿ) ಈಗ ಈ ಆಚರಣೆಯು ಬೇರೆ ರೀತಿಯಲ್ಲಿ ಅಂದರೆ ರಕ್ಷಾ ಬಂಧನ ರೂಪದಲ್ಲಿ ಆಚರಣೆಗೊಳ್ಳುತ್ತಿದೆ. ಉತ್ತರ ಭಾರತದ ಪ್ರಭಾವದಿಂದ ಬೆಳಗಾವಿಗೆ ಕಾಲಿಟ್ಟ ಈ ರಕ್ಷಾ ಬಂಧನವು ಇಲ್ಲಿಯೂ ಬಾಂಧವ್ಯದ ಕುರುಹಾಗಿ ಕಂಡುಬರುತ್ತಿದೆ. ಈ ಆಚರಣೆಯ ಪ್ರಭಾವದಿಂದಲೇ ಫ್ರೆಂಡಶಿಪ್ ಡೇ ಹುಟ್ಟಿಕೊಂಡಿದೆ. ಇದು ಕಾಲೇಜು ವಿದ್ಯಾರ್ಥಿಗಳು ಹುಟ್ಟಿಸಿದ ಹಬ್ಬ. ನೂಲು ಹುಣ್ಣಿಮೆಯು ಈಗ ನೇಕಾರರ ಮನೆಗಳಲ್ಲಿ ಹಾಗೂ ಕೆಲವು ಸಂಪ್ರದಾಯಸ್ಥ ಮನೆತನಗಳಲ್ಲಿ ಮಾತ್ರ ಕಂಡುಬರುತ್ತಿದೆ. ರಾಖಿ ಬಂಧನಕ್ಕಾಗಿಯೇ ಕೈಗೆ ಕಟ್ಟುವ ವಿವಿಧ ಅಲಂಕಾರದ ರಾಖಿಗಳು ಐದುರೂಪಾಯಿಯಿಂದ ಸಾವಿರಾರು ರೂಪಾಯಿವರೆಗೂ ಮಾರಾಟವಾಗುತ್ತಿವೆ.

ಹೋಳಿ ಹಬ್ಬದಲ್ಲಿ ಕಾಮಣ್ಣನ ಪ್ರತಿಕೃತಿಗಳನ್ನು ಮಾಡುವುದು ಕರ್ನಾಟಕದಲ್ಲಿ ಬೆಳೆದು ಬಂದಿದೆ. ಆದರೆ ಮಹಾರಾಷ್ಟ್ರದಲ್ಲಿ ಈ ಪದ್ಧತಿ ಕಂಡುಬರುವುದಿಲ್ಲ. ತಾಳೆಯ ಗಿಡದ ಗೊನೆ ಅಥವಾ ಬಿದರಿನ ಟೊಂಗೆಯನ್ನು ತಂದು ಕೂಟದಲ್ಲಿ ನಿಲ್ಲಿಸುತ್ತಾರೆ. ಕೆಲವರು ತಮ್ಮ ಮನೆಗಳ ಮುಂದೆಯೂ ಇದನ್ನು ನಿಲ್ಲಿಸುತ್ತಾರೆ. ಇವುಗಳಿಗೆ ಟೆಂಗಿನಕಾಯಿ, ಮಾವಿನ ತೊಳಲು ಕಟ್ಟುತ್ತಾರೆ. ಹುಣ್ಣಿಮೆಯ ಮಧ್ಯರಾತ್ರಿಯಾದ ಮೇಲೆ ಕಾಮಣ್ಣನ್ನು ಸುಡುತ್ತಾರೆ. ಮತ್ತು ಬೆಳಿಗ್ಗೆ ಬಣ್ಣವನ್ನು ಆಡುತ್ತಾರೆ. ಮೊದಲು ಸಾಂಗ್ಲಿ ಸಂಸ್ಥಾನಕ್ಕೆ ಸೇರಿದ ಪ್ರದೇಶಗಳಾದ ಶಹಪೂರ, ಖಾಸಬಾಗ, ವಡಗಾವಿ, ಅನಿಗೋಳದಲ್ಲಿ ಐದು ದಿನಗಳಾದ ಮೇಲೆ ಬಣ್ಣವನ್ನು ರಂಗಪಂಚಮಿಯೆಂದು ಆಚರಿಸುತ್ತಾರೆ.

ದಸರಾ ಹಬ್ಬವನ್ನು ಕನ್ನಡಿಗರು ನಾಡಹಬ್ಬ, ವಿಜಯದಶಮಿ ಎಂದು ಆಚರಿಸಿದರೆ ಮರಾಠಿಗರು ನವರಾತ್ರಿ, ಮಹಾನವಮಿ ಎಂದು ಆಚರಿಸುತ್ತಾರೆ. ಗುಜರಾತಿ ಮಾರವಾಡಿಗಳು ದಾಂಡಿಯಾ ರಾಸ್ ಎಂಬ ಜಾನಪದ ಆಟವನ್ನು ಆಡುತ್ತಾರೆ. ಮರಾಠಿಗರು ದಾಂಡಿಯಾ ದೌಡ, ದಾಂಡಿಯಾ ರಾಸ್ ಎಂಬ ಹೊಸ ಆಚರಣೆಯನ್ನು ಪ್ರಾರಂಭಿಸಿದ್ದಾರೆ. ಇಂಡಾಲ ಫ್ಯಾಕ್ಟರಿಯಲ್ಲಿ ಉದ್ಯೋಗಕ್ಕಾಗಿ ಬಂದ ಬಂಗಾಲಿಗಳು ದಸರೆಯಲ್ಲಿ ದುರ್ಗಾಪೂಜೆ ಪ್ರಾರಂಭಿಸಿದರು. ದುರ್ಗಾ ಪೂಜೆ ಮಾಡಿ ಮೆರವಣಿಗೆಯಲ್ಲಿ ತಂದು ಕಿಲ್ಲೆಕೆರೆಯಲ್ಲಿ ವಿಸರ್ಜಿಸುತ್ತಾರೆ. ಗಣೇಶೋತ್ಸವವು ಮರಾಠಿಗರಿಂದ ವಿಜ್ರಂಭಣೆಯಿಂದ ಆಚರಣೆಗೊಳ್ಳುವ ಹಬ್ಬವು. ಈಗ ಇದು ಎಲ್ಲ ಹಿಂದೂಗಳ ಹಬ್ಬವಾಗಿದೆ. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಬೆಳಗಾವಿಗೆ ಕಾಲಿಟ್ಟ ಸಾರ್ವಜನಿಕ ಗಣೇಶೋತ್ಸವವು ಇಂದು ಎಲ್ಲರೂ ಕೂಡಿ ಆಚರಿಸುವ ಹಬ್ಬವಾಗಿದೆ.

ದೀಪಾವಳಿಯಲ್ಲಿ ಮರಾಠಿಗರು ಮಣ್ಣಿನ ಕೋಟೆಗಳನ್ನು ಕಟ್ಟಿ ಪೂಜಿಸುತ್ತಾರೆ. ಎಮ್ಮೆಗಳ ಮೆರವಣಿಗೆಯನ್ನು ಮಾಡುತ್ತಾರೆ. ಈಗ ಇದನ್ನು ಎಲ್ಲರೂ ಅನುಸರಿಸುತ್ತಿದ್ದಾರೆ.

ಹೊಸ ವರ್ಷಾಚರಣೆಯು ಗೋವಾದ ಮೂಲಕ ಬೆಳಗಾವಿಗೆ ಬಂದಿತು. ಕ್ಯಾಂಪ ಪ್ರದೇಶದಲ್ಲಿ ನೆಲೆಸಿರುವ ಕ್ರೈಸ್ತರು ಇದನ್ನು ಪ್ರಾರಂಭಿಸಿದರು. ಈಗ ಈ ಆಚರಣೆಯಲ್ಲಿ ಇಡೀ ಬೆಳಗಾವಿಯ ಜನರೆಲ್ಲರೂ ಪಾಲ್ಗೊಳ್ಳುತ್ತಾರೆ.

ಹೀಗೆ ಹಲವಾರು ಹಬ್ಬ, ಉತ್ಸವ, ಸಂಪ್ರದಾಯ, ಆಚರಣೆಗಳಲ್ಲಿ ಬೇರೆ ಬೇರೆ ಸಂಸ್ಕೃತಿಯ ಪದ್ಧತಿಗಳು ಕೂಡಿಕೊಂಡು ತೀರ ಭಿನ್ನವಾಗಿ ಬೆಳಗಾವಿಯಲ್ಲಿ ಸಂಕರ ಸಂಸ್ಕೃತಿಯು ನಿರ್ಮಾಣಗೊಂಡಿದೆ.

**೬. ನಗರ ಜಾನಪದ:**

ನಗರ ಜನಪದವು ತೀರ ಇತ್ತೀಚೆಗೆ ಮೂಡಿ ಬಂದ ಪರಿಕಲ್ಪನೆ. ಭಾರತದ ನಗರದ ನಾಗರಿಕರು ಆಧುನಿಕ ನಾಗರಿಕತೆಯನ್ನು ಹೊರನೋಟಕ್ಕೆ ತೋರ್ಪಡಿಸುತ್ತಾರೆಯೇ ಹೊರತು ಮಾನಸಿಕವಾಗಿ ಅವರಲ್ಲಿ ಮೂಲ ಗ್ರಾಮೀಣ ಸಂಸ್ಕೃತಿಯ ಸ್ಪಂದನವೇ ಇರುತ್ತದೆ. ಆದರೂ ಇದನ್ನು ಸ್ಪಂದಿಸುವ ಪ್ರಕ್ರಿಯೆಯ ಹಿನ್ನೆಲೆಯಲ್ಲಿ ವರ್ಗೀಕರಿಸಿಕೊಂಡು ಗುರುತಿಸಬಹುದಾಗಿದೆ.

ಬೆಳಗಾವಿಯು ಮೂಲತಃ ಕೃಷಿ ಪ್ರಧಾನವಾದ ದೊಡ್ಡ ಹಳ್ಳಿ. ಇಂದಿನ ಮಹಾನಗರದಲ್ಲಿ ಸುಮಾರು ಹದಿನಾರು ಹಳ್ಳಿಗಳು ಸೇರಿಕೊಂಡಿರುವುದು ಸಂಶೋಧನೆಯಿಂದ ತಿಳಿದುಬರುತ್ತದೆ. ಇಂದು ಒಕ್ಕಲುತನ ಕಡಿಮೆಯಾಗಿದ್ದರೂ ಮೂಲ ಸಂಸ್ಕೃತಿಯನ್ನು ಮುಂದುವರೆಸಿಕೊಂಡು ಬಂದಿರುವುದನ್ನು ಕಾಣಬಹುದು. ಉದ್ಯೋಗಗಳಲ್ಲಿಯೂ ಇದನ್ನು ಕಾಣಬಹುದು. ಬೆಳಗಾವಿಯ ಮೂಲನಿವಾಸಿಗಳ ಜೊತೆಗೆ ಹೊರಗಿನಿಂದ ಬಂದು ಸೇರಿದವರು ಹೆಚ್ಚಾಗಿದ್ದಾರೆ. ಹೀಗೆ ಬಂದವರು ಹೆಚ್ಚಾಗಿ ಗ್ರಾಮೀಣ ಪರಿಸರದವರಾಗಿದ್ದಾರೆ. ಇವರಲ್ಲಿ ಕೆಲವರು ನಗರ ಸಂಸ್ಕೃತಿಯಲ್ಲಿ ಕೊಚ್ಚಿ ಹೋದರೆ ಇನ್ನು ಕೆಲವರು ತಮ್ಮ ಮೂಲ ಸಂಸ್ಕೃತಿಯನ್ನು ಮುಂದುವರೆಸಿ ಆಚರಣೆಗೆ ತಂದರು.

ಗ್ರಾಮೀಣ ಪರಿಸರದಲ್ಲಿ ಹಾಸು ಹೊಕ್ಕಾಗಿರುವ ಮೂಡನಂಬಿಕೆಗಳು, ಮಾಯ, ಮಾಟ, ಮಂತ್ರ, ಭೂತ, ಪಿಶಾಚಿ ಮುಂತಾದವುಗಳು ಬೆಳಗಾವಿಯಲ್ಲಿ ಹೆಚ್ಚಾಗಿ ಇಂದಿಗೂ ಕಂಡುಬರುತ್ತವೆ. ಅಮವಸೆ ಹುಣ್ಣಿಮೆಯ ದಿನದಂದು ಮೂರು ದಾರಿ ಕೂಡುವ ಕೂಟಗಳಲ್ಲಿ ಮಂತ್ರಿಸಿದ ಕುಂಬಳಕಾಯಿ, ಲಿಂಬೆಹಣ್ಣು, ಕರಿದಾರು, ಉಪ್ಪು, ಸೂಜಿ, ಕುಂಕುಮ ಮುಂತಾದ ವಸ್ತುಗಳು ನಗರದಲ್ಲಿ ಅಲ್ಲಲ್ಲಿ ಕಂಡುಬರುತ್ತವೆ. ದೇವರ ಹರಕೆ ಹೊರುವುದು, ಪ್ರಾಣಿ ಬಲಿಕೊಡುವುದು, ಅವ್ಯಾಹತವಾಗಿ ನಡೆದುಕೊಂಡು ಬರುತ್ತಿವೆ. ಭೂತ ಪಿಶಾಚಿಗಳ ಕಾಟ ಮತ್ತು ಅವುಗಳ ಓಡಿಸುವ ತಂತ್ರವನ್ನು ಹೇಳಿಕೊಡುವವರೂ ಬೆಳಗಾವಿಯಲ್ಲಿ ಬಹಳಷ್ಟು ಜನರಿದ್ದಾರೆ. ಆಧುನಿಕ ವೈಜ್ಞಾನಿಕ ಯುಗದ ಪ್ರಭಾವದಲ್ಲಿರುವ ನಗರದಲ್ಲಿ ಗ್ರಾಮೀಣ ಪರಿಸರದ ಇಂತಹ ಆಚರಣೆಗಳು ಮುಂದುವರೆದಿದ್ದು ಅದು ನಗರ ಜನಪದವಾಗಿ ಕಂಡುಬರುತ್ತದೆ. ಭೂತ-ಪಿಶಾಚಿಗಳ ಪ್ರತೀತಿ ಇರುವ ಒಂದೆರೆಡು ಮನೆಗಳು ಪ್ರತಿಯೊಂದು

ಓಣಿಯಲ್ಲಿಯೂ ಇದ್ದೆ ಇರುತ್ತವೆ. ಈ ನಂಬಿಕೆಯಿಂದಲೇ ಬೆಳಗಾವಿಯಲ್ಲಿ ಕೆಲವೊಂದು ಹಳೆಯ ಮನೆಗಳು ಹಲವಾರು ವರ್ಷಗಳಿಂದ ಬೀಗ ಹಾಕಿ ಖಾಲಿಯಾಗಿಯೇ ಇವೆ. ಇಂತಹ ಮನೆಗಳಲ್ಲಿ ವಾಸಿಸುವುದರಿಂದ ಮನೆಯಲ್ಲಿ ಸಾವು-ನೋವುಗಳು ಹೆಚ್ಚಾಗುತ್ತವೆ ಎನ್ನುವ ನಂಬಿಕೆ ಇನ್ನು ಕಂಡುಬರುತ್ತದೆ. ಒಂದು ವರ್ಗದ ಜನ ಇವುಗಳನ್ನು ನಂಬಿದರೆ ಇನ್ನೊಂದು ವರ್ಗದ ಜನ ಸ್ಮಶಾನಗಳನ್ನೇ ಬಡಾವಣೆಗಳನ್ನಾಗಿ ಮಾಡಿಕೊಂಡು ವಾಸಿಸುತ್ತಿದ್ದಾರೆ. ಅಂದಿನ ಸ್ಮಶಾನ ಭೂಮಿಗಳಲ್ಲಿ ಇಂದು ಸದಾಶಿವನಗರ, ಹರಿಶ್ಚಂದ್ರನಗರ, ಅಂಬೇಡ್ಕರ ಉಪವನಗಳು ತುಂಬಿಕೊಂಡಿವೆ.

ನಗರದ ಕೃಷಿಕರಲ್ಲಿಯೂ ಹಲವಾರು ನಂಬಿಕೆಗಳು ಮುಂದುವರೆದುಕೊಂಡು ಬಂದಿವೆ. ಸೋಮವಾರ ರೊಟ್ಟಿ ಮಾಡದಿರುವುದು, ಹೊಲದ ಕೆಲಸಕ್ಕೆ ಎತ್ತುಗಳನ್ನು ಬಳಸದಿರುವುದು, ಸಂಜೆ ಹೊತ್ತು ಅಥವಾ ದೀಪ ಹಚ್ಚಿದ ನಂತರ ಮನೆಯೊಳಗಿನ ವಸ್ತುಗಳನ್ನು ಕೊಡದಿರುವುದು. ಮನೆಯ ಬಾಗಿಲಿಗೆ ಮಂತ್ರದ ಕಾಯಿಯನ್ನು ಕಟ್ಟುವುದು, ಹೊಲದಲ್ಲಿ ಮಂತ್ರದ ಕಾಯಿಯನ್ನು ಹುಗಿಯುವುದು, ಮಳೆ ಬೆಳೆ ಚೆನ್ನಾಗಿ ಬರಲು ದೇವರಿಗೆ ಹರಕೆ ಹೊರುವುದು, ಬೆಳೆದ ಫಸಲಿಗೆ ದೃಷ್ಟಿಬೀಳದಂತೆ ಚರ್ಮದ ಚೂರನ್ನು ಬೆಳೆಗೆ ಕಟ್ಟುವುದು, ಕಾರಹುಣ್ಣಿಮೆಯಂದು ದನಕರುಗಳಿಗೆ ಶೃಂಗಾರ ಮಾಡಿ ಪೂಜೆ ಮಾಡುವುದು ಹೀಗೆ ನೂರಾರು ನಂಬಿಕೆಗಳು ಆಚರಣೆಗೊಳ್ಳುತ್ತವೆ. ಮೂಲತಃ ಗ್ರಾಮೀಣ ಪ್ರದೇಶದಿಂದ ಬಂದವರು ಮತ್ತು ಸಂಪ್ರದಾಯಸ್ಥ ಮನೆತನದವರು ಈ ಎಲ್ಲ ನಂಬಿಕೆಗಳನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ನಗರದ ವ್ಯಾಪಾರಿಗಳಲ್ಲಿಯೂ ಕೆಲವು ನಂಬಿಕೆಗಳು ಕಂಡುಬರುತ್ತವೆ. ಅಂಗಡಿಯ ಬಾಗಿಲನ್ನು ತೆರೆದಾಗ ಬಲಗಾಲನ್ನು ಮೊದಲು ಒಳಗೆ ಇಡುವುದು. ವ್ಯವಹಾರವನ್ನು ಉದ್ರಿ ಕೊಡುವುದರ ಮೂಲಕ ಪ್ರಾರಂಭಿಸದಿರುವುದು. ದೀಪ ಹಚ್ಚಿದ ಮೇಲೆ ಉದ್ರಿ ಕೊಡದಿರುವುದು, ಮೊದಲ ಗಿರಾಕಿಯು ಕೆಟ್ಟ ನಕ್ಷತ್ರದವನಿದ್ದರೆ ವ್ಯಾಪಾರ ಚೆನ್ನಾಗಿ ಆಗದಿರುವುದು-ಹೀಗೆ ಹಲವಾರು ನಂಬಿಕೆಗಳನ್ನು ಪಾಲಿಸುತ್ತಾರೆ. ಇವು ಗ್ರಾಮೀಣ ಪರಿಸರದಲ್ಲಿ ಕಂಡುಬರುವ ಮೂಢನಂಬಿಕೆಗಳಾದರೂ ಇವುಗಳನ್ನು ನಗರದಲ್ಲಿಯ ಕೆಲವು ವರ್ತಕರು ಪಾಲಿಸುವುದನ್ನು ಕಾಣಬಹುದು. ಧಾರ್ಮಿಕ ಆಚರಣೆಗಳಲ್ಲಿಯೂ ಕೆಲವೊಂದು ಜಾನಪದೀಯ ಅಂಶಗಳನ್ನು ಒಳಗೊಂಡಂತಹವುಗಳು ಕಂಡುಬರುತ್ತವೆ. ಜಾತ್ರೆ, ರಥೋತ್ಸವ, ಪಲ್ಲಕ್ಕಿ ಇವೆಲ್ಲ ಬೆಳಗಾವಿಯಲ್ಲಿ ಮುಂದುವರೆದುಕೊಂಡು ಬಂದಿವೆ. ನಾಗರ ಪಂಚಮಿಯಂದು ಹುತ್ತಕ್ಕೆ ಹಾಲು ಎರೆಯುವುದು, ದೀಪಾವಳಿಯಂದು ಶೆಗಣಿಯಿಂದ ಮಾಡಿದ ಪಾಂಡವರನ್ನು ಇಡುವುದು, ಸುಣ್ಣದಿಂದ ಹೆಜ್ಜೆ ಹೊಯ್ಯುವುದು ಮುಂತಾದ ಆಚರಣೆಗಳು ಗ್ರಾಮೀಣ ಜನಪದದ ಪರಿಸರದಿಂದ ಬಂದಂತವುಗಳಾಗಿವೆ.

ಇವುಗಳಲ್ಲದೆ ಮನೆಯೊಳಗಿನ ಧಾರ್ಮಿಕ ವಿಧಿ ವಿಧಾನಗಳು, ವ್ರತ ನಿಯಮಗಳು, ಜನನ-ಮರಣಗಳಲ್ಲಿಯ ಕ್ರಿಯಾವಿಧಾನಗಳು, ಮದುವೆಯಲ್ಲಿ ಕಂಡುಬರುವ ಸಂಪ್ರದಾಯಗಳು ಮುಂತಾದವುಗಳೆಲ್ಲ ಹಳ್ಳಿಯ ಸಂಸ್ಕೃತಿಯ ನೆರಳಾಗಿ ಮುಂದುವರೆದಿರುವುದನ್ನು ಕಾಣಬಹುದು.

ಒಟ್ಟಿನಲ್ಲಿ ಬೆಳಗಾವಿಯು ಇಂದು ಮಹಾನಗರವಾಗಿ ಬೆಳೆದಿದ್ದರೂ ಗ್ರಾಮೀಣ ಪರಿಸರವನ್ನು ಹೊಂದಿ ಮೂಲ ಪರಂಪರೆ ಮುಂದುವರೆದಿರುವುದು ಬೆಳಗಾವಿಯ ಸಾಂಸ್ಕೃತಿಕ ವೈಶಿಷ್ಟ್ಯವಾಗಿದೆ.



**ಸಂದರ್ಭ ಸೂಚಿ :**


೧. ಅ. ಸುಂದರ: ವಡಗಾವಿ ಮಾಧವಪುರದಲ್ಲಿಯ ೨೦೦೦ ಹಿಂದಿನ ವ್ಯಾಪಾರ ಕೇಂದ್ರದ ಮಹಾನಗರ. ವೇಣುನಾದ. ಪುಟ. ೧.

೨. ಪಿ. ಕೆ. ಭಾಗೋಜಿ: ನನ್ನ ಬೆಳಗಾವಿ. ಪುಟ. ೭

೩. ಬಿ. ಆರ್. ಹಂದೂರ: ಜೈನ ಪರಂಪರೆಗೆ ಬೆಳಗಾವಿ ಪ್ರಾದೇಶಿಕ ಕೊಡುಗೆ, ಪುಟ. ೬.

೪. ಪ್ರೊ. ಪಿ.ಕೆ. ಬಾಗೋಜಿ: ನನ್ನ ಬೆಳಗಾವಿ ಪುಟ. ೬.

೫. ಅ. ಸುಂದರ: ವಡಗಾವಿ ಮಾಧವಪುರದಲ್ಲಿಯ ೨೦೦೦ ಹಿಂದಿನ ವ್ಯಾಪಾರ ಕೇಂದ್ರದ ಮಹಾನಗರ. ವೇಣುನಾದ. ಪುಟ. ೧೪.

೬ ಪ್ರೊ. ಪಿ.ಕೆ. ಬಾಗೋಜಿ. ನನ್ನ ಬೆಳಗಾವಿ ಪುಟ. ೬.

೭ ಡಾ. ಎಂ. ಬಿ. ನೇಗಿನಹಾಳ: ಬೆಳಗಾವಿ ನಗರದ ಪ್ರಾಚೀನ ಇತಿಹಾಸ, ನೇಗಿನಹಾಳ ಪ್ರಬಂಧಗಳು. ಪುಟ. ೫೩.

೮. ಅ. ಸುಂದರ: ವಡಗಾವಿ ಮಾಧವಪುರದಲ್ಲಿಯ ೨೦೦೦ ಹಿಂದಿನ ವ್ಯಾಪಾರ ಕೇಂದ್ರದ ಮಹಾನಗರ. ವೇಣುನಾದ. ಪುಟ. ೧೮.

೯. ಡಾ. ಕೆ. ಮೋಹನ ಕೃಷ್ಣ ರೈ: ವಸಾಹತು ಪೂರ್ವ ಕರ್ನಾಟಕ ನಗರ ಚರಿತ್ರೆ, ಪುಟ. ೨೭.

೧೦. ಭುಜೇಂದ್ರ ಮಹೀಶವಾಡಿ: ಬೆಳಗಾವಿ ಕೋಟೆಯ ಮೇಲೆ ಕನ್ನಡ ಧ್ವಜ. ವೇಣುಸಂಪದ. ಪುಟ. ೧.

೧೧. ಅದೇ. ಪುಟ. ೨೭.

೧೨. ಅದೇ.

೧೩. EP. India. vol.xiii. pp.14-36

೧೪. ಎಸ್. ಕೆ. ಜೋಶಿ: ಬೆಳಗಾವಿ ಜಿಲ್ಲೆಯ ಕೋಟೆ–ಕೊತ್ತಳಗಳು. ಬೆಳಗಾವಿ ಸಂಸ್ಕೃತಿ. ಪುಟ. ೩೩೧.

೧೫. ಅದೇ. ಪುಟ. ೩೩೧.

೧೬. ವಾರಿಜ ಆರ್. ಬೋಳಾರ: ಬೆಳಗಾವಿ ಜಿಲ್ಲೆಯ ಮುಸ್ಲಿಂ ಸ್ಮಾರಕಗಳು. ಬೆಳಗಾವಿ ಜಿಲ್ಲೆಯ, ಇತಿಹಾಸ ಮತ್ತು ಪುರಾತತ್ತ್ವ ಪುಟ. ೩೧೦.

೧೭. ಕೃಷ್ಣಮೂರ್ತಿ ಪುರಾಣಿಕ: ಬೆಳಗಾವಿ. ಪುಟ. ೯.

೧೮. ಸಿ. ವಿ. ಮಠದ: ೧೮ನೆಯ ಶತಮಾನದಲ್ಲಿ ಬೆಳಗಾವಿ, ಬೆಳಗಾವಿ ಜಿಲ್ಲೆಯ, ಇತಿಹಾಸ ಮತ್ತು ಪುರಾತತ್ತ್ವ ಪುಟ. ೬೨೪.

೧೯. ಎಂ. ವೈ. ಸಾವಂತ: ಮರಾಠರು, ಪೇಶ್ವೆಯರು ಹಾಗೂ ಸಂಸ್ಥಾನಗಳು, ಬೆಳಗಾವಿಯ ಭವ್ಯ ಪರಂಪರೆ. ಪುಟ. ೮೨.

೨೦. ಅದೇ. ಪುಟ. ೮೨.

೨೧. ಗ್ಯಾಜಿಟಿಯರ್-೧೮೮೩. ಪುಟ. ೨೭೯.

೨೨. ಅದೇ. ಪುಟ. ೪೯೩.

೨೩. ಕನ್ನಡ ಕಾಲು ಶತಮಾನ. ಮಿಂಚಿನ ಬಳ್ಳಿ ಬೆಳ್ಳಿ ಹಬ್ಬ ಸಂಚಿಕೆ. ೧೯೬೫. ಪುಟ. ೪೧೩.



## ಅಧ್ಯಾಯ : ಎಂಟು

# ಭಾಷೆ–ಸಾಹಿತ್ಯ–ಸಂವಹನ

## ಅ. ಭಾಷೆ

### ೧. ಸಾಮರಸ್ಯ:

ಕರ್ನಾಟಕ ಹಾಗೂ ಮಹಾರಾಷ್ಟ್ರ ಇವೆರಡು ನೆರೆಯ ರಾಜ್ಯಗಳು ಕನ್ನಡ ಮತ್ತು ಮರಾಠಿ ಭಾಷೆಗಳ ಬಾಂಧವ್ಯ ಅನಾದಿಕಾಲದಿಂದಲೂ ಸಾಗಿ ಬಂದಿದೆ. ಈ ಉಭಯ ರಾಜ್ಯಗಳ ನಡುವೆ ಸಾಂಸ್ಕೃತಿಕ ಕೊಳು–ಕೊಡು ಅವ್ಯಾಹತವಾಗಿ ನಡೆದುಕೊಂಡು ಬಂದಿದೆ. ಕನ್ನಡವು ದ್ರಾವಿಡ ಭಾಷಾ ಪರಿವಾರ ವರ್ಗಕ್ಕೆ ಸೇರಿದ ಭಾಷೆ: ಮರಾಠಿ ಆರ್ಯನ್ ಭಾಷಾ ವರ್ಗದ್ದು. ಹೀಗಿದ್ದು ಈ ಉಭಯ ಭಾಷೆಗಳ ನಡುವೆ ನಡೆದ ಆದಾನ ಪ್ರಧಾನ ಬೆಳಗಾವಿ ಭಾಗದಲ್ಲಿ ವಿಶಿಷ್ಟವಾಗಿ ಕಂಡುಬರುತ್ತದೆ.

ಕ್ರಿ.ಶ. ಆರಂಭದಿಂದ ಹದಿಮೂರನೆಯ ಶತಮಾನದವರೆಗೆ ಕರ್ನಾಟಕದ ಪ್ರಭಾವ ಮಹಾರಾಷ್ಟ್ರದ ಮೇಲಾದರೆ ಅನಂತರ ಕರ್ನಾಟಕದ ಮೇಲೆ ಮಹಾರಾಷ್ಟ್ರದ ಪ್ರಭಾವ ದಟ್ಟವಾಗಿ ಆಗಿರುವುದು ಕಂಡುಬರುತ್ತದೆ.[೧] ಇದನ್ನು ಗಮನಿಸಿ ಲೋಕಮಾನ್ಯ ಬಾಲಗಂಗಾಧರ ತಿಲಕ್ ಅವರು 'ಮಹಾರಾಷ್ಟ್ರ ಮತ್ತು ಕರ್ನಾಟಕ ಬೇರೆ ಬೇರೆ ಅಲ್ಲ. ಇಬ್ಬರಲ್ಲಿಯೂ ಒಂದೇ ನೆತ್ತರು ಹರಿದಾಡುತಲಿದೆ. ಇಬ್ಬರ ಭಾಷೆಯೂ ಒಂದೇ ಎಂದರೆ ಕನ್ನಡವೇ ಆಗಿತ್ತು ಎಂದು ಹೇಳಿದ್ದಾರೆ.[೨] ಮಹಾರಾಷ್ಟ್ರದ ಖ್ಯಾತ ಲೇಖಕರಾದ ರಾಜವಾಡೆ, ರಾ. ಚಿ. ಢೇರೆ, ದುರ್ಗಾ ಭಾಗವತ್, ಮಿರಾಶಿ, ವಿಠ್ಠಲ ರಾಮಜಿ ಶಿಂಧೆ, ಸೇತು ಮಾಧವರಾವ್ ಪಗಡಿ, ಪು.ಲ.ದೇಶಪಾಂಡೆ ಮೊದಲಾದವರು ಕರ್ನಾಟಕ–ಮಹಾರಾಷ್ಟ್ರದ ಬಾಂಧವ್ಯವನ್ನು ಕರುಳು ಬಳ್ಳಿಯ ಸಂಬಂಧ ಎಂಬುದಾಗಿ ಗುರುತಿಸಿರುವುದು ಉಲ್ಲೇಖನೀಯ ಸಂಗತಿ. ಖ್ಯಾತ ಕನ್ನಡ ಸಂಶೋಧಕ ಶಂ.ಬಾ. ಜೋಶಿ ಅವರು ಕರ್ನಾಟಕ ಮಹಾರಾಷ್ಟ್ರ ಈ ಎರಡೂ ಪ್ರದೇಶಗಳು ಅವಳಿ–ಜವಳಿಯ ಹಾಗೆ ಬೆಳೆದು ಬಂದಿವೆ ಎಂದಿದ್ದಾರೆ.

ಬೆಳಗಾವಿಯಲ್ಲಿ ಎರಡೂ ಭಾಷೆಯ ಜನರು ನೆಲೆಸಿರುವುದರಿಂದ ಕೊಡು-ಕೊಳ್ಳುವಿಕೆ ನಿರಂತರವಾಗಿ ನಡೆದಿದೆ. ದಿನನಿತ್ಯದ ಜೀವನದಲ್ಲಿ ವ್ಯವಹಾರದಲ್ಲಿ ಭಾಷಾಸ್ವೀಕರಣ ನಡೆದು ಹೊಸದೊಂದು ಭಾಷಾ ವಾತಾವರಣ ನಿರ್ಮಾಣಗೊಂಡಿದೆ. ಇದರಿಂದ ದಿನನಿತ್ಯದ ಚಟುವಟಿಕೆಯಲ್ಲಿ, ವ್ಯವಹಾರದಲ್ಲಿ, ಸಂಬಂಧಗಳಲ್ಲಿ, ಎರಡೂ ಭಾಷೆಯ ಶಬ್ದಗಳು ಬಳಕೆಗೊಳ್ಳುವುದನ್ನು ಕಾಣಬಹುದು. ತರಕಾರಿ, ಅಡಿಗೆ, ಮುಂತಾದವುಗಳಲ್ಲಿಯೂ ಈ ಹೊಸ ಭಾಷಾ ಶೈಲಿಯನ್ನು ಕಾಣಬಹುದು. ಅಲ್ಲದೆ ಬೆಳಗಾವಿ ಪರಿಸರದ ಸಾಹಿತಿಗಳು ತಮ್ಮ ಸಾಹಿತ್ಯದಲ್ಲಿ ಈ ಭಾಷೆಯನ್ನು ಬಳಸಿಕೊಂಡಿರುವುದು ಕಂಡುಬರುತ್ತವೆ. ಇಂತಹ ಭಾಷೆಯನ್ನು ಚಂದ್ರಕಾಂತ ಪೋಕಳೆಯವರು ಕಿಚಡಿ ಭಾಷೆಯೆಂದು ಕರೆದಿದ್ದಾರೆ.[೩]

ಗಡಿ ಪ್ರದೇಶದ ಭಾಷೆಯಲ್ಲಿ ಆ ಭಾಷೆಯ ನಾಮರೂಪಗಳನ್ನು ಮಾತ್ರ ಬಳಸುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಇಲ್ಲಿ ಕ್ರಿಯಾರೂಪವು ಹಾಗೆಯೇ ಉಳಿಯುತ್ತದೆ.

ಉದಾ: "ದುಕಾನಕ ಹೋಗಿ ದೋನ ಕಿಲೋ ಪೋವೆ ತಗೊಂಡ ಬಾ"

"ಅಡ್ಡಗಾಡಿ ಮ್ಯಾಗ ದುಡ್ಡ ಕಿವಲಯ ಕೊಂಡುನಗಾನ ಖಾಜಾ"

"ಮಕ್ರಾನ ತನಿ ಮ್ಯಾಲ ಕಾವಳವ್ವ ಕುಂತ್ಯೆತಿ ಧೊಂಡಾನ ತೊಂಡ ಫೆಂಕಾಸ"

ಇಂತಹ ನೂರಾರು ವಾಕ್ಯಗಳು ಯಥೇಚ್ಛವಾಗಿ ಬಳಸಲ್ಪಡುತ್ತವೆ. ಇಲ್ಲಿ ಯಾವ ಭಾಷೆಯ ಮಡಿವಂತಿಕೆಯೂ ಕಾಣಬರುವುದಿಲ್ಲ. ಕೆಲವು ಸಂದರ್ಭಗಳಲ್ಲಿ ಮರಾಠಿ ಪದಗಳಿಗೆ ಕನ್ನಡ 'ಇದು' ಪ್ರತ್ಯಯವನ್ನು ಬಳಸಲಾಗುತ್ತದೆ. 'ಸಮಜಾಯಿಸು' 'ವಳಕಾಯಿಸು' ಠರಾಸು ಇತ್ಯಾದಿ. ಅಲ್ಲದೆ ಹಳಗನ್ನಡದ ಕ್ರಿಯಾರೂಪ ಹೆಚ್ಚಾಗಿ ಬಳಕೆಗೊಳ್ಳುವುದನ್ನು ಕಾಣಬಹುದು. "ಯಾನ" "ಎಂತ" "ಐಂತ" ಮುಂತಾದವುಗಳು ಹೆಚ್ಚಾಗಿ ಬಳಕೆಗೊಳ್ಳುತ್ತವೆ.

ಸಾಮಾನ್ಯವಾದ ಮಾತುಗಳಲ್ಲಿ 'ನಾನೂಭೀ', 'ನೀನೂಭೀ' ಎಂಬ ಪದಗಳನ್ನು ಬಳಸುತ್ತಾರೆ. ಈ 'ಭೀ' ಎಂಬ ಸಂಯೋಜಕ ರೂಪ ಹಿಂದಿಯಿಂದ ಮರಾಠಿಗೆ, ಮರಾಠಿಯಿಂದ ಕನ್ನಡಕ್ಕೆ ಸೇರ್ಪಡೆಗೊಂಡಿದೆ. ಭಾಷಾ ಉಚ್ಚಾರಣೆಗೆ, ಆಡುನುಡಿಗೆ ಭೌಗೋಳಿಕ ಹಿನ್ನೆಲೆಯೂ ಕಾರಣವಾಗುತ್ತದೆ. ಮೈಸೂರ ಕನ್ನಡ, ಧಾರವಾಡ ಕನ್ನಡ, ಮಂಗಳೂರ ಕನ್ನಡ ಹೀಗೆ ಈ ಪ್ರದೇಶಗಳಲ್ಲಿಯ ಕನ್ನಡ ಭಾಷೆ ಒಂದೇ ಆಗಿದ್ದರೂ ಅದರಲ್ಲಿ ಸೇರಿಕೊಂಡ ಬೇರೆ ಬೇರೆ ಭಾಷೆಗಳ ಪದಗಳು, ಉಚ್ಚರಿಸುವ ರೀತಿ, ಮಾತನಾಡುವ ಪದ್ಧತಿ ಅನೇಕ ವಿಧವಾಗಿದೆ. ಅದರಂತೆ ಬೆಳಗಾವಿಯಲ್ಲಿಯೂ ವ್ಯತ್ಯಾಸ ಕಾಣಬರುತ್ತದೆ.

ಅನುಸ್ವಾರ ವ್ಯತ್ಯಾಸವಾಗುವುದು, ಪಲ್ಲಟಗೊಳ್ಳುವುದು ಬೆಳಗಾವಿ ಭಾಗದ ಆಡು ನುಡಿಯಲ್ಲಿಯ ಒಂದು ವಿಶೇಷ. ಕನ್ನಡದಲ್ಲಿ ಚಿಪ್ಪಿಗ ಸಿಂಪಿಗನಾಗಿ ಮತ್ತೆ ಇಲ್ಲಿ ಸಿಪ್ಪಿಗನಾಗುತ್ತಾನೆ. ಇಲ್ಲಿ ಸಿಂಪಿಗನಿಗೆ 'ಸಿಪ್ಪಿಗ್ಯಾ', 'ಸಿಂಪಿಗ್ಯಾ'

ಎಂದು ಆಡು ಭಾಷೆಯಲ್ಲಿ ಕರೆಯುತ್ತಾರೆ. ಅದರಂತೆ ಕೆಂಪು 'ಕೆಪ್ಪು' ಆಗಿ ಗಂಟು ಗಟ್ಟು ಆಗುತ್ತದೆ. ಇದೇ ರೀತಿ ಗೌಡರು–ಗೌಂಡರು, ಎಷ್ಟು–ಏಟು, ಹೆಂಡತಿ–ಹ್ಯಾಣತಿ, ಏನು–ಯಾನು, ಮಾಡುವುದು–ಮಾಡೋದು, ನೋಡುವುದು–ನೋಡೋದು, ವರ್ಷ–ವರಸಾ, ಹಾಲು–ಹಾಲಾ, ಮೊಸರು–ಮೊಸರಾ ಈ ಬಗೆಯವು ಸಾಮಾನ್ಯ ಹೀಗೆ ದೀರ್ಘವಾಗಿ ಉಚ್ಚರಿಸುವ ರೂಢಿ ಮರಾಠಿಯಿಂದ ಬಂದುದಾಗಿದೆ. ಅಲ್ಲದೆ ದೀರ್ಘವಾಗಿ ಉಚ್ಚರಿಸುವ ಪದಗಳನ್ನು ಸಂಕುಚಿತಗೊಳಿಸಿ ಹ್ರಸ್ವ ಮಾಡಿ ಮಾತನಾಡುವ ಪದ್ಧತಿಯೂ ಕಂಡುಬರುತ್ತದೆ.

ಬರಲಿಕ್ಕೆ–ಬರ್ಲಾಕ, ಬರ್ರಾಕ, ತಿನ್ನಲಿಕ್ಕೆ–ತಿನ್ಲಾಕ, ತಿನ್ನಾಕ, ಕರೆಯುತ್ತಾರೆ–ಕರ್ಯಾತಾರ, ಕರ್ಲ್ಯಾತಾರ, ಹಸಿದ–ಹಸ್ತು, ಹಸ್ದು ಈ ರೀತಿಯ ಪ್ರಯೋಗಗಳು ಸರ್ವೆ ಸಾಮಾನ್ಯವಾಗಿ ಕಂಡುಬರುತ್ತದೆ. ಮರಾಠಿ ಭಾಷೆಯ ಪ್ರಭಾವದಲ್ಲಂತೂ ಇಲ್ಲಿಯ ಒಂದೊಂದು ಮಾತುಗಳನ್ನು ಅರ್ಥೈಸಿಕೊಳ್ಳಲು ಕಷ್ಟವಾಗುತ್ತದೆ.

"ಪೈಲೇ ಪಾಸೂನ ನಂ ದುಕಾನ ಮೋಠಾ ಪ್ರಮಾಣ ಐತಿ" ಈ ವಾಕ್ಯದಲ್ಲಿ ಮರಾಠಿ ಶಬ್ದಗಳೇ ಹೆಚ್ಚಿದ್ದರೂ ಇದು ಕನ್ನಡದ ಆಡುನುಡಿ. ಪೈಲೇ ಪಾಸೂನ– ಮೊದಲಿನಿಂದಲೂ, ದುಕಾನ–ಅಂಗಡಿ, ಮೋಠಾ–ದೊಡ್ಡ ಇವು ಮರಾಠಿ ಪದಗಳು. ಈ ರೀತಿಯ ಭಾಷೆ ಬೆಳಗಾವಿಯ ಸುತ್ತ ಮುತ್ತಲಿನ ಹಳ್ಳಿಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಬೆಳಗಾವಿ ನಗರದಲ್ಲಿ ಸುಶಿಕ್ಷಿತರು ಹೆಚ್ಚಾಗಿರುವದರಿಂದ ಪೂರ್ತಿಯಾಗಿ ಮರಾಠಿಯಲ್ಲಿಯಾಗಲಿ, ಕನ್ನಡದಲ್ಲಿಯಾಗಲಿ ಅಥವಾ ಹಿಂದಿಯಲ್ಲಿಯಾಗಲಿ ಮಾತನಾಡುವುದು ಕಂಡುಬರುತ್ತದೆ.

ಬೆಳಗಾವಿಯ ಕೆಲವು ಜನರ ಮಾತು ಕನ್ನಡ ಎಂದು ತಿಳಿಯಬೇಕಾದರೆ ಅವರು ಬಳಸುವ ವಿಭಕ್ತಿ ಪ್ರತ್ಯಯ ಹಾಗೂ ಕ್ರಿಯಾಪದಗಳಿಂದಲೇ ತಿಳಿಯಬೇಕಾಗುತ್ತದೆ.

"ಪೋರೀನ ಪೋಚಾಸಿ ಬರ್ತೀನ" ಎಂದರೆ ಹುಡುಗಿಯನ್ನು ಕಳಿಸಿ ಬರುತ್ತೇನೆ ಎಂದರ್ಥ. ಇಲ್ಲಿ 'ಪೋರಿ' ಹಾಗೂ 'ಪೋಚ್' ಇವು ಮರಾಠಿ ಪದಗಳು.

ಇದರಂತೆಯೇ ತಬ್ಬೇತ್ ಬರಿ ಇಲ್ಲ – ಆರೋಗ್ಯ ಸರಿ ಇಲ್ಲ.

ಘರ ಭೇಸಿ ಐತಿ–ಮನೆ ಬಾಳ ಚೆನ್ನಾಗಿದೆ.

ಪಸಂದ್ ಬಂದ್ಯೆತಿ–ಮೆಚ್ಚುಗೆ ಆಗ್ಯೆತಿ

ಮೇವಣ್ಯಾಂದ ಸ್ಥಿತಿ ಬಿಗಡ್ಸೆತಿ–ಭಾವನ ಸ್ಥಿತಿ ಕೆಟ್ಟಿದೆ.

ಉದ್ದರೆ ಬಂದ್ ಆಗೇತಿ–ಸಾಲ ಕೊಡುದು ನಿಂತಿದೆ.

ಇತ್ಯಾದಿಯಾಗಿ ಹೀಗೆ ಇಲ್ಲಿಯ ಭಾಷೆಯನ್ನು ಕಷ್ಟಪಟ್ಟು ಅರ್ಥಮಾಡಿಕೊಳ್ಳಬೇಕಾಗುತ್ತದೆ.

ಶ್ಯಾಣ್ಯಾ(ಜಾಣ), ಖರೆ(ನಿಜ), ಮಸ್ತ(ಬಹಳ ಚೆನ್ನಾಗಿ), ಲಾಲಭಡಕ್ (ಅತೀ ಕೆಂಪು), ತಾಬಡತೊಬಡ(ಬೇಗ ಬೇಗ), ತೋಂಡೀ(ಮೌಖಿಕ), ಕಬೂಲಿ(ಒಪ್ಪಿಗೆ), ಆಜೂಬಾಜು(ನೆರೆಹೊರೆ), ಅಗದಿ(ತೀರ), ಜರಾ(ಸ್ವಲ್ಪ), ಠಗ್ಯಾ (ಮೋಸಗಾರ), ಖಬರ(ಬುದ್ಧಿ, ಅರಿವು), ಖಬರಗೇಡಿ (ಬುದ್ಧಿಗೇಡಿ), ಜರೂರ(ಅತಿಬೇಗ), ಪಸಂದ(ಒಪ್ಪಿಗೆ), ಭೇಸಿ(ಒಳ್ಳೆಯ), ಥೋಡೆ(ಸ್ವಲ್ಪ), ತಬ್ಬೇತ್(ಆರೋಗ್ಯ), ನುಸ್ತೆ(ಈಗ), ಫರಕ(ವ್ಯತ್ಯಾಸ), ವಾಢಾಸು(ಹೆಚ್ಚಿಸು), ಏಕದಂ(ಒಮ್ಮೇಲೆ), ರಪಾಟ(ಬೇಗ), ಖೂನ್(ಗುರುತು), ಕಗಡ(ಬಹಳ) ಈ ರೀತಿಯ ಶಬ್ದಗಳು ಹೆಚ್ಚಿನ ಸಂಖ್ಯೆಯಲ್ಲಿ ಬಳಕೆಗೊಳ್ಳುತ್ತವೆ. ಈ ಶಬ್ದಗಳನ್ನು ಬಳಸಿ ಎರಡೂ ಭಾಷೆಯ ಜನರು ಮಾತನಾಡುತ್ತಾರೆ. ಹೀಗೆ ಮಾತನಾಡುವಾಗ ಯಾವುದೇ ಗೊಂದಲ ಕಾಣಬರುವುದಿಲ್ಲ. ಅವು ಸಹಜವಾಗಿಯೇ ಮೂಡಿಬರುತ್ತವೆ. ಆದರೆ ಬೇರೆ ಭಾಗದಿಂದ ಬಂದವರಿಗೆ ಅರ್ಥವಾಗಲು ಕಷ್ಟವಾಗುತ್ತದೆ. ಅಂಕಿ ಸಂಖ್ಯೆಗಳ ಬಳಕೆಯಲ್ಲಿ ಮರಾಠಿ ಸಂಖ್ಯೆಗಳು ಬಳಕೆಯಾಗುತ್ತವೆ. ಹೆಚ್ಚಾಗಿ ವ್ಯಾಪಾರಿಗಳಲ್ಲಿ ಈ ಸಂಖ್ಯೆಗಳ ಬಳಕೆ ಕಂಡುಬರುತ್ತದೆ. ಅಡೀಚ, ದೀಡ, ಸಾಡೇ ಅಕರಾ, ಸಾಡೇ ಬಾರಾ ಹೀಗೆ ಹೆಚ್ಚಾಗಿ ಬಳಸಲ್ಪಡುತ್ತವೆ. ಕೆಲವು ಜನರು ಕನ್ನಡ ಮರಾಠಿ ಎರಡೂ ಭಾಷೆಯನ್ನು ಕೂಡಿಸಿ ಬಳಸುತ್ತಾರೆ. ಸವ್ವಾ ಒಂಬತ್ತು, ಸವ್ವಾ ಹನ್ನೆರಡು, ಪೋಗೆ ಮೂರು, ಪೋಗೆ ಹತ್ತು ಎಂದು ಹೇಳುವ ರೂಢಿ ಇದೆ.

ಇನ್ನೂ ಕೆಲವು ಸಲ ಮರಾಠಿಯ ಮೂಲ ಪದಗಳು ಪೂರ್ತಿಯಾಗಿ ಪರಿವರ್ತನೆಗೊಂಡು ಬಳಕೆಗೊಳ್ಳುತ್ತವೆ. 'ನನ ಸಟ್ಕೆ ಬಾ' ಎಂದರೆ ನನ್ನ ಸಲುವಾಗಿ ಬಾ ಎಂದರ್ಥ. ಮರಾಠಿಯಲ್ಲಿ 'ಸಾಠಿ' ಎಂದರೆ ಸಲುವಾಗಿ ಇದು ಕನ್ನಡೀಕರಣವಾಗಿ ಸಟ್ಕೆ ಆಗಿದೆ.

'ನಾಕ ಕಿಪೆ ಹೋಗಿ ಬಯ್ನಿ'-ನಾಲ್ಕು ಸಲ ಹೋಗಿ ಬಂದೆನು. ಇಲ್ಲಿ ಮರಾಠಿಯ ಖೇಪ (ಸಲ) ಇಲ್ಲಿಯ ಜನರ ಬಾಯಲ್ಲಿ ಕಿಪೆ ಆಗಿದೆ. ನಾಲ್ಕು ಎನ್ನುವ ಕನ್ನಡ ಪದವು ಗ್ರಾಮ್ಯ ರೂಪ ಪಡೆದು ನಾಕ ಎಂದಾಗಿದೆ.

ಪಡೆ ನುಡಿಗಳನ್ನು ಬಳಸುವುದರಲ್ಲಿಯೂ ಬೆಳಗಾವಿಯ ಭಾಷಾ ವೈಶಿಷ್ಟ್ಯವನ್ನು ಗುರುತಿಸಬಹುದು. 'ದಂ ಹಿಡಿ' ಎಂದರೆ ತಡೆಯುವುದು, ಸುಮ್ಮನಿರುವುದು ಎಂದಾಗುತ್ತದೆ. 'ಹಳಿ ಹೊಡಿ' ಎಂದರೆ ಕೂಗಿ ಕರೆಯುವುದು. ಭಿಡೆದಾಗ ಬೀಳು– ದಾಕ್ಷಿಣ್ಯಕ್ಕೆ ಒಳಗಾಗು, ಪೋತಿ ಆಗು–ಸಾಯು, ಪಂಚೇತಿ ಆಗು–ತೊಂದರೆ ಆಗು, ಪರ್ಲ ಹರಿ–ಸಂಬಂಧ ಕಡೆದುಕೊಳ್ಳು, ನಜರ ಬಂದ್ಯಾಗ ಇಡು–ಕಣ್ಣರಿಕೆಯಲ್ಲಿಡು, ದಾದ ಮಾಡು–ಗಮನ ಕೊಡು, ಲಕ್ಷ ಕೊಡು, ಛಾಪ ಹಾಕು–ಪ್ರಭಾವ ಬೀರು, ಅಗಡ ಮಾಡು–ಅಡ್ಡದಾರಿಗೆ ಹಚ್ಚು, ಅಪಸತ್ ಮಾಡಿಕೊಳ್ಳು–ಒಪ್ಪಂದ ಮಾಡಿಕೊಳ್ಳು, ಥಾರೇಕ ಹತ್ತು–ಗತಿಗೆ ಹತ್ತು, ಉಧೋಳಿಸು–ಹಾಸು ಮಾಡು, ಪಂಟ ಬಡಿ–ನೆಪ ಹೇಳು, ಚೌಕ ಬೀಳು–ಬಾಡಿ ಹೋಗು ಮುಂತಾದವುಗಳು.

ಪದಗಳಲ್ಲಿಯ ಅಕ್ಷರಗಳು ವ್ಯತ್ಯಾಸವಾಗುವುದು, ಪಲ್ಲಟವಾಗುವುದು, ಲೋಪ ಹಾಗೂ ಆದೇಶವಾಗುವುದು ತೀರ ಸ್ವಾಭಾವಿಕ. ಸಂಗಡ ಇದು 'ಸಂಗಾಡ'ವಾದರೆ ಸ್ವತಂತ್ರ ಇದು 'ಸತಂತ್ರ' ಎಂದಾಗುತ್ತದೆ. ಮಾಡಿಕೊಂಡೆನು–

ಮಾಡಿಕೊಯ್ಯು, ಅವನಕೂಡ–ಅವನ ಗೂಡಾ ಇವು ವ್ಯತ್ಯಾಸಗೊಂಡರೆ ಹೊಟ್ಟೆಕಿಚ್ಚು–ಹೊಚ್ಚಿಕಿಟ್ಟು ಆದರೆ ಚೌಗುಲೆ ಇವರು 'ಚೌಲಗ್ಯಾರು' ಆಗಿ ಪಲ್ಲಟಗೊಳ್ಳುತ್ತಾರೆ. ನಾಲ್ಕು–ನಾಕು, ಎರಡು–ಎಡ್ಡು ಈ ರೀತಿ ಪರಿವರ್ತನೆ ಹೊಂದುತ್ತವೆ.

ಇನ್ನು ಕೆಲವು ದೇಶಿ ಕನ್ನಡ ಪದಗಳು ಉತ್ತರಕರ್ನಾಟಕದ ಬಹಳಷ್ಟು ಪ್ರದೇಶಗಳಲ್ಲಿ ಬಳಕೆಗೊಳ್ಳುವಂತೆ ಬೆಳಗಾವಿಯಲ್ಲಿಯೂ ಹೆಚ್ಚಾಗಿ ಬಳಕೆಗೊಳ್ಳುತ್ತವೆ. ಅವು ಕೆಳಗಿನಂತಿವೆ.

ಆಯಾರ(ಉಡುಗೋರೆ), ಖಿಚಡಿ(ಬೇಳೆ ಹಾಕಿದ ಅನ್ನ), ಗಸಕ್ಕನ(ಲಗುಬಗೆಯಿಂದ), ತರಬು(ನಿಲ್ಲಿಸು), ಸನೇ (ಸಮೀಪ), ಬತ್ತಾಸಿ(ಬೇಗಬೇಗನೆ, ವೇಗವಾಗಿ), ಕಿತ್ತ ಓಡು(ವೇಗವಾಗಿ ಓಡು), ಪುರಸೊತ್ತು( ಖಾಲಿ ಇಲ್ಲದೆ ಬಿಡುವಿಲ್ಲದೆ), ದಗದ(ಕೆಲಸ), ಕಸಾರಕಿ(ಜಡ್ಡು ಜ್ವರ), ಮೋಕಳೀಕ(ಮುಕ್ತ), ಕಾಸಡೇ(ಬೆಲೆಯಿಲ್ಲದ), ಗಾಂವ(ಅನುಕೂಲ), ಮಾರಿ(ಮುಖ), ಮೋತಿ(ಮುಖ), ನುಸ್ತಾ(ಕೇವಲ),ನುಸ್ತೆ(ಈಗ), ಕಾಸಿಂದ(ಸಲುವಾಗಿ), ಅಡಚಣಿ(ಕಷ್ಟ), ಗರಜ(ಅವಶ್ಯ), ದೇಖರೇಖಿ(ಮೇಲ್ವಿಚಾರಣೆ), ಗಡಾನ(ತಕ್ಷಣ), ಟಬರು(ಸೊಕ್ಕು), ಪ್ಯಾಲಿ(ಮೂರ್ಖ), ಹ್ಯಾಪಲ್ಯಾ(ಅಂಜುಬುರಕ), ದೀಡಿ(ವ್ಯಂಗ್ಯ), ಜಿಕೇರಿ(ಜಿಪುಣತನ), ವಾಜಮಿ(ಯೋಗ್ಯ), ಹರಿವತ್ತು(ಬೆಳಗು), ಅಗಾವು(ಮುಂಚಿತ), ಗರ್ದಿ(ಗದ್ದಲ, ಸಡಗರ), ಅಟಪಾಸು(ಒದಗು), ಪುರಮಾಸಿ(ದೊಡ್ಡದು) ಇಂಥಹ ಇನ್ನೂ ನೂರಾರು ಪದಗಳು ಇಲ್ಲಿಯ ಜನರ ಭಾಷೆಯಲ್ಲಿ ಬಳಕೆಗೊಳ್ಳುತ್ತವೆ. ಬೆಳಗಾವಿ ಜಿಲ್ಲೆಯ ಬೇರೆ ಬೇರೆ ಭಾಗಗಳಿಂದ ಬಂದು ಬೆಳಗಾವಿಯಲ್ಲಿ ನೆಲೆಸಿದ ಕನ್ನಡಿಗರು ಹೆಚ್ಚಾಗಿ ಇಂತಹ ಭಾಷೆಯನ್ನು ಬಳಸುತ್ತಾರೆ.

ಬೆಳಗಾವಿ ಹಾಗೂ ಸುತ್ತಮುತ್ತಲಿನ(ಚಿಕ್ಕೋಡಿ. ಅಥಣಿ, ನಿಪ್ಪಾಣಿ) ಪ್ರದೇಶಗಳಲ್ಲಿಯ ಜನರ ದೈನಂದಿನ ವ್ಯವಹಾರದಲ್ಲಿ ಕಂಡುಬರುವ ಕೆಲವು ಮಾತುಗಳು.

* ಪಾರಗೋಳೆಲ್ಲಾ ಪಿಂಗಳಾಸರ ಹತ್ತ್ಯಾವು ಮಕ್ಕಳು ತೂಕಡಿಸುತ್ತಿವೆ.

ಮರಾಠಿ ಫೇಂಗಣೆ (ತೂಕಡಿಸು) ಶಬ್ದವು ಇಲ್ಲಿ ಬದಲಾವಣೆ ಹೊಂದಿದೆ.

* 'ಈ ಹೋರಿಕರಾ ಆ ಘೂಟಕ್ಕ ಅಟಕಾಸ'

ಅಡಕವಣೆ (ಮರಾಠಿ)–ಕಟ್ಟು

ಗೂಟ (ಕನ್ನಡ )–ಘೂಟ (ಅಲ್ಪಪ್ರಾಣವು ಮಹಾಪ್ರಾಣಕ್ಕೆ ತಿರುಗಿದೆ)

* ನಿನ್ನಿ ನಾ ಬರುಲ್ಲಾಗಿನ್ನಿ ನಿನ್ನೆ ನನಗೆ ಬರಲು ಆಗಿರಲಿಲ್ಲ ಇಲ್ಲಿ ಯಾವುದೇ ಬೇರೆ ಭಾಷೆಯ ಶಬ್ದವು ಕೂಡಿಕೊಳ್ಳದಿದ್ದರೂ ಮರಾಠಿ ಭಾಷೆಯ ಪ್ರಭಾವದಲ್ಲಿ ಕನ್ನಡವೇ ಹೀಗೆ ಬದಲಾವಣೆಯನ್ನು ಹೊಂದಿದೆ.

* ನಮ್ಮ ದೋಸ್ತು ನಮಗ ಗಟ್ಟಿ ಬೀಳುಲ್ಲಾಗಿದ್ದು

ಗಾಠ ಪಡಣಿ (ಭೆಟ್ಟಿಯಾಗು) ಇದು 'ಗಟ್ಟಿ' ಎಂದಾಗಿದೆ.

'ಗಂಟು ಬೀಳು' ಎಂಬ ಧಾತು ಇದೇ ಅರ್ಥವನ್ನು ಸೂಚಿಸುತ್ತದೆ.

* ನಾ ಹೇಳಿದ್ದು ಠ್ಯಾಂವಿಕಿ ಐತಿಲ್ಲೊ?

ಠಾವೂಕ ಅಸಣಿ–ಗೊತ್ತಿರು

* ಆ ರಾಮ್ಯಾಗ ಹಳಿ ಹೊಡಿ (ಆ ರಾಮ್ಯಾನ ಕೂಗಿ ಕರೆ)

ರಾಮ್ಯಾಲಾ ಹಾಕ್‌ಮಾರ್ ಎನ್ನುವ ಮರಾಠಿ ಭಾಷೆಯ ತದ್ವತ್

ಅನುವಾದವಿದು ('ಹಾಕ್‌ಮಾರಣೆ' ಎಂದರೆ ಕೂಗಿ ಕರೆ)

* ಹ್ವಾದ ಅಠವಡ್ಯಾಗ ಆದದ್ದ ಅಠವಣ ಐತೆಲ್ಲ

ಇಲ್ಲಿ ಮರಾಠಿ, ಕನ್ನಡ ಎರಡೂ ಭಾಷೆಗಳ ಶಬ್ದಗಳು ಸೇರಿಕೊಂಡಿವೆ.

ಹ್ವಾದ–ಹೋದ, ಕಳೆದ

ಅಠವಡ್ಯಾಗ–ವಾರದಲ್ಲಿ

ಅಠವಣ–ನೆನಪು

* ಕಿತ್ತೆಬಜೆ, ಕಾರಬಾರ ಭಾಳ ಮಂದಿ ಮಾಡತಾರ

* ಅಂದಾದುಂದಿ ಕಾರಭಾರದಿಂದ ನಮ್ಮ ಘರಾಣೇದ ಅಬರು ಹೋಯ್ತು.

* ನಮ್ಮಜ್ಜ ದ್ವಾದಲಾಗಾಯ್ತ ನಮ್ಮಜ್ಜಿ, ಚೋವೀಸ್ ತಾಸ್ ವಟವಟಸ್ತಾಳ.

* ಅವ್ರುಂದು ನಂದು ಸೋಳಾಣೆ ಸತ್ರಾ ಪೈ (ಅತಿಶಯ ಸ್ನೇಹ)

* ಅವ್ರುಂಗ ನಂಗ ಛತ್ತೀಸ್ ಅಕಡಾ ಆಗೇದೆ

* ಸಾಡೇಸಾತಿ ಕೈ ತೊಳಕೊಂಡ ಬೆನ್ನ ಹತ್ತ್ಯೈತಿ ನಮಗ

* ನನ್ನ ಮಗೆ ಆಸನರಿ ಆಳಲ್ಲ (ಸಾಮಾನ್ಯ ಮನುಷ್ಯನಲ್ಲ)

* ಇಲ್ಲದ್ದ ಪಲ್ಲಾಳ ಹಚ್ಚಬ್ಯಾಡ (ರಗಳೆ, ಹೇಳಿದ್ದನ್ನೇ ಹೇಳುವುದು)

* ಹೊಂತೂಟ್ಲೆ ಹೊಂಟ ಬಾ

* ನೀರಾಗ ಎಮ್ಮಿ ಮಣಗಿಸಿ ಯಾಪಾರ ಮಾಡೂ ಮನಶಾ ಅಂಬಾ

ಹೀಗೆ ಬೆಳಗಾವಿ ಗಡಿಭಾಗದ ಭಾಷೆಯು ಮರಾಠಿಯ ಪ್ರಭಾವಕ್ಕೆ ಒಳಗಾಗಿದ್ದರೂ ಕನ್ನಡ ದೇಶಿಯ ಸತ್ತ್ವವನ್ನು ಮತ್ತು ವೈಶಿಷ್ಟ್ಯವನ್ನು ಕಾಪಾಡಿಕೊಂಡು ಬಂದಿದೆ.

ಒಂದೇ ಅರ್ಥದ ಶಬ್ದಕ್ಕೆ ಬೇರೆ ಬೇರೆ ಶಬ್ದಗಳ ಬಳಕೆಯನ್ನೂ ಬೆಳಗಾವಿಯಲ್ಲಿ ಕಾಣಬಹುದು.

ಕೆಲಸ–ಕೂಲಿ, ದುಡಿತ, ದಗದ, ಹ್ವಾಕಿ, ದಂದೆ, ಉದ್ಯೋಗ, ಆಳ್ ಹೋಗೋದು.

ಪಾದರಕ್ಷೆ–ಕಾಲ್ಮರಗಿ, ಮೆಟ್ಟು, ಜೋಡು, ಕೆರ, ಉಕ್ಕಡ, ಚಪ್ಪಲ್ಲು, ಮೊಚ್ಚಿ, ಚಡಾವು.

ಜಾಣ–ಶಾಣ್ಯಾ, ಬೆರಕಿ, ಬೆಂಡ್ಲ, ಡೋಕೆವಾನ್

ಬೇಗನೆ–ಬಡಾನ, ಜಲ್ದಿ, ಲಗೂಟ, ಸರಕ್ಕನ, ಗಡಾನ, ಅಡಬಡಿಸಿ, ಲಗ್ಗ, ಲವಕರ, ದೌಡ, ಚಟ್ನ, ಲಗೇಚ.

ಮುಂತಾದವುಗಳನ್ನು ಉದಾಹರಿಸಬಹುದು.

ಕೆಲವು ಪಡೆನುಡಿಗಳು ಕೊಳ್ಳ ಹರಕೋ–ಬಿಡುಗಡೆ ಹೊಂದು

ಪುಂಡಿಪಲ್ಲೆ ಆಗು–ನಿಷ್ಫಲವಾಗು, ಚಟ್ಟಾನಿಗರು–ಸಾಯಿಸು, ನವಣಿ ತೂರು–ಶಾಪಕೊಡು, ಗೊಳೆ ಮಾಡು– ಸಂಗ್ರಹ ಮಾಡು

ಅಡ್ರಾಸಿ ಬಾ–ಬೇಗ ಭಾ, ಗುದಮುರಗಿ ಹಾಕು–ತೊಂದರೆ ವಹಿಸು, ಉಸಲು ಒಡಿ–ಗುಟ್ಟು ಬಿಟ್ಟುಕೊಡು

ಸಂಬಂಧ ಸೂಚಕ ಪದಗಳು–ಬಾಬಾ, ದಾದಾ, ವಹಿನಿ(ವೈನಿ) ಮಾಮಾ, ಮಾಮಿ, ತಾಯೀ (ಹಿರಿಯ ಅಕ್ಕ), ಮಾಯೀ (ಎರಡನೆಯ ಅಕ್ಕ), ಮಾಂಶಿ, ಭಾವಜೀ ದೀರ (ಮೈದುನ) ಕಾಕಾ, ಕಾಕು, ನಾತು, ನಾತ, ಪುತಣ್ಯಾ, ಭಾಚಾ, ಭಾಚಿ ವೇಷಭೂಷಣಗಳನ್ನು ಸೂಚಿಸುವ ಪದಗಳೂ–ಅಂಗರಕ್ಕ, ಅಂಗಿ, ಪೈರಣ, ಮುಂಡಾ, ಮುಂಡೀ, ರುಂಬಾಲ, ಪಟಗಾ, ಪಾವಡ, ಟುವಾಲ, ಉಪ್ಪರಣಿ, ಧೋತ್ರ, ವಲ್ಲಿ, ಪತ್ತಲ, ಪೋಲಕಾ, ಪರಕಾರ, ಝುಗ, ಜಂಪರ, ಕುಬಸ, ಕಿರಿಗಿ, ದಟ್ಟಿ, ಚಡ್ಡಿ, ಇಜಾರ, ಪಾಟಲೋನ. ಇತ್ಯಾದಿ.

ಮನುಷ್ಯ ದೇಹಕ್ಕೆ ಸಂಬಂಧಿಸಿದ ಹಲವು ಪದಗಳು ಮರಾಠರಿಗೆ ಕನ್ನಡದಿಂದ ಸ್ವೀಕೃತವಾಗಿವೆ. ಬೊಟ್ಟು, ಹೊಟ್ಟೆ, ಗಲ್ಲ, ಮಂಡೆ, ಕೊರಳು, ತಲೆ ಬಗಲು, ಎದೆ ಇತ್ಯಾದಿ.

ಆಭರಣಗಳಲ್ಲಿಯ ಶಬ್ದಗಳು–ಬೋರಮಾಳ, ಸರಿಗಿ, ಏಕ್ಸರ, ಅಡ್ಡಿಕಿ, ಪುತಳಿಸರಾ, ಡಾಬು, ಒಡ್ಯಾಣ, ನಡುಪಟ್ಟಿ, ಬುಗುಡಿ, ಬಾವಲಿ, ಖಡೆ, ಬಿಲಾವರ, ಬಿಂದ್ಲಿ, ಪೋಚೆ ಇತ್ಯಾದಿ.

**೨. ಸಮಸ್ಯೆ(ಗಡಿ ಸಮಸ್ಯೆ: ಮಹಾಜನ ಆಯೋಗ):**

ಮಹಾರಾಷ್ಟ್ರ ಮತ್ತು ಕರ್ನಾಟಕದ ಮಧ್ಯದಲ್ಲಿರುವ ಗಡಿಸಮಸ್ಯೆಯನ್ನು ಪರಿಹರಿಸಲು ರಚನೆಗೊಂಡ ಮಹತ್ವದ ಮಹಾಜನ ಆಯೋಗವು ಎರಡೂ ರಾಜ್ಯಗಳ ಗಡಿ ಸಮಸ್ಯೆಗೆ ಐತಿಹಾಸಿಕ ತೀರ್ಪು ನೀಡಿತು. ಮಹಾರಾಷ್ಟ್ರ ಮುಖಂಡರ ಒತ್ತಡಕ್ಕೆ ಮಣಿದ ಅಂದಿನ ಕಾಂಗ್ರೆಸ್ ೧೯೬೬ರ ಮೇ ೨೩ರಂದು ನಡೆದ ಕಾರ್ಯಕಾರಿ ಸಮಿತಿ ಸಭೆಯಲ್ಲಿ ಮಹಾರಾಷ್ಟ್ರ, ಮೈಸೂರು ಮತ್ತು ಕೇರಳ ರಾಜ್ಯದ ಗಡಿ ವಿವಾದವನ್ನು ಅಂತಿಮವಾಗಿ ಬಗೆಹರಿಸಲು ಏಕಸದಸ್ಯ ಆಯೋಗ ರಚಿಸುವಂತೆ ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡಲು ನಿರ್ಣಯ ಕೈಕೊಳ್ಳಲಾಯಿತು. ಇದರಂತೆ ಕೇಂದ್ರ ಸರ್ಕಾರವು ಮೈಸೂರು ರಾಜ್ಯದ ವಿರೋಧದ ನಡುವೆಯೂ ಏಕಸದಸ್ಯ ಆಯೋಗ ರಚನೆಗೆ ನಿರ್ಧರಿಸಿತು. ೧೯೬೬ರ ಅಕ್ಟೋಬರ ೨೫ರಂದು ಸುಪ್ರೀಂಕೋರ್ಟ್‌ನ ನಿವೃತ್ತ ಮುಖ್ಯ ನ್ಯಾಯಮೂರ್ತಿ ಮೆಹರಚಂದ ಮಹಾಜನ ಏಕಸದಸ್ಯ ಆಯೋಗವನ್ನು ನೇಮಕ ಮಾಡಿ ಆದೇಶ ಹೊರಡಿಸಿದರು. ಈ ಆಯೋಗ ಸಂಬಂಧಪಟ್ಟ ರಾಜ್ಯಗಳ ಅಹವಾಲುಗಳನ್ನು ಪರಿಶೀಲಿಸಿ ತನ್ನ ಶಿಫಾರಸ್ಸುಗಳನ್ನು ಮಾಡಬೇಕು. ಸಾರ್ವಜನಿಕರಿಂದ ಅಭಿಪ್ರಾಯಗಳನ್ನು ಸಂಗ್ರಹಿಸಿ ಅಗತ್ಯ ದಾಖಲೆಗಳನ್ನು ಕಲೆಹಾಕಿ ಸಮಗ್ರವಾಗಿ ಅಧ್ಯಯನ ನಡೆಸಿದ ನಂತರವಷ್ಟೇ ಆಯೋಗ ತನ್ನ ಶಿಫಾರಸ್ಸುಗಳನ್ನು ಮಾಡಬೇಕು ಎಂದು ಕೇಂದ್ರ ಸರ್ಕಾರ ತನ್ನ ಅಧಿಸೂಚನೆಯಲ್ಲಿ ತಿಳಿಸಿತು.

ಕೇಂದ್ರ ಸರ್ಕಾರದ ಸೂಚನೆಯಂತೆ ಮಹಾಜನ ಆಯೋಗವು ೧೯೬೬ ನವೆಂಬರ ೧೫ ರಿಂದ ಅಧಿಕೃತವಾಗಿ ಕಾರ್ಯಾರಂಭ ಮಾಡಿತು. ಗಡಿವಿವಾದವನ್ನು ಕುರಿತು ಸಲಹೆ, ಮನವಿಗಳನ್ನು ನೀಡುವಂತೆ ಪತ್ರಿಕಾ ಹೇಳಿಕೆ ನೀಡಿ ಮೂರು ರಾಜ್ಯಗಳು ತಮ್ಮ ತಮ್ಮ ಹಕ್ಕುಗಳನ್ನು ಲಿಖಿತವಾಗಿ ಮಂಡಿಸಬೇಕು. ತಮ್ಮ ಹಕ್ಕು ಮಂಡನೆಗೆ ಪೂರಕವಾಗಿ ಅಂಕಿಅಂಶಗಳನ್ನು ಮತ್ತು ಉದ್ದೇಶಿತ ಗಡಿ ರೇಖೆ ನಕ್ಷೆಯನ್ನು ಒದಗಿಸಬೇಕೆಂದು ಆಯೋಗ ಮನವಿ ಮಾಡಿತು. ಅಲ್ಲದೆ ನ್ಯಾಯಮೂರ್ತಿ ಮಹಾಜನ ಅವರು ತಾವೇ ಸ್ವತಃ ಗಡಿ ಪ್ರದೇಶಗಳಿಗೆ ಭೇಟ್ಟಿ ನೀಡಿ ಅಲ್ಲಿನ ವಾಸ್ತವ ಸ್ಥಿತಿಯನ್ನು ಅರಿಯಲು ಪ್ರವಾಸ ಕೈಗೊಂಡರು.

೧೯೬೭ ಫೆಬ್ರುವರಿ ೨೩ ರಿಂದ ಬೆಳಗಾವಿನಗರ ಮತ್ತು ಸುತ್ತಮುತ್ತಲಿನ ಪಟ್ಟಣ ಪ್ರದೇಶಗಳಿಗೆ ಮಹಾಜನರು ಭೇಟ್ಟಿಕೊಟ್ಟರು. ಈ ಸಂದರ್ಭದಲ್ಲಿ ಸಾರ್ವಜನಿಕರು, ಸಂಘ-ಸಂಸ್ಥೆಗಳು ಮತ್ತು ಗಡಿವಿವಾದದಲ್ಲಿ ಆಸಕ್ತಿ ಹೊಂದಿರುವ ಎಲ್ಲರೂ ಆಯೋಗದ ಎದುರು ಹಾಜರಾಗಿ ಮನವಿ ಅಹವಾಲುಗಳನ್ನು ಸಲ್ಲಿಸಿದರು. ಈ ಸಂದರ್ಭದಲ್ಲಿ ಆಯೋಗವು ಜನರ ಸಂದರ್ಶನ ನಡೆಸಿ ಅಗತ್ಯ ಮಾಹಿತಿಗಳನ್ನು ಸಂಗ್ರಹಿಸಿತು. ಮಹಾರಾಷ್ಟ್ರ ಮತ್ತು ಮೈಸೂರು ರಾಜ್ಯಗಳು ಸರ್ಕಾರಗಳು ಬೆಳಗಾವಿಗೆ ಸಂಬಂಧಿಸಿದ ದಾಖಲೆಗಳನ್ನು ಹಾಜರೆ ಪಡಿಸಿದವು. ಬೆಳಗಾವಿ ನಗರದಲ್ಲಿ ೧೯೫೧ರ ಜನಗಣತಿ ಪ್ರಕಾರ ಶೇ. ೫೧-೨ರಷ್ಟು ಮರಾಠಿ ಭಾಷಿಕರಿದ್ದು ಈ ನಗರವನ್ನು ಹಸ್ತಾಂತರಿಸಬೇಕು ಎಂದು

ಮಹಾರಾಷ್ಟ್ರ ಬೇಡಿಕೆ ಮಂಡಿಸಿತು. ಆದರೆ ಈ ಬೇಡಿಕೆಗೆ ಮೈಸೂರು ರಾಜ್ಯ, ತೀವ್ರ ವಿರೋಧ ವ್ಯಕ್ತಪಡಿಸಿತು. ಬೆಳಗಾವಿ ನಗರ 'ಕಾಸ್ಮೋ ಪಾಲಿಟಿನ್' ಸ್ವರೂಪದ್ದಾಗಿದ್ದು, ಮರಾಠಿ ಭಾಷಿಕರು ಸ್ವಲ್ಪಮಟ್ಟಿಗೆ ಹೆಚ್ಚಿದ್ದಾರೆ. ಈ ಹಿನ್ನೆಲೆಯಲ್ಲಿ ಯಾವುದೇ ಕಾರಣಕ್ಕೂ ಬೆಳಗಾವಿ ನಗರವನ್ನು ಮೈಸೂರು ರಾಜ್ಯದಿಂದ ಮಹಾರಾಷ್ಟ್ರಕ್ಕೆ ಹಸ್ತಾಂತರಿಸಲು ಸಾಧ್ಯವಿಲ್ಲ ಎಂದು ಮೈಸೂರು ರಾಜ್ಯ ತನ್ನ ನಿಲುವನ್ನು ಸ್ಪಷ್ಟಪಡಿಸಿತು.

೧೯೫೭ರಲ್ಲಿ ಮುಂಬೈ ಸರ್ಕಾರವು ಕೇಂದ್ರ ಸರ್ಕಾರಕ್ಕೆ ಸಲ್ಲಿಸಿದ ಮನವಿಯಲ್ಲಿ ಬೆಳಗಾವಿ ನಗರ ಹಸ್ತಾಂತರಿಸಬೇಕು ಎಂಬ ಬೇಡಿಕೆ ಕುರಿತು ಬೆಳಗಾವಿ ನಗರದಲ್ಲಿ ಬಹುಸಂಖ್ಯಾತ ಮರಾಠಿ ಭಾಷಿಕರಿದ್ದಾರೆ. ಭೌಗೋಳಿಕವಾಗಿ ಈ ನಗರ ಮಹಾರಾಷ್ಟ್ರಕ್ಕೆ ಹೊಂದಿಕೊಂಡಿದೆ. ಇಲ್ಲಿಯ ಜನ ಸಾಮಾಜಿಕವಾಗಿ ಮಹಾರಾಷ್ಟ್ರದ ಜತೆಗೆ ಸಂಬಂಧ ಹೊಂದಿದ್ದಾರೆ. ಅಷ್ಟೇ ಅಲ್ಲ ಆರ್ಥಿಕ ಸಂಬಂಧಗಳನ್ನು ಹೊಂದಿದ್ದಾರೆ. ಈ ಎಲ್ಲಾ ಕಾರಣಗಳಿಗಾಗಿ ಬೆಳಗಾವಿಯನ್ನು ಮಹಾರಾಷ್ಟ್ರಕ್ಕೆ ಹಸ್ತಾಂತರಿಸಬೇಕು ಎಂದು ವಿವರಣೆ ನೀಡಿತು. ಬೆಳಗಾವಿ ಜಿಲ್ಲಾ ಕಾಂಗ್ರೆಸ್ ಸಮಿತಿ ಮನವಿ ಸಲ್ಲಿಸಿ ಯಥಾಸ್ಥಿತಿ ಕಾಯ್ದುಕೊಂಡು ಬರಬೇಕು ಎಂದು ಆಗ್ರಹಿಸಿತು.

ಬೆಳಗಾವಿ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್, ಬೆಳಗಾವಿ ಜಿಲ್ಲಾ ಕೈಗಾರಿಕಾ ಸಹಕಾರಿ ಬ್ಯಾಂಕ್, ಶಹಾಪೂರದ ಸರಾಫ ಸಂಘ, ಶ್ರೀ ನೇಮಿನಾಥ ದಿಗಂಬರ ಜೈನ ಮಂಡಳ, ಅಂಜುಮನ್ ಇಸ್ಲಾಂನ ಮಾಜಿ ಅಧ್ಯಕ್ಷ ಎಚ್. ಎ. ಧಾರವಾಡಕರ, ವಿದ್ಯಾರ್ಥಿ ಪ್ರಸಾದ ನಿಲಯ, ಕ್ಲಾಥ್ ಮರ್ಚಂಟ್ ಅಸೋಸಿಯೇಷನ್, ಕಾಂಟ್ರಾಕ್ಟರ್ ಅಸೋಸಿಯೇಷನ್, ಜನರಲ್ ಮರ್ಚಂಟ್ ಅಸೋಸಿಯೇಷನ್, ದಿ ಮೆಟಲ್ ಮರ್ಚಂಟ್ಸ್ ಅಸೋಸಿಯೇಷನ್, ದಿಗಂಬರ ಜೈನ ಬಸದಿಯ ಧರ್ಮದರ್ಶಿಗಳು ಅಲ್ಲದೇ ಹಲವಾರು ಜನರು ವೈಯಕ್ತಿಕ ಮನವಿಗಳನ್ನು ಸಲ್ಲಿಸಿ ಯಥಾಸ್ಥಿತಿ ಮುಂದುವರೆಸಬೇಕು ಮತ್ತು ಸಧ್ಯದ ಗಡಿವಿವಾದವನ್ನು ಪರಿಗಣನೆಗೆ ತೆಗೆದುಕೊಳ್ಳಬಾರದು. ಏಕೆಂದರೆ ಈ ಸಮಸ್ಯೆಯನ್ನು ರಾಜ್ಯ ಪುನರ್ ವಿಂಗಡಣಾ ಆಯೋಗ ಶಾಶ್ವತವಾಗಿ ಬಗೆಹರಿಸಿದೆ ಎಂದು ವಿವರಿಸಿದರು.

**ಮಹಾಜನ ಆಯೋಗದ ವರದಿ:** ೧೯೬೭ರ ಅಗಸ್ಟ್ ೨೫ರಂದು ನ್ಯಾಯಮೂರ್ತಿ ಮಹಾಜನ ಅವರು ತಮ್ಮ ಶಿಫಾರಸ್ಸುಗಳನ್ನೊಳಗೊಂಡ ವರದಿಯನ್ನು ಕೇಂದ್ರದ ಗೃಹಖಾತೆಗೆ ಸಲ್ಲಿಸಿದರು. ಆ ವರದಿಯ ಪ್ರಕಾರ ಬೆಳಗಾವಿಗೆ ಸಂಬಂಧಿಸಿದ ಪ್ರಮುಖ ಸಾರಾಂಶ ಈ ರೀತಿ ಇದೆ:

'ಅತ್ಯಂತ ವಿವಾದಾತ್ಮಕವಾದ ಬೆಳಗಾವಿ ನಗರದ ಕುರಿತು ಎರಡೂ ಕಡೆಯ ವಾದ ಪ್ರತಿವಾದಗಳನ್ನು ಆಲಿಸಿದ ಮೇಲೆ ಈ ವಿಷಯಕ್ಕೆ ಸಂಬಂಧಿಸಿದಂತೆ ಸಲ್ಲಿಸಲಾಗಿರುವ ಅಹವಾಲುಗಳು, ಮನವಿ ಪತ್ರಗಳನ್ನು ಅತ್ಯಂತ ಕಾಳಜಿಪೂರ್ವಕವಾಗಿ ಪರಿಶೀಲಿಸಿದ ನಂತರ ಶಹಾಪುರವನ್ನು ಕಂಟೋನ್ಮೆಂಟ್ ಸಹಿತ ಬೆಳಗಾವಿಯನ್ನು ಮಹಾರಾಷ್ಟ್ರಕ್ಕೆ ಸೇರ್ಪಡೆ ಮಾಡುವಂತೆ ನಾನು ಶಿಫಾರಸ್ಸು ಮಾಡಲು ಸಾಧ್ಯವಿಲ್ಲ. ಇಡೀ ವಿವಾದವನ್ನು ಸಮಗ್ರವಾಗಿ ಮತ್ತು ವಸ್ತುನಿಷ್ಠವಾಗಿ ಪರಿಶೀಲಿಸಿದ ನಂತರವೇ ನಾನು ಈ ತೀರ್ಮಾನಕ್ಕೆ ಬಂದಿದ್ದೇನೆ.'

ಮರಾಠಿ ಭಾಷಿಕ ಜನರು ಸ್ವಲ್ಪ ಮಟ್ಟಿನ ಬಹುಮತ ಹೊಂದಿದ್ದಾರೆ ಎಂಬ ಕಾರಣಕ್ಕೆ ಬೆಳಗಾವಿ ನಗರವನ್ನು ಹಸ್ತಾಂತರಿಸಲಾಗದು. ಈ ಜನಸಂಖ್ಯೆ ಹೆಚ್ಚು ಕಡಿಮೆ ಕೂಡ ಆಗಿದೆ. ಸಾಮಾನ್ಯವಾಗಿ ನಾನು ಯಾವುದೇ ಒಂದು ಪ್ರದೇಶವನ್ನು ಹಸ್ತಾಂತರಿಸಲು ಶಿಫಾರಸ್ಸು ಮಾಡಿದ್ದರೆ ಅದರ ಜನಸಂಖ್ಯೆ ಕನಿಷ್ಠ ಶೇ. ೬೦ಕ್ಕಿಂತ ಕಡಿಮೆಯಿಲ್ಲ. ಅಷ್ಟೇ ಅಲ್ಲ ಎಷ್ಟೋ ಸಂದರ್ಭದಲ್ಲಿ ಅದು ಶೇ. ೮೦ರಷ್ಟಿದೆ. ಈ ತತ್ವವನ್ನು ಬೆಳಗಾವಿ ನಗರದ ಸಮಸ್ಯೆಯ ಇತ್ಯರ್ಥಕ್ಕೆ ಅನ್ವಯಿಸಿದಾಗ ಮಹಾರಾಷ್ಟ್ರದ ಬೇಡಿಕೆಯನ್ನು ಈಡೇರಿಸಲು ಸಾಧ್ಯವಿಲ್ಲ. ನಗರದಲ್ಲಿ ಮರಾಠಿ ಭಾಷಿಕರ ಜನಸಂಖ್ಯೆ ಶೇ. ೪೬ ಮಾತ್ರ. ಆದರೆ ಸುತ್ತಮುತ್ತಲಿನ ಮರಾಠಿ ಭಾಷಿಕ ಹಳ್ಳಿಗಳನ್ನು ಸೇರಿಸಿದರೂ ಈ ಜನಸಂಖ್ಯೆ ಶೇ. ೪೭ರಷ್ಟಾಗುತ್ತದೆ. ಭೌಗೋಳಿಕವಾಗಿ ಬೆಳಗಾವಿ ಪಶ್ಚಿಮದಲ್ಲಿ ಮರಾಠಿ ಭಾಷಿಕ ಹಳ್ಳಿಗಳಿಗೆ ಹೊಂದಿಕೊಂಡಿದೆ. ಆದರೆ ಉಳಿದ ಮೂರು ದಿಕ್ಕುಗಳಲ್ಲಿ ಕನ್ನಡದ ಹಳ್ಳಿಗಳೊಂದಿಗೆ ಹೊಂದಿಕೊಂಡಿದೆ.

ಬೆಳಗಾವಿಯ ಮರಾಠಿ ಜನರಿಗೆ ಈ ಗಡಿವಿವಾದದಲ್ಲಿ ಆಸಕ್ತಿಯೇ ಇಲ್ಲ. ಇದು ಕೇವಲ ರಾಜಕೀಯ ಕಾರ್ಯಕರ್ತರು ಹುಟ್ಟು ಹಾಕಿದ ಸಮಸ್ಯೆ. ಬೆಳಗಾವಿ ಮತ್ತು ಇತರ ಕೆಲವು ಪ್ರದೇಶಗಳನ್ನು ಮಹಾರಾಷ್ಟ್ರಕ್ಕೆ ಸೇರಿಸಬೇಕು ಎಂಬ ಹಠದಿಂದ ಚಳವಳಿ ಆರಂಭಿಸಿರುವ ಮಹಾರಾಷ್ಟ್ರ ಏಕೀಕರಣ ಸಮಿತಿ ಕಾರ್ಯಕರ್ತರು ಭಾಷಾಭಿಮಾನದ ದುರುಪಯೋಗ ಮಾಡಿಕೊಂಡು ಅಶಾಂತಿ ಹುಟ್ಟು ಹಾಕುತ್ತಿದ್ದಾರೆ.'

ಖಾನಾಪೂರ, ಬೆಳಗಾವಿ, ಧಾರವಾಡ ಜಿಲ್ಲೆಯ ಪ್ರದೇಶಕ್ಕೆ ನೀರಾವರಿ ಯೋಜನೆಯನ್ನು ಕೈಗೊಳ್ಳಬಹುದಾಗಿದೆ. ಈ ಪ್ರದೇಶವು ಮಹಾಜನ ವರದಿಯ ಪ್ರಕಾರ ಮಹಾರಾಷ್ಟ್ರಕ್ಕೆ ಸೇರುತ್ತದೆ.

ರಕ್ಕಸಕೊಪ್ಪ ಕೆರೆಯ ಬೆಳಗಾವಿ ನಗರಕ್ಕೆ ನೀರು ಪೂರೈಸುವ ಪ್ರಮುಖ ಆಧಾರವಾಗಿದೆ. ಇದು ಮಹಾರಾಷ್ಟ್ರಕ್ಕೆ ಸೇರುವುದರಿಂದ ಬೆಳಗಾವಿ ನಗರಕ್ಕೆ ನೀರಿನ ತೊಂದರೆಯಾಗುತ್ತದೆ. ಐತಿಹಾಸಿಕ ಮಹತ್ವವನ್ನು ಹೊಂದಿದ ಹಿಂಡಲಗಾ ಜೈಲು ಕೈ ತಪ್ಪಿ ಹೋಗುತ್ತದೆ.

ಇನ್ನು ಮಹಾಜನ ವರದಿಯಂತೆ ಕರ್ನಾಟಕಕ್ಕೆ ಸೇರ್ಪಡೆಯಾಗುವ ೨೪೯ ಹಳ್ಳಿಗಳಿಂದ ಕರ್ನಾಟಕಕ್ಕೆ ಯಾವುದೇ ರೀತಿಯ ಲಾಭವಿಲ್ಲ. ಶ್ರೀ ಮಹದೇವ ಬಣಕಾರರು ಈ ವಿಷಯವನ್ನು ಈ ರೀತಿಯಾಗಿ ಹೇಳಿದ್ದಾರೆ: "ಈ ಭಾಗಗಳನ್ನು ಮಹಾಜನ್ ಅವರು ಮಹಾರಾಷ್ಟ್ರದಿಂದ ಕರ್ನಾಟಕಕ್ಕೆ ವರ್ಗಾಯಿಸುವ ಶಿಫಾರಸ್ಸು ಮಾಡಿದ್ದಾರೆ ಎನ್ನುವುದಕ್ಕಿಂತ ಮಹಾರಾಷ್ಟ್ರೀಯರೇ ಬಿಟ್ಟು ಕೊಟ್ಟಿದ್ದಾರೆ ಎನ್ನುವುದು ಹೆಚ್ಚು ಸೂಕ್ತ"[೪] ಎಂದು ಹೇಳಿದುದರಲ್ಲಿ ಸತ್ಯಾಂಶವಿದೆ.

ಕರ್ನಾಟಕದ ಮುಖ್ಯಮಂತ್ರಿ ಎಸ್. ನಿಜಲಿಂಗಪ್ಪ ಅವರು ಅರೆ ಮನಸ್ಸಿನಿಂದ ಒಪ್ಪುವುದರಿಂದ ಉಂಟಾಗುವ ಆರ್ಥಿಕ ಸಾಧಕ–ಬಾಧಕಗಳನ್ನು ಪರಿಗಣಿಸುತ್ತ ಕೇರಳದ ಗಡಿಸಮಸ್ಯೆಯನ್ನು ಸಹ ಮಹಾಜನ ಆಯೋಗಕ್ಕೆ ಒಪ್ಪಿಸಬೇಕು

ಎನ್ನುವ ಕರಾರಿನೊಂದಿಗೆ ತನ್ನ ಒಪ್ಪಿಗೆಯನ್ನು ಸೂಚಿಸಿದ್ದರು. ನ್ಯಾಯಮೂರ್ತಿ ಮಹಾಜನ ಮೂರು ರಾಜ್ಯಗಳ ಗಡಿಪ್ರದೇಶಗಳಲ್ಲಿ ವ್ಯಾಪಕ ಪ್ರವಾಸ ಮಾಡಿ ಒಟ್ಟು ೭೫೧೨ ಜನರನ್ನು ಸಂದರ್ಶಿಸಿ ೨೨೪೦ ಸಂಸ್ಥೆಗಳಿಂದ ಮನವಿಪತ್ರ ಸಂಗ್ರಹಿಸಿದರು.

ಮಹಾಜನ ವರದಿಯು ಬಂದ ಬಳಿಕ ಮಹಾರಾಷ್ಟ್ರವು ಹೊಸರಾಗವನ್ನು ತೆಗೆಯಿತು. ಮಹಾಜನ ವರದಿಯನ್ನು ಸಂಪೂರ್ಣವಾಗಿ ತಿರಸ್ಕರಿಸಿತು. ವರದಿಯ ಪ್ರತಿಗಳನ್ನು ಮತ್ತು ಮಹಾಜನರ ಪ್ರತಿಕೃತಿಯನ್ನು ಸುಟ್ಟು ಹಾಕಿದರು. ಮಹಾರಾಷ್ಟ್ರದ ತುಂಬೆಲ್ಲಾ ಗಲಭೆಗಳಾದವು. ಮಹಾರಾಷ್ಟ್ರದಲ್ಲಿಯ ಕನ್ನಡಿಗರಿಗೆ ತೊಂದರೆ ಕೊಡತೊಡಗಿದರು. ಗಲಭೆಗಳಲ್ಲಿ ಹಲವಾರು ಜನ ಕನ್ನಡಿಗರು ಪ್ರಾಣಕಳೆದುಕೊಂಡರು.

ಇಂದು ಬೆಳಗಾವಿಯ ಸ್ಥಿತಿಗತಿ ಬದಲಾಗಿದೆ. ಎಂ.ಇ.ಎಸ್. ಸಂಘಟನೆ ಕ್ರಮೇಣ ಸೊರಗುತ್ತಿದೆ. ಪ್ರತಿ ವಿಧಾನಸಭೆಯ ಚುನಾವಣೆಯಲ್ಲಿ ಮೂರು, ನಾಲ್ಕು ಜನರು ವಿಧಾನಸಭೆಗೆ ಆಯ್ಕೆಯಾಗಿ ಹೋಗುತ್ತಿದ್ದರು. ಈಗ ಕಳೆದ ಮೂರು ನಾಲ್ಕು ಚುನಾವಣೆಯಲ್ಲಿ ಒಬ್ಬರು ಆಯ್ಕೆಯಾಗುತ್ತಿಲ್ಲ. ನಗರಸಭೆಯಲ್ಲಿ ಕನ್ನಡ ನಗರ ಸೇವಕರ ಸಂಖ್ಯೆ ಹೆಚ್ಚಾಗಿದೆ. ಕನ್ನಡಿಗರಲ್ಲಿ ಸಂಘಟನೆ ಉಂಟಾಗಿ ನಗರಸಭೆಯ ಆಡಳಿತವನ್ನು ಎಂ.ಇ.ಎಸ್. ನಿಂದ ಕಸಿದುಕೊಂಡು ತಾವೇ ಆಡಳಿತ ನಡೆಸುತ್ತಿದ್ದಾರೆ. ಕರ್ನಾಟಕ ಸರ್ಕಾರವೂ ಈಗ ಬೆಳಗಾವಿಯ ಅಭಿವೃದ್ಧಿಗಾಗಿ ಹಲವಾರು ಕಾರ್ಯ ಯೋಜನೆಗಳನ್ನು ರೂಪಿಸಿ ಕಾರ್ಯಗತಗೊಳಿಸಿದೆ. ಎರಡು ಬಾರಿ ವಿಧಾನ ಮಂಡಲ ಅಧಿವೇಶನ ಬೆಳಗಾವಿಯಲ್ಲಿ ನಡೆದು ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿದೆ. ಶಾಶ್ವತವಾಗಿ ಪ್ರತಿವರ್ಷ ಅಧಿವೇಶನ ನಡೆಸಲು ಬೆಳಗಾವಿ ಹೊರವಲಯದಲ್ಲಿ ನೂರಾರು ಕೋಟಿ ರೂಪಾಯಿಯ ಭವ್ಯವಾದ ವಿಧಾನಸೌಧ ನಿರ್ಮಾಣಗೊಂಡಿದೆ. ಅಲ್ಲದೆ ಎರಡನೆಯ ವಿಶ್ವಕನ್ನಡ ಸಮ್ಮೇಳನ ಬೆಳಗಾವಿಯಲ್ಲಿ ಜರುಗಿ ಕನ್ನಡಿಗರ ಶಕ್ತಿ ಪ್ರದರ್ಶನಗೊಂಡಿತು. ಐದು ಬಾರಿ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ, ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನ, ತಾಲೂಕು ಕನ್ನಡ ಸಾಹಿತ್ಯ ಸಮ್ಮೇಳನ, ಚುಟುಕು ಕನ್ನಡ ಸಾಹಿತ್ಯ ಸಮ್ಮೇಳನ, ಶರಣ ಸಾಹಿತ್ಯ ಸಮ್ಮೇಳನ, ಅಖಿಲ ಭಾರತ ವೀರಶೈವ ಸಾಹಿತ್ಯ ಸಮ್ಮೇಳನ, ರಾಜ್ಯ ಮಟ್ಟದ ಶಿಕ್ಷಕರ ಪ್ರಶಸ್ತಿ ಪ್ರಧಾನ ಸಮಾರಂಭ, ಅಲ್ಲದೆ ನಿರಂತರವಾಗಿ ನಡೆದುಕೊಂಡು ಬರುತ್ತಿರುವ ಕನ್ನಡ ಸಂಘ-ಸಂಸ್ಥೆಗಳ ಕಾರ್ಯಕ್ರಮಗಳು. ಪುಸ್ತಕ ಬಿಡುಗಡೆ, ಕವಿಗೋಷ್ಠಿ, ಉಪನ್ಯಾಸ ಕಾರ್ಯಕ್ರಮಗಳು ಬೆಳಗಾವಿಯಲ್ಲಿ ಕನ್ನಡ ವಾತಾವರಣವನ್ನು ಮೂಡಿಸಿದೆ. ಇದರಿಂದ ಬೆಳಗಾವಿ ಕನ್ನಡಿಗರಲ್ಲಿ ಆತ್ಮವಿಶ್ವಾಸ ಮೂಡಿದೆ. ಇವೆಲ್ಲಕ್ಕಿಂತ ಹೆಚ್ಚಾಗಿ ಬೆಳಗಾವಿಯಲ್ಲಿ ಮೂರು ವಿಶ್ವವಿದ್ಯಾಲಯಗಳು ಸ್ಥಾಪನೆಗೊಂಡಿವೆ. (ಸರ್. ಎಂ. ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ, ರಾಣಿ ಚೆನ್ನಮ್ಮ ವಿಶ್ವವಿದ್ಯಾಲಯ, ಕೆ.ಎಲ್.ಇ. ಸಂಸ್ಥೆಯ ಸ್ವಾಯತ್ತ ವಿಶ್ವವಿದ್ಯಾಲಯ) ಇವು ಬೆಳಗಾವಿಯು ಕರ್ನಾಟಕದ ಹೃದಯಭಾಗ ಎಂಬುದನ್ನು ದೃಢಪಡಿಸಿವೆ. ಅಲ್ಲದೆ ಹತ್ತಾರು ಕನ್ನಡ ಪತ್ರಿಕೆಗಳು, ಪ್ರಕಾಶನಗಳು, ರಂಗ,

ಚಲನಚಿತ್ರ ಮಂದಿರಗಳು ಬೆಳಗಾವಿಯಲ್ಲಿ ಕನ್ನಡ ಸಂಸ್ಕೃತಿಯನ್ನು ಉಳಿಸಿ ಬೆಳೆಸುತ್ತಿವೆ. ಈ ಎಲ್ಲ ಹಿನ್ನೆಲೆಯಲ್ಲಿ ಬೆಳಗಾವಿ ಕರ್ನಾಟಕದ ಅವಿಭಾಜ್ಯ ಅಂಗವೆಂಬುದು ದೃಢಪಟ್ಟಿದೆ. ಇಂಥದೊಂದು ಕನ್ನಡಪರ ವಾಸ್ತವವನ್ನು ಹಿಂದೆಯೇ ಮಹಾಜನ ಅವರು ಅರಿತಿದ್ದರು ಎಂಬುದು ಚಾರಿತ್ರಿಕ ಸತ್ಯವಾಗಿದೆ. ಈಗ ಬೆಳಗಾವಿಯಲ್ಲಿ ಮರಾಠಿಗರ ಸಂಖ್ಯೆ ಪ್ರತಿಶತ ೨೪ರಷ್ಟಿದೆ. ಕನ್ನಡಿಗರು ಪ್ರತಿಶತ ೫೦ರಷ್ಟಿದ್ದಾರೆ. ಇನ್ನುಳಿದವರು ಪ್ರತಿಶತ ೧೬ರಷ್ಟಿದ್ದಾರೆ. ಮಹಾರಾಷ್ಟ್ರದ ಹಲವಾರು ಪ್ರದೇಶಗಳಲ್ಲಿಯೂ ಕನ್ನಡಿಗರು ಶೇಕಡಾ ೨೪ ಕ್ಕಿಂತ ಹೆಚ್ಚಿಗಿದ್ದಾರೆ. ಅವರೆಲ್ಲರೂ ಮಹಾರಾಷ್ಟ್ರದ ರೀತಿ-ನೀತಿ ನಿಯಮದ ಪ್ರಕಾರ ಬದುಕುತ್ತಿದ್ದಾರೆ. ಬೆಳಗಾವಿಯ ಮರಾಠಿಗರೂ ಇದನ್ನು ಅರಿತುಕೊಂಡು ಸಾಮರಸ್ಯದಿಂದ ಜೀವನ ಸಾಗಿಸಬೇಕಾಗಿರುವುದು ಅನಿವಾರ್ಯವಾಗಿದೆ.

## ಆ. ಸಾಹಿತ್ಯ

ಕರ್ನಾಟಕದ ಚರಿತ್ರೆಯಲ್ಲಿ ಮಹತ್ವದ ಸ್ಥಾನವನ್ನು ಹೊಂದಿದ ಬೆಳಗಾವಿಯು ದೇಶದ ವಿಶಿಷ್ಟ ನಗರಗಳಲ್ಲಿ ಒಂದಾಗಿದೆ. ಕಲೆ, ಸಂಸ್ಕೃತಿ, ಸಾಹಿತ್ಯ, ಧರ್ಮ, ಭಾಷೆ, ಆಚರಣೆ, ನಂಜಿಕೆ ಮುಂತಾದವುಗಳಲ್ಲಿ ವೈವಿಧ್ಯತೆಯನ್ನು ಹೊಂದಿದ ನಗರ ಬೆಳಗಾವಿ. ಭಾಷೆ ಸಾಮರಸ್ಯತೆ, ಧರ್ಮಸಹಿಷ್ಣತೆಗೆ ಬೆಳಗಾವಿ ಪ್ರಾಚೀನ ಕಾಲದಿಂದಲೂ ಹೆಸರಾಗಿದೆ. ಹಲವು ಭಾಷೆ, ಧರ್ಮಗಳ ಸಮ್ಮಿಳನದಿಂದ ವಿಶಿಷ್ಟ ಸಂಸ್ಕೃತಿಯನ್ನು ಬೆಳಗಾವಿಯಲ್ಲಿ ಕಾಣಬಹುದಾಗಿದೆ. ಕರ್ನಾಟಕದ ಪ್ರತಿಯೊಂದು ಬದಲಾವಣೆಗಳಿಗೆ ಬೆಳಗಾವಿ ಸ್ಪಂದಿಸಿ ಕನ್ನಡ ಸಂಸ್ಕೃತಿಯನ್ನು ಉಳಿಸಿ ಬೆಳೆಸಿಕೊಂಡು ಬಂದಿದೆ. ಇಲ್ಲಿಯ ಮೂಲ ನಿವಾಸಿಗಳಾದ ಕನ್ನಡಿಗರು ಕಾರಣಾಂತರಗಳಿಂದ ಆಗಮಿಸಿದ ಮರಾಠಿಗರನ್ನು ಅವರ ಭಾಷೆ, ಸಂಸ್ಕೃತಿಯನ್ನು ಪ್ರೀತಿಯಿಂದ ಸ್ವೀಕರಿಸಿ ತಮ್ಮ ಸಂಸ್ಕೃತಿಯನ್ನು ಅವರೊಡನೆ ಹಂಚಿಕೊಂಡು ಸೌಹಾರ್ದತೆಯ ಸಮಾಜ ನಿರ್ಮಾಣಕ್ಕೆ ಕಾರಣರಾಗಿದ್ದಾರೆ. ಆಗಾಗ ಭಾಷಾಗೊಂದಲ ಉಂಟಾದರೂ ಮತ್ತೇ ಮರುದಿನ ಏನೂ ನಡೆದೇ ಇಲ್ಲ ಎನ್ನುವಂತೆ ಎರಡೂ ಭಾಷೆಯವರ ಬದುಕು ಕೂಡಿಯೇ ಸಾಗುತ್ತದೆ. ಇದೇ ಬೆಳಗಾವಿಯ ವಿಶಿಷ್ಟ ಸಂಸ್ಕೃತಿ. ಈ ಸಂಸ್ಕೃತಿಯೇ ಬೆಳಗಾವಿಯನ್ನು ಬೆಳಗುತ್ತಿದೆ.

ಇಂತಹ ಸಂಸ್ಕೃತಿಯ ನಿರ್ಮಿತಿಗೆ ಕಾರಣಗಳು ಹಲವು. ಇತಿಹಾಸ, ಧರ್ಮ, ಸಮಾಜ, ಕಲೆ, ಶಿಕ್ಷಣ, ರಂಗಭೂಮಿ, ಸಾಹಿತ್ಯ-ಈ ಎಲ್ಲ ವಲಯಗಳಲ್ಲಿ ಉಂಟಾದ ಬದಲಾವಣೆಗಳು, ಬೆಳವಣಿಗೆಗಳು, ವಿನಿಮಯಗಳು ಬೆಳಗಾವಿಯನ್ನು ವಿಭಿನ್ನ ಸಂಸ್ಕೃತಿಯ ನೆಲೆಯನ್ನಾಗಿಸಿವೆ. ಕನ್ನಡ ನಾಡಿನಲ್ಲಿ ಒಂದು ಸಾಂಸ್ಕೃತಿಕ ನೆಲೆಗಟ್ಟನ್ನು ಪಡೆದ ಬೆಳಗಾವಿಯಲ್ಲಿ ನೆಲೆಗೊಂಡ ಸಾಹಿತಿಗಳು ಸಾಹಿತ್ಯವೂ ವೈಶಿಷ್ಟ್ಯಪೂರ್ಣವಾಗಿದೆ. ಅಂತೆಯೇ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಬೆಳಗಾವಿಗೆ ಮಹತ್ವದ ಸ್ಥಾನವಿದೆ. ಇಲ್ಲಿಯ ಸಾಹಿತ್ಯವನ್ನು ಪ್ರಾಚೀನ ಸಾಹಿತ್ಯ ಮತ್ತು ಆಧುನಿಕ ಸಾಹಿತ್ಯ ವೆಂದು ವಿಭಾಗಿಸಿಕೊಂಡು ಮುಂದುವರಿಯಲಾಗಿದೆ.

೧. **ಪ್ರಾಚೀನ ಸಾಹಿತ್ಯ :** ಕಾವೇರಿಯಿಂದ ಗೋದಾವರಿಯವರೆಗೆ ಹರಡಿದ್ದ ವಿಶಾಲ ಕರ್ನಾಟಕದ ಮಧ್ಯದ ಭಾಗವಾದ ಒಕ್ಕುಂದವು ಕವಿರಾಜಮಾರ್ಗಕಾರನಿಂದ ಉಲ್ಲೇಖಿತವಾಗಿದೆ. ಈ ಒಕ್ಕುಂದವು ಬೆಳಗಾವಿ ಜಿಲ್ಲೆಯಲ್ಲಿರುವುದು ವಿಶೇಷವಾಗಿದೆ. ಪಂಪ ಹೆಸರಿಸುವ ಕನ್ನಡದ 'ತಿರುಳ್' ಪ್ರದೇಶವೂ ಬೆಳಗಾವಿ ನಾಡನ್ನು ಒಳಗೊಂಡಿರುವುದು ಬೆಳಗಾವಿ ಭಾಗದ ಮಹತ್ವವನ್ನು ಸೂಚಿಸುತ್ತದೆ.

ಪ್ರಾಚೀನ ಕಾಲದಿಂದಲೂ ಸಾಹಿತ್ಯ ರಚನೆಯ ಕಾರ್ಯ ಬೆಳಗಾವಿಯಲ್ಲಿ ನಡೆದದ್ದು ಕಂಡುಬರುತ್ತದೆ. ರಾಜರ ಆಳ್ವಿಕೆಯ ಕಾಲದಲ್ಲಿ ರಟ್ಟರನ್ನು ಹೊರತುಪಡಿಸಿ ಉಳಿದ ಯಾವ ರಾಜರೂ ಬೆಳಗಾವಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಲಿಲ್ಲ. ಹೀಗಾಗಿ ರಾಜರ ಆಶ್ರಯವಿಲ್ಲದೆ ಸಾಹಿತ್ಯ ಬೆಳವಣಿಗೆಯನ್ನು ಕಾಣಲಿಲ್ಲ. ಆದರೆ ಬೆಳಗಾವಿ ಜಿಲ್ಲೆಯ ಸಾಹಿತ್ಯವನ್ನು ಇಡಿಯಾಗಿ ನೋಡಿದಾಗ ಮಹತ್ವದ ಕಾವ್ಯಕೃತಿಗಳು ರಚನೆಗೊಂಡಿದೆ. ಹೊಸಗನ್ನಡದ ಅವಧಿಯಲ್ಲಿ ಬೆಳಗಾವಿಯಲ್ಲಿ ಮಹತ್ವದ ಕೃತಿಗಳು ರಚನೆಗೊಂಡವು. ಕಾವ್ಯ, ಕಾದಂಬರಿ, ಕಥೆ, ನಾಟಕ ರಚನೆಯಂತೆಯೇ ಶಾಸ್ತ್ರ ರಚನೆಯಲ್ಲಿಯೂ ಮಹತ್ವದ ಕಾರ್ಯ ನಡೆದು ಪಂಡಿತ ಪರಂಪರೆಯೇ ನಿರ್ಮಾಣವಾಗಿದ್ದನ್ನು ಕಾಣಬಹುದು. ಗ್ರಂಥಸಂಪಾದನೆ, ಶಾಸನಗಳ ಅಧ್ಯಯನ, ವ್ಯಾಕರಣ, ಭಾಷಾ ಚರಿತ್ರೆ, ಛಂದಸ್ಸು ಮತ್ತು ಕನ್ನಡ ಸಂಸ್ಕೃತಿಯ ಶೋಧ ಕುರಿತು ಸಾಹಿತ್ಯ ರಚನೆಗೊಂಡಿತು.

ಪ್ರಾಚೀನ ಬೆಳಗಾವಿಯ ಇತಿಹಾಸದಲ್ಲಿ ಸಾಹಿತ್ಯಿಕ ಅಂಶಗಳನ್ನು ಒಳಗೊಂಡ ಕೆಲವು ದಾಖಲೆಗಳು ದೊರೆಯುತ್ತವೆ. ಕ್ರಿ. ಪೂ. ಒಂದನೆಯ ಶತಮಾನದಲ್ಲಿ ಆಳ್ವಿಕೆ ನಡೆಸಿದ ಶಾತವಾಹನರ ಕಾಲದ ಪ್ರಾಕೃತ ಭಾಷೆಯ ಯೂಪ ಸ್ತಂಭವು ರಾಜಕೀಯವಾಗಿ, ಧಾರ್ಮಿಕವಾಗಿ ಮಹತ್ವವನ್ನು ಪಡೆದುಕೊಂಡಂತೆ ಸಾಹಿತ್ಯಿಕವಾಗಿಯೂ ಹಲವಾರು ಮಹತ್ವದ ವಿಷಯಗಳನ್ನು ತಿಳಿಸಿಕೊಡುತ್ತದೆ. ಪ್ರಾಚೀನ ಬೆಳಗಾವಿಯಲ್ಲಿ ಪ್ರಾಕೃತ ಭಾಷೆಯ ಸಾಹಿತ್ಯ ರಚನೆಗೊಂಡಿರುವ ಸಾಧ್ಯತೆಯಿದೆ. ಶಾಸನಗಳೂ ಕೂಡ ಸಾಹಿತ್ಯಿಕವಾಗಿಯೇ ರಚನೆಗೊಳ್ಳುವುದರಿಂದ ಶಾಸನ ಸಾಹಿತ್ಯವೆಂದೇ ಅದು ಮಾನ್ಯವಾಗಿದೆ.

ಪ್ರಾಚೀನ ಬೆಳಗಾವಿಯ ಸಾಹಿತ್ಯದ ಮೇಲೆ ಬೆಳಕು ಚೆಲ್ಲುವ ಮತ್ತೊಂದು ಮಹತ್ವದ ದಾಖಲೆ 'ಪ್ಲೀನಿ' ಎಂಬ ವಿದೇಶಿ ಪ್ರವಾಸಿಯಿಂದ ಒದಗುತ್ತದೆ. ಕ್ರಿ. ಶ. ೨ ಅಥವಾ ೩ನೆಯ ಶತಮಾನದಲ್ಲಿ ಭಾರತಕ್ಕೆ ಭೇಟ್ಟಿ ನೀಡಿದ ಈತ ದೇಶವನ್ನು ಸಂಚರಿಸುತ್ತ ಕರ್ನಾಟಕದ ಹಲವಾರು ಪ್ರದೇಶಗಳನ್ನು ಸಂದರ್ಶಿಸಿ ಬೆಳಗಾವಿಗೆ (ವೇಣುಗ್ರಾಮ) ಬರುತ್ತಾನೆ. ಈತನ ಉಲ್ಲೇಖದಿಂದ ತಿಳಿದು ಬರುವ ವಿಷಯವೆಂದರೆ ಅಂದು ಬೆಳಗಾವಿಯು ಬಿದಿರು ಬೆಟ್ಟಗಳಿಂದ ಸುತ್ತುವರಿದಿದ್ದು 'ವೇಣುಗ್ರಾಮ'ವೆಂದು ಹೆಸರು ಪಡೆದಿತ್ತು. ಇಲ್ಲಿನ್ನ ಬ್ರಾಹ್ಮಣರು ಗಲಗಿನಿಂದ ವೇದಗಳ ನಕಲು (ಪ್ರತಿ)ಗಳನ್ನು ತಯಾರಿಸುತ್ತಿದ್ದರು ಎನ್ನುವುದನ್ನು 'ಪ್ಲೀನಿ' ಉಲ್ಲೇಖಿಸಿದ್ದಾನೆ.[೫]

ಶಾತವಾಹನರ ಕಾಲದ ವಡಗಾವಿ ಮಾಧವಪುರದಲ್ಲಿ ದೊರೆತ ಪ್ರಾಕೃತಶಾಸನ ಮತ್ತು 'ಪ್ಲೀನಿ'ಯ ಹೇಳಿಕೆಗಳನ್ನು ಗಮನಿಸಿದಾಗ ಶಾತವಾಹನರ ಕಾಲದಲ್ಲಿದ್ದ ಪ್ರಾಕೃತ ಭಾಷೆಯು ಆಡಳಿತ ಭಾಷೆಯಾಗಿ ಪ್ರಭುತ್ವವನ್ನು ಪಡೆದುಕೊಂಡು ಮುಂದೆ ಎರಡು–ಮೂರನೆಯ ಶತಮಾನದ ಹೊತ್ತಿಗೆ ಸಂಸ್ಕೃತ ಭಾಷೆಯು ಬೆಳೆದು ಬಂದದ್ದು ಕಂಡುಬರುತ್ತದೆ. ವೇದಗಳ ಪ್ರತಿ ಮಾಡುವ ಕಾರ್ಯವೂ ಸಾಹಿತ್ಯಿಕ ಅಂಶಗಳನ್ನು ಒಳಗೊಂಡಿರುವುದರಿಂದ ಈ ಕಾರ್ಯದಲ್ಲಿ ತೊಡಗಿದವರು ಪಂಡಿತರಾಗಿದ್ದರು ಎನ್ನುವುದನ್ನು ಊಹಿಸಬಹುದಾಗಿದೆ.

ಕುಂತಳದೇಶದ ಕುಹೂಂಡಿ ಮಂಡಲವು ಮೂರು ಸಾವಿರ ಹಳ್ಳಿಗಳ ಒಂದು ನಾಡು. ಆ ನಾಡನ್ನು ರಟ್ಟರು ಕ್ರಿ. ಶ. ಸುಮಾರು ೯೩೦ ರಿಂದ ೧೨೩೦ರ ವರೆಗೆ ಆಳಿದರು.[೬] ಮೊದಲು ಸುಗಂದವರ್ತಿ(ಸೌಂದತ್ತಿ) ಅದರ ರಾಜಧಾನಿಯಾಗಿತ್ತು. ತರುವಾಯ ವೇಣುಗ್ರಾಮ ಕ್ರಿ. ಶ. ೧೨೦೨ ರಿಂದ ೧೨೩೦ ರವರೆಗೆ ಸುಮಾರು ೩೦ ವರ್ಷಗಳ ಕಾಲ ರಟ್ಟರ ರಾಜಧಾನಿಯಾಗಿತ್ತು.[೭] ಬೆಳಗಾವಿಯು ರಟ್ಟರ ರಾಜಧಾನಿಯಾದ ಅವಧಿಯಲ್ಲಿ ಸ್ವತಂತ್ರ ರಾಜರಾಗಿ ಆಳುತ್ತಿದ್ದರು. ಕಲೆ, ಸಾಹಿತ್ಯ, ಸಂಗೀತಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಿದ ರಟ್ಟರ ಕಾಲದಲ್ಲಿ ಬೆಳಗಾವಿಯು ಸಾಂಸ್ಕೃತಿಕವಾಗಿ ಮಹತ್ವವನ್ನು ಪಡೆದುಕೊಂಡಿತು.

ಸಾಹಿತ್ಯ ಕ್ಷೇತ್ರಕ್ಕೆ ರಟ್ಟರ ಕೊಡುಗೆ ಮಹತ್ವದ್ದಾಗಿದೆ. ಮಹತ್ವದ ಶಾಸನಗಳು, ಕಾವ್ಯ ಕೃತಿಗಳು ಈ ಕಾಲಾವಧಿಯಲ್ಲಿ ರಚನೆಗೊಂಡವು. ನೇಮಿಚಂದ್ರ, ಬಾಳಚಂದ್ರ, ಪಾರ್ಶ್ವಪಂಡಿತ, ೨ನೆಯ ಗುಣವರ್ಮ, ಕರ್ಣಪಾರ್ಯ, ಮುನಿಚಂದ್ರ ಮುಂತಾದ ಶ್ರೇಷ್ಠ ಕವಿಗಳು ರಾಜರ ಆಸ್ಥಾನದಲ್ಲಿ ಮತ್ತು ಬೇರೆ ಬೇರೆ ಸ್ಥಳಗಳಲ್ಲಿದ್ದು ಮಹತ್ವದ ಕಾವ್ಯಗಳನ್ನು ರಚಿಸಿದ್ದಾರೆ. ಬೆಳಗಾವಿ ಸಾಹಿತ್ಯವನ್ನು ಶ್ರೀಮಂತಗೊಳಿಸಿದ ಕವಿಗಳನ್ನು ಹೀಗೆ ಗುರುತಿಸಲಾಗಿದೆ:

**ನೇಮಿಚಂದ್ರ:** ಹನ್ನೆರಡನೆಯ ಶತಮಾನದ ಕೊನೆ ಹಾಗೂ ಹದಿಮೂರನೆಯ ಶತಮಾನದ ಮೊದಲ ಭಾಗದಲ್ಲಿದ್ದರಬಹುದಾದ ನೇಮಿಚಂದ್ರನು ಹರಿಹರ–ರಾಘವಾಂಕರ ಸಮಕಾಲೀನನಾದವನು. ಈತನು ವಚನ ಸಾಹಿತ್ಯದ ಕಾಲದಲ್ಲಿದ್ದರೂ ಪಂಪ–ರನ್ನರ ಒಂದು ಧಾರ್ಮಿಕ ಕಾವ್ಯ, ಮತ್ತೊಂದು ಲೌಕಿಕ ಕಾವ್ಯದ ಪರಂಪರೆಯನ್ನೇ ಮುಂದುವರಿಸಿಕೊಂಡು 'ನೇಮಿನಾಥ ಪುರಾಣ' ಎಂಬ ಧಾರ್ಮಿಕ ಕಾವ್ಯವನ್ನು ಮತ್ತು 'ಲೀಲಾವತಿ'ಯೆಂಬ ಲೌಕಿಕ ಕಾವ್ಯವನ್ನು ರಚಿಸಿದನು.

ನೇಮಿಚಂದ್ರನು ರಟ್ಟರ ಲಕ್ಷ್ಮೀಧರನ (ಲಕ್ಷ್ಮೀದೇವ) ಆಳ್ವಿಕೆಯ ಕಾಲದಲ್ಲಿ 'ಲೀಲಾವತಿ' ಕೃತಿಯನ್ನು ಬರೆದಿರುವುದಾಗಿ ಡಾ. ಬಿ. ಎಸ್. ಕುಲಕರ್ಣಿಯವರು ಅಭಿಪ್ರಾಯಪಟ್ಟಿದ್ದಾರೆ.[೮] ಕರ್ನಾಟಕ ಕವಿಚರಿತೆಕಾರರಾದ ಆರ್. ನರಸಿಂಹಾಚಾರ್ಯರು ಸೌಂದತ್ತಿಯ ರಟ್ಟರ ಲಕ್ಷ್ಮಣ ಅಥವಾ ಲಕ್ಷ್ಮೀಧರನ ಆಶ್ರಯದಲ್ಲಿ ಮತ್ತು ಬೀರಬಲ್ಲಾಳ (ಹೊಯ್ಸಳ)ನ ಆಶ್ರಯದಲ್ಲಿ ಇದ್ದಿರಬಹುದೆಂದು ತಿಳಿಸಿದ್ದಾರೆ.[೯] ನೇಮಿಚಮದ್ರನು ತನ್ನ ಎರಡೂ ಕೃತಿಯಲ್ಲಿ ಈ

ಇಬ್ಬರು ರಾಜರನ್ನು ಸ್ತುತಿಸಿದ್ದಾನೆ. ಈ ಆಧಾರದಿಂದ ಆರ್. ನರಸಿಂಹಾಚಾರ್ಯರು ಮೇಲಿನ ನಿರ್ಧಾರಕ್ಕೆ ಬಂದಿದ್ದಾರೆ. ಅಂದರೆ 'ಲೀಲಾವತಿ'ಯನ್ನು ರಟ್ಟರ ಆಶ್ರಯದಲ್ಲಿ ಹಾಗೂ 'ನೇಮಿನಾಥ ಪುರಾಣ'ವನ್ನು ವೀರಬಲ್ಲಾಳನ ಆಶ್ರಯದಲ್ಲಿ ಬರೆದಿರುವನು. ಆರ್. ನರಸಿಂಹಾಚಾರ್ಯರ ಅಭಿಮತದಂತೆ ನೇಮಿಚಂದ್ರನು ರಟ್ಟರ ಆಶ್ರಯದಿಂದ ಹೊಯ್ಸಳನ ಆಶ್ರಯ ಪಡೆದದ್ದು, ಅಂದಿನ ರಾಜಕೀಯ ಬದಲಾವಣೆಗಳಿಂದ ನಿಜವೆನಿಸುತ್ತದೆ. ರಟ್ಟರ ಸಾಮ್ರಾಜ್ಯವನ್ನು ಸೇವುಣರು ವಶಪಡಿಸಿಕೊಂಡ ಮೇಲೆ ನೇಮಿನಾಥನು ರಟ್ಟರ ಆಶ್ರಯವನ್ನು ತೊರೆದು ಹೊಯ್ಸಳರ ರಾಜ್ಯಕ್ಕೆ ಹೋಗಿರಬಹುದಾಗಿದೆ. ಒಂದನೆಯ ಲಕ್ಷ್ಮೀದೇವನು ಗೋವೆಯ ಕದಂಬರ ವಶದಲ್ಲಿದ್ದ ವೇಣುಗ್ರಾಮವನ್ನು ವಶಪಡಿಸಿಕೊಂಡು ತನ್ನ ರಾಜಧಾನಿಯನ್ನು ಸುಗಂಧವರ್ತಿಯಿಂದ (ಸೌಂದತ್ತಿ) ವೇಣುಗ್ರಾಮಕ್ಕೆ (ಬೆಳಗಾವಿ) ಬದಲಾಯಿಸಿ ರಾಜ್ಯಭಾರ ಮಾಡತೊಡಗಿದನು.[೧೦] ಇವನ ಆಸ್ಥಾನದಲ್ಲಿಯೇ ನೇಮಿಚಂದ್ರನು ಕವಿಯಾಗಿದ್ದನು.

'ಲೀಲಾವತಿ' ಪ್ರಬಂಧವು ನೇಮಿಚಂದ್ರನ ಮೊದಲನೆಯ ಕಾವ್ಯ. ಈ ಪ್ರಬಂಧದ ಕೊನೆಯಲ್ಲಿ ತನ್ನ ಆಶ್ರಯದಾತರಾದ ದಂಪತಿಗಳನ್ನು ಈ ರೀತಿ ಸ್ತುತಿಸಿದ್ದಾನೆ.

ಅಂಬುಧಿ ವೇಷ್ಟಿತಾವನಿಗೆ ಲಕ್ಷ್ಮಣದೇವನೇ ರಾಜನೆಂದೂ ಲೋಕಾಂಬಿಕೆಯಪ್ಪ ಪುಣ್ಯಸತಿ ಚಂದಲದೇವಿಯೇ ದೇವಿಯಂದು ಸೇವ್ಯಂಭುಜ ನೇಮಿಚಂದ್ರನೇ ಕವೀಂದ್ರನೆಂದು ರಟ್ಟರ ಲಕ್ಷ್ಮೀದೇವನ ಪತ್ನಿ ಚಂದ್ರಿಕಾದೇವಿಯನ್ನು ನೇಮಿಚಂದ್ರನು ಸ್ತುತಿಸಿದ್ದಾನೆ. (ಚಂದ್ರಿಕಾದೇವಿಯನ್ನು ಕಲ್ಹೊಳೆಶಾಸನ, ಬೆಳಗಾವಿ ಶಾಸನ ಮತ್ತು ಹಣ್ಣೀಕೇರಿ ಶಾಸನಗಳಲ್ಲಿಯೂ ವರ್ಣಿಸಲಾಗಿದೆ.)

ನೇಮಿಚಂದ್ರನು ಚತುರ್ಭಾಷಾ ಕವಿಚಕ್ರವರ್ತಿಯಾಗಿದ್ದನು. ಅಲ್ಲದೆ ಕಲಾಕಾಂತ, ಕವಿರಾಜಮಲ್ಲ, ಕವಿಧವಳ, ಶೃಂಗಾರ ಕಾರಾಗೃಹ, ಕವಿರಾಜಕುಂಜರ, ಸಾಹಿತ್ಯವಿದ್ಯಾಧರ, ಸುಕವಿಕಂಕಾಭರಣ–ಹೀಗೆ ಹಲವಾರು ಬಿರುದುಗಳು ಈತನಿಗೆ ಇದ್ದದ್ದು ತಿಳಿದುಬರುತ್ತದೆ. ಈತನನ್ನು ಜನ್ನ, ಪಾರ್ಶ್ವಪಂಡಿತ, ಕಮಲಭವ, ಮಧುರ, ಮಂಗರಸ, ಬಾಹುಬಲಿ ಮೊದಲಾದ ಕವಿಗಳು ತಮ್ಮ ಕಾವ್ಯಗಳಲ್ಲಿ ಸ್ತುತಿಸಿದ್ದಾರೆ.

'ಲೀಲಾವತಿ' ಕಾವ್ಯದಲ್ಲಿ ಕವಿ ನೇಮಿಚಂದ್ರನು ವರ್ಣಿಸಿದ ವರ್ಣನೆಗಳು, ಚಿತ್ರಿಸಿದ ಸಾಮಾಜಿಕ ಜೀವನವು ಬೆಳಗಾವಿ ಪರಿಸರವನ್ನು ಒಳಗೊಂಡಿದೆ. ಸಾಮಾನ್ಯವಾಗಿ ಕವಿಗಳು ಬಳಸುವ ಕಥಾವಸ್ತುವು ಪೌರಾಣಿಕವಾಗಿದ್ದರೂ ವರ್ಣನೆಗೆ ಬಳಸುವ ವಸ್ತುಗಳಾಗಲಿ, ಸಾಮಾಜಿಕ ಜೀವನದ ಚಿತ್ರಣವಾಗಲಿ ಕವಿಯ ಕಾಲದ್ದಾಗಿರುತ್ತದೆ. 'ಲೀಲಾವತಿ'ಯಲ್ಲಿಯೂ ಕವಿಯು ತನ್ನ ಕಾಲವನ್ನೇ ಲಕ್ಷ್ಯದಲ್ಲಿಟ್ಟಿದ್ದಾನೆ.

ನೇಮಿಚಂದ್ರನು ತನ್ನ ದೇಶದ ಬಗ್ಗೆ ಎಲ್ಲಿಯೂ ನೇರವಾಗಿ ಹೇಳಿಕೊಂಡಿಲ್ಲ. ಆದರೆ ಒಂದು ಪದ್ಯದಲ್ಲಿ ಬೆಳಗಾವಿ ಪರಿಸರದ ಚಿತ್ರಣ ಕಂಡುಬರುತ್ತದೆ.

ಪೊದೆದಿರೆ ಪತಿಯಮಂದಂ ನಿಜ ।

ಕರಟದಲ್ಲಿ ಕಿಗರ್ಚಿ ಬಿದರಿಕಜಿಲೆಯ ನೆರಡಂ।

ಇಲ್ಲಿ ಬಿದಿರಿನ ವರ್ಣನೆಯನ್ನು ಮಾಡಿರುವುದರಿಂದ ಬೆಳಗಾವಿಯ ಸುತ್ತಮುತ್ತಲು ಹೇರಳವಾಗಿ ಬಿದಿರನ್ನು ಬೆಳೆಯುತ್ತಿದ್ದರು ಈ ಬಿದಿರಿನಿಂದಲೇ ಇದಕ್ಕೆ 'ವೇಣುಗ್ರಾಮ' ವೆಂಬ ಹೆಸರು ಬಂದಿತ್ತು. ಇದರಿಂದ ಈ ಪ್ರದೇಶದ ಪ್ರಭಾವ ನೇಮಿಚಂದ್ರನ ಕಾವ್ಯದ ಮೇಲೆ ಉಂಟಾಗಿರಬಹುದು. ಇದಲ್ಲದೆ 'ಲೀಲಾವತಿ'ಯಲ್ಲಿ ಬರುವ ಬೆಟ್ಟಗುಡ್ಡಗಳ, ವರ್ಣನೆ, ಗಿಳಿ, ಕೋಗಿಲೆ, ಉದ್ಯಾನವನ, ಮಳೆ, ಋತುಗಳು ಇವೆಲ್ಲವುಗಳ ವರ್ಣನೆ ಬೆಳಗಾವಿಯ ಪರಿಸರವನ್ನು ಪರಿಚಯಿಸುತ್ತವೆ. ಲೀಲಾವತಿಯು ಉದ್ಯಾನವನದಲ್ಲಿ ಗಂಧರ್ವ ವಿವಾಹವಾದ ಸಂದರ್ಭದಲ್ಲಿ ಅವಳ ಸಖಿಯರು 'ಜೀರಿಗೆ ಬೆಲ್ಲ'ವನ್ನು ನೀಡಿದರು ಎಂದು ನೇಮಿಚಂದ್ರ ಚಿತ್ರಿಸಿದ್ದಾನೆ. ಎಳ್ಳು, ಬೆಲ್ಲವನ್ನು ಮದುವೆ ನಿಶ್ಚಿತಾರ್ಥ ಸಂದರ್ಭಗಳಲ್ಲಿ ಇಂದಿಗೂ ನೀಡುವ ಪದ್ಧತಿಯು ಬೆಳಗಾವಿ ಪರಿಸರದಲ್ಲಿ ಕಂಡುಬರುತ್ತದೆ.

ಮಾಮರವನ್ನು ನೇಮಿಚಂದ್ರ ತನ್ನೆರಡೂ ಕೃತಿಗಳಲ್ಲಿ ವರ್ಣಿಸಿದ್ದಾನೆ. ಬೆಳಗಾವಿ ಪರಿಸರದಲ್ಲಿ ಅತಿ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುವ ಮಾವಿನಗಿಡಗಳ ಸೊಬಗನ್ನು ನೇಮಿಚಂದ್ರ ಸಾಂದರ್ಭಿಕವಾಗಿ ಬಳಸಿಕೊಂಡಿದ್ದಾನೆ.

'ಲೀಲಾವತಿ' ಕಾವ್ಯವನ್ನು ಕುರಿತು ಅನೇಕ ಕವಿಗಳು ತಮ್ಮ ಕಾವ್ಯಗಳಲ್ಲಿ ಉಲ್ಲೇಖಿಸಿದ್ದಾರೆ. ದೊಡ್ಡಯ್ಯನೆಂಬ ಕವಿಯು ತನ್ನ ಚಂದ್ರಪ್ರಭ ಚರಿತೆಯಲ್ಲಿ ಬಾಣನ ಸಂಸ್ಕೃತ ಕಾದಂಬರಿಯನ್ನು ಸುಡಿಸಿ ಲೀಲಾವತಿಗೆ ಕಪ್ಪು ಕಾಡಿಗೆ ಹಚ್ಚಿದಂತೆ ಎಂದು ಹೇಳಿದ್ದಾರೆ. ಮಂಗರಸನು ಈ ಗ್ರಂಥವನ್ನು ಶೃಂಗಾರಕಾವ್ಯವೆಂದು ಹೇಳಿದ್ದಾನೆ.[೧೧]

ನೇಮಿಚಂದ್ರನು ರಟ್ಟರ ಲಕ್ಷ್ಮೀದೇವನ ಕಾಲದಲ್ಲಿದ್ದು, ಈ ಲಕ್ಷ್ಮೀದೇವನು ವೇಣುಗ್ರಾಮವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸುತ್ತಿದ್ದುದರಿಂದ ಈ ನೇಮಿಚಂದ್ರನು ವೇಣುಗ್ರಾಮದಲ್ಲಿಯೇ ಇದ್ದು ಲೀಲಾವತಿಯನ್ನು ಬರೆದುದು ಸ್ಪಷ್ಟವಾಗುತ್ತದೆ.

**ಪಾರ್ಶ್ವಪಂಡಿತ (ಕ್ರಿ. ಶ. ೧೨೦೫)**: ಕನ್ನಡ ಸಾಹಿತ್ಯದ ಚಂಪೂರೂಪದಲ್ಲಿ ಮೊತ್ತ ಮೊದಲ ಬಾರಿಗೆ ಪಾರ್ಶ್ವನಾಥ ತೀರ್ಥಂಕರನ್ನು ಕುರಿತು ಕಾವ್ಯ ರಚಿಸಿದ ಪಾರ್ಶ್ವಪಂಡಿತನು ರಟ್ಟರ ಕಾಲದ ಪ್ರಮುಖ ಕವಿಯಾಗಿದ್ದಾನೆ. ಕಾವ್ಯಗಳನ್ನಲ್ಲದೆ ಶಾಸನಗಳನ್ನು ಬರೆದು ಮಹತ್ವವನ್ನು ಪಡೆದುಕೊಂಡಿದ್ದಾನೆ.

ಪಾರ್ಶ್ವಪಂಡಿತನು ತನ್ನ ಕುರಿತು ಪಾರ್ಶ್ವನಾಥ ಪುರಾಣದಲ್ಲಿ ಹೇಳಿಕೊಂಡಿದ್ದಾನೆ. ಕಲ್ಲೋಳೆ ಶಾಸನದಲ್ಲಿಯೂ ಇವನ ಬಗೆಗೆ ಮಾಹಿತಿ ದೊರೆಯುತ್ತದೆ. ತನ್ನ ಪೂರ್ವಜರ ಇತಿಹಾಸ, ಗುರುಪರಂಪರೆ, ಕಾಲ, ದೇಶ, ಪ್ರಾಚೀನ ಕವಿಗಳು ಮುಂತಾದ ವಿಷಯಗಳನ್ನು ಪಾರ್ಶ್ವನಾಥ ಪುರಾಣದಲ್ಲಿ ಸ್ಪಷ್ಟವಾಗಿ ಹೇಳಿಕೊಂಡಿದ್ದಾನೆ.

ಈತನ ತಂದೆ ಲೋಕಣನಾಯಕ, ತಾಯಿ ಕಾಮಿಯಕ್ಕ ಅಣ್ಣ ನಾಗಣ್ಣ, ಗುರು 'ಶ್ರೀ ಕುಮುದೇಂದು ನಿರ್ಮಳಯಶಃ ಪ್ರಸರಂ ವಾಸುಪೂಜ್ಯಂ' ಅಂದರೆ ನಿರ್ಮಳ ಯಶಃ ಪ್ರಸರನಾದ ಶ್ರೀ ಕುಮುದೇಂದುವೆಂಬ ಉಪನಾಮವುಳ್ಳ 'ವಾಸು ಪೂಜ್ಯಮುನಿ' ಗುರುವಾಗಿದ್ದನು ಎಂದು ಪಾರ್ಶ್ವನಾಥ ಪುರಾಣದ ಒಂದನೆಯ ಆಶ್ವಾಸದ ಕೊನೆಯ ಪದ್ಯದಲ್ಲಿ ಹೇಳಿಕೊಂಡಿದ್ದಾನೆ.[೧೨]

ಕವಿಯು ಪಾರ್ಶ್ವನಾಥ ಪುರಾಣದ ರಚನೆಯ ಕಾಲವನ್ನು ಕಾವ್ಯದ ಕೊನೆಯ ಪದ್ಯದಲ್ಲಿ ಈ ರೀತಿ ಸ್ಪಷ್ಟಪಡಿಸಿದ್ದಾನೆ.

'ಶಕವರ್ಷ ಚತುರಬ್ಧಚಂದ್ರ ಶಶಿಸಂಖ್ಯಂ ಚಿತ್ರಬಾನೂತ್ಥಕಾ।
ರ್ತಿಕ ಶುದ್ಧೋದಿತ ಪಂಚಮಿಧಿಕ್ಷಣವಾರರ ಪೂರ್ಣ್ಕೆ ಸಂಪೂರ್ಣಮಾ ॥
ಯ್ತು ಕವಿ ಪ್ರಸ್ತುತ ಪಾರ್ಶ್ವನಾಥ ಚರಿತಂ ಪಾರ್ಶ್ವೋದಿತಂ ಕೂಡೆ ನ।
ರ್ತಿಕೆ ತತ್ಕೀರ್ತಿವ್ರೋಲೂರ್ಜಿತಾರ್ಥ ವಿಲಸತ್ಕಾವ್ಯಂ ಧರಾಭಾಗದೊಳ್॥'[೧೩]

ಈತ ಹೇಳಿದ 'ಚಿತ್ರಭಾನು' ಸಂವತ್ಸರದಲ್ಲಿ ಅಂದರೆ ಶಕ ೧೧೪೪ ರಲ್ಲಿ ಕವಿಯ ಪೋಷಕನಾದ ನಾಲ್ಕನೆಯ ಕಾರ್ತವೀರ್ಯನು ವೇಣುಗ್ರಾಮವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದುದರಿಂದ ಪಾರ್ಶ್ವಪಂಡಿತನು ವೇಣುಗ್ರಾಮದಲ್ಲಿಯೇ ಇದ್ದದ್ದು ಸ್ಪಷ್ಟಗೊಳ್ಳುತ್ತದೆ. ಪಾರ್ಶ್ವಪಂಡಿತನು ಪಾರ್ಶ್ವನಾಥ ಪುರಾಣದ ಕೊನೆಯಲ್ಲಿ ಪೋಷಕನಾದ ಕಾರ್ತವೀರ್ಯನನ್ನು ಆತನ ತಂದೆ–ತಾಯಿಗಳನ್ನು ಹೀಗೆ ಸ್ತುತಿಸಿದ್ದಾನೆ:

"ವೀರ ಶ್ರೀನಿಧಿ ಕಾರ್ತವೀರ್ಯತನಯಂ ಶ್ರೀ ಲಕ್ಷ್ಮಣ ಪೋಷಿಪಂ।
ಕ್ಷೀರಾಂಭೋನಿಧಿ ಚಂದ್ರನೂರ್ಜಿತಯಶಃ ಶ್ರೀಕಾರ್ತವೀರ್ಯಂ ಕಳಾ ॥
ಧಾರಂ ಸಜ್ಜನ ಸೌಖ್ಯಕಾರಿಲು ಸುಚರಿತ್ರಂ ಲೋಕನೇತ್ರಂ ಶುಭಾ ।
ಕಾರಂ ಸೊಗಯಿಪಂ ಶ್ರೀ ಚಂದ್ರಿಕಾನಂದನಂ ॥"[೧೪]

ನಾಲ್ಕನೆಯ ಕಾರ್ತವೀರ್ಯನು ಪಾರ್ಶ್ವ ಪಂಡಿತನಿಗೆ ಪ್ರೋತ್ಸಾಹವನ್ನು ಕೊಟ್ಟು ಪಾರ್ಶ್ವನಾಥ ಪುರಾಣವನ್ನು ಬರೆಯಿಸಿದ್ದಾನೆಂದು ಡಾ. ರಾಜಶೇಖರ ಇಚ್ಚಂಗಿಯವರು ಅಭಿಪ್ರಾಯ ಪಟ್ಟಿದ್ದಾರೆ.[೧೫]

ಪಾರ್ಶ್ವಪಂಡಿತನು ಪಾರ್ಶ್ವನಾಥ ಪುರಾಣದಲ್ಲಿ ಒಂದನೆಯ ಲಕ್ಷ್ಮೀದೇವನನ್ನು ಮತ್ತು ಆತನ ಮಗ ನಾಲ್ಕನೆಯ ಕಾರ್ತವೀರ್ಯನನ್ನು ಕಥೆಯೊಳಗೆ ಬರುವ ಪಾತ್ರಗಳೊಡನೆ ಹೋಲಿಸಿ ವರ್ಣಿಸಿರುವುದು ಅಲ್ಲಲ್ಲಿ ಕಂಡುಬರುತ್ತದೆ.

ಪಾರ್ಶ್ವಪಂಡಿತನು ಕಾವ್ಯವನ್ನಲ್ಲದೆ ಶಾಸನವನ್ನು ರಚಿಸಿದ್ದಾನೆ. ರಟ್ಟರ ನಾಲ್ಕನೆಯ ಕಾರ್ತವೀರ್ಯನ ಕಾಲದಲ್ಲಿ ಗೋಕಾಕ ತಾಲೂಕಿನ ಕಲ್ಲೊಳ್ಳಿಯ ತ್ರಿಕೂಟ ಬಸ್ತಿಯ ಮುಖಮಂಟಪದಲ್ಲಿ ಗೋಡೆಗೆ ಇರುವ ಶಾಸನವು ಮಹತ್ವದ ಶಾಸನವಾಗಿದೆ.[೧೬] ಒಂದು ಸುಂದರ ಕಾವ್ಯದಂತೆ ಕಂಡುಬರುವ ಈ ಶಾಸನವು ಎಪ್ಪತ್ತು ಸಾಲುಗಳಲ್ಲಿ ನಲವತ್ತು ಪದ್ಯಗಳನ್ನು ಒಳಗೊಂಡಿದೆ.

ಈ ಶಾಸನವು ಶಕ ೧೧೨೭ರಲ್ಲಿ ಅಂದರೆ ೧೨೦೫ ರಲ್ಲಿ ಬರೆದುದಾಗಿದ್ದು, ಇದರಲ್ಲಿ ಕೂಂಡಿಮಂಡಲದ ವೇಣುಗ್ರಾಮದಲ್ಲಿ ರಟ್ಟನ್ವಯ ರಾಜರಾದ ಕಾರ್ತವೀರ್ಯ ಮಲ್ಲಿಕಾರ್ಜುನ ಎಂಬ ಸಹೋದರರು ಆಳುತ್ತಿದ್ದು ಇವರ ಕಾಲದಲ್ಲಿಯೇ ಈ ಶಾಸನ ರಚನೆಗೊಂಡಿದೆ ಎಂದು ಕವಿಚರಿತೆಕಾರರು ಅಭಿಪ್ರಾಯಪಟ್ಟಿದ್ದಾರೆ.[೧೭]

**ಬಾಳಚಂದ್ರ (೧೨೦೪):** ಬಾಳಚಂದ್ರನು ಶಾಸನ ಕವಿ. ಬೆಳಗಾವಿಯ ಕೋಟೆಯೊಳಗಿನ ಜಿನ ಬಸದಿಯೊಂದರಲ್ಲಿದ್ದ ಎರಡು ಶಾಸನಗಳನ್ನು ಬಾಳಚಂದ್ರನು ರಚಿಸಿದ್ದಾನೆಂಬುದು ಉಲ್ಲೇಖ ಪ್ರಮಾಣದಿಂದ ಗೊತ್ತಾಗುತ್ತದೆ.[೧೮] ಈಗ ಈ ಎರಡೂ ಶಾಸನಗಳನ್ನು ಬ್ರಿಟಿಷ ಮ್ಯೂಜಿಯಂನಲ್ಲಿ ಇಡಲಾಗಿದೆ ಎಂದು ಡಾ. ಶಿ. ಬಾ. ಪಾಟೀಲರು ಸೂಚಿಸಿದ್ದಾರೆ.[೧೯] ಈ ಎರಡೂ ಶಾಸನಗಳ ಮಾಸ, ತಿಥಿ, ವಾರಗಳೂ ಒಂದೇ ಆಗಿವೆ. ಶಕವರ್ಷ ೧೧೨೭ ರಕ್ತಾಕ್ಷಿ ಪೌಷ್ಯಶುದ್ಧ ೨ ವಡ್ಡವಾರ ಎಂದಿದೆ. ಅಂದರೆ ೧೨೦೫ ರ ಸುಮಾರಿಗೆ ಈ ಶಾಸನಗಳು ರಚನೆಗೊಂಡಿದೆ.

ರಟ್ಟ ಕಾರ್ತವೀರ್ಯನು ತನ್ನ ಮಗ ವೀರಮಲ್ಲಿಕಾರ್ಜುನನೊಂದಿಗೆ ವೇಣುಗ್ರಾಮದ (ಬೆಳಗಾವಿಯ) ಸ್ಕಂಧಾವಾರದಲ್ಲಿದ್ದು, ಕರಗಾಗ್ರ ಗಣ್ಯ ಬೀಚಿರಾಜನು ಮಾಡಿಸಿದ ರಟ್ಟ ಜಿನಾಲಯದ ಶಾಂತಿನಾಥ ದೇವರಿಗೆ ಕೆಲ ಭೂಮಿಯನ್ನು ದಾನ ಕೊಟ್ಟಿದ್ದನ್ನು ಒಂದು ಶಾಸನ ತಿಳಿಸುತ್ತದೆ. ಅಲ್ಲದೆ ಹಲವಾರು ವ್ಯಾಪಾರಿಗಳ ಮೇಲೆ ಸುಂಕವನ್ನು ವಿಧಿಸಿ ಆ ಹಣವನ್ನು ದೇವಾಲಯಕ್ಕೆ ಬಳಸಿಕೊಳ್ಳುವುದನ್ನೂ ಶಾಸನವು ಉಲ್ಲೇಖಿಸುತ್ತದೆ. ಮತ್ತೊಂದು ಶಾಸನದಲ್ಲಿ ಆ ಕಾರ್ತವೀರ್ಯನೆ ಆ ಬಸದಿಗೆ ಕೊವರಳ್ಳಿ ಕಂಪಣದ ಉಂಬರವಾಣಿ ಗ್ರಾಮವನ್ನು ಜಿನಾಲಯಕ್ಕೆ ದಾನವಾಗಿ ನೀಡಿದ್ದನ್ನು ಉಲ್ಲೇಖಿಸಲಾಗಿದೆ.

ಬಾಳಚಂದ್ರನು ರಚಿಸಿದ ಈ ಎರಡೂ ಶಾಸನಗಳು ಕಾವ್ಯಮಯವಾಗಿದೆ. ಶಾಸನಗಳ ಪೂರ್ವಾರ್ಧಗಳು ವಿವಿಧ ವೃತ್ತ–ಕಂದ ಪದ್ಯಗಳಿಂದ ಕೂಡಿವೆ. ಒಂದೊಂದು ಶಾಸನದಲ್ಲಿಯೂ ೨೮–೨೯ ಪದ್ಯಗಳಿವೆ. ಕಂದ, ಶಾರ್ದೂಲ ವಿಕ್ರೀಡಿತ, ಉತ್ಪಲಮಾಲಾವೃತ್ತ ಮತ್ತು ಅಲ್ಲಲ್ಲಿ ಗದ್ಯವನ್ನು ಬಳಸಿದ್ದಾನೆ.

ಒಂದು ಶಾಸನದಲ್ಲಿ ಕವಿ ತನ್ನ ಹೆಸರನ್ನು ಎರಡು ಪದ್ಯಗಳಲ್ಲಿ ಹಾಗೂ ಗದ್ಯದಲ್ಲಿ ಹೀಗೆ ಹೇಳಿಕೊಂಡಿದ್ದಾನೆ:

ಒಂದು ಶಾಸನದಲ್ಲಿ –

ಪದಪಿಂದೀ ಧಾತ್ರಿಯೆಲ್ಲರು ಮಿಗೆ ಪೊಗಳೆ ಚಿರಂ

ವತ್ರಿಸುತ್ತಿರ್ಕೆ ನಿತ್ಯಾ –

ಭ್ಯುದಯ ಶ್ರೀಕಾರ್ಥವೀರ್ಯಕ್ಷಿತಿಪವಿಪುಳ ಸಾಮ್ರಾಜ್ಯ

ಸಂತಾನಮುರ್ವೀ –

ವಿದಿತ ಶ್ರೀ ಬೀಚಿರಾಜ ಪ್ರಥಿತ ವಿಮಳ ಶಾಂತೀಶ್ವರಾವಾಸಧರ್ಮಂ

ಸದಳಂಕಾರಸ್ಫುಟಾರ್ಥಾನ್ವಿತಪದ ಕವಿಕಂದರ್ಪಸುವ್ಯಕ್ತಸೂಕ್ತಂ ॥

ದೋಷವ್ಯ ತೀತಮರ್ಥವಿ –

ಶೇಷಮಿದೆನೆ ಪೇಳ್ದನೊಲ್ದು ಶಾಸನಮಂ ಪೀ –

ಯೂಷಸಮಸೂಕ್ತಿ ಚಾತು –

ರ್ಭಾಷಾ ಕವಿಚಕ್ರವರ್ತಿ ಕವಿಕಂದರ್ಪಂ ॥

ಶ್ರೀಮನ್ಮಾಧವಚಂದ್ರತ್ರೈವಿದ್ಯಚಕ್ರವರ್ತಿವಾಕ್ಸುಧಾರಸನಾಭ್ಯುದಿತ

ನಿತ್ಯ ಸಾಹಿತ್ಯ ಕಮಳವನಮರಾಳಂ **ಬಾಳಚಂದ್ರ** ದೇವಂ ಪೇಳ್ವ ಶಾಸನಂ.[೨೦]

ಮತ್ತೊಂದು ಶಾಸನದಲ್ಲಿ,

ಪ್ರಹತಾರಿಬ್ರಜಕಾರ್ತವೀರ್ಯಸಚಿವಂ ಶ್ರೀಬೀಚಿವಾಜಂ ಯಶೋ –

ಮಹಿತಂ ಪೇಳಿಮೆನಲ್ಕೆ ಶಾಸನಮನೊಳ್ಪಿಂ

**ಬಾಳಚಂದ್ರಂ** ಗುಣಾ–

ಗ್ರಹಿ ವಿದ್ವಜ್ಜನಸಮ್ಮತ ಸ್ಫುಟಪದಾರ್ಥಾಳಂಕ್ರಿಯಾಸಂಕುಳಾ –

ವಹಮಪ್ಪಂತಿರೆ ಪೇಳ್ದನಿಂತು ಕವಿಕಂದರ್ಪ ಬುಧಾಧೀಶ್ವರಂ ॥[೨೧]

ತ್ರೈವಿದ್ಯೆ ಚಕ್ರವರ್ತಿಗಳಾಗಿದ್ದ ಮಾಧವಚಂದ್ರ ಬಾಳಚಂದ್ರನ ಗುರುವಾಗಿದ್ದರು ಎಂದು ಶಾಸನದ ಗದ್ಯದಿಂದ ತಿಳಿದುಬರುತ್ತದೆ.

ಬಾಳಚಂದ್ರನು ತನಗಿದ್ದ ಬಿರುದುಗಳನ್ನು ಶಾಸನದಲ್ಲಿ ಉಲ್ಲೇಖಿಸಿದ್ದಾನೆ.

'ಚಾತುರ್ಭಾಷಾ ಕವಿಚಕ್ರವರ್ತಿ', 'ಕವಿಕಂದರ್ಪ' ಎಂಬ ಬಿರುದುಗಳನ್ನು ಈತ ಹೊಂದಿದ್ದನು. ಅಲ್ಲದೆ 'ಬುಧಾಧೀಶ್ವರಃ ಗುಣಾಗ್ರಹಿ', 'ವಿದ್ವಜ್ಜನ ವಂದಿತ', 'ಪದಕವಿ'ಗಳೆಂಬ ಬಿರುದುಗಳೂ ಇದ್ದವು.[೨೨]

ಕವಿಕಂದರ್ಪ ಬಾಳಚಂದ್ರನು ಜನ್ನನ ಪತ್ನಿಯಾದ ಲಕುಮಾದೇವಿಯ ಗುರುವಾಗಿದ್ದನು ಎನ್ನುವುದು ಜನ್ನನ 'ಅನಂತನಾಥ ಪುರಾಣ'ದಿಂದ ತಿಳಿದುಬರುತ್ತದೆ ಎಂದು 'ಆರ್ ನರಸಿಂಹಾಚಾರ್ಯರು' ತಿಳಿಸಿದ್ದಾರೆ.[೨೩]

ಬಾಳಚಂದ್ರನು ಸ್ತ್ರೀಯರ ಬಗ್ಗೆ ಅಪಾರವಾದ ಗೌರವದ ಭಾವನೆಯನ್ನು ಹೊಂದಿದ್ದನು ಎನ್ನುವುದು ಆತನ ಶಾಸನಗಳಿಂದಲೇ ತಿಳಿದುಬರುತ್ತದೆ. ರಟ್ಟರ ಮೂರನೆಯ ಕಾರ್ತವೀರ್ಯನ ಪತ್ನಿ ರಾಣಿ ಪದ್ಮಲಾದೇವಿಯನ್ನು ಕುರಿತು ಬೆಳಗಾವಿ ಶಾಸನದಲ್ಲಿ ಹೀಗೆ ಉಲ್ಲೇಖಿಸಲಾಗಿದೆ:

ವಿನತರಿಪ್ರಪ್ರತಿಬಿಂಬಾ ।

ಬಿನಿತಾಂತಂಕಾರ್ತ್ರವೀರ್ರ್ಯಪನಖದೊಜ್ಜ

ಲ್ವನಿಕುಂಪೂರ್ವ್ವಪದಾಶ್ರೀತ ।

ರನಲಿದುತನ್ನಂತ್ರಕೃತಿಗೆ ಪಡೆದಪ್ಪವೊಲ್ ।[೨೪]

ಎಂದು ವರ್ಣಿಸಿದ್ದಾನೆ. ಕಾರ್ತವೀರ್ಯನ ಮುಖದಲ್ಲಿ ಆಕೆಯ ಸೌಂದರ್ಯದ ಪ್ರತಿಬಿಂಬ ಬೀಳುತ್ತಿತ್ತು. ಅವನಿಗೆ ತಕ್ಕದಾದ ಸೌಂದರ್ಯವತಿಯಾಗಿದ್ದಳು ಎಂದು ಹೊಗಳಿದ್ದಾನೆ.

ಬಾಳಚಂದ್ರನನ್ನು ಆತನ ಸಮಕಾಲೀನ ಕವಿ ಪಾರ್ಶ್ವಪಂಡಿತನು ಸ್ತುತಿಸಿದ್ದಾನೆ. ಅಲ್ಲದೆ ಜನ್ನ ಮಹಾಕವಿಯು ತನ್ನ ಅನಂತನಾಥ ಪುರಾಣದಲ್ಲಿ ಬಾಳಚಂದ್ರನನ್ನು ಸ್ತುತಿಸಿದ್ದಾನೆ. ತನ್ನ ಹೆಂಡತಿ ಲಕುಮಾದೇವಿಯ ಗುರುಗಳ ಪ್ರಸಿದ್ಧಾಚಾರ್ಯರೊಳಗೆ–ಜಾವಳಿಗೆಯ ಮುನಿಚಂದ್ರ, ಅವನ ಶಿಷ್ಯ ಕುಲಭೂಷಣ: ಸಕಲಚಂದ್ರ, ಇವನ ಮಗ ಮಾಧವಚಂದ್ರ, ಇವನ ಶಿಷ್ಯ ಬಾಲಚಂದ್ರ ಕವಿಕಂಪರ್ಪ ಎಂದು ಜನ್ನನು ಹೊಗಳಿದ್ದಾನೆ.[೨೫]

ಚತುರ್ಭಾಷಾ ಪಂಡಿತನಾಗಿದ್ದ ಕವಿಕಂದರ್ಪ ಬಾಳಚಂದ್ರನು ಅನೇಕ ಕೃತಿಗಳನ್ನು ಬರೆದಿರಬಹುದಾಗಿದೆ. ಆದರೆ ಇದುವರೆಗೆ ಈತನ ಯಾವ ಕೃತಿಯೂ ಉಪಲಬ್ಧವಾಗಿಲ್ಲ. ಉಪಲಬ್ಧ ಎರಡು ಶಾಸನಗಳು ಅತ್ಯಂತ ಉತ್ಕೃಷ್ಟ ಕಾವ್ಯಗಳಂತೆ ರಚನೆಗೊಂಡಿವೆ. ಇವು ಬೆಳಗಾವಿಯ ಇತಿಹಾಸ, ಸಮಾಜ, ರಾಜಕೀಯ, ಸಾಹಿತ್ಯಿಕ ವಲಯಗಳ ಮಹತ್ವದ ದಾಖಲೆಯಾಗಿವೆ.

**ಎರಡನೆಯ ಗುಣವರ್ಮ ಸು. ೧೨೧೫:** ರಟ್ಟರಸರ ನಾಲ್ಕನೆಯ ಕಾರ್ತವೀರ್ಯನ ಆಸ್ಥಾನದಲ್ಲಿದ್ದ ಎರಡನೆಯ ಗುಣವರ್ಮನು 'ಪುಷ್ಪದಂತ ಪುರಾಣ'ವನ್ನು ಬರೆದು ಪ್ರಸಿದ್ಧ ಕವಿಯಾಗಿದ್ದಾನೆ.

ಈತನ ಪೋಷಕನು ಅಹಿತಕ್ಷ್ಮಾಭೃದ್ಭೃಹದ್ವಜನಾದ ನಾಲ್ಕನೆಯ ಕಾರ್ತವೀರ್ಯರಾಜನ ಕೈಯ ಕೆಳಗೆ ನಾಟ್ರ್ರಭುವಾಗಿದ್ದ ಶಾಂತಿವರ್ಮನು. ಈತನ ಗುರು ಕಾರ್ತವೀರ್ಯನ ಗುರುವಾಗಿದ್ದ ಮುನಿಚಂದ್ರನು ಎಂದು ಆರ್. ನರಸಿಂಹಾಚಾರ್ಯರು ಹೇಳಿದ್ದಾರೆ.[೨೬]

ಗುಣವರ್ಮನು ತನ್ನ 'ಪುಷ್ಪದಂತ ಪುರಾಣ'ದಲ್ಲಿ ಆಶ್ರಯದಾತನಾದ ಶಾಂತಿವರ್ಮನನ್ನು ಈ ರೀತಿ ಹೊಗಳಿದ್ದಾನೆ.

ಕ್ಷಿತಿಯೊಳ್ ಮುನ್ನಬ್ಜನೇತ್ರ, ಮನೆಯಳಿಯನೆನಲ್ ಕ್ಷೀರವಾರಾಶಿಯುಂವಿ ।
ಶ್ರುತ ಲಕ್ಷ್ಮಿದೇವಿಯುಂ ಕೌಸ್ತುಭಮಣಿಸಹಿತಂಕೊಂಡಂನೆಂತಂತೆ ತನ್ನಂ ।
ಸತತಂಕೂರ್ತಿಸ್ತು ಕೊಂಡಂಗುಣನಿಧಿಗುಣವರ್ಮಂಗೆಕೀರ್ತ್ಸನ್ವಿಸಂತ
ತ್ಕೃತ್ರಿಲಕ್ಷ್ಮೀಕಾಂತೆಯಂರಂಜಿತ ವಿಭುಧಜನಸ್ವಂತೆಯುಂಶಾಂತಿವರ್ಮಂ॥[೨೭]

ಈ ಗ್ರಂಥವನ್ನು ನಾಟ್ರ್ರಭುನಭೋಮಣಿ 'ಶಾಂತಿವರ್ಮನ ಯಶೋಲತೆಗಾಲಂಬನಮಾಗೆ' ಬರೆದು ಆತನಿಗೆ ಸಮರ್ಪಿಸಿದಂತೆ ಈ ಪದ್ಯದಲ್ಲಿ ಹೇಳಿದ್ದಾನೆ. ಈ ಶಾಂತಿವರ್ಮನು ನಾಲ್ಕನೆಯ ಕಾರ್ತವೀರ್ಯನ ಆಳ್ವಿಕೆಯಲ್ಲಿ ಅಮಾತ್ಯನಾಗಿದ್ದನು ಎನ್ನುವುದು ತಿಳಿದುಬರುತ್ತದೆ.[೨೮] ಹೀಗಾಗಿ ಗುಣವರ್ಮನು ಪುಷ್ಪದಂತ ಪುರಾಣವನ್ನು ಬರೆದದ್ದು ವೇಣುಗ್ರಾಮದಲ್ಲಿಯೇ ಎನ್ನುವುದು ಸ್ಪಷ್ಟವಾಗುತ್ತದೆ. ಡಾ. ಬಿ. ಆರ್. ಹಂದೂರರವರು ಗುಣವರ್ಮನು ಸವದತ್ತಿಯಲ್ಲಿ ಅಥವಾ ವೇಣುಗ್ರಾಮದಲ್ಲಿ ಇದ್ದು ಮುಂದೆ ಕೊಲ್ಲಾಪುರಕ್ಕೆ ಹೋಗಿರಬಹುದೆಂದು ಅಭಿಪ್ರಾಯಪಟ್ಟಿದ್ದಾರೆ.[೨೯]

ಗುಣವರ್ಮನು ತನ್ನ ಗುರು ಮುನಿಚಂದ್ರನ ಮೇಲೆ ಅಪಾರವಾದ ಭಕ್ತಿ, ಗೌರವಗಳನ್ನು ಹೊಂದಿದ್ದನು. ಪುಷ್ಪದಂತ ಪುರಾಣದ ಪ್ರತಿಯೊಂದು ಅಧ್ಯಾಯದ ಕೊನೆಯ ಪದ್ಯದಲ್ಲಿ ಗುರು ಮುನಿಚಂದ್ರನನ್ನು ಸ್ತುತಿಸಿದ್ದರಿಂದ ಇದನ್ನು ತಿಳಿದುಕೊಳ್ಳಬಹುದಾಗಿದೆ.

ಭಾವಿಸೆಚಿತ್ರಮೆನಲ್ ಬಿಬು ।
ಧಾವಳಿಗುಣವರ್ಮಬುಧನನತಿಕೃಪೆಯಿಂಕೊ ।
ರ್ತೋವಿಮುನಿಚಂದ್ರ ಪಂಡಿತ ।
ದೇವರ ಗುರುವಾಗಲಿ ಕವಿತೆ ಬಂದುದು ಚಿತ್ರ ।[೩೦]

ಎಂದು ಒಂದು ಪದ್ಯದಲ್ಲಿ ಹೇಳಲಾಗಿದೆ. ಇಲ್ಲಿ ಉಲ್ಲೇಖಿತವಾದ ಮುನಿಚಂದ್ರನು ಸವದತ್ತಿ ರಟ್ಟರಿಗೆ ರಾಜುಗುರವಾಗಿದ್ದನು. ಅಲ್ಲದೆ ಶೂರ, ಪರಾಕ್ರಮಿಯಾಗಿದ್ದನು.

ಗುಣವರ್ಮನು ತನ್ನ ವೈಯಕ್ತಿಕ ವಿಷಯದ ಬಗೆಗೆ ಎಲ್ಲಿಯೂ ಹೇಳಿಕೊಂಡಿಲ್ಲ. ಈತನಿಗೆ 'ಗುಣಾಬ್ಜವನಕಲಹಂಸ ಕವಿಲೋಲಕ', 'ಕಾವ್ಯಸತ್ಕಳಾವರ್ಣನಮೃಗಲಕ್ಷ್ಮ', 'ರಸಿರಸಿಕ', 'ಉಚಿತ ಕವಿತಾಚತುರಂ', 'ಚಂದ್ರಿಕಾಪಾನ ಪರಿಪುಷ್ಪಮಾನಸಮರಾಳ', 'ಸರಸ್ವತೀಕರ್ಣಪೂರ' ಮುಂತಾದ ಬಿರುದುಗಳಿದ್ದವು.[೩೧] ಗುಣವರ್ಮನು ಪುಷ್ಪದಂತ ಪುರಾಣವಲ್ಲದೆ ಚಂದ್ರಪ್ರಭ ತೀರ್ಥಂಕರನನ್ನು ಕುರಿತ 'ಚಂದ್ರನಾಥ ಅಷ್ಟಕ' ಎಂಬ ಕೃತಿಯನ್ನೂ ರಚಿಸಿದ್ದಾನೆ. ಚಂಪೂವಿನಲ್ಲಿ ರಚಿತವಾದ ಅಷ್ಟಕವು ಕೊಲ್ಲಾಪುರದ ತ್ರಿಭುವನತಿಲಕ ಜಿನಾಲಯದ ಚಂದ್ರನಾಥನ ಸ್ತುತಿಯೆಂದು ಆರ್. ನರಸಿಂಹಾಚಾರ್ಯರು ತಿಳಿಸಿದ್ದಾರೆ.[೩೨]

**ಮುನಿಚಂದ್ರ (೧೨೨೯):** ಸವದತ್ತಿ ರಟ್ಟರ ನಾಲ್ಕನೆಯ ಕಾರ್ತವೀರ್ಯನ ಮಂತ್ರಿಯಾಗಿ, ಇವನ ಮಗ ಎರಡನೆಯ ಲಕ್ಷ್ಮಿದೇವನಿಗೆ ಶಸ್ತ್ರಶಾಸ್ತ್ರ ಗುರುವಾಗಿ, ರಟ್ಟರ ಪ್ರತಿಷ್ಠಾಚಾರ್ಯನಾಗಿ, ಕೂಂಡಿ ೩೦೦೦ ದ ಕಂಪಣದಲ್ಲಿರುವ ಸುಂಗಧವರ್ತಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಜನಾಗಿಯೂ ಆಳ್ವಿಕೆನಡೆಸಿದ ಮುನಿಚಂದ್ರನು ಕವಿ ಪಂಡಿತನಾಗಿದ್ದನು ಎಂಬುದು ತಿಳಿದು ಬರುತ್ತದೆ. ಈತನು ಮೊದಲು ವೇಣುಗ್ರಾಮದಲ್ಲಿದ್ದು ನಂತರ ಸವದತ್ತಿಗೆ ಹೋಗಿರಬಹುದೆಂದು ಡಾ. ಬಿ. ಆರ್. ಹಂದೂರ ಅಭಿಪ್ರಾಯ ಪಟ್ಟಿದ್ದಾರೆ.[೩೩]

ಎರಡನೆಯ ಗುಣವರ್ಮನು ಮುನಿಚಂದ್ರನ ಶಿಷ್ಯನಾಗಿದ್ದನು.[೩೪] ಈತನನ್ನು ಕುರಿತು ಗುಣವರ್ಮನು ತನ್ನ ಪುಷ್ಪದಂತ ಪುರಾಣದಲ್ಲಿ "ಉಭಯಕವಿ ಕಮಲಗರ್ಭ" ಎಂದು ಸ್ತುತಿಸಿದ್ದರಿಂದ ಮುನಿಚಂದ್ರನು ಕವಿಯಾಗಿದ್ದನು ಎನ್ನುವುದು ತಿಳಿದುಬರುತ್ತದೆ. ಆದರೆ ಈತನ ಯಾವ ಕೃತಿಯೂ ಲಭ್ಯವಿಲ್ಲ. ಪರಾಕ್ರಮಿಯಾದ ಮುನಿಚಂದ್ರನು ಶಾಂತಿನಾಥನಾಗ, ಮಲ್ಲಿಕಾರ್ಜುನ ಎಂಬ ಅಮಾತ್ಯರನ್ನು ಹೊಂದಿದ್ದನು. ೧೨೨೯ರ ಸೌಂದತ್ತಿ ಶಾಸನ[೩೫]ದಲ್ಲಿ ಮುನಿಚಂದ್ರನನ್ನು ಕುರಿತು ಹೀಗೆ ಹೇಳಲಾಗಿದೆ:

ಕುಮುದಾನಂದತೆಯಿಂದ ಮೊಂದಿ ಮುನಿಚಂದ್ರ ಶತ್ರುಭೂಭೃನ್ಮುಖಾ ।
ಬ್ಜಮನಿರ್ಪೋಡಿಪ ತೇಜದಿಂದೆ ಮುನಿಚಂದ್ರ ಜಟ್ಟರಾಜ್ಯಾಬ್ಧಿಯಂ ॥
ಕ್ರಮದಿಂ ದಿಕ್ತಟಮಂ ಪಳಂಚಲೆವಿನಂ ಪೆರ್ಚಿಪ್ಪ ತನ್ನೊಂದು ವಿ ।
ಕ್ರಮದಿಂದಂ ಮುನಿಚಂದ್ರನಿಂತಾ ಮುನಿಚಂದ್ರಂ ಚಂದ್ರನಾಮಾನ್ವಿತಂ ॥

ಲಕ್ಷ್ಮೀದೇವನು ವೇಣುಗ್ರಾಮವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸುತ್ತಿದ್ದುದರಿಂದ ಈ ಮುನಿಚಂದ್ರನು ವೇಣುಗ್ರಾಮದಲ್ಲಿಯೇ ಇದ್ದಿರಬಹುದಾಗಿದೆ. ಮುನಿಚಂದ್ರನು ರಚಿಸಿದ ಸಾಹಿತ್ಯವನ್ನು ಸೇವುಣರ ಸಿಂಘನು ನಾಶಮಾಡಿರಬಹುದೆಂದು ಡಾ. ಶಿ. ಬಾ. ಪಾಟೀಲರು ಅಭಿಪ್ರಾಯ ಪಟ್ಟಿದ್ದಾರೆ.[೩೬]

**ಮಾದಿರಾಜ ೧೨೨೯:** ಮಾದಿರಾಜನು ರಟ್ಟರಸರ ಲಕ್ಷ್ಮೀದೇವನ ಕಾಲದಲ್ಲಿ ವೇಣುಗ್ರಾಮದಲ್ಲಿ ನೆಲೆಸಿದ್ದನು ಎಂದು ಕವಿಚರಿತೆಕಾರರು ಸ್ಪಷ್ಟಪಡಿಸಿದ್ದಾರೆ.[೨೭] ಈತನು ರಚಿಸಿದ ಸೌಂದತ್ತಿ ಶಾಸನದಲ್ಲಿ ತನ್ನ ವಂಶಾವಳಿಯನ್ನು ಕುರಿತು ವಿವರವಾಗಿ ಹೇಳಿಕೊಂಡಿದ್ದಾನೆ. ಅಗ್ನಿಗೋತ್ರದ ಬ್ರಾಹ್ಮಣನಾದ ಈತನ ವಂಶದ ಮೂಲ ಪುರುಷನು ರುದ್ರಭಟ್ಟಕವೀಂದ್ರನೆಂದು ಹೇಳಿದ್ದಾನೆ. ಇವನು ರಚಿಸಿದ ಸೌಂದತ್ತಿ ಶಾಸನವು (ಕ್ರಿ. ಶ. ೧೨೨೮) ಕಾವ್ಯಮಯವಾಗಿದ್ದು ಇದರಿಂದ ಈತ ಕವಿಯಾಗಿದ್ದನೆಂದು ತಿಳಿಯಬಹುದು. ಆದರೆ ಈತನ ಯಾವುದೇ ಕಾವ್ಯ ಲಭ್ಯವಾಗಿಲ್ಲ.

ಒಟ್ಟಿನಲ್ಲಿ ರಟ್ಟರ ಕಾಲದಲ್ಲಿ ಸಾಹಿತ್ಯವು ರಾಜರ ಆಸ್ಥಾನದಲ್ಲಿ ಬೆಳವಣಿಗೆಯನ್ನು ಹೊಂದಿ ಮಹತ್ವದ ಕೃತಿಗಳು ರಚನೆಗೊಂಡದ್ದು ತಿಳಿದುಬರುತ್ತದೆ. ರಟ್ಟರು ಬೆಳಗಾವಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ ಕಾಲದಲ್ಲಿಯ ಕವಿಗಳನ್ನು ಮಾತ್ರ ಇಲ್ಲಿ ಉಲ್ಲೇಖಿಸಲಾಗಿದ್ದು ಇನ್ನೂ ಹಲವಾರು ಕವಿಗಳು, ಶಾಸನಕವಿಗಳು ಸವದತ್ತಿ, ಕಲ್ಹೋಳಿಗಳಲ್ಲಿದ್ದು ಸಾಹಿತ್ಯ ರಚಿಸಿರುವುದು ತಿಳಿದುಬರುತ್ತದೆ. ಕರ್ಣಪಾರ್ಯ, ರಾಜಾದಿತ್ಯ, ರಟ್ಟ ಶಾಂತಿವರ್ಮ, ಕಮಳಾದಿತ್ಯ, ಲಕ್ಷ್ಮಣ ಮುಂತಾದ ಕವಿಗಳು ರಟ್ಟರ ಕಾಲದಲ್ಲಿ ಮಹತ್ವದ ಕೃತಿಗಳನ್ನು ರಚಿಸಿ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ.

**೨. ಜನಪದ ಸಾಹಿತ್ಯ :** ಜಾನಪದ ಕ್ಷೇತ್ರದಲ್ಲಿ ಬೆಳಗಾವಿ ಜಿಲ್ಲೆಯನ್ನು ಇಡಿಯಾಗಿ ನೋಡಿದಾಗ ಜನಪದ ಕವಿಗಳಿಗೆ ಇದು ತವರುಮನೆ ಎಂದೇ ಹೇಳಬಹುದು. ಜನಪದ ಕಲೆ, ಸಂಸ್ಕೃತಿ, ಸಾಹಿತ್ಯ, ಕ್ರೀಡೆಗಳಲ್ಲಿ ವೈಶಿಷ್ಟ್ಯತೆಯನ್ನು ಹೊಂದಿದ ಬೆಳಗಾವಿ ಜಿಲ್ಲೆಯಲ್ಲಿ ಲಾವಣಿ, ಸೋಬಾನ ಪದ, ಹಂತಿ ಪದ, ಭಲೇರಿ ಹಾಡು, ಹೋಳಿ ಪದ, ಗೀಗೀ ಪದ, ಮೊಹರಂ ಹಾಡು, ಡೊಳ್ಳಿನ ಹಾಡು, ಭಜನೆ–ಹೀಗೆ ವೈವಿಧ್ಯಮಯವಾದ ಸಾಹಿತ್ಯ ರಚನೆಗೊಂಡಿದೆ. ದಿನನಿತ್ಯದ ಚಟುವಟಿಕೆಗಳಲ್ಲಿ ಅಭಿವ್ಯಕ್ತಗೊಳ್ಳುತ್ತಿದ್ದ ಈ ಸಾಹಿತ್ಯವು ಸ್ಫೂರ್ತಿದಾಯಕವಾಗಿ, ಬದುಕಿನ ಒಂದು ಅಂಗವಾಗಿಯೇ ಸಾಗುತ್ತಿತ್ತು. ಮೂಲತಃ ಗ್ರಾಮೀಣ ಪರಿಸರವನ್ನು ಹೊಂದಿದ ಬೆಳಗಾವಿಯಲ್ಲಿ ಮರಾಠಿ ಸಂಸ್ಕೃತಿಯ ಪ್ರಭಾವದಿಂದ ವಿಶಿಷ್ಟ ರೀತಿಯ ಜನಪದ ಸಾಹಿತ್ಯ ಬೆಳೆದು ಬಂದಿದೆ.

**ದ್ವಾರಪಾಲ ಸು. ೧೮೫೦–೧೯೨೪:** ಬೆಳಗಾವಿಯ ಜೈನಧರ್ಮದ ದ್ವಾರಪಾಲನು ಜನಪದ ಕವಿಯೆಂದೇ ಪ್ರಸಿದ್ಧಿ ಪಡೆದಿದ್ದಾನೆ. ಕನ್ನಡ ಮತ್ತು ಮರಾಠಿ ಎರಡೂ ಭಾಷೆಯಲ್ಲಿ ವೈವಿಧ್ಯಪೂರ್ಣವಾದ ವಿಫುಲವಾದ ಸಾಹಿತ್ಯವನ್ನು ರಚನೆ ಮಾಡಿದ್ದಾನೆ.

ಬೆಳಗಾವಿಯ ಕುಲಕರ್ಣಿ ಗಲ್ಲಿಯ ಜಡಿ ಮನೆತನದ ಜಿನ್ನಪ್ಪ ಮತ್ತು ಜಿವಕ್ಕ ಎಂಬ ದಂಪತಿಗಳ ಮಗನಾದ ದ್ವಾರಪಾಲನು ಹೆಚ್ಚು ಕಲಿತವನಲ್ಲ. ಮನೆಯ ಸಮೀಪದಲ್ಲಿದ್ದ ಮರಾಠಿ ಶಾಲೆಯಲ್ಲಿ ನಾಲ್ಕನೆಯ ವರ್ಗದವರೆಗೆ ವಿದ್ಯಾಭ್ಯಾಸ ಪಡೆದು ಕನ್ನಡ–ಮರಾಠಿ ಎರಡೂ ಭಾಷೆಗಳನ್ನು ಬಲ್ಲವನಾಗಿದ್ದನು.

ದ್ವಾರಪಾಲನು ಸು. ೧೮೫೦ ರಿಂದ ೧೯೨೪ ರ ಅವಧಿಯಲ್ಲಿ ಜೀವಿಸಿದ್ದನು ಎಂದು ಡಾ. ಮಲ್ಲಿಕಾರ್ಜುನ ಲಕ್ಕೆಯವರು ಅಭಿಪ್ರಾಯ ಪಡುತ್ತಾರೆ.[೩೮] ಡಾ. ಎಸ್. ಪಿ. ಪಾಟೀಲರು ದ್ವಾರಪಾಲನ ಕಾಲವನ್ನು ೧೮೮೫–೧೯೨೪ ಎಂದು ಗುರುತಿಸಿದ್ದಾರೆ.[೩೯] ಈತನು ರಚಿಸಿದ ಸಾಹಿತ್ಯವನ್ನು ಪರಿಗಣಿಸಿದಾಗ ಈತನ ಕಾಲನನ್ನು ೧೮೫೦ ರಿಂದ ೧೯೨೪ ಎಂದು ಗುರುತಿಸಿದ್ದು ಸರಿಯೆನಿಸುತ್ತದೆ.

ದ್ವಾರಪಾಲನು ಒಕ್ಕಲುತನ ಕುಟುಂಬದಿಂದ ಬಂದಿದ್ದರೂ ಉಪ ಕಸುಬಾಗಿ ಬೇರೆ ಬೇರೆ ಉದ್ಯೋಗಗಳನ್ನು ಮಾಡಿದನು. ಒಕ್ಕಲುತನ, ಎಲೆಕಟ್ಟು ತಯಾರಿಕೆ ಮತ್ತು ಸ್ಟ್ಯಾಂಪ ಪೇಪರ ಮಾರಾಟ ಮಾಡುವ ಉದ್ಯೋಗಗಳನ್ನು ಮಾಡಿದವನು. ಈ ಎಲ್ಲ ವ್ಯವಹಾರಗಳಿಂದ ಜನಸಂಪರ್ಕದಿಂದ ಜೀವನಾನುಭವವನ್ನು ಪಡೆದು ಸೋದರಮಾವನ (ಬಾಳಪ್ಪ ಶೇರಿ) ಜನಪದ ಹಾಡುಗಾರಿಕೆಯ ಪ್ರಭಾವದಿಂದ ದ್ವಾರಪಾಲನಲ್ಲಿ ತಾನೂ ಪದಗಳನ್ನು ರಚಿಸಬೇಕೆಂದೆನಿಸಿತು. ಇದರಿಂದ ಸ್ಫೂರ್ತಿಗೊಂಡ ದ್ವಾರಪಾಲನು ಒಂದು ಭಜನಾ ಮಂಡಳಿಯನ್ನು ಕಟ್ಟಿ, ಬೆಳಗಾವಿಯ ಬಸದಿಯಲ್ಲಿ ನಿತ್ಯ ಹಾಡಿನ ಸಾಧನೆಯನ್ನು ಮಾಡತೊಡಗಿದನು. ಅಲ್ಲದೆ ಕೊಲ್ಲಾಪೂರ, ಸಾಂಗಲಿ, ಶೇಡಬಾಳ, ತೇರದಾಳ ಮೊದಲಾದ ಸ್ಥಳಗಳಿಗೆ ಹೋಗಿ ತನ್ನ ಹಾಡುಗಳನ್ನು ಹಾಡಿ ಪ್ರಚಾರ ಪಡಿಸಿದನು.

ದ್ವಾರಪಾಲನು ರಚಿಸಿದ ಕೃತಿಗಳಲ್ಲಿ ಜಿನಭಜನಿ ಪದಮಾಲಿಕೆ, ಉಪದೇಶ ಮಾಲಿಕೆ, ಇಬ್ರಾಹಿಂಪೂರ ಪದಮಾಲಿಕೆ, ಶ್ರೀ ಭಜನಮಣಿ ಮಾಲಿಕಾ (ಮರಾಠಿ), ಶ್ರೀಸಿದ್ಧಸಾಗರ ಸ್ವಾಮೀಂಚೆ ಚರಿತ್ರ (ಮರಾಠಿ) ಶ್ರೀ ಜಿನ ಭಜನಾಮೃತ ಪದಮಾಲಿಕೆ, ಶಾಂತಿಸಾಗರ ಚರಿತ್ರ ಲಾವಣಿ, ಯುರೋಪ ಮಹಾಯುದ್ಧದ ಲಾವಣಿ, ಶೋಭನ ಪದ ಮಾಲಿಕೆ ಮುಂತಾದ ಕೃತಿಗಳು ಪ್ರಕಟಗೊಂಡವುಗಳಾಗಿವೆ. ಇವುಗಳಲ್ಲಿ ಕೆಲವು ಕೃತಿಗಳು ಕನ್ನಡ ಭಾಷೆಯಲ್ಲಿ ರಚನೆಗೊಂಡಿದ್ದರೂ ದೇವನಾಗರಿ ಲಿಪಿಯಲ್ಲಿ ಮುದ್ರಣಗೊಂಡಿದೆ.

ದ್ವಾರಪಾಲನು ಕನ್ನಡ ಮರಾಠಿ ಎರಡೂ ಭಾಷೆಯಲ್ಲಿ ಪದಗಳನ್ನು ರಚಿಸಿ ಎರಡೂ ಭಾಷೆಯಲ್ಲಿ ಅವುಗಳನ್ನು ಹಾಡುತ್ತಿದ್ದನು. ಇದು ಬೆಳಗಾವಿಯ ಭಾಷಾ ಸಾಮರಸ್ಯಕ್ಕೆ ದ್ವಾರಪಾಲನು ಸಾಹಿತ್ಯದ ಮೂಲಕ ನೀಡಿದ ಮಹತ್ವದ ಕೊಡುಗೆಯಾಗಿದೆ.

ದ್ವಾರಪಾಲನು ಜೈನಧರ್ಮದವನಾಗಿದ್ದರೂ ಎಲ್ಲಾ ಧರ್ಮದವರು ಅವನ ಹಾಡುಗಳನ್ನು ಆಲಿಸುತ್ತಿದ್ದರು. ಅವನ ಪದಗಳನ್ನು ಓದುತ್ತಿದ್ದರು. ಅವನ ಕೃತಿಗಳಲ್ಲಿ ಕೆಲವು ಕೃತಿಗಳು ಆತನ ಜೀವಿತ ಕಾಲದಲ್ಲಿಯೇ ಪ್ರಕಟಗೊಂಡಿರುವುದು ಆತನ ಜನಪ್ರಿಯತೆಗೆ ಸಾಕ್ಷಿಯಾಗಿದೆ. ದ್ವಾರಪಾಲನ 'ಶಾಂತಿಸಾಗರ ಲಾವಣಿ' ಇಪ್ಪತ್ತನೆಯ ಶತಮಾನದಲ್ಲಿ ಜೈನ ಮುನಿ ಪರಂಪರೆಯನ್ನು ಮುಂದುವರೆಸಿಕೊಂಡು ಬಂದ ಆಚಾರ್ಯ ಶಾಂತಿಸಾಗರರ ಉದಾತ್ತತೆಯನ್ನು ತಿಳಿಸಿಕೊಡುವ ಲಾವಣಿಯಾಗಿದೆ. ಈತನ 'ಯುರೋಪ ಖಂಡದ ಮಹಾಯುದ್ಧ' ಎಂಬ

ರಚನೆಯಲ್ಲಿ ಸಮಕಾಲೀನ ಸಾಮಾಜಿಕ ಪ್ರಜ್ಞೆ ವ್ಯಕ್ತವಾಗಿದೆ. ಜಲಯುದ್ಧ, ಭೂಯುದ್ಧ, ಆಕಾಶಯುದ್ಧಗಳ ರೋಮಾಂಚಕ ವರ್ಣನೆಯನ್ನು ಈ ರಚನೆಯಲ್ಲಿ ಕಾಣಬಹುದಾಗಿದೆ.

ಕ್ರಿ. ಶ. ೧೯೨೦ರಲ್ಲಿ ಬೆಲ್ಜಿಯಮ್‌ನಲ್ಲಿ ಜರುಗಿದ ಒಲಂಪಿಕ್ ಸ್ಪರ್ಧೆಯಲ್ಲಿ ಬೆಳಗಾವಿಯ ಪವಮಾಂಜನೆಯನೆಂಬುವವನು ಭಾಗವಹಿಸಿ ಸಾಹಸ ಮೆರೆದುದನ್ನು ದ್ವಾರಪಾಲನು ಲಾವಣಿ ಮೂಲಕ ಚಾರಿತ್ರಿಕ ದಾಖಲೆಯಾಗಿಸಿದ್ದಾನೆ.

**ಬಸವನ ಕುಡಚಿಯ ಮಲ್ಲಪ್ಪ :** ಪ್ರಾಚೀನ ಕಾಲದಿಂದಲೂ ಸಾಂಸ್ಕೃತಿಕ ಮಹತ್ವವನ್ನು ಪಡೆದ ಬಸವನ ಕುಡಚಿ ಗ್ರಾಮವು ಇಂದು ಬೆಳಗಾವಿ ಮಹಾನಗರ ವ್ಯಾಪ್ತಿಯಲ್ಲಿ ಒಳಪಟ್ಟಿದೆ. ಇಲ್ಲಿಯ ಹರಿಜನ ಕುಟುಂಬಕ್ಕೆ ಸೇರಿದ ಮಲ್ಲಪ್ಪನು ಪ್ರಸಿದ್ಧ ಜನಪದ ಕವಿ. ಈತನು ಮೂಲತಃ ಅಡಿವೆಪ್ಪನ ಅಂಕಲಗಿಯನಾಗಿದ್ದು ಉಪಜೀವನಕ್ಕಾಗಿ ಬಸವನ ಕುಡಚಿಗೆ ಬಂದು ನೆಲೆಸಿ ಅಲ್ಲಿಯೇ ಒಕ್ಕಲುತನ ಕೆಲಸವನ್ನು ಮಾಡುತ್ತ ಜೊತೆಗೆ ಚರ್ಮದ ಚಪ್ಪಲಿಗಳನ್ನು ತಯಾರಿಸುತ್ತಾ ಜೀವನ ಸಾಗಿಸುತ್ತಿದ್ದನು.

ತನ್ನ ಕಾಯಕದ ಜೊತೆಗೆ ಕಾವ್ಯವನ್ನು ಕಟ್ಟುವ ಶಕ್ತಿಯನ್ನು ಹೊಂದಿದ್ದ ಈತನಿಗೆ ಗೀಗೀ ಪದಗಳನ್ನು ಹಾಡುವುದರಲ್ಲಿ ಹೆಚ್ಚಿನ ಆಸಕ್ತಿ ಇತ್ತು.

ಮಲ್ಲಪ್ಪನ ಸಮಕಾಲೀನನಾದ ಬೆಂಡಿಗೇರಿಯ ಗದಿಗೆಯ್ಯನು ಉತ್ತಮ ಹಾಡುಗಾರನಾಗಿದ್ದನು. ಇವರಿಬ್ಬರೂ ಆತ್ಮೀಯ ಸೇಹಿತರಾಗಿದ್ದರು. ಅಲ್ಲದೆ ಜೊತೆಯಾಗಿಯೇ ಹಾಡುತ್ತಿದ್ದರು. ಗದಿಗಯ್ಯನ ಸಹೋದರ ಸಂಗನ ಬಸಪ್ಪನೂ ಪ್ರಸಿದ್ಧ ಕವಿಯಾಗಿದ್ದನು. ಇವರೆಲ್ಲರ ಒಡನಾಟದಲ್ಲಿದ್ದ ಮಲ್ಲಪಸಹಜವಾಗಿ ಸಾಹಿತ್ಯ ರಚಿಸುವ ಜ್ಞಾನ ಪಡೆದನು. ಮಾಡಿತು. ಈತನು ರಚಿಸಿದ ಚಿಲ್ಲಾಳ ಎಂಬ ಡಪ್ಪಿನಾಟವು ಅತ್ಯಂತ ಜನಪ್ರಿಯವಾದ ಆಟವಾಗಿದೆ. ಅಲ್ಲದೆ ಹಲವಾರು ಲಾವಣಿಗಳನ್ನು ರಚಿಸಿ ಅವುಗಳನ್ನು ಸುಮಧುರವಾಗಿ ಹಾಡುತ್ತಿದ್ದನು. ಬೆಳಗಾವಿ ಸಮೀಪದ ಬಡೇಕೊಳ್ಳಮಠದ ನಾಗಯ್ಯ ಸ್ವಾಮಿಯ ಪರಮ ಭಕ್ತನಾದ ಈತನು ಕೆಳಸ್ಥರದಲ್ಲಿ ಜನಿಸಿದ್ದರೂ ತನ್ನ ಕಾವ್ಯ ಶಕ್ತಿಯಿಂದ ಎಲ್ಲರ ಪ್ರೀತಿಗೆ ಪಾತ್ರನಾಗಿದ್ದನು.

**ಬಾಹುಬಲಿ ಬುಡವಿ :** ಬೆಳಗಾವಿ ನಗರವ್ಯಾಪ್ತಿಯಲ್ಲಿ ಬರುವ ಅಲಾರವಾಡ ಗ್ರಾಮದಲ್ಲಿ ಜನಿಸಿ ಜಾನಪದ ಹಾಡುಗಾರಿಕೆ ಹಾಗೂ ನೂರಾರು ಭಜನಾಪದ, ಲಾವಣಿ, ಸೋಬಾನ ಪದಗಳನ್ನು ರಚಿಸಿದ್ದಾನೆ. 'ಬಾಹುಬಲಿ' ಎನ್ನುವ ಅಂಕಿತನಾಮದಲ್ಲಿ ರಚಿಸಿದ ಹಾಡುಗಳನ್ನು ಸ್ವತಃ ಹಾಡುತ್ತಿದ್ದನು.

ಜನಪದ ಸಾಹಿತ್ಯ ಇಂದಿಗೂ ಕೂಡ ಬೆಳಗಾವಿಯಲ್ಲಿ ಕಂಡುಬರುತ್ತದೆ. ಆಧುನಿಕ ಜೀವನ ಶೈಲಿಯ ಭರಾಟೆಯ ನಡುವೆಯೂ ಕೆಲವು ಪ್ರದೇಶಗಳಲ್ಲಿ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದೆ. ಗೀಗೀ ಪದಗಳು, ಲಾವಣಿ ಪದಗಳು, ಸೋಬಾನ ಪದಗಳು ಮುಂತಾದವುಗಳು ಕನ್ನಡ ಮರಾಠಿ ಎರಡೂ ಭಾಷೆಗಳಲ್ಲಿ ಕಂಡುಬರುತ್ತವೆ.

**೩. ಹೊಸಗನ್ನಡ ಸಾಹಿತ್ಯ:** ರಟ್ಟರ ಅವನತಿಯ ನಂತರ ಬೆಳಗಾವಿಯು ದೇವಗಿರಿಯ ಯಾದವರು, ವಿಜಯನಗರದ ಅರಸರು, ವಿಜಾಪೂರದ ಆದಿಲಶಾಹಿಗಳು, ಮರಾಠಾ ಪೇಶ್ವೆಗಳು ಮುಂತಾದವರ ಆಳ್ವಿಕೆಗೆ ಒಳಪಟ್ಟಿತು. ಇವರಲ್ಲಿ ಯಾರೂ ಬೆಳಗಾವಿಯನ್ನು ಕೇಂದ್ರವಾಗಿಟ್ಟುಕೊಂಡು ರಾಜ್ಯಭಾರ ಮಾಡಲಿಲ್ಲ. ಅಲ್ಲದೆ ಯಾವ ವಂಶವೂ ಹೆಚ್ಚು ಅವಧಿಯ ವರೆಗೆ ಇಲ್ಲಿ ಆಳ್ವಿಕೆಯನ್ನು ಮಾಡಲಿಲ್ಲ. ಹೀಗಾಗಿ ಸಾಹಿತ್ಯ, ಸಂಸ್ಕೃತಿ, ಕಲೆಗಳು ಬೆಳವಣಿಗೆಯನ್ನು ಹೊಂದಲಿಲ್ಲ. ಅನ್ಯ ಭಾಷೆ, ಅನ್ಯ ಧರ್ಮ, ಸಂಸ್ಕೃತಿಗಳಿಂದ ಜನಜೀವನವೂ ಅರಾಜಕವಾಯಿತು. ಇವರೆಲ್ಲರೂ ಹೆಚ್ಚು ಯುದ್ಧಗಳಲ್ಲಿಯೇ ಬೆಳಗಾವಿಯನ್ನು ಬಳಸಿಕೊಂಡರು. ಹೀಗಾಗಿ ರಟ್ಟರ ಆಳ್ವಿಕೆಯ ನಂತರ ಬೆಳಗಾವಿಯಲ್ಲಿ ಯಾವುದೇ ಸಾಹಿತ್ಯ ರಚನೆಗೊಳ್ಳಲಿಲ್ಲ. ಈ ಮಧ್ಯೆ ಪೇಶ್ವೆಗಳ ಅವಧಿಯಲ್ಲಿ ಸಹಜವಾಗಿ ಮರಾಠಿ ಸಾಹಿತ್ಯವು ಹೆಚ್ಚಿಗೆ ರಚನೆಯಾಗುವ ಅವಕಾಶವನ್ನು ಪಡೆದುಕೊಂಡಿತು.[೪೦] ಮುಂದೆ ೧೮೩೦ರಲ್ಲಿ ಬೆಳಗಾವಿಯು ಬ್ರಿಟಿಷರ ವಶವಾಗಿ ೧೮೩೬ರಲ್ಲಿ ಬಳ್ಳಾರಿ ಭಾಗದಿಂದ ಬೇರ್ಪಟ್ಟು ಸ್ವತಂತ್ರ ಜಿಲ್ಲೆಯಾದ ಬಳಿಕ ೧೮೬೪ರಲ್ಲಿ 'ವಿಲಿಯಂ ರಸೆಲ್' ಶಿಕ್ಷಣಾಧಿಕಾರಿಯಾಗಿ ಬಂದ ನಂತರ ಸಾಹಿತ್ಯ ಕೃಷಿಯ ಹೊಸ ಮನ್ವಂತರ ಆರಂಭವಾಯಿತು. ರಸೆಲ್‌ನಿಂದ ಪ್ರಾರಂಭವಾದ ಶಿಕ್ಷಣ ಮಹಾವಿದ್ಯಾಲಯ ಹಾಗೂ ಸರದಾರ ಶಾಲೆಗಳಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸಲು ಅನೇಕ ಶಿಕ್ಷಕ, ಸಾಹಿತಿಗಳು ಬೇರೆ ಬೇರೆ ಭಾಗಗಳಿಂದ ಬೆಳಗಾವಿ ನಗರಕ್ಕೆ ಆಗಮಿಸಿ ನೆಲೆ ನಿಂತು ಕನ್ನಡ ಭಾಷೆ, ಶಿಕ್ಷಣ, ಸಾಹಿತ್ಯಕ್ಕೆ ಹೊಸ ಶಕ್ತಿ ತುಂಬಿದರು.

ಹತ್ತೊಂಬತ್ತನೆಯ ಶತಮಾನದ ಪ್ರಾರಂಭದ ಹೊತ್ತಿಗೆ ಬೆಳಗಾವಿಯಲ್ಲಿ ಶಿಕ್ಷಣ ಸಾಹಿತ್ಯಗಳೆರಡೂ ಕೂಡಿಯೇ ಬೆಳವಣಿಗೆಯನ್ನು ಹೊಂದಿದವು. ಪೇಶ್ವೆಗಳ ಆಡಳಿತದಿಂದ ಕನ್ನಡ ಸಂಸ್ಕೃತಿ, ಭಾಷೆ, ಸಾಹಿತ್ಯ, ಶಿಕ್ಷಣವು ಮರಾಠಿ ಭಾಷೆಯ ಪ್ರಭಾವಕ್ಕೊಳಗಾಗಿತ್ತು. ಬ್ರಿಟಿಷರ ಆಡಳಿತ ಪ್ರಾರಂಭಗೊಂಡ ಮೇಲೆ ಇಲ್ಲಿ ಆಗಮಿಸಿದ ಕೆಲವು ಅಧಿಕಾರಿಗಳು ಮರಾಠಿಗರ ಪರವಾಗಿಯೇ ಆಡಳಿತವನ್ನು ನಡೆಸಿದರು. ಮುಂದೆ ಬಂದ ರಸೆಲ್ ಮುಂತಾದ ಅಧಿಕಾರಿಗಳು ಇಲ್ಲಿಯ ಮಾತೃಭಾಷೆ ಕನ್ನಡವೆಂಬುದನ್ನು ಅರಿತು ಕನ್ನಡ ಶಾಲೆಗಳನ್ನು ಸ್ಥಾಪಿಸಿ ಕನ್ನಡ ಶಿಕ್ಷಣಕ್ಕೆ ನಾಂದಿಹಾಡಿದರು. (ಈ ವಿಷಯವನ್ನು ಶೈಕ್ಷಣಿಕ ಕೊಡುಗೆ ಅಧ್ಯಾಯದಲ್ಲಿ ವಿವರಿಸಲಾಗಿದೆ) ಡೆಪ್ಯೂಟಿ ಚನ್ನಬಸಪ್ಪ, ಗಂಗಾಧರ ಮಡಿವಾಳೇಶ್ವರ ತುರಮರಿ, ವೆಂಕಟರಂಗೋ ಕಟ್ಟಿ ಮುಂತಾದ ಮಹನೀಯರು ಬೆಳಗಾವಿಯಲ್ಲಿ ನೆಲೆನಿಂತು ಕನ್ನಡ ಭಾಷೆ, ಸಾಹಿತ್ಯ, ಶಿಕ್ಷಣ ಕ್ಷೇತ್ರಗಳನ್ನು ಸುಧಾರಿಸಿದರು. ಈ ಸಂದರ್ಭದಲ್ಲಿ ಸ್ಥಾಪಿತವಾದ ಸರದಾರ ಹಾಯಸ್ಕೂಲ, ಧಾರವಾಡದಿಂದ ಬೆಳಗಾವಿಗೆ ವರ್ಗವಾದ ನಾರ್ಮಲ್ ಸ್ಕೂಲ್ ಇವುಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದ ಪ್ರಾಧ್ಯಾಪಕ ವರ್ಗ ಕನ್ನಡ ಕಟ್ಟುವ ಕಾರ್ಯದಲ್ಲಿ ನಿರತರಾದರು. ಇವರ ಜೊತೆಗೆ ಪತ್ರಿಕೆಗಳು, ಮುದ್ರಣಾಲಯಗಳು, ಪ್ರಕಾಶನ ಸಂಸ್ಥೆಗಳು ಕೈಜೋಡಿಸಿದವು. ಇದರಿಂದ ಬೆಳಗಾವಿಯಲ್ಲಿ ಮಹತ್ವದ ಸಾಹಿತ್ಯ ನಿರ್ಮಾಣವಾಯಿತು.

೧೯ನೆಯ ಶತಮಾನದಿಂದ ಈಚಿನದು ಆಧುನಿಕ ಸಾಹಿತ್ಯ ಪ್ರಾರಂಭದಲ್ಲಿ ಮಿಶನರಿಗಳು ಕನ್ನಡ ಶಾಲೆಗಳನ್ನು ತೆರೆದು ಅದರ ಮೂಲಕ ಸಾಹಿತ್ಯ ಶಿಕ್ಷಣದಲ್ಲಿ ಕನ್ನಡ ಭಾಷೆಯನ್ನು ಜಾರಿಗೆ ತಂದರು. ಬೆಯ್ನನ್ ಮತ್ತು ಸ್ಮಿಥ್ ಇವರು ಬೆಳಗಾವಿ ವಿಭಾಗದಲ್ಲಿ ಶೈಕ್ಷಣಿಕ ಪ್ರಗತಿಗೆ ಕಾರಣರಾದರು. (ಶಿಕ್ಷಣ ಅಧ್ಯಾಯದಲ್ಲಿ ವಿವರವಾಗಿ ತೆಗೆದುಕೊಳ್ಳಲಾಗಿದೆ) ಇದರಿಂದ ಸಾಹಿತ್ಯಿಕ ಚಟುವಟಿಕೆಗಳು ಪ್ರಾರಂಭವಾದವು. ಮುದ್ರಣಾಲಯಗಳು, ಪ್ರಕಾಶನ ಸಂಸ್ಥೆಗಳು, ಪತ್ರಿಕೆಗಳು ಪ್ರಾರಂಭಗೊಂಡು ಸಾಹಿತ್ಯ ನಿರ್ಮಿತಿಗೆ ಪೂರಕವಾದವು. ಅರುಣೋದಯ ಸಾಹಿತ್ಯದ ಸಂದರ್ಭದಲ್ಲಿ ಮೊದಲು ಅನುವಾದ ಕಾರ್ಯವು ನಡೆಯಿತು. ಈ ಹಿನ್ನೆಲೆಯಲ್ಲಿ ಕನ್ನಡದ ಮೊಟ್ಟಮೊದಲ ಅನುವಾದಿತ ಕೃತಿ ಎಂದು ಹೇಳಲಾಗುವ 'ಪಿಲಗ್ರಿಮ್ಸ್ ಪ್ರೊಗ್ರೆಸ್' ಕೃತಿಯು ಬಳ್ಳಾರಿಯಲ್ಲಿ ಮುದ್ರಣಗೊಂಡಿದ್ದರೂ ಅದರ ಅನುವಾದ ಕಾರ್ಯ ನಡೆದದ್ದು ಬೆಳಗಾವಿಯಲ್ಲಿ. ಡಬ್ಲ್ಯೂ ಬೆಯ್ನನ್ ಎನ್ನುವವನು ಈ ಕೃತಿಯನ್ನು ಅನುವಾದಿಸಿದನು.[೮೧] ಆಗ ಈತ ಸುದೀರ್ಘಕಾಲ ಬೆಳಗಾವಿಯಲ್ಲಿದ್ದುಕೊಂಡು ಕನ್ನಡವನ್ನು ಚೆನ್ನಾಗಿ ಅಭ್ಯಾಸಮಾಡಿದ್ದನು.[೮೨]

ಹೊಸಗನ್ನಡ ಸಾಹಿತ್ಯ ಸಂಸ್ಕೃತಿಗಳ ಉದಯಕಾಲದಲ್ಲಿ ದಕ್ಷ ಆಡಳಿತಗಾರರಾಗಿದ್ದ ವಿಲಿಯಮ್ ಎ ರಸೆಲ್ ಅವರಿಗೆ ಮಹತ್ವಪೂರ್ಣವಾದ ಸ್ಥಾನವಿದೆ. ಕರ್ನಾಟಕದಲ್ಲಿ ಪ್ರಾಂತಭಾಷೆಯಾದ ಕನ್ನಡಕ್ಕೇ ಮಹತ್ವವಿರಬೇಕಾದದ್ದು ಅವಶ್ಯವೆಂಬ ಸತ್ಯವನ್ನು ಕಂಡುಕೊಂಡ ರಸೆಲ್‌ರು ಮಹತ್ವದ ಕಾರ್ಯಗಳನ್ನು ಕೈಕೊಂಡರು. ಇದರ ಫಲವಾಗಿ ಬೆಳಗಾವಿಯಲ್ಲಿ ಸಾಹಿತ್ಯ ನಿರ್ಮಾಣಕ್ಕೆ ಪೂರಕವಾದ ವಾತಾವರಣ ನಿರ್ಮಾಣವಾಯಿತು. ಶಿಕ್ಷಕರ ತರಬೇತಿ ಶಾಲೆ, ಸರ್ದಾರ ಹೈಸ್ಕೂಲ್ ಮುಂತಾದವುಗಳ ಮುಖಾಂತರ ಹಲವಾರು ಜನರು ಸಾಹಿತ್ಯವನ್ನು ರಚಿಸುವಂತಾಯಿತು. ಮುಂದೆ ಡೆಪ್ಯೂಟಿ ಚನ್ನಬಸಪ್ಪ, ಗಂಗಾಧರ ಮಡಿವಾಳೇಶ್ವರ ತುರಮರಿ, ವೆಂಕಟ ರಂಗೋ ಕಟ್ಟಿ ಮುಂತಾದವರು ಕೈಗೊಂಡ ಶಿಕ್ಷಣಕ್ರಾಂತಿಯಿಂದಾಗಿ ಕನ್ನಡ ಸಾಹಿತ್ಯ, ಭಾಷೆ, ಬೆಳಗಾವಿಯಲ್ಲಿ ಗಟ್ಟಿಯಾಗಿ ನಿಲ್ಲತೊಡಗಿತು. ಇದರ ಜೊತೆಗೆ 'ಮಠ' ಪತ್ರಿಕೆಯು ಸಾಹಿತ್ಯದ ಬೆಳವಣಿಗೆಗೆ ಉತ್ತಮವಾದ ವೇದಿಕೆಯನ್ನು ನಿರ್ಮಿಸಿತು.

ಶಾಂತವೀರ ರಾಚಿದೇವ ಕಿತ್ತೂರರು ಬೆಳಗಾವಿಯ ಸರ್ದಾರ ಹಾಯಸ್ಕೂಲನಲ್ಲಿ ಹಾಗೂ ಟ್ರೇನಿಂಗ್ ಕಾಲೇಜಿನಲ್ಲಿ ಶಿಕ್ಷಕರೆಂದು ಸೇವೆ ಸಲ್ಲಿಸಿರುವರು. ಇವರು ಆ ಸಂದರ್ಭದಲ್ಲಿ ಹಲವಾರು ಮಹತ್ವದ ಕೃತಿಗಳನ್ನು ರಚಿಸಿ ಪ್ರಕಟಿಸಿದರು. ಅವುಗಳಲ್ಲಿ ಕೆಲವು ಕ್ರಮಿಕ ಪುಸ್ತಕಗಳು, ರಾಜಶೇಖರ ವಿಳಾಸದ ೨ನೆಯ ಆಶ್ವಾಸದ ಟೀಕೆ, ನವರತ್ನಹಾರ, ಶಾಂತವೀರ ಛಂದಸ್ಸು ಮೊದಲಾದವುಗಳು. ಇದರಲ್ಲಿ 'ಸಟೀಕ ರಾಜಶೇಖರನು' ೧೮೭೨ ರಲ್ಲಿ ರಚಿತವಾಗಿ ಬೆಳಗಾವಿಯ ಸಮಾಚಾರ ಮುದ್ರಣಾಲಯದಲ್ಲಿ ಮುದ್ರಣಗೊಂಡಿತು.[೮೩]

ಗಂಗಾಧರ ಮಡಿವಾಳೇಶ್ವರ ತುರಮರಿಯವರು ಬೆಳಗಾವಿಯ ಟ್ರೇನಿಂಗ್ ಶಾಲೆಯಲ್ಲಿ ಅಸಿಸ್ಟಂಟ ಮಾಸ್ತರರೆಂದು ಸೇವೆ ಸಲ್ಲಿಸಿ ಬೆಳಗಾವಿಯ ಶೈಕ್ಷಣಿಕ, ಸಾಹಿತ್ಯಿಕ ವಲಯದಲ್ಲಿ ಮಹತ್ವದ ಕಾರ್ಯವನ್ನು ಕೈಗೊಂಡಿದ್ದಾರೆ. ಬೆಳಗಾವಿಯಲ್ಲಿದ್ದಾಗ ಇಂಗ್ಲಿಷದ ಅಭ್ಯಾಸವನ್ನು ಮಾಡಿ ಕನ್ನಡ ಟ್ರಾನ್ಸಲೇಟರರೆಂದು ನೇಮಕ ಹೊಂದಿ ಉದ್ಯೋಗದ ಜೊತೆಗೆ ಸಾಹಿತ್ಯ ರಚನೆಯಲ್ಲಿಯೂ ತೊಡಗಿದರು. ಇವರು ಬೆಳಗಾವಿಯಲ್ಲಿದ್ದಾಗ 'ಶಬ್ದಮಂಜರಿ' ಎಂಬ ಬೃಹತ್ಕೋಶವನ್ನು ರಚಿಸಿದರು (೧೮೯೬). ಶಾಸ್ತ್ರೀಯವಾಗಿ ಮೂಡಿ ಬಂದ ಈ ಕೃತಿಯು ಕನ್ನಡ ನಿಘಂಟು ಸಾಹಿತ್ಯಕ್ಕೆ ಅಪೂರ್ವ ಕೊಡುಗೆಯಾಗಿದೆ. ಕಿಟೆಲ್ ಕೋಶದ ಪ್ರಕಟಣೆಗಿಂತ ೨೪ ವರ್ಷ ಮೊದಲೇ ಬೆಳಗಾವಿಯಲ್ಲಿ ಶಬ್ದಮಂಜರಿ ರಚನೆಗೊಂಡದ್ದು ವಿಶೇಷ.

೧೮೬೬ ರಿಂದ ೧೮೭೬ ಹತ್ತು ವರ್ಷಗಳ ಅವಧಿಯಲ್ಲಿ ತುರಮರಿಯವರು ಒಟ್ಟು ಒಂಬತ್ತು ಕೃತಿಗಳನ್ನು ರಚಿಸಿದರು. ಶಬ್ದಮಣಿದರ್ಪಣ ವ್ಯಾಖ್ಯಾನವನ್ನು ನಿರಂತರವಾಗಿ ಮಠ ಪತ್ರಿಕೆಯಲ್ಲಿ ಪ್ರಕಟಿಸುತ್ತ ಬಂದರು. ೧೮೬೭ ರಲ್ಲಿ ಹಳಗನ್ನಡ ಕವಿತಾ ಸಂಗ್ರಹ ೧೮೬೯ ರಲ್ಲಿ ಶಬ್ದಮಂಜರಿ, ೧೮೭೧ ರಲ್ಲಿ ರಾಜಶೇಖರ ವಿಲಾಸದ ಮೊದಲನೆಯ ಆಶ್ವಾಸದ ಟೀಕೆ, ೧೮೭೩ ರಲ್ಲಿ ನಿಜಗುಣ ಶಿವಯೋಗಿಗಳ ಕೈವಲ್ಯ ಪದ್ಧತಿಯ ಟೀಕೆ, ೧೮೭೪ ರಲ್ಲಿ ರಾಜಶೇಖರ ವಿಳಾಸದ ನಾಲ್ಕನೆಯ ಆಶ್ವಾಸದ ಟೀಕೆ, ೧೮೭೬ ರಲ್ಲಿ ಬಾಣ ಕಾದಂಬರಿ ಅನುವಾದ ಹೀಗೆ ತಾವು ಬದುಕಿರುವವರೆಗೆ ಸಾಹಿತ್ಯ ರಚನೆಯಲ್ಲಿ ತೊಡಗಿ ಮಹತ್ವದ ಕೃತಿಗಳನ್ನು ರಚಿಸಿದರು.

ನವೋದಯ ಸಾಹಿತ್ಯದ ಅರುಣೋದಯದ ಕಾಲದಲ್ಲಿ ಬೆಳಗಾವಿಯಲ್ಲಿ ನಡೆದ ಈ ಸಾಹಿತ್ಯ ನಿರ್ಮಿತಿಯ ಕಾರ್ಯವು ಮುಂದೆ ನವೋದಯ ಸಾಹಿತ್ಯ ಘಟ್ಟಕ್ಕೆ ಮಹತ್ವದ ತಳಹದಿಯನ್ನು ಒದಗಿಸಿತು.

ಬೆಳಗಾವಿಯಲ್ಲಿ ಕನ್ನಡ ಭಾಷೆ, ಸಾಹಿತ್ಯ, ಮುದ್ರಣ, ಪತ್ರಿಕೆ ಮುಂತಾದ ವಲಯದಲ್ಲಿ ಮಹತ್ವದ ಕಾರ್ಯಗಳನ್ನು ಮಾಡಿದ ವೆಂಕಟಗಂಗೋ ಕಟ್ಟಿಯವರು ಶಿಕ್ಷಕರಾಗಿ, ಟ್ರಾನ್ಸಲೇಟರರಾಗಿ, ಪ್ರಿನ್ಸಿಪಾಲರಾಗಿ, ಕಾರ್ಯವನ್ನು ನಿರ್ವಹಿಸಿದರು. ಕಟ್ಟಿಯವರು ಉತ್ತರ ಕರ್ನಾಟಕದ ಇಂದಿನ ಗದ್ಯ ಶೈಲಿಗೆ ರೂಪ ಕೊಟ್ಟವರಲ್ಲಿ ಒಬ್ಬರು ಎಂದು ದ.ರಾ.ಬೇಂದ್ರೆಯವರು ಹೇಳಿರುವರು.[೪೪]

ವೆಂಕಟರಂಗೋ ಕಟ್ಟಿಯವರು ರಚಿಸಿದ ಕನ್ನಡ ಕ್ರಮಿಕ ಪುಸ್ತಕಗಳು ಅಂದಿನ ಕಾಲದ ವಿದ್ಯಾರ್ಥಿಗಳಿಗೆ ಅತ್ಯುತ್ತಮವಾದ ಜ್ಞಾನವನ್ನು ಒದಗಿಸಿದವು. ಆ ಕಾಲದ ಮೈಸೂರು, ಮಂಗಳೂರು ಪ್ರಾಂತಗಳ ಕ್ರಮಿಕ ಪುಸ್ತಕಗಳಿಗಿಂತ ಭಾಷೆಯ ದೃಷ್ಟಿಯಿಂದಲೂ ಎಷ್ಟೋ ಪಾಲು ಮಿಗಿಲಾಗಿದ್ದವು ಎಂದು ಡಾ.ರಾ.ಯ.ಧಾರವಾಡಕರರು ಅಭಿಪ್ರಾಯಪಟ್ಟಿದ್ದಾರೆ.[೪೫] ಈ ಪುಸ್ತಕಗಳಲ್ಲಿ ವಿಜ್ಞಾನ, ಸಾಹಿತ್ಯ, ತತ್ವಜ್ಞಾನ, ಶರೀರಶಾಸ್ತ್ರ ಮುಂತಾದ ವಿಷಯಗಳನ್ನು ಕುರಿತು ಪಾಠಗಳನ್ನು ಅಳವಡಿಸಿದ್ದರು. ಕಟ್ಟಿಯವರು ಹಲವಾರು ಸ್ವತಂತ್ರ ಕೃತಿಗಳನ್ನು ರಚಿಸಿದರು. ಅವುಗಳಲ್ಲಿ

ಸವಾಯಿ ಮಾಧವರಾವ್, ಆರುಬೆರಳಿನ ಕುರುಹು ಎಂಬ ನಾಟಕಗಳು, ನರಟನು ಎಂಬ ಶರೀರ ಶಾಸ್ತ್ರ , ಕರ್ನಾಟಕದ ವರ್ಣನೆಯೂ ಇತಿಹಾಸವೂ ಎಂಬ ಇತಿಹಾಸ ಗ್ರಂಥ ವಿಧವಾ ಮುಂಡನ ಅನಾಚಾರ ಎನ್ನುವ ಶಾಸ್ತ್ರಗ್ರಂಥ ಗಮನಾರ್ಹವಾಗಿವೆ.

ವೆಂಕಟರಂಗೋ ಕಟ್ಟಿಯರ 'ಸಟೀಕ ಜೈಮಿನಿ' ಎಂಬುದು ಜೈಮಿನಿಭಾರತದ ಮೊದಲನೆಯ ನಾಲ್ಕು ಆಶ್ವಾಸಗಳಿಗೆಬರೆದ ಟೀಕೆಯಾಗಿದೆ. ಇದನ್ನು ಬೆಳಗಾವಿ ಸಮಾಚಾರ ಛಾಪಖಾನೆಯಲ್ಲಿ ಮುದ್ರಣಗೊಳಿಸಲಾಯಿತು.[೪೬] ಈ ಸಮಯದಲ್ಲಿಯೇ ದಿವಾನ್ ಬಹಾದ್ದೂರ್ ಅಣ್ಣಾರಾವ ಚೌಗಲೆಯವರು ಜೈನಗ್ರಂಥಮಾಲೆಯನ್ನು ಕಟ್ಟಿಕೊಂಡು ತತ್ವಾರ್ಥಸೂತ್ರ, ಶಾಸ್ತ್ರಸಾರ ಸಮುಚ್ಚಯ, ದ್ರವ್ಯ ಸಂಗ್ರಹ ಆದಿಪುರಾಣಗಳಂತಹ ಅಮೂಲ್ಯ ಕೃತಿಗಳನ್ನು ಡಾ. ಕೆ. ಜಿ. ಕುಂದಣಗಾರರೊಂದಿಗೆ ಸಂಪಾದಿಸಿ ಪ್ರಕಟಿಸಿದರು.

ಶ್ರೀ ಕೃಷ್ಣ ನೀಲಕಂಠ ಕರಗುಪ್ಪಿಕರ (ಕಣಬರಗಿ) ಅವರು 'ಅಸಹಕಾರ ಮೀಮಾಂಸೆ' ಗಾಂಧಿ ಚರಿತ್ರೆ' (೧೮೮೭-೧೯೨೨) ಮುಂತಾದ ಕೃತಿಗಳನ್ನು ಬರೆದು ಸ್ವಾತಂತ್ರ್ಯ ಚಳುವಳಿಗಾರರಿಗೆ ಸ್ಫೂರ್ತಿಯನ್ನು ತುಂಬಿದರು.

ಬೆಳಗಾವಿಯಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದ ಕಲ್ಲೊಳ್ಳಿಯ ಶ್ರೀರಾವಜಿ ಕುಲಕರ್ಣಿಯವರು ನವಜೀವನ ಗ್ರಂಥಮಾಲೆಯನ್ನು ಕಟ್ಟಿಕೊಂಡು 'ಕನ್ನಡಿಗನ ಸರ್ವಸ್ವ' (ಈ ಕೃತಿಯ ವಿವರಣೆಯನ್ನು ಸ್ವಾತಂತ್ರ್ಯ ಹೋರಾಟ ಭಾಗದಲ್ಲಿ ವಿವರವಾಗಿ ತೆಗೆದುಕೊಳ್ಳಲಾಗಿದೆ) 'ಏಕೀಕರಣ ನೀತಿ' ಮುಕ್ತಹಾರ ಗಣೇಶ ಪುರಾಣ ಮುಂತಾದ ಕೃತಿಗಳನ್ನು ರಚಿಸಿ ಕನ್ನಡ ಸಾಹಿತ್ಯಕ್ಕೆ ವಿಶಿಷ್ಟವಾದ ಕೊಡುಗೆಯನ್ನು ನೀಡಿದ್ದಾರೆ. ಬೆಳಗಾವಿಯವರೇ ಆದ ಶ್ರೀ ಭಾಸ್ಕರ ಗೋಖಲೆಯವರು 'ಭಾರತೀಯ ಸಂಸ್ಕೃತಿ' 'ಸೊಗಸಿನ ಕಥೆ 'ಸ್ವಾಮಿ' ಇತ್ಯಾದಿ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದರು. ಶ್ರೀಧರ ತೇಲ್ಕರರು 'ಮರಾಠಾ ಪೇಶ್ವೆ-ಶಹಾಜಿರಾಜೆ ಭೋಸ್ಲೆ ಚರಿತ್ರೆ', ಶಾನಭಾಗ ಕೃಷ್ಣರಾಯರು ರಾಜಧರ್ಮ, ರಸಚೇತನ, ಸೌಂದರ್ಯ ನಿಧಿಗೋವಾ ಶ್ರೀ ಗಿರೀಶ ಕಟ್ಟಿಯರ ಕವಿ ಕನಕದಾಸ, ವಿಜಯನಗರದ ಕೊನೆಯ ದಿನಗಳು ಮುಂತಾದ ಕೃತಿಗಳನ್ನು ರಚಿಸಿ ಬೆಳಗಾವಿಯಲ್ಲಿ ಸಾಹಿತ್ಯದ ಪರಂಪರೆಯನ್ನು ಮುಂದುವರೆಸಿದರು. ಭಾಷಾಂತರ, ಚರಿತ್ರೆ, ವೈಚಾರಿಕ, ಧಾರ್ಮಿಕ ಕೃತಿಗಳು ಈ ಸಂದರ್ಭದಲ್ಲಿ ಹೆಚ್ಚು ರಚನೆಗೊಂಡಿದ್ದು ಕಂಡುಬರುತ್ತದೆ.

ಹೊಸಗನ್ನಡ ಸಾಹಿತ್ಯದ ಎರಡನೆಯ ಹಂತದಲ್ಲಿ ನವೋದಯ ಸಾಹಿತ್ಯವು ಹುಟ್ಟಿಕೊಂಡು ಕನ್ನಡ ಸಾಹಿತ್ಯದಲ್ಲಿ ಮಹತ್ವದ ಬೆಳವಣಿಗೆಯನ್ನು ಹೊಂದಿತು. ಈ ಹಂತದಲ್ಲಿ ನಾಡಿನ ತುಂಬ ಹೊಸ ಸಾಹಿತ್ಯವು ಹರಿದು ಬಂದಿತು. ಅದರಂತೆ ಬೆಳಗಾವಿಯಲ್ಲಿಯೂ ನವೋದಯ ಸಾಹಿತ್ಯದ ವಿಫುಲವಾದ ಸಾಹಿತ್ಯ ಮೂಡಿಬಂದಿತು. ಕಥೆ, ಕವನ, ನಾಟಕ, ಕಾದಂಬರಿ, ವಿಮರ್ಶೆ, ಪ್ರವಾಸ ಕಥನ, ಹಾಸ್ಯ ಸಾಹಿತ್ಯ, ಪ್ರಬಂಧ, ಹೀಗೆ ಹೊಸಗನ್ನಡ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ಸಾಹಿತ್ಯವು ರಚನೆಗೊಂಡು ಕನ್ನಡ ಸಾಹಿತ್ಯಕ್ಕೆ ವಿಶಿಷ್ಟವಾದ ಕೃತಿಗಳನ್ನು ಬೆಳಗಾವಿಯ

ಪರಿಸರವು ನೀಡಿತು. ಸ್ವಾತಂತ್ರ್ಯ ಚಳುವಳಿ, ಏಕೀಕರಣ ಹೋರಾಟಗಳು ಬೆಳಗಾವಿ ನೆಲದಲ್ಲಿ ಗಟ್ಟಿಗೊಂಡು ಪ್ರಬಲ ಸ್ವರೂಪವನ್ನು ತಾಳಿತ್ತು. ಈ ಹಿನ್ನೆಲೆಯಲ್ಲಿ ಬರಹಗಾರರಿಗೆ ಸ್ಫೂರ್ತಿ ದೊರೆತು ನಾಡು ನುಡಿ ರಾಷ್ಟ್ರೀಯತೆಯನ್ನು ಕುರಿತು ಸಾಹಿತ್ಯ ರಚನೆಯ ಕಾರ್ಯವನ್ನು ಕೈಗೊಂಡರು. ಈ ಕಾರ್ಯದಲ್ಲಿ ಬೆಳಗಾವಿಗೆ ಬೇರೆ ಬೇರೆ ಭಾಗದಿಂದ ಬಂದ ಸಾಹಿತಿಗಳು ಹಾಗೂ ಬೆಳಗಾವಿಯನ್ನೇ ತಮ್ಮ ಕರ್ಮಭೂಮಿಯನ್ನಾಗಿ ಮಾಡಿಕೊಂಡು ಸಾಹಿತ್ಯವನ್ನು ರಚಿಸಿದವರು ಮತ್ತು ಬೆಳಗಾವಿಯಲ್ಲಿ ಜನಿಸಿ ಬೇರೆ ಬೇರೆ ಪ್ರದೇಶಗಳಲ್ಲಿ ನೆಲೆಸಿ ಸಾಹಿತ್ಯವನ್ನು ರಚಿಸಿದವರು ಹೀಗೆ ಒಟ್ಟಿನಲ್ಲಿ ಬೆಳಗಾವಿಯ ಭಾಷೆ, ಸಂಸ್ಕೃತಿ, ನೆಲ ಇವುಗಳ ನಿಕಟವಾದ ಸಂಬಂಧವನ್ನು ಹೊಂದಿದ ಹಲವಾರು ಜನರು ಸಾಹಿತ್ಯ ನಿರ್ಮಿತಿಯ ಕಾರ್ಯದಲ್ಲಿ ತೊಡಗಿರುವುದನ್ನು ಕಾಣಬಹುದಾಗಿದೆ.

ಬೆಳಗಾವಿಯಲ್ಲಿಯ ಸಾಹಿತ್ಯ ಚಟುವಟಿಕೆಗಳಿಗೆ ಇಲ್ಲಿ ನಡೆಯುತ್ತಿದ್ದ ಕನ್ನಡ ಹೋರಾಟಗಳು, ಸಂಘ-ಸಂಸ್ಥೆಗಳು, ಶಾಲಾ-ಕಾಲೇಜುಗಳು ಮುಖ್ಯ ಪ್ರೇರಣೆಯನ್ನು ಒದಗಿಸಿದವು. ಗಡಿ ಹೋರಾಟದ ನಡುವೆಯೇ ಸಾಹಿತ್ಯ ನಿರ್ಮಿತಿಯ ಕಾರ್ಯವು ಭರದಿಂದ ಸಾಗಿದ್ದು ಕಂಡುಬರುತ್ತದೆ. ಒಂದು ರೀತಿಯಲ್ಲಿ ಬೆಳಗಾವಿಯ ನೆಲ ಸಾಹಿತಿಗಳಿಗೆ ಸ್ಪೂರ್ತಿಯನ್ನು ನೀಡಿದರೆ ಇವರು ರಚಿಸಿದ ಸಾಹಿತ್ಯವು ಬೆಳಗಾವಿ ಕನ್ನಡಿಗರಲ್ಲಿ ಸ್ಫೂರ್ತಿ, ಅಭಿಮಾನ, ಸಂಘಟನೆಯನ್ನುಂಟು ಮಾಡಿದೆ. ನಾಡು-ನುಡಿಯ ಬಗೆಗೆ ಪ್ರೀತಿಯನ್ನು ಮೂಡಿಸಿದೆ. ಹೀಗಾಗಿ ಇಲ್ಲಿ ನಿರ್ಮಾಣಗೊಂಡ ಸಾಹಿತ್ಯಕ್ಕೂ ಬೇರೆ ಪ್ರದೇಶದ ಸಾಹಿತ್ಯಕ್ಕೂ ವ್ಯತ್ಯಾಸವನ್ನು ಕಾಣಬಹುದು. ಪತ್ರಿಕೆಗಳೂ ಮಹತ್ವದ ನೆಲೆಯನ್ನು ಒದಗಿಸಿ ಸಾಹಿತ್ಯ ಬೆಳೆಯುವಂತಾಗಲು ಕಾರಣವಾದವು. ಇಪ್ಪತ್ತನೆಯ ಶತಮಾನದ ಪ್ರಾರಂಭದ ದಶಕದಲ್ಲಿ ಬೆಳಗಾವಿಯಲ್ಲಿ ಮರಾಠಿ ಮೇಳಗಳು ನಡೆಯುತ್ತಿದ್ದವು. ಇವುಗಳಿಂದ ಪ್ರೇರಿತವಾಗಿ ಕನ್ನಡದಲ್ಲಿಯೂ ಮೇಳಗಳು ನಡೆಯತೊಡಗಿದವು. ಆ ದಿನಗಳಲ್ಲಿ ಶ್ರೀ ಮುತಾಲಿಕ ವೆಂಕಟರಾಯರು ಮೇಳಾಗಳನ್ನು ನಡೆಸತೊಡಗಿದರು. ಈ ಕನ್ನಡ ಮೇಳಾಗಳಿಗೆ ಶ್ರೀ ಜಿ.ವ್ಹಿ. ಕಟ್ಟಿ ಎಂಬ ವಕೀಲರು ಕನ್ನಡ ಹಾಡುಗಳನ್ನು ಬರೆಯುತ್ತಿದ್ದರು. ನವೋದಯ ಸಾಹಿತ್ಯದ ಪ್ರಾರಂಭದ ಹಂತದಲ್ಲಿ ಇವರ ಹಾಡುಗಳು ನವೋದಯದ ಎಲ್ಲ ಲಕ್ಷಣಗಳನ್ನು ಹೊಂದಿದ್ದವು. ಧಾರ್ಮಿಕ ಪರಂಪರೆಯಲ್ಲಿ, ವಚನ, ಕೀರ್ತನೆ, ಭಜನೆ, ಶ್ಲೋಕಗಳನ್ನು ಕೇಳಿದ್ದ ಜನರಿಗೆ ಕಟ್ಟಿಯವರ ಹಾಡುಗಳು ಮನರಂಜನೆಯನ್ನು ನೀಡಿದವು. ಬೆಳಗಾವಿಯಲ್ಲಿ ಉಡಪಿ ಹೊಟೇಲ್‌ಗಳನ್ನು ಕುರಿತು ಬರೆದ ಹಾಸ್ಯಮಯವಾದ ಹಾಡು ಚಹಾದಂಗಡಿಗಳ ಅಂದಿನ ವಾಸ್ತವ ಸ್ಥಿತಿಯನ್ನು ತಿಳಿಸಿಕೊಡುತ್ತದೆ.

ಉಡುಪಿ ಆಶ್ರಮ ಪುಣ್ಯಕ್ಷೇತ್ರ ಚಹಾ ತೀರ್ಥ  
ಚಹಾಪಾನ ಮಾಡದವನ ಜನ್ಮ ವ್ಯರ್ಥ।  
ಆಹಾ ಜನ್ಮ ವ್ಯರ್ಥ। ಅವನ ಗಳಿಕೆ ವ್ಯರ್ಥ॥

ಜನಪದ ಶೈಲಿಯಲ್ಲಿ ಮೂಡಿ ಬಂದ ಈ ಹಾಡು ೧೯೩೯ ರಲ್ಲಿ ಬೆಳಗಾವಿಯಲ್ಲಿ ನಡೆದ ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಳನದಲ್ಲಿ ಶ್ರೀ ಜಿ.ವ್ಹಿ. ಕಟ್ಟಿಯವರು ಕುಣಿಯುತ್ತ ಈ ಹಾಡು ಹೇಳಿದಾಗ ಎಲ್ಲರೂ ನಗೆಗಡಲಿನಲ್ಲಿ ಮುಳುಗಿ ಹೋಗಿದ್ದರು.[೪೭]

೧೯೧೫ ರಲ್ಲಿ ಬೆಳಗಾವಿಯಲ್ಲಿ ಸ್ಥಾಪನೆಗೊಂಡ 'ಕರ್ನಾಟಕ ಸಂಘ ಮತ್ತು ವಾಚನಾಲಯ'ವು ಬೆಳಗಾವಿಯಲ್ಲಿ ಕನ್ನಡ ಭಾಷೆ ಸಂಸ್ಕೃತಿಯನ್ನು ಬೆಳೆಸಿದಂತೆ ಸಾಹಿತ್ಯ ನಿರ್ಮಾಣದ ಚಟುವಟಿಕೆಗಳಿಗೂ ಸ್ಫೂರ್ತಿಯನ್ನು ನೀಡಿತು. ಅಂದಿನ ನಾಡಿನ ಪ್ರಮುಖ ಸಾಹಿತಿಗಳು, ಪಂಡಿತರು ಈ ವಾಚನಾಲಯದ ಜೊತೆಗೆ ಸಂಪರ್ಕವನ್ನಿಟ್ಟುಕೊಂಡು ಮೇಲಿಂದ ಮೇಲೆ ಬೆಳಗಾವಿಗೆ ಬಂದು ಸಾಹಿತ್ಯದ ವಾತಾವರಣಕ್ಕೆ ಸ್ಫೂರ್ತಿಯನ್ನು ತುಂಬಿದರು. ಡಾ. ಸವಣೂರ ಹಣಮಂತರಾಯರು, ಸರ್ಕಾರೀ ಬೆಳವಿ ದತ್ತರಾಯರು ಮುಂತಾದವರು ಈ ಸಂಘದ ನಿರ್ಮಾಣ, ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿದರು.

ಧಾರವಾಡದ ಹಿರಿಯರಾದ ಶ್ರೀ ಕಡಪಾ ರಾಘವೇಂದ್ರರಾಯರು, ಶ್ರೀಮುದವೀಡು ಕೃಷ್ಣರಾಯರು, ಶ್ರೀ ಆರೂರ ವೆಂಕಟರಾಯರು ಮುಂತಾದ ಹಿರಿಯರ ಒಡನಾಟದಿಂದ ಬೆಳಗಾವಿಯ ಸಾಹಿತ್ಯ ವಲಯದಲ್ಲಿ ಸಂಚಲನವುಂಟಾಯಿತು. ಇದರಿಂದ ಸಾಹಿತ್ಯಿಕ ಚಟುವಟಿಕೆಗಳು ನಿರಂತರವಾಗಿ ನಡೆಯತೊಡಗಿದವು.

ಬೆಳಗಾವಿಯಲ್ಲಿ ಕನ್ನಡ ವಾತಾವರಣವನ್ನು ಬೆಳೆಸಿ, ಭಾಷೆ, ಸಾಹಿತ್ಯ ಸಂಸ್ಕೃತಿ, ಪತ್ರಿಕೋದ್ಯಮ ಹೋರಾಟಗಳನ್ನು ನಿರಂತರವಾಗಿ ನಡೆಸಿದ ಬೆಟಗೇರಿ ಕೃಷ್ಣಶರ್ಮರು ತಮ್ಮ ವಿದ್ಯಾರ್ಥಿ ಜೀವನವನ್ನು ಬೆಳಗಾವಿಯಲ್ಲಿ ಕಳೆದರು. ಹೊಸಗನ್ನಡ ಸಾಹಿತ್ಯದ ಪ್ರಾರಂಭದ ದಿನಗಳಲ್ಲಿ ಮಹತ್ವದ ಸಾಹಿತ್ಯವನ್ನು ರಚಿಸಿ ಬೆಳಗಾವಿಯಲ್ಲಿ ಕನ್ನಡ ಭಾಷೆಗೆ ಭದ್ರವಾದ ನೆಲೆಯನ್ನು ಒದಗಿಸಿದರು. ಮರಾಠಿ ಭಾಷೆಯ ಪ್ರಭಾವಕ್ಕೆ ಒಳಗಾದ ಬೆಳಗಾವಿಯಲ್ಲಿ ಕನ್ನಡ ಭಾಷೆ, ಸಾಹಿತ್ಯ ಮೂಡಿ ಬರಲು ಕಾರಣರಾದರು. ಮಹಾತ್ಮಾ ಗಾಂಧೀಜಿಯವರ ಪ್ರ ಭಾವಕ್ಕೊಳಗಾಗಿ ಬೆಳಗಾವಿಯಲ್ಲಿ ನೆಲೆ ನಿಂತು ಸ್ವಾತಂತ್ರ್ಯ ಹೋರಾಟಗಾರರಿಗೆ ತಮ್ಮ ಕಾವ್ಯಗಳ ಮೂಲಕ ಸ್ಫೂರ್ತಿ ತುಂಬಿದರು. ೧೯೨೧ ರಲ್ಲಿ ಬೆಳಗಾವಿಯ ರಾಷ್ಟ್ರೀಯ ಶಾಲೆಯ ಶಿಕ್ಷಕರಾಗಿ ಕನ್ನಡಕ್ಕೆ ಒಂದು ಸ್ಥಾನ ದೊರಕಿಸಿಕೊಟ್ಟರು. ಅಂದು ಬೆಳಗಾವಿಯಲ್ಲಿ ಪ್ರತಿಯೊಂದು ಸಭೆ ಸಮಾರಂಭಗಳಲ್ಲಿ ಮರಾಠಿ ಗೀತೆಗಳನ್ನು ಸ್ವಾಗತ ಗೀತೆಯಾಗಿ ಹಾಡುತ್ತಿದ್ದರು. ಈ ಸಂದರ್ಭದಲ್ಲಿ ಕೃಷ್ಣಶರ್ಮರು ಕನ್ನಡದಲ್ಲಿ ರಾಷ್ಟ್ರೀಯ ಪದ್ಯಗಳನ್ನು ರಚಿಸಿ ತಮ್ಮ ವಿದ್ಯಾರ್ಥಿಗಳಿಗೆ ಕಲಿಸತೊಡಗಿದರು. ಅಲ್ಲದೆ ಆ ವಿದ್ಯಾರ್ಥಿಗಳನ್ನು ಬೇರೆ ಬೇರೆ ಸಭೆಗಳಿಗೆ ಕರೆದುಕೊಂಡು ಹೋಗಿ ಕನ್ನಡ ಗೀತೆಗಳನ್ನು ಹೇಳಿಸತೊಡಗಿದರು.

ಲೋಕಮಾನ್ಯ ಟಿಳಕರು ಸ್ವರಾಜ್ಯ ನಿಧಿಗಾಗಿ ಹಣವನ್ನು ಕೂಡಿಸುವ ಸಂದರ್ಭದಲ್ಲಿ "ಘಾಲಾ ಘಾಲಾ ಭಿಷಾ ತುಮ್ಹೀ ದೇಶ ರಕ್ಷಾ" ಎಂಬ ಮರಾಠಿ ಗೀತೆಯನ್ನು ಹಾಡುತ್ತ ಹಣವನ್ನು ಸಂಗ್ರಹಿಸುತ್ತಿದ್ದರು. ಕೃಷ್ಣಶರ್ಮರು

ಈ ಹಾಡನ್ನು "ಭಿಕ್ಷೆಯ ನೀಡಿರಿ ಬಾಂಧವರೆ ನೀವ್ ಭಿಕ್ಷೆಯ ನೀಡಿರಿ ಭಗಿನಿಯರೇ।" ಎಂದು ಕನ್ನಡದಲ್ಲಿ ರಚಿಸಿ ಹಾಡುತ್ತಿದ್ದರು. ಈ ಹಾಡಿಗೆ ಮರಾಠಿಗರೂ ಧ್ವನಿಗೂಡಿಸುತ್ತಿದ್ದುದು ವಿಶೇಷವಾಗಿತ್ತು.

ಬೆಳಗಾವಿಯ ರಾಷ್ಟ್ರೀಯ ಶಾಲೆಯ ಶಿಕ್ಷಕರಾಗಿದ್ದಾಗ ಶಾಲೆಯಲ್ಲಿಯೂ ಮರಾಠಿ ಹಾಡುಗಳೇ ಕೇಳಿ ಬರುತ್ತಿದ್ದವು. ಈ ಸಂದರ್ಭದಲ್ಲಿ ಕನ್ನಡಾಭಿಮಾನಿಗಳು ಕನ್ನಡದಲ್ಲಿ ಒಂದು ಹಾಡನ್ನು ರಚಿಸುವಂತೆ ಕೃಷ್ಣಶರ್ಮರಿಗೆ ಪ್ರೇರೆಪಿಸಿದರು. ಇದರಿಂದ ಸ್ಪೂರ್ತಿಗೊಂಡ ಕೃಷ್ಣಶರ್ಮರು "ಎನಿತು ಇನಿದು ಈ ಕನ್ನಡ ನುಡಿಯು। ಮನವನು ತಣಿಸುವ ಮೋಹನ ಸುಧೆಯು॥" ಎಂಬ ಪದ್ಯವನ್ನು ರಚಿಸಿದರು. ಅಂದು ಅಭಿಮಾನಕ್ಕಾಗಿ ರಚಿಸಿದ ಈ ಹಾಡು ಕನ್ನಡ ಸಾಹಿತ್ಯದಲ್ಲಿ ಶಾಶ್ವತವಾದ ಸ್ಥಾನವನ್ನು ಪಡೆಯಿತು. ಈ ಹೊತ್ತಿನಲ್ಲಿಯೇ ಬೆಳಗಾವಿಯಲ್ಲಿ ಕರಗುಪ್ಪಿ ಕೃಷ್ಣರಾಯರು ಪ್ರಕಟಿಸುತ್ತಿದ್ದ 'ಮಾತೃಭೂಮಿ' ಮಾಸ ಪತ್ರಿಕೆಯು ಬೆಟಗೇರಿ ಕೃಷ್ಣಶರ್ಮರ ಸಾಹಿತ್ಯ ರಚನೆಗೆ ಮಹತ್ವದ ನೆಲೆಯನ್ನು ಒದಗಿಸಿತು. ಕೃಷ್ಣಶರ್ಮರು ಈ ಪತ್ರಿಕೆಯ ಸಹಸಂಪಾದಕರಾಗಿ ಸೇರಿಕೊಂಡು ಹಲವಾರು ಕವನಗಳನ್ನು ಪ್ರಕಟಿಸಿದರು. ಇದರಿಂದ ಹಲವಾರು ಜನರು ಇವರ ಕವನಗಳನ್ನು ಓದಿ ಸ್ಫೂರ್ತಿಗೊಂಡು ಕನ್ನಡ ಕಾರ್ಯದಲ್ಲಿ ತೊಡಗಿದರು. ಅಂಥವರಲ್ಲಿ ಕರ್ನಾಟಕದ ಸಿಂಹ ಗಂಗಾಧರರಾವ್ ದೇಶಪಾಂಡೆಯವರೂ ಒಬ್ಬರು. ಸ್ವಾತಂತ್ರ್ಯ ಹೋರಾಟಗಾರರಾದ ಇವರು ಮೊದಲಿನಿಂದಲೂ ಮರಾಠಿ ವಾತಾವರಣಕ್ಕೆ ಹೊಂದಿಕೊಂಡವರು. ಇವರಿಗೆ ಕನ್ನಡ ಅಭಿಮಾನ ಜಾಗೃತವಾದದ್ದು 'ಮಾತೃಭೂಮಿ' ಪತ್ರಿಕೆಯಲ್ಲಿನ ಕೃಷ್ಣಶರ್ಮರ ಕವನಗಳನ್ನು ಓದಿದ್ದರಿಂದ. ಈ ವಿಷಯವನ್ನು ದೇಶಪಾಂಡೆಯವರು ಹೇಳಿಕೊಳ್ಳುತ್ತಿದ್ದರೆನ್ನುವುದನ್ನು ದು.ನಿಂ. ಬೆಳಗಲಿಯವರು ಉಲ್ಲೇಖಿಸುತ್ತಾರೆ.[೬೮]

**ಬೆಳಗಾವಿ ಕಾಂಗ್ರೆಸ್ ಅಧಿವೇಶನದಲ್ಲಿ ಸ್ವಾಗತ ಗೀತೆ :** ೧೯೨೪ ರಲ್ಲಿ ಬೆಳಗಾವಿಯಲ್ಲಿ ಮಹಾತ್ಮಾ ಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ಜರುಗಿದ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನದಲ್ಲಿ ಹಾಡಲು ಒಂದು ಸ್ವಾಗತ ಗೀತೆ ಬೇಕಾಗಿತ್ತು. ಸ್ವಾಗತ ಮಂಡಳಿಯವರು ಈ ಸ್ವಾಗತ ಗೀತೆಗಾಗಿ ಕರ್ನಾಟಕದ ಖ್ಯಾತ ಕವಿಗಳನ್ನೆಲ್ಲ ಕೇಳಿಕೊಂಡಿದ್ದರು. ಕೃಷ್ಣಶರ್ಮರೂ ಒಂದು ಗೀತೆಯನ್ನು ರಚಿಸಿ ಸ್ವಾಗತ ಸಮಿತಿಗೆ ಕಳಿಸಿಕೊಟ್ಟಿದ್ದರು. ಅಂದು ಇವರ ಗೀತೆಯೇ ಸ್ವೀಕೃತಿವಾಗಿ ಅಧಿವೇಶನದಲ್ಲಿ ಹಾಡಲ್ಪಟ್ಟಿತು.

೧೯೨೫ರಲ್ಲಿ ಬೆಳಗಾವಿಯಲ್ಲಿ ಜರುಗಿದ ೧೧ನೆಯ ಸಾಹಿತ್ಯ ಸಮ್ಮೇಳನ ಬೆಳಗಾವಿಯಲ್ಲಿ ಜರುಗಿದಾಗ ಬೆಟಗೇರಿಯವರು ಉತ್ಸಾಹದಿಂದ ದುಡಿದರು. ಈ ಸಂದರ್ಭದಲ್ಲಿ ನಾಡಿನ ಅನೇಕ ಹಿರಿಯ ಸಾಹಿತಿಗಳ ಪರಿಚಯವಾಗಿ ಕೃಷ್ಣಶರ್ಮರ ಕಾವ್ಯ ಶಕ್ತಿ ಮತ್ತಷ್ಟು ಹೆಚ್ಚಿತು. ಅಂತೆಯೇ ೧೯೨೯ರಲ್ಲಿ ೧೫ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಮತ್ತೆ ಬೆಳಗಾವಿಯಲ್ಲಿ ಜರುಗಿದಾಗ ಕೃಷ್ಣಶರ್ಮರು ಕವಿ ಗೋಷ್ಠಿಯ ಅಧ್ಯಕ್ಷರು. ಈ ಸಮ್ಮೇಳನದಲ್ಲಿ ಜನಪದ ತ್ರಿಪದಿಗಳನ್ನು ಹಾಡಿ ತೋರಿಸಿದರು. ಇದರಿಂದ ಉತ್ತರ ಕರ್ನಾಟಕದ ಜಾನಪದ ತ್ರಿಪದಿಗಳ ಸೊಗಡು ಎಲ್ಲರಿಗೂ

ತಿಳಿಯುವಂತಾಯಿತು. ಕೃಷ್ಣಶರ್ಮರು ಬೆಳಗಾವಿ ಜಿಲ್ಲೆಯ ಗೋಕಾಕ ತಾಲೂಕಿನ ಬೆಟಗೇರಿಯಲ್ಲಿ ಹುಟ್ಟಿ ಬೆಳಗಾವಿಯಲ್ಲಿ ಬೆಳೆದು 'ಆನಂದ ಕಂದ' ಎನ್ನುವ ಹೆಸರಿನಿಂದ ನಾಡಿನ ಪ್ರಸಿದ್ಧ ಕವಿಗಳಾಗಿ, ಕಥೆಗಾರರಾಗಿ, ಜಾನಪದ ತಜ್ಞರಾಗಿ, ಸಂಶೋಧಕರಾಗಿ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಮಹತ್ವದ ಕೊಡುಗೆಯನ್ನು ನೀಡಿದರು.

ಜಗವೆಲ್ಲ ನಗುತಿರಲಿ ಜಗದಳವು ನನಗಿರಲಿ! ಎಂದು ಕಾವ್ಯದ ಮೂಲಕ ಕೋರಿದ ಕವಿ ಈಶ್ವರಸಣಕಲ್ಲ ಬೆಳಗಾವಿ ಸಾಹಿತ್ಯ ವಲಯದಲ್ಲಿ ಅರಳಿದ ಮಹತ್ವದ ಕವಿ. ಬೆಳಗಾವಿಯ ಜಿ. ಎ. ಹಾಯಸ್ಕೂಲ್‌ನಲ್ಲಿರುವಾಗಲೇ ಶಿ.ಶಿ.ಬಸವನಾಳ, ಎಚ್. ಎಫ್ ಕಟ್ಟಿಮನಿ, ಸಾಖರೆಯವರಂತಹ ಶಿಕ್ಷಕರ ಮಾರ್ಗದರ್ಶನದಲ್ಲಿ ಇವರ ಕಾವ್ಯ ಪ್ರತಿಭೆ ಅರಳಿ ನಿಂತಿತು. ಬಡತನದ ಕಾರಣದಿಂದಾಗಿ ಶಿಕ್ಷಣವನ್ನು ಅರ್ಧಕ್ಕೆ ನಿಲ್ಲಿಸಿ ೧೯೩೫ ರಲ್ಲಿ ಬೆಳಗಾವಿಯಲ್ಲಿ 'ಗ್ರಾಮಸೇವಕ' ಪತ್ರಿಕೆಯ ಸಂಪಾದಕರಾಗಿ ಮುಂಬಯಿ ಕರ್ನಾಟಕದ ನಾಲ್ಕು ಜಿಲ್ಲೆಗಳಿಗೆ ಸಹಕಾರಿ ಪ್ರಶಿಕ್ಷಣ ಮೇಲ್ವಿಚಾರಕರಾಗಿ ಸೇವೆಯನ್ನು ಸಲ್ಲಿಸುತ್ತಲೇ ಕಾವ್ಯ ರಚನೆಯಲ್ಲಿಯೂ ತೊಡಗಿದರು. ಅವರ 'ಕೋರಿಕೆ', 'ಬಟ್ಟೆ' ಎಂಬ ಎರಡು ಕವನ ಸಂಕಲನಗಳು ಪ್ರಕಟವಾಗಿವೆ. ೧೯೮೦ರಲ್ಲಿ ಬೆಳಗಾವಿಯಲ್ಲಿ ಜರುಗಿದ ಕನ್ನಡ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದರು. ತಮ್ಮ ಹೆಚ್ಚಿನ ಅವಧಿಯನ್ನು ಬೆಳಗಾವಿಯಲ್ಲಿಯೇ ಕಳೆದು ಬೆಳಗಾವಿ ಪ್ರದೇಶದ ಸಾಹಿತ್ಯ ಬೆಳವಣಿಗೆಗೆ ಕಾರಣರಾಗಿದ್ದಾರೆ.

ಬೆಳಗಾವಿಯಲ್ಲಿ ಕನ್ನಡ ಸಂಸ್ಕೃತಿಯನ್ನು ಸಾಹಿತ್ಯದ ಮೂಲಕ ಬೆಳೆಸಿದವರಲ್ಲಿ ಶ್ರೀ ಕೃಷ್ಣ ಪಾಟೀಲರು ಪ್ರಮುಖರು. ಡಾ. ಸವಣೂರ ಹಣಮಂತರಾಯರು ನಡೆಸುತ್ತಿದ್ದ ಕರ್ನಾಟಕ ಸಂಘ ಮತ್ತು ವಾಚನಾಲಯದ ಮೂಲಕ ಗುರುತಿಸಿಕೊಂಡು ನಾಟಕ, ಪತ್ರಿಕೆ, ಸಾಹಿತ್ಯ ರಚನೆಯಲ್ಲಿ ತೊಡಗಿ ಸಂಘಗಳನ್ನು ಸ್ಥಾಪಿಸಿ ಕನ್ನಡ ಜಾಗೃತಿಯನ್ನುಂಟು ಮಾಡಿದರು. ಬೆಳಗಾವಿಯಲ್ಲಿ ಇಪ್ಪತ್ತನೆಯ ಶತಮಾನದ ಮೂವತ್ತು-ನಲವತ್ತರ ದಶಕದಲ್ಲಿ ಕನ್ನಡ ನಾಟಕಗಳು ತಲೆ ಎತ್ತದ ಕಾಲದಲ್ಲಿ ತಮ್ಮ ಜೀವನದ ಅನುಭವಗಳನ್ನೇ 'ನಮ್ಮೂರ ನಡತೆ' ಎನ್ನುವ ನಾಟಕದಲ್ಲಿ ಬರೆದು ಅದನ್ನು ರಂಗದ ಮೇಲೆ ಪ್ರಯೋಗಿಸಿದರು. 'ನಾಡನರಿಗಳ ಸಂಘ', 'ತುಂಟರ ತಂಡ' ಮುಂತಾದ ಸಂಘಟನೆಗಳನ್ನು ಹುಟ್ಟುಹಾಕಿ ಕನ್ನಡ ಸಾಹಿತ್ಯದ ಬೆಳವಣಿಗೆಗೆ ಕಾರಣರಾದರು. 'ನಮ್ಮೂರ ನಡತೆ' ನಾಟಕವನ್ನು ಪ್ರಕಟಗೊಳಿಸಿ ಬಿ. ಎಂ. ಶ್ರೀಕಂಠಯ್ಯನವರಿಂದ ಬಿಡುಗಡೆಗೊಳಿಸಿದರು.[೪೯]

ಮುಂದೆ ಹಲವಾರು ಮಹತ್ವದ ಕಾದಂಬರಿಗಳನ್ನು ಶ್ರೀಕೃಷ್ಣ ಪಾಟೀಲರು ರಚಿಸಿದರು. ಇವರ 'ಸಂಜೀವಿನಿ', ಕಾದಂಬರಿಗೆ ವಿ.ಕೃ.ಗೋಕಾಕರು ಮುನ್ನುಡಿಯನ್ನು ಬರೆದಿದ್ದಾರೆ. ಇವರ 'ಜಯಂತ' ಕಾದಂಬರಿಯು ಸುಮಾರು ೫೦೦ ಪುಟಗಳನ್ನು ಹೊಂದಿದೆ. 'ನಪುಂಸಕ', 'ಅಪವಾದ', 'ಚಿದಂಬರ', 'ಗುರುಕುಲ', 'ಹೊಲಮನೆ' ಮುಂತಾದ ಕಾದಂಬರಿಗಳನ್ನು ರಚಿಸಿ ಪ್ರಕಟಿಸಿದರು. 'ವಾಸನಾಭೂತಗಳು', 'ದಾದಿ' ಎನ್ನುವ ಕಥಾಸಂಕಲನಗಳನ್ನು ಪ್ರಕಟಿಸಿದರು.

ಹೀಗೆ ಬೆಳಗಾವಿಯಲ್ಲಿದ್ದುಕೊಂಡೇ ನಾಡಿನ ಪ್ರಸಿದ್ಧ ಸಾಹಿತಿಗಳೊಡನೆ ಸಂಪರ್ಕವನ್ನಿಟ್ಟುಕೊಂಡು ಕನ್ನಡ ಸಾಹಿತ್ಯ ಲೋಕಕ್ಕೆ ಅಮೂಲ್ಯವಾದ ಕೃತಿಗಳನ್ನು ನೀಡಿದ್ದಾರೆ.

ಪ್ರೊ. ಕೆ. ಜಿ. ಕುಂದಣಗಾರರು ಸಂಶೋಧನೆ, ಗ್ರಂಥಸಂಪಾದನೆಯಲ್ಲಿ ಮಹತ್ವದ ಕೊಡುಗೆಯನ್ನು ನೀಡಿದ್ದಾರೆ. ಬೆಳಗಾವಿಯಲ್ಲಿ ಸರದಾರ ಹಾಯ್‌ಸ್ಕೂಲಿನಲ್ಲಿ ತಮ್ಮ ವಿದ್ಯಾಭ್ಯಾಸವನ್ನು ಮುಗಿಸಿ ಪುಣೆಯಲ್ಲಿ ಪದವಿ ಪಡೆದು ಕೊಲ್ಲಾಪುರದಲ್ಲಿ ಪ್ರಾಧ್ಯಾಪಕರಾಗಿ ನಿವೃತ್ತಿ ಹೊಂದಿ ೧೯೪೪ ರಿಂದ ೧೯೬೫ ರವರೆಗೆ ಬೆಳಗಾವಿಯ ರಾಣಿ ಪಾರ್ವತಿದೇವಿ ಮಹಾವಿದ್ಯಾಲಯದಲ್ಲಿ ಅತಿಥಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದರು. 'ಹರಿಹರದೇವ ಪ್ರಶಸ್ತಿ', 'ಅಕ್ಕಮಹಾದೇವಿ' ಮುಂತಾದ ಕೃತಿಗಳನ್ನು ಸಂಶೋಧನಾತ್ಮಕವಾಗಿ ರಚಿಸಿದರು. 'ಕುಮುದೇಂದು ರಾಮಾಯಣ','ಲೀಲಾವತಿ ಪ್ರಬಂಧ' 'ಪಂಪನ ಆದಿಪುರಾಣ' ಮುಂತಾದ ಕೃತಿಗಳನ್ನು ಸಂಪಾದಿಸಿದರು. ಇವರ ವಿದ್ಯಾರ್ಥಿ ಬಳಗ ದೊಡ್ಡದು. ಇವರನ್ನು ಉತ್ತರಕರ್ನಾಟಕದ ಗುರುಗಳ ಗುರು ಎಂದು ಕರೆಯುತ್ತಿದ್ದರು. ಬೆಳಗಾವಿಯಲ್ಲಿದ್ದುಕೊಂಡು ಕನ್ನಡ ಸಾಹಿತ್ಯ ನಿರ್ಮಿತಿಗೆ ಪ್ರೇರಕವಾಗಿ ದುಡಿದರು. ಹಲವಾರು ಜನ ಸಾಹಿತಿಗಳನ್ನು ಹುಟ್ಟುಹಾಕಿದರು. ಪ್ರೊ. ಸ.ಸ.ಮಾಳವಾಡ, ಡಾ. ರಂ.ಶ್ರೀ.ಮುಗಳಿ, ಡಾ. ವಿ.ಕೃ.ಗೋಕಾಕ, ಡಾ. ಡಿ.ಸಿ.ಪಾವಟೆ, ಡಾ. ಆರ್.ಸಿ.ಹಿರೇಮಠ, ಡಾ. ಎಂ.ಎಸ್.ಸುಂಕಾಪುರ, ಡಾ.ಡಿ.ಎಸ್.ಕರ್ಕಿ, ಪ್ರೊ.ಪಿ.ಕೆ.ಬಾಗೋಜಿ ಮುಂತಾದವರು ಇವರ ಶಿಷ್ಯ ಬಳಗದಲ್ಲಿ ಪ್ರಮುಖರು.

ಆಧುನಿಕ ಕನ್ನಡ ಸಾಹಿತ್ಯಕ್ಕೆ ಬೆಳಗಾವಿಯ ಕೆ.ಎಲ್.ಇ. ಸಂಸ್ಥೆಯ ಕೊಡುಗೆ ವಿಶಿಷ್ಟವಾಗಿದೆ. ಶೈಕ್ಷಣಿಕ ಕ್ರಾಂತಿಯ ಜೊತೆಗೆ ಭಾಷೆ, ಸಾಹಿತ್ಯ, ಸಂಸ್ಕೃತಿಯ ಬೆಳವಣಿಗೆಯಲ್ಲಿಯೂ ಮಹತ್ವದ ಕಾರ್ಯಗಳನ್ನು ಕೈಗೊಂಡಿತು. ಕೆ.ಎಲ್.ಇ. ಸಂಸ್ಥೆಯ ಸಂಸ್ಥಾಪಕರು ಸಂಸ್ಥೆಯನ್ನು ಕಟ್ಟುವುದರ ಜೊತೆಗೆ ಸಾಹಿತ್ಯವನ್ನು ರಚಿಸಿದರು. ಜೊತೆಗೆ ಕವಿಗಳಿಗೆ, ಸಂಶೋಧಕರಿಗೆ ಸ್ಫೂರ್ತಿಯನ್ನು ನೀಡಿದರು. ಅಂದಿನ ಕಾಲದ ಪಂಡಿತರಲ್ಲಿ ಹೆಚ್ಚು ಜನರು ಕೆ.ಎಲ್.ಇ. ಸಂಸ್ಥೆಯಲ್ಲಿ ಕಾರ್ಯನಿರ್ವಹಿಸಿದವರಾಗಿದ್ದಾರೆ. ರಾಷ್ಟ್ರ ಅಂತಾರಾಷ್ಟ್ರೀಯ ಮಟ್ಟದಲ್ಲಿ ಸಾಧನೆಗೈದ ಹಲವಾರು ಜನರು ಕೆ.ಎಲ್.ಇ. ಸಂಸ್ಥೆಯ ಕೀರ್ತಿಯನ್ನು ಬೆಳಗಿದ್ದಾರೆ.

ಕೆ. ಎಲ್.ಇ. ಸಂಸ್ಥೆಯ ಸ್ಥಾಪನೆಯಲ್ಲಿ ಮಹತ್ವದ ಕಾರ್ಯನಿರ್ವಹಿಸಿದ ಅರಟಾಳ ರುದ್ರಗೌಡರು ಬೆಳಗಾವಿಯಲ್ಲಿ ನೆಲೆ ನಿಂತು ಕನ್ನಡ ಭಾಷೆ, ಸಾಹಿತ್ಯ, ಶಿಕ್ಷಣದ ವಲಯಗಳಲ್ಲಿ ಮಹತ್ವದ ಕ್ರಾಂತಿಯನ್ನು ಮಾಡಿದರು. ವೀರಶೈವ ಸಮಾಜದ ಏಳ್ಗೆಗಾಗಿ ಹಗಲಿರುಳು ದುಡಿದರು. ಇದರ ಫಲವಾಗಿ ಬೆಳಗಾವಿಯಲ್ಲಿ ಸಾಹಿತ್ಯಿಕ ಚಟುವಟಿಕೆಗಳು ಹೆಚ್ಚತೊಡಗಿದವು. ರುದ್ರಗೌಡರು ಹಲವಾರು ಪತ್ರಿಕೆಗಳಲ್ಲಿ ಮಹತ್ವದ ಸಂಶೋಧನಾತ್ಮಕ ಲೇಖನಗಳನ್ನು ಬರೆದರು. ಇವರ ಲೇಖನಗಳು ಆಗಿನ ಬಾಂಬೆ ರಾಯಲ್ ಏಷಿಯಾಟಿಕ್ ಸೊಸೈಟಿ ಎಂಬ ರಾಷ್ಟ್ರಮಟ್ಟದ ಪ್ರಸಿದ್ಧ ಪತ್ರಿಕೆಯಲ್ಲಿ

ಪ್ರಕಟಗೊಂಡವು. ಬಸವೇಶ್ವರ, ಲಿಂಗಾಯತ ಧರ್ಮ, ಗ್ರಾಮದೇವತೆಗಳು, ಒಕ್ಕಲಿಗ, ಹನುಮ, ಕೃಷ್ಣ, ವಿಷ್ಣು ಮೊದಲಾದ ವಿಷಯಗಳನ್ನು ಕುರಿತು ಬರೆದ ವಿಮರ್ಶಾತ್ಮಕ ಲೇಖನಗಳು ಮಹತ್ವದ್ದಾಗಿವೆ.

ಶ್ರೀ. ಎಸ್. ಎಸ್. ಬಸವನಾಳರು ಅಧ್ಯಯನ, ಅಧ್ಯಾಪನ, ಸಮಾಜ ಸೇವೆ, ಶೈಕ್ಷಣಿಕ ಪ್ರಗತಿ ಮುಂತಾದ ಕಾರ್ಯಗಳ ಜೊತೆಗೆ ಸಾಹಿತ್ಯ ನಿರ್ಮಾಣವನ್ನು ಮಾಡಿದ್ದಾರೆ. ಅಪಾರ ಪಾಂಡಿತ್ಯವನ್ನು ಹೊಂದಿದ್ದ ಇವರು ಕೆ.ಎಲ್.ಇ. ಸಂಸ್ಥೆಯ ಏಳು ಜನ ಸಂಸ್ಥಾಪಕರಲ್ಲಿ ಒಬ್ಬರು. ಬಸವನಾಳರು ಸಾಹಿತ್ಯಕ್ಕೆ ಸಲ್ಲಿಸಿದ ಸೇವೆ ಹಲವು ಮುಖವಾಗಿದೆ. ಪಠ್ಯಪುಸ್ತಕ, ವಚನಗಳ ಅನುವಾದ, ಗ್ರಂಥಸಂಪಾದನೆ, ಅನುವಾದ, ಲೇಖನ, ವಿಮರ್ಶೆ ಹೀಗೆ ವಿಭಿನ್ನ ಪ್ರಕಾರಗಳಲ್ಲಿ ಮಹತ್ವದ ಕೃತಿಗಳನ್ನು ರಚಿಸಿದ್ದಾರೆ. ಇಂಗ್ಲೆಂಡಿನ ಅರ್ವಾಚೀನ ಇತಿಹಾಸವನ್ನು ಎರಡು ಭಾಗಗಳಲ್ಲಿ ಹ.ಚ. ಹಲಗಲಿಯವರೊಂದಿಗೆ ಸೇರಿ ಬರೆದಿದ್ದಾರೆ. ಕನ್ನಡ ಚೆನ್ನುಡಿ, ಚನ್ನಬಸವ ಪುರಾಣದ ಆಯ್ದ ಭಾಗಗಳು ಮುಂತಾದ ವಿದ್ಯಾರ್ಥಿಗಳಿಗೆ ಉಪಯುಕ್ತವಾದ ಕೃತಿಗಳನ್ನು ರಚಿಸಿದರು.

ಪ್ರಾಚೀನ ಗ್ರಂಥಗಳನ್ನು ಶಾಸ್ತ್ರೀಯ ರೀತಿಯಲ್ಲಿ ಪರಿಷ್ಕರಣ ಮಾಡಿದುದು ಶಿ.ಶಿ.ಬಸವನಾಳರ ಬಹುಮುಖ್ಯ ಸಾಧನೆಯಾಗಿದೆ. ವಿರೂಪಾಕ್ಷ ಪಂಡಿತನ ಚನ್ನಬಸವಪುರಾಣ, ಚಾಮರಸನ ಪ್ರಭುಲಿಂಗಲೀಲೆ, ನಾಗವರ್ಮನ 'ಕಾವ್ಯಾವಲೋಕನ', ಷಡಕ್ಷರದೇವನ 'ಶಬರಶಂಕರವಿಳಾಸಂ', ಭಟ್ಟಾಕಳಂಕನ 'ಕರ್ಣಾಟಕ ಶಬ್ದಾನುಶಾಸನ' ಮುಂತಾದ ಮಹತ್ವದ ಕೃತಿಗಳನ್ನು ಸಂಪಾದಿಸಿದ್ದಾರೆ. ವಿಮರ್ಶಾ ಸಾಹಿತ್ಯಕ್ಕೆ ಬಸವನಾಳರ ಕೊಡುಗೆ ಮಹತ್ವದ್ದಾಗಿದೆ. ತೌಲನಿಕವಾದ ವಿಮರ್ಶೆಯ ಮೂಲಕ ಕನ್ನಡ ಮತ್ತು ಇಂಗ್ಲಿಷ್ ಭಾಷೆಯ ವಿವಿಧ ವಿಷಯದ ಪ್ರಸಿದ್ಧ ಕೃತಿಗಳನ್ನು ವಿಮರ್ಶಿಸಿದ್ದಾರೆ.

ಬೆಳಗಾವಿಯಲ್ಲಿ ಸಾಹಿತ್ಯಿಕ ಚಟುವಟಿಕೆಗಳು ಹೆಚ್ಚಾಗತೊಡಗಿದ್ದು ೧೯೩೩ ರಲ್ಲಿ ಸ್ಥಾಪನೆಗೊಂಡ ಲಿಂಗರಾಜ ಮಹಾವಿದ್ಯಾಲಯದ ಪ್ರಾಧ್ಯಾಪಕ ಬಳಗದಿಂದ. ೧೯೧೬ ರಲ್ಲಿ ಸ್ಥಾಪನೆಗೊಂಡಿದ್ದ ಗಿಲಗಂಚಿ ಅರಟಾಳ ಹಾಯ್‌ಸ್ಕೂಲ್‌ನ ಶಿಕ್ಷಕ ವರ್ಗವು ಈಗಾಗಲೇ ಸಾಹಿತ್ಯ ನಿರ್ಮಾಣದಲ್ಲಿ ತೊಡಗಿಕೊಂಡಿತ್ತು. ಈ ಎರಡೂ ಸಂಸ್ಥೆಗಳು ಬೆಳಗಾವಿಯ ಸಾಹಿತ್ಯ ವಲಯದಲ್ಲಿ ಮಹತ್ವದ ಕಾರ್ಯಗಳನ್ನು ಕೈಗೊಂಡವು. ಇಲ್ಲಿಯ ಶಿಕ್ಷಕ, ಪ್ರಾಧ್ಯಾಪಕ ವರ್ಗವು ಸಾಹಿತ್ಯ ಚಟುವಟಿಕೆಯಲ್ಲಿ ತೊಡಗಿ ಬೆಳಗಾವಿಯಲ್ಲಿ ಕನ್ನಡ ತಲೆ ಎತ್ತುವಂತೆ ಮಾಡಿದರು. ಡಾ. ಡಿ. ಎಸ್. ಕರ್ಕಿ, ಶ್ರೀ ಎಸ್. ಡಿ. ಇಂಚಲ, ಶ್ರೀ ಭುಜೇಂದ್ರ ಮಹಿಷವಾಡಿ, ಡಾ. ಬುದ್ದಣ್ಣ ಹಿಂಗಮಿರೆ, ಪ್ರೊ. ಶ್ರೀನಿವಾಸ ತೋಫಖಾನೆ, ಪ್ರೊ. ಸಂ.ಶಿ.ಭೂಸನೂರಮಠ, ಡಾ. ಚಂದ್ರಶೇಖರ ಕಂಬಾರ ಹೀಗೆ ನಿರಂತರವಾಗಿ ಈ ಪರಂಪರೆ ಬೆಳೆಯುತ್ತಲೇ ಇದೆ.

ಡಾ. ಡಿ. ಎಸ್. ಕರ್ಕಿಯವರು ನಾಡಿನ ಶ್ರೇಷ್ಠ ಕವಿಗಳಾಗಿ ಹೆಸರಾಗಿದ್ದಾರೆ. ಇವರು ರಚಿಸಿದ ಸಾಹಿತ್ಯ ರೋಮಾಂಚನವನ್ನುಂಟು ಮಾಡುತ್ತದೆ. ಬೆಳಗಾವಿಯಲ್ಲಿ ಕನ್ನಡದ ಸಾಂಸ್ಕೃತಿಕ ವಾತಾವರಣವನ್ನು ನಿರ್ಮಿಸಿದ ಕೀರ್ತಿ ಕರ್ಕಿಯವರಿಗೆ ಸಲ್ಲುತ್ತದೆ. ಇವರ ಮನೆ ಸದಾಕಾಲ ಸಾಹಿತಿಗಳಿಂದ ತುಂಬಿರುತ್ತಿತ್ತು.

ಕರ್ಕಿಯವರು ಬೆಳಗಾವಿಯಲ್ಲಿದ್ದಾಗ ಕಿರಿಯರ ಬಳಗವನ್ನು ಕಟ್ಟಿಕೊಂಡು 'ತುಂಬಿ' ಎಂಬ ಕವನ ಸಂಕಲನವನ್ನು ಪ್ರಕಟಿಸಿದರು. ಶ್ರೀ ಬ. ಗಂ. ತುರಮರಿಯವರು ಅದನ್ನು ಸಂಘಟಿಸುವಲ್ಲಿ ಮಹತ್ವದ ಪಾತ್ರವನ್ನು ವಹಿಸಿದ್ದರು. ಆ ಬಳಗದಲ್ಲಿ ಶ್ರೀ ಎಸ್. ಡಿ. ಇಂಚಲ, ಈಶ್ವರ ಸಣಕಲ್ಲ, ವ್ಹಿ. ಕೆ. ಕರಡಿ, ಮುಂತಾದವರು ಇದ್ದರು. ಈ ಕವನ ಸಂಕಲನಕ್ಕೆ ಶ್ರೀ ಕುವೆಂಪುರವರು ಮುನ್ನುಡಿ ಬರೆದಿರುವರು. ಮುಂದೆ 'ತಿರುಗಣಿ' ಎಂಬ ಕಥಾ ಸಂಕಲನವು ಪ್ರಕಟವಾಯಿತು. ಇದಕ್ಕೆ ಅ.ನ.ಕೃಷ್ಣರಾಯರು ಮುನ್ನುಡಿಯನ್ನು ಬರೆದಿದ್ದಾರೆ.

ಈ ಬಳಗದ ಚಟುವಟಿಕೆಗಳಿಂದ ಉದಯೋನ್ಮುಖ ಲೇಖಕರಿಗೆ, ಸಾಹಿತ್ಯಿಕ ಕಾರ್ಯಕ್ರಮಗಳಿಗೆ ಉತ್ತೇಜನ ದೊರೆಯಿತು. ಕನ್ನಡ ನಾಡ ಹಬ್ಬ ಹಾಗೂ ಇತರ ಕನ್ನಡ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಬಳಗದವರೆಲ್ಲ ಸಕ್ರಿಯವಾಗಿ ಭಾಗವಹಿಸುತ್ತಿದ್ದರು.

ಕರ್ಕಿಯವರ ಪ್ರಮುಖ ಕೃತಿಗಳಲ್ಲಿ ನಕ್ಷತ್ರ, ಭಾವತೀರ್ಥ, ಬಣ್ಣದ ಚೆಂಡು, 'ತನನ ತೋಮ' ಮುಂತಾದವುಗಳು ಮಹತ್ವದ ಕವನ ಸಂಕಲನಗಳಾಗಿವೆ. ಕರ್ಕಿಯವರ ಪ್ರಸಿದ್ಧ ಗೀತೆ 'ಹಚ್ಚೇವು ಕನ್ನಡದ ದೀಪ'. ಅದನ್ನು ಕೇಳಿದಾಗೊಮ್ಮೆ ನರನಾಡಿಗಳಲ್ಲಿ ರೋಮಾಂಚನ ಉಂಟಾಗುತ್ತದೆ. ಇಂದಿಗೂ ಕೂಡ ಈ ಗೀತೆಯು ಕನ್ನಡದ ಸೇವೆಗೆ ಯುವಕ–ಯುವತಿಯರನ್ನು ಅಣಿಗೊಳಿಸುವ ವೀರಗೀತೆಯಾಗಿದೆ.

ಮಹಾತ್ಮಾಗಾಂಧೀಜಿಯವರು ಅಗಲಿದಾಗ ರಚಿಸಿದ 'ತಿಳಿ ನೀಲದಲ್ಲಿ ತಾ ನೀಲವಾಗಿ ಅವ ಹೋದ ದೂರ ದೂರ, ಬೆಳಗಿಹುದ ಇಲ್ಲಿ ಅವ ಬಿಟ್ಟ ಬೆಳಕು; ಇನ್ನೊಮ್ಮೆ ಏಕೆ ಬಾರ!'ಎನ್ನುವ ಗೀತೆಯು ಹೃದಯವನ್ನು ಕಲಕುತ್ತದೆ.

ಕನ್ನಡ ಛಂದೋವಿಕಾಸ, ನಾಲ್ದೆಸೆಯ ನೋಟ, ಮಕ್ಕಳ ಶಿಕ್ಷಣ ಸಾಹಿತ್ಯ ಸಂಸ್ಕೃತಿ ಶ್ರುತಿ ಹೀಗೆ ಇತ್ಯಾದಿಯಾಗಿ ಕನ್ನಡ ಸಾರಸ್ವತ ಲೋಕಕ್ಕೆ ಮಹತ್ವದ ಕೃತಿಗಳನ್ನು ನೀಡಿದ್ದಾರೆ.

ಶ್ರೀ ಎಸ್.ಡಿ. ಇಂಚಲರು ಬೆಳಗಾವಿಯಲ್ಲಿ ಕನ್ನಡದ ತುತ್ತೂರಿಯನ್ನು ಊದಿ ಬೆಳಗಾವಿ ಕನ್ನಡಿಗರನ್ನು ಬಡಿದೆಬ್ಬಿಸಿದರು.

"ಬನ್ನಿ ಓ ಬಾಂಧವರೆ ಸ್ವಾಗತವು ನಿಮಗೆ
ಕನ್ನಡದ ಗಡಿನಾಡು ಬೆಳಗಾವಿಗೆ
ಕರುನಾಡಿ ನೆತ್ತರದ ಬಿತ್ತರದ ಕೋಟೆಯ
ಭದ್ರ ಬಾಗಿಲವೆಮ್ಮ ಬೆಳಗಾವಿಗೆ"

ಎಂದು ಬೆಳಗಾವಿಗೆ ಸ್ವಾಗತ ಕೋರಿ ಬರೆದ ಪ್ರಸಿದ್ಧ ಕವಿತೆಯನ್ನು ೧೯೭೧ ರಲ್ಲಿ ಬೆಳಗಾವಿ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ನಾಂದಿಗೀತೆಯಾಗಿ ಹಾಡಿಸಲಾಗಿತ್ತು. ಇದನ್ನು ಕೇಳಿದ ಎಲ್ಲ ಸಭೀಕರು ರೋಮಾಂಚನಗೊಂಡರು.

ಎಸ್.ಡಿ. ಇಂಚಲರು ತಮ್ಮ ಬದುಕಿನುದ್ದಕ್ಕೂ ಕವನಗಳ ಮುಖಾಂತರ, ಭಾಷಣಗಳ ಮುಖಾಂತರ ಬೆಳಗಾವಿಯಲ್ಲಿ ಸಾಹಿತ್ಯಿಕ ಚಟುವಟಿಕೆಯಲ್ಲಿ ತೊಡಗಿಕೊಂಡಿದ್ದರು.

ಗಂಟು ಮೂಟೆಯ ಕಟ್ಟಿ ಏಳು ಕನ್ನಡ ಬಂಟ।
ಗಡಿಯ ರಕ್ಷಣೆ ನಿನ್ನ ಹೊಣೆಯು ತಾನು
ಎಂಟೆದೆಯ ಬಂಟರನು ಮೆಟ್ಟನಿಲ್ಲುವ ಕೆಚ್ಚು
ನಿನ್ನ ತಾಯ್ ಮೊಲೆ ಹಾಲಿಗಿಲ್ಲವೇನು?

ಹಿರಿಯರೊಪ್ಪಿದ ಗೆರೆಯ ಮತ್ತೆ ಕೆಣಕಲು ಬೇಡ
ಕರಳು ಕಿಚ್ಚಾಗುವದು ದುಡಕ ಬೇಡ
ಮರೆದು ಹಿಂದಿನದೆಲ್ಲ ಮುಂದೆ ಹೊಂದಿಕೆಯಾಗಿ
ಬಾಳೋಣ ಬಾ ಬಂಧು ಮಿಡುಕ ಬೇಡ।

ಡಿಂಡಿಮ ಕವನ ಸಂಕಲನದಲ್ಲಿಯ ಈ ಕವಿತೆಯ ಮೂಲಕ ಎಸ್. ಡಿ. ಇಂಚಲರು ಮಲಗಿದ ಕನ್ನಡಿಗರನ್ನು ಬಡಿದೆಬ್ಬಿಸಿದ್ದಾರೆ. ಇದರ ಜೊತೆಗೆ ಕಾಲು ಕೆದರಿ ಜಗಳಕ್ಕೆ ಬರುವ ಮರಾಠಿಗರನ್ನು ಕೂಡಿ ಬಾಳಲು ಬರಹೇಳಿದ್ದಾರೆ. ಇಂಚಲರು ಹೆಚ್ಚಾಗಿ ರಾಷ್ಟ್ರೀಯ ಭಾವೈಕ್ಯವನ್ನು ಕುರಿತು ಕಾವ್ಯಗಳನ್ನು ಬರೆದಿದ್ದಾರೆ. ತಮ್ಮ ಕವಿತಗೆಗಳ ಮೂಲಕ ಬೆಳಗಾವಿ ಜನತೆಯಲ್ಲಿ ನೆಲ-ಜಲ-ಭಾಷೆಯ ಅಭಿಮಾನವನ್ನು ಮೂಡಿಸಿದರು.

ನಾಡಿನ ಖ್ಯಾತ ಸಂಶೋಧಕರು ಶಿಕ್ಷಣತಜ್ಞರಾದ ಡಾ. ಎಸ್. ಸಿ, ನಂದೀಮಠರು ಬೆಳಗಾವಿಯ ಜಿ.ಎ. ಹಾಯಸ್ಕೂಲಿನಲ್ಲಿ ೧೯೩೦ ರಿಂದ ೧೯೩೩ ರವರೆಗೆ ಶಿಕ್ಷಕರಾಗಿ ೧೯೩೩ ರಿಂದ ೧೯೪೪ ರವರೆಗೆ ಲಿಂಗರಾಜ ಮಹಾವಿದ್ಯಾಲಯದ ಪ್ರಥಮ ಪ್ರಾಚಾರ್ಯರಾಗಿ ಕನ್ನಡ ಸಾಹಿತ್ಯಕ್ಕೆ ಅಮೂಲ್ಯವಾದ ಕೊಡುಗೆಯನ್ನು ನೀಡಿದ್ದಾರೆ. 'ಹ್ಯಾಂಡ್ ಬುಕ್ ಆಫ್ ವೀರಶೈವಿಜಮ್' ಎನ್ನುವ ಸಂಶೋಧನ ಪ್ರಬಂಧವನ್ನು ಲಂಡನ್ ವಿಶ್ವವಿದ್ಯಾಲಯಕ್ಕೆ ಅರ್ಪಿಸಿ ಪಿಎಚ್.ಡಿ. ಪದವಿಯನ್ನು ಪಡೆದರು. ಸುಮಾರು ೧೪ ವರ್ಷಗಳವರೆಗೆ ಬೆಳಗಾವಿಯಲ್ಲಿ ನೆಲೆ ನಿಂತು ಕನ್ನಡ ಸಂಶೋಧನೆಗೆ ಹೆಚ್ಚಿನ ಮಹತ್ವವನ್ನು ನೀಡಿದರು.

'ಕುರುಂಬೆಟ್ಟದ ಶಿಲಾಶಾಸನವು', 'ಕೈಬರಹದ ಗ್ರಂಥಗಳ ಶೋಧನೆಯು', 'ಕೊಲ್ಲಿಪಾಕಿ', 'ಚೌಡದಾನಪುರದ ಶಿಲಾಶಾಸನಗಳು', 'ವೀರಶೈವರ ಇತಿಹಾಸ ಮತ್ತು ಧರ್ಮ' ಮುಂತಾದ ಶಾಸನಗಳನ್ನು ಬೆಳಕಿಗೆ ತಂದರು. ಇವರು ಬಾಗಲಕೋಟೆಯ ಬಸವೇಶ್ವರ ಕಾಲೇಜಿನ ಪ್ರಿನ್ಸಿಪಾಲರಾಗಿದ್ದಾಗ 'ಗಿರಿಜಾ ಕಲ್ಯಾಣ'ವನ್ನು ಸಂಪಾದಿಸಿದರು. 'ಕರ್ನಾಟಕದ ಧರ್ಮಗಳು', 'ಸಂಸ್ಕೃತ ಬಸವ ಪುರಾಣ' ಮುಂತಾದ ಪ್ರಾಚೀನ ಕೃತಿಗಳನ್ನು ಸಂಪಾದಿಸಿದ್ದಾರೆ. ವೀರಶೈವ ಧರ್ಮ, ಸಾಹಿತ್ಯ, ಪ್ರಾಚೀನತೆ, ಕುರಿತು ಹಲವಾರು ಸಂಶೋಧನಾತ್ಮಕ ಲೇಖನಗಳನ್ನು ಬರೆದಿದ್ದಾರೆ.

ಪ್ರಗೋ.ಕುಲಕರ್ಣಿಯವರು ಕನ್ನಡ ಭಾಷೆ, ವ್ಯಾಕರಣ, ಛಂದಸ್ಸು, ವಿಷಯದಲ್ಲಿ ಅಪಾರವಾದ ಪಾಂಡಿತ್ಯವನ್ನು ಪಡೆದ ಶಿಕ್ಷಕರು. 'ಕನ್ನಡ ಭಾಷಾ ಚರಿತ್ರೆ' 'ಭಾರತೀಯ ಛಂದಶ್ಶಾಸ್ತ್ರ' ಎಂಬ ಎರಡು ಅಮೂಲ್ಯ ಕೃತಿಗಳ ಮೂಲಕ ಪಾಂಡಿತ್ಯ ಪೂರ್ಣವಾದ ಸಾಹಿತ್ಯವನ್ನು ನಿರ್ಮಿಸಿದ್ದಾರೆ. ಇವರು ರಚಿಸಿದ ಮಕ್ಕಳ ಸಾಹಿತ್ಯವೂ ಮಹತ್ವದ್ದಾಗಿದೆ. ಕಿಟ್ಟು ಬೆಟ್ಟ ಎತ್ತಿದ, ರಾಜಾ ಹರಪಾಲ, ಪೌರಾಣಿಕ ಕಥೆಗಳು ಮುಂತಾದ ಕೃತಿಗಳನ್ನು ರಚಿಸಿದ್ದಾರೆ. ಬೆಳಗಾವಿ ಜಿಲ್ಲೆಯನ್ನು ಕುರಿತು ಸಂಶೋಧನಾತ್ಮಕ ಲೇಖನಗಳನ್ನು ಬರೆದು ಮಹತ್ವದ ವಿಷಯಗಳ ಮೇಲೆ ಬೆಳಕು ಚೆಲ್ಲಿದ್ದಾರೆ.

ಬೆಳಗಾವಿ ಜಿ. ಎ. ಹೈಸ್ಕೂಲಿನಲ್ಲಿ ಶಿಕ್ಷಕರಾಗಿ, ಪ್ರಾಚಾರ್ಯರಾಗಿ ಸೇವೆ ಸಲ್ಲಿಸಿದ ಶ್ರೀ ಸಿದ್ದಣ್ಣ ಮಸಳಿಯವರು ನವೋದಯ ಕಾವ್ಯ ಮಾರ್ಗದಲ್ಲಿ ಮಹತ್ವದ ಕಾವ್ಯಗಳನ್ನು ರಚಿಸಿದ್ದಾರೆ. ಇವರ 'ಪಂಜರ ಪಕ್ಷಿ' ಸರಳ ಸುಂದರವಾದ ಕವಿತಾ ಸಂಕಲನವಾಗಿದೆ. ಈ ಕವನ ಸಂಕಲನದಲ್ಲಿಯ 'ಪಂಜರ ಪಕ್ಷಿ' ಕವಿತೆಯನ್ನು ಕರ್ನಾಟಕ, ಮಹಾರಾಷ್ಟ್ರ ಹಾಗೂ ಕೇರಳ ರಾಜ್ಯಗಳ ಪಠ್ಯಪುಸ್ತಕ ಸಮಿತಿಯವರು ಅನೇಕ ಸಲ ಆರನೆಯ ತರಗತಿಯ ಪಠ್ಯಪುಸ್ತಕದಲ್ಲಿ ಸೇರಿಸಿಕೊಂಡಿದ್ದಾರೆ.

ನಾನು ಪಂಜರ ಪಕ್ಷಿ, ಇನ್ನು ನನಗಾರು ಗತಿ
ಕೇಳ ಬಯಸುವಿಯೇನು ನನ್ನ ಕಥೆಯ!
ಯಾರ ಸಂತೋಷಕ್ಕೆ ಹಿಡಿದು ತಂದರೊ ನನ್ನ
ಅರಿಯ ಬಲ್ಲೆಯಾ ನನ್ನ ಒಡಲ ವ್ಯಥೆಯ!
ಬಹುದೂರ ಯಾವುದೋ ಪರ್ವತದ ಓರೆಯಲಿ
ಮರದ ಕಿರಿ ಹೊದರಿನಲಿ ಜನಿಸಿ ಬಂದೆ!
ಆ ತಂದೆ ತಾಯಿಯರು, ನನ್ನಣ್ಣ ತಂಗಿಯರು
ಅವರ ಜೊತೆಯಲಿ ನಾನು ನಲಿಯುತ್ತಿದ್ದೆ.

ಸ್ವಚ್ಛಂದವಾಗಿ ಗಿಡಗಂಟಿಗಳಲ್ಲಿ ಹಣ್ಣು ಹಂಪಲು ತಿಂದು ವಿಹರಿಸುವ ಹಕ್ಕಿ, ಪಂಜರದಲ್ಲಿ ಸಿಲುಕಿಕೊಂಡಾಗ, ವ್ಯಥೆ ಪಡುವ ಸನ್ನಿವೇಶ ಕರಳು ಹಿಂಡುತ್ತದೆ. ಮನುಷ್ಯ ತನ್ನ ಸಂತೋಷಕ್ಕಾಗಿ ಸೃಷ್ಟಿಯ ಮೇಲೆ ನಡೆಸುತ್ತಿರುವ ದೌರ್ಜನ್ಯದ ಧ್ವನಿಯೂ ಈ ಕವನದಲ್ಲಿ ಅಡಕವಾಗಿದೆ.

'ಮನೆತುಂಬಿದ ಬೆಳಕು', 'ದೀಪಾವತಾರ' ಮುಂತಾದ ಕವನ ಸಂಕಲನಗಳು ನವೋದಯದ ಸಂದರ್ಭದಲ್ಲಿ ಬೆಳಗಾವಿಯಿಂದ ಮೂಡಿ ಬಂದವು. ಕನ್ನಡ ಭಾಷೆ, ಶಿಕ್ಷಣ, ಸಂಸ್ಕೃತಿಯ ಬೆಳಗವಣಿಗೆಗಾಗಿ ಬೆಳಗಾವಿಯಲ್ಲಿ ಹಿರಿಕಿರಿಯ ಸಾಹಿತಿಗಳ ಜೊತೆಗೆ ಕೂಡಿಕೊಂಡು ಹಲವಾರು ರಚನಾತ್ಮಕ ಕಾರ್ಯಗಳನ್ನು ಕೈಕೊಂಡರು. ಯುವ ಕವಿಗಳಿಗೆ ಪ್ರೋತ್ಸಾಹವನ್ನು ನೀಡಿ ಸಾಹಿತ್ಯದ ಬಗೆಗೆ ಒಲವು ಮೂಡಿಸಿದರು.

ಇವರ ಮನೆ ತುಂಬಿದ ಬೆಳಕು ಕವನ ಸಂಕಲನಕ್ಕೆ ಮುನ್ನುಡಿಯನ್ನು ಬರೆದ ಬಸವರಾಜ ಕಟ್ಟಿಮನಿಯವರು ರೋಮ್ಯಾಂಟಿಕ್ ಮಾರ್ಗ ಮತ್ತು ನವ್ಯ ಮಾರ್ಗಗಳೆರಡರಲ್ಲೂ ನಡೆದು ಹಲವು ಉತ್ತಮ ಕವಿತೆಗಳನ್ನು ರಚಿಸಿ ಕಾವ್ಯ ಪ್ರೇಮಿಗಳ ಹೃದಯ ಸೂರೆಗೊಂಡವರು ಸಿದ್ಧಣ್ಣ ಎಂದಿದ್ದಾರೆ.

ಪ್ರೊ. ವ್ಹಿ.ಜಿ.ಕುಲಕರ್ಣಿಯವರು ೧೯೩೩ ರಿಂದ ೧೯೬೧ ರವರೆಗೆ ಲಿಂಗರಾಜ ಮಹಾವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸೇವೆಸಲ್ಲಿಸುತ್ತಲೇ ಕನ್ನಡ ಸಾಹಿತ್ಯ, ಸಂಸ್ಕೃತಿಯ ಪ್ರಸಾರದಲ್ಲಿ ತೊಡಗಿದ್ದರು. ಕನ್ನಡ, ಇಂಗ್ಲಿಷ್, ಸಂಸ್ಕೃತ ಭಾಷೆಗಳನ್ನು ಬಲ್ಲ ಇವರು ಬರೆದದ್ದು ಕಡಿಮೆ. ಆದರೆ ಮಾಡಿದ್ದು ಬಹಳ. ಬೆಳಗಾವಿಯಲ್ಲಿ ಮೂವತ್ತರ ದಶಕದಲ್ಲಿ ಕನ್ನಡ ವಾತಾವರಣ ನಿರ್ಮಿಸುವಲ್ಲಿ ಶ್ರಮಿಸಿದರು. ನಾಟಕಗಳನ್ನು ಪ್ರಯೋಗಿಸಿ ಸ್ವತಃ ತಾವೇ ಅಭಿನಯಿಸಿದರು. ಗದಾಯುದ್ಧ ಪಾತ್ರದಲ್ಲಿ ದುರ್ಯೋಧನನ ಪಾತ್ರ ಮಾಡಿದಾಗ ಬಿ. ಎಂ. ಶ್ರೀಯವರು ವೇದಿಕೆಯ ಮೇಲೆಯೇ ಬಂದು ವ್ಹಿ.ಜಿ.ಯವರನ್ನು ಅಪ್ಪಕೊಂಡು ಅಭಿನಂದಿಸಿದ್ದರು. ವಿದ್ಯಾರ್ಥಿಗಳಲ್ಲಿ ನಾಟಕದ ಬಗೆಗೆ ಅಭಿಮಾನ ಮೂಡುವಂತೆ ಮಾಡಿದರು. ಇವರ ಕೆಲವು ಲೇಖನಗಳು ಆಕಾಶವಾಣಿಯಲ್ಲಿ, ಕಾಲೇಜ ವಾರ್ಷಿಕ ಪತ್ರಿಕೆಯಲ್ಲಿ ಪ್ರಕಟಗೊಂಡಿವೆ.

ಪ್ರೊ. ಎಸ್. ಎಸ್. ಭೂಸನೂರಮಠರು ೧೯೪೩ ರಿಂದ ೧೯೭೬ ರವರೆಗೆ ಲಿಂಗರಾಜ ಮಹಾವಿದ್ಯಾಲಯದಲ್ಲಿ ಕನ್ನಡದ ಅಧ್ಯಾಪಕರಾಗಿದ್ದರು. ಕನ್ನಡ, ಸಂಸ್ಕೃತ ಮತ್ತು ಇಂಗ್ಲೀಷ್ ಸಾಹಿತ್ಯವನ್ನು ಆಳವಾಗಿ ಅಧ್ಯಯನ ಮಾಡಿದ್ದರು. ಪೌರ್ವಾತ್ಯ-ಪಾಶ್ಚಿಮಾತ್ಯ ತತ್ವಜ್ಞಾನಗಳನ್ನು, ವಿಜ್ಞಾನವನ್ನು ಅಧ್ಯಯನ ಮಾಡಿ ಗಂಭೀರ ಸಾಹಿತ್ಯವನ್ನು ರಚಿಸಿದರು. ವ್ಯಾಕರಣ, ಛಂದಸ್ಸು, ಅಲಂಕಾರ ಶಾಸ್ತ್ರಗಳಲ್ಲಿ ಪಾಂಡಿತ್ಯವನ್ನು ಹೊಂದಿದ್ದರು.

ಇವರು ವೀರಶೈವ ಸಾಹಿತ್ಯದಲ್ಲಿ ಅದ್ಭುತವಾದ ಸಾಹಿತ್ಯ ರಚನೆಯನ್ನು ಮಾಡಿದ್ದಾರೆ. ಭಕ್ತಿಸುಧಾಸಾರ, ಗುರುರಾಜ ಚಾರಿತ್ರ್ಯ, ಮೋಳಿಗೆಯ ಮಾರಯ್ಯ ಮತ್ತು ರಾಣಿ ಮಹಾದೇವಿಯರ ವಚನಗಳು, ಮೋಳಿಗೆಮ್ಮನ

ಪುರಾಣ, ಲಿಂಗಲೀಲಾ ವಿಲಾಸ ಚಾರಿತ್ರ್ಯ, ಪ್ರೌಢರಾಯನ ಕಾವ್ಯ, ಪ್ರಭುದೇವರ ಶೂನ್ಯಸಂಪಾದನೆ, ಶೂನ್ಯ ಸಂಪಾದನೆಯ ಪರಾಮರ್ಶೆ ಮತ್ತು ಭವ್ಯ ಮಾನವ ಮಹಾ ಕಾವ್ಯಗಳನ್ನು ರಚಿಸಿದರು.

ಶ್ರೀ ಭುಜೇಂದ್ರ ಮಹಿಷವಾಡಿಯವರು ೧೯೬೧ ರಿಂದ ೧೯೬೮ ರವರೆಗೆ ಲಿಂಗರಾಜ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು. ಈ ಅಲ್ಪ ಅವಧಿಯಲ್ಲಿಯೇ ಬೆಳಗಾವಿಯಲ್ಲಿ ಮಹತ್ವದ ಸಾಹಿತ್ಯಿಕ ಕಾರ್ಯಗಳನ್ನು ಕೈಕೊಂಡರು. 'ಸ್ನೇಹ ಪ್ರಕಾಶ'ವೆಂಬ ಸಂಸ್ಥೆ ಕಟ್ಟಿ ಬಿ.ಎ. ಸನದಿ, ಬುದ್ಧಣ್ಣ ಹಿಂಗಮಿರೆ, ಚಂದ್ರಶೇಖರ ಕಂಬಾರ ಮುಂತಾದ ಯುವ ಬರಹಗಾರರನ್ನು ಸಿದ್ಧಗೊಳಿಸಿದರು. ಇವರ ಮಾಯಾ ಮಂದಿರ, ಹುಲ್ಲು-ಹಣ್ಣು, ಕಟ್ಟುವ ಕೈ, ಹಂಸಮಿಥುನ; ಬೆರಕಿಮಂದಿ ಮುಂತಾದ ಕವನ ಸಂಕಲನಗಳು ಗಮನ ಸೆಳೆದಿವೆ.

ಕನ್ನಡ ಅಧ್ಯಾಪಕರಾಗಿ ಲಿಂಗರಾಜ ಕಾಲೇಜಿಗೆ ಬಂದ ಪ್ರೊ. ಎಂ.ಬಿ.ಕೊಟ್ರಶೆಟ್ಟಿಯವರು ೧೯೬೪ ರಿಂದ ೧೯೭೦ ರವರೆಗೆ ಸೇವೆ ಸಲ್ಲಿಸಿದರು. ಸಿದ್ಧರಾಮ ಶಿವಯೋಗಿಯವರನ್ನು ಕುರಿತು ಸಂಶೋಧನೆ ಕೈಕೊಂಡು ಪಿಎಚ್.ಡಿ. ಪದವಿಯನ್ನು ಪಡೆದರು.

ಕನ್ನಡ ಹಾಗೂ ಸಂಸ್ಕೃತಗಳಲ್ಲಿ ವಿದ್ವಾಂಸರಾದ ಡಾ. ಎಚ್. ಜಿ. ಲೋಕೂರ ಅವರು ೧೯೬೮ ರಲ್ಲಿ ಲಿಂಗರಾಜ ಕಾಲೇಜಿಗೆ ಪ್ರಾಧ್ಯಾಪಕರಾಗಿ ಬಂದರು. ವ್ಯಾಕರಣ ಮತ್ತು ಅಲಂಕಾರ ಶಾಸ್ತ್ರ ವಿಷಯಗಳನ್ನು ಶ್ರದ್ಧೆಯಿಂದ ಕಲಿಸಿ ವಿದ್ಯಾರ್ಥಿಗಳಲ್ಲಿ ಆಸಕ್ತಿಯನ್ನು ಮೂಡಿಸಿದರು. ದಾಸವಾಣಿ ಶ್ರೀ ವಾದಿರಾಜರ ಕನ್ನಡ ಕೃತಿಗಳು, ಲೀಲಾಶಕುನ ಶ್ರೀ ಕೃಷ್ಣಕರ್ಣಾಮೃತಂ, ಹತ್ತು ಹಿರಿಯ ದಾಸರು, ವಾದಿರಾಜ ತೀರ್ಥಕೃತ ಅವತಾರತ್ರಯ ಸುವ್ವಾಲಿ ಮುಂತಾದ ಕೃತಿಗಳನ್ನು ರಚಿಸಿದ್ದಾರೆ.

೧೯೩೩ ರಿಂದ ೧೯೪೪ ರವರೆಗೆ ಲಿಂಗರಾಜ ಮಹಾವಿದ್ಯಾಲಯದಲ್ಲಿ ಇಂಗ್ಲಿಷ್ ಅಧ್ಯಾಪಕರಾಗಿದ್ದ ಡಾ. ಕೆ. ಆರ್. ಶ್ರೀನಿವಾಸ ಅಯ್ಯಂಗಾರರು ಹೆಸರಾಂತ ವಿದ್ವಾಂಸರು, ಜನಪ್ರಿಯ ಅಧ್ಯಾಪಕರು ರಾಷ್ಟ್ರ ಅಂತರಾಷ್ಟ್ರೀಯ ಮಟ್ಟದಲ್ಲಿ ಉಪನ್ಯಾಸಗಳನ್ನು ನೀಡಿದ್ದಾರೆ. ಅವರು ಇಂಗ್ಲಿಷ್ ಸಾಹಿತ್ಯದಲ್ಲಿ ಮಹತ್ವದ ಕೃತಿಗಳನ್ನು ರಚಿಸಿದ್ದಾರೆ. ಪ್ರೊ. ಎಸ್. ಎಸ್. ಬಸವನಾಳರ ಜೊತೆಗೆ ಬಸವಣ್ಣನವರ ವಚನಗಳನ್ನು, ಅಕ್ಕಮಹಾದೇವಿಯವರ ಆರು ವಚನಗಳನ್ನು ಅನುವಾದಿಸಿ ೧೯೪೦ ರಲ್ಲಿ ಪ್ರಕಟಿಸಿದರು.

ಪ್ರೊ ಡಿ. ಆಯ್. ಮಿರ್ಜಿಯವರು ೧೯೬೮ ರಿಂದ ೧೯೯೬ ರವರೆಗೆ ಲಿಂಗರಾಜ ಮಹಾವಿದ್ಯಾಲಯದಲ್ಲಿ ಇದ್ದುಕೊಂಡು ಇಂಗ್ಲಿಷ್ ಪ್ರಾಧ್ಯಾಪಕರಾಗಿ ಪರಿಣಾಮಕಾರಿಯಾದ ಪಾಠ ಬೋಧನೆಯ ಜೊತೆಗೆ ಸಾಹಿತ್ಯವನ್ನು ರಚಿಸಿದರು. ಮಿರ್ಜಿಯವರ ಅನುವಾದ ಕಲೆ ಅದ್ಭುತವಾದದ್ದು. ಜರ್ಮನ್ ಬರಹಗಾರ ಜರ್ಮನ್ ಹೆಸ್‌ನ ನಾರ್ಸಿಸಸ್, ಗೋಲ್ಡಮಂಡ ಕಾದಂಬರಿಯನ್ನು, ಥಾಮಸ್ ಮನ್‌ನ ಇಂಗ್ಲಿಷ್ ಕತೆಗಳನ್ನು, ಜೆ. ಎಂ. ಕೊಯಿರಿಥೀಸ್‌ನ

ಕೃತಿಯನ್ನು, ಟೋನಿಯೊ ಕ್ರೋಗರ್‌ನ ಕೃತಿಯನ್ನು, ಬಲ್ಲಾಕ್ ವೈಲ್ಡನ್ ಕಾದಂಬರಿಯನ್ನು ಕನ್ನಡಕ್ಕೆ ಅನುವಾದಿಸಿದರು. ಟಿ. ಎಸ್. ಇಲಿಯಟ್‌ನ ಕುರಿತು ಹಲವಾರು ಲೇಖನಗಳನ್ನು ಬರೆದಿದ್ದಾರೆ. ಚಂದ್ರಶೇಖರ ಕಂಬಾರ, ಬಸವರಾಜ ಕಟ್ಟೀಮನಿಯವರ ಜೊತೆಗೆ ನಿಕಟ ಸಂಪರ್ಕವನ್ನಿಟ್ಟುಕೊಂಡು ಇಲ್ಲಿಯ ಸಾಹಿತ್ಯದ ಬೆಳವಣಿಗೆಗೆ ಕಾರಣರಾಗಿದ್ದಾರೆ.

ಬಸವರಾಜ ಕಟ್ಟೀಮನಿಯವರು ನಾಡಿನ ಪ್ರಸಿದ್ಧ ಕಾದಂಬರಿಕಾರರಾಗಿ, ಕಥೆಗಾರರಾಗಿ ಪ್ರಗತಿಶೀಲ ಸಾಹಿತ್ಯ ಚಳುವಳಿಯಲ್ಲಿ ಪ್ರಮುಖರಾಗಿದ್ದರು. ಇವರ ಕಾದಂಬರಿಗಳಲ್ಲಿ ಬೆಳಗಾವಿಯ ಸುತ್ತ ಮುತ್ತಲಿನ ಪರಿಸರ, ಸಮಾಜ, ಸಂಘರ್ಷಗಳೇ ವಸ್ತುವಾಗಿ ಮೂಡಿ ಬಂದಿವೆ. ಪ್ರಾಥಮಿಕ ಶಿಕ್ಷಣದ ಹಂತದಲ್ಲಿಯೇ ಬೆಳಗಾವಿಗೆ ಬಂದು ಶಿಕ್ಷಣವನ್ನು ಪಡೆದರು. ನಾಡಿನ ಹೆಸರಾಂತ ವಿದ್ವಾಂಸರಾಗಿದ್ದ ಪ್ರಗೋ ಕುಲಕರಣಿಯವರ ಮಾರ್ಗದರ್ಶನದಲ್ಲಿ ಸಾಹಿತ್ಯ ಕ್ಷೇತ್ರದಲ್ಲಿ ಮಹತ್ವದ ಮಾರ್ಗದರ್ಶನವನ್ನು ಪಡೆದರು. ಇಲ್ಲಿಂದಲೇ ಅವರು ಸಣ್ಣಕಥೆ-ಕವನಗಳನ್ನು ಬರೆಯಲು ಆರಂಭಿಸಿದರು. ಇವರು ಬೆಳಗಾವಿಯಲ್ಲಿ 'ವಿದ್ಯಾರ್ಥಿ' ಎಂಬ ಕೈಬರಹದ ಪತ್ರಿಕೆಯನ್ನು ಆರಂಭಿಸಿದರು. ಮುಲ್ಕಿ ಪರೀಕ್ಷೆಯ ನಂತರ ಜಿ. ಎ. ಹೈಸ್ಕೂಲನ್ನು ಸೇರಿ ಅಲ್ಲಿದ್ದ ಬಿ.ಬಿ.ಮಮದಾಪುರ ಪಟ್ಟಣಶೆಟ್ಟಿ ಮೊದಲಾದವರ ಸಂಪರ್ಕವನ್ನು ಬೆಳೆಸಿಕೊಂಡು ಸಾಹಿತ್ಯಿಕ ಚಟುವಟಿಕೆಯಲ್ಲಿ ತೊಡಗಿಸಿಕೊಂಡರು. ಬಡತನದ ಕಾರಣದಿಂದಾಗಿ ಹೆಚ್ಚು ಓದಲಾರದೆ ಅರ್ಧಕ್ಕೆ ಶಿಕ್ಷಣವನ್ನು ನಿಲ್ಲಿಸಿ ಉಪಜೀವನಕ್ಕೆ ಬೆಳಗಾವಿಯ ಗಲ್ಲಿಗಲ್ಲಿಗಳಲ್ಲಿ ಪತ್ರಿಕೆ ಮಾರಿ, 'ಸಂಯುಕ್ತ ಕರ್ನಾಟಕ' ಪತ್ರಿಕೆಯಲ್ಲಿ ವರದಿಗಾರರಾಗಿ ಸೇರಿಕೊಂಡರು. ಆಗ ಬೆಳಗಾವಿಯಲ್ಲಿ ಸಾಹಿತ್ಯಿಕ ಚಟುವಟಿಕೆಯಲ್ಲಿ ತೊಡಗಿದ್ದ ಕರ್ನಾಟಕ ಸಂಘ ಮತ್ತು ವಾಚನಾಲಯ, ನಾಡಸರಿಗಳ ಸಂಘ, ಮುಂತಾದ ಸಂಘಗಳನ್ನು ಸೇರಿಕೊಂಡು ಕನ್ನಡ ಹೋರಾಟಗಳಲ್ಲಿ ಭಾಗಿಯಾಗಿ, ಸಾಹಿತ್ಯಿಕ ಚಟುವಟಿಕೆಯಲ್ಲಿ ನಿರತರಾದರು. ಇವರು ಬಾಲಕರಾಗಿದ್ದಾಗ 'ಬೆಳಗಾವಿ ನಾಡು' ಕವನವನ್ನು ಬರೆದರು.

ಬೆಳಗಾವಿ ನಾಡು, ನಮ್ಮ ಬೆಳಗಾವಿ ನಾಡು।
ಸುಂದರ ನಾಡು, ನಮ್ಮ ಕುಂದರ ನಾಡು।
ಬಳ್ಳಾರಿ ಹಳ್ಳದ ಆರ್ಭಟ ನೋಡು
ಮಲಪ್ರಭ ಘಟಪ್ರಭ ಏರಾಟ ನೋಡು
ಕಬ್ಬಿಣ ಚವರಿಯ ಹಾರಾಟ ನೋಡು
ಜೋಳದ ಪಯಿರಿನ ತೂರಾಟ ನೋಡು
ನವಣಿಯ ಸಾವಿಯ ಕುಲುಕಾಟ ನೋಡು
ಮಾವಿನ ಹಣ್ಣಿನ ಸಿಂಗಾರ ನೋಡು
ಬಂಗಾರ ನಾಡು। ನಮ್ಮ ಬೆಳಗಾವಿ ನಾಡು।

ಬೆಳಗಾವಿಯ ಬಗೆಗೆ ಅತ್ಯಂತ ಅಭಿಮಾನವನ್ನು ಹೊಂದಿದ್ದು ಕಟ್ಟಿಮನಿಯವರು ತಾವು ಬದುಕಿರುವವರೆಗೂ ಬೆಳಗಾವಿಯ ಜೊತೆಗೆ ಸಂಪರ್ಕವನ್ನಿಟ್ಟುಕೊಂಡು ಇಲ್ಲಿಯ ಸಾಹಿತ್ಯ ಚಟುವಟಿಕೆಗಳಿಗೆ ಸ್ಫೂರ್ತಿ ತುಂಬಿದರು. ಬೆಳಗಾವಿ ಕುಡುಗೋಲು ಇದ್ದಂತೆ ಇದನ್ನು ನುಂಗಲು ಪ್ರಯತ್ನಿಸಿದರೆ ಅಪಾಯವಾಗುತ್ತದೆ ಎನ್ನುವ ಎಚ್ಚರಿಕೆಯನ್ನು ಮರಾಠಿಗರಿಗೆ ನೀಡಿ ಕನ್ನಡಿಗರಲ್ಲಿ ಧೈರ್ಯ ತುಂಬಿದರು. ೧೯೮೦ ರಲ್ಲಿ ಬೆಳಗಾವಿಯಲ್ಲಿ ಜರುಗಿದ ಅಖಿಲ ಭಾರತ ೫೩ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿ ಬೆಳಗಾವಿಯಲ್ಲಿ ಕನ್ನಡ ವಾತಾವರಣ ನಿರ್ಮಿಸಿದರು. ಸುಮಾರು ೪೦ ಕಾದಂಬರಿಗಳನ್ನು, ೧೦ ಕಥಾ ಸಂಕಲನಗಳನ್ನು ಅಲ್ಲದೆ ಕವನ, ನಾಟಕ, ಜೀವನ ಚಿತ್ರಗಳು, ಮಕ್ಕಳ ಕೃತಿಗಳು, ಹೀಗೆ ಒಟ್ಟು ೬೪ ಕೃತಿಗಳನ್ನು ಕನ್ನಡ ಸಾಹಿತ್ಯ ಪ್ರಪಂಚಕ್ಕೆ ನೀಡಿದ್ದಾರೆ.

'ಮಾಡಿ ಮಡಿದವರು' ಕಾದಂಬರಿಯು ಬೆಳಗಾವಿ ಜಿಲ್ಲೆಯ ಸ್ವಾತಂತ್ರ ಹೋರಾಟದ ಮೇಲೆ ಬೆಳಕು ಚೆಲ್ಲುತ್ತದೆ. 'ಜ್ವಾಲಾಮುಖಿಯ ಮೇಲೆ' ಕಾದಂಬರಿಯು ಕಾರ್ಮಿಕರ ಹೋರಾಟದ ಸಮರ್ಥ ಚಿತ್ರಣವನ್ನು ನೀಡುತ್ತದೆ. 'ಜರತಾರಿ ಜಗುದ್ಗುರು', 'ಮೋಹದ ಬಲೆಯಲ್ಲಿ', 'ಸಾಕ್ಷಾತ್ಕಾರ', 'ಆಶ್ರಮವಾಸಿ', 'ಜನಿವಾರ ಮತ್ತು ಶಿವದಾರ' ಕಾದಂಬರಿಗಳು ನಮ್ಮ ಸಮಾಜ ವ್ಯವಸ್ಥೆಯ ದೌರ್ಜನ್ಯಗಳನ್ನು ಬಿಡಿಸಿಕೊಡುತ್ತವೆ.

ಹೀಗೆ ಅವರ ಸಾಹಿತ್ಯದಲ್ಲಿ ಪ್ರತಿಭಟನೆಯ ಅಂಶ ಎದ್ದುಕಾಣುತ್ತದೆ. ಸಮಾಜದ ವಿವಿಧ ಮುಖಗಳನ್ನು ನಗ್ನಗೊಳಿಸಿದ್ದಾರೆ.

ಜ್ಞಾನಪೀಠ ಪ್ರಶಸ್ತಿ ವಿಜೇತ ಡಾ. ಚಂದ್ರಶೇಖರ ಕಂಬಾರರು ಬೆಳಗಾವಿ ಪರಿಸರದಲ್ಲಿ ಬೆಳೆದ ಕವಿ. ಬೆಳಗಾವಿಯ ಜೊತೆಗೆ ನಿಕಟವಾದ ಸಂಪರ್ಕವನ್ನಿಟ್ಟುಕೊಂಡು ಬೆಳಗಾವಿಯ ಸಾಹಿತ್ಯ ಸಂಸ್ಕೃತಿಯ ಬೆಳವಣಿಗೆಯಲ್ಲಿ ಮಹತ್ವದ ಪಾತ್ರವನ್ನು ವಹಿಸಿದ್ದಾರೆ. ಉತ್ತರ ಕರ್ನಾಟಕದ ದೇಸಿಯ ಸೊಬಗನ್ನು ಮೈಗೂಡಿಸಿಕೊಂಡು ಬೆಳಗಾವಿಯ ಗಂಡು ಭಾಷೆಯನ್ನು ಬಳಸಿ ಮಹತ್ವದ ಕೃತಿಗಳನ್ನು ರಚಿಸಿದ್ದಾರೆ. ವಿದ್ಯಾರ್ಥಿಯಾಗಿ, ಅಧ್ಯಾಪಕರಾಗಿ ಬೆಳಗಾವಿಯಲ್ಲಿದ್ದು ಇಲ್ಲಿಯ ಜಾನಪದ ಬದುಕನ್ನು ಹೀರಿ ಬೆಳೆದರು. ಡಾ. ಕಂಬಾರರು ೧೯೬೨-೬೪ ರವರೆಗೆ ಲಿಂಗರಾಜ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ್ದಾರೆ. ಕಾವ್ಯ, ನಾಟಕ, ಕಾದಂಬರಿ ಕ್ಷೇತ್ರಗಳಲ್ಲಿ ಅವರು ತಮ್ಮದೇ ಆದ ಹೆಜ್ಜೆ ಗುರುತುಗಳನ್ನು ಮೂಡಿಸಿದ್ದಾರೆ.

ಮುಗುಳು, ಸಾವಿರದ ನೆರಳು, ಬೆಳ್ಳಿಮೀನು, ಆಯ್ದ ಕವನಗಳು, ಅಕ್ಕಕ್ಕು ಹಾಡುಗಳೇ, ಹೇಳತೇನ ಕೇಳ, ತರಕಾರಿನವರು, ಬಣ್ಣಿಸಿ ಹಾಡವ್ವ ನನ ಬಳಗ, ಚಕೋರಿ(ಮಹಾಕಾವ್ಯ) ಇತ್ಯಾದಿ ಕವನ ಸಂಕಲನಗಳನ್ನು ಪ್ರಕಟಿಸಿದುದಲ್ಲದೆ, ಬೆಂಬತ್ತಿದ ಕಣ್ಣು, ಋಷ್ಯಶೃಂಗ, ಜಾಳೇಶ, ಜೋಕುಮಾರ ಸ್ವಾಮಿ ಮುಂತಾದ ನಾಟಕಗಳನ್ನು ರಚಿಸಿದ್ದಾರೆ. ಇವರ ಕರಿಮಾಯಿ ವಿಶಿಷ್ಟ ಶೈಲಿಯ ಮಹತ್ವದ ಕಾದಂಬರಿಯಾಗಿದೆ. ಸಂಗ್ಯಾಬಾಳ್ಯಾ ಸಣ್ಣಾಟವನ್ನು

ಪರಿಷ್ಕರಿಸಿದುದಲ್ಲದೆ ಹೇಳತೇನ ಕೇಳ ಧ್ವನಿಸುರಳಿ ಜನಪ್ರಿಯವಾಗಿದೆ. 'ಉತ್ತರ ಕರ್ನಾಟಕದ ಜಾನಪದ ರಂಗಭೂಮಿ ಬಗೆಗೆ ಸಂಶೋಧನೆಯನ್ನು ಕೈಕೊಂಡು ಮಹಾಪ್ರಬಂಧವನ್ನು ರಚಿಸಿದ್ದಾರೆ.

ಪ್ರೊ. ಶ್ರೀನಿವಾಸ ತೋಪಖಾನೆಯವರು ಬೆಳಗಾವಿಯ ಜಿ. ಎ. ಹಾಯ್ ಸ್ಕೂಲ್ ಲಿಂಗರಾಜ ಮಹಾವಿದ್ಯಾಲಯದಲ್ಲಿ ಶಿಕ್ಷಣ ಪಡೆದು ಕೆಲವು ದಿನಗಳವರೆಗೆ ಲಿಂಗರಾಜ ಕಾಲೇಜಿನಲ್ಲಿ ಫೆಲೊ ಆಗಿದ್ದರು. ಬೆಳಗಾವಿಯಲ್ಲಿ ನಡೆಯುತ್ತಿದ್ದ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಸದಾ ತಮ್ಮನ್ನು ತೊಡಗಿಸಿಕೊಂಡು ಕನ್ನಡ ಸಾಹಿತ್ಯ ಭಾಷೆ, ಸಂಸ್ಕೃತಿಗೆ ವಿಶಿಷ್ಟವಾದ ಕೊಡುಗೆಯನ್ನು ನೀಡಿದ್ದಾರೆ. ನಾಡಹಬ್ಬ, ರಾಜ್ಯೋತ್ಸವ, ಸಾಹಿತ್ಯ ಸಮ್ಮೇಳನಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಕಾರ್ಯಕ್ರಮಗಳ ಯಶಸ್ಸಿಗೆ ಶ್ರಮಿಸಿದ್ದಾರೆ. ಇವರ 'ಏಳು ಧನ್ಯಳೆ' ಕವನ ಸಂಕಲನ ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ಇವರು ಕನ್ನಡ, ಸಂಸ್ಕೃತ, ಮರಾಠಿ, ಹಿಂದಿ, ಇಂಗ್ಲಿಷ್ ಭಾಷೆಗಳಲ್ಲಿ ಪಾಂಡಿತ್ಯವನ್ನು ಪಡೆದಿದ್ದರು. ಅಂತೆಯೇ ಸಂಸ್ಕೃತದ 'ಗೀತ ಗೋವಿಂದ' ಕೃತಿಯನ್ನು ಕನ್ನಡಕ್ಕೆ ಅನುವಾದಿಸಿದರು.

ಹರಟೆ ಬರಹಗಾರರಾಗಿ, ಅನುವಾದಕರಾಗಿ, ಕಸ್ತೂರಿ ಮಾಸ ಪತ್ರಿಕೆಯ ಅಂಕಣಕಾರರಾಗಿ, ಕನ್ನಡ ಸಾಹಿತ್ಯಕ್ಕೆ ಮಹತ್ವದ ಕೊಡುಗೆಯನ್ನು ನೀಡಿದ್ದಾರೆ.

ಭಕ್ತಿಗೀತೆಗಳ ಕವಿ ಎಂದೇ ಗುರುತಿಸಲ್ಪಡುವ ಶ್ರೀ ವಿ.ಕೆ. ಕರಡಿಯವರು ಬೆಳಗಾವಿಯ ಜಿ. ಎ. ಹೈಸ್ಕೂಲಿನಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತ ಬೆಳಗಾವಿಯಲ್ಲಿ ಸಾಹಿತ್ಯಿಕ ಚಟುವಟಿಕೆಗಳಲ್ಲಿ ಸದಾ ತೊಡಗಿ ಹಲವಾರು ಅಮೂಲ್ಯ ಕೃತಿಗಳನ್ನು ರಚಿಸಿದ್ದಾರೆ. ನಾಟಕ, ಕಾವ್ಯ, ಲಾವಣಿ ಪ್ರಕಾರಗಳಲ್ಲಿ ವಿಶಿಷ್ಟವಾದ ಕೃತಿಗಳನ್ನು ರಚಿಸಿದ್ದಾರೆ.

ಶ್ರೀ ಎಂ. ಅಕಬರ ಅಲಿಯವರು ಚುಟುಕು ಸಾಹಿತ್ಯ ಪ್ರಕಾರದ ಮೂಲಕ ಸಾಹಿತ್ಯ ಕ್ಷೇತ್ರದಲ್ಲಿ ಗುರುತಿಸಿಕೊಂಡಿದ್ದಾರೆ. ಬೆಳಗಾವಿಯಲ್ಲಿ ಹೆಚ್ಚಿನ ಶಿಕ್ಷಣ ಪಡೆದು ಕವಿ. ಎಸ್. ಡಿ. ಇಂಚಲರ ಶಿಷ್ಯರಾಗಿ ಮುಂದೆ ಜಿ. ಎ. ಹೈಸ್ಕೂಲಿನ ಅಧ್ಯಾಪಕರಾಗಿ ಸೇವೆ ಸಲ್ಲಿಸಿದ್ದಾರೆ. 'ವಿಷಯ ಸಿಂಧು' 'ನವಚೇತನ' 'ಸುಮನಸೌರಭ' 'ಗಂಧ ಕೇಸರಿ' ಮೊದಲಾದ ಕವನ ಸಂಕಲನಗಳ ಮೂಲಕ ಪ್ರಸಿದ್ಧರಾಗಿದ್ದಾರೆ.

ಬಿ. ಎ. ಸನದಿ ಬೆಳಗಾವಿಯ ಸಾಹಿತ್ಯ ಚಟುವಟಿಕೆಯಲ್ಲಿ ಸದಾ ಮುಂದಿರುತ್ತಾರೆ. ಆದರ್ಶ ಶಿಕ್ಷಕರಾಗಿ, ಕವಿಯಾಗಿ, ಕತೆಗಾರರಾಗಿ, ವಿಮರ್ಶಕರಾಗಿ ಕನ್ನಡ ಸಾಹಿತ್ಯದಲ್ಲಿ ತಮ್ಮದೆ ಆದ ಪ್ರಭಾವವನ್ನು ಬೀರಿದ್ದಾರೆ. ಬಿ.ಎ. ಸನದಿಯವರದು ಕವಿ ಹೃದಯ. ಹೀಗಾಗಿ ಮಹತ್ವದ ಕಾವ್ಯಗಳು ಅವರಿಂದ ರಚಿಸಲ್ಪಟ್ಟವು. ಆಶಾಕಿರಣ, ನೆಲಸಂಪಿಗೆ, ತಾಜಮಹಲ, ಹಿಮಗಿರಿಯ ಮಡಿಲಲ್ಲಿ, ವೀರ ಕಂಕಣ, ಧ್ರುವ ಬಿಂದು, ಪ್ರತಿಬಿಂಬ, ಸೀಮಾಂತರ, ಮುಂಬೈ ಮಳೆ, ಮನೆಮನೆಗೆ ಜೇಲಿ, ಗೀತ ಗುಂಜನ, ಸಂಭವ ಹೀಗೆ ಹಲವಾರು ಮಹತ್ವದ ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ.

೧೯೮೦ ರಲ್ಲಿ ಬೆಳಗಾವಿಯಲ್ಲಿ ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಒಂದು ಗೋಷ್ಠಿಯ ಅಧ್ಯಕ್ಷರಾಗಿ ಮಕ್ಕಳ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಬೆಳಗಾವಿಯ ಎಸ್.ಡಿ. ಇಂಚಲ ಕಾವ್ಯ ಪ್ರತಿಷ್ಠಾನದ ಅಧ್ಯಕ್ಷರಾಗಿ ಬೆಳಗಾವಿಯ ಕನ್ನಡ ಪರ ಚಟುವಟಿಕೆಯಲ್ಲಿ ಗುರುತರ ಕಾರ್ಯಗಳನ್ನು ನಾಡಿದ್ದಾರೆ. ತಮ್ಮ ಉಪನ್ಯಾಸಗಳಿಂದ ಬೆಳಗಾವಿ ಕನ್ನಡಿಗರಲ್ಲಿ ಜಾಗೃತಿಯನ್ನು ಮೂಡಿಸಿದ್ದಾರೆ.

'ನನ್ನ ಬೆಳಗಾವಿ' ಎಂದು ಎದೆ ತಟ್ಟಿ ಹೇಳಿದ ಪ್ರೊ ಪ್ರಹ್ಲಾದಕುಮಾರ ಭಾಗೋಜಿ ಅವರು ಬೆಳಗಾವಿಯ ಸಾಹಿತ್ಯ ಕ್ಷೇತ್ರದಲ್ಲಿ ಮಹತ್ವದ ಕಾರ್ಯಗಳನ್ನು ಕೈಗೊಂಡಿದ್ದಾರೆ. ಪ್ರಸಿದ್ಧ ವಿದ್ವಾಂಸರಾದ ಪ್ರ.ಗೋ.ಕುಲಕರ್ಣಿಯವರ ಚಿರಂಜೀವಿಯಾದ  ಭಾಗೋಜಿಯವರು ತಂದೆಯಿಂದ ಪಾಂಡಿತ್ಯವನ್ನು ಬಳುವಳಿಯಾಗಿ ಪಡೆದುಕೊಂಡಿರುವರು. ತಮ್ಮ ಪ್ರಾಥಮಿಕ, ಮಾದ್ಯಮಿಕ, ಕಾಲೇಜು, ಶಿಕ್ಷಣವನ್ನು ಬೆಳಗಾವಿಯಲ್ಲಿಯೇ ಪಡೆದು ವಿ.ಜಿ. ಕುಲಕರ್ಣಿ, ಭೂಸನೂರಮಠ ಮುಂತಾದವರ ಗರಡಿಯಲ್ಲಿ ಪಳಗಿ ಸಾಹಿತ್ಯದ ಬಗೆಗೆ ಒಲವು ಬೆಳೆಸಿಕೊಂಡರು. ಭಾಗೋಜಿಯವರು ಬೆಳಗಾವಿಯಲ್ಲಿ ತಾವು ಕಂಡಿದ್ದ ಮೊದಲಿನ ಸಾಮರಸ್ಯದ ಬದುಕು ಕಾಣಬೇಕೆಂಬ ಕನಸನ್ನು ಕಂಡು ಅದಕ್ಕಾಗಿ ಪ್ರಯತ್ನಿಸಿದರು ಇವರ 'ನನ್ನ ಬೆಳಗಾವಿ' ಕೃತಿಯು ಬೆಳಗಾವಿಯ ಇತಿಹಾಸ ಸಂಸ್ಕೃತಿಯ ಮೇಲೆ ಬೆಳಕು ಚೆಲ್ಲುತ್ತದೆ. ಸುಮಾರು ನೂರು ವರ್ಷಗಳ ಹಿಂದಿನ ಬೆಳಗಾವಿಯ ಚಿತ್ರಣವನ್ನು ಈ ಕೃತಿಯಲ್ಲಿ ಚಿತ್ರಿಸಿದ್ದಾರೆ. ಇವರ 'ರಸಗವಳ' ಎನ್ನುವ ಪ್ರಬಂಧ ಸಂಕಲನ, ಏಕಲವ್ಯನನ್ನು ಕುರಿತು 'ಪ್ರಳಯ' ಎನ್ನುವ ನಾಟಕವನ್ನು, ಅಲ್ಲದೆ ಮಕ್ಕಳ ಕತೆಗಳನ್ನು ಬರೆದಿದ್ದಾರೆ. ದತ್ತಕವಿ ಹಾಗೂ ಬಿ. ಎಂ. ಗೋಗಟೆಯವರನ್ನು ಕುರಿತ ಮರಾಠಿ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ.

ಕನ್ನಡ ನಾಟಕ ಪ್ರಕಾರದಲ್ಲಿ ಅಸಂಗತ ನಾಟಕ ಪರಂಪರೆಯನ್ನು ತಂದವರಲ್ಲಿ ಪ್ರಮುಖರಾದ ಚಂದ್ರಕಾಂತ ಕುಸನೂರರು ಸದ್ಯ ಬೆಳಗಾವಿಯವರಾಗಿದ್ದಾರೆ. ಬೆಳಗಾವಿಯ ಸಾಂಸ್ಕೃತಿಕ ವಲಯದಲ್ಲಿ ಅತ್ಯಂತ ಉತ್ಸಾಹದಿಂದ ಭಾಗವಹಿಸುತ್ತಾ ಕನ್ನಡ ಸಾಹಿತ್ಯ, ಚಿತ್ರಕಲೆ, ಸಂಗೀತಕ್ಕೆ ವಿಶಿಷ್ಟವಾದ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ನಾಟಕಕಾರರೆಂದೇ ನಾಡಿನಾದ್ಯಂತ ಗುರುತಿಸಲ್ಪಡುವ ಕುಸನೂರರ 'ವಿದೂಷಕ' 'ಸಳಿತ' 'ದಿಂಡಿ' 'ರಿಹರ್ಸಲ್' ಎಂಬ ನಾಲ್ಕು ನಾಟಕಗಳು ಅಸಂಗತ ನಾಟಕ ಪ್ರಕಾರದಲ್ಲಿ ಮಹತ್ವದ ನಾಟಕಗಳಾಗಿವೆ.

ನಾಟಕಗಳನ್ನಲ್ಲದೆ, 'ಚರ್ಚಗೇಟ', 'ಯಾತನಾ ಶಿಬರ', 'ಗೋಹರಜಾನ್ ಮಲತಿ ಮತ್ತು ನಾನು' ಎಂಬ ಕಾದಂಬರಿಗಳನ್ನು ಬರೆದಿದ್ದಾರೆ. ಇವರ 'ಗೋಹರಜಾನ್, ಮಾಲತಿ ಮತ್ತು ನಾನು' ಒಂದು ವಿಶಿಷ್ಟ ಕಾದಂಬರಿ. ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯ ನಂತರದಲ್ಲಿಯ ಹೈದ್ರಾಬಾದ ಕರ್ನಾಟಕದ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಮಧ್ಯಮ ವರ್ಗದ ಬ್ರಾಹ್ಮಣ ಕುಟುಂಬವೊಂದರ ಮೂರು ತಲೆಮಾರಿನ ಕತೆ ಇಲ್ಲಿದೆ.

ಚಿತ್ರಕಲೆಯನ್ನು ಕುರಿತು 'ಕಲೆ, ಅನುಭವ ಮತ್ತು ಅನುಭಾವ' ಹಾಗೂ 'ಸಾಹಿತ್ಯ ಮತ್ತು ಕಲೆ' ಎನ್ನುವ ಮಹತ್ವದ ಕೃತಿಗಳನ್ನು ರಚಿಸಿದ್ದಾರೆ. ಚಿತ್ರಕಲೆಯಲ್ಲಿಯೂ ಇವರು ಮಹತ್ವದ ಕಲಾ ಕೃತಿಗಳನ್ನು ರಚಿಸಿದ್ದಾರೆ.

(ಚಿತ್ರಕಲೆ ಅಧ್ಯಾಯದಲ್ಲಿ ವಿವರಿಸಲಾಗಿದೆ)ಇವರ ನೂರಾರು ಚಿತ್ರಗಳು ನಾಡಿನಾದ್ಯಾಂತ ಪ್ರದರ್ಶನಗೊಂಡು ಮೆಚ್ಚುಗೆ ಪಡೆದಿವೆ.

ರಂ.ಶಾ. ಲೋಕಾಪೂರ ಅವರು ಈಗ ಬೆಳಗಾವಿಯಲ್ಲಿಯೇ ನೆಲೆ ನಿಂತಿರುವ ಬಹುಭಾಷಾ ಕವಿಗಳಾಗಿ ಕಾದಂಬರಿಕಾರರಾಗಿ ನಾಟಕಕಾರರಾಗಿ, ಸಂಶೋಧಕರಾಗಿ ಮಹತ್ವದ ಕೃತಿಗಳನ್ನು ರಚಿಸಿದ್ದಾರೆ. ರಂ.ಶಾ. ಎಂದೇ ಸಾಹಿತ್ಯ ಲೋಕದಲ್ಲಿ ಗುರುತಿಸಿಕೊಂಡಿರುವ ಇವರು ಕನ್ನಡ-ಮರಾಠಿ ಎರಡೂ ಭಾಷೆಯ ಸಾಂಸ್ಕೃತಿಕ ಸೇವೆಯಾಗಿ ಗಡಿಭಾಗದ ಬೆಳಗಾವಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ.

'ಹಳಗನ್ನಡ ಮತ್ತು ಮರಾಠಿ' ಎಂಬುದು ಇವರ ಸಂಶೋಧನಾತ್ಮಕ ಕೃತಿ. ಮರಾಠಿಯ 'ಜ್ಞಾನೇಶ್ವರಿ'ಯಲ್ಲಿ ಬಂದಿರುವ ಕನ್ನಡ ಶಬ್ದಗಳನ್ನು ಸಂಶೋಧಿಸಿ ಎರಡೂ ಭಾಷೆಗಳ ಮಧ್ಯದಲ್ಲಿಯ ಸಂಬಂಧವನ್ನು ಎತ್ತಿ ತೋರಿಸಿದ್ದಾರೆ.

ಆಡು ಭಾಷೆಯನ್ನು ತಮ್ಮ ಕಾದಂಬರಿಗಳಲ್ಲಿ ಬಳಸಿಕೊಂಡು 'ಸಾವಿತ್ರಿ' 'ತಾಯಿ ಸಾಹೇಬ' ಮತ್ತು 'ನೂರು ತಲೆ ಹತ್ತು ಕಾಲು' ಎಂಬ ಕಾದಂಬರಿಗಳನ್ನು ರಚಿಸಿದ್ದಾರೆ. 'ಸಾವಿತ್ರಿ' ಮತ್ತು 'ತಾಯಿ ಸಾಹೇಬ' ಕಾದಂಬರಿಗಳು ಚಲನ ಚಿತ್ರಗಳಾಗಿವೆ. ನೂರು ತಲೆ ಹತ್ತು ಕಾಲು ಕಾದಂಬರಿಯು ನಾಟಕವಾಗಿ ರೂಪಾಂತರಗೊಂಡಿದೆ. ರಂಶಾ ಅವರು 'ಸಂಕಾನಟ್ಟಿಯ ಚಂದ್ರಿ' 'ನೆಳಲಿಯ ಪ್ರಸಂಗ' 'ಸರ್ಕಾರ' ಮುಂತಾದ ನಾಟಕಗಳನ್ನು ರಚಿಸಿದ್ದಾರೆ.

ಜಿನದತ್ತ ದೇಸಾಯಿ ಬೆಳಗಾವಿ ನಗರದ ಮತ್ತೊರ್ವ ಪ್ರಮುಖ ಸಾಹಿತಿಗಳು. ಜಿಲ್ಲಾ ನ್ಯಾಯಾಧೀಶರಾಗಿ ನಿವೃತ್ತಿ ಹೊಂದಿ ಬೆಳಗಾವಿಯಲ್ಲಿಯೇ ನೆಲೆ ನಿಂತು ಸಾಹಿತ್ಯಿಕ ಚಟುವಟಿಕೆಯಲ್ಲಿ ತೊಡಗಿಕೊಂಡರು. ಡಾ. ವಿ.ಕೃ.ಗೋಕಾಕರ ಶಿಷ್ಯರಾದ ದೇಸಾಯರು ವಿದ್ಯಾರ್ಥಿಯಾಗಿದ್ದಾಗಲೇ 'ನೀಲಾಂಜನ' ಎಂಬ ಕವನ ಸಂಕಲನವನ್ನು ಪ್ರಕಟಿಸಿದರು. ಇವರ 'ಮಧುಶಾಲಿನಿ' 'ಮತ್ತೆ ಬಂದಿದ್ದೇನೆ' 'ಮಾಗಿ' ಮುಂತಾದ ಕವನ ಸಂಕಲನಗಳು ಗಮನಸೆಳೆದಿವೆ.

ರವಿ ಉಪಾಧ್ಯಯವರು ತಮ್ಮ ಕಾವ್ಯಗಳ ಮೂಲಕ ನಾಡಿನುದ್ದಕ್ಕೂ ಚಿರಪರಿಚಿತರಾದವರು. ಕಾವ್ಯ ಕ್ಷೇತ್ರಕ್ಕೆ ಬೆಳಗಾವಿಯ ಮೂಲಕ ಬೌದ್ಧಿಕವಾಗಿ ಕಸವು ತುಂಬಿದವರು. ಸಾಹಿತ್ಯ ಚಟುವಟಿಕೆಗಳಲ್ಲಿ ಸದಾ ತಮ್ಮನ್ನು ತೊಡಗಿಸಿಕೊಂಡು ಸಾಹಿತ್ಯ ರಚನೆಯನ್ನು ಮಾಡಿದ್ದಾರೆ. ಪರಿಧಿ, ನಾಕು ನಲ್ವತ್ತು, ಕಳಕಳಿ, ನಿನ್ನ ರೂಪಿಸಲು ಕೂತಂತೆ, ಸೂರ್ಯ ಕೊಲೆಯಾಗಿದ್ದಾನೆ, ದಿಲ್ಲಿ ಮತ್ತು ಪಾರಿವಾಳ, ಖಜುರಾಹೋ, ಬಿಸಿಲು-ಮಳೆ ಮುಂತಾದ ಕವನ ಸಂಕಲನಗಳನ್ನು ಹೊರತಂದಿದ್ದಾರೆ. ಈ ಕವನ ಸಂಕಲನಗಳಲ್ಲಿಯ ಕೆಲವು ಕವಿತೆಗಳು ರಾಷ್ಟ್ರಮಟ್ಟದ ಮನ್ನಣೆಯನ್ನು ಪಡೆದುಕೊಂಡು ಹಲವಾರು ಭಾಷೆಗಳಲ್ಲಿ ಅನುವಾದಗೊಂಡಿವೆ.

ಶ್ರೀ ಎಲ್.ಎಸ್.ಶಾಸ್ತ್ರಿ ಬೆಳಗಾವಿಯ ಕನ್ನಡ ಕಾರ್ಯಕ್ರಮಗಳಲ್ಲಿ ತುಂಬ ಚಟುವಟಿಕೆಯಿಂದ ಕಾರ್ಯನಿರ್ವಹಿಸುತ್ತ ಸಾಹಿತ್ಯ, ಕಲೆ, ಪತ್ರಿಕಾರಂಗಗಳಲ್ಲಿ ಕಳೆದ ನಾಲ್ಕು ದಶಕಗಳಿಂದ ಸೇವೆ ಸಲ್ಲಿಸುತ್ತ ಬಂದಿದ್ದಾರೆ. ತಾವು ಹೆಜ್ಜೆ

ಇಟ್ಟಲೆಲ್ಲಾ ಕಲೆ, ಸಾಹಿತ್ಯದ ಸಂಘಟನೆಗಳನ್ನು ರೂಪಿಸುತ್ತ ಯುವ ಪತ್ರಕರ್ತರಿಗೆ, ಕವಿಗಳಿಗೆ, ಕಲಾವಿದರಿಗೆ ಪ್ರೋತ್ಸಾಹ ನೀಡುತ್ತ ಬಂದಿದ್ದಾರೆ. ಸಾವಿರಾರು ಲೇಖನಗಳನ್ನು, ವಿಶೇಷಾಂಕ, ಸ್ಮರಣ ಸಂಚಿಕೆ ಮುಂತಾದವುಗಳನ್ನು ಪತ್ರಿಕಾ ವಲಯದಲ್ಲಿ ಪ್ರಕಟಿಸುತ್ತ ಹಲವು ಮಹತ್ವಪೂರ್ಣ ಕೃತಿಗಳನ್ನು ನೀಡಿದ್ದಾರೆ. ಸ್ಮೃತಿ, ಈ ದಂದೆ ದರ್ವೇಶಿ, ಇಬ್ಬನಿ ಮುಂತಾದವುಗಳು ಕವನ ಸಂಕಲನಗಳಾಗಿವೆ.

ಡಾ. ಬಸವರಾಜ ಜಗಜಂಪಿ  ಬೆಳಗಾವಿಯ ಜಾನಪದ, ರಂಗಭೂಮಿ ಸಾಹಿತ್ಯದಲ್ಲಿ ಮಹತ್ವದ ಕೃತಿಗಳನ್ನು ರಚಿಸಿರುವ ಡಾ. ಬಸವರಾಜ ಜಗಜಂಪಿಯವರು ಕೆ.ಎಲ್.ಇ. ಸಂಸ್ಥೆಯ ವಿವಿಧ ಅಂಗ ಸಂಸ್ಥೆಗಳಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದಾರೆ. ಲಿಂಗರಾಜ ಮಹಾವಿದ್ಯಾಲಯದ ಪ್ರಾಚಾರ್ಯರಾಗಿ ಕಾಲೇಜಿನ ಬೆಳವಣಿಗೆಯಲ್ಲಿ ಶ್ರಮಿಸಿದ್ದಾರೆ. ಇವರ 'ಗರುಡ ಸದಾಶಿವರಾಯರ ಜೀವನ ಸಾಧನೆ'ಯನ್ನು ಕುರಿತು ರಚಿಸಿದ ಮಹಾಪ್ರಬಂಧವು ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯ ಇತಿಹಾಸವನ್ನು ಸ್ಪಷ್ಟವಾಗಿ ತಿಳಿಸಿಕೊಡುತ್ತದೆ. ಗರುಡ ಸದಾಶಿವರಾಯರನ್ನು ಕೇಂದ್ರವಾಗಿಟ್ಟುಕೊಂಡು ಇಡೀ ವೃತ್ತಿರಂಗಭೂಮಿಯ ಅಂದಿನ ಸ್ಥಿತಿಗತಿಗಳನ್ನು ಕುರಿತು ಸಂಶೋಧನೆಯನ್ನು ಕೈಕೊಂಡಿದ್ದಾರೆ. 'ಕನ್ನಡ ಕಾಯಕಯೋಗಿ ಶಿವಬಸವಸ್ವಾಮೀಜಿ' ಎನ್ನುವ ಕೃತಿಯು ಚಿಂಚಣಿ ಮಠದಿಂದ ಪ್ರಕಟಗೊಂಡಿದೆ. ಜಾನಪದ ಸಾಹಿತ್ಯವನ್ನು ಕುರಿತ ಇವರ ಹಲವಾರು ಲೇಖನಗಳು ಮಹತ್ವವನ್ನು ಪಡೆದಿವೆ. ಸಂಶೋಧನೆಯ ನೆಲೆಯಿಂದ ಮೂಡಿ ಬಂದ ಇವರ ಲೇಖನಗಳು ಸಂಶೋಧನ ವಿದ್ಯಾರ್ಥಿಗಳಿಗೆ ಒಳ್ಳೆಯ ಆಕರಗಳಾಗಿವೆ. ಇವರು ರಚಿಸಿದ ಸಾಹಿತ್ಯಕ್ಕಿಂತ ಇವರ ಉಪನ್ಯಾಸಗಳು ಹೆಚ್ಚು ಪ್ರಭಾವವನ್ನು ಬೀರುತ್ತವೆ. ಅಸ್ಖಲಿತವಾದ ಇವರ ಭಾಷಣವು ವಿಶಿಷ್ಟ ಗಮನ ಸೆಳೆಯುತ್ತದೆ. ಕನ್ನಡ ಸಾಹಿತ್ಯ ಪರಿಷತ್ತಿನ ಜಿಲ್ಲಾ ಘಟಕದ ಅಧ್ಯಕ್ಷರಾಗಿ ಹಲವಾರು ಮಹತ್ವದ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಕಾರ್ಯಗತಗೊಳಿಸಿದ್ದಾರೆ.

ರಾಮಕೃಷ್ಣ ಮರಾಠೆ  ಬೆಳಗಾವಿಯ ಸಾಹಿತ್ಯ ಕ್ಷೇತ್ರದಲ್ಲಿ ವಿಶಿಷ್ಟವಾಗಿ ಗುರುತಿಸಲ್ಪಡುವ ಡಾ. ರಾಮಕೃಷ್ಣ ಮರಾಠೆಯವರು ಸಾಹಿತ್ಯದ ಹಲವಾರು ಪ್ರಕಾರಗಳಲ್ಲಿ ಸಾಹಿತ್ಯ ಕೃಷಿಯನ್ನು ಕೈಕೊಂಡು ಮಹತ್ವದ ಕೃತಿಗಳನ್ನು ನೀಡಿದ್ದಾರೆ. ಬೆಳಗಾವಿಯ ಬಿ. ಕೆ. ಮಹಾವಿದ್ಯಾಲಯದಲ್ಲಿ ಕಳೆದ ೨೮ ವರ್ಷದಿಂದ ಕನ್ನಡ ಉಪನ್ಯಾಸಕರೆಂದು ಸೇವೆ ಸಲ್ಲಿಸುತ್ತಿದ್ದಾರೆ. ವೃತ್ತಿಯ ಜೊತೆಗೆ ಸಾಹಿತ್ಯ, ನಾಟಕ, ಸಂಘಟನೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಬೆಳಗಾವಿಯಲ್ಲಿ ಸಾಹಿತ್ಯ ಕಲೆ, ಸಂಸ್ಕೃತಿಯ ನಿರ್ಮಾಣಕ್ಕೆ ಕಾರಣರಾಗಿದ್ದಾರೆ. ಇವರ ಉತ್ತರ ಕರ್ನಾಟಕದ ವೃತ್ತಿರಂಗಭೂಮಿ ಎಂಬ ಮಹಾಪ್ರಬಂಧವು ಮಹತ್ವದ ಕೃತಿಯಾಗಿದೆ. ಉತ್ತರ ಕರ್ನಾಟಕದ ರಂಗಭೂಮಿಯನ್ನು ತಲಸ್ಪರ್ಶಿಯಾಗಿ ಅಧ್ಯಯನ ಕೈಗೊಂಡು ನಾಟಕ ರಂಗದ ವಿವಿಧ ಹಂತಗಳನ್ನು ಗುರುತಿಸಿದ್ದಾರೆ. ನಾಟಕ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಇವರ ಪ್ರಮುಖ ಕೃತಿಗಳಲ್ಲಿ ಕೊಣ್ಣೂರ ನಾಟಕ ಕಂಪನಿ, ರಂಗಭೂಮಿ, ವೃತ್ತಿರಂಗದ ಮಹತ್ತರ ನಾಟಕಗಳು (ಸಂಪಾದನೆ) ನಾಟಕ-ಕರ್ನಾಟಕ (ಲೇಖನಗಳ ಸಂಗ್ರಹ) ತೆರೆ ಮರೆ(ಲೇಖನಗಳ ಸಂಗ್ರಹ) ರಂಗಭೂಮಿಯ

ಕನ್ನಡ ಸಂವೇದನೆ, ಅರಸಿನಗೂಡಿಯವರ ಜೀವನ ಚರಿತ್ರೆ, ನಾಟ್ಯ ಭೂಷಣ (ಸಂಪಾದನೆ) ಹೀಗೆ ಹಲವಾರು ಮಹತ್ವದ ಕೃತಿಗಳನ್ನು ಕನ್ನಡ ಸಾಹಿತ್ಯ ಲೋಕಕ್ಕೆ ನೀಡಿದ್ದಾರೆ. ಇವರ ಅನುವಾದ ಕೃತಿಗಳಲ್ಲಿ ಮುಖ್ಯವಾಗಿ ದಕ್ಷಿಣದ ದೇಶಿ ದೇವರು ಖಂಡೋಬಾ, 'ಕರವೀರನಿವಾಸಿ ಶ್ರೀ ಮಹಾಲಕ್ಷ್ಮಿ' ಇವು ರಾಮಚಂದ್ರ ಚಿಂತಾಮಣಿ ಢೇರೆಯವರ ಮೂಲ ಮರಾಠಿ ಕೃತಿಗಳಾಗಿದ್ದು ಅವುಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಮರಾಠಿಯ ಶಂ. ಗೊ. ಡುಳಪುಳೆಯವರ 'ಪ್ರಾಚೀನ ಮರಾಠಿ ಶಾಸನಗಳು' ಎನ್ನುವ ಶಾಸನ ಕೃತಿಯನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಅಲ್ಲದೆ ವಿದ್ಯಾರ್ಥಿಗಳ ವ್ಯಕ್ತಿತ್ವ ವಿಕಸನಕ್ಕೆ ಉಪಯುಕ್ತವಾದ ಕೃತಿಗಳನ್ನು ರಚಿಸಿದ್ದಾರೆ. ಜೀವನ ವಿದ್ಯೆ, ಮಾರ್ಗದರ್ಶನ ಮುಂತಾದವುಗಳು ಮಹತ್ವದ ಕೃತಿಗಳಾಗಿವೆ.

ಮರಾತೆಯವರು ಕನ್ನಡ–ಮರಾಠಿ ಎರಡೂ ಭಾಷೆಯ ಸಾಹಿತ್ಯ ಸೇತುವೆಯಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಬೆಳಗಾವಿಯ ಸಾಮರಸ್ಯದ ಸಂಸ್ಕೃತಿಯ ನಿರ್ಮಾಣದಲ್ಲಿ ಇವರ ಕೃತಿಗಳು ಮಹತ್ವವನ್ನು ಪಡೆದುಕೊಂಡಿವೆ. ಅಲ್ಲದೆ ಕರ್ನಾಟಕ ವಿಶ್ವವಿದ್ಯಾಲಯ, ರಾಣಿ ಚೆನ್ನಮ್ಮ ವಿಶ್ವವಿದ್ಯಾಲಯಗಳ ವ್ಯಾಪ್ತಿಯ ಪದವಿ ವಿದ್ಯಾರ್ಥಿಗಳಿಗೆ ತಯಾರಿಸಿದ ಪಠ್ಯ ಪುಸ್ತಕಗಳು ಮಹತ್ವವನ್ನು ಪಡೆದುಕೊಂಡಿವೆ. ಬೆಳಗಾವಿಯಲ್ಲಿ ಜರುಗುವ ಕನ್ನಡ, ಮರಾಠಿ, ಕೊಂಕಣಿ, ಉರ್ದು ಹೀಗೆ ಎಲ್ಲ ಭಾಷೆಯ ಸಾಹಿತ್ಯ, ಸಂಗೀತ, ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಆಸಕ್ತಿಯಿಂದ ಭಾಗವಹಿಸಿ ಸಾಮರಸ್ಯ ಸಾಂಸ್ಕೃತಿಗೆ ಸ್ಫೂರ್ತಿಯಾಗಿದ್ದಾರೆ.

ಸರಜೂ ಕಾಟ್ಕರ್ ಆಧುನಿಕ ಕನ್ನಡ ಸಾಹಿತ್ಯದ ಪ್ರಮುಖ ಬರಹಗಾರರಲ್ಲಿ ಡಾ. ಸರಜೂ ಕಾಟ್ಕರರು ಒಬ್ಬರು. ೧೪ ಅಗಸ್ಟ ೧೯೫೩ ರಲ್ಲಿ ಹುಬ್ಬಳ್ಳಿಯಲ್ಲಿ ಜನಿಸಿದ ಇವರು ಎಂ. ಎ., ಪಿಹೆಚ್.ಡಿ ಪದವಿ ಪಡೆದು ಈಗ ದಿ ನ್ಯೂ ಇಂಡಿಯನ್ ಎಕ್ಸಪ್ರೆಸ್ ದಿನಪತ್ರಿಕೆಯ ಬೆಳಗಾವಿಯ ಭಾಗದ ಮುಖ್ಯ ವರದಿಗಾರರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

ಇವರು ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಸಾಹಿತ್ಯ ರಚಿಸಿದ್ದಾರೆ. ಹಸಿದ ನೆಲ, ಸೂರ್ಯ ಮ್ಯಾನಿಫೆಸ್ಟೋ, ಏಕಾಂತದ ಮನುಷ್ಯ, ಪೆಗಾಸಸ್, ಗಜಲ್, ಅವ್ವ, ಗಾಂಧಿ ಟು ಗೋಧ್ರಾ, ಸೂರ್ಯಪಾನ ಮೊದಲಾದವು ಮಹತ್ವದ ಕಾವ್ಯಗಳಾಗಿವೆ. 'ದೇವರಾಯ' ಅವರ ಮಹತ್ವದ ಕಾದಂಬರಿ ಇವರ 'ಅಂಬೆ' ನಾಟಕ ದಿಲ್ಲಿಯ ಕನ್ನಡಿಗರಿಂದ ಪ್ರದರ್ಶನಗೊಂಡು ಪ್ರಸಿದ್ಧಿ ಪಡೆದುಕೊಂಡಿದೆ. ಕನ್ನಡ ಮರಾಠಿ ದಲಿತ ಸಾಹಿತ್ಯ ಅವರ ಸಂಶೋಧನ ಮಹಾಪ್ರಬಂಧ. 'ಅತೀತ' ಅವರ ಕಥಾಸಂಕಲನ. ಕೋರೆಗಾಂವ್, ಸಾಕ್ಷಿ, ಬಸವ ಮತ್ತು ಶರಣ ಬಂಡಾಯ, ಮಹಾವೃಕ್ಷ, ಆಣಿ, ಶಿವಾಜಿ ಮೂಲ ಕನ್ನಡ ನೆಲ, ಸಿನೇಮಾ ಸಿನೇಮಾ, ಶರಣ ಸಂಸ್ಕೃತಿ ಮೊದಲಾದವು ಅವರ ವೈಚಾರಿಕ ಕೃತಿಗಳು.

ಅನುವಾದ, ವ್ಯಕ್ತಿ ಚಿತ್ರ, ಸಂಪಾದನೆ ಹೀಗೆ ಹಲವಾರು ಪ್ರಕಾರಗಳಲ್ಲಿ ಸಾಹಿತ್ಯ ಕೃಷಿ ಮಾಡಿದ್ದಾರೆ. ಅವರ ಸೇವೆಗೆ ಹಲವಾರು ಪ್ರಶ್ತಿಗಳು ಸಂದಿವೆ. ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿಗೌರವ

ಪ್ರಶಸ್ತಿ ಅನುವಾದ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ, ಪತ್ರಿಕಾ ಅಕಾಡೆಮಿ ಗೌರವ ಪ್ರಶಸ್ತಿ ಹೀಗೆ ಹಲವಾರು ಪ್ರಶಸ್ತಿ ಗೌರವಗಳು ಸಂದಿವೆ.

ಡಿ. ಎಸ್. ಚೌಗಲೆ ಬೆಳಗಾವಿಯ ಬಿ. ಕೆ. ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರೆಂದು ಸೇವೆ ಸಲ್ಲಿಸುತ್ತಿರುವ ಡಿ.ಎಸ್. ಚೌಗಲೆಯವರು ಬೆಳಗಾವಿಯ ಸಾಹಿತ್ಯ ವಲಯದಲ್ಲಿ ಅದರಲ್ಲಿಯೂ ನಾಟಕ ಸಾಹಿತ್ಯದಲ್ಲಿ ಪ್ರಮುಖವಾಗಿ ಕಂಡುಬರುವ ಹೆಸರು. ಬೆಳಗಾವಿಯ ಆಧುನಿಕ ರಂಗಭೂಮಿಯ ಬೆಳವಣಿಗೆಯಲ್ಲಿ ಚೌಗಲೆಯವರ ಪಾತ್ರ ಹಿರಿದಾಗಿದೆ. ಕಲೆ ಕಾವ್ಯಗಳನ್ನು ಒಂದಾಗಿ ಕಂಡರಿಸುವ ಎಡಪಂಥೀಯ ನಿಲುವನ್ನು ಹೊಂದಿದ್ದಾರೆ. ಇವರ 'ಗಾಂಧಿ ವಿರುದ್ಧ ಗಾಂಧಿ' ನಾಟಕವು ನಾಡಿನಾದ್ಯಂತ ಹಲವಾರು ಪ್ರದರ್ಶನಗಳನ್ನು ಕಂಡ ಪ್ರಸಿದ್ಧವಾದ ನಾಟಕವಾಗಿದೆ.

ಸ್ವಯಂ ಕಲಿಕೆಯ ಮೂಲಕ ಕಲೆಯನ್ನು ರೂಢಿಸಿಕೊಂಡರು. ಕತೆಗಾರ, ಕಲಾ ಬರಹಗಾರ, ಅನುವಾದಕ, ನಾಟಕಕಾರರಾಗಿ ಹೆಸರು ಮಾಡಿದ್ದಾರೆ. ಅಮೂರ್ತ, ಮೂರ್ತ ನೆಲೆಯಲ್ಲಿ ತಮ್ಮದೇ ವಿಧಾನ, ತಂತ್ರ, ವರ್ಣಗಳಲ್ಲಿ ಅಭಿವ್ಯಕ್ತಿಸುವ ಡಿ.ಎಸ್. ಚೌಗಲೆ ಜನಪದವನ್ನು ಆಶಯವಾಗಿಸಿ ಕೃತಿ ರಚಿಸುತ್ತಾರೆ. ಅವರ ಪ್ರದರ್ಶನಗಳು ಬೆಂಗಳೂರು, ಮುಂಬೈ, ಚೆನ್ನೈ, ಹೈದ್ರಾಬಾದ್, ಕೊಚ್ಚಿನದಲ್ಲಿ ನಡೆದಿವೆ.

ಬೆಳಗಾವಿ ನಗರವನ್ನೇ ತಮ್ಮ ಕಾರ್ಯ ಕ್ಷೇತ್ರವನ್ನಾಗಿ ಮಾಡಿಕೊಂಡು ಸತತವಾಗಿ ಸಹಿತ್ಯ ಕೃಷಿ ಮಾಡುತ್ತ ಬಂದಿರುವ ಹಲವು ಹತ್ತು ಉದಯೋನ್ಮುಖ ಹಾಗೂ ತರುಣ ಸಾಹಿತಿಗಳು ಕಂಡುಬರುತ್ತಾರೆ. ಶಿಕ್ಷಕರಾದ ಶ್ರೀ ಎಸ್. ಬಿ. ಶಾಸ್ತ್ರಿಯವರು ಹಲವಾರು ಪತ್ರಿಕೆಗಳಲ್ಲಿ ತಮ್ಮ ಕಥೆ, ಕಾದಂಬರಿಗಳನ್ನು ಪ್ರಕಟಿಸಿದರಲ್ಲದೆ ಎರಡು ಪಕ್ಷಿ ಎಂಬ ಕಾದಂಬರಿಯನ್ನು ಹೊರತಂದಿದ್ದಾರೆ. ಶಿಕ್ಷಕರಾದ ವಿ.ಸಿ. ಅಂಟಿನ ಅವರು ಹೆಚ್ಚಾಗಿ ಕಥೆಗಳನ್ನು ರಚಿಸಿದ್ದಾರೆ. ಅವರ ಶಿಲಾಮೂರ್ತಿ, ವಿರೂಪಾಕ್ಷ ಲೀಲೆ ಮುಂತಾದವುಗಳು ಕಥಾ ಸಂಗ್ರಹಗಳಾಗಿವೆ. ವಕೀಲ ವೃತ್ತಿಯಲ್ಲಿರುವ ಅಪ್ಪಾಸಾಹೇಬ ಸದರ ಜೋಶಿಯವರು ರಸದುಂಬಿ , ಮಧುರಸ, ಕಾಣದ ನೋಟ, ಪ್ರೇಮಗಾನ, ಜೀವನಗೀತೆ ಮೊದಲಾದ ಕವನ ಸಂಕಲನಗಳನ್ನು ರಚಿಸಿದ್ದಾರೆ. ಋತು ರಾಜ ಎಂಬ ಕಾವ್ಯ ನಾಮದಿಂದ ಸಾಹಿತ್ಯ ರಚನೆ ಮಾಡುತ್ತಿರುವ ಪ್ರಭಾಕರ ಆನಿಗೋಳ ಅವರು ಜೀತಾಂಜಲಿ, ಪಿಡಬ್ಲ್ಯೂಡಿ ಪಾರಿವಾಳ ಎಂಬ ಎರಡು ಕಾದಂಬರಿಗಳನ್ನು ಪ್ರಕಟಿಸಿದ್ದಾರೆ. ಶಿಕ್ಷಕ ವೃತ್ತಿಯಲ್ಲಿರುವ ರಾಜಶೇಖರ ಕರ್ಕಿ ರಿಂಗಣ ಎಂಬ ಕವನ ಸಂಕಲನವನ್ನು ಪ್ರಕಟಿಸಿದ್ದಾರೆ. ದಸು ಭಿಡೆ ಅವರು ಕಾವ್ಯ ಕುಸುಮ , ಅಂತರ್ಮುಖಿ ಎಂಬ ಎರಡು ಕವನ ಸಂಗ್ರಹಗಳನ್ನು ನೀಡಿದ್ದಾರೆ. ಕಲಾವಿದ ಬಸವರಾಜ ಕುಡಚಿಯವರು 'ಬದುಕು' ಕವನ ಸಂಕಲನವನ್ನು ಹೊರ ತಂದಿದ್ದಾರೆ. ಪತ್ರಿಕೋದ್ಯಮದಲ್ಲಿ ದುಡಿಯುತ್ತಿರುವ ಪಿ. ವಿಜಯಕುಮಾರರು ಧರ್ಮಪತ್ನಿ, ಸುಗಂಧ, ಬಲಿದಾನ,ಅವನಾರು, ದೇವಮಂದಿರದಲ್ಲಿ ಕಲಾಬಾಲೆ ಮೀರಾ ಮೊದಲಾದ ಕೃತಿಗಳನ್ನು ಪ್ರಕಟಿಸಿದ್ದಾರೆ. ಸಿದ್ದರಾಜ ಬಾಳೇಕುಂದ್ರಿಯವರು 'ತಾನತರಂಗ' 'ಸುವಿಚಾರ ಮಂಥನ' ಗಳೆಂಬ ಕವನ ಸಂಗ್ರಹಗಳನ್ನು ಪ್ರಕಟಿಸಿದ್ದಾರೆ. ಪ್ರಾಧ್ಯಾಪಕರಾದ ಸಿ.ವಿ.

ಮಠದ ಸ್ವಾತಂತ್ರ್ಯ ಸೇದಾಮಿನಿ ಎಂಬ ಕಿತ್ತೂರ ಚನ್ನಮ್ಮನನ್ನು ಕುರಿತ ಗ್ರಂಥವನ್ನು ಹೊರತಂದಿದ್ದಾರೆ. ದಿಗಂಬರ ಜೋಶಿಯವರು ನಿವೇದನೆ, ಹಾಡು ಹಕ್ಕಿ ಎಂಬ ಕವನ ಸಂಕಲನಗಳನ್ನು ನೀಡಿದ್ದಾರೆ. ಕೆ.ಎಲ್.ಇ. ಸಂಸ್ಥೆಯ ಪ್ರಸಾರಾಂಗದ ನಿರ್ದೇಶಕರಾಗಿ ಸೇವೆ ಸಲ್ಲಿಸುತ್ತಿರುವ ಪ್ರೊ. ಬಿ.ಎಸ್. ಗವಿಮಠರು ಪ್ರೊ. ಎ.ಆರ್. ಪಾಟೀಲರ ಜೊತೆಗೂಡಿ ಕೆ.ಎಲ್.ಇ. ಸಂಪುಟ ಲಾಂಛನಕ್ಕೆ ಶರಣೆಂಬೆ, ಯುಗಪುರುಷರು, ಸ್ಪಂದನ, ಪ್ರಭಾಂಕಲಿ, ಅರಟಾಳ ರುದ್ರಗೌಡರ ಚರಿತ್ರೆ ಮುಂತಾದ ಮೌಲಿಕ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಸಂಶೋಧನೆಯ ದೃಷ್ಟಿ ಕೋನವನ್ನಿಟ್ಟುಕೊಂಡು ಬರೆಯುತ್ತಿರುವ ಯ.ರು.ಪಾಟೀಲರು 'ಮಹಾರಾಷ್ಟ್ರದಲ್ಲೊಂದು ಕನ್ನಡ ತಾಲೂಕು', 'ಸವದತ್ತಿ ಉಕ್ಕಿನ ಕೋಟೆ,' 'ಎಲ್ಲರ ಅಮ್ಮ ಎಲ್ಲಮ್ಮ' ಮುಂತಾದ ಕೃತಿಗಳನ್ನು ಹೊರತಂದಿದಾರೆ. ನಾಟಕಕಾರ, ಚಿತ್ರಕಲಾವಿದ, ಪ್ರೊ. ಡಿ.ಎಸ್. ಚೌಗಲೆಯವರು 'ದಿಶಾಂತರ' 'ಗಾಂಧಿ ವಿರುದ್ಧ ಗಾಂಧಿ' ಮುಂತಾದ ನಾಟಕಗಳನ್ನು ರಚಿಸಿ ರಂಗಭೂಮಿಯ ಮೇಲೆ ಪ್ರಯೋಗಗೊಳಿಸಿದ್ದಾರೆ. ಹೊಂಬೆಳಕು ಸಾಂಸ್ಕೃತಿಕ ಸಂಘದ ಮೂಲಕ ಹಲವಾರು ಮಹತ್ವದ ಸಾಹಿತ್ಯಿಕ ಕಾರ್ಯಕ್ರಮಗಳನ್ನು ಕೈಗೊಳ್ಳುತ್ತಿರುವ ಸ.ರಾ. ಸುಳಕೊಡೆಯವರು ಸಾಕ್ಷರತೆ, ಸರ್ಕಾರಿ ಇಲಾಖೆಗಳ ಪರಿಚಯಾತ್ಮಕ ಕೃತಿಗಳನ್ನು ರಚಿಸಿ ಪ್ರಕಟಿಸಿದ್ದಾರೆ. ದಾಸರನ್ನು ಕುರಿತು ಮಹತ್ವದ ಲೇಖನಗಳನ್ನು ಕೃತಿಗಳನ್ನು ಬರೆದ ಡಾ. ಎಸ್. ಎಲ್. ಕುಲಕರ್ಣಿ, ವಿ.ಸಿ. ಮಾಲಗತ್ತಿ, ಭೀಮಸೇನ ತೊರಗಲ್ಲ, ಶಂ.ಬ ತೊರಗಲ್ಲ, ಚಿಂತಾಮಣಿ ಜೋರಾಪುರ, ಡಾ. ಎಚ್. ಆಯ್. ತಿಮ್ಮಾಪೂರ, ಮ.ಗು. ಗಿವಾರಿ, ಮಲ್ಲಿಕಾರ್ಜುನ ಇಂಚಲ, ರಾಘವೇಂದ್ರ ಜೋಶಿ, ಮಧುಕರ ಗುಂಡೇನಟ್ಟಿ, ಸಿ.ಗು. ಕುಸುಗಲ್, ಹೀಗೆ ಅನೇಕರು ಕವಿ, ಸಾಹಿತಿ, ವಿಮರ್ಶಕ, ಸಂಶೋಧಕರಾಗಿ ಬೆಳಗಾವಿಯ ನೆಲದಲ್ಲಿ ನಿಂತು ಮಹತ್ವದ ಕೃತಿಗಳನ್ನು ಕನ್ನಡ ಸಾರಸ್ವತ ಲೋಕಕ್ಕೆ ನೀಡಿದ್ದಾರೆ. ಬೆಳಗಾವಿ ಮಣ್ಣಿನ ವೀರ ಗುಣ, ಗಂಡು ಭಾಷೆ, ವಿಭಿನ್ನ ಸಂಸ್ಕೃತಿಯನ್ನು ಈ ಎಲ್ಲ ಸಾಹಿತಿಗಳ ಕೃತಿಗಳಲ್ಲಿ ಪ್ರತ್ಯೇಕವಾಗಿ ಗುರುತಿಸಬಹುದಾಗಿದೆ.

**ಮಹಿಳಾ ಸಾಹಿತಿಗಳು :** ಕನ್ನಡ ಸಾಹಿತ್ಯಕ್ಕೆ ಬೆಳಗಾವಿಯ ಕೊಡುಗೆಯಲ್ಲಿ ಮಹಿಳೆಯರೂ ಮಹತ್ವದ ಸಾಹಿತ್ಯವನ್ನು ರಚಿಸಿ ಗಮನಸೆಳೆದಿದ್ದಾರೆ. ಬೇರೆ ನಗರಗಳಿಗೆ ಹೋಲಿಸಿದರೆ ಸಂಖ್ಯೆಯಲ್ಲಿ ವಿರಳವಾದರೂ ಸತ್ವದಲ್ಲಿ ಪರಿಣಾಮಕಾರಿಯಾದ ಸಾಹಿತ್ಯವನ್ನು ರಚಿಸಿದ್ದಾರೆ. ಬೆಳಗಾವಿಯಲ್ಲಿ ಹುಟ್ಟಿ ಬೇರೆ ಬೇರೆ ಭಾಗಗಳಲ್ಲಿ ನೆಲೆಸಿದ ಲೇಖಕಿಯರೂ ಬಹಳಷ್ಟು ಜನರಿದ್ದಾರೆ. ಅದರಂತೆ ಬೇರೆ ಬೇರೆ ಭಾಗಗಳಿಂದ ಬಂದು ಬೆಳಗಾವಿಯಲ್ಲಿ ನೆಲೆಸಿದವರೂ ಇದ್ದಾರೆ. ಅಂದರೆ ತವರು ಮನೆ, ಗಂಡನಮನೆಯ ಸಂಬಂಧದ ಹಿನ್ನೆಲೆಯಲ್ಲಿ ಬೆಳಗಾವಿಯಲ್ಲಿ ಲೇಖಕಿಯರು ಕಂಡುಬರುತ್ತಾರೆ.

ಬೆಳಗಾವಿ ಮೂಲದ ಶ್ರೀಮತಿ ಶಾಂತಾದೇವಿ ಮಾಳವಾಡರು ನಾಡಿನ ಪ್ರಮುಖ ಮಹಿಳಾ ಸಾಹಿತಿಯಾಗಿ ಗುರುತಿಸಿಕೊಂಡಿದ್ದಾರೆ. ಕತೆ, ಕವನ, ಕಾದಂಬರಿ, ಪ್ರಬಂಧ ಜೀವನ ಚರಿತ್ರೆ, ಪ್ರವಾಸ ಸಾಹಿತ್ಯ ಹೀಗೆ ವಿವಿಧ ಪ್ರಕಾರಗಳಲ್ಲಿ ಸುಮಾರು ೩೮ ಕೃತಿಗಳನ್ನು ರಚಿಸಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಸದಸ್ಯತ್ವವನ್ನು ಪಡೆದ

ಮೊದಲ ಮಹಿಳೆ ಎಂಬ ಗೌರವಕ್ಕೆ ಪಾತ್ರರಾಗಿ, ರಾಜ್ಯ ಸಾಹಿತ್ಯ ಅಕಾಡೆಮಿ, ರಾಜ್ಯೋತ್ಸವ ಪ್ರಶಸ್ತಿ ಅಖಿಲ ಭಾರತ ಸಾಹಿತ್ಯ ಸಮ್ಮೇಳನ, ಶರಣ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷತೆಯನ್ನು ನಿರ್ವಹಿಸಿದ್ದಾರೆ.

ದಿ. ಗೀತಾ ದೇಸಾಯಿಯವರು ಬೆಳಗಾವಿಯ ಸ್ವಾತಂತ್ರ್ಯ ಯೋಧರ ಕುಟುಂಬದಲ್ಲಿ ಜನಿಸಿ 'ಕ್ರಾಂತಿವೀರ ಗೋವಿಂದರಾವ ಯಾಳಗಿ' (ಜೀವನ ಚರಿತ್ರೆ) 'ಭರ್ತಾ ರಕ್ಷಿತಿ ಯೌವನೇ' (ಕಥಾ ಸಂಕಲನ) ಎಂಬ ಎರಡು ಕೃತಿಗಳನ್ನು ಪ್ರಕಟಿಸಿದ್ದಾರೆ.

ಆಧುನಿಕ ಕತೆಗಾರ್ತಿಯರಲ್ಲಿ ಪ್ರಮುಖರೆಂದು ಗುರುತಿಸಲ್ಪಡುವ ಲೇಖಕಿ ವೀಣಾ ಶಾಂತೇಶ್ವರ ಅವರು ಬೆಳಗಾವಿಯವರು. ಮುಳ್ಳುಗಳು, ಹಸಿವು (ಕಥಾ ಸಂಕಲನಗಳು) ಗಂಡಸರು ಎನ್ನುವ ಕಾದಂಬರಿ ಪ್ರಕಟಿಸಿದ್ದಾರೆ.

ಬೆಳಗಾವಿಯಲ್ಲಿ ಜನಿಸಿದ ಡಾ. ವಿಜಯಲಕ್ಷ್ಮಿ ಬಾಳೇಕುಂದ್ರಿಯವರು ಕರ್ನಾಟಕದ ಪ್ರಪ್ರಥಮ ಮಹಿಳಾ ಹೃದ್ರೋಗ ತಜ್ಞೆಯಾಗಿದ್ದಾರೆ. ಇವರ 'ಸಮಾಜ ವಿಕಾಸಕ್ಕೆ ಶರಣ ಸಂಸ್ಕೃತಿ' ಕೃತಿಯು ಮಹತ್ವದ್ದಾಗಿದೆ. ಅಂಕಣಕಾರ್ತಿಯಾಗಿ, ಹಲವಾರು ಮಹತ್ವದ ಅಂಕಣಬರಹಗಳನ್ನು ಬರೆದಿದ್ದಾರೆ.

ಶ್ರೀಮತಿ ನೀಲಗಂಗಾ ಚರಂತಿಮಠ ಅವರು ತಮ್ಮ ಕೃತಿಗಳ ಮೂಲಕ ನಾಡಿನಾದ್ಯಂತ ಚಿರಪರಿಚಿತರಾಗಿದ್ದಾರೆ. ಹಲವು ದಶಕಗಳಿಂದ ಬೆಳಗಾವಿಯಲ್ಲಿ ನೆಲೆ ನಿಂತು ಬೆಳಗಾವಿಯ ಸಾಹಿತ್ಯಿಕ ಸಾಂಸ್ಕೃತಿಕ ವಲಯದಲ್ಲಿ ಗುರುತರ ಕಾರ್ಯಗಳನ್ನು ಮಾಡಿದ್ದಾರೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಉಪನಿರ್ದೇಶಕಿಯಾಗಿ, ಸಾಹಿತ್ಯ, ಕಲೆ, ರಂಗಭೂಮಿಯಲ್ಲಿ ಸದಾ ತೊಡಗಿಕೊಂಡು ಸುಮಾರು ಇಪ್ಪತ್ತೆರಡು ಕೃತಿಗಳನ್ನು ರಚಿಸಿದ್ದಾರೆ. ಮನೆ ಮಡದಿ ಮಕ್ಕಳು, ಕಥಾಸಂಕಲನ ಆತ್ಮ ಯಾವ ಕುಲ ಜೀವ ಯಾವ ಕುಲ(ಕಾದಂಬರಿ) ಕಾಡ ಕೂಗು (ಕವನ ಸಂಕಲನ) ನಮ್ಮ ಆರೋಗ್ಯ (ಶಿಶು ಸಾಹಿತ್ಯ)ಪಯಣಿಗ (ಮಕ್ಕಳ ಸಾಹಿತ್ಯ) ಇತ್ಯಾದಿ ಕೃತಿಗಳನ್ನು ರಚಿಸಿದ್ದಾರೆ. ಇವರ 'ವಯಸ್ಕರ ಶಿಕ್ಷಣ' ಕೃತಿಗೆ ಭಾರತ ಸರಕಾರದ ಶಿಕ್ಷಣ ಇಲಾಖೆಯ ಬಹುಮಾನ ದೊರೆತಿದೆ.

ಡಾ. ಗುರುದೇವಿ ಹುಲ್ಲೆಪ್ಪನವರಮಠ ಅವರು ವಿನೋದಪೂರ್ಣ ಲಘು ಪ್ರಬಂಧಗಳ ರಚನೆಯಿಂದ ನಾಡಿನ ಪ್ರಮುಖ ಮಹಿಳಾ ಲೇಖಕಿಯಾಗಿ ಗುರುತಿಸಿಕೊಂಡಿದ್ದಾರೆ. ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿ ಎಂ. ಎ. ಪದವಿಗಳನ್ನು ಸಂಪಾದಿಸಿ ೧೯೯೬ರಲ್ಲಿ ಪಿಎಚ್.ಡಿ. ಪದವಿಯನ್ನು ಕರ್ನಾಟಕ ವಿಶ್ವವಿದ್ಯಾಲಯದಿಂದ ಪಡೆದುಕೊಂಡಿದ್ದಾರೆ. ಸದ್ಯಕ್ಕೆ ಬೆಳಗಾವಿಯ ಲಿಂಗರಾಜ ಮಹಾವಿದ್ಯಾಲಯದಲ್ಲಿ ಇಂಗ್ಲಿಷ್ ವಿಭಾಗದ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಡಾ. ಗುರುದೇವಿಯವರ ನಗೆ ಬರಹಗಳಲ್ಲಿ ನವಿರಾದ ಹಾಸ್ಯದ ಜೊತೆಗೆ ಸಹ್ಯವೆನಿಸುವ ವಿಡಂಬನೆ ಮತ್ತು ವ್ಯಂಗ್ಯಗಳು ಎದ್ದು ಕಾಣುತ್ತವೆ. ಸುತ್ತಮುತ್ತಲಿನ ಸಣ್ಣಪುಟ್ಟ ಘಟನೆ, ವಸ್ತುಗಳ ಮೂಲಕ ಹಾಸ್ಯವನ್ನು

ಹೊಸೆದು ಓದುಗರ ಗಮನ ಸೆಳೆಯುತ್ತಾರೆ. ಇವರ 'ನನ್ನಜ್ಜಿ ಗುಜ್ಜಿ', 'ಬಿಡುಗಡೆಯ ಸಡಗರ', 'ಮೂಗು ಮುರಿದವರು' ಮುಂತಾದ ಪ್ರಬಂಧ ಸಂಕಲನಗಳು ಹಾಸ್ಯ ಸಾಹಿತ್ಯದಲ್ಲಿ ವಿಶಿಷ್ಟವಾಗಿ ಗುರುತಿಸಲ್ಪಟ್ಟಿವೆ. ಶರಣ ಸಾಹಿತ್ಯದ ಬಗೆಗೂ ವಿಶಿಷ್ಟವಾದ ಒಲವು ಹೊಂದಿದ ಇವರು ಹಲವಾರು ಲೇಖನಗಳನ್ನು ಬರೆದಿದ್ದಾರೆ. ಖ್ಯಾತ ಶಿಶು ಸಾಹಿತಿ ಉಳುವೇಶ ಹುಲ್ಲೆಪ್ಪನವರಮಠ ರ ಸುಪುತ್ರಿಯರಾದ ಗುರುದೇವಿಯವರು ತಂದೆಯಿಂದ ಸಾಹಿತ್ಯದ ಶಕ್ತಿಯನ್ನು ಪಡೆದುಕೊಂಡು ನಾಡಿನ ಪ್ರಮುಖ ಮಹಿಳಾ ಸಾಹಿತಿಗಳ ಸಾಲಿನಲ್ಲಿ ಗುರುತಿಸಿಕೊಂಡಿದ್ದಾರೆ.

ಬೆಳಗಾವಿಯ ಶೀಲಾ ಅಂಕೋಲಾರ ಬಂಡಾಯ ಧೋರಣೆಯ ಕವನ ಸಂಕಲನ 'ಮತ್ತೆ ಚಿಗುರುತ್ತೇನೆ' ಮಹತ್ವದ್ದಾಗಿದೆ. ಡಾ. ಕೆ. ಆರ್. ಸಿದ್ಧಗಂಗಮ್ಮನವರ 'ಶ್ರಾವಣದ ಮಾತುಗಳು', ಶ್ವೇತಾ ನರಗುಂದರ 'ಹೇಮಗರ್ಭಾ' ಕವಿತಾ ಕುಸುಗಲ್ಲ 'ಬೆಳದಿಂಗಳಾದವಳು' ಕವನ ಸಂಕಲನ ಗಮನಾರ್ಹವಾಗಿವೆ. ವಾಸಂತಿ ಮೇಳೆದ, ಶ್ರೀಮತಿ ಸರಿತಾ ಕುಲಕರ್ಣಿ ಮುಂತಾದವರು ಮಹಿಳಾ ಸಾಹಿತ್ಯ ಪರಂಪರೆಯಲ್ಲಿ ಕೃತಿಗಳನ್ನು ರಚಿಸಿ ಸಾಹಿತ್ಯಿಕ ಚಟುವಟಿಕೆಯಲ್ಲಿ ತೊಡಗಿಸಿಕೊಂಡಿದ್ದಾರೆ. ಸಂಶೋಧನಾತ್ಮಕ ಲೇಖನಗಳ ಮೂಲಕ ಗಮನ ಸೆಳೆದಿರುವ ಡಾ. ಸ್ಮಿತಾ ಸುರೇಬಾನಕರ, ಪ್ರೊ. ಮಹಾದೇವಿ ಹಾಗರಗಿ ಮುಂತಾದವರು ಬೆಳಗಾವಿಯ ಇತಿಹಾಸ, ಸಂಸ್ಕೃತಿಯ ಮೇಲೆ ಬೆಳಕು ಚೆಲ್ಲಿದ್ದಾರೆ.

ಬೆಳಗಾವಿಯ ಸಾಹಿತ್ಯ ಪರಂಪರೆಯಲ್ಲಿ ಮಹಿಳಾ ಸಾಹಿತ್ಯವು ಕಾವ್ಯ,ಕತೆ, ಹರಟೆ, ಸಂಶೋಧನೆ, ಕಾದಂಬರಿ ಮೂಲಕ ವಿಶಿಷ್ಟವಾಗಿ ಮೂಡಿ ಬಂದಿದೆ. ಬೆಳಗಾವಿ ಜಿಲ್ಲೆಯ ಮಹಿಳಾ ಲೇಖಕಿಯ ಸಂಘವೂ ಅಸ್ತಿತ್ವದಲ್ಲಿದ್ದು ಹಲವಾರು ರಚನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಾಹಿತ್ಯಿಕ ಚಟುವಟಿಕೆಯಲ್ಲಿ ತೊಡಗಿಕೊಂಡಿದೆ. ಹಲವಾರು ಮಹಿಳಾ ಸಂಘಗಳು, ಅಕ್ಕನ ಬಳಗಗಳು ಬೆಳಗಾವಿಯಲ್ಲಿ ಒಂದಿಲ್ಲೊಂದು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರ ಮೂಲಕ ಮಹಿಳಾ ಸಾಹಿತಿಗಳಿಗೆ ಸ್ಫೂರ್ತಿಯನ್ನು ನೀಡುತ್ತ ಬಂದಿವೆ.

## ಇ. ಸಂವಹನ

### ೧. ಮುದ್ರಣಾಲಯಗಳು :

ಯುರೋಪದಲ್ಲಿ ಮುದ್ರಣ ಕಲೆಯು ಮೊದಲು ಶೋಧವಾದದ್ದು ಕ್ರಿ. ಶ. ೧೪೫೬ರಲ್ಲಿ. ಅದು ಭಾರತಕ್ಕೆ ಕಾಲಿಟ್ಟಿದ್ದು ಕ್ರಿ. ಶ. ೧೫೫೦ರ ಸುಮಾರಿಗೆ. ಭಾರತದಲ್ಲಿ ಮುದ್ರಣ ಕಲೆಗೆ ಅಳವಡಿಸಿಕೊಳ್ಳಲು ಯತ್ನಿಸಿದ ಮೊಟ್ಟ ಮೊದಲ ಭಾಷೆ ಕನ್ನಡವಾದರೂ ಆ ಕಾರ್ಯ ಪೂರ್ಣವಾಗಲಿಲ್ಲ. ಗೋವೆಯಲ್ಲಿದ್ದ ಜೆಸುಯಿಟ್ ಪಾದ್ರಿಗಳು ಸ್ಥಳೀಯ ಭಾಷೆಯಾದ ಕೊಂಕಣಿ ಭಾಷೆಯಲ್ಲಿ ಮುದ್ರಣ ಕಲೆಯನ್ನು ಅಳವಡಿಸಿಕೊಳ್ಳಬಯಸಿದರು. ಆದರೆ ಕೊಂಕಣಿ ಭಾಷೆಯು ಸ್ವಂತ ಲಿಪಿಯನ್ನು ಹೊಂದಿರಲಿಲ್ಲ. ಅದು ಕನ್ನಡ ಲಿಪಿಯಲ್ಲಿ ಬಳಕೆಗೊಳ್ಳುತ್ತಿತ್ತು. ಹೀಗಾಗಿ ಕನ್ನಡ ಲಿಪಿಯ ಮೊಳೆಗಳನ್ನು ತಯಾರಿಸುವ ಕಾರ್ಯ ನಡೆಯಿತು. 'ಗೋನ್ಸಾಲಿಸ್' ಎನ್ನುವವನು ಈ ಕಾರ್ಯದಲ್ಲಿ ಉದ್ಯುಕ್ತನಾದನು. ಆದರೆ ಕನ್ನಡ ಲಿಪಿಯ ಸಣ್ಣ ದೊಡ್ಡ ಸಂಜ್ಞೆಗಳು, ಅಂಕು ಡೊಂಕುಗಳು ತೊಂದರೆ ಕೊಟ್ಟಿದ್ದರಿಂದ

ಆ ಕೆಲಸವನ್ನು ಕೈಬಿಟ್ಟನು. ಒಂದು ವೇಳೆ ಆ ಕಾರ್ಯ ಪೂರ್ಣಗೊಂಡಿದ್ದರೆ ಭಾರತೀಯ ಭಾಷೆಯಲ್ಲಿ ಕನ್ನಡ ಲಿಪಿಯು ಮುದ್ರಣಕ್ಕೆ ಒಳಪಟ್ಟ ಮೊಟ್ಟ ಮೊದಲನೆಯ ಭಾಷೆಯಾಗುತ್ತಿತ್ತು ಎಂದು ಡಾ. ಶ್ರೀನಿವಾಸ ಹಾವನೂರ ಅವರು ಅಭಿಪ್ರಾಯ ಪಟ್ಟಿದ್ದಾರೆ.[೫೦]

ಭಾರತದಲ್ಲಿ ಮೊದಲ ಮುದ್ರಿತ ಕೃತಿ ೧೫೫೭ ರಲ್ಲಿ ಪ್ರಕಟವಾಯಿತು. ಗೋವೆಯಲ್ಲಿದ್ದ ಪೋರ್ಚುಗೀಸ್ ಪಾದ್ರಿಗಳು ಸಂತ ಝೆವಿಯರನ 'ಡೇಟ್ರಿನಾ ಕ್ರಿಸ್ತಾ' ಎಂಬ ಗ್ರಂಥವನ್ನು ಮುದ್ರಿಸಿದರು. ದಾಖಲೆಗಳ ಪ್ರಕಾರ ಇದು ಭಾರತದ ಮೊದಲ ಮುದ್ರಿತ ಕೃತಿಯಾಗಿದೆ.[೫೧]

ಕನ್ನಡ ಭಾಷೆಯ ಮೊದಲ ಮುದ್ರಣ ಕರ್ನಾಟಕದಲ್ಲಿ ಆಗದೇ ಭಾರತದ ಇತರ ಪ್ರದೇಶಗಳಲ್ಲಿ ನಡೆದಿದೆ. ಈ ಸಂದರ್ಭದಲ್ಲಿ ಪ್ರಥಮ ಮುದ್ರಿತ ಕನ್ನಡ ಪುಸ್ತಕವೆಂದರೆ ವಿಲಿಯಮ್‌ಕೇರಿಯ 'A Grammar of Karnataka language'. ಇದು ಬಂಗಾಲದ ಶ್ರೀರಾಮಪುರ ಪ್ರೆಸ್ಸಿನಲ್ಲಿ ಕ್ರಿ. ಶ. ೧೮೧೭ ರಲ್ಲಿ ಮುದ್ರಣಗೊಂಡಿತು.

ಕರ್ನಾಟಕದಲ್ಲಿ ಮುದ್ರಣ ಯಂತ್ರವು ಮೊಟ್ಟಮೊದಲು ಸ್ಥಾಪಿತವಾದದ್ದು ಬಳ್ಳಾರಿಯಲ್ಲಿ. ಅದಕ್ಕಿಂತಲೂ ಮೊದಲು ಕನ್ನಡ ಪುಸ್ತಕಗಳು ಬಂಗಾಲ, ಮುಂಬಯಿ, ಮದ್ರಾಸಗಳ ಮುದ್ರಣಾಲಯಗಳಲ್ಲಿ ನಡೆಯುತ್ತಿತ್ತು. ಇದರಿಂದ ದೂರದ ಆ ಊರುಗಳಿಗೆ ಓಡಾಟದಲ್ಲಿಯೇ ವೇಳೆ ಹೋಗುತ್ತಿತ್ತು. ಹೀಗಾಗಿ ಕನ್ನಡ ಪುಸ್ತಕಗಳ ಮುದ್ರಣ ಕಾರ್ಯವು ವಿಳಂಬವಾಗ ತೊಡಗಿತು. ಈ ಸಂದರ್ಭದಲ್ಲಿ ಹ್ಯಾಂಡ್ಸ್ ಎಂಬ ಪಾದ್ರಿಯು ಲಂಡನ್ನಿನಿಂದ ಒಂದು ಮುದ್ರಾಯಂತ್ರವನ್ನು ಮತ್ತು ಮೊಳೆಗಳನ್ನು ತಯಾರಿಸುವ ಒಬ್ಬ ಕಂಚುಗಾರನನ್ನು ಕರೆಯಿಸಿಕೊಂಡು ಕ್ರಿ. ಶ. ೧೮೨೭ರಲ್ಲಿ ಕನ್ನಡ ಮುದ್ರಣಾಲಯವನ್ನು ಬಳ್ಳಾರಿಯಲ್ಲಿ ಸ್ಥಾಪಿಸಿದನು. ಇದರಿಂದ ಕನ್ನಡ ಭಾಷೆಯ ಮೊದಲ ಮುದ್ರಣಾಲಯವು ಕರ್ನಾಟಕದ ಬಳ್ಳಾರಿಯಲ್ಲಿ ಸ್ಥಾಪನೆಗೊಂಡು ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿತು.

ಕರ್ನಾಟಕದಲ್ಲಿ ಬಳ್ಳಾರಿಯ ನಂತರ ಮುದ್ರಣಕಾರ್ಯದ ಚಟುವಟಿಕೆ ಪ್ರಾರಂಭವಾದದ್ದು ಬೆಳಗಾವಿಯಲ್ಲಿ. ಕ್ರಿ. ಶ. ೧೮೩೨ ರಲ್ಲಿ ಬೆಳಗಾವಿಯಲ್ಲಿದ್ದ ಡಬ್ಲ್ಯೂ ಬೆಯ್ನನ್ ಎಂಬ ಪಾದ್ರಿಯ ಒಂದು ಕಲ್ಲಚ್ಚಿನ ಯಂತ್ರವನ್ನು ೫೦೦ ರೂಪಾಯಿಗಳಿಗೆ ಕೊಂಡು ತಂದು ಮುದ್ರಣ ಕಾರ್ಯವನ್ನು ಪ್ರಾರಂಭಿಸಿದನು. ಆದರೆ ಇದು ಹೆಚ್ಚು ದಿನಗಳವರೆಗೆ ಮುಂದುವರಿಯದೆ ನಿಂತು ಹೋಯಿತು. ಆಗ ಮುದ್ರಣ ಯಂತ್ರಗಳು ಬೆಳಗಾವಿಗೆ ಮೊದಲಬಾರಿಗೆ ಬಂದಿದ್ದರಿಂದ ಅವುಗಳ ಬಗೆಗೆ ಸರಿಯಾದ ತಿಳಿವಳಿಕೆ ಇಲ್ಲದ ಕಾರಣ ಆ ಯಂತ್ರವನ್ನು ಮಾರಬೇಕಾಗಿ ಬಂದಿತೆನ್ನುವ ಅಂಶವನ್ನು ಬೆಯ್ನನ್ ನೀಡಿದ್ದಾನೆ. ಅಲ್ಲದೆ ಇಲ್ಲಿ ಮುದ್ರಣಗೊಂಡ ಪುಸ್ತಕಗಳು ಸರಿಯಾಗಿ ಮುದ್ರಣವಾಗದೆ ಅವುಗಳನ್ನು ಓದಲು ಬಾರದಷ್ಟು ಅಶುದ್ಧವಾಗಿದ್ದವು ಎಂದೂ ಹೇಳಿದ್ದಾನೆ.[೫೨]

**ಬೆಳಗಾವಿಯಲ್ಲಿ ಕರ್ನಾಟಕದ ಮೊಟ್ಟ ಮೊದಲ ಖಾಸಗಿ ಮುದ್ರಣಾಲಯ:** ಕರ್ನಾಟಕದಲ್ಲಿ ಮಂಗಳೂರು, ಬಳ್ಳಾರಿ, ಮೈಸೂರು ಹಾಗೂ ಧಾರವಾಡಗಳಲ್ಲಿ ಮಿಶನರಿ ಮತ್ತು ಸರ್ಕಾರದ ಮೂಲಕ ಮುದ್ರಣಾಲಯಗಳು ಪ್ರಾರಂಭವಾಗಿದ್ದವು. ಆದರೆ ಖಾಸಗಿಯಾಗಿ ಯಾರೂ ಮುದ್ರಣಾಲಯವನ್ನು ಸ್ಥಾಪಿಸಿರಲಿಲ್ಲ. ಈ ಕಾರ್ಯ ಮೊಟ್ಟ ಮೊದಲ ಬಾರಿಗೆ ನಡೆದದ್ದು ಬೆಳಗಾವಿಯಲ್ಲಿ. ಮುದ್ರಣಾಲಯವನ್ನು ಲಾಭದಾಯಕ ಉದ್ಯಮವನ್ನಾಗಿ ಮಾಡಿಕೊಂಡು ಮಹತ್ವದ ಗ್ರಂಥಗಳನ್ನು ಮುದ್ರಿಸುವ ಕಾರ್ಯಕ್ಕೆ ಬೆಳಗಾವಿಯಲ್ಲಿ ಕ್ರಿ. ಶ. ೧೮೪೯ ರಲ್ಲಿ 'ಸುಬುದ್ಧಿ ಪ್ರಕಾಶ' ಎನ್ನುವ ಮುದ್ರಣಾಲಯವು ಸ್ಥಾಪನೆಗೊಂಡಿತು. (ಈ ಪ್ರಕಾಶನದ ಮೂಲಕವೇ ಕನ್ನಡದ ಮೊಟ್ಟ ಮೊದಲ ಖಾಸಗಿಯಾಗಿ 'ಸುಬುದ್ಧಿ ಪ್ರಕಾಶ' ಎನ್ನುವ ಹೆಸರಿನಲ್ಲಿ ಪತ್ರಿಕೆ ಪ್ರಾರಂಭವಾಯಿತು) ಈ ಹೊತ್ತಿಗಾಗಿಯೇ ಅನೇಕ ಹಳ್ಳಿ ಹಳ್ಳಿಗಳಲ್ಲಿಯೂ ಪ್ರಾಥಮಿಕ ಶಾಲೆಗಳು ಪ್ರಾರಂಭವಾಗಿದ್ದವು. ಹೆಚ್ಚು ಜನ ಸಾಕ್ಷರರಾಗಲು ಹಾತೊರೆಯುತ್ತಿದ್ದರು. ಸರಕಾರದವರೂ ಪಠ್ಯ ಪುಸ್ತಕಗಳನ್ನು ಒದಗಿಸಲು ಪ್ರಯತ್ನಿಸುತ್ತಿದ್ದರು. ಆದರೆ ಅವು ಎಲ್ಲರಿಗೂ ಲಭ್ಯವಾಗುತ್ತಿರಲಿಲ್ಲ. ಅಕ್ಷರಸ್ಥರಿಗೆ ಓದಲು ಬೇರೆ ಬೇರೆ ಪುಸ್ತಕಗಳು ಬೇಕೆನಿಸಿದವು. ಜನಸಾಮಾನ್ಯರ ನಾಲಗೆಯ ಮೇಲಿದ್ದ ಲಾವಣಿ ಪದಗಳು, ಸರ್ವಜ್ಞನ ವಚನಗಳು, ಜೈಮಿನಿ ಭಾರತ, ಕುಮಾರವ್ಯಾಸ ಭಾರತ ಮೊದಲಾದ ಕಾವ್ಯ, ಕತೆ, ಧಾರ್ಮಿಕ ಗ್ರಂಥಗಳನ್ನು ಓದಬೇಕೆನ್ನುವ ಮನೋಧರ್ಮ ಸಾಮಾನ್ಯ ಜನರಲ್ಲಿ ಬೆಳೆಯಿತು. ಇದೆಲ್ಲವನ್ನು ಅರಿತುಕೊಂಡ 'ಖೀರು ಶೇಷು' ಎನ್ನುವವನು ಗ್ರಂಥಗಳನ್ನು ಪ್ರಕಟಿಸಿ ಲಾಭಗಳಿಸುವ ಉದ್ದೇಶವನ್ನಿಟ್ಟುಕೊಂಡು ಬೆಳಗಾವಿಯಲ್ಲಿ ಮುದ್ರಣಾಲಯವನ್ನು ಪ್ರಾರಂಭಿಸಿದ. ಇದು ಕರ್ನಾಟಕದಲ್ಲಿ ಗ್ರಂಥೋದ್ಯಮಕ್ಕೆ ನಾಂದಿಯಾಯಿತು. ಮುದ್ರಣಾಲಯಗಳ ಮೂಲಕ ಪುಸ್ತಕಗಳನ್ನು ಪ್ರಕಟಿಸಿ ಲಾಭಗಳಿಸುವುದನ್ನು ಮಹಾರಾಷ್ಟ್ರದಲ್ಲಿ ಈಗಾಗಲೇ ನೋಡಿದ್ದ 'ಖೀರು ಶೇಷುಗೆ' ಅದನ್ನು ಬೆಳಗಾವಿಯಲ್ಲಿ ಪ್ರಾರಂಭಿಸಲು ಪ್ರೇರಣೆಯಾಯಿತು.

ಮೂಲತಃ ಮರಾಠಿಗನಾಗಿದ್ದ ಈತನಿಗೆ ಬೆಳಗಾವಿಯಲ್ಲಿ ಒಂದು ಒಳ್ಳೆಯ ಅವಕಾಶ ದೊರೆಯಿತು. ಈತನ ಈ ಕಾರ್ಯಕ್ಕೆ ರಾಜಮನ್ನಣೆಯೂ ದೊರೆಯಿತು. 'ಸುಬುದ್ಧಿ ಪ್ರಕಾಶ' ಎನ್ನುವ ಮುದ್ರಣಾಲಯವನ್ನು ಸಾಂಗಲಿ ಸಂಸ್ಥಾನಿಕ ರಾಜಶ್ರೀ ಚಿಂತಾಮಣರಾವ್ ಅಪ್ಪಾಸಾಹೇಬ ಸಾಂಗಲಿಕರ ಎಂಬುವವರು ಬೆಳಗಾವಿಯ ಗ್ರಂಥಾಲಯಕ್ಕೆ 'ಲೋಕಕಲ್ಯಾಣಾರ್ಥ' ದಾನ ನೀಡಿದ್ದರು.[೫೩]

'ಸುಬುದ್ಧಿ ಪ್ರಕಾಶ' ಮುದ್ರಣಾಲಯದ ಮೂಲಕ ಕನ್ನಡ ಮತ್ತು ಮರಾಠಿ ಎರಡೂ ಭಾಷೆಯ ಮಹತ್ವದ ಗ್ರಂಥಗಳು ಪ್ರಕಟಗೊಳ್ಳುತ್ತಿದ್ದವು. ಮರಾಠಿ ವ್ಯಕ್ತಿಯ ಒಡೆತನದಲ್ಲಿ ಮರಾಠಿ ರಾಜರ ಆಶ್ರಯದಲ್ಲಿ, ಮರಾಠಿ ಭಾಷೆಯ ಪ್ರಾಬಲ್ಯದ ಕನ್ನಡ ಪ್ರದೇಶದಲ್ಲಿ ಕನ್ನಡ ಗ್ರಂಥಗಳ ಮುದ್ರಣ ಕನ್ನಡ ಪತ್ರಿಕೆಯ ಪ್ರಸಾರವು ಬೆಳಗಾವಿಯ ನೆಲದಲ್ಲಿ ಉಂಟಾದದ್ದು ಚಾರಿತ್ರಿಕವಾಗಿ ಮಹತ್ವದ್ದಾಗಿದೆ.

**ಮೊಳೆಗಳ ತಯಾರಿಕೆ:** ಕರ್ನಾಟಕದ ಮುದ್ರಣಾಲಯಗಳ ಇತಿಹಾಸದಲ್ಲಿ ಮತ್ತೊಂದು ಐತಿಹಾಸಿಕ ಮಹತ್ವ ಬೆಳಗಾವಿಗಿದೆ. ಅದು ಮೊಳೆಗಳನ್ನು ಉಪಯೋಗಿಸಿ ಮುದ್ರಣ ಪ್ರಾರಂಭವಾದದ್ದು. ೧೮೬೭ ರ ಸುಮಾರಿಗೆ ಬೆಳಗಾವಿ ಭಾಗದ ಶಿಕ್ಷಣಾಧಿಕಾರಿಯಾಗಿದ್ದ 'ವಿಲಿಯಮ್ ರಸೆಲ್' ಮತ್ತು ಸಹಾಯಕ ಶಿಕ್ಷಣಾಧಿಕಾರಿಯಾಗಿದ್ದ ವೆಂಕಟ ರಂಗೋ ಕಟ್ಟಿ ಇವರಿಬ್ಬರು ಅದರ ಪ್ರವರ್ತಕರು. ೧೮೬೭ ಕ್ಕಿಂತ ಪೂರ್ವದಲ್ಲಿ ಕಲ್ಲಚ್ಚಿನ ಮೂಲಕ ಮುದ್ರಣ ಕಾರ್ಯ ನಡೆಯುತ್ತಿತ್ತು. ಆದರೆ ಮುದ್ರಣ ಸರಿಯಾಗಿ ಆಗುತ್ತಿರಲಿಲ್ಲ. ಅಲ್ಲದೆ ಮುದ್ರಣ ಕ್ಷೇತ್ರದಲ್ಲಿ ಸುಧಾರಣೆಗಳು ಕಂಡು ಬಂದು ಅಕ್ಷರಗಳ ಮೊಳೆಗಳನ್ನು ಉಪಯೋಗಿಸಿ ಮುದ್ರಣಗೊಳಿಸುವ ಪದ್ಧತಿಯು ಎಲ್ಲ ಕಡೆಗೂ ಪ್ರಾರಂಭವಾಗಿತ್ತು. ಕಲ್ಲಚ್ಚಿನ ಮುದ್ರಣವು ಬಹಳಷ್ಟು ಕಡೆ ನಿಂತು ಹೋಗಿತ್ತು. ಹೀಗಾಗಿ ಮುದ್ರಣ ವ್ಯವಸ್ಥೆಯ ಈ ಸುಧಾರಣೆಯನ್ನು ತರುವುದು ಅನಿವಾರ್ಯವಾಗಿತ್ತು. ಅಲ್ಲದೆ ಕಲ್ಲಚ್ಚಿನ ಮುದ್ರಣವು ತುಂಬಾ ತಡವಾಗುತ್ತಿತ್ತು. ಪುಸ್ತಕಗಳ ಮುದ್ರಣದ ಸಂಖ್ಯೆ ವರ್ಷದಿಂದ ವರ್ಷಕ್ಕೆ ಹೆಚ್ಚಾಗುತ್ತಿದ್ದುದರಿಂದ ರಸೆಲ್‌ರು ಮೊಳೆಗಳನ್ನು ಉಪಯೋಗಿಸಿ ಮುದ್ರಣಗೊಳಿಸುವ ವ್ಯವಸ್ಥೆಯನ್ನು ಬೆಳಗಾವಿಯಲ್ಲಿ ಪ್ರಾರಂಭಿಸಲು ನಿರ್ಧರಿಸಿದರು. ಆಗ ಕನ್ನಡ ಮೊಳೆಗಳನ್ನು ಹುಡುಕ ತೊಡಗಿದರು. ಸರಕಾರಿ ಮುದ್ರಣಾಲಯಗಳನ್ನು ವಿವಿಧ ಮಿಶನ್ ಸಂಸ್ಥೆಗಳನ್ನು ಪತ್ರದ ಮೂಲಕ ವಿಚಾರಿಸಿದರು. ಭಾರತದಲ್ಲಿ ಎಲ್ಲಿಯೂ ಕನ್ನಡ ಮೊಳೆಗಳು ದೊರೆಯಲಾರವು ಎಂಬುದನ್ನು ಅರಿತು ಮುಂದೆ ಲಂಡನ್ನಿನಲ್ಲಿಯೂ ವಿಚಾರಿಸಿದರು. ಅಲ್ಲಿಯೂ ಅವು ದೊರೆಯಲಿಲ್ಲ. ಕೊನೆಗೆ ಅವು ಜರ್ಮನಿಯಲ್ಲಿ ದೊರೆಯುತ್ತವೆ ಎಂಬುದು ತಿಳಿದು ವಿಚಾರಿಸಿದಾಗ ಅವರು ಮೊಳೆಗಳ ಮೇಲಿನ ತಮ್ಮ ಏಕಸ್ವಾಮ್ಯವನ್ನು ಬಿಟ್ಟುಕೊಡಲು ಸಿದ್ಧರಿರಲಿಲ್ಲ. ಇದರಿಂದ ರಸೆಲ್‌ರಿಗೆ ತುಂಬಾ ನಿರಾಶೆಯಾಯಿತು. ಆದರೆ ವೆಂಕಟ ರಂಗೋ ಕಟ್ಟಿಯವರು ಕಂಚುಗಾರನ ಸಹಾಯವನ್ನು ಪಡೆದು ಸ್ವತಃ ಮೊಳೆಗಳನ್ನು ಸ್ವಲ್ಪ ದಿನಗಳಲ್ಲೆ ಸಿದ್ಧಗೊಳಿಸಿದರು. ಆದರೆ ಅವು ತುಂಬ ಒರಟಾಗಿದ್ದವು. ಅವುಗಳನ್ನು ನಯನಗೊಳಿಸಲು ಒಬ್ಬ ಕರ್ಮಚಾರಿಯನ್ನು ಆರೇಳು ತಿಂಗಳುಗಳ ವರೆಗೆ ಮುಂಬಯಿಗೆ ತರಬೇತಿಗಾಗಿ ಕಳುಹಿಸಿಕೊಟ್ಟರು. ಅವನು ಅನುಭವವನ್ನು ಪಡೆದು ವೆಂಕಟ ರಂಗೋ ಕಟ್ಟಿಯವರು ತಯಾರಿಸಿದ ಮೊಳೆಗಳನ್ನು ನಯ ಗೊಳಿಸಿದನು. ಇದೆಲ್ಲ ಕಾರ್ಯವನ್ನು ಮೆಚ್ಚಿಕೊಂಡು ರಸೆಲ್ ಸಾಹೇಬರು ಮೊಳೆಗಳ ಉತ್ಪಾದನಾ ಕೇಂದ್ರವನ್ನೇ ಬೆಳಗಾವಿಯಲ್ಲಿ ತೆರೆಯಲು ನಿರ್ಧರಿಸಿ ಮುಂಬಯಿ ಸರಕಾರದಿಂದ ಎರಡು ಸಾವಿರ ರೂ.ಗಳನ್ನು ಸಾಲವಾಗಿ ಕೊಡಿಸಿದರಲ್ಲದೆ, ತಮ್ಮ ಸ್ವಂತ ಎರಡು ಸಾವಿರ ರೂಪಾಯಿ ಗಳನ್ನು ಈ ಕಾರ್ಯಕ್ಕೆ ನೀಡಿದರು.[೫೪] ಹೀಗಾಗಿ ೧೮೭೦ ರ ಸುಮಾರಿಗೆ ಬೆಳಗಾವಿಯಲ್ಲಿ ಮೊಳೆಗಳ ಉತ್ಪಾದನಾ ಕೇಂದ್ರ ಸ್ಥಾಪಿತವಾಯಿತು. ಇದರಿಂದ ಉತ್ತರ ಕರ್ನಾಟಕ ಭಾಗದ ಮುದ್ರಣ ಕಾರ್ಯಕ್ಕೆ ಬೆಳಗಾವಿಯು ಕೇಂದ್ರ ಸ್ಥಳವಾಯಿತು.

**ಸಮಾಚಾರ ಪ್ರೆಸ್** : ಕ್ರಿ.ಶ. ೧೮೬೦ ರ ಸುಮಾರಿಗೆ ಬೆಳಗಾವಿಯಲ್ಲಿ ಪ್ರಾರಂಭಗೊಂಡ ಸಮಾಚಾರ ಪ್ರೆಸ್ ಕರ್ನಾಟಕದ ಅತ್ಯಂತ ಹಳೆಯ ಮುದ್ರಣಾಲಯಗಳಲ್ಲಿ ಒಂದಾಗಿದೆ. ಈ ಮುದ್ರಣಾಲಯದಲ್ಲಿ ಮರಾಠಿ ಮತ್ತು

ಕನ್ನಡ ಎರಡೂ ಭಾಷೆಗಳಲ್ಲಿ ಮುದ್ರಣವನ್ನು ನಡೆಸಲಾಗುತ್ತಿತ್ತು. ಮೊಳೆಗಳನ್ನು ಬಳಸಿ ಮುದ್ರಣಗೊಳಿಸುವ ವ್ಯವಸ್ಥೆ ಬರುವುದಕ್ಕಿಂತ ಪೂರ್ವದಲ್ಲಿ ಉತ್ತರ ಕರ್ನಾಟಕದ ಭಾಗದಲ್ಲಿಯೇ ಈ ಮುದ್ರಣಾಲಯವು ಮಹತ್ವವನ್ನು ಪಡೆದುಕೊಂಡಿತು. ಭಿಕಾಜಿ ಹರಿಸಾವಂತ ಎನ್ನುವವರು ಈ ಮುದ್ರಣಾಲಯವನ್ನು ನಡೆಸುತ್ತಿದ್ದರು.[೫೫] ಈ ಮುದ್ರಣಾಲಯದಿಂದ ನೂರಾರು ಪುಸ್ತಕಗಳು ಮುದ್ರಣಗೊಂಡವು. ಸಾಮಾನ್ಯವಾಗಿ ಈ ಮುದ್ರಣಾಲಯದಲ್ಲಿ ಪಂಚಾಂಗ, ದಿನದರ್ಶಿಗಳು, ಕ್ರಮಿಕ ಪುಸ್ತಕಗಳು, ಮಗ್ಗಿ ಪುಸ್ತಕಗಳು, ನೀತಿ ಕಥೆಗಳು, ಬಾಲಬೋಧೆ ಮುಂತಾದ ಪುಸ್ತಕಗಳು ಮುದ್ರಣಗೊಳ್ಳುತ್ತಿದ್ದವು.

೧೮೫೦ರಲ್ಲಿಯೇ ಪ್ರಾರಂಭಗೊಂಡ ಸರ್ದಾರ ಹೈಸ್ಕೂಲ ಮತ್ತು ಟ್ರೇನಿಂಗ್ ಕಾಲೇಜಗಳಲ್ಲಿ ಸೇವೆ ಸಲ್ಲಿಸಲು ಬಂದ ಶಿಕ್ಷಕರು ಪುಸ್ತಕ ಪ್ರಕಟಣೆಯತ್ತ ಗಮನಹರಿಸಿದರು. ಈ ಸಂದರ್ಭದಲ್ಲಿ ಹಲವಾರು ಮಹತ್ವದ ಕೃತಿಗಳು ಈ ಮುದ್ರಣಾಲಯದಲ್ಲಿ ಪ್ರಕಟಗೊಂಡವು.

೧೮೭೨ ರಲ್ಲಿ ಬೆಳಗಾವಿಯ ಟ್ರೇನಿಂಗ ಕಾಲೇಜಿನಲ್ಲಿ ಶಿಕ್ಷಕರಾಗಿದ್ದ ಶಾಂತವೀರ ರಾಚೇದೇವ ಕಿತ್ತೂರರು ರಚಿಸಿದ 'ಸಟೀಕ ರಾಜಶೇಖರವು' ಇಲ್ಲಿ ಮುದ್ರಿತವಾಯಿತು.[೫೬] ಸುಮಾರು ೧೬೧ ಪುಟಗಳ ಈ ಗ್ರಂಥದ ಬೆಲೆ ೧ ರೂಪಾಯಿ ೮ ಆಣೆ ಇತ್ತು. ಗಂಗಾಧರ ಮಡಿವಾಳೇಶ್ವರ ತುರಮರಿಯವರ ಮೃಚ್ಛಕಟಿಕ ನಾಟಕ[೫೭], ವೆಂಕಟ ರಂಗೋ ಕಟ್ಟಿಯವರು ಬರೆದ ಸಟೀಕ ಜೈಮಿನಿ'[೫೮] (ಮೊದಲ ನಾಲ್ಕು ಸಂಧಿಗಳಿಗೆ ಟೀಕೆ), ಗುರುರಾವ ವಿಠ್ಠಲ ಮೊಹರೆಯವರ 'ಶಬ್ದ ಸಂಗ್ರಹ' ಎಂಬ ಕನ್ನಡ ನಿಘಂಟು ೧೮೭೪ ರಲ್ಲಿ ಮುದ್ರಣಗೊಂಡಿತು.[೫೯] ಇದು ೧೭೭ ಪುಟಗಳನ್ನು ಹೊಂದಿರುತ್ತದೆ. ಹೀಗೆ ಹಲವಾರು ಮಹತ್ವದ ಕೃತಿಗಳು ಮುದ್ರಣಗೊಂಡವು.

ಸಮಾಚಾರ ಪ್ರೆಸ್ ಮುದ್ರಣ ಕ್ಷೇತ್ರದಲ್ಲಿ ಕೈಕೊಂಡ ಮತ್ತೊಂದು ಮಹತ್ವದ ಕಾರ್ಯವೆಂದೆ ಪತ್ರಿಕೆಗಳನ್ನು ಮುದ್ರಣಗೊಳಿಸುತ್ತಿದ್ದುದು. ಅಂದಿನ ಸಮಯದಲ್ಲಿ ಬೆಳಗಾವಿಯಿಂದ ಹಲವಾರು ಪತ್ರಿಕೆಗಳು ಹೊರಬರುತ್ತಿದ್ದವು. ಅವುಗಳಲ್ಲಿ ಬಹಳಷ್ಟು ಪತ್ರಿಕೆಗಳು ಸ್ವಂತ ಮುದ್ರಣಾಲಯವನ್ನು ಹೊಂದಿರಲಿಲ್ಲ. ಹೀಗಾಗಿ ಆ ಪತ್ರಿಕೆಗಳ ಮುದ್ರಣ ಕಾರ್ಯವು ಸಮಾಚಾರ ಪ್ರೆಸ್‌ನಲ್ಲಿಯೇ ನಡೆಯುತ್ತಿತ್ತು. ಅವುಗಳಲ್ಲಿ ಪ್ರಮುಖವಾದವುಗಳೆಂದರೆ 'ಕರ್ನಾಟಕ ಜ್ಞಾನ ಮಂಜರಿ (ಕನ್ನಡ), ೧೮೬೧ರಲ್ಲಿ ಪ್ರಾರಂಭಗೊಂಡ ಕನ್ನಡ ಜ್ಞಾನ ಬೋಧಕ, ಮರಾಠಿಯಲ್ಲಿ 'ಕಾನಡಿ ಜ್ಞಾನ ಬೋಧಕ್' 'ಬೆಳಗಾವಿ ಸಮಾಚಾರ', (ಮರಾಠಿ) ೧೮೬೫ ರಿಂದ ಪ್ರಾರಂಭಗೊಂಡ 'ಮಠ' ಪತ್ರಿಕೆ ೧೮೮೫ ರಲ್ಲಿ, ಪ್ರಾರಂಭಗೊಂಡ 'ಚಿಕಿತ್ಸಕ' ಮರಾಠಿ ವಾರ ಪತ್ರಿಕೆ ಎಲ್ಲವೂ ಸಮಾಚಾರ ಪ್ರೆಸ್‌ನಲ್ಲಿಯೇ ಮುದ್ರಣಗೊಳ್ಳುತ್ತಿದ್ದವು. ಸಮಾಚಾರ ಪ್ರೆಸ್ ಪತ್ರಿಕೋದ್ಯಮಕ್ಕೆ ಬೆಳಗಾವಿ ನೀಡಿದ ಕೊಡುಗೆ ಕರ್ನಾಟಕದ ಚರಿತ್ರೆಯ ಮಹತ್ವದ ಘಟ್ಟವೆಂದೇ ಹೇಳಬಹುದು.

ಉತ್ತರ ಕರ್ನಾಟಕದ ಶೈಕ್ಷಣಿಕ ವಿಕಾಸಕ್ಕೆ ಕಾರಣವಾದ ಬೆಳಗಾವಿಯ ಟ್ರೇನಿಂಗ್ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಡೆಪ್ಯೂಟಿ ಚನ್ನಬಸಪ್ಪನವರ ೧೯೬೫ ರಲ್ಲಿ ಮಠ ಪತ್ರಿಕೆಯನ್ನು ಬೆಳಗಾವಿಯಲ್ಲಿ ಪ್ರಾರಂಭಿಸಿದರು.[೬೦](ಇದರ ವಿವರವಾದ ಮಾಹಿತಿ ಪತ್ರಿಕೆಗಳು ಅಧ್ಯಾಯದಲ್ಲಿ ಬಂದಿದೆ) ಆದರೆ ಅದನ್ನು ಮುದ್ರಣಗೊಳಿಸುವುದೇ ಒಂದು ಸಮಸ್ಯೆಯಾಯಿತು. ಮುದ್ರಣಾಲಯಗಳು ಇಲ್ಲದ ಅಂದಿನ ದಿನಗಳಲ್ಲಿ ಇದ್ದರೂ ಸರಿಯಾಗಿ ಮುದ್ರಿಸುವ ಜ್ಞಾನವಿಲ್ಲದ ಪರಿಸರದಲ್ಲಿ ಮಠ ಪತ್ರಿಕೆಯನ್ನು ಮುದ್ರಣಗೊಳಿಸುವ ಜವಾಬ್ದಾರಿಯನ್ನು 'ಸಮಾಚಾರ ಪ್ರೆಸ್' ವಹಿಸಿಕೊಂಡಿತು. ಮುದ್ರಣಾಲಯಕ್ಕೆ ಇದೊಂದು ಪ್ರತಿಷ್ಠೆಯ ವಿಷಯ ಕೂಡ ಆಯಿತು. ರಾಜ್ಯವ್ಯಾಪಿ ಪ್ರಸಾರವನ್ನು ಹೊಂದಿ ಅತ್ಯಂತ ಮಹತ್ವದ ಪತ್ರಿಕೆಯನ್ನು ಮುದ್ರಿಸಿದ್ದರಿಂದಲೇ ಚರಿತ್ರೆಯಲ್ಲಿ ಬೆಳಗಾವಿ ಸಮಾಚಾರ ಪ್ರೆಸ್ ಶಾಶ್ವತ ಸ್ಥಾನವನ್ನು ಹೊಂದಿತು. ಮಠ ಪತ್ರಿಕೆಯನ್ನು ಮುದ್ರಿಸುವ ಹೊಣೆಯನ್ನು ಭಿಕಾಜಿ ಹರಿ ಸಾವಂತ ಮತ್ತು ರಾಮಚಂದ್ರ ಪ್ರಭಾಕರ ಜೋಶಿಯವರು ಹೊತ್ತುಕೊಂಡರು.[೬೧]

ಮಠ ಪತ್ರಿಕೆಯು ಪ್ರಾರಂಭದಲ್ಲಿ ಲಿಥೋಗ್ರಾಫ್ ಪ್ರಿಂಟಿಂಗ ಅಂದರೆ ಕಲ್ಲಚ್ಚಿನ ಮುದ್ರಣದಲ್ಲಿ ಮುದ್ರಣಗೊಂಡಿತು. ೧೮೬೫ ರಿಂದ ೧೮೭೧ ರವರೆಗೆ ಕಲ್ಲಚ್ಚಿನಲ್ಲಿ ಮುದ್ರಣಗೊಂಡು ಮುಂದೆ ಮೊಳೆಗಳ ಮೂಲಕ ಅಕ್ಷರ ಜೋಡಣೆ ಮುದ್ರಣದಿಂದ ಪ್ರಕಟವಾಗತೊಡಗಿತು.

ಮಠ ಪತ್ರಿಕೆಯ ಯಶಸ್ಸಿನ ಹಿಂದೆ ಮುದ್ರಣ ಕಾರ್ಯದ ಶ್ರಮವೂ ಇದೆ. ಅತ್ಯಂತ ಸುವ್ಯವಸ್ಥಿತವಾಗಿ, ಅಂದವಾಗಿ, ಯಾವುದೇ ಮುದ್ರಣ ದೋಷಗಳಿಲ್ಲದೆ ಮುದ್ರಣಗೊಂಡಿದ್ದರಿಂದ ಓದುಗರು ಪ್ರೀತಿಯಿಂದ ಸ್ವೀಕರಿಸಿದರು. ಒಂದು ವೇಳೆ ಸಮಾಚಾರ ಪ್ರೆಸ್ ಇಲ್ಲದಿದ್ದರೆ, ಅದು ಮುದ್ರಣಗೊಳಿಸದಿದ್ದರೆ, ಮಠ ಪತ್ರಿಕೆಯ ಸ್ಥಾಪನೆ ಕೆಲವು ವರ್ಷಗಳ ಮಟ್ಟಿಗಾದರೂ ಮುಂದೆ ಹೋಗುತ್ತಿತ್ತು ಎಂದು ಊಹಿಸಿದರೆ ತಪ್ಪಾಗಲಾರದು. ಏಕೆಂದರೆ ಇದಕ್ಕೆ ಪರ್ಯಾಯವಾಗಿ ಬೇರೆ ಮಾರ್ಗಗಳು ಇಲ್ಲದಿರುವಾಗ ಇದು ಅಷ್ಟೇ ಸತ್ಯ.

ಸಮಾಚಾರ ಛಾಪಖಾನೆಯಲ್ಲಿ ಮುದ್ರಣಗೊಂಡ ಮತ್ತೊಂದು ಮಹತ್ವದ ವಿಷಯವೆಂದರೆ ಚಿತ್ರದುರ್ಗ ಮಹಾಸ್ವಮಿಗಳ ಬಿನ್ನಹಪತ್ರ[೬೨]. ೧೮೬೮ ರಲ್ಲಿ ಮುದ್ರಣಗೊಂಡ ಈ ಬಿನ್ನಹ ಪತ್ರವು ಒಂದು ಸಾಮಾಜಿಕ ಸಂದರ್ಭದ ಸ್ಥಿತಿಗತಿಗಳನ್ನು ವಸ್ತುನಿಷ್ಠವಾಗಿ ವಿಶ್ಲೇಷಿಸುವ ಮಹತ್ವದ ದಾಖಲೆಯಾಗಿದೆ. ಲಿಂಗಾಯತ ಸಮಾಜದ ಶೈಕ್ಷಣಿಕ ಪ್ರಗತಿಗಾಗಿ ಸಮಾಜದವರು ಮಾಡಬೇಕಾದ ಕೆಲಸ ಕಾರ್ಯಗಳನ್ನು ಸ್ವಾಮೀಜಿಯವರು ಸೂಕ್ಷ್ಮವಾಗಿ ತಿಳಿಸಿಕೊಟ್ಟಿದ್ದಾರೆ. ಇದು ನಾಡಿನಾದ್ಯಂತ ಪ್ರಸಾರವನ್ನು ಪಡೆಯಿತು. ಸಮಾಚಾರ ಮುದ್ರಣಾಲಯವು ಯಾವುದೇ ಭಾಷಾ ಬೇಧ ಭಾವವಿಲ್ಲದೆ ಕನ್ನಡ–ಮರಾಠಿ ಎರಡೂ ಭಾಷೆಯ ಮುದ್ರಣಕಾರ್ಯವನ್ನು ಕೈಕೊಂಡು ಸಾಮರಸ್ಯವನ್ನುಂಟು ಮಾಡಿತು. ಅಲ್ಲದೆ ಧಾರ್ಮಿಕ ಸಾಮರಸ್ಯವನ್ನು ಮೆರೆಯಿತು. ಇಲ್ಲಿಯ ಜೈನ, ಕ್ರೈಸ್ತ, ಮರಾಠಾ, ಲಿಂಗವಂತ, ಮುಸ್ಲಿಂ, ಮುಂತಾದ ಧರ್ಮಿಯರ ಧಾರ್ಮಿಕ ವಿಷಯಕ್ಕೆ ಸಂಬಂಧಪಟ್ಟ ವಿಷಯಗಳು ಮುದ್ರಣಗೊಳ್ಳುತ್ತಿದ್ದವು. ಹೀಗಾಗಿ ಬೆಳಗಾವಿ ಜನರಲ್ಲಿ ಧಾರ್ಮಿಕ ಭಾವೈಕ್ಯತೆಯ ಭಾವನೆ ಮೂಡುವಂತಾಯಿತು.

ಸಾಹಿತ್ಯಿಕವಾಗಿ ನೋಡಿದಾಗ ಅಂದಿನ ಮಹತ್ವದ ಕೃತಿಗಳು ಈ ಮುದ್ರಣಾಲಯದಲ್ಲಿ ಮುದ್ರಣಗೊಂಡವು. ಕನ್ನಡ, ಮರಾಠಿಯ ಗ್ರಂಥಗಳು ಮುದ್ರಣಗೊಂಡು ಸಾಹಿತ್ಯ ನಿರ್ಮಿತಿಗೆ ಪ್ರೋತ್ಸಾಹವನ್ನು ನೀಡಿತು. ಮುದ್ರಣಾಲಯಗಳ ಪ್ರಾರಂಭದ ಅಂದಿನ ದಿನಗಳಲ್ಲಿ ಗ್ರಂಥ ರಚನೆ ಮಾಡಿದಷ್ಟೇ ಕಷ್ಟದ ಕೆಲಸ ಮುದ್ರಣ ಮಾಡುವುದೂ ಆಗಿತ್ತು. (ಈಗಲೂ ಕೂಡ ಮುದ್ರಣ ಎನ್ನುವಂತಹದ್ದು ಎಲ್ಲರಿಗೂ ಒಗ್ಗುವುದಲ್ಲ). ಮುದ್ರಣದಲ್ಲಿ ದೋಷಗಳು ಬರದ ಹಾಗೆ, ಅಚ್ಚುಕಟ್ಟುತನದಿಂದ ಮುದ್ರಣಗೊಳಿಸುವುದು ಗ್ರಂಥ ರಚನೆಗಿಂತಲೂ ಕಷ್ಟದಾಯಕವಾದ ಕಾರ್ಯವೆಂದೇ ಹೇಳಬಹುದು. ಅದರಲ್ಲಿಯೂ ಮುದ್ರಣದ ಯಾವುದೇ ಸೌಕರ್ಯಗಳಿಲ್ಲದ ಕಾಲದಲ್ಲಿ, ಸರಿಯಾದ ತರಬೇತಿ ಇಲ್ಲದ ಕಾಲದಲ್ಲಿ, ವಿದ್ಯುತ್ತಿನ ಸೌಕರ್ಯವಿಲ್ಲದೆ ಕೈಯಿಂದಲೇ ಗಾಲಿಯನ್ನು ತಿರುವಿ ಸಾವಿರಾರು ಪ್ರತಿಗಳನ್ನು ಸಿದ್ಧಗೊಳಿಸುವುದೆಂದರೆ ಅದೊಂದು ಸಾಹಸದ ಮಾತೇ ಆಗಿತ್ತು. ಗ್ರಂಥ ಉತ್ತಮ ಸ್ವರೂಪದಲ್ಲಿ ಮುದ್ರಣಗೊಳ್ಳಬೇಕೆಂದರೆ ಅದಕ್ಕೆ ಪುಸ್ತಕ ಪ್ರೀತಿ, ಭಕ್ತಿ, ಗೌರವ ಮತ್ತು ಕಾಯಕ ನಿಷ್ಠೆ ಇದ್ದರೆ ಮಾತ್ರ ಸಾಧ್ಯವೆನ್ನುವುದನ್ನು ಸಮಾಚಾರ ಪ್ರೆಸದಿಂದ ಮುದ್ರಣಗೊಂಡ ಅಂದಿನ ಕೃತಿಗಳನ್ನು ನೋಡಿದಾಗ ತಿಳಿದುಬರುತ್ತದೆ.

ಸಮಾಚಾರ ಪ್ರೆಸ್‌ನ ಕಾರ್ಯಗಳು ಶೈಕ್ಷಣಿಕವಾಗಿಯೂ ಮಹತ್ವದ್ದಾಗಿವೆ. ವಿದ್ಯಾರ್ಥಿಗಳಿಗೆ ಬೇಕಾದ ಕ್ರಮಿಕ ಪುಸ್ತಕಗಳು, ಮಗ್ಗಿ ಪುಸ್ತಕಗಳು, ವ್ಯಾಕರಣ, ಬಾಲಬೋಧೆ, ನೀತಿ ಕಥೆಗಳು, ಹಿತೋಪದೇಶ, ಮುಂತಾದ ಪುಸ್ತಕಗಳನ್ನು ಅಚುಕಟ್ಟಾಗಿ, ಶುದ್ಧವಾಗಿ ಮುದ್ರಣಗೊಳಿಸಿ ವಿದ್ಯಾರ್ಥಿಗಳಲ್ಲಿ ಪುಸ್ತಕ ಪ್ರೀತಿಯನ್ನು ಸಾಹಿತ್ಯದ ಬಲವನ್ನು ಬೆಳೆಸುವಲ್ಲಿ ಕಾರಣವಾಯಿತು. ಉತ್ತಮವಾಗಿ ಮುದ್ರಣಗೊಂಡ ಪುಸ್ತಕಗಳನ್ನು ಸರಿಯಾಗಿ ಪಾಠಮಾಡುವ ಮನಸ್ಸು ಶಿಕ್ಷಕರಲ್ಲಿ ಉಂಟಾಯಿತು. ಸರಿಯಾದ ಪಠ್ಯಕ್ರಮವಿಲ್ಲದೆ ಪಠ್ಯಪುಸ್ತಕಗಳಿಲ್ಲದ ಅಂದಿನ ದಿನಗಳಲ್ಲಿ ಪಾಠ ಮಾಡುವುದೇ ದೊಡ್ಡ ತೊಂದರೆಯಾಗಿತ್ತು. ಈ ಕೊರತೆಯನ್ನು ಬೆಳಗಾವಿಯ ಸಮಾಚಾರ ಪ್ರೆಸ್ ನೀಗಿಸಿ ಶೈಕ್ಷಣಿಕ ಬೆಳಗವಣಿಗೆಗೆ ಕಾರಣವಾಯಿತು.

**ದೇಶಬಾಂಧವ ಪ್ರೆಸ್** : ಕ್ರಿಶ. ೧೮೬೦ ರ ದಶಕದಲ್ಲಿಯೇ ಪ್ರಾರಂಭಗೊಂಡ ಮತ್ತೊಂದು ಮಹತ್ವದ ಮುದ್ರಣಾಲಯವೆಂದೆ ದೇಶಬಾಂಧವ ಪ್ರೆಸ್. ಇಲ್ಲಿ ಕನ್ನಡ ಮತ್ತು ಮರಾಠಿ ಎರಡೂ ಭಾಷೆಯಲ್ಲಿ ಮುದ್ರಣಕಾರ್ಯ ನಡೆಯುತ್ತಿತ್ತು.[೬೩] ಮರಾಠಿ ಪತ್ರಿಕೆಯಾದ 'ಬೆಳಗಾಂವ ಸಮಾಚಾರ' ಪತ್ರಿಕೆಯು ಇಲ್ಲಿಯೇ ಮುದ್ರಣಗೊಳ್ಳುತ್ತಿತ್ತು.

**ಮಹಾವೀರ ಮುದ್ರಣಾಲಯ** : ಬೆಳಗಾವಿಯ ಅತ್ಯಂತ ಹಳೆಯ ಮುದ್ರಣಾಲಯಗಳಲ್ಲಿ ಒಂದಾದ ಮಹಾವೀರ ಮುದ್ರಣಾಲಯವು ವಿಶೇಷವಾಗಿ ಜೈನಧರ್ಮಕ್ಕೆ ಸಂಬಂಧಪಟ್ಟ ಗ್ರಂಥಗಳನ್ನು ಮುದ್ರಿಸುತ್ತಿತ್ತು. ಮೊದಲು ಕಲ್ಲಚ್ಚಿನ ಲಿಥೊ ಮಾದರಿಯಲ್ಲಿ ಮುದ್ರಣ ನಡೆಯುತ್ತಿತ್ತು. ಮುಂದೆ ಮೊಳೆಗಳನ್ನು ಉಪಯೋಗಿಸಿ ಮುದ್ರಣ ಕಾರ್ಯವನ್ನು ಕೈಕೊಂಡರು. ಕನ್ನಡ ಮತ್ತು ಮರಾಠಿ ಎರಡೂ ಭಾಷೆಯಲ್ಲಿ ಮುದ್ರಣ ಕಾರ್ಯ ನಡೆಯುತ್ತಿತ್ತು. 'ಜಿನ ವಿಜಯ' ಎನ್ನುವ ಪತ್ರಿಕೆಯು ೧೯೦೫ರ ಹೊತ್ತಿಗೆ ಈ ಮುದ್ರಣಾಲಯದಿಂದ ಮುದ್ರಣಗೊಳ್ಳುತ್ತಿತ್ತು.[೬೪] ಎ. ಪಿ. ಚೌಗುಲೆಯವರ

ಸಂಪಾದಕತ್ವದಲ್ಲಿ ಈ ಪತ್ರಿಕೆಯು ವ್ಯಾಪಕವಾದ ಪ್ರಸಾರವನ್ನು ಹೊಂದಿತ್ತು. ೧೯೦೭ ರಿಂದ ಮರಾಠಿ 'ಜಿನವಿಜಯ' ಮಾಸ ಪತ್ರಿಕೆಯು ಮಹಾವೀರ ಮುದ್ರಣಾಲಯದಿಂದ ಪ್ರಕಟವಾಗತೊಡಗಿತು. ಅಣ್ಣಾ ಬಾಬಾಜಿ ಲಠ್ಠೆಯವರ ಸಂಪಾದಕತ್ವದಲ್ಲಿ ಈ ಪತ್ರಿಕೆ ಹೊರ ಬರುತ್ತಿತ್ತು.

ಮಹಾವೀರ ಮುದ್ರಣಾಲಯವು ಬೆಳಗಾವಿ ಜಿಲ್ಲೆಯ ಮಹತ್ವದ ಮುದ್ರಣಾಲಯವಾಗಿ ಹೆಸರು ಹೊಂದಿತ್ತು. ಜಿಲ್ಲೆಯ ಬೇರೆ ಬೇರೆ ಭಾಗದ ಜನರು ಇಲ್ಲಿಗೆ ಬಂದು ಮುದ್ರಣವನ್ನು ಮಾಡಿಸಿಕೊಂಡು ಹೋಗುತ್ತಿದ್ದರು. ಈ ಮುದ್ರಣಾಲಯದ ಮಾಲಿಕರಾದ ಶ್ರೀ ಭೂ ದೇ ಚೌಗಲೆಯವರು ಕೇವಲ ಮುದ್ರಣ ಕಾರ್ಯದಲ್ಲಿ ತೊಡಗದೆ ಹಲವಾರು ಪ್ರಕಾಶನ ಸಂಸ್ಥೆಗಳಿಗೆ ನೆರವು ಸಲಹೆಗಳನ್ನು ನೀಡಿದರು. ಬೆಳಗಾವಿಯಲ್ಲಿ 'ಸುವರ್ಣ ಗ್ರಂಥ ಮಾಲೆ' ಸ್ಥಾಪನೆಗೊಳ್ಳುವಲ್ಲಿ ಇವರ ಸಲಹೆ ಮಹತ್ವದ್ದಾಗಿದೆ.[೬೫]

**ರಾಮತತ್ವ ಪ್ರಕಾಶನ ಮುದ್ರಣಾಲಯ:** ೧೯೪೦ ರ ದಶಕದಲ್ಲಿ ಪ್ರಾರಂಭಗೊಂಡ ರಾಮತತ್ವ ಪ್ರಕಾಶನ ಮುದ್ರಣಾಲಯವು[೬೬] ಬೆಳಗಾವಿಯ ಮುದ್ರಣ ಕ್ಷೇತ್ರದಲ್ಲಿ ಮಹತ್ವದ ಕಾರ್ಯವನ್ನು ಕೈಗೊಂಡಿದೆ. ಒಂದು ವೇಳೆ ಈ ಮುದ್ರಣಾಲಯವು ಸ್ಥಾಪನೆಯಾಗದಿದ್ದರೆ ಎಷ್ಟೋ ಮಹತ್ವದ ಸಾಹಿತ್ಯ ನಾಶವಾಗಿ ಹೋಗುತ್ತಿತ್ತು. ಅ.ರಾ. ಸಾವಂತ ಎನ್ನುವವರಿಂದ ಸ್ಥಾಪಿತವಾದ ಈ ಮುದ್ರಣಾಲಯವು ಪ್ರಕಾಶನ ಸಂಸ್ಥೆಯಾಗಿ, ಪುಸ್ತಕ ಮಳಿಗೆಯಾಗಿ ಇಂದಿನವರೆಗೂ ಮಹತ್ವದ ಸೇವೆಯನ್ನು ಕೈಗೊಂಡಿದೆ.

೧೮೪೦ ರ ದಶಕದಲ್ಲಿ ಆಗಷ್ಟೇ ಪ್ರಾರಂಭದ ಹಂತದಲ್ಲಿದ್ದ ಮುದ್ರಣಾಲಯ ಕ್ಷೇತ್ರದಲ್ಲಿ ಕಾಲಿಟ್ಟ ಸಾವಂತರು ಅಲ್ಪದಿನಗಳಲ್ಲಿಯೇ ಪ್ರಸಿದ್ಧಿಯನ್ನು ಪಡೆದರು. ಇದಕ್ಕೆ ಕಾರಣ ಅವರಲ್ಲಿದ್ದ ಅಚ್ಚುಕಟ್ಟುತನ. ಹಿಡಿದ ಕೆಲಸವನ್ನು ಮುಗಿಸಿಯೇ ತೀರುವ ಛಲ, ಸಂಯಮ, ಶಿಸ್ತು ಅವರ ಕಾರ್ಯದಲ್ಲಿ ಯಶಸ್ಸನ್ನು ತಂದುಕೊಟ್ಟಿತು. ಹೀಗಾಗಿಯೇ ಈ ಮುದ್ರಣಾಲಯದಲ್ಲಿ ಮುದ್ರಣಗೊಂಡ ಗ್ರಂಥಗಳು ಇಂದಿಗೂ ಕೂಡ ತಾಳಿಕೊಂಡು ಬಂದಿವೆ. ಧಾರ್ಮಿಕ ಪುಸ್ತಕಗಳು, ಮಕ್ಕಳ ಮಗ್ಗಿ ಪುಸ್ತಕಗಳು, ದೇವರ ನಾಮಾವಳಿಗಳು, ಜಾಹಿರಾತುಗಳು, ಅರ್ಜಿ ಫಾರ್ಮಗಳು, ವ್ಯಾಪಾರಕ್ಕೆ ಸಂಬಂಧಿಸಿದ ಪುಸ್ತಕಗಳು, ಕ್ಯಾಲೆಂಡರ್, ಪಂಚಾಂಗ ಹೀಗೆ ಅವಶ್ಯಕ ಸಾಮಗ್ರಿಗಳನ್ನು ಮುದ್ರಿಸುತ್ತಿದ್ದರು. ಕನ್ನಡ ಮತ್ತು ಮರಾಠಿ ಎರಡೂ ಭಾಷೆಗಳಲ್ಲಿ ಪ್ರಭುತ್ವವನ್ನು ಪಡೆದುಕೊಂಡಿದ್ದ ಸಾವಂತರು ಯಾವುದೇ ಭೇದ ಭಾವವಿಲ್ಲದೆ ಮುದ್ರಣ ಕಾರ್ಯವನ್ನು ಕೈಕೊಂಡರು.

ಪ್ರಾರಂಭದಲ್ಲಿ ಕಲ್ಲಚ್ಚಿನ ಯಂತ್ರದ ಮೂಲಕ ಮುದ್ರಣಕಾರ್ಯ ನಡೆಯುತ್ತಿತ್ತು. ಮುಂದೆ ಮೊಳೆಗಳನ್ನು ಜೋಡಿಸಿ ಮುದ್ರಣ ವ್ಯವಸ್ಥೆ ಬಂದಿತು. ಈ ಸಂದರ್ಭದಲ್ಲಿ ಮೊಳೆಗಳ ಜೋಡಣೆಯ ಜ್ಞಾನವನ್ನು ಸಾವಂತರೇ ಸ್ವತಃ ಕಲೆತುಕೊಂಡರು.[೬೭] ಯಾವುದಾದರೂ ಯಾಂತ್ರಿಕ ದೋಷ ಕಂಡುಬಂದರೆ ತಾವೇ ಸರಿಪಡಿಸುತ್ತಿದ್ದರು.

ಹೀಗಾಗಿಯೇ ಯಾವುದೇ ಅಡ್ಡಿ ಆತಂಕ ವಿಳಂಬವಿಲ್ಲದೆ ಇವರ ಮುದ್ರಣ ಕಾರ್ಯ ಸಾಗಿತು. ಮುದ್ರಣ ಕಾರ್ಯದ ಜೊತೆಗೆ ಪ್ರಕಾಶನ ಕಾರ್ಯವನ್ನು ಕೈಕೊಂಡು ಕನ್ನಡ ಸಾಹಿತ್ಯಕ್ಕೆ ವಿಶಿಷ್ಟವಾದ ಕೊಡುಗೆಯನ್ನು ನೀಡಿದ್ದಾರೆ.(ಪ್ರಕಾಶನ ಸಂಸ್ಥೆಯ ಕೊಡುಗೆಯನ್ನು ಪ್ರಕಾಶನ ಸಂಸ್ಥೆಗಳು ಭಾಗದಲ್ಲಿ ವಿವರಸಲಾಗಿದೆ).

**ಮರಾಠಾ ಪ್ರಿಂಟಿಗ್ ಪ್ರೆಸ್ :** ೧೮೮೦ ರ ಅವಧಿಯಲ್ಲಿಯೇ ಪ್ರಾರಂಭಗೊಂಡ ಮರಾಠಾ ಪ್ರಿಂಟಿಂಗ್ ಪ್ರೆಸ್ ಮರಾಠಿ ಭಾಷೆಯ ಮುದ್ರಣಕ್ಕೆ ಪ್ರಸಿದ್ಧಿಯನ್ನು ಪಡೆದುಕೊಂಡಿತ್ತು.[೬೮] ಆದರೂ ಕನ್ನಡ ಭಾಷೆಯಲ್ಲಿಯೂ ಕೆಲವು ಪತ್ರಿಕೆಗಳ ಮುದ್ರಣವನ್ನು ಕೈಕೊಂಡಿದ್ದು ತಿಳಿದುಬರುತ್ತದೆ. ಹೆಚ್ಚಾಗಿ ಮರಾಠಿ ಪತ್ರಿಕೆಗಳು ಇಲ್ಲಿ ಮುದ್ರಣಗೊಳ್ಳುತ್ತಿದ್ದವು. ಆ ಕಾಲದಲ್ಲಿ ಬೆಳಗಾವಿಯಿಂದ ಮರಾಠಿ ಪತ್ರಿಕೆಗಳು ಹೆಚ್ಚಿನ ಪ್ರಮಾಣದಲ್ಲಿ ಹುಟ್ಟಿಕೊಂಡವು. ಮುಂದೆ ಮುದ್ರಣಾಲಯಗಳು ಹೆಚ್ಚಿನ ಪ್ರಮಾಣದಲ್ಲಿ ಸ್ಥಾಪನೆಗೊಂಡಿದ್ದರಿಂದ ಪುಸ್ತಕ ಮುದ್ರಣದಲ್ಲಿ ತೊಡಗಿಕೊಂಡವು.

**ಸ್ವದೇಶ ಬಂಧು ಪ್ರಿಂಟಿಂಗ್ ಪ್ರೆಸ್ :** ೧೮೮೬ ರಲ್ಲಿ ಪ್ರಾರಂಭಗೊಂಡ ಸ್ವದೇಶ ಬಂಧು ಪ್ರಿಂಟಿಂಗ್ ಪ್ರೆಸ್ ಬೆಳಗಾವಿಯ ಹಳೆಯ ಮುದ್ರಣಾಲಯಗಳಲ್ಲಿ ಒಂದು. ಈ ಮುದ್ರಣಾಲಯದ ವತಿಯಿಂದ 'ಸ್ವದೇಶ ಬಂಧು' ಎನ್ನುವ ಪತ್ರಿಕೆ (ವಾರ)ಯು ಪ್ರಾರಂಭಗೊಂಡಿತು.[೬೯] ಪತ್ರಿಕೆಗಾಗಿಯೇ ಈ ಮುದ್ರಣಾಲಯ ಪ್ರಾರಂಭಗೊಂಡಿರುವುದು ಪತ್ರಿಕೆಯ ಹೆಸರನ್ನು ಗಮನಿಸಿದಾಗ ತಿಳಿದುಬರುತ್ತದೆ. ಈ ಪತ್ರಿಕೆಯು ೧೮೯೩ ರಲ್ಲಿ ಪ್ರಸಾರವನ್ನು ನಿಲ್ಲಿಸಿತು. ಮುಂದೆ ಈ ಪ್ರಿಂಟಿಂಗ್ ಪ್ರೆಸ್‌ನ್ನು ಸಾಹಿತ್ಯ ಕೃತಿಗಳನ್ನು ಮುದ್ರಿಸಲು ಬಳಸಿಕೊಳ್ಳಲಾಯಿತು. ಇಲ್ಲಿ ಕನ್ನಡ ಮತ್ತು ಮರಾಠಿ ಎರಡೂ ಭಾಷೆಗಳಲ್ಲಿ ಮುದ್ರಣಕಾರ್ಯ ನಡೆಯುತ್ತಿತ್ತು.

**ಸೀತಾರಾಮ ಪ್ರಿಂಟಿಂಗ್ ಪ್ರೆಸ್ :** ೧೯೩೬ ರಲ್ಲಿ ಪಂಡಿತ ವೆಂಕಟರಾವ್‌ರು ಬೆಳಗಾವಿಯಲ್ಲಿ ಸ್ಥಾಪಿಸಿದರು. ಶ್ರೀಮಂತ ಮನೆತನದಿಂದ ಬಂದ ಇವರು ಆ ಕಾಲದಲ್ಲಿ ಬಿ.ಎ. ಎಲ್.ಎಲ್.ಬಿ. ಪದವಿಯನ್ನು ಪಡೆದಿದ್ದರು. ಆದರೆ ಸಾಹಿತ್ಯದಲ್ಲಿ ಆಸಕ್ತರಾಗಿದ್ದ ವೆಂಕಟರಾವ್ ಅವರು ಪತ್ರಿಕೋದ್ಯಮಕ್ಕೆ ಕಾಲಿಟ್ಟರು. ಈ ಮುದ್ರಣಾಲಯದಲ್ಲಿ ಅವರೇ ಪ್ರಾರಂಭಿಸಿದ 'ಅರುಣೋದಯ' ಎನ್ನುವ ಮಾಸ ಪತ್ರಿಕೆಯನ್ನು ಪ್ರಕಟಿಸಿದರು. ಮುಂದೆ ಸ್ವಲ್ಪ ಕಾಲದ ನಂತರ ವಾರ ಪತ್ರಿಕೆಯನ್ನಾಗಿ ಮಾರ್ಪಡಿಸಿದರು.

ಸೀತಾರಾಮ ಮುದ್ರಣಾಲಯದಲ್ಲಿ ಮುದ್ರಣಗೊಂಡ ಪ್ರಮುಖ ಕೃತಿಯೆಂದರೆ 'ವಿಜಯನಗರ ಸಾಮ್ರಾಜ್ಯ ಸ್ಮಾರಕ ಮಹೋತ್ಸವ ಸಂಚಿಕೆ'. ೧೯೩೬ ರಲ್ಲಿ ಮುದ್ರಣಗೊಂಡ ಈ ಸಂಚಿಕೆಯನ್ನು ವಿಜಯನಗರ ಷಟ್ ಸಾಂವತ್ಸರಿಕ ಮಹೋತ್ಸವದ ಸಂದರ್ಭದಲ್ಲಿ 'ಅರುಣೋದಯ' ಪತ್ರಿಕೆಯ ವಿಶೇಷ ಸಂಚಿಕೆಯನ್ನಾಗಿ ಪಂ. ವೆಂಕಟರಾಯರು ಸಂಪಾದಿಸಿದರು.

ಈ ಸಂಚಿಕೆಯ ಮುದ್ರಣವನ್ನು ಗಮನಿಸಿದರೆ ಅಚ್ಚರಿಯಾಗುತ್ತದೆ. ಇಡೀ ಸಂಚಿಕೆಯಲ್ಲಿ ಒಂದೂ ಮುದ್ರಣದೋಷಗಳು ಇಲ್ಲ. ಒಂದೊಂದು ಪುಟದಲ್ಲಿ ಎರಡು ಭಾಗದಲ್ಲಿ ವಿಷಯಗಳನ್ನು ಮುದ್ರಿಸಲಾಗಿದೆ. ಲೇಖನಗಳ ಕೆಳಗೆ ಅಡಿ ಟಿಪ್ಪಣಿಗಳು, ಮಧ್ಯದಲ್ಲಿ ಅಲ್ಲಲ್ಲಿ ಪ್ರಸಿದ್ಧ ಸಾಹಿತಿಗಳ ವಿದ್ವಾಂಸರ ಭಾವಚಿತ್ರಗಳು ಸೇರ್ಪಡೆಯಾಗಿದ್ದವು. ಇವುಗಳಲ್ಲಿ ಕೆಲವು ಬಣ್ಣದಲ್ಲಿದ್ದವು. ಜಾಹಿರಾತುಗಳು, ವಿಜಯನಗರ ಸಾಮ್ರಾಜ್ಯದ ಛಾಯಾಚಿತ್ರಗಳು, ನಕಾಶೆಗಳು, ಒಂದೇ ಪುಟದಲ್ಲಿ ಕನ್ನಡ, ಇಂಗ್ಲಿಷ್, ದೇವನಾಗರಿ ಲಿಪಿಗಳನ್ನು ಬಳಸಿಕೊಂಡಿದ್ದು, ಅತ್ಯಂತ ಅಚ್ಚುಕಟ್ಟುತನದಿಂದ ಮುದ್ರಣದ ಕಾರ್ಯವನ್ನು ಕೈಗೊಳ್ಳಲಾಗಿದೆ.

**ಭುವನೇಶ್ವರಿ ಮುದ್ರಣಾಲಯ** : ಮುದ್ರಣದ ಜೊತೆಗೆ ಕನ್ನಡದ ಬಗೆಗೆ ಚಿಂತನೆಯನ್ನೂ ಕೈಕೊಂಡ ವಿಶಿಷ್ಟವಾದ ಮುದ್ರಣಾಲಯ. ಬೆಳಗಾವಿಯ ಪ್ರತಿಷ್ಠಿತ ಜೋಶಿ ಮನೆತನದ ಕೃಷ್ಣರಾಯ ಜೋಶಿಯವರು ೧೯೩೬ ರಲ್ಲಿ ಹನುಮಾನ ಬೀದಿಯಲ್ಲಿ ಭುವನೇಶ್ವರಿ ಮುದ್ರಣಾಲಯವನ್ನು ಸ್ಥಾಪಿಸಿದರು.[೭] ಜೋಶಿ ಮನೆತನದವರು ಬೆಳಗಾವಿಯಲ್ಲಿ ನಡೆಯುವ ಕನ್ನಡ ಹೋರಾಟಗಳಲ್ಲಿ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಶಿಕ್ಷಣ, ಪತ್ರಿಕೋದ್ಯಮ, ರಾಜಕೀಯ, ಮುದ್ರಣವಲಯಗಳಲ್ಲಿ ಸಂಪೂರ್ಣವಾಗಿ ತೊಡಗಿಕೊಂಡು ಬೆಳಗಾವಿಯಲ್ಲಿ ಮಹತ್ವದ ಕಾರ್ಯಗಳನ್ನು ಮಾಡಿದ್ದಾರೆ. ಕೃಷ್ಣರಾಯ ಜೋಶಿಯವರು ಭುವನೇಶ್ವರಿ ಮುದ್ರಣಾಲಯವನ್ನು ನಡೆಸುತ್ತಿದ್ದರು. ಭುವನೇಶ್ವರಿ ಮುದ್ರಣಾಲಯದಿಂದ ೧೯೩೬ ರಲ್ಲಿ 'ಸಂದೇಶ' ವಾರ ಪತ್ರಿಕೆ ಮುದ್ರಣಗೊಳ್ಳುತ್ತಿತ್ತು. ಶ್ರೀ ಗೋಪಾಳರಾಯ ದೇಶಪಾಂಡೆಯವರ ಸಂಪಾದಕತ್ವದಲ್ಲಿ ಈ ಪತ್ರಿಕೆ ಹೊರಬರುತ್ತಿತ್ತು. ೧೯೭೩ ರಲ್ಲಿ ಪ್ರಾರಂಭಗೊಂಡ ಪ್ರಭಾಕರ ಆನಿಗೋಳರ ಬೆಳಗಾಂವ್ ಟೈಮ್ಸ್ ಎಂಬ ಕನ್ನಡ ದಿನ ಪತ್ರಿಕೆಯು ಇಲ್ಲಿಯೇ ಮುದ್ರಣಗೊಳ್ಳುತ್ತಿತ್ತು. ೪೦ ರ ದಶಕದಲ್ಲಿ ಕನ್ನಡ ಪುಸ್ತಕಗಳನ್ನು ಅಚ್ಚುಕಟ್ಟಾಗಿ ಮುದ್ರಣಗೊಳಿಸುವ ಮಹತ್ವದ ಮುದ್ರಣಾಲಯವಾಗಿತ್ತು. ಹೀಗಾಗಿ ಜಿಲ್ಲೆಯ ಬೇರೆ ಬೇರೆ ಭಾಗಗಳಿಂದ ಇಲ್ಲಿ ಮುದ್ರಣಕ್ಕಾಗಿ ಬರುತ್ತಿದ್ದರು.

ಭುವನೇಶ್ವರಿ ಮುದ್ರಣಾಲಯವು ಕನ್ನಡ ಚಳುವಳಿಗಳ ಬಗೆಗೆ ಕಲೆ, ಸಾಹಿತ್ಯ ಸಂಸ್ಕೃತಿಯ ಬಗೆಗೆ ಚರ್ಚಿಸುವ ಸ್ಥಳವಾಗಿತ್ತು. ಪ್ರತಿದಿನ ಸಂಜೆ ಇಲ್ಲಿ ಕನ್ನಡ ಮುಖಂಡರೆಲ್ಲಾ ಸೇರುತ್ತಿದ್ದರು. ಪ್ರಮುಖ ವಿಷಯಗಳನ್ನು ಚರ್ಚಿಸುತ್ತಿದ್ದರು. ಹೋರಾಟದ ರೂಪ-ರೇಷೆಗಳ ಯೋಜನೆಯನ್ನು ಹಾಕುತ್ತಿದ್ದರು. ಕೃಷ್ಣರಾಯ ಜೋಶಿ, ಅರವಿಂದರಾಯ ಜೋಶಿ, ಮುತಾಲಿಕ ವೆಂಕಟರಾಯ, ಸಾತ್ವಿಕ ಗುಂಡೇರಾಯ, ವೆಂ.ಗೋ. ತೊರಗಲ್ಲ ಮುಂತಾದವರೆಲ್ಲ ಇಲ್ಲಿ ಸೇರಿ ಚರ್ಚಿಸುತ್ತಿದ್ದರು. ಅಂದು ಈ ಗುಂಪನ್ನು 'ಝುಪಡಾ ಕಂಪು' ಎಂದು ಕರೆಯುತ್ತಿದ್ದರು.[೮] ಈ ಗುಂಪಿನವರಿಂದಲೇ 'ತುಂಟರ ತಂಡ' 'ನಾಡನರಿಗಳ ಸಂಘ' ಎಂಬ ಎರಡು ಸಂಸ್ಥೆಗಳು ಬೆಳಗಾವಿಯಲ್ಲಿ ಕನ್ನಡ ಕಾರ್ಯದಲ್ಲಿ ತೊಡಗಿದ್ದವು.

**ವಿಶ್ವಭಾರತಿ ಮುದ್ರಣಾಲಯ :** ಶಹಾಪೂರದಲ್ಲಿ ಸ್ಥಾಪನೆಗೊಂಡ ಈ ಮುದ್ರಣಾಲಯವು ೧೯೪೯ ರಿಂದ ಕಾರ್ಯಾರಂಭ ಮಾಡಿತು. ಶಹಪೂರವು ಮರಾಠಿ ಪ್ರಭಾವ ಹೊಂದಿದ್ದು ಕನ್ನಡ ಕಾರ್ಯಗಳಿಗೆ ಸದಾ ತೊಂದರೆ ನಡೆಯುತ್ತಿತ್ತು. ಇಂತಹ ಪ್ರದೇಶದಲ್ಲಿಯೇ ಕನ್ನಡ ಮುದ್ರಣಾಲಯ ಸ್ಥಾಪನೆಗೊಂಡಿತ್ತು. ಈ ಮುದ್ರಣಾಲಯದಿಂದ 'ಪ್ರಕಾಶ' ಕನ್ನಡ ಮಾಸ ಪತ್ರಿಕೆಯು ಮುದ್ರಣಗೊಳ್ಳುತ್ತಿತ್ತು. ಆರ್. ಕೆ. ಮೆಣಸಿಯವರ ಸಂಪಾದಕತ್ವದಲ್ಲಿ ಸುಮಾರು ಹತ್ತು ವರ್ಷಗಳವರೆಗೆ ಈ ಪತ್ರಿಕೆ ಸಾಗಿ ಬಂದಿತು. ಪತ್ರಿಕೆಗಳನ್ನಲ್ಲದೆ, ಆಮಂತ್ರಣ ಪತ್ರಗಳು, ಮದುವೆ ಪತ್ರಗಳು, ಜಾಹಿರಾತುಗಳು, ಸಣ್ಣ ಪುಸ್ತಕಗಳು, ದೇವರ ಸ್ತೋತ್ರಗಳು ಮುಂದಾದವುಗಳನ್ನು ಇಲ್ಲಿ ಮುದ್ರಿಸಲಾಗುತ್ತಿತ್ತು.

ಈ ಎಲ್ಲ ಮುದ್ರಣಾಲಯಗಳಲ್ಲದೆ ಇನ್ನೂ ಹಲವಾರು ಮುದ್ರಣಾಲಯಗಳು ಬೆಳಗಾವಿಯಲ್ಲಿ ಕಾರ್ಯಾರಂಭ ಮಾಡಿದ್ದವು. ಮಠಗಲ್ಲಿಯ ಮಹಾಂತೇಶ ಪ್ರೆಸ್, ಶಾರದಾ ಮುದ್ರಣಾಲಯ, ಉದಯ ಪ್ರಕಾಶನದವರ ರವಿ ಮುದ್ರಣಾಲಯ, ಜನಜೀವಾಳ ಮುದ್ರಣಾಲಯ ಮುಂತಾದವುಗಳು ಬೆಳಗಾವಿಯಲ್ಲಿ ಮುದ್ರಣಾ ಕಾರ್ಯವನ್ನು ನಡೆಸುತ್ತಿದ್ದವು.

ಇಂದು ಮುದ್ರಣ ವ್ಯವಸ್ಥೆ ಬದಲಾಗಿದೆ. ಆಧುನಿಕ ಯಂತ್ರೋಪಕರಣಗಳು ಮುದ್ರಣ ವಲಯದಲ್ಲಿ ಕ್ರಾಂತಿಯನ್ನೇ ಮಾಡಿವೆ. ಒಂದೆರಡು ದಿನಗಳಲ್ಲಿಯೇ ಬೃಹತ್ ಗ್ರಂಥಗಳನ್ನು ಮುದ್ರಿಸುವ ವ್ಯವಸ್ಥೆಯನ್ನು ಹೊಂದಿವೆ. ಆಫ್‌ಸೆಟ್ ಮುದ್ರಣ, ಡಿ.ಟಿ.ಪಿ ಕಂಪ್ಯೂಟರ್ ಟೈಪಸೆಟ್ಟಿಂಗ್ ಮುಂತಾದ ವ್ಯವಸ್ಥೆಗಳನ್ನು ಹೊಂದಿದ ನೂರಾರು ಕಂಪ್ಯೂಟರ ಮುದ್ರಣ ಕೇಂದ್ರಗಳು, ಹತ್ತಾರು ಮುದ್ರಣಾಲಯಗಳು ಬೆಳಗಾವಿಯಲ್ಲಿ ಇಂದು ಕಂಡುಬರುತ್ತವೆ. ಯಾರಬಲ್, ಬಸವೇಶ್ವರ, ಇಂಪ್ರೆಶನ್ಸ್, ಮಾಲಗತ್ತಿ ಆಫ್‌ಸೆಟ್ ಪ್ರಿಂಟರ್ಸ, ಪೂಜಾ ಆಫ್‌ಸೆಟ್, ತಂಗಸನ್ ಪ್ರಿಂಟರ್ಸ್ ಮುಂತಾದವುಗಳು ಅತ್ಯಂತ ಅಚ್ಚುಕಟ್ಟಾಗಿ ಮುದ್ರಣಕಾರ್ಯವನ್ನು ಕೈಗೊಂಡಿವೆ.

ಬೆಳಗಾವಿಯ ಸಾಂಸ್ಕೃತಿಕ ಕೊಡುಗೆಯಲ್ಲಿ ಮುದ್ರಣಾಲಯಗಳಿಗೆ ವಿಶಿಷ್ಟವಾದ ಸ್ಥಾನವಿದೆ. ಕಲೆ, ಸಾಹಿತ್ಯ, ಸಂಸ್ಕೃತಿಯನ್ನು ಬೆಳೆಸುವಲ್ಲಿ ಇವುಗಳ ಪಾತ್ರ ಮಹತ್ವದ್ದಾಗಿದೆ. ಭಾಷಾ ಸಾಮರಸ್ಯ ಭಾವೈಕ್ಯತೆಯನ್ನು ಉಂಟು ಮಾಡುವಲ್ಲಿ ಪ್ರಮುಖವಾದ ಪಾತ್ರವನ್ನು ವಹಿಸಿವೆ.

**೨. ಪ್ರಕಾಶನ ಸಂಸ್ಥೆಗಳು:**

ಬೆಳಗಾವಿಯಲ್ಲಿ ಮುದ್ರಣಕಾರ್ಯದ ಚಟುವಟಿಕೆಗಳು ಕ್ರಿ.ಶ. ೧೮೩೨ ರಲ್ಲಿಯೇ ಪ್ರಾರಂಭಗೊಂಡು ಮುಂದೆ ನೂರಾರು ಮುದ್ರಣ ಕೇಂದ್ರಗಳು ಸ್ಥಾಪಿತಗೊಂಡವು. ಈ ಮುದ್ರಣಾಲಯಗಳ ಜೊತೆ ಜೊತೆಗೆ ಗ್ರಂಥ ಪ್ರಕಾಶನ ಸಂಸ್ಥೆಗಳೂ ಸಾಗಿ ಬಂದವು. ಈ ಹಂತದಲ್ಲಿ ಮುದ್ರಣವನ್ನು ಒಂದು ಉದ್ಯಮವನ್ನಾಗಿ ಮಾಡಿಕೊಂಡು ಅದರ ಜೊತೆಗೆ ಗ್ರಂಥಗಳನ್ನು ಪ್ರಕಾಶಿಸಿ ಮಾರಾಟ ಮಾಡುವ ಕಾರ್ಯದಲ್ಲಿ ತೊಡಗಿಕೊಂಡ ಹಲವಾರು ಮಹತ್ವದ ಪ್ರಕಾಶನ ಸಂಸ್ಥೆಗಳು ಪ್ರಾರಂಭಗೊಂಡವು. ಅವುಗಳಲ್ಲಿ ಪ್ರಮುಖವಾಗಿ ರಾಮತತ್ವ ಪ್ರಕಾಶನ ಮಂದಿರ, ಕಥಾ

ಕುಂಜ ಗ್ರಂಥಮಾಲೆ, ಶರತ್ ಪ್ರಕಾಶನ ಮುಂತಾದವುಗಳು ಬೆಳಗಾವಿಯಲ್ಲಿ ಸ್ಥಾಪನೆಗೊಂಡು ನಾಡಿನ ಪ್ರಮುಖ ಪ್ರಕಾಶನ ಮಂದಿರಗಳ ಸಾಲಿನಲ್ಲಿ ಸೇರಿದವು. ಪುಸ್ತಕ ಪ್ರಕಟಣೆಯ ಜೊತೆಗೆ ಬೆಳಗಾವಿಯಲ್ಲಿ ಕಲೆ, ಭಾಷೆ ಸಾಹಿತ್ಯದ ಬೆಳವಣಿಗೆಗೂ ಕಾರಣವಾದವು. ಅವುಗಳ ಒಟ್ಟು ಸಾಂಸ್ಕೃತಿಕ ಕೊಡುಗೆಯನ್ನು ಇಲ್ಲಿ ವಿವರವಾಗಿ ತೆಗೆದುಕೊಳ್ಳಲಾಗಿದೆ.

**ರಾಮತತ್ವ ಪ್ರಕಾಶನ ಮಂದಿರ:** ರಾಮತತ್ವ ಪ್ರಕಾಶನ ಮಂದಿರವು ಬೆಳಗಾವಿಯ ಮಹತ್ವದ ಪ್ರಕಾಶನ ಸಂಸ್ಥೆ. ೧೮೮೦ ರ ದಶಕದಲ್ಲಿ ಸ್ಥಾಪನೆಗೊಂಡ ಈ ಪ್ರಕಾಶನ ಸಂಸ್ಥೆಯು ಮುದ್ರಣಾಲಯದ ಮೂಲಕ ಉತ್ತಮ ಹೆಸರುಗಳಿಸಿತ್ತು. ಅದರ ಜೊತೆಗೆ ಪುಸ್ತಕಗಳನ್ನು ಪ್ರಕಾಶಿಸುವ ಮಹತ್ವದ ಕಾರ್ಯದಲ್ಲಿ ತೊಡಗಿ ಉಪಯುಕ್ತವಾದ ಪುಸ್ತಕಗಳನ್ನು ಹೊರತಂದಿತು. ಇವುಗಳನ್ನು ಮಾರಾಟ ಮಾಡಲು ಸ್ವಂತ ಪುಸ್ತಕಮಳಿಗೆಯನ್ನು ಸ್ಥಾಪಿಸಿತು. ಹೀಗೆ ಮುದ್ರಣ, ಪ್ರಕಾಶನ ಮಾರಾಟ ಈ ಮೂರು ಕಾರ್ಯಗಳನ್ನು ವಹಿಸಿಕೊಂಡು ಬೆಳಗಾವಿ ಜಿಲ್ಲೆ ಅಷ್ಟೇ ಅಲ್ಲ ನಾಡಿನಾದ್ಯಂತ ಈ ಪ್ರಕಾಶನದ ಪುಸ್ತಕಗಳು ಪ್ರಸಿದ್ಧಿಯನ್ನು ಪಡೆದವು. ವ್ಯಾಕರಣ, ಛಂದಸ್ಸು, ಅಲಂಕಾರ, ಶಬ್ದಕೋಶ, ನೀತಿಕಥೆಗಳು, ಅನುಭಾವ ಪದಗಳು, ಭಜನಾ ಪದಗಳು, ದೇವಿ ಪುರಾಣ, ಮಂಗಳಾರತಿ ಪದಗಳು, ಸಚಿತ್ರ ಅಂಕಲಿಪಿ, ಪಂಚಾಂಗ, ಕ್ಯಾಲೆಂಡರ್, ಪ್ರಾಣಿ ಪಕ್ಷಿಗಳ ಪಟಗಳು, ಕನ್ನಡ, ಇಂಗ್ಲೀಷ್, ಮರಾಠಿ ಭಾಷೆಯ ಮೂಲಾಕ್ಷರಗಳ ಪಟಗಳು ಭಾಷಾಂತರ ಪಾಠಮಾಲೆ ಪುಸ್ತಕಗಳು ಹೀಗೆ ಈ ಪ್ರಕಾಶನ ಸಂಸ್ಥೆಯಿಂದ ಪ್ರಕಟಗೊಂಡ ಪುಸ್ತಕಗಳ ಸಂಖ್ಯೆ ಬೆಳೆಯುತ್ತಲೇ ಹೋಗುತ್ತದೆ.

ಭಾಷಾಂತರ ಪಾಠಮಾಲೆ : ರಾಮತತ್ವ ಪ್ರಕಾಶನ ಮಂದಿರ ಹೆಚ್ಚು ಪ್ರಸಿದ್ಧಿಯನ್ನು ಪಡೆದದ್ದು ಈ ಸಂಸ್ಥೆಯಿಂದ ಪ್ರಕಟಗೊಂಡ ಭಾಷಾಂತರ ಪಾಠ ಮಾಲೆಗಳಿಂದ. ಬೆಳಗಾವಿ ಧಾರವಾಡ, ವಿಜಾಪುರ, ಕಾರವಾರ, ದಾವಣಗೇರಿ ಈ ಭಾಗದಲ್ಲಿ ಭಾಷಾಂತರ ಪಾಠ ಮಾಲೆಗಳನ್ನು ಬಳಸದೆ ಇಂಗ್ಲೀಷ್ ಕಲೆತವರು ಸಿಗುವುದು ವಿರಳ. ಅಂದಿನಿಂದ ಇಂದಿನವರೆಗೂ ಅತ್ಯಂತ ಉಪಯುಕ್ತ ಪುಸ್ತಕವಾಗಿ ಬಳಕೆಯಾಗುತ್ತಿದೆ. ಕನ್ನಡ ಮಾಧ್ಯಮದ ವಿದ್ಯಾರ್ಥಿಗಳು ಪ್ರಾಥಮಿಕ, ಮಾಧ್ಯಮಿಕ ಹಂತದಲ್ಲಿ ಈ ಭಾಷಾಂತರಗಳನ್ನು ಬಳಸಿ ಇಂಗ್ಲಿಷ ಕಲಿತಿದ್ದಾರೆ. ಅವರು ಮುಂದೆ ಇಂಗ್ಲಿಷ್ ಭಾಷೆಯಲ್ಲಿ ಪಂಡಿತರಾಗುವುದು ನಿಶ್ಚಿತ ಎನ್ನುವಷ್ಟರ ಮಟ್ಟಿಗೆ ಇವು ಉಪಯುಕ್ತವಾಗಿವೆ. ಇಂಗ್ಲಿಷ್ ಭಾಷೆಯ ವ್ಯಾಕರಣವನ್ನು ಅತ್ಯಂತ ಸರಳವಾದ ಕನ್ನಡ ಭಾಷೆಯಲ್ಲಿ ತಿಳಿಸಿದ್ದು ಇವುಗಳ ಪಾಂಡಿತ್ಯಕ್ಕೆ ಹಿಡಿದ ಕನ್ನಡಿಯಾಗಿದೆ. ದಿನನಿತ್ಯ ಬಳಕೆಯಲ್ಲಿ ಬರುವ ಶಬ್ದಗಳು, ಅವುಗಳ ಇಂಗ್ಲಿಷ ಉಚ್ಚಾರ, ಕನ್ನಡದ ಅರ್ಥ, ಸಾಮಾನ್ಯ ವಾಕ್ಯಗಳು, ಅವುಗಳನ್ನು ರಚಿಸುವ ವಿಧಾನ, ವಾಕ್ಯಗಳ ಜೋಡಣೆ, ಹೀಗೆ ಹಂತಹಂತವಾಗಿ ವಿಷಯ ನಿರೂಪಣೆಯಿದೆ. ಶಿಕ್ಷಕ ವಿದ್ಯಾರ್ಥಿಗೆ ಕಲಿಸುವ ಹಾಗೆ ಪರಿಣಾಮವನ್ನು ಬೀರುತ್ತದೆ. ಒಟ್ಟು ಮೂರು ಭಾಗಗಳಲ್ಲಿ ಭಾಷಾಂತರ ಪಾಠ ಮಾಲೆ ಹೊರಬಂದಿದೆ. ಈ ಪಾಠ ಮಾಲೆಗಳಿಗೆ ಗೈಡ (ಕೀ) ಕೂಡ ಪ್ರಕಟಗೊಂಡಿತು. ಇದರಿಂದ ಯಾರ ಸಹಾಯವಿಲ್ಲದೆ ಎಷ್ಟೋ ಜನರು ಇಂಗ್ಲಿಷ್ ಭಾಷೆಯನ್ನು ಕಲಿತರು.

ನವೋದಯ ಕಾಲದ ಸಾಹಿತ್ಯದ ಬೆಳವಣಿಗೆಯ ಸಂದರ್ಭದಲ್ಲಿ ಬೆಳಗಾವಿಯ ಕವಿಗಳಿಗೆ, ಕಥೆಗಾರರಿಗೆ, ಕಾದಂಬರಿಗಾರರಿಗೆ ರಾಮತತ್ವ ಪ್ರಕಾಶನವೇ ಸ್ಫೂರ್ತಿಯಾಗಿತ್ತು. ಹೀಗಾಗಿ ಹಲವಾರು ಕೃತಿಗಳು ಹೊರಬರಲು ಸಾಧ್ಯವಾಯಿತು. ಹೀಗೆ ಬೆಳಗಾವಿಯಲ್ಲಿ ಸಾಹಿತ್ಯಿಕ ಚಟುವಟಿಕೆಗಳಿಗೆ ಪ್ರೇರಣೆ ಒದಗಿಸಿ ಕನ್ನಡ ಸಾಹಿತ್ಯಕ್ಕೆ, ಸಂಸ್ಕೃತಿಗೆ ಮಹತ್ವದ ಕೊಡುಗೆಯನ್ನು ನೀಡಿತು.

**ಕನ್ನಡ ಭಾಷೆಯಲ್ಲಿ ಪುಸ್ತಕಗಳನ್ನು ಸ್ಥಾಪಿಸಿ ಪ್ರಸಿದ್ಧಿ ಮಾಡುವ ಮಂಡಳಿ:** "ಬೆಳಗಾವಿಯ ಸರದಾರ ಹೈಸ್ಕೂಲಿನಲ್ಲಿ ಸರಕಾರಿ ಅಧಿಕಾರಿಗಳು ಮತ್ತು ಶಿಕ್ಷಕರಿಂದ ಸ್ಥಾಪಿತವಾದ ಸಂಸ್ಥೆ.[೨] Conerese Vernacular Society ಎಂಬ ಹೆಸರಿಂದ ಈ ಸಂಸ್ಥೆಯು ೧೮೬೧ ರಲ್ಲಿ ಪ್ರಾರಂಭಗೊಂಡಿತು. ೧೮೫೦ ರಲ್ಲಿ ಪ್ರಾರಂಭಗೊಂಡ ಸರದಾರ ಹೈಸ್ಕೂಲ ಬೆಳಗಾವಿ ಭಾಗದಲ್ಲಿ ಪ್ರತಿಷ್ಠಿತ ಸಂಸ್ಥೆಯಾಗಿತ್ತು. ಇಲ್ಲಿಯ ಶಿಕ್ಷಕ ವರ್ಗವು ಪಾಂಡಿತ್ಯವನ್ನು ಪಡೆದವರಾಗಿದ್ದರು. ಹೀಗಾಗಿ ಸಾಹಿತ್ಯದ ಕಡೆಗೆ ಒಲವು ಹೊಂದಿದ ಶಿಕ್ಷಕರು ಪುಸ್ತಕ ರಚನೆಯ ಕಾರ್ಯಕ್ಕೆ ಕೈಹಾಕಿದರು. ಈ ಉದ್ದೇಶಕ್ಕಾಗಿಯೇ ಪುಸ್ತಕ ಪ್ರಸಿದ್ಧಿ ಮಾಡುವ ಮಂಡಳಿಯನ್ನು ಸ್ಥಾಪಿಸಿಕೊಂಡರು. ೧೯೬೧ ರಲ್ಲಿ ಈ ಮಂಡಳಿಯು 'ಜ್ಞಾನಬೋಧಕ' ಪತ್ರಿಕೆಯನ್ನು ಪ್ರಾರಂಭಿಸಿತು. ಈ ಪತ್ರಿಕೆಯ ಪ್ರಥಮ ಸಂಚಿಕೆಯಲ್ಲಿಯೇ 'ಇಂಗ್ಲಿಷ್ ಕನ್ನಡ ಸರ್ಕಾರಿ ನಿಘಂಟು' ರಚಿಸುವ ಕಾರ್ಯವನ್ನು ಕೈಗೊಂಡಿರುವುದು ತಿಳಿದುಬರುತ್ತದೆ. ಈ ಪತ್ರಿಕೆಯು ಪ್ರತಿ ತಿಂಗಳು ಮೂವತ್ತು ಪುಟಗಳಲ್ಲಿ ಹೊರಬರುತ್ತಿತ್ತು. (ಪತ್ರಿಕೆಗಳು ಅಧ್ಯಯದಲ್ಲಿ ವಿವರವಾಗಿದೆ).

**ಕರ್ನಾಟಕ ಪ್ರಕಾಶನ ಮಂಡಳಿ–ಬೆಳಗಾವಿ :** ೧೯೨೪ ರಲ್ಲಿ ಬೆಳಗಾವಿಯಲ್ಲಿ ಮಹಾತ್ಮಾ ಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ಜರುಗಿದ ಕಾಂಗ್ರೆಸ್ ಅಧಿವೇಶನವು ಕನ್ನಡಿಗರಿಗೆ ಚೈತನ್ಯವನ್ನು ನೀಡಿತು. ಈ ಅಧಿವೇಶನದ ನಂತರ ಎರಡು ಪ್ರಮುಖವಾದ ಹೋರಾಟಗಳಲ್ಲಿ ಕನ್ನಡಿಗರು ತೊಡಗಿದರು. ಒಂದು ದೇಶದ ಸ್ವಾತಂತ್ರ್ಯ ಎರಡು ನಾಡಿನ ಏಕೀಕರಣ. ಇದೇ ನಿಟ್ಟಿನಲ್ಲಿಯೇ ಬೆಳಗಾವಿಯ ಧುರೀಣರು ಹೋರಾಟವನ್ನು ಆರಂಭಿಸಿದರು. ಆದರೆ ಈ ಎರಡೂ ಕಾರ್ಯ ಸಾಧಿಸಬೇಕಾದರೆ ಒಂದು ಪತ್ರಿಕೆಯ ಅವಶ್ಯಕತೆ ಇದೆ ಎನ್ನಿಸಿತು. ಅದಕ್ಕಾಗಿ ಸಮಾನ ಮನಸ್ಕರಲ್ಲಿ ಸಮಾಲೋಚನೆ ನಡೆಯಿತು. ಅಂದಿನ ಕನ್ನಡ ಧುರೀಣರಾದ ಕೃಷ್ಣಾಜಿ ಗೋವಿಂದ ಗೆಜ್ಜಿ, ಹನುಮಂತರಾವ್ ಸವಣೂರ, ನಾರಾಯಣರಾವ್ ಜೋಶಿ, ಅನಂತರಾವ್ ಮಂಡಗಿ, ಕೇಶವರಾವ್ ಗೋಖಲೆ, ಶೇಷೋಗಿರಿಯಾಚಾರ್ಯ ಕಟ್ಟಿ, ಡಾ. ತೆರಗುಂಡಿ, ದತ್ತೋಪಂತ ಮಜಲಿ, ಬಳವಂತರಾವ್ ದಾತಾರ, ಗಂಗಾಧರರಾವ್ ದೇಶಪಾಂಡೆ ಮುಂತಾದವರು ತಮ್ಮ ತಮ್ಮಲ್ಲೆ ನಿಶ್ಚಯಿಸಿ ಸ್ವತಃ ಹಣ ಕೂಡಿಸಿ ೧೯೨೯ ರಲ್ಲಿ 'ಕರ್ನಾಟಕ ಪ್ರಕಾಶನ ಮಂಡಳ'ವನ್ನು ಸ್ಥಾಪಿಸಿದರು.[೨೩] ಈ ಪ್ರಕಾಶನ ಮಂಡಳಿಯ ವತಿಯಿಂದಲೇ ೧೯೨೯ ರ ದಸರೆಯ ದಿನ 'ಸಂಯುಕ್ತ ಕರ್ನಾಟಕ' ಎಂಬ ವಾರಪತ್ರಿಕೆಯನ್ನು ಪ್ರಾರಂಭಿಸಿದರು. ಮುಂದೆ ಕರ್ನಾಟಕ ಪ್ರಕಾಶನ ಮಂಡಳಿಯವರು ೧೯೩೫ ರಲ್ಲಿ 'ಸಂಯುಕ್ತ ಕರ್ನಾಟಕ' ಪತ್ರಿಕೆಯ ಹಕ್ಕುಗಳನ್ನು ರಂಗನಾಥ ದಿವಾಕರರು ಟ್ರಸ್ಟಿಯಾಗಿದ್ದ ರಾಷ್ಟ್ರೀಯ ವಾಙ್ಮಯ ಟ್ರಸ್ಟಿಗೆ ವಹಿಸಿಕೊಟ್ಟರು.[೨೪]

**ಕಥಾಕುಂಜ ಗ್ರಂಥ ಮಾಲೆ :** ಪೇಟಕರ ಶ್ಯಾಮರಾವ್‌ರು ಪ್ರಾರಂಭಿಸಿದ ಕಥಾಕುಂಜ ಗ್ರಂಥ ಮಾಲೆಯು ಬೆಳಗಾವಿಯ ಮಹತ್ವದ ಗ್ರಂಥಮಾಲೆ. ೧೯೪೦ ರ ದಶಕದಲ್ಲಿ ಪ್ರಾರಂಭವಾದ ಈ ಗ್ರಂಥಮಾಲೆಗೆ 'ಒಂದಾಣೆ ಮಾಲೆ' ಎಂಬ ಹೆಸರೂ ಇತ್ತು. ಪೇಟಕರ ಶ್ಯಾಮರಾವ್‌ರು ಪ್ಯಾಟಿ ಶ್ಯಾಮರಾವ್ ಎಂದೇ ಪ್ರಸಿದ್ಧರಾಗಿದ್ದರು. ಕನ್ನಡ ಸಾಹಿತ್ಯ, ಭಾಷೆಯ ಬಗೆಗೆ ತುಂಬ ಅಭಿಮಾನವನ್ನು ಹೊಂದಿದ್ದರು. ಆಗಿನ ಕಾಲದಲ್ಲಿ ಬೆಳಗಾವಿಯಲ್ಲಿ ಕನ್ನಡ ನಾಟಕ, ಕಥೆ, ಕಾದಂಬರಿಗಳು ಇವರ 'ಕಥಾ ಕುಂಜ ಗ್ರಂಥ ಬಂಢಾರ'ದಲ್ಲಿ ಮಾತ್ರ ದೊರೆಯುತ್ತಿದ್ದವು. ನಾಡಿನ ಪ್ರಸಿದ್ದ ಸಾಹಿತಿಗಳ ಕಥೆ, ನಾಟಕ ಕಾದಂಬರಿ ಕವನ ಸಂಕಲನಗಳನ್ನು ಮಾರಾಟ ಮಾಡಿ ಸಾಹಿತ್ಯ ಸೇವೆಯನ್ನು ಮಾಡಿದ್ದಾರೆ. ಅಲ್ಲದೆ 'ಕಥಾ ಕುಂಜ' ಎಂಬ ಮಾಸ ಪತ್ರಿಕೆಯನ್ನು ಹೊರಡಿಸಿ ಯುವ ಸಾಹಿತಿಗಳಿಗೆ ಪ್ರೋತ್ಸಾಹ ನೀಡಿದರು. ಒಂದಾಣೆ ಮಾಲೆಯ ಮೂಲಕ ಹಲವಾರು ಕೃತಿಗಳನ್ನು ಹೊರತಂದರು. ಅವುಗಳಲ್ಲಿ ಮುಖ್ಯವಾಗಿ ಕಲ್ಲೋ ಗಣೇಶ ವಿಜಾಪುರರ 'ಸಂಗೊಳ್ಳಿ ರಾಯಣ್ಣ'(ನಾಟಕ), ಎಚ್ಚಮ ನಾಯಕ (ನಾಟಕ), ಕೃಷ್ಣಮೂರ್ತಿ ಪುರಾಣಿಕರ 'ಹಂಬಲ', 'ದಾಸರ ಹುಡುಗಿ' ಎಂಬ ಕಥಾ ಸಂಕಲನಗಳು, 'ತೆರೆದ ಕಣ್ಣು! (ಕಾದಂಬರಿ), ಶ್ರೀ ಎನ್. ಕೆ. ಕುಲಕರ್ಣಿಯವರ 'ಕನ್ನಡ ನುಡಿ' ಮುಂತಾದ ಕೃತಿಗಳನ್ನಲ್ಲದೆ ಪ್ರಾಥಮಿಕ ಶಾಲೆಯ ವಿದ್ಯಾರ್ಥಿಗಳಿಗಾಗಿ 'ಮುತ್ತಿನ ಸರ' ಎಂಬ ಪಠ್ಯಪುಸ್ತಕವನ್ನು ಪ್ರಕಟಿಸಿದರು. ಹೀಗೆ ಪ್ರಕಟಿಸಿದ ಪುಸ್ತಕಗಳನ್ನು ತಮ್ಮ ಗ್ರಂಥ ಭಂಡಾರದಲ್ಲಿಯೇ ಮಾರುತ್ತಿದ್ದರು. ಸಾಹಿತ್ಯ ಆಸಕ್ತರ ಮನೆ ಮನೆಗೆ ಹೋಗಿ, ಸಾಹಿತ್ಯ ಸಮ್ಮೇಳನ, ಕನ್ನಡ ಕಾರ್ಯಕ್ರಮ ಮುಂತಾದ ಸಂದರ್ಭದಲ್ಲಿ ತಮ್ಮಲ್ಲಿಯ ಪುಸ್ತಕಗಳನ್ನು ಮಾರಾಟ ಮಾಡುತ್ತಿದ್ದರು. ಪುಸ್ತಕಗಳನ್ನೆಲ್ಲಾ ಬುಟ್ಟಿಯಲ್ಲಿ ಹಾಕಿಕೊಂಡು ಅವುಗಳನ್ನು ಹೊತ್ತು ಮಾರುತ್ತಿದ್ದರು. ಪುಸ್ತಕಗಳ ಮೇಲೆ, ಸಾಹಿತ್ಯದ ಮೇಲೆ ಅಷ್ಟೊಂದು ಅಭಿಮಾನವನ್ನು ಹೊಂದಿದ್ದರು. ಅಂತೆಯೇ ಬೆಳಗಾವಿ ಪ್ರದೇಶದಲ್ಲಿ ಕನ್ನಡ ಸಾಹಿತ್ಯ ಬೆಳೆಯಲು ಕಾರಣವಾಯಿತು.

**ಸರಸ್ವತಿ ಪ್ರಕಾಶನ :** ೧೯೪೦ ರ ದಶಕದಲ್ಲಿಯ ಮತ್ತೊಂದು ಮಹತ್ವದ ಪ್ರಕಾಶನ ಸಂಸ್ಥೆ ಸರಸ್ವತಿ ಪ್ರಕಾಶನ. ಚಿ. ಶ್ರೀ ಕುಲಕರ್ಣಿಯವರಿಂದ ಪ್ರಾರಂಭವಾದ ಈ ಪ್ರಕಾಶನ ಸಂಸ್ಥೆಯಲ್ಲಿ ಹಲವು ಮಹತ್ವದ ಕೃತಿಗಳು ಹೊರಬಂದವು. ಪ್ರಾರಂಭದಲ್ಲಿ ಸರಸ್ವತಿ ಪುಸ್ತಕ ಭಂಡಾರವನ್ನು ತೆರೆದು ಅದರ ಮೂಲಕ ಪುಸ್ತಕ ವ್ಯಾಪಾರವನ್ನು ಪ್ರಾರಂಭಿಸಿ ಮುಂದೆ ಪ್ರಕಾಶನ ಸಂಸ್ಥೆಯನ್ನು ಪ್ರಾರಂಭಿಸಿದರು. ಈ ಪ್ರಕಾಶನ ಸಂಸ್ಥೆಯಲ್ಲಿ ಪ್ರಕಟವಾದ ಮಹತ್ವದ ಕೃತಿಗಳೆಂದರೆ, ಶ್ರೀ ರಂಗಾಚಾರ್ಯ ಜೋಶಿಯವರು ಬರೆದ 'ಗುರು ಚರಿತ್ರೆ', 'ಗರುಡ ಪುರಾಣ', 'ಭಾಗವತ' ಕೃತಿಗಳು; ಶ್ರೀ ಕೃಷ್ಣಮೂರ್ತಿ ಪುರಾಣಿಕರ 'ರಾಮೂನ ಕಥೆಗಳು', 'ಜೀವ ಜೇನು' ಎಂಬ ಕಥಾ ಸಂಗ್ರಹಗಳು; ಶ್ರೀ ವ್ಹಿ.ಸಿ. ಅಂಟೀನರ 'ವಿರೂಪಾಕ್ಷ ಮಾಲೆ (ಕಾದಂಬರಿ), ಚಿ. ಶ್ರೀ ಕುಲಕರ್ಣಿ ಅವರೇ ಬರೆದ 'ವೆಂಕಟೇಶ ಮಹಾತ್ಮೆ' ಹಾಗೂ ಹಲವಾರು ಸ್ತೋತ್ರ ಪುಸ್ತಕಗಳು. ಹೀಗೆ ಹೆಚ್ಚಾಗಿ ಆಧ್ಯಾತ್ಮಿಕ ಪುಸ್ತಕಗಳನ್ನು ಹೊರತಂದರು. ಸರಸ್ವತಿ ಪ್ರಕಾಶನದ ಮತ್ತೊಂದು ಶಾಖೆಯಾದ 'ದುರ್ಗಾ ಪಬ್ಲಿಶರ್ಸ್' ಮೂಲಕ ಕಾವ್ಯಾನಂದ 'ತಿಂಮ್ಮಾಯಣ' ಎಂಬ

ಎರಡು ವ್ಯಕ್ತಿ ಚಿತ್ರಗಳನ್ನು ಶ್ರೀ ಕೃಷ್ಣ ಕೊಲ್ಲಾರ ಕುಲಕರ್ಣಿಯವರ 'ಸೋನಾರ ಬಂಗ್ಲಾ' ಎಂಬ ಕೃತಿಯನ್ನು ಹೀಗೆ ಹಲವಾರು ಕೃತಿಗಳನ್ನು ಎರಡೂ ಪ್ರಕಾಶನಗಳ ಮೂಲಕ ಪ್ರಕಟಿಸಿದರು. ಶ್ರೀ ಚಿ. ಶ್ರೀ ಕುಲಕರ್ಣಿಯವರು ಬೇರೆ ಬೇರೆ ಸ್ಥಳಗಳಿಗೆ ಹೋಗಿ ಪುಸ್ತಕಗಳನ್ನು ಮಾರಾಟ ಮಾಡುತ್ತಿದ್ದರು. ಪುಸ್ತಕ ಅಂಗಡಿಗಳಿಗಷ್ಟೇ ಅಲ್ಲದೆ ಪ್ರಕಾಶನ ಸಂಸ್ಥೆಗಳಿಗೂ ಹೋಗಿ ತಾವು ಪ್ರಕಾಶಿಸಿದ ಗ್ರಂಥಗಳನ್ನು ಅವರಿಗೆ ಕೊಟ್ಟು ಅವರ ಪ್ರಕಟಣೆಗಳನ್ನು ತಾವು ತೆಗೆದುಕೊಂಡು ಬಂದು ಮಾರಾಟಮಾಡುತ್ತಿದ್ದರು. ಸರಸ್ವತಿ ಪ್ರಕಾಶನದಿಂದ ಹೆಚ್ಚಾಗಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆಯ ಪಠ್ಯಪುಸ್ತಕಗಳ ಗೈಡುಗಳನ್ನು ಪ್ರಕಟಿಸಿ ಮಾರಾಟ ಮಾಡುತ್ತಿದ್ದರು.

**ಸುವರ್ಣ ಭಾರತಿ ಗ್ರಂಥಮಾಲೆ :** ೧೯೪೦ ರ ದಶಕದಲ್ಲಿ ಶ್ರೀ ವಸಂತ ಪಾಟೀಲ ಹಾಗೂ ಮಿತ್ರವೃಂದದಿಂದ ಪ್ರಾರಂಭಗೊಂಡಿತು. ಈ ಗ್ರಂಥಮಾಲೆಯಲ್ಲಿ ಅಂದಿನ ಪ್ರಮುಖ ಸಾಹಿತಿ ಶ್ರೀ ಕೃಷ್ಣ ಪಾಟೀಲರ ಕೃತಿಗಳು ಪ್ರಕಾಶನಗೊಂಡವು. ಶ್ರೀ ಕೃಷ್ಣ ಪಾಟೀಲರ ಸಹೋದರರಾದ ವಸಂತ ಪಾಟೀಲರು ಶ್ರೀ ಪಿ.ಕೆ.ಭಾಗೋಜಿ, ಶ್ರೀ ವಿ.ಜಿ. ಕುಲಕರ್ಣಿ, ಶ್ರೀ ಮ. ಶೆ ಕೇದನೂರ ಮೊದಲಾದವರ ಪ್ರೊತ್ಸಾಹ, ಸಲಹೆಯನ್ನು ಪಡೆದು ಸುವರ್ಣ ಭಾರತಿ ಗ್ರಂಥ ಮಾಲೆಯನ್ನು ಪ್ರಾರಂಭಿಸಿದರು. ಈ ಗ್ರಂಥಮಾಲೆಗೆ ಮಹಾವೀರ ಮುದ್ರಣಾಲಯದ ಶ್ರೀ ಭೂ. ದೇ. ಚೌಗಲೆಯವರೂ ಸಹಕಾರ ನೀಡಿದರು. ಈ ಗ್ರಂಥಮಾಲೆಯಿಂದ ಶ್ರೀ ಕೃಷ್ಣ ಪಾಟೀಲರ 'ಸಂಜೀವಿನಿ', 'ಜಯಂತ', 'ನಪುಂಸಕ' 'ಅಪವಾದ', 'ಚಿದಂಬರ', 'ಗುರುಕುಲ', 'ಹೊಲಮನೆ' ಮುಂತಾದ ಕಾದಂಬರಿಗಳು, 'ರಾಜ್ಯ ತೃಷ್ಣೆ', 'ನಮ್ಮೂರ ನಡತೆ' 'ಜನೆವರ ೨೬' ನಾಟಕಗಳು, 'ವಾಸನಾಭೂತಗಳೂ' 'ದಾದಿ' ಕಥಾ ಸಂಕಲನಗಳು ಹೊರಬಂದವು. ಹೀಗೆ ನವೋದಯದ ಕಾಲಘಟ್ಟದಲ್ಲಿ ಬೆಳಗಾವಿಯಲ್ಲಿ ನೆಲೆ ನಿಂತು ಮಹತ್ವದ ಕೃತಿಗಳನ್ನು ಪ್ರಕಾಶಿಸುವ ಕಾರ್ಯವನ್ನು ಸುವರ್ಣ ಭಾರತಿ ಗ್ರಂಥಮಾಲೆ ಮಾಡಿತು. ಈ ಗ್ರಂಥಮಾಲೆಯು ಪ್ರಕಟಣೆಯನ್ನು ಕೈಕೊಂಡಿದ್ದರಿಂದಲೇ ಶ್ರೀ ಕೃಷ್ಣ ಪಾಟೀಲರ ಸಾಹಿತ್ಯ ಹೊರಬರಲು ಸಾಧ್ಯವಾಯಿತು.

**ಅಜಿತ ಪ್ರಕಾಶನ :** ನಲ್ವತ್ತರ ದಶಕದಲ್ಲಿಯೇ ಪ್ರಾರಂಭಗೊಂಡ ಎ. ಪಿ. ಚೌಗಲಾರವರ ಅಜಿತ ಪ್ರಕಾಶನದಿಂದ ಹೆಚ್ಚಾಗಿ ಮಕ್ಕಳ ಪುಸ್ತಕಗಳು ಪ್ರಕಟಗೊಂಡವು. ಸ್ವಂತ ಮುದ್ರಣಾಲಯವನ್ನು ಹೊಂದಿದ್ದ ಇವರು ಪುಸ್ತಕ ಪ್ರಕಾಶನಕ್ಕಿಂತ ಮುದ್ರಣಾಲಯಕ್ಕೆ ಹೆಚ್ಚು ಮಹತ್ವಕೊಟ್ಟರು. ಇದರಿಂದಾಗಿ ಹೆಚ್ಚು ಪುಸ್ತಕಗಳು ಪ್ರಕಟವಾಗಲಿಲ್ಲ. ಆದರೂ ಕೆಲವು ಮಹತ್ವದ ಕೃತಿಗಳನ್ನು ಹೊರತಂದಿದ್ದಾರೆ. ಅವುಗಳಲ್ಲಿ ದು.ನಿಂ. ಬೆಳಗಲಿಯವರ 'ಮುಳ್ಳು ಮತ್ತು ಮಲ್ಲಿಗೆ' ಮಿರ್ಜಿ ಅಣ್ಣಾರಾಯರ 'ಎರಡು ಹೆಜ್ಜೆ' ಎಂಬ ಸಾಮಾಜಿಕ ಕಾದಂಬರಿ, ತಲಚೇರಿಕರ ರಂಗರಾವ್‌ರ ಕಾನೂನು ಪುಸ್ತಕ, ಅಲ್ಲದೆ ಮರಾಠಿ ಪತ್ತೆದಾರಿ ಕಾದಂಬರಿಕಾರ ಅರ್ನಾಳಕರ ಬಾಬುರಾವ್ ಅವರ ಕಾದಂಬರಿಗಳನ್ನು ಅನುವಾದ ಮಾಡಿಸಿ ಅವುಗಳನ್ನು ಪ್ರಕಟಿಸಿದ್ದಾರೆ. ಮಕ್ಕಳ ಕಥಾ ಪುಸ್ತಕಗಳು, ಮಕ್ಕಳ ಹಾಡುಗಳು, ತೆನಾಲಿರಾಮನ ಕಥೆಗಳು, ಮಗ್ಗಿ ಪುಸ್ತಕಗಳು, ಹೀಗೆ ಹಲವಾರು ಪುಸ್ತಕಗಳನ್ನು ಪ್ರಕಟಿಸಿಪ್ರಕಾಶಿಸಲಾಗಿದೆ.

**ಶರತ್ ಪ್ರಕಾಶ ಮಂದಿರ :** ೧೯೫೨-೫೩ ರಲ್ಲಿ ಶರತ್‌ಕುಮಾರ ಧರಮಟ್ಟಿ ಅವರಿಂದ ಪ್ರಾರಂಭಗೊಂಡ 'ಶರತ್‌ಪ್ರಕಾಶ ಮಂದಿರ'ವು ಬೆಳಗಾವಿಯಲ್ಲಿ ಪುಸ್ತಕ ಪ್ರಕಟಣೆಯಲ್ಲಿ ಮಹತ್ವದ ಕಾರ್ಯವನ್ನು ಮಾಡಿದೆ. ಪ್ರಸಿದ್ಧ ಸಾಹಿತಿ ಬೆಟಗೇರಿ ಕೃಷ್ಣಶರ್ಮ, ಶರತ್ ಕುಮಾರರ ಸೋದರ ಮಾವ. ಹೀಗಾಗಿ ಅವರ ಸಂಪರ್ಕದಿಂದ ಸಾಹಿತ್ಯದ ಕಡೆಗೆ ಆಕರ್ಷಿತರಾದರು. ಇದರಿಂದ ಪುಸ್ತಕ ಪ್ರಕಟಣೆ, ಮಾರಾಟ ಕಾರ್ಯಕ್ಕೆ ಕೈಹಾಕಿದರು. ೧೯೫೩ ರಲ್ಲಿ ಬೆಟಗೇರಿ ಕೃಷ್ಣಶರ್ಮರ 'ಬೆಳವಡಿ ಮಲ್ಲಮ್ಮ' 'ಬೆಂದಹೃದಯ' ಎಂಬ ಎರಡು ರೇಡಿಯೋ ನಾಟಕಗಳನ್ನು, 'ಕಾರ ಹುಣ್ಣಿಮೆ' ಕವನ ಸಂಕಲನ, 'ಮಗಳ ಮದುವೆ' ಕಾದಂಬರಿಯನ್ನು ಶರತ್ ಪ್ರಕಾಶ ಮಂದಿರದಿಂದ ಹೊರತಂದರು.

ಪುಸ್ತಕಗಳನ್ನು ಪ್ರಕಟಿಸಿದ ಮೇಲೆ ಅವುಗಳನ್ನು ಮಾರಾಟ ಮಾಡುವ ದೊಡ್ಡ ಸಮಸ್ಯೆಯನ್ನು ಅವರು ಎದುರಿಸಿದರು. ಗಡಿಭಾಗವಾದ ಬೆಳಗಾವಿಯಲ್ಲಿ ಕನ್ನಡ ಪುಸ್ತಕಗಳನ್ನು ಓದುವವರು ವಿರಳ. ಹೀಗಾಗಿ ತಾವು ಪ್ರಕಟಿಸಿದ ಪುಸ್ತಕಗಳ ಜೊತೆಗೆ ಬೇರೆ ಪ್ರಕಾಶನದ ಪುಸ್ತಕಗಳನ್ನೂ ಕೊಂಡು ಬೇರೆ ಬೇರೆ ಹಳ್ಳಿಗಳಿಗೆ ಹೋಗಿ ಮಾರಾಟ ಮಾಡಲು ನಿರ್ಧರಿಸಿದರು. ಅದಕ್ಕಾಗಿ ಅವರು ಒಂದು ಟ್ರಂಕಿನಲ್ಲಿ ಪುಸ್ತಕಗಳನ್ನೆಲ್ಲ ಹಾಕಿ ಅದನ್ನು ಸೈಕಲ್ ಮೇಲೆ ಹಗ್ಗದಿಂದ ಬಿಗಿದು, ಹಾಗೇಯೇ ಸೈಕಲ್‌ನ ಜೊತೆಗೆ ರೇಲ್ವೆ ಹತ್ತಿ ಗೋಕಾಕಗೆ ಬರುತ್ತಿದ್ದರು. ಇವರ ಮೂಲ ಊರು ಗೋಕಾಕ ತಾಲೂಕಿನ ಧರಮಟ್ಟಿ.. ಗೋಕಾಕ ತಾಲೂಕಿನ ಪ್ರತಿ ಹಳ್ಳಿ ಹಳ್ಳಿಗಳ ಶಾಲೆಗಳಿಗೆ ಹೋಗಿ ಪುಸ್ತಕಗಳನ್ನು ಮಾರಾಟ ಮಾಡುತ್ತಿದ್ದರು. ಕೆಲವು ಸಾಹಿತ್ಯಾಸಕ್ತರ ಮನೆಗೂ ಹೋಗಿ ಮಾರಾಟಮಾಡುತ್ತಿದ್ದರು. ಹೀಗೆ 'ಶರತ್ ಪ್ರಕಾಶನ ಮಂದಿರ' ದಿನದಿನಕ್ಕೆ ಹೆಚ್ಚು ಪ್ರಸಿದ್ಧಿಯನ್ನು ಪಡೆದಯತೊಡಗಿತು. ಪ್ರತಿಯೊಂದು ಪುಸ್ತಕದ ಮೇಲೂ ರಬ್ಬರ ಸ್ಟಾಂಪ್‌ನಿಂದ 'ಶರತ್ ಪ್ರಕಾಶನ ಮಂದಿರ ಬೆಳಗಾವಿ' ಎಂದು ನಮೂದಿಸುತ್ತಿದ್ದರು. ಇದರಿಂದ ಬೆಳಗಾವಿಗೆ ಬೇರೆ ಬೇರೆ ಕೆಲಸ ಕಾರ್ಯಗಳಿಗೆ ಬಂದವರು ಶರತ್ ಪ್ರಕಾಶನಕ್ಕೆ ಬೆಟ್ಟಿ ಕೊಟ್ಟು ಯಾವುದಾದರೂ ಹೊಸ ಪುಸ್ತಕಗಳು ಬಂದಿದರೆ ಪಡೆದುಕೊಳ್ಳುತ್ತಿದ್ದರು.

'ಶರತ್‌ಚಂದ್ರ ಧರಮಟ್ಟಿಯವರು ಪುಸ್ತಕಗಳನ್ನು ಪ್ರಕಾಶಿಸಿ ಅವುಗಳನ್ನು ಮಾರಾಟ ಮಾಡಿದ್ದರಿಂದ ಗೋಕಾಕ ತಾಲೂಕಿನ ಬಹಳಷ್ಟು ಶಾಲೆಗಳಲ್ಲಿ ವಾಚನಾಲಯಗಳು ಹುಟ್ಟಿಕೊಳ್ಳಲು ಕಾರಣರಾದರು. ಶಾಲೆಗಳಿಗೆ ಬೆಟ್ಟಿ ಕೊಟ್ಟು ತಮ್ಮ ಪುಸ್ತಕಗಳನ್ನೆಲ್ಲಾ ತೋರಿಸಿ ಶಾಲೆಯಲ್ಲಿ ವಾಚನಾಲಯವನ್ನು ಸ್ಥಾಪಿಸಿ ಅಲ್ಲಿ ಪುಸ್ತಕಗಳನ್ನು ಇಡಲು ಹೇಳಿದರು. ಆದರೆ ಪುಸ್ತಕ ಖರೀದಿಗೆ ನಮ್ಮಲ್ಲಿ ಹಣವಿಲ್ಲ ಎಂದು ಶಿಕ್ಷಕ ಹೇಳಿದಾಗ ಅದಕ್ಕೆ ಶರತ್ ಕುಮಾರರು ಒಂದು ಉಪಾಯವನ್ನು ಹೇಳಿದರು. ಪ್ರತಿಯೊಬ್ಬ ಹುಡುಗನಿಗೆ ಒಂದೊಂದು ಬೊಗಸೆ ಜೋಳವನ್ನು ತರಲು ಹೇಳಿ ಆ ಎಲ್ಲಾ ಜೋಳವನ್ನು ಮಾರಿ ಬಂದ ಹಣದಲ್ಲಿ ಪುಸ್ತಕಗಳನ್ನು ಖರೀದಿಸಿ ಎಂದು ಹೇಳಿದರು. ಇದಕ್ಕೆ ಶಿಕ್ಷಕರು ಒಪ್ಪಿದರು. ಈ ರೀತಿಯಾಗಿ ಹಲವಾರು ಶಾಲೆಗಳಲ್ಲಿ ವಾಚನಾಲಯಗಳು ಪ್ರಾರಂಭಗೊಂಡವು. ಪುಸ್ತಕ ಪ್ರಕಾಶನದಿಂದ ಶರತ್‌ಚಂದ್ರರು ಕೈಕೊಂಡ ಮಹತ್ವದ ಕಾರ್ಯ ಇದಾಗಿದೆ.

ಬೆಳಗಾವಿಯಲ್ಲಿ ೧೯೭೧ ರಲ್ಲಿ ಜರುಗಿದ ಜಿಲ್ಲಾ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ತಮ್ಮಲ್ಲಿರುವ ಪುಸ್ತಕಗಳನ್ನು ಪ್ರದರ್ಶನ ಮಾರಾಟಕ್ಕೆ ಇಟ್ಟರು. ಆ ಸಂದರ್ಭದಲ್ಲಿ ಒಂದೇ ದಿನದಲ್ಲಿ ಎರಡು ಸಾವಿರದಷ್ಟು ವ್ಯಾಪಾರ ನಡೆಯಿತು. ಇದರಿಂದ ಶರತ್ ಪ್ರಕಾಶನ ಸಂಸ್ಥೆಯ ಹೆಸರು ಪ್ರಸಿದಿಯನ್ನು ಪಡೆಯಿತು. ಮುಂದೆ ಅವರು ನಾಡಿನ ಪ್ರಸಿದ್ಧ ಸಾಹಿತಿಗಳ ಕೃತಿಗಳನ್ನು ಪ್ರಕಟಿಸಿದರು. ಬೆಟಗೇರಿ ಕೃಷ್ಣಶರ್ಮರ 'ಅಶಾಂತಿ ಪರ್ವ' 'ಮಲ್ಲಿಕಾರ್ಜುನ' 'ರಾಜಯೋಗಿ' ಎಸ್. ಎಲ್. ಭೈರಪ್ಪನವರ 'ಮತದಾನ' ಕಾದಂಬರಿ, ಕೆ.ಟಿ. ಪುರಾಣಿಕರ 'ಅಣ್ಣನ ಹೆಂಡತಿ' ಕಾದಂಬರಿ, ಶ್ರೀನಿವಾಸ ಉಡುಪರ 'ಪ್ರಿಯ ಬಯಕೆ' ಕಾದಂಬರಿ, ಆನಂದ ಕಂದರ 'ಅರುಣೊದಯ' 'ನಲ್ವಾಡುಗಳು', ಬಿ.ಎ. ಸನದಿಯವರ 'ಪ್ರತಿಬಿಂಬ' ಕವನ ಸಂಕಲನ, ಅನಂತ ಕಲ್ಲೋಳರ 'ಚಿನ್ನ ನಿಯಂತ್ರಣ ಅಧಿನಿಯಮ' 'ವೈಭೋಗದ ವೈಖರಿ' ನಗೆ ಬರಹಗಳ ಸಂಗ್ರಹ', 'ಅದಲು ಬದಲು ಕಂಚೀ ಕದಲು' ವ್ಹಿ. ಎಸ್. ಕುಲಕರ್ಣಿಯವರ 'ಪ್ರಜಾಪ್ರಭುತ್ವದ ಒಳನೋಟ' ಪ್ರಬಂಧ ಸಂಕಲನ, ಎನ್. ಎಸ್. ಗದಗಕರ ಅವರ 'ನಮ್ಮ ನೆರೆ ಹೊರೆಯವರು' ವ್ಯಕ್ತಿ ಚಿತ್ರಗಳು, ರಾಘವೇಂದ್ರ ಜೋಶಿಯವರ 'ಚಿರಂಜೀವಿ', 'ಮೃತ್ಯು ಚಕ್ರ', 'ಲಕ್ಷ್ಮಣ ರೇಖೆ' ಮುಂತಾದ ಏಕಾಂಕ ನಾಟಕಗಳು–ಹೀಗೆ ಹಲವಾರು ಮಹತ್ವದ ಕೃತಿಗಳು ಶರತ್ ಪ್ರಕಾಶನ ಮಂದಿರದಿಂದ ಪ್ರಕಟಗೊಂಡವು.

ಹೀಗೆ ಬೆಳಗಾವಿಯಲ್ಲಿ ಅರ್ಧ ಶತಮಾನಕ್ಕಿಂತಲೂ ಹೆಚ್ಚು ಅವಧಿಯಲ್ಲಿ ಪುಸ್ತಕ ಪ್ರಕಾಶನದ ಜೊತೆಗೆ ಅವುಗಳನ್ನು ಹೊತ್ತುಕೊಂಡು ಊರೂರು ಅಲೆದಾಡಿ ಮಾರಾಟ ಮಾಡಿ ಗ್ರಾಮೀಣ ಜನರಲ್ಲಿ ಸಾಹಿತ್ಯದ ಅಭಿರುಚಿಯನ್ನು ಮೂಡಿಸಿದರು. ಗ್ರಾಮೀಣ ಪರಿಸರದಲ್ಲಿ ವಾಚನಾಲಯಗಳ ಸ್ಥಾಪನೆಗೂ ಕಾರಣರಾದರು.

ಪಂಪಾ ಪ್ರಕಾಶನ :

೧೯೫೫ ರಲ್ಲಿ ಶ್ರೀ ಪಿ. ವಿಜಯಕುಮಾರ ಅವರಿಂದ ಪ್ರಾರಂಭಗೊಂಡ 'ಪಂಪಾ ಪ್ರಕಾಶನ' ಹಲವು ಮಹತ್ವದ ಕೃತಿಗಳನ್ನು ಹೊರತಂದಿದೆ. ದು. ನಿಂ. ಬೆಳಗಲಿಯವರ 'ಫ್ಲಾವರ ಪಾಟ' ಎಂಬ ಕಾದಂಬರಿ ಮುಖ್ಯವಾದುದಾಗಿದೆ. ಅಲ್ಲದೆ ತಾವೇ ಬರೆದ ಹಲವಾರು ಕೃತಿಗಳನ್ನು ಬೇರೆ ಬೇರೆ ಲೇಖಕರ ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಪಿ. ವಿಜಯಕುಮಾರರ 'ಸುಗಂಧ', 'ಸಮಾನಾಧಿಕಾರಿ' ಎಂಬ ಅನುವಾದ ನಾಟಕಗಳು, 'ಮಕ್ಕಳ ಲಾಲ ಬಹದ್ದೂರ ಶಾಸ್ತ್ರಿ' ಎಂಬ ಮಕ್ಕಳ ಪುಸ್ತಕ ಇತ್ಯಾದಿಯಾಗಿ ಪ್ರಕಟಗೊಂಡಿವೆ. ಇವರೂ ಕೂಡ ಶಾಲಾ-ಕಾಲೇಜುಗಳಿಗೆ ಹೋಗಿ ಈಗಲೂ ಪುಸ್ತಕಗಳನ್ನು ಮಾರಾಟಮಾಡುತ್ತಾರೆ.

ಶ್ರೀ ಬ.ಗಂ. ತುರಮರಿಯವರು ಗೆಳೆಯರ ಬಳಗ ಪ್ರಕಾಶನದ ಮೂಲಕ ಹಲವು ಕೃತಿಗಳನ್ನು ಪ್ರಕಟಿಸಿದ್ದಾರೆ. ರವಿ ಉಪಾಧ್ಯೆಯವರು ಸ್ನೇಹ ಪ್ರಕಾಶನದ ಮೂಲಕ ತಮ್ಮದೇ ಕೃತಿಗಳನ್ನು ಹೊರ ತಂದಿದ್ದಾರೆ. ಶ್ರೀ ಪೂಜ್ಯ ಸಿದ್ಧರಾಮ ಮಹಾಸ್ವಾಮಿಗಳು ನಾಗನೂರು ರುದ್ರಾಕ್ಷಿ ಮಠದಿಂದ ೩೦ಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿದ್ದಾರೆ. ಕೆ.ಎಲ್.ಇ. ಸಂಸ್ಥೆಯ ಪ್ರಸಾರಾಂಗವು ಕೆ.ಎಲ್.ಇ. ಇತಿಹಾಸ, ಯುಗಪುರುಷರು, ಅರಟಾಳ ರುದ್ರಗೌಡರ ಚರಿತ್ರೆ

ಮುಂತಾದ ಕೃತಿಗಳನ್ನು ಪ್ರಕಟಿಸಿದೆ. ಶ್ರೀ ಎಸ್. ವಿ. ಬಾಗಿ ಎಜ್ಯುಕೇಶನ್ ಟ್ರಸ್ಟ್ ಮೂಲಕ ಐದಾರು ಕೃತಿಗಳು ಪ್ರಕಟಗೊಂಡಿವೆ. ಶ್ರೀ ಭೀಮಸೇನ ತೊರಗಲ್‌ರು 'ಅಮೋಘ ವಾಙ್ಮಯ ಪ್ರಸಾರ' ದ ಮೂಲಕ ತಾವೇ ಬರೆದ ಸಂಚು ಕಾದಂಬರಿ, ಪ್ರಹ್ಲಾದ ಕುಮಾರ ಭಾಗೋಜಿಯವರ 'ರಸಗವಳ' 'ನನ್ನ ಬೆಳಗಾವಿ' ಅನಂತ ಕಲ್ಲೋಳಕರರ 'ಹಗರಲ್ಲಿ" ಮೋಹಮತ್ಸರ' 'ಕಲೆ ಮತ್ತು ಇತರ ಕಥೆಗಳು' ಮೊದಲಾದ ಕೃತಿಗಳನ್ನು ಹೊರತಂದಿದ್ದಾರೆ. ಶ್ರೀ. ಸಿ. ಕೆ. ಜೋರಾಪೂರ ಅವರ ಪ್ರಹ್ಲಾದ ಪ್ರಕಾಶನ, ಶ್ರೀ ಗುಂಡೇನಟ್ಟಿಯವರ ಟಿ. ಎಚ್. ಪಬ್ಲಿಶರ್ಸ್, ಶ್ರೀ ಪುಂಡಲಿಕ ಪಾಟೀಲರ ಕಲಾಶ್ರೀ ಸಾಹಿತ್ಯ ಕುಟೀರ ಹಾಗೂ ಏಳುಕೋಟೆಯವರ ಜೊತೆಗೂಡಿ ಪ್ರಾರಂಭಿಸಿದ 'ಜನಸಾಹಿತ್ಯ ಪ್ರೀತ ಪ್ರಕಾಶನ' ಹೀಗೆ ಇನ್ನು ಹಲವಾರು ಪ್ರಕಾಶನ ಸಂಸ್ಥೆಗಳು ಬೆಳಗಾವಿಯಲ್ಲಿ ಕಾರ್ಯನಿರತವಾಗಿವೆ.

ಒಟ್ಟಿನಲ್ಲಿ ಬೆಳಗಾವಿಯ ಪ್ರಕಾಶನ ಸಂಸ್ಥೆಗಳು ಕನ್ನಡ ಭಾಷೆ ಸಾಹಿತ್ಯವನ್ನು ಉಳಿಸಿ ಬೆಳೆಸುವಲ್ಲಿ ಮಹತ್ವದ ಕಾರ್ಯವನ್ನು ಕೈಗೊಂಡಿರುವುದು ಕಂಡುಬರುತ್ತದೆ. ೧೯೪೦ ರ ದಶಕದಲ್ಲಿ ಪುಸ್ತಕಗಳಿಗೂ ಜಕಾತಿ (ಸುಂಕ)ಯನ್ನು ಮುನಸಿಪಾಲಟಿಯವರು ವಿಧಿಸುತ್ತಿದ್ದರು.[೭೫] ಇಂತಹ ಸಂದರ್ಭದಲ್ಲಿ ಪುಸ್ತಕಗಳನ್ನು ಮಾರಾಟ ಮಾಡುವುದೇ ದೊಡ್ಡ ಸಮಸ್ಯೆಯಾಗಿತ್ತು. ಅವೆಲ್ಲವನ್ನು ಎದುರಿಸಿಯೂ ಪ್ಯಾಟಿ ಶ್ಯಾಮರಾಯರು, ಶರತ್ ಚಂದ್ರ ಧರ್ಮಟ್ಟಿ ಮುಂತಾದವರು ಪ್ರಕಾಶನ ಸಂಸ್ಥೆಗಳನ್ನು ಮುನ್ನೆಡಿಸಿಕೊಂಡು ಹೋಗಿದ್ದಾರೆ. ಈ ಎಲ್ಲ ಕಾರ್ಯಗಳಿಂದಾಗಿಯೇ ಬೆಳಗಾವಿಯಲ್ಲಿ ಕನ್ನಡ ಭಾಷೆ ಸಾಹಿತ್ಯದ ಬೆಳವಣಿಗೆಯಾಗಿದೆ. ಕನ್ನಡ ಸಂಸ್ಕೃತಿಯ ನಿರ್ಮಾಣ ಸಾಧ್ಯವಾಗಿದೆ.

**೩. ಪತ್ರಿಕೆಗಳು:**

ಕರ್ನಾಟಕದ ಪತ್ರಿಕೋದ್ಯಮದ ಇತಿಹಾಸದಲ್ಲಿ ಬೆಳಗಾವಿಯ ಪತ್ರಿಕೋದ್ಯಮಕ್ಕೆ ವಿಶಿಷ್ಟವಾದ ಸ್ಥಾನಮಾನವಿದೆ. ಬೇರೆ ಪ್ರದೇಶಗಳಿಗಿಂತ ತೀರ ಭಿನ್ನವಾದ ವಾತಾವರಣವನ್ನು ಬೆಳಗಾವಿ ಹೊಂದಿದ್ದರಿಂದ ಬಹಳಷ್ಟು ಸಮಸ್ಯೆಗಳು ಇಲ್ಲಿಯ ಪತ್ರಿಕೆಗಳಿಗೆ ಎದುರಾದವು. ಆದರೂ ಅವೆಲ್ಲವುಗಳನ್ನು ಎದುರಿಸಿ ಮಹತ್ವದ ಪತ್ರಿಕೆಗಳು ಇಲ್ಲಿ ಹುಟ್ಟಿ ಬೆಳೆದು ಈ ಪ್ರದೇಶದ ವಿಕಾಸಕ್ಕೆ ಕಾರಣವಾದವು. ವಿಭಿನ್ನ ಭಾಷೆಗಳು, ವಿಭಿನ್ನ ಸಂಸ್ಕೃತಿಗಳ ಸಂಗಮವೆನಿಸಿದ ಬೆಳಗಾವಿಯ ಪತ್ರಿಕೆಗಳು ಎದುರಿಸಿದಷ್ಟು ಸಮಸ್ಯೆಗಳನ್ನು ಬೇರಾವ ಪ್ರದೇಶದ ಪತ್ರಿಕೆಗಳು ಎದುರಿಸಿದ ಹಾಗೆ ತೋರುವುದಿಲ್ಲ.

ಪ್ರಾರಂಭ ಕಾಲದ ಪತ್ರಿಕೆಗಳು ಯಾವುದೇ ಸಮಾಜ, ವರ್ಗ, ಭಾಷೆಯನ್ನು ಮುಖ್ಯವಾಗಿಟ್ಟುಕೊಳ್ಳದೆ ಸಮಾಜದ ಸರ್ವತೋಮುಖ ಅಭಿವೃದ್ಧಿಗಾಗಿ, ಸಮಾಜದ ಅಂಧಃಕಾರವನ್ನು ನಿವಾರಿಸುವುದಕ್ಕಾಗಿ, ಶಿಕ್ಷಣ, ನೀತಿ, ಧರ್ಮದ ಜಾಗೃತಿಗಾಗಿ ಹುಟ್ಟಿಕೊಂಡು ಬಂದವು. ಇದು ಕೇವಲ ಬೆಳಗಾವಿಯ ಪತ್ರಿಕೆಗಳಿಗೆ ಮಾತ್ರ ಸೀಮಿತವಾಗದೆ ಪ್ರಾರಂಭದ ಪತ್ರಿಕೆಗಳ ಒಟ್ಟು ಮನೋಭಾವನೆಯಾಗಿದೆ.

ಪತ್ರಿಕೆಗಳೆಂದರೆ ಸಮಾಜ ಸುಧಾರಣೆಯ ಪ್ರಬಲ ಅಸ್ತ್ರವೆಂದು ನಂಬಿದ್ದ ಕಾಲದಲ್ಲಿ ಬೆಳಗಾವಿಯಲ್ಲಿ ಮಹತ್ವದ ಪತ್ರಿಕೆಗಳು ಹುಟ್ಟಿಕೊಂಡವು. 'ಸುಬುದ್ಧಿ ಪ್ರಕಾಶ', 'ಜ್ಞಾನ ಪ್ರಕಾಶ', 'ಮಠ ಪತ್ರಿಕೆ', 'ಪ್ರಬೋಧ', 'ಜ್ಞಾನ ಪ್ರಕಾಶ', 'ಕನ್ನಡ ಜ್ಞಾನ ಬೋಧಕ', 'ಬೆಳಗಾಂವ್ ಸಮಾಚಾರ', 'ಶೋಧಕ', 'ಕರ್ನಾಟಕ ಪುತ್ರ' ಇತ್ಯಾದಿ ಪತ್ರಿಕೆಗಳನ್ನು ಪ್ರಮುಖವಾಗಿ ಹೆಸರಿಸಬಹುದು. ಹೆಚ್ಚಾಗಿ ವಾರಪತ್ರಿಕೆ, ಮಾಸಪತ್ರಿಕೆ, ಪಾಕ್ಷಿಕಗಳೇ ಹೊರಬರುತ್ತಿದ್ದವು. ಇವುಗಳಲ್ಲಿ ಸ್ಥಾನಿಕ ಸುದ್ದಿಗಳು, ನೇಮಕಾತಿ, ನಿಧನ, ಕೋರ್ಟಸುದ್ದಿ, ಯುದ್ಧವಾರ್ತೆ, ಮದುವೆ ಆಮಂತ್ರಣಗಳನ್ನು ಪ್ರಕಟಿಸುತ್ತಿದ್ದರು. ಆಗ ತಾಜಾ ಸುದ್ದಿಗಳನ್ನು ಹೊರಗಿನಿಂದ ಪಡೆಯುವ ಯಾವ ಸೌಕರ್ಯಗಳು ಇವುಗಳಿಗೆ ಇರಲಿಲ್ಲ. ೧೯೩೩ರಲ್ಲಿ ಸಂಯುಕ್ತ ಕರ್ನಾಟಕ ದಿನಪತ್ರಿಕೆ ಆರಂಭವಾದಾಗ ಮುಂಬಯಿಯಿಂದ ತಂತಿ ಮೂಲಕ ವಿಶೇಷ ಸುದ್ದಿಗಳನ್ನು ಪಡೆದು ಪ್ರಕಟಿಸುವ ವ್ಯವಸ್ಥೆ ಪ್ರಾರಂಭವಾಯಿತು.

ಕ್ರಿ. ಶ. ೧೯೨೦ರ ನಂತರ ದೇಶದಲ್ಲಿ ಸ್ವಾತಂತ್ರ್ಯ ಹೋರಾಟ ತೀವ್ರವಾಗತೊಡಗಿತು. ಅದರಂತೆ ಬೆಳಗಾವಿಯಲ್ಲಿಯೂ ಸಹಜವಾಗಿ ಆಂದೋಲನ ಕಾಣಿಸಿಕೊಂಡಿತು. ಟಿಳಕರ 'ಕೇಸರಿ' ಪತ್ರಿಕೆಯ ಪ್ರಭಾವ ಬೆಳಗಾವಿ ಪ್ರದೇಶದಲ್ಲಿ ವಿಶೇಷವಾದ ಪರಿಣಾಮವನ್ನುಂಟು ಮಾಡಿತು. ಈ ಸಂದರ್ಭದಲ್ಲಿ ಪತ್ರಿಕೆಗಳನ್ನು ರಾಷ್ಟ್ರೀಯತೆಯ ಬೀಜ ಬಿತ್ತಲು, ಜನರಲ್ಲಿ ದೇಶಪ್ರೇಮದ ಭಾವನೆ ಉದ್ದೀಪಿಸಲು ಬಳಸಿಕೊಳ್ಳಲಾಯಿತು. 'ನವನೀತ', 'ರಾಷ್ಟ್ರವೀರ', 'ಕರ್ನಾಟಕ ಮಿತ್ರ', 'ತರುಣ ಭಾರತ' (ಕನ್ನಡ ಮತ್ತು ಮರಾಠಿ ಎರಡೂ ಭಾಷೆಗಳಲ್ಲಿ ಪ್ರಕಟಗೊಳ್ಳುತ್ತಿತ್ತು), 'ಸಂಯುಕ್ತ ಕರ್ನಾಟಕ' ಮೊದಲಾದ ಪತ್ರಿಕೆಗಳು ಬೆಳಗಾವಿಯ ಸ್ವಾತಂತ್ರ್ಯ ಹೋರಾಟಗಾರರಿಗೆ ದಿವ್ಯಶಕ್ತಿಯನ್ನು ಒದಗಿಸಿದವು. ಬೆಳಗಾವಿ ಜಿಲ್ಲೆಯು ಇಡೀ ದೇಶದಲ್ಲಿಯೇ ಸ್ವಾತಂತ್ರ್ಯ ಹೋರಾಟದಲ್ಲಿ ಪ್ರಮುಖ ಸ್ಥಾನ ಪಡೆಯುವಲ್ಲಿ ಪತ್ರಿಕೆಗಳ ಪಾತ್ರ ಪ್ರಮುಖವಾಗಿದೆ.

ಸ್ವಾತಂತ್ರ್ಯದ ನಂತರ ಏಕೀಕರಣ ಸಂದರ್ಭದಲ್ಲಿ ಬೆಳಗಾವಿಯ ಪತ್ರಿಕೆಗಳ ಧೋರಣೆ ಬದಲಾಯಿತು. ಕನ್ನಡ ಮರಾಠಿ ಪತ್ರಿಕೆಗಳು ಕೂಡಿಯೇ ಸ್ವಾತಂತ್ರ್ಯಕ್ಕೆ ಹೋರಾಡಿ, ಒಂದೇ ಉದ್ದೇಶದಲ್ಲಿ ಸಾಗುತ್ತಿದ್ದವು. ಆದರೆ ಏಕೀಕರಣ ಸಂದರ್ಭದಲ್ಲಿ ಕನ್ನಡ ಪತ್ರಿಕೆಗಳು ಏಕೀಕರಣವನ್ನೇ ಮುಖ್ಯವಾಗಿಟ್ಟುಕೊಂಡರೆ ಮರಾಠಿ ಪತ್ರಿಕೆಗಳು ಇದನ್ನು ವಿರೋಧಿಸುವ ನಿಟ್ಟಿನಲ್ಲಿ ಸಾಗಿದವು. 'ಸಂಯುಕ್ತ ಕರ್ನಾಟಕ', 'ಲೋಕಮತ', 'ಜನ ಜೀವಾಳ', 'ಕರ್ನಾಟಕ' ಮುಂತಾದ ಪತ್ರಿಕೆಗಳು ಏಕೀಕರಣ ಹೋರಾಟದತ್ತ ಹೊರಳಿದವು.

ಕರ್ನಾಟಕ ಮತ್ತು ಮಹಾರಾಷ್ಟ್ರ ರಾಜ್ಯಗಳ ನಡುವೆ ಬೆಳಗಾವಿ ಕುರಿತು ಗಡಿ ವಿವಾದ ಪ್ರಾರಂಭವಾದಾಗ ಬೆಳಗಾವಿ ಪತ್ರಿಕೆಗಳು ತಮ್ಮ ತಮ್ಮ ಭಾಷೆಯ ಜನರಲ್ಲಿ ಜಾಗೃತಿ, ಸ್ಫೂರ್ತಿ, ಪ್ರಚೋದನೆಯನ್ನುಂಟು ಮಾಡತೊಡಗಿದವು. ಇದೇ ಉದ್ದೇಶಕ್ಕಾಗಿಯೇ ಹಲವಾರು ಪತ್ರಿಕೆಗಳು ಈ ಸಂದರ್ಭದಲ್ಲಿ ಬೆಳಗಾವಿಯಲ್ಲಿ ಪ್ರಾರಂಭವಾದವು. ಈ ಸಂದರ್ಭದಲ್ಲಿ ವಿಶೇಷವಾಗಿ ಕನ್ನಡ ಪತ್ರಿಕೆಗಳು ಸಾಕಷ್ಟು ತೊಂದರೆಯನ್ನು ಅನುಭವಿಸಿದವು.

ಬೆಳಗಾವಿಯ ಪತ್ರಿಕಾ ರಂಗದ ಬೆಳವಣಿಗೆಯ ೧೬೦ ವರ್ಷಗಳ ಹಾದಿಯಲ್ಲಿ ಹಲವಾರು ಜನ ಹಿರಿಯ ಪತ್ರಕರ್ತರು ಬಾಳಿ ಬದುಕಿದ್ದಾರೆ. ಶಂಕರರಾವ್ ಪರೂಳೇಕರ, ಪ್ರಭಾಕರ ಪರೂಳೇಕರ, ಶಾಮರಾವ್ ಗೋವಿಂದರಾವ್ ದೇಸಾಯಿ, ಕಟ್ಟಿ ಶೇಷಾಚಾರ್ಯ, ಅನಂತರಾವ್ ಚಿಕ್ಕೋಡಿ, ಗೋಪಾಳರಾವ್ ದೇಶಪಾಂಡೆ, ಅರವಿಂದರಾವ್ ಜೋಶಿ, ಬಾಬೂರಾವ್ ಠಾಕೂರ, ಭೀ. ಮ. ಏಳುಕೋಟಿ, ವಾಮನರಾವ್ ಸಾವಂತ, ಆರ್. ಎಚ್. ಕುಲಕರ್ಣಿ, ಎಂ. ಬಿ. ದೇಸಾಯಿ, ಎಂ. ಎಸ್. ಟೋಪಣ್ಣವರ, ಬಿ. ಎನ್. ಧಾರವಾಡಕರ, ಭೀಮಸೇನ ತೊರಗಲ್ಲ, ರಾಘವೇಂದ್ರ ಜೋಶಿ ಮುಂತಾದ ಮಹನೀಯರು ಬೆಳಗಾವಿಯ ನೆಲದ ಪತ್ರಿಕಾರಂಗದಲ್ಲಿ ದುಡಿದು ಕರ್ನಾಟಕದ ಪತ್ರಿಕೋದ್ಯಮಕ್ಕೆ ವಿಶಿಷ್ಟವಾದ ಸೇವೆಯನ್ನು ಸಲ್ಲಿಸಿರುವುದು ಇಂದು ಇತಿಹಾಸವಾಗಿದೆ.

ಬೆಳಗಾವಿಯಲ್ಲಿ ಪ್ರಾರಂಭಗೊಂಡ ಮೊಟ್ಟ ಮೊದಲ ಪತ್ರಿಕೆಯಾದ 'ಸುಬುದ್ಧಿ ಪ್ರಕಾಶನ' ದಿಂದ ಇಲ್ಲಿಯ ವರೆಗಿನ ಮಹತ್ವ ಪತ್ರಿಕೆಗಳ ಬಗೆಗಿನ ಸಂಕ್ಷಿಪ್ತ ಮಾಹಿತಿಯು ಈ ಕೆಳಗಿನಂತಿದೆ.

**ಸುಬುದ್ಧಿ ಪ್ರಕಾಶ:** ಇದು ಬೆಳಗಾವಿಯಲ್ಲಿ ಪ್ರಾರಂಭವಾದ ಮೊಟ್ಟಮೊದಲ ಪತ್ರಿಕೆ, ಅಲ್ಲದೆ ಕರ್ನಾಟಕದ ಪ್ರಥಮ ವಾರ ಪತ್ರಿಕೆಯೆಂಬ ಹೆಗ್ಗಳಿಕೆಗೂ ಪಾತ್ರವಾಗಿದೆ.[೬] ಕರ್ನಾಟಕದ ಮೊದಲ ಪತ್ರಿಕೆಯೆನಿಸಿರುವ 'ಮಂಗಳೂರು ಸಮಾಚಾರ' ೧೮೪೩ ರಲ್ಲಿ ಆರಂಭವಾದರೆ 'ಸುಬುದ್ಧಿ ಪ್ರಕಾಶ' ೧೮೪೯ ರಲ್ಲಿ ಬೆಳಗಾವಿಯಲ್ಲಿ ಪ್ರಾರಂಭವಾಯಿತು. ಅಂದರೆ ಕರ್ನಾಟಕಕ್ಕೆ ಪತ್ರಿಕೆಗಳು ಕಾಲಿಟ್ಟ ಕೇವಲ ಆರು ವರ್ಷಗಳ ಅಂತರದಲ್ಲಿ ಬೆಳಗಾವಿಯಲ್ಲಿ ಪತ್ರಿಕೆಯ ಪ್ರಕಟಣೆ ಪ್ರಾರಂಭವಾಯಿತು. ತೀರ ಹಿಂದುಳಿದ ಪ್ರದೇಶವಾಗಿ, ಗಡಿಭಾಗದ ಮರಾಠಿ ಭಾಷೆಯ ಪ್ರಭಾವದಲ್ಲಿ ಈ ಕನ್ನಡ ಪತ್ರಿಕೆ ಪ್ರಾರಂಭವಾದದ್ದು ಮಹತ್ವದ್ದೆನಿಸುತ್ತದೆ. ಇಂದಿನ ಗಡಿ ಸಮಸ್ಯೆಯ ಗದ್ದಲವಿಲ್ಲದಿದ್ದರೂ ಮರಾಠಿಯ ದಟ್ಟವಾದ ಪ್ರಭಾವ ಆಗ ಬೆಳಗಾವಿಯಲ್ಲಿತ್ತು. ಸಂಪೂರ್ಣ ವ್ಯವಹಾರ, ಆಡಳಿತ, ಶಿಕ್ಷಣ ಇವೆಲ್ಲವೂ ಮರಾಠಿಯಲ್ಲಿಯೇ ಆಗುತ್ತಿದ್ದವು. ಅಲ್ಲದೆ ಪತ್ರಿಕೆಗಳನ್ನು ಓದುವವರೆಲ್ಲರೂ ಸುಶಿಕ್ಷಿತರಾಗಿದ್ದರು. ಈ ಸುಶಿಕ್ಷಿತರೆನಿಸಿಕೊಂಡವರೆಲ್ಲಾ ಮರಾಠಿಯ ವ್ಯಾಮೋಹಕ್ಕೆ ಒಳಗಾಗಿದ್ದರು. ಇಂತಹ ವಾತಾವರಣದಲ್ಲಿ ಈ ಪತ್ರಿಕೆ ಪ್ರಾರಂಭವಾದದ್ದು ಒಂದು ಮಹತ್ವದ ಘಟ್ಟವೆನ್ನಬಹುದು.

೧೮೫೬ ರಿಂದ 'ಸುಬುದ್ಧಿ ಪ್ರಕಾಶ' ಪತ್ರಿಕೆಯ ಸಂಪಾದಕರಾಗಿ 'ಖೀರು ಶೇಷು' ಎನ್ನುವವರು ನೇಮಕವಾದರು.[೭] ಕ್ರಿ. ಶ. ೧೮೪೯ ರಲ್ಲಿ ಪತ್ರಿಕೆ ಪ್ರಾರಂಭವಾದಾಗ ಅದರ ಸಂಪಾದಕತ್ವ ವಹಿಸಿಕೊಂಡ ಬಗೆಗೆ ತಿಳಿದುಬರುವುದಿಲ್ಲ. ಈಗ ದೊರೆತಿರುವ ಪತ್ರಿಕೆಯ ಪ್ರತಿಯ ಆಧಾರದ ಮೇಲೆ 'ಖೀರು ಶೇಷು' ಎನ್ನುವವರ ಹೆಸರನ್ನು ಗುರುತಿಸಬಹುದಾಗಿದೆ.[೮]

ಪತ್ರಿಕೆಯ ಸಂಪಾದಕರಾದ 'ಖೀರು ಶೇಷು' ಮೂಲತಃ ಮರಾಠಿಗರೆನ್ನುವುದು ಮತ್ತು ಪತ್ರಿಕೆಗೆ ಆಶ್ರಯ ನೀಡಿದ ಸಾಂಗಲಿ ಸಂಸ್ಥಾನವು ಮರಾಠಿ ಭಾಷೆಯ ಸಂಸ್ಥಾನವೆನ್ನುವುದು ವಿಶೇಷವಾಗಿ ಗಮನಾರ್ಹ ಸಂಗತಿಗಳಾದರೂ,

ಬೆಳಗಾವಿಯ ಅಂದಿನ ದಿನಗಳಲ್ಲಿ ಇದು ಸಹಜವೆನಿಸಿತ್ತು. ಸಾಂಗಲಿ ಸಂಸ್ಥಾನದ ಆಡಳಿತಕ್ಕೆ ಬೆಳಗಾವಿಯ ಕೆಲವು ಪ್ರದೇಶ ಒಳಪಟ್ಟಿತ್ತು. ಅಲ್ಲದೆ ಅಂದಿನ ದಿನಗಳಲ್ಲಿ ಮರಾಠಿ ಕನ್ನಡ ಎನ್ನುವ ಭಾಷಾ ಭೇದ-ಭಾವ ಉಂಟಾಗಿರಲಿಲ್ಲ. ಕನ್ನಡಿಗರು ಮರಾಠಿಯನ್ನು ತಮ್ಮ ಮಾತೃಭಾಷೆಗಿಂತ ಹೆಚ್ಚು ಆಶ್ರಯಿಸಿದ್ದರು. ಕನ್ನಡ–ಮರಾಠಿ ಜನರ ಮಧ್ಯದಲ್ಲಿ ಸಾಮರಸ್ಯದ ಬದುಕಿತ್ತು. ಮುಂದೆ ಬಂದ ಹಲವಾರು ಪತ್ರಿಕೆಗಳು, ಎರಡೂ ಭಾಷೆಗಳಲ್ಲಿ ಪ್ರಕಟಗೊಂಡಿರುವುದನ್ನು ಕಾಣಬಹುದು.[೨೯]

'ಸುಬುದ್ಧಿ ಪ್ರಕಾಶ' ಪತ್ರಿಕೆಯು ಕಲ್ಲಚ್ಚಿನಲ್ಲಿ ಮುದ್ರಣಗೊಳ್ಳುತ್ತಿತ್ತು. ಪ್ರತಿ ಚಂದ್ರವಾರ ಅಂದರೆ ಸೋಮವಾರದಂದು ಪುಲ್‌ಸ್ಕೇಪ್ ಆಕಾರದ ಎಂಟು ಪುಟಗಳಲ್ಲಿ ಹೊರಬರುತ್ತಿತ್ತು.[೩೦] ಆಗ ಇದರ ಬೆಲೆ ಪ್ರತಿ ಸಂಚಿಕೆಗೆ ಎರಡು ಆಣೆ, ತಿಂಗಳಿಗೆ ಎಂಟು ಆಣೆ, ವಾರ್ಷಿಕ ಚಂದಾ ಹಣ ಆರು ರೂಪಾಯಿ ಇತ್ತು.

'ಸುಬುದ್ಧಿ ಪ್ರಕಾಶ' ಪತ್ರಿಕೆಯು ಹತ್ತೊಂಬತ್ತನೆಯ ಶತಮಾನದ ಕನ್ನಡದ ಸ್ವರೂಪವನ್ನು ತಿಳಿದುಕೊಳ್ಳಲು ಸಹಕಾರಿಯಾಗಿದೆ. ಅಂದಿನ ಭಾಷಾ ಶೈಲಿ, ಬರಹದ ರೂಪ, ಪತ್ರಿಕೆಗಳಲ್ಲಿ ಬಳಸುವ ಭಾಷೆ, ಸಮಾಜದ ಸ್ಥಿತಿಗತಿಗಳು, ಜನ ಸಾಮಾನ್ಯರ ಮನೋಭಾವನೆ, ಅಂದಿನ ಆರ್ಥಿಕ ಸ್ಥಿತಿಗತಿ, ಶಿಕ್ಷಣದ ಪದ್ಧತಿ, ನಗರ ಜೀವನ ಮುಂತಾದ ವಿಷಯಗಳಿಗೆ ಸಂಬಂಧಿಸಿದ ಮಾಹಿತಿಗಳು ಪ್ರಕಟಗೊಳ್ಳುತ್ತಿದ್ದವು. ಈ ಎಲ್ಲ ವಿಷಯಗಳು ಅಂದಿನ ಸಾಂಸ್ಕೃತಿಕ ಜೀವನದ ಮೇಲೆ ಬೆಳಕು ಚಲ್ಲುತ್ತವೆ.

ಅಂದು ಕರ್ನಾಟಕದಲ್ಲಿ ಪತ್ರಿಕೆಗಳು ಸರ್ಕಾರಿಯಾಗಿ, ಮಿಶನರಿಗಳ ಮೂಲಕ ಮಾತ್ರ ಪ್ರಕಟಗೊಳ್ಳುತ್ತಿದ್ದವು. 'ಸುಬುದ್ಧಿ ಪ್ರಕಾಶ' ಪತ್ರಿಕೆಯು ಖಾಸಗಿಯಾಗಿ ಪ್ರಕಟಗೊಳ್ಳುತ್ತಿದ್ದ ಪತ್ರಿಕೆಯಾಗಿತ್ತು. ಖಾಸಗಿ ವ್ಯಕ್ತಿಯಿಂದ ಪ್ರಕಟಗೊಳ್ಳುತ್ತಿದ್ದ ಪತ್ರಿಕೆಯೊಂದು ಹೆಚ್ಚು ಪ್ರಸಾರವನ್ನು ಚಂದಾದಾರರನ್ನು ಹೊಂದಿದ್ದು ಒಂದು ವಿಶೇಷವಾಗಿದೆ. ಅಂದಿನ ದಿನಗಳಿಗೆ ಹೋಲಿಸಿದರೆ ಪತ್ರಿಕೆಯ ಬೆಲೆ ಸ್ವಲ್ಪ ಹೆಚ್ಚಾಗಿತ್ತು. ಸಾಮಾನ್ಯವಾಗಿ ಈ ಪತ್ರಿಕೆಯ ಓದುಗರು ಶ್ರೀಮಂತರು, ದೊಡ್ಡ ದೊಡ್ಡ ಹುದ್ದೆಗಳಲ್ಲಿರುವ ಜನರಾಗಿದ್ದರು.

'ಸುಬುದ್ಧಿ ಪ್ರಕಾಶ'ದ ಮಹತ್ವವಿರುವುದು ಅದು ಬೆಳಗಾವಿಯಿಂದ ಪ್ರಕಟಗೊಳ್ಳುತ್ತಿತ್ತೆನ್ನುವುದರಿಂದ. ಅಂದಿನ ದಿನಗಳಲ್ಲಿ ಮರಾಠಿಯ ದಟ್ಟವಾದ ಪ್ರಭಾವದಲ್ಲಿ ಕನ್ನಡ ಪತ್ರಿಕೆ ಬೆಳೆದು ಬಂದದ್ದು ವಿಶೇಷವಾಗಿದೆ. ಸಂಪರ್ಕ ಸಾಧನಗಳಿಲ್ಲದ, ಸಾರಿಗೆ ವ್ಯವಸ್ಥೆಯಿಲ್ಲದ ದಿನಗಳಲ್ಲಿ ಕಾಲ್ನಡಿಗೆಯಲ್ಲಿಯೋ, ಕುದುರೆ, ಎತ್ತಿನ ಬಂಡಿಯಲ್ಲಿಯೋ ಪತ್ರಿಕೆಯನ್ನು ಬೇರೆ ಬೇರೆ ಪ್ರದೇಶಗಳಿಗೆ (ಧಾರವಾಡ ಮುಂತಾದ ಸ್ಥಳಗಳಿಗೆ) ತಲುಪಿಸುತ್ತಿದ್ದದ್ದು ಸಾಹಸದ ವಿಷಯವಾಗಿದೆ.

'ಸುಬುದ್ಧಿ ಪ್ರಕಾಶ' ಪತ್ರಿಕೆಯು ಬೆಳಗಾವಿಯ ಪರಿಸರದ ಸಾಹಿತ್ಯ, ಸಂಸ್ಕೃತಿ, ಸಮಾಜ, ಭಾಷೆಗಳ ಸ್ವರೂಪವನ್ನು ತಿಳಿಸಿಕೊಡುವಲ್ಲಿ ಮಹತ್ವದ ಪಾತ್ರವಹಿಸಿದೆ. ಬೆಳಗಾವಿಯಲ್ಲಿ ಪತ್ರಿಕೋದ್ಯಮಕ್ಕೆ ಭದ್ರವಾದ ತಳಹದಿಯನ್ನು ಒದಗಿಸಿ ಮುಂದಿನ ಪತ್ರಿಕೆಗಳಿಗೆ ಸ್ಫೂರ್ತಿಯಾಗಿ, ಆದರ್ಶವಾಗಿ ರೂಪಗೊಂಡಿದೆ.

೧೮೪೩ರಲ್ಲಿ ಪ್ರಾರಂಭವಾದ 'ಮಂಗಳೂರು ಸಮಾಚಾರ' ಪತ್ರಿಕೆಯ ಸ್ವರೂಪ, ಭಾಷೆ, ವಿಷಯಗಳಿಗೂ 'ಸುಬುದ್ಧಿ ಪ್ರಕಾಶ' ಪತ್ರಿಕೆಗೂ ಹಲವಾರು ಸಾಮ್ಯತೆಗಳಿವೆ. ವಿಷಯಗಳ ನಿರೂಪಣೆಯಲ್ಲಿ ಭಾಷೆಯ ಬಳಕೆ ವಿಭಿನ್ನವಾದರೂ ವಿಷಯಗಳಲ್ಲಿ ಸಾಮ್ಯತೆಯನ್ನು ಕಾಣಬಹುದು. ಆದರೆ ಈ ಎರಡೂ ಪತ್ರಿಕೆಗಳ ಉದ್ದೇಶ ಬೇರೆ ಬೇರೆಯಾಗಿತ್ತು. 'ಮಂಗಳೂರು ಸಮಾಚಾರ'ವು ಮಿಶನರಿಗಳ ಮೂಲಕ ಕ್ರೈಸ್ತ ಧರ್ಮದ ಪ್ರಸಾರದ ಉದ್ದೇಶವನ್ನು ಹೊಂದಿದ್ದರೆ 'ಸುಬುದ್ಧಿ ಪ್ರಕಾಶ'ವು ವ್ಯವಹಾರದ ದೃಷ್ಟಿಯಿಂದ ಲಾಭಗಳಿಸುವುದಕ್ಕಾಗಿ ಖಾಸಗಿಯಾಗಿ ಮುದ್ರಣಗೊಳ್ಳುತ್ತಿತ್ತು. ಕರ್ನಾಟಕದ ಸಾಂಸ್ಕೃತಿಕ ಅಧ್ಯಯನಕ್ಕೆ ಉಪಯುಕ್ತವಾದ ಮಾಹಿತಿ ಈ ಎರಡೂ ಪತ್ರಿಕೆಗಳಿಂದ ಒದಗಿಬಂದಿದೆ.

**ಜ್ಞಾನ ಪ್ರಕಾಶ:** ಬೆಳಗಾವಿಯಲ್ಲಿ ಮುದ್ರಣಗೊಂಡ ಎರಡನೆಯ ಪತ್ರಿಕೆ 'ಜ್ಞಾನ ಪ್ರಕಾಶ.' ಕ್ರಿ. ಶ. ೧೮೫೫ ರ ಸುಮಾರಿಗೆ ಈ ಪತ್ರಿಕೆ ಪ್ರಾರಂಭವಾಗಿ ಹಲವು ವರ್ಷಗಳವರೆಗೆ ನಡೆದುಕೊಂಡು ಬಂದಿದೆ. ಸ್ಥಳೀಯ ವರ್ತಮಾನಗಳು ವಿಶೇಷವಾಗಿ ಈ ಪತ್ರಿಕೆಯಲ್ಲಿ ಪ್ರಕಟಗೊಳ್ಳುತ್ತಿದ್ದವು. ಪತ್ರಿಕೆಯ ಸಂಪಾದಕರು ಯಾರು ಎನ್ನುವುದು ತಿಳಿದುಬರುವುದಿಲ್ಲ. ಅಲ್ಪ ಅವಧಿಯಲ್ಲಿಯೇ ಪತ್ರಿಕೆ ಸ್ಥಗಿತಗೊಂಡಿದ್ದರೂ ಭಾಷೆಯ ಸ್ವರೂಪದ ದೃಷ್ಟಿಯಿಂದ ಉಪಯುಕ್ತವಾದ ಮಾಹಿತಿಯನ್ನು ಒದಗಿಸುತ್ತದೆ. ಅಂದಿನ ಗದ್ಯಶೈಲಿಯ ಪಾಕ ಯಾವ ರೀತಿ ಕುದಿಗೊಳ್ಳಹತ್ತಿತೆಂಬುದನ್ನು ಪತ್ರಿಕೆಯಲ್ಲಿಯ ವರದಿಗಳನ್ನು ನೋಡಿ ತಿಳಿದುಕೊಳ್ಳಬಹುದಾಗಿದೆ.

**ಕನ್ನಡ ಜ್ಞಾನ ಬೋಧಕ:** ಬೆಳಗಾವಿಯಲ್ಲಿ ಪ್ರಕಟಗೊಳ್ಳುತ್ತಿದ್ದ ಮೂರನೆಯ ಪತ್ರಿಕೆ 'ಕನ್ನಡ ಜ್ಞಾನ ಬೋಧಕವು' ಕನ್ನಡ ವರ್ಣಾಕ್ಷರ ಸಂಸ್ಥೆಯಿಂದ (Canarese vernacular Society) ಪ್ರಕಾಶಿತವಾಗಿ ಧಾರವಾಡದ 'ಗೋವಿಂದ ಪ್ರಭಾಕರ ಜೋಶಿ' ಇವರ 'ಸನ್ಮಾರ್ಗ ದರ್ಶಕ ಛಾಪಖಾನೆ'ಯಲ್ಲಿ ಅಚ್ಚಾಗಿ ಬೆಳಗಾವಿಯಿಂದ ೧೮೬೧ ರಿಂದ ಪ್ರಕಟಗೊಳ್ಳುತ್ತಿತ್ತು.[೮೧] ಇದರ ಕ್ರಯ 'ಯರಡು ಆಣೆ'ಯಿತ್ತು. ಇದು ಮರಾಠಿಯಲ್ಲಿಯೂ 'ಕಾನಡೀ ಜ್ಞಾನ ಬೋಧಕ' ಎಂಬ ಹೆಸರಿನಿಂದ ಪ್ರಕಟಗೊಳ್ಳುತ್ತಿತ್ತು. ಅತ್ಯಂತ ವೈಶಿಷ್ಟ್ಯಪೂರ್ಣವಾಗಿ ಹೊರಬರುತ್ತಿದ್ದ ಈ ಮಾಸ ಪತ್ರಿಕೆ ಡೆಮಿ ಅಷ್ಟಪತ್ರ ಆಕಾರದ ಮೂವತ್ತು ಪುಟಗಳಲ್ಲಿ ಪ್ರಕಟಗೊಳ್ಳುತ್ತಿತ್ತು.

ಈ ಪತ್ರಿಕೆಯ ಮಹತ್ವದ ಸಾಧನೆಯೆಂದರೆ ಇಂಗ್ಲಿಷ ಕನ್ನಡ ಸರ್ಕಾರಿ ನಿಘಂಟು ರಚನೆಗೆ ತೊಡಗಿದ್ದು. ಕಿಟೆಲ್‌ರು ಕನ್ನಡ ಇಂಗ್ಲಿಷ ನಿಘಂಟು ರಚಿಸುವ ಪೂರ್ವದಲ್ಲಿಯೇ[೮೨] ಬೆಳಗಾವಿಯಲ್ಲಿ ಈ ಕಾರ್ಯ ಜರುಗಿದ್ದು ಒಂದು ವಿಶೇಷವಾಗಿದೆ. ಆಡಳಿತದಲ್ಲಿ ಬಳಕೆಗೊಳ್ಳುವ ಇಂಗ್ಲಿಷ ಪದಗಳಿಗೆ ಪರ್ಯಾಯವಾಗಿ ಕನ್ನಡ ಶಬ್ದಗಳನ್ನು ಹುಡುಕಿ ಅವುಗಳನ್ನು ಪತ್ರಿಕೆಯಲ್ಲಿ ಪ್ರಕಟಗೊಳಿಸುವ ಕಾರ್ಯ ನಡೆಯಿತು.

ಪತ್ರಿಕೆಯು ಬೆಳಗಾವಿಯ ಸರ್ಕಾರೀ ಸರ್ದಾರ ಪ್ರೌಢಶಾಲೆಯಲ್ಲಿ ತನ್ನ ಕಾರ್ಯಾಲಯವನ್ನು ಹೊಂದಿತ್ತು. ಅಲ್ಲದೆ ಒಂದು ಸಂಪಾದಕ ಮಂಡಳಿಯು ರಚನೆಗೊಂಡು ಅವರೆಲ್ಲರೂ ಸರ್ಕಾರದ ಉನ್ನತ ಅಧಿಕಾರವನ್ನು ಹೊಂದಿದವರಾಗಿದ್ದರು. ಈ ಎಲ್ಲ ಅಧಿಕಾರಿಗಳಿಗೆ ಆಡಳಿತ ನಡೆಸುವಾಗ ಉಂಟಾದ ತೊಂದರೆಯೆಂದರೆ ಭಾಷೆ.

ಈ ತೊಂದರೆಯನ್ನು ನಿವಾರಿಸುವುದಕ್ಕಾಗಿಯೇ 'ಕನ್ನಡ ಜ್ಞಾನ ಬೋಧಕ' ಎನ್ನುವ ಪತ್ರಿಕೆಯ ಹುಟ್ಟಿಗೆ ಕಾರಣವಾಗಿದೆಯೆಂಬುದು ಈ ಪತ್ರಿಕೆಯ ಮೊದಲ ಸಂಚಿಕೆಯಿಂದಲೇ ತಿಳಿದು ಬರುತ್ತದೆ.

ಕರ್ನಾಟಕದ ಪತ್ರಿಕಾ ಇತಿಹಾಸದಲ್ಲಿಯೇ ೧೯ನೆಯ ಶತಮಾನದಲ್ಲಿ ನಡೆದ ಈ ಕಾರ್ಯ ಮಹತ್ವದ್ದಾಗಿದೆ. ಇಂತಹ ಒಂದು ಕಾರ್ಯವನ್ನು ಕೈಕೊಂಡ ಮೊದಲ ಪತ್ರಿಕೆ 'ಕನ್ನಡ ಜ್ಞಾನ ಬೋಧಕ'ವಾಗಿದೆ.

ಈ ಪತ್ರಿಕೆಯು ಮರಾಠಿಯಲ್ಲಿಯೂ ಮುದ್ರಣಗೊಳ್ಳುತ್ತಿದ್ದುದು ಮತ್ತೊಂದು ವಿಶೇಷವಾಗಿದೆ. ಬೆಳಗಾವಿ ಭಾಗದಲ್ಲಿ ಕನ್ನಡ, ಮರಾಠಿ ಎರಡೂ ಭಾಷೆಯ ಜನರಿರುವುದರಿಂದ ಎಲ್ಲರಿಗೂ ಆಡಳಿತದ ಜ್ಞಾನ ಅವಶ್ಯವಿರುವುದರಿಂದ ಎರಡೂ ಭಾಷೆಯಲ್ಲಿ ಪತ್ರಿಕೆಯನ್ನು ಪ್ರಕಟಿಸಿರುವ ಸಾಧ್ಯತೆಗಳಿವೆ.

ಪತ್ರಿಕೆಯ ಬೆಲೆಯನ್ನು ಗಮನಿಸಿದಾಗ ಮೂವತ್ತು ಪುಟದ ಪತ್ರಿಕೆಗೆ ಎರಡು ಆಣೆ ತೀರ ಕಡಿಮೆಯೆಂದೇ ಹೇಳಬಹುದು.[೨೩]

**ಬೆಳಗಾಂವ್ ಸಮಾಚಾರ್:** ಕನ್ನಡ ಪತ್ರಿಕಾರಂಗದ ಇತಿಹಾಸದಲ್ಲಿ ಅತ್ಯಂತ ಹಳೆಯ ಪತ್ರಿಕೆಗಳಲ್ಲಿ ಬೆಳಗಾವಿಯಿಂದ ಪ್ರಕಟಗೊಳ್ಳುತ್ತಿರುವ 'ಬೆಳಗಾಂವ್ ಸಮಾಚಾರ್' ಮಹತ್ವದ ಪತ್ರಿಕೆಯಾಗಿದೆ. ಕಳೆದ ೧೫೭ ವರ್ಷಗಳಿಂದ ಸತತವಾಗಿ ಪ್ರಕಟಗೊಳ್ಳುತ್ತಿರುವ ನಾಡಿನ ಏಕೈಕ ಪತ್ರಿಕೆಯಾಗಿದೆ.

೧೮೬೩ರ ಮಾರ್ಚ ತಿಂಗಳಿನಿಂದ ಬೆಳಗಾವಿಯಲ್ಲಿ ಪ್ರಕಟಗೊಂಡ ಈ ಮರಾಠಿ ವಾರಪತ್ರಿಕೆ ಹತ್ತೊಂಬತ್ತು –ಇಪ್ಪತ್ತು–ಇಪ್ಪತ್ತೊಂದು– ಈ ಮೂರು ಶತಮಾನಗಳ ಕೊಂಡಿಯಾಗಿ ಸಾಂಸ್ಕೃತಿಕವಾಗಿ ಮಹತ್ವವನ್ನು ಪಡೆದುಕೊಂಡಿದೆ. ಈ ಪತ್ರಿಕೆಯ ಸಂಸ್ಥಾಪಕ–ಸಂಪಾದಕರು ಭಿಕಾಜಿ ಹರಿಪಂತ ಸಾಮಂತ.[೨೪]

ಸಾಮಾನ್ಯವಾಗಿ ಒಂದು ಪತ್ರಿಕೆ ಮತ್ತೊಂದು ಪತ್ರಿಕೆಯ ಏಳ್ಗೆಯನ್ನು ಸಹಿಸುವುದಿಲ್ಲ. ಅವುಗಳಲ್ಲಿ ಸ್ಥಾನಮಾನ, ಪ್ರಸಾರ, ಲಾಭದ ವಿಷಯಗಳಲ್ಲಿ ಪೈಪೋಟಿ ಇರುತ್ತದೆ. ಆದರೆ 'ಬೆಳಗಾಂವ್ ಸಮಾಚಾರ್' ಪತ್ರಿಕೆಯ ಕಾರ್ಯಗಳನ್ನು ನೋಡಿದಾಗ ಸಂಪಾದಕರ ವಿಶಾಲ ಮನಸ್ಸಿನ ದರ್ಶನವಾಗುತ್ತದೆ. ಅಲ್ಲದೆ ಕಲ್ಲಚ್ಚಿನಲ್ಲಿಯೇ ಅವುಗಳನ್ನು ಸರಿಯಾದ ಸಮಯಕ್ಕೆ ಮುದ್ರಣಗೊಳಿಸುತ್ತಿದ್ದುದು ಮಹತ್ವದ್ದಾಗಿದೆ.

**ಮಠ ಪತ್ರಿಕೆ:** 'ಮಠ ಪತ್ರಿಕೆ'ಯು ಕರ್ನಾಟಕದ ಪತ್ರಿಕಾರಂಗದ ಇತಿಹಾಸದಲ್ಲಿ ಅತ್ಯಂತ ವೈಶಿಷ್ಟ್ಯಮಯವಾಗಿ ಮೂಡಿ ಬಂದ ಮಹತ್ವದ ಪತ್ರಿಕೆಯಾಗಿದೆ. ಕ್ರಿ.ಶ. ೧೮೬೫[೨೫] ರಲ್ಲಿ ಬೆಳಗಾವಿಯಲ್ಲಿ ಹುಟ್ಟಿ ಬಂದ ಈ ಪತ್ರಿಕೆಯು ಕರ್ನಾಟಕದ ಸಾಂಸ್ಕೃತಿಕ, ಸಹಿತ್ಯಿಕ, ಶೈಕ್ಷಣಿಕ ರಂಗದಲ್ಲಿಯ ಮಹತ್ವದ ಬದಲಾವಣೆಗಳಿಗೆ ಕಾರಣವಾಗಿದೆ.

ಬೆಳಗಾವಿಯ ನಾರ್ಮಲ್ ಸ್ಕೂಲಿನ ಪ್ರಿನ್ಸಿಪಾಲರಾಗಿದ್ದ ಡೆಪ್ಯೂಟಿ ಚನ್ನಬಸಪ್ಪನವರು.ದಿನಾಂಕ:೧-೫-೧೮೬೫ ರಂದು ಈ ಪತ್ರಿಕೆಯನ್ನು ಪ್ರಾರಂಭಿಸಿದರು. ನಾರ್ಮಲ್ ಸ್ಕೂಲ ಕ್ರಿ. ಶ. ೧೮೫೬ ರಲ್ಲಿ ಧಾರವಾಡದಲ್ಲಿ ಪ್ರಾರಂಭಗೊಂಡಿತು. ಆಗ ಡೆಪ್ಯೂಟಿ ಚನ್ನಬಸಪ್ಪನವರು ಅದರ ಮುಖ್ಯಸ್ಥರಾಗಿದ್ದರು. ಆದರೆ ಸಾಕಷ್ಟು ವಿದ್ಯಾರ್ಥಿಗಳು ಬರಲಿಲ್ಲ ಎಂಬ ಕಾರಣದಿಂದ ಅದನ್ನು ಕ್ರಿಶ. ೧೮೬೧ ರಲ್ಲಿ ಬೆಳಗಾವಿಗೆ ಸ್ಥಳಾಂತರಿಸಲಾಯಿತು.[೬] ಆದರೆ ಮುಂದೆ ಕ್ರಿಶ. ೧೮೭೫ ರಲ್ಲಿ ಮರಳಿ ಧಾರವಾಡಕ್ಕೆ ಸ್ಥಾನಾಂತರಗೊಂಡಿತು.[೭] ಅಂದರೆ ಮಠ ಪತ್ರಿಕೆ (೧೮೬೧ ರಿಂದ ೧೮೭೫) ಹದಿನೈದು ವರ್ಷಗಳವರೆಗೆ ಬೆಳಗಾವಿಯಲ್ಲಿ ನಿರಂತರವಾಗಿ ನಡೆದು ಹಲವಾರು ಮಹತ್ವದ ಕೊಡುಗೆಗಳನ್ನು ನೀಡಿತು.

'ಮಠ' ಪತ್ರಿಕೆಯ ಹೆಸರು ಔಚಿತ್ಯಪೂರ್ಣವಾಗಿದೆ. ಅಂದಿನ ದಿನಗಳಲ್ಲಿ ಶಿಕ್ಷಣವು ಮಠಗಳಲ್ಲಿಯೇ ನಡೆಯುತ್ತಿತ್ತು. ಇವುಗಳಿಗೆ ಸಾಲಿಮಠ ಎಂದೇ ಅನ್ವರ್ಥನಾಮವಿತ್ತು (ಡೆ.ಚನ್ನಬಸಪ್ಪನವರ ವಿದ್ಯಾಭ್ಯಾಸವು ಧಾರವಾಡದಲ್ಲಿ ಸಾಲಿಮಠದಲ್ಲಿಯೇ ನಡೆದದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು) ಹೀಗಾಗಿ ಮಠ ಎಂದರೆ ಶಾಲೆ ಎನ್ನುವ ಅರ್ಥದಲ್ಲಿ ಪತ್ರಿಕೆಗೆ ಈ ಹೆಸರನ್ನು ಇಟ್ಟಿದ್ದಾರೆ. ಆದರೆ ಪತ್ರಿಕೆಯ ಹೆಸರು ಮುಂದೆ ಹಲವಾರು ಬಾರಿ ಬದಲಾವಣೆಗೊಂಡಿತು. ೧೮೬೭ ರಲ್ಲಿ 'ಶಾಲಾ ಪತ್ರಕ' ಎಂದು, ೧೮೭೧ ರಲ್ಲಿ 'ಕನ್ನಡ ಶಾಲಾ ಪತ್ರಿಕೆ' ಯಾಗಿ ಈಗ ೧೯೨೧ ರಿಂದ ಧಾರವಾಡದಿಂದ 'ಜೀವನ ಶಿಕ್ಷಣ' ಎನ್ನುವ ಹೆಸರಿನಿಂದ ಪ್ರಕಟಗೊಳ್ಳುತ್ತಿದೆ.

ಈ ಪತ್ರಿಕೆಯು ೧೯, ೨೦, ೨೧ ಈ ಮೂರು ಶತಮಾನಗಳ ಶೈಕ್ಷಣಿಕ, ಸಾಹಿತ್ಯಿಕ, ಭಾಷಿಕ, ಸಾಮಾಜಿಕ, ಸಾಂಸ್ಕೃತಿಕ ಇತಿಹಾಸವನ್ನು ದಾಖಲೀಕರಿಸಿಕೊಂಡ ಮಹತ್ವದ ಪತ್ರಿಕೆಯಾಗಿದೆ. ಮೂರು ಶತಮಾನಗಳನ್ನು ಕಂಡ ನಾಡಿನ ಏಕೈಕ ಕನ್ನಡ ಪತ್ರಿಕೆ ಇದಾಗಿದೆ.

ಮಠ ಪತ್ರಿಕೆಯ ಮೊದಲ ಸಂಚಿಕೆಯ ಪೀಠಿಕೆಯಲ್ಲಿ ಪತ್ರಿಕೆಯ ಪ್ರಾರಂಭಕ್ಕೆ ಕಾರಣವಾದ ಸಂದರ್ಭವನ್ನು ತಿಳಿಸಿಕೊಡಲಾಗಿದೆ. ಅಲ್ಲದೆ ಆಗಿನ ಕಾಲದಲ್ಲಿ ಪತ್ರಿಕೆಯನ್ನು ಪ್ರಾರಂಭಿಸಲು ಇರುವ ತೊಂದರೆಗಳನ್ನು ತಿಳಿದುಕೊಳ್ಳಲು ನೆರವಾಗಿದೆ. ಈ ಪೀಠಿಕೆಯಲ್ಲಿ ಆಗಿನ ಕೆಲವು ಪತ್ರಿಕೆಗಳ ಹೆಸರುಗಳ ಉಲ್ಲೇಖವೂ ಕಂಡುಬರುತ್ತದೆ.ಅಂದು ಬೆಳಗಾವಿಯಲ್ಲಿ 'ಕನ್ನಡ ಜ್ಞಾನ ಬೋಧಕ', 'ವಿಚಿತ್ರ ವರ್ತಮಾನ ಸಂಗ್ರಹ' ವೆಂಬ ಪತ್ರಿಕೆಗಳು ಆರ್ಥಿಕ ತೊಂದರೆಯಿಂದ ಸಂಕಷ್ಟದಲ್ಲಿದ್ದವು ಎನ್ನುವುದು ಇದರಿಂದಲೇ ತಿಳಿದುಬರುತ್ತದೆ.

ಡೆಪ್ಯೂಟಿ ಚನ್ನಬಸಪ್ಪನವರು ಬೆಳಗಾವಿಯ ಟ್ರೇನಿಂಗ್ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಸಂದರ್ಭದಲ್ಲಿ ಪತ್ರಿಕೆಯ ಸಂಪಾದಕರು ಚನ್ನಬಸಪ್ಪನವರೇ ಆಗಿದ್ದರು. ಟ್ರೇನಿಂಗ್ ಕಾಲೇಜಿನ ಪ್ರಿನ್ಸಿಪಾಲರುಗಳೇ 'ಮಠ ಪತ್ರಿಕೆ'ಯ ಸಂಪಾದಕರಾಗುವುದನ್ನು ಇವತ್ತಿನವರೆಗೂ ಅನುಸರಿಸಿಕೊಂಡು ಬರಲಾಗುತ್ತಿದೆ.

ಪತ್ರಿಕೆಯು ಆಗ ಬೆಳಗಾವಿಯಲ್ಲಿದ್ದ 'ಸಮಾಚಾರ' ಎಂಬ ಕಲ್ಲಚ್ಚಿನ ಮುದ್ರಣಾಲಯದಲ್ಲಿ ಮುದ್ರಣಗೊಳ್ಳುತ್ತಿತ್ತು.[೮೮] ಮೊದಲಿನ ಆರು ವರ್ಷಗಳ ಕಾಲ ಶಿಲಾ ಮುದ್ರಣ ಪದ್ಧತಿಯಂತೆ (ಲಿಥೋಗ್ರಾಫ್ ಪ್ರಿಂಟಿಂಗ್) ಅಚ್ಚಾಗುತ್ತಿತ್ತು. ಮುಂದೆ ಮೊಳೆಗಳಿಂದ ಅಕ್ಷರ ಜೋಡಣೆ ಮುದ್ರಣದ ವ್ಯವಸ್ಥೆ ಬಂದು ಮೊಳೆಗಳ ಮುದ್ರಣದಲ್ಲಿ ಮುದ್ರಣವಾಗತೊಡಗಿತು. ಡಾ. ಬಾಳಣ್ಣ ಶೀಗೀಹಳ್ಳಿಯವರು 'ಮತ ಪತ್ರಿಕೆಯು ಸ್ಥಗಿತಗೊಂಡಿದ್ದ ಒಂದು ಸಾಮಾಜಿಕ ಸಂದರ್ಭಕ್ಕೆ ಹೊಸ ಅಲೆ ಮೂಡಿಸಿದ ಸಾಂಸ್ಕೃತಿಕ ಗಂಗೋತ್ರಿಯಾಗಿದೆ. ಪತಗೊಳ್ಳಲಿದ್ದ ಒಂದು ಜನಾಂಗದ ಬದುಕನ್ನೇ ಕಟ್ಟಿ ನಿಲ್ಲಿಸಿದ ಪತ್ರಿಕೆ. ಸರಕಾರದ ಸಹಾಯವಿಲ್ಲದೆ ಪುಡಿ ಕಾಸಿನ ಜಾಹಿರಾತುಗಳಿಲ್ಲದೆ ಕೇವಲ ಶಿಕ್ಷಕ ಬಂಧುಗಳ ಅಂತಃಕರಣವನ್ನೇ ಆಶ್ರಯಿಸಿ ಬೆಳೆದ ಕನ್ನಡ ನಾಡಿನ ಏಕೈಕ ಶೈಕ್ಷಣಿಕ ಪತ್ರಿಕೆಯಾಗಿದೆ" ಎಂದು ಅಭಿಪ್ರಾಯಪಟ್ಟಿದ್ದಾರೆ.[೮೯]

ಮತ ಪತ್ರಿಕೆಯು ಆರಂಭದಲ್ಲಿ ಡೆಮಿ ೧/೮ ಅಕಾರದ ಸುಮಾರು ೪೦ ಪುಟಗಳಲ್ಲಿ ಹೊರಬರುತ್ತಿತ್ತು. (ಈಗ ಕ್ರೌನ ಆಕಾರದಲ್ಲಿ ಹೊರಬರುತ್ತಿದೆ) ಬಿಡಿ ಪತ್ರಿಕೆಯ ಆಗಿನ ಬೆಲೆ : ಅರ್ಧ ಆಣೆಯಿಂದ ೨ ರೂ.ಗಳಿಗೆ ಏರಿತು. ಶಿಕ್ಷಕರಿಗೆ ಅಗತ್ಯ ಮಾರ್ಗದರ್ಶನ, ಆದರ್ಶ ಶಿಕ್ಷಕರ ಪರಿಚಯ, ಶೈಕ್ಷಣಿಕ ಕಾರ್ಯಕ್ರಮಗಳ ವರದಿ, ಶಿಕ್ಷಣ ನೀತಿ, ಸಂಬಂಧಿತ ವೈಚಾರಿಕ ಬರಹಗಳು ಇದರಲ್ಲಿ ಪ್ರಕಟವಾಗುತ್ತಿದ್ದವು.

**ಶೋಧಕ :** ೧೮೭೫ ರಲ್ಲಿ ವೆಂಕಟರಂಗೋ ಕಟ್ಟಿಯವರು ಬೆಳಗಾವಿಯಲ್ಲಿ ಪ್ರಾರಂಭಿಸಿದ ಶೋಧಕ ಪತ್ರಿಕೆಯು ಕೆಲವು ವರ್ಷ ಸಾಗಿ ನಿಂತಿತು.[೯೦] ಈ ಪತ್ರಿಕೆಯ ವಿಶೇಷತೆಯೆಂದರೆ ಜ್ಞಾನಾಭಿವೃದ್ಧಿಯನ್ನೇ ಮುಖ್ಯ ಉದ್ದೇಶವನ್ನಾಗಿಟ್ಟುಕೊಂಡು ಪತ್ರಿಕೆಯನ್ನು ಪ್ರಾರಂಭಿಸಿದ್ದು. ಪತ್ರಿಕೆಯ ಪ್ರಥಮ ಸಂಪಾದಕೀಯದಲ್ಲಿ ಕಟ್ಟಿ ಅವರು ಬರೆದ ಮಾತುಗಳು ಪ್ರಸ್ತುತ ಸಂದರ್ಭದಲ್ಲಿ ಗಮನಸೆಳೆಯುತ್ತವೆ. ಕನ್ನಡ-ಮರಾಠಿ ನಿಲುಮೆಯನ್ನು ತಿಳಿಸುವುದರ ಜೊತೆಗೆ ಅಂದಿನ ಮುಂಬಯಿ ಕರ್ನಾಟಕದ ಸ್ಥಿತಿಗತಿಯ ಮಾರ್ಮಿಕ ಚಿತ್ರಣವನ್ನು ಚಿತ್ರಿಸಿದ್ದಾರೆ. ಈ ಪತ್ರಿಕೆಯು ಕಲ್ಲಚ್ಚಿನಲ್ಲಿ ಮುದ್ರಣಗೊಳ್ಳುತ್ತಿತ್ತು.

ಮುಂದೆ ೧೮೭೫ ರಿಂದ ೧೯೨೯ ರವರೆಗೆ ಸಂಯುಕ್ತ ಕರ್ನಾಟಕ ಪತ್ರಿಕೆ ಪ್ರಾರಂಭಗೊಳ್ಳುವವರೆಗೆ ಬೆಳಗಾವಿಯಲ್ಲಿ ಹಲವಾರು ಪತ್ರಿಕೆಗಳು ಹುಟ್ಟಿ ಕೆಲವು ವರ್ಷ ನಡೆದು ನಿಂತವು.[೯೧] ಅವುಗಳಲ್ಲಿ ಮುಖ್ಯವಾದವುಗಳೆಂದರೆ ೧೮೭೬ ರಲ್ಲಿ 'ವಾಣಿ ವಿಲಾಸ' ಮಾಸ ಪತ್ರಿಕೆ ಒಂದು ವರ್ಷ ನಡೆಯಿತು. ೧೮೮೦ ರಲ್ಲಿ 'ಕರ್ನಾಟಕ ಪುತ್ರ' ವಾರ ಪತ್ರಿಕೆ ಆರಂಭವಾಗಿ ಕೆಲ ವರ್ಷ ಪ್ರಕಟವಾಯಿತು. ೧೮೮೦ ರಲ್ಲಿಯೇ 'ಜ್ಞಾನ ಬೋಧಕ' ವಾರ ಪತ್ರಿಕೆ ಪ್ರತಿ ರವಿವಾರ ಪ್ರಕಟಗೊಳ್ಳುತ್ತಿತ್ತು. ೧೮೮೨ ರಲ್ಲಿ ರಸಿಕ ರಂಜನ ವಾರ ಪತ್ರಿಕೆ ಕೆಲವೇ ದಿನಗಳಲ್ಲಿ ನಿಂತು ಹೋಯಿತು. ೧೮೮೫ ರಲ್ಲಿ ಕರ್ನಾಟಕ ಹಿತೇಚ್ಛು, 'ದಕ್ಷಿಣ ಮಿತ್ರ' ಎಂಬ ಕನ್ನಡ ಪತ್ರಿಕೆಗಳು ಮತ್ತು 'ಚಿಕಿತ್ಸಕ್' ಎನ್ನುವ ಮರಾಠಿ ವಾರ ಪತ್ರಿಕೆ ಆರಂಭವಾದವು. 'ಚಿಕಿತ್ಸಕ್' ವು ಆಬಾಜಿ ರಾಮಚಂದ್ರ ಸಾವಂತರಿಂದ ಪ್ರಾರಂಭವಾಗಿ ಸುಮಾರು ೧೯೨೪ ರವರೆಗೆ ಅಂದರೆ ಸುಮಾರು ೪೦ ವರ್ಷಕಾಲ ನಡೆಯಿತು.[೯೨]

೧೮೮೬ ರಲ್ಲಿ 'ಸ್ವದೇಶ ಬಂಧು', 'ಕೇತಕಿ' ಎಂಬ ವಾರ ಪತ್ರಿಕೆಗಳು ಪ್ರಕಟಗೊಂಡವು. ೧೮೮೮ ರಲ್ಲಿ 'ವನಪ್ರಿಯ' ಎಂಬ ಮಾಸ ಪತ್ರಿಕೆಯು ಹೊರ ಬಂದಿತು. ೧೮೮೬ ರಲ್ಲಿ 'ಸ್ವದೇಶ ಬಂಧು' ವಾರಪತ್ರಿಕೆ ಪ್ರಾರಂಭಗೊಂಡ ೧೮೯೩ರ ವರೆಗೆ ಸುಮಾರು ಏಳು ವರ್ಷ ನಡೆಯಿತು.

೧೮೮೮ ರಲ್ಲಿ 'ವಿದ್ಯಾಸಾಗರ' ಪತ್ರಿಕೆ ೧೮೯೩-೯೪ ರಲ್ಲಿ 'ಲೋಕ ಮಿತ್ರ' 'ಖಂಡೇಶ ಮಿತ್ರ,' 'ಭಾರತ ಮಿತ್ರ' 'ಪೂರ್ಣಕಾಲೆಂದು ಶೇಖರ' 'ಆರ್ಯುವೈದ್ಯಕದರ್ಶಕ' ಪತ್ರಿಕೆಗಳು ಪ್ರಾರಂಭವಾಗಿ ಅಲ್ಪಕಾಲದಲ್ಲಿಯೇ ನಿಂತುಕೊಂಡವು.

೧೮೯೫ ರಲ್ಲಿ 'ಮಧು ಮಕ್ಷಿಕಾ' 'ಕಲಾ ಹಂಸ' ಎಂಬ ಮಾಸ ಪತ್ರಿಕೆಗಳು ಕ್ರಮವಾಗಿ ವೈದ್ಯಕೀಯ ಹಾಗೂ ಕಲಾ ವಿಭಾಗಕ್ಕೆ ಸಂಬಂಧಪಟ್ಟವುಗಳಾಗಿದ್ದವು. ೧೮೯೬ ರಲ್ಲಿ 'ದೇಶಮಿತ್ರ', 'ನಾನಾಲಹರಿ' ಪತ್ರಿಕೆಗಳು ಪ್ರಕಟವಾದವು. ೧೮೯೭ ರಲ್ಲಿ ಗಂಗಾಧರರಾವ್ ದೇಶಪಾಂಡೆಯವರ ಸಂಪಾದಕತ್ವದಲ್ಲಿ 'ಧುರೀಣ', 'ಭರತ ಖಂಡ' ಮಾಸ ಪತ್ರಿಕೆಗಳು ಪ್ರಕಟಗೊಂಡವು.

ಹೀಗೆ ೧೮೪೯ ರ 'ಸುಬುದ್ಧಿ ಪ್ರಕಾಸ' ಪತ್ರಿಕೆ ಪ್ರಾರಂಭಗೊಂಡು ೧೯೦೦ ರವರೆಗಿನ ಅರ್ಧ ಶತಮಾನದ ಕಾಲಾವಧಿಯಲ್ಲಿ ಸುಮಾರು ೩೦-೩೫ ಪತ್ರಿಕೆಗಳು ಬೆಳಗಾವಿಯಿಂದ ಪ್ರಕಟಗೊಳ್ಳುತ್ತಿದ್ದವು. ಇವುಗಳಲ್ಲಿ ಹೆಚ್ಚಿನ ಪತ್ರಿಕೆಗಳು ಹೆಚ್ಚು ಕಾಲ ಬಾಳದೆ ಕೆಲವು ತಿಂಗಳು, ವರ್ಷಗಳಲ್ಲಿ ಸ್ಥಗಿತಗೊಳ್ಳುತ್ತಿದ್ದವು. ಹೀಗೆ ಅಲ್ಪಕಾಲದಲ್ಲಿಯೇ ಪತ್ರಿಕೆಗಳು ಸ್ಥಗಿತಗೊಳ್ಳಲು ಮುಖ್ಯ ಕಾರಣ ಪತ್ರಿಕೆಗಳನ್ನು ಕೊಂಡು ಓದುವ ಪ್ರವೃತ್ತಿ ಕನ್ನಡಿಗರಲ್ಲಿ ಬೆಳೆಯಲಿಲ್ಲ. ಅದರಲ್ಲಿಯೂ ಮರಾಠಿ ಪ್ರಭಾವದಲ್ಲಿ ಈ ಪತ್ರಿಕೆಗಳು ಕನ್ನಡಿಗರನ್ನು ಆಕರ್ಷಿಸಲು ವಿಫಲವಾದವು. ಇದರಿಂದ ಆರ್ಥಿಕ ಬಿಕ್ಕಟ್ಟು ಪತ್ರಿಕೆಗಳಿಗೆ ಎದುರಾಯಿತು. ಈ ಎಲ್ಲ ಕಾರಣಗಳಿಂದ ಪತ್ರಿಕೆಗಳು ಹುಟ್ಟಿಕೊಂಡು ಕೆಲವು ದಿನಗಳಲ್ಲಿಯೇ ಸ್ಥಗಿತಗೊಳ್ಳತೊಡಗಿದವು. ಆದರೂ ಪತ್ರಿಕೆಗಳು ದಿನದಿಂದ ದಿನಕ್ಕೆ ಹೆಚ್ಚಾಗುತ್ತಲೇ ಸಾಗಿದವು. ಇದಕ್ಕೆ ಮುಖ್ಯವಾದ ಕಾರಣವೆಂದರೆ ಪತ್ರಿಕೆಗಳನ್ನು ನಡೆಸುವುದು ಒಂದು ಪ್ರತಿಷ್ಠೆಯ ವಿಷಯವಾಗಿತ್ತು. ಅದೊಂದು ಲಾಭದಾಯಕ ಉದ್ಯೋಗವೆಂದು ಕೆಲವರು ತಿಳಿದುಕೊಂಡಿದ್ದರು. ಹೀಗಾಗಿ ನಿರ್ದಿಷ್ಟವಾದ ಗೊತ್ತು ಗುರಿಗಳಿಲ್ಲದೆ ಪತ್ರಿಕೆಯ ಜ್ಞಾನವಿಲ್ಲದೆ ಪ್ರಾರಂಭಗೊಂಡ ಪತ್ರಿಕೆಗಳು ಬೇಗ ಅಂತ್ಯಕಂಡವು. ಇನ್ನು ಕೆಲವು ಪತ್ರಿಕೆಗಳ ಸಂಪಾದರು ಬೇರೆ ಬೇರೆ ಉದ್ಯೋಗಗಳಲ್ಲಿ ತೊಡಗಿ ನಡೆಸಲು ಸಾಧ್ಯವಾಗದೆ ಮುಚ್ಚುವ ನಿರ್ಧಾರ ಕೈಕೊಂಡರು. ಒಟ್ಟಿನಲ್ಲಿ ಅಂದಿನ ಪತ್ರಿಕೆಗಳು ಪ್ರಾರಂಭಗೊಂಡಿದ್ದೇ ಅತ್ಯಂತ ಮಹತ್ವದ ವಿಷಯವಾಗಿದೆ. ಯಾವುದೇ ಸೌಕರ್ಯ, ಸೌಲಭ್ಯ ಜ್ಞಾನವಿಲ್ಲದ ಅಂದಿನ ದಿನಗಳಲ್ಲಿ ಕೆಲವು ವರ್ಷಗಳ ಮಟ್ಟಿಗಾದರೂ ನಡೆಸಿ ಮಹತ್ವದ ಬದಲಾವಣೆಗೆ ಸಂಪಾದಕರು ಕಾರಣರಾಗಿದ್ದಾರೆ. ಕೆಲವೇ ಕೆಲವು ಓದುಗ ವರ್ಗವನ್ನು ಹೊಂದಿದ್ದರೂ ಅಷ್ಟು ಜನರಿಗಾದರೂ ಕನ್ನಡ ಭಾಷೆ,

ಸಾಹಿತ್ಯ, ಕಲೆ, ಸಂಸ್ಕೃತಿಯ ಪರಿಚಯವನ್ನು ಮಾಡಿಸಿರುವರು. ಇದರಿಂದಲೇ ಬೆಳಗಾವಿಯಲ್ಲಿ ಕನ್ನಡ ಜೀವಂತವಾಗಿ ಉಳಿದುಕೊಂಡು ಬಂದಿದೆ ಎಂದರೂ ತಪ್ಪಾಗಲಾರದು. ಹೊಸ ಶತಮಾನದ ಮೊಟ್ಟ ಮೊದಲ ಪತ್ರಿಕೆಯಾಗಿ 'ಜಿನವಿಜಯ' ಎಂಬ ಮರಾಠಿ ಮಾಸ ಪತ್ರಿಕೆ ಪ್ರಾರಂಭಗೊಂಡಿತು. ೧೯೦೨ ರಲ್ಲಿ ಬೆಳಗಾವಿಯಲ್ಲಿ ಅಣ್ಣಾ ಬಾಬಾಜಿ ಲಠ್ಠೆ ಎನ್ನುವವರು ಈ ಪತ್ರಿಕೆಯನ್ನು ಪ್ರಾರಂಭಿಸಿದರು. ಪ್ರಾರಂಭದ ಕೆಲವು ಸಂಚಿಕೆಗಳು ಮಹಾರಾಷ್ಟ್ರದ ಕುರಂದವಾಡದಲ್ಲಿ ಮುದ್ರಣಗೊಂಡು ೧೯೦೭ ರಿಂದ ಬೆಳಗಾವಿಯ ಮಹಾವೀರ ಪ್ರೆಸ್‌ನಲ್ಲಿ ಮುದ್ರಣಗೊಳ್ಳತೊಡಗಿತು. ೧೯೧೨ ರಲ್ಲಿ ಈ ಪತ್ರಿಕೆಯ ಹೆಸರನ್ನು 'ಪ್ರಗತಿಜಿನವಿಜಯ'ವೆಂದು ಬದಲಾಯಿಸಲಾಯಿತು. ಮುಂದೆ ೧೯೫೦ ರಲ್ಲಿ ಈ ಪತ್ರಿಕೆಯನ್ನು ಮಹಾರಾಷ್ಟ್ರದ ಸಾಂಗಲಿಗೆ ಸ್ಥಳಾಂತರಿಸಲಾಯಿತು.

೧೯೦೫ ರಲ್ಲಿ ಎಂ. ಪಿ. ಚೌಗಲೆಯವರ ಸಂಪಾದಕತ್ವದಲ್ಲಿ 'ಜಿನವಿಜಯ' ಎಂಬ ಕನ್ನಡ ಮಾಸಪತ್ರಿಕೆ ಬೆಳಗಾವಿಯಿಂದ ಪ್ರಕಟವಾಗತೊಡಗಿತು. ಮಹಾವೀರ ಪ್ರಿಂಟಿಂಗ್ ಪ್ರೆಸ್ಸಿನಲ್ಲಿ ಮುದ್ರಣಗೊಂಡು ದಕ್ಷಿಣ ಮಹಾರಾಷ್ಟ್ರ ಜೈನ್ ಸಭಾದ ಆಶ್ರಯದಲ್ಲಿ ಹೊರಬರುತ್ತಿತ್ತು. ಕನ್ನಡ ಮತ್ತು ಮರಾಠಿ ಭಾಷೆಯ 'ಜಿನವಿಜಯ' ಪತ್ರಿಕೆಗಳು ಜೈನಧರ್ಮದ ಪ್ರಸಾರವನ್ನೇ ಮುಖ್ಯ ಉದ್ದೇಶವಾಗಿಟ್ಟುಕೊಂಡು ಜೈನ ಧರ್ಮಿಯರಲ್ಲೇ ವ್ಯಾಪಕ ಪ್ರಸಾರವನ್ನು ಹೊಂದಿದ್ದವು.

೧೯೧೧ ರಲ್ಲಿ ಬೆಳಗಾವಿಯಲ್ಲಿ ಕೃಷಿ ವಿಷಯಕ್ಕೆ ಸಂಬಂಧಪಟ್ಟ ಮಾಸ ಪತ್ರಿಕೆಯೊಂದು ಪ್ರಕಟಣೆಯನ್ನು ಆರಂಭಿಸಿತು. ಮಲ್ಹಾರ ಲಿಂಗೋ ಕುಲಕರ್ಣಿಯೆನ್ನುವವರು'ವೊಕ್ಕಲಿಗರೂ ವೊಕ್ಕಲುತನವೂ' ಎಂಬ ಹೆಸರಿನ ಪತ್ರಿಕೆಯನ್ನು ಪ್ರಾರಂಭಿಸಿದರು. ೧೯೨೪ ರವರೆಗೆ ಸಾಗಿ ಬಂದ ಈ ಪತ್ರಿಕೆಯ ಪ್ರಸಾರವು ಹೆಚ್ಚಾಗಿ ಗ್ರಾಮೀಣ ಪ್ರದೇಶದಲ್ಲಾಗುತ್ತಿತ್ತು.

೧೯೧೫ ರಲ್ಲಿ ಪಂಡಿತಪ್ಪಾ ಚಿಕ್ಕೋಡಿಯವರ ಸಂಪಾದಕತ್ವದಲ್ಲಿ 'ವಿಭಾಕರ' ಎನ್ನುವ ಪತ್ರಿಕೆ ಕನ್ನಡ ಮತ್ತು ಇಂಗ್ಲಿಷ ಭಾಷೆಗಳೆರಡರಲ್ಲೂ ಪ್ರಕಟಗೊಂಡಿತು. ಮಧ್ಯದಲ್ಲಿ ಸ್ಥಗಿತಗೊಂಡು ಮತ್ತೆ ೧೯೨೧ ರಿಂದ ೧೯೨೪ ರವರೆಗೆ ಈ ಪತ್ರಿಕೆ ನಡೆಯಿತು.

೧೯೧೮ ರಲ್ಲಿ 'ಪ್ರಬೋಧ' ಎಂಬ ಮಾಸ ಪತ್ರಿಕೆಯನ್ನು ಶಿಕ್ಷಣ ತಜ್ಞ ಬಿ.ಬಿ. ಮಮದಾಪುರರು ಪ್ರಾರಂಭಿಸಿದರು. ಅದೂ ಕೆಲಕಾಲ ನಡೆದು ನಿಂತಿತು. ಮುಂದೆ ೧೯೧೯ ರಲ್ಲಿ ಎಸ್. ಎಸ್. ಪೇಟಕರ್ ಸಂಪಾದಕತ್ವದಲ್ಲಿ 'ಜ್ಞಾನಾಂಜನ' ಕೆಲವು ಕಾಲವಿದ್ದು ನಿಂತಿತು. ೧೯೧೯ ರಲ್ಲಿ 'ಗೋ ಸೇವಕ' ವಾರ ಪತ್ರಿಕೆಯ ಮೂಲಕ ಪತ್ರಿಕಾರಂಗ ಪ್ರವೇಶಿಸಿದ ಗೋಪಾಳರಾವ್ ದೇಶಪಾಂಡೆ ಬೆಳಗಾವಿ ಜಿಲ್ಲೆಯ ಪತ್ರಿಕಾರಂಗದಲ್ಲಿ ಒಂದು ಪ್ರಮುಖವಾದ ಹೆಸರು. ಈ

ಪತ್ರಿಕೆಯಲ್ಲಿ ಕನ್ನಡ ಮತ್ತು ಮರಾಠಿ ಎರಡೂ ಭಾಷೆಯಲ್ಲಿ ಸುದ್ದಿ-ಲೇಖನಗಳನ್ನು ಪ್ರಕಟಿಸುತ್ತಿದ್ದರು. ಆದರೆ ಈ ಪತ್ರಿಕೆಯೂ ಹೆಚ್ಚು ಕಾಲ ನಡೆಯಲಿಲ್ಲ. ಮುಂದೆ ೧೯೩೮ ರಲ್ಲಿ 'ಸಂದೇಶ' ಎಂಬ ಹೆಸರಿನ ವಾರ ಪತ್ರಿಕೆಯನ್ನು ಪ್ರಾರಂಭಿಸಿದರು. ಈ ಪತ್ರಿಕೆ ಇಂದಿಗೂ ಪ್ರಕಟಗೊಳ್ಳುತ್ತಿದೆ. ಬೆಳಗಾವಿಯ ಹಳೆಯ ಪತ್ರಿಕೆಗಳಲ್ಲಿ ಇದೂ ಒಂದಾಗಿದೆ. ಈಗ ಗೋಪಾಳರಾವ್‌ರ ಪುತ್ರ ಅರವಿಂದ ದೇಶಪಾಂಡೆಯವರು ದ್ವಿವಾರ ಪತ್ರಿಕೆಯಾಗಿ ಮುಂದುವರಿಸಿಕೊಂಡು ಬಂದಿದ್ದಾರೆ.

ಬೆಳಗಾವಿಯಿಂದ ಇದುವರೆಗೆ ಪ್ರಕಟಗೊಂಡ ಪತ್ರಿಕೆಗಳೆಲ್ಲ ವಾರ ಪತ್ರಿಕೆ ಮಾಸ ಪತ್ರಿಕೆಗಳೇ ಆಗಿದ್ದವು. ಆದರೆ ದಿನಪತ್ರಿಕೆಯ ಪ್ರಯತ್ನವೂ ೧೯೧೯ ರ ಸುಮಾರಿಗೆ ಮೊಟ್ಟ ಮೊದಲನೆಯದಾಗಿ ಬೆಳಗಾವಿಯಲ್ಲಿ ನಡೆಯಿತು. ಡಾ. ಹನುಮಂತರಾವ್ ಸವಣೂರ ಹಾಗೂ ಎಚ್ ನಾರಾಯಣರಾವ್‌ರ ಸಂಪಾದಕತ್ವದಲ್ಲಿ 'ಕರ್ನಾಟಕ ಮಿತ್ರ' ಎಂಬ ದಿನಪತ್ರಿಕೆ ಪ್ರಕಟಗೊಂಡಿತು. ಕನ್ನಡ, ಮರಾಠಿ ಎರಡೂ ಭಾಷೆಗಳಲ್ಲಿ ಸುದ್ದಿಗಳನ್ನು ಒದಗಿಸುತ್ತಿತ್ತು. ಆದರೆ ಹೆಚ್ಚು ಕಾಲ ಇದು ನಡೆಯಲಿಲ್ಲ.

೧೯೨೦ ರ ನಂತರ ದೇಶದಲ್ಲಿ ಸ್ವಾತಂತ್ರ್ಯ ಹೋರಾಟ ತೀವ್ರಗೊಂಡ ಸಂದರ್ಭದಲ್ಲಿ ಕೆಲವು ಪತ್ರಿಕೆಗಳು ರಾಷ್ಟ್ರೀಯ ಜಾಗ್ರತಿಯನ್ನುಂಟು ಮಾಡಲು ಪ್ರಯತ್ನಿಸಿದವು. ಅವುಗಳಲ್ಲಿ ನವನೀತ, ಮಾತೃಭೂಮಿ, ರಾಷ್ಟ್ರವೀರ, ಕರ್ನಾಟಕ ಮಿತ್ರ ಮುಂತಾದ ಪತ್ರಿಕೆಗಳು ರಾಜಕೀಯ ಹಾಗೂ ರಾಷ್ಟ್ರೀಯ ವಿಚಾರ ಧೋರಣೆಗೆ ಒತ್ತು ನೀಡಿದವು.

೧೯೨೦ ರಲ್ಲಿ ಬೆಟಗೇರಿ ಕೃಷ್ಣಶರ್ಮರ ಸಂಪಾದಕತ್ವದಲ್ಲಿ ಆರಂಭಗೊಂಡ 'ನವನೀತ' ಮಾಸಪತ್ರಿಕೆಯು ನಾಲ್ಕಾರು ತಿಂಗಳು ಪ್ರಕಟವಾಗಿ ನಿಂತು ಹೋಯಿತು. ಮುಖ್ಯವಾಗಿ ಇದು ಸಾಹಿತ್ಯಿಕ ಪತ್ರಿಕೆಯೆನಿಸಿತ್ತು. ದೇಶದಲ್ಲಿ ಅಸಹಕಾರ ಆಂದೋಲನ ಪ್ರಬಲಗೊಂಡಾಗ ನವನೀತದ ಹೆಸರು ಬದಲಾಗಿ 'ಮಾತೃಭೂಮಿ' ಎಂಬ ಹೆಸರಿನಿಂದ ಪ್ರಕಟಗೊಳ್ಳತೊಡಗಿತು. ಬೆಟಗೇರಿ ಕೃಷ್ಣಶರ್ಮ ಹಾಗೂ ಆರ್.ಬಿ. ಕುಲಕರ್ಣಿ ಸಂಪಾದಕರಾಗಿ ಕಾರ್ಯನಿರ್ವಹಿಸಿದರು. ರಾಷ್ಟ್ರೀಯ ವಿಚಾರಧಾರೆಯ ಈ ದಿನಪತ್ರಿಕೆಯೂ ಬಹಳ ಕಾಲ ನಡೆಯಲಿಲ್ಲ. ೧೯೨೧ ರಲ್ಲಿ 'ರಾಷ್ಟ್ರವೀರ' ಎಂಬ ಮರಾಠಿ ವಾರ ಪತ್ರಿಕೆಯು ಶಾಹು ಮಹಾರಾಜರ ಪ್ರೇರಣೆಯೊಂದಿಗೆ ಬೆಳಗಾವಿಯಲ್ಲಿ ಪ್ರಾರಂಭಗೊಂಡಿತು. ಬಹುಜನ ಸಮಾಜದ ಜಾಗ್ರತಿಯ ಉದ್ದೇಶದೊಡನೆ ಶಾಮರಾವ್ ಭೋಸಲೆಯವರ ಸಂಪಾದಕತ್ವದಲ್ಲಿ ಪ್ರಾರಂಭವಾಗಿ ಇಂದಿಗೂ ಪ್ರಕಟಗೊಳ್ಳುತ್ತಲಿದೆ. ೧೯೨೮ ರಿಂದ ೧೯೬೦ರವರೆಗೆ ಬೆಳಗಾವಿಯ ಶಾಮರಾವ್ ದೇಸಾಯಿಯವರು 'ರಾಷ್ಟ್ರವೀರ ಪತ್ರಿಕೆ'ಯ ಹೊಣೆ ಹೊತ್ತರು. 'ಬಹುಜನ ಸುಖಾಯ, ಬಹುಜನ-ಹಿತಾಯ' ಎಂಬ ಧ್ಯೇಯದೊಂದಿಗೆ ಈ ಪತ್ರಿಕೆ ಸಮಾಜದಲ್ಲಿ ಜಾಗೃತಿಯನ್ನುಂಟು ಮಾಡಿತು.

೧೯೨೩ ರಲ್ಲಿ 'ಸುಧಾರಕ' ಪತ್ರಿಕೆ ನಗರ ಸುಧಾರಣೆಯ ಉದ್ದೇಶವನ್ನಿಟ್ಟುಕೊಂಡು ಆರ್. ಕೆ. ನಾಯಕರ ಸಂಪಾದಕತ್ವದಲ್ಲಿ ತ್ರೈಮಾಸಿಕ ಪತ್ರಿಕೆಯಾಗಿ ಕೆಲ ಕಾಲ ನಡೆಯಿತು. ೧೯೨೪ ರಲ್ಲಿ 'ಧರ್ಮ ತರಂಗಿಣಿ' ಮಾಸ

ಪತ್ರಿಕೆ ಧಾರ್ಮಿಕ ವಿಷಯಗಳಿಗೆ ಸಂಬಂಧಪಟ್ಟ ಲೇಖನಗಳನ್ನು ಪ್ರಕಟಿಸುತ್ತ ಕೆಲಕಾಲದವರೆಗೆ ಸಾಗಿ ನಿಂತಿತು. ೧೯೨೭ ರಲ್ಲಿ ಮುದವೀಡು ಕೃಷ್ಣರಾಯರು ತಾವು ಧಾರವಾಡದಿಂದ ಹೊರತರುತ್ತಿದ್ದ 'ಕರ್ನಾಟಕ ವೃತ್ತ' 'ಧನಂಜಯ' ಎಂಬ ವಾರ ಪತ್ರಿಕೆಗಳನ್ನು ಬೆಳಗಾವಿಗೆ ಸ್ಥಳಾಂತರಿಸಿ ಕೆಲಕಾಲ ನಡೆಸಿದರು.

೧೯೨೮ ರಲ್ಲಿ 'ತರುಣಭಾರತ' ವಾರಪತ್ರಿಕೆಯು ಕನ್ನಡ ಮರಾಠಿ ಎರಡೂ ಭಾಷೆಗಳಲ್ಲಿ ಪ್ರಕಟಣೆಗೊಂಡು ಬೆಳಗಾವಿ ಪತ್ರಿಕಾರಂಗದಲ್ಲಿ ಖಾಯಂ ಆಗಿ ನೆಲೆ ಕಂಡಿತು. ಬಾಬುರಾವ್ ಠಾಕೂರರ ಸಂಪಾದಕತ್ವದಲ್ಲಿ ಕೆಲ ಕಾಲ ವಾರ ಪತ್ರಿಕೆಯಾಗಿ ಮುಂದೆ ಕೆಲಕಾಲ ಕೇವಲ ಮರಾಠಿಯಲ್ಲಿ ಪ್ರಕಟಗೊಳ್ಳತೊಡಗಿತು. ೧೯೬೭ ರಿಂದ ದೊಡ್ಡ ಆಕಾರದಲ್ಲಿ ದಿನಪತ್ರಿಕೆಯಾಗಿ ಪ್ರಕಟವಾಗತೊಡಗಿತು. ಇಂದಿಗೂ ಈ ಪತ್ರಿಕೆ ನಡೆಯುತ್ತಿದ್ದು ಬೆಳಗಾವಿ ನಗರದ ಪ್ರಮುಖ ಮರಾಠಿ ಪತ್ರಿಕೆಗಳಲ್ಲಿ ಒಂದಾಗಿದೆ.

ರಾಷ್ಟ್ರಪ್ರೇಮ ಹಾಗೂ ಸಮಾಜ ಸೇವೆಯ ಉದ್ದೇಶದೊಡನೆ ಠಾಕೂರರು 'ತರುಣಭಾರತ'ವನ್ನು ಆರಂಭಿಸಿದರು. ನಿರ್ಭೀತ ವರದಿಗಳಿಗೆ ಹೆಸರಾಗಿದ್ದ ಈ ಪತ್ರಿಕೆ ಬ್ರಿಟಿಷರು ಭಾರತೀಯರ ಮೇಲೆ ನಡೆಸಿದ ಕೆಲ ದೌರ್ಜನ್ಯದ ಪ್ರಕರಣಗಳನ್ನು ಪ್ರಕಟಿಸಿ ಕೋಲಾಹಲವನ್ನೆಬ್ಬಿಸಿತು. ಬ್ರಿಟಿಷ ಆಡಳಿತವು ಕಾಶಿಬಾಯಿ ಎಂಬ ಬಡ ಅನಕ್ಷರಸ್ಥ ಮಹಿಳೆಯ ಮೇಲೆ ನಡೆಸಿದ ದೌರ್ಜನ್ಯದ ಘಟನೆಯನ್ನು ತಮ್ಮ ಪತ್ರಿಕೆಯ ಮೂಲಕ ಬೆಳಕಿಗೆ ತಂದರು. ಇದು ಪಾಂಗೀರೆ ಪ್ರಕಟರಣವೆಂದೇ ಪ್ರಸಿದ್ಧವಾಗಿ ಆಂಗ್ಲ ಅಧಿಕಾರಿಗಳ ನಿದ್ದೆಗೆಡಿಸಿತು. ನಿಪ್ಪಾಣಿಯ ಪೋಲೀಸ್ ಠಾಣೆಯಲ್ಲಿ ಪೊಲೀಸರ ಬಡಿತದಿಂದ ಮೃತಪಟ್ಟ ಶಾಮರಾವ್ ದೇಶಮುಖ ಲಾಕಪ್ ಡೆತ್ ಪ್ರಕರಣವನ್ನು ಬಯಲಿಗೆಳೆದರು. ಠಾಕೂರರು ಸ್ವಾತಂತ್ರ್ಯ ಹೋರಾಟದಲ್ಲಿಯೂ ಪಾಲ್ಗೊಂಡಿದ್ದರು.

೧೯೨೮ ರಲ್ಲಿ ಪ್ರಕಟಗೊಂಡ 'ಪ್ರಾರ್ಥನೆ' ಪಾಕ್ಷಿಕ ಪತ್ರಿಕೆಯು ಕನ್ನಡ, ಮರಾಠಿ, ಹಾಗೂ ಇಂಗ್ಲಿಷ್ ಮೂರು ಭಾಷೆಗಳಲ್ಲಿ ಪ್ರಕಟಗೊಳ್ಳುತ್ತಿತ್ತು. ಅಲ್ಲದೆ ಈ ಪತ್ರಿಕೆಯು ಸ್ವಂತ ಮುದ್ರಣಾಲಯವನ್ನು ಹೊಂದಿತ್ತು. ದೇಶಪಾಂಡೆ ವೆಂಕಟರಾವ್ ಎನ್ನುವವರ ಸಂಪಾದಕತ್ವದಲ್ಲಿ ಕೆಲವು ಕಾಲ ಈ ಪತ್ರಿಕೆ ನಡೆಯಿತು.

೧೯೨೮ ರಲ್ಲಿ ಬೆಳಗಾವಿ ಜಿಲ್ಲಾ ಶಾಲಾ ಮಂಡಳಿ ಪರವಾಗಿ ತ್ರೈಮಾಸಿಕ ಗೆಜೆಟ್ ಇಂಗ್ಲಿಷಿನಲ್ಲಿ ಪ್ರಕಟಣೆಗೊಳ್ಳುತ್ತಿತ್ತು. ಆಗಿನ ಸ್ಕೂಲ್ ಬೋರ್ಡನ ಆಢಳಿತಾಧಿಕಾರಿ ಆರ್.ಕೆ. ನಾಯ್ಕರ ಅವರು ಈ ಗೆಜೆಟ್ ಪ್ರಕಟಣೆಯನ್ನು ಆರಂಭಿಸಿದರು. ಶ್ರೀ ಎಂ ರಾಮಚಂದ್ರನ್ ಎನ್ನುವವರು ಸಂಪಾದಕರಾಗಿ ಕಾರ್ಯನಿರ್ವಹಿಸಿದರು. ೧೯೩೧ ರವರೆಗೆ ಈ ಪತ್ರಿಕೆ ನಡೆದು ನಿಂತಿತು.

**ಸಂಯುಕ್ತ ಕರ್ನಾಟಕ :** ಕರ್ನಾಟಕದ ಪತ್ರಿಕೋದ್ಯಮಕ್ಕೆ ಹೊಸ ತಿರುವು ತಂದ ಪತ್ರಿಕೆ ಸಂಯುಕ್ತ ಕರ್ನಾಟಕ; ೧೯೨೯ ರಿಂದ ಬೆಳಗಾವಿಯಲ್ಲಿ ಕಾರ್ಯಾರಂಭ ಮಾಡಿತು. 'ಕರ್ನಾಟಕ ಪ್ರಕಾಶನ ಮಂಡಳ' ಸಂಸ್ಥೆ ಮೂಲಕ

ಸಾಪ್ತಾಹಿಕವಾಗಿ ಹುಟ್ಟಿ ೧೯೩೩ ಎಪ್ರಿಲ್ ೨೭ ರಂದು ದಿನಪತ್ರಿಕೆಯಾಗಿ ಪ್ರಕಟವಾಗಲಾರಂಭಿಸಿತು. ಒಂಬತ್ತು ವರ್ಷಗಳ ಕಾಲ ಬೆಳಗಾವಿಯಲ್ಲಿ ಪ್ರಕಟನೆ ಕಂಡು ೧೯೩೭ ರಲ್ಲಿ ಹುಬ್ಬಳ್ಳಿಗೆ ಸ್ಥಳಾಂತರವಾಗಿ ಇಂದು ಕರ್ನಾಟಕದ ಒಂದು ಪ್ರಮುಖ ಪತ್ರಿಕೆಯಾಗಿ ಬೆಳೆದು ನಿಂತಿದೆ.

ಸಂಯುಕ್ತ ಕರ್ನಾಟಕದ ಬೆಳಗಾವಿಯ ಅಂದಿನ ಕನ್ನಡ ಯುವ ಹೋರಾಟಗಾರರ ಫಲವಾಗಿ ಈ ಪತ್ರಿಕೆ ಜನ್ಮತಾಳಿತು. ಗಂಗಾಧರರಾವ್ ದೇಶಪಾಂಡೆ, ಬೆಳವಿ ದತ್ತರಾಯರು, ದಾತಾರ ಬಳವಂತರಾಯರು, ನಾರಾಯಣರಾವ್ ಜೋಶಿ, ಕೇಶವರಾವ್ ಗೋಖಲೆ, ಡಾ. ಸವಣೂರ ಹನಮಂತರಾಯರು, ಡಾ. ತೆರಗುಂಡಿ, ದತ್ತೋಪಂತ ಮಜಲಿ, ಅನಂತರಾವ್ ಮಂಡಗಿ ಮೊದಲಾದ ಸಮಾನ ಚಿಂತಕರ ಫಲವಾಗಿ 'ಸಂಯುಕ್ತ ಕರ್ನಾಟಕ' ಪತ್ರಿಕೆ ಹುಟ್ಟಿಕೊಂಡಿತು.

ದೇಶದ ಸ್ವಾತಂತ್ರ್ಯ, ಕರ್ನಾಟಕದ ಏಕೀಕರಣ ಈ ಎರಡು ಉದ್ದೇಶಗಳ ಸಾಧನೆಗೆ ತಮ್ಮನ್ನು ತೊಡಗಿಸಿಕೊಂಡು 'ಕರ್ನಾಟಕ ಪ್ರಕಾಶನ ಮಂಡಳಿ' ಸ್ಥಾಪಿಸಿ, ಅದಕ್ಕೆ ಪೂರಕವಾಗಿ ವಾರ ಪತ್ರಿಕೆ ಪ್ರಕಟಿಸುವ ನಿರ್ಧಾರಕ್ಕೆ ಬಂದರು.

ಸಂಯುಕ್ತ ಕರ್ನಾಟಕ ವಾರ ಪತ್ರಿಕೆಯ ಮೊದಲ ಸಂಪಾದಕರಾಗಿ ನ್ಯಾಯವಾದಿ ಶೇಷೋಗಿರಿಯಾಚಾರ್ಯ ಕಟ್ಟಿಯವರು ಹಾಗೂ ಅವರಿಗೆ ಸಹಾಯಕರಾಗಿ ಚಿಕ್ಕೋಡಿ ಅನಂತರಾಯರು ಕಾರ್ಯನಿರ್ವಹಿಸಿದರು. ಜೊತೆಗೆ ಕೃಷ್ಣಾಜಿ ಗೆಜ್ಜ, ವೆಂಕಟರಾವ್ ಪಂಡಿತ, ಬಳವಂತರಾವ್ ದಾತಾರ, ಬೆಳವಿ, ಜೋಶಿ ಮೊದಲಾದವರೆಲ್ಲ ಪತ್ರಿಕೆಯ ಕೆಲಸದಲ್ಲಿ ನೆರವಾದರು. ಆಗ ಪತ್ರಿಕೆ ಎನ್ನುವುದು ಒಂದು ರಾಷ್ಟ್ರೀಯ ವಿಧಾಯಕ ಕಾರ್ಯವೆಂಬ ಭಾವನೆಯಿಂದ ಎಲ್ಲರೂ ಅರ್ಪಣಾ ಭಾವದಿಂದ ದುಡಿದರು.

೧೯೩೦ ರಲ್ಲಿ ಉಪ್ಪಿನ ಸತ್ಯಾಗ್ರಹ ಆರಂಭವಾಗಿ ಬೆಳಗಾವಿಯ ಎಲ್ಲಾ ಮುಂದಾಳುಗಳು ಸೆರೆಮನೆ ಸೇರಿದರು. ಅಲ್ಲದೆ 'ಪತ್ರಿಕಾ ಸುಗ್ರೀವಾಜ್ಞೆ' ಹೊರಟಿತು. ಇದರಿಂದ ಸಂಯುಕ್ತ ಕರ್ನಾಟಕ ಪ್ರಕಟನೆಯೂ ನಿಂತು ಹೋಯಿತು. ಮತ್ತೆ ಈ ಪತ್ರಿಕೆ ಆರಂಭವಾದದ್ದು ದಿನಪತ್ರಿಕೆಯಾಗಿ ೧೯೩೩ ರಲ್ಲಿ. ಸಂಯುಕ್ತ ಕರ್ನಾಟಕ ಪತ್ರಿಕೆಯ ಮಂಡಳಿಯ ಕೆಲವರನ್ನು ಹಿಂಡಲಗಾ ಜೈಲಿನಲ್ಲಿ ಮತ್ತೆ ಕೆಲವರನ್ನು ನಾಸಿಕ ಜೈಲಿನಲ್ಲಿ ಇಡಲಾಗಿತ್ತು. ೧೯೩೩ರಲ್ಲಿ ಇವರೆಲ್ಲಾ ಬಿಡುಗಡೆ ಹೊಂದಿದರು. ನಾಸಿಕ ಜೈಲಿನಲ್ಲಿದ್ದ ಕೇಶವರಾವ್ ಗೋಖಲೆಯವರು ನಾಸಿಕದಿಂದ ಬರುವಾಗಲೇ ಒಂದು ಸಿಂಗಲ್ ರಾಯಲ್ ಆಕಾರದ ಮುದ್ರಣ ಯಂತ್ರವನ್ನು ಖರೀದಿಸಿ ಬೆಳಗಾವಿಗೆ ತಂದರು.[೯] ಆಗ ಬೆಳಗಾವಿ, ಧಾರವಾಡ, ಬಿಜಾಪುರಗಳ ಈ ಮುಖಂಡರೆಲ್ಲ ಸೇರಿ ೮೦೦೦/- ರೂ. ಸಂಗ್ರಹಿಸಿ ದಿನಪತ್ರಿಕೆ ಆರಂಭಿಸಿದರು. ವಯೋವೃದ್ಧ ಬೆಳವಿ ದತ್ತರಾಯರು ಮೊದಲ ಸಂಚಿಕೆ ಬಿಡುಗಡೆ ಮಾಡಿದರು. ಬೆಳಗಾವಿಯ ಈಗಿನ ಸತ್ಕಾರ ಹೊಟೇಲ್ ಹತ್ತಿರ, ಮಾರುತಿಗಲ್ಲಿಯ ಒಂದು ಚಿಕ್ಕಮನೆಯಲ್ಲಿ ಈ ದೊಡ್ಡ ಪತ್ರಿಕೆ ಹುಟ್ಟಿ ಬಂದಿತು.

ಆರಂಭದಲ್ಲಿ ಸ್ಥಾನಿಕ ಸುದ್ದಿಗಳೊಡನೆ ರಾಷ್ಟ್ರೀಯ ಮಹತ್ವದ ಸುದ್ದಿಗಳನ್ನು ಮುಂಬಯಿಂದ ದಿನಾಲು ಎರಡು ಸಲ ತಂತಿ ಮೂಲಕ ತರಿಸಿಕೊಳ್ಳಲಾಗುತ್ತಿತ್ತು. ಪತ್ರಿಕೆಯ ಆಗಿನ ಬಿಡಿ ಪ್ರತಿಯ ಬೆಲೆ ಎರಡು ಬಿಲ್ಲೆ. ಪ್ರತಿದಿನ ೨೦೦ ಪ್ರತಿಗಳು ಮುದ್ರಣಗೊಳ್ಳುತ್ತಿದ್ದವು.

ಮುಂದೆ 'ಕರ್ನಾಟಕ ಪ್ರಕಾಶನ ಮಂಡಳ'ದವರು ದಿವಾಕರ ರಂಗರಾಯರ ರಾಷ್ಟ್ರೀಯ ವಾಙ್ಮಯ ಪ್ರಕಾಶನ ಟ್ರಸ್ಟ್‌ಗೆ ಪತ್ರಿಕೆ ಹಾಗು ಮುದ್ರಣಾಲಯಗಳನ್ನು ಒಪ್ಪಿಸಿದರು. ಇದೇ ವೇಳೆಗೆ ಬಾಗಲಕೋಟೆಯಿಂದ ಪ್ರಕಟವಾಗುತ್ತಿದ್ದ ಮಂಗಳವೇಡೆ ಶ್ರೀನಿವಾಸರಾಯರ 'ಕನ್ನಡಿಗ' ಪತ್ರಿಕೆಯೂ ಸಂಯುಕ್ತಕರ್ನಾಟಕದಲ್ಲಿ ವಿಲೀನವಾಯಿತು. ಇದಾದ ನಂತರ ಕರ್ನಾಟಕ ಮಿತ್ರ, 'ಪ್ರಾರ್ಥನೆ' ಪತ್ರಿಕೆಗಳೂ ವಿಲೀನವಾದವು.

೧೯೩೫ ರಲ್ಲಿ ಸಂಯುಕ್ತ ಕರ್ನಾಟಕದ ಆಕಾರ ದೊಡ್ಡದಾಯಿತು. ಬೆಲೆಯೂ ಹೆಚ್ಚಾಯಿತು. ಪ್ರಸಾರದ ಸಂಖ್ಯೆ ವ್ಯಾಪ್ತಿ ಎಲ್ಲವೂ ಹೆಚ್ಚಾದವು. ಧಾರವಾಡ, ಹುಬ್ಬಳ್ಳಿಗಳಿಂದಲೂ ಪತ್ರಿಕೆ ಪ್ರಕಟಗೊಳ್ಳತೊಡಗಿತು. ಹಾಗಿದ್ದರೂ ಪತ್ರಿಕೆಯ ಪ್ರಸಾರ ಸಂಖ್ಯೆ, ಬೆಳವಣಿಗೆ ಮೊಹರೆಯವರಿಗೆ ತೃಪ್ತಿಯನ್ನುಂಟುಮಾಡಿರಲಿಲ್ಲ.[೪] ಹೀಗಾಗಿ ದಿವಾಕರ ರಂಗರಾಯರೊಂದಿಗೆ ಚರ್ಚಿಸಿ ಪತ್ರಿಕೆಯನ್ನು ಹುಬ್ಬಳ್ಳಿಗೆ ಸ್ಥಳಾಂತರಿಸುವ ನಿರ್ಧಾರ ಕೈಕೊಂಡರು. ಇದರಿಂದ ೧೯೩೭ ರಂದು ಹುಬ್ಬಳ್ಳಿಗೆ ಸ್ಥಳಾಂತರಗೊಂಡಿತು.

೧೯೩೦ ರಲ್ಲಿ 'ಪ್ರಜಾಧ್ವನಿ' ಎಂಬ ವಾರ ಪತ್ರಿಕೆ ಪ್ರಾರಂಭವಾಯಿತು. ಈ ಪತ್ರಿಕೆಯನ್ನು ಅರಳಿಕಟ್ಟಿ ಸಹೋದರರು ನಡೆಸುತ್ತಿದ್ದರು. ಆದರೆ ಈ ಸಹೋದರರಲ್ಲಿಯೇ ವಿಭಿನ್ನ ನಿಲುವುಗಳು ಉಂಟಾಗಿ ಪತ್ರಿಕೆ ನಿಂತಿತು. ಕ್ರಿಶ್ಚಿಯನ್ ಮತಾವಲಂಬಿಗಳಾದ ಇವರಲ್ಲಿ ಜೇಮ್ಸ್ ಅರಳಿಕಟ್ಟಿ ಬ್ರಿಟಿಷರ ಪರವಾಗಿದ್ದರೆ ಸಹೋದರರಾದ ಜಾರ್ಜ ಮತ್ತು ದಯಾನಂದ ರಾಷ್ಟ್ರೀಯ ಮನೋಭಾವನೆಯನ್ನು ಹೊಂದಿದ್ದರು.

ಬೆಳಗಾವಿಯಲ್ಲಿ ಕನ್ನಡ ವಾತಾವರಣವನ್ನು ನಿರ್ಮಾಣ ಮಾಡಿದವರಲ್ಲಿ ಪ್ಯಾಟಿ ಶ್ಯಾಮರಾಯರು ಪ್ರಮುಖರು. ಇವರ ಕನ್ನಡ ಸೇವೆ ಯಾವುದೇ ಹೋರಾಟದ ಮೂಲಕ ಸಾಗದೆ ಪುಸ್ತಕ, ಪತ್ರಿಕೆ, ಮುದ್ರಣಾಲಯಗದಳ ಮೂಲಕ ಕನ್ನಡ ಜಾಗೃತಿಯನ್ನುಂಟು ಮಾಡಿದರು. 'ಕಥಾ ಕುಂಜ ಗ್ರಂಥ ಭಂಡಾರ' 'ಕಥಾಕುಂಜ ಗ್ರಂಥಮಾಲೆ' 'ಕಥಾಕುಂಜ' ಪತ್ರಿಕೆಗಳನ್ನು ಪ್ರಾರಂಭಿಸಿ ಮಹತ್ವದ ಕಾರ್ಯಗಳನ್ನು ಕೈಕೊಂಡು ಕನ್ನಡಿಗರಲ್ಲಿ ಓದುವ ಹವ್ಯಾಸವನ್ನು ಬೆಳೆಸಲು ಪ್ರಯತ್ನಿಸಿದರು.

ಇವರ 'ಕಥಾಕುಕಂಜ' ಮಾಸ ಪತ್ರಿಕೆಯು ಅಂದಿನ ನವೋದಯ ಸಾಹಿತ್ಯ ಘಟ್ಟದಲ್ಲಿ ಕಥಾ ಸಾಹಿತ್ಯನವನ್ನು ಬೆಳೆಸುವಲ್ಲಿ ಮಹತ್ವದ ಪಾತ್ರವನ್ನು ವಹಿಸಿತು. ಈ ಭಾಗದ ಕಥೆಗಾರರಿಗೆಲ್ಲ ಈ ಪತ್ರಿಕೆಯೇ ಮೂಲ ಪ್ರೇರಣೆಯಾಯಿತು.

ಆನಂದ, ಗೋವಿಂದರಾವ್ ಟೇಂಗಸಿ, ಪ್ರ.ಗೋ.ಕುಲಕರ್ಣಿ, ಶ್ರೀ ಕೃಷ್ಣ ಪಾಟೀಲ ಮುಂತಾದವರನ್ನು ಉತ್ತಮ ಕತೆಗಾರರನ್ನಾಗಿ ಬೆಳೆಸಿದ ಶ್ರೇಯಸ್ಸನ್ನು 'ಕಥಾಕುಂಜ' ಹೊಂದಿದೆ. ಈ ಪತ್ರಿಕೆಯು ೧/೮ ಆಕಾರದಲ್ಲಿ ಹೊರಬರುತ್ತಿತ್ತು. ೧೯೩೬ ರ ತನಕ ಈ ಪತ್ರಿಕೆಯು ನಡೆದು ನಿಂತಿತು. ಗಣಪತಿಗಲ್ಲಿಯ ಗಣೇಶನ ಮಂದಿರದ ಹತ್ತಿರ ಒಂದು ಚಿಕ್ಕ ಪುಸ್ತಕದ ಅಂಗಡಿಯನ್ನಿಟ್ಟುಕೊಂಡಿದ್ದರು. ಕನ್ನಡ ಸಾಹಿತ್ಯಾಸಕ್ತರಿಗೆ ಕಥೆ, ಕಾದಂಬರಿ, ಕಾವ್ಯ, ನಾಟಕಗಳು ದೊರೆಯುವ ಬೆಳಗಾವಿಯ ಏಕಮೇವ ಪುಸ್ತಕಾಲಯವಾಗಿತ್ತು. ೧೯೩೫–೩೬ರಲ್ಲಿ ಹೊರಬಂದ 'ಹಳ್ಳಿಯ ಆಳು' ಅಥವಾ 'ಗ್ರಾಮ ಸೇವಕ' ತ್ರೈಮಾಸಿಕ ಪತ್ರಿಕೆಗಳು ಡಿ. ಎಸ್. ಪರಮಾಜ ಮತ್ತು ಎಸ್. ವಿ. ಅಡ್ಡಣಗಿ ಎಂಬುವರ ಸಂಪಾದಕತ್ವದಲ್ಲಿ ಕನ್ನಡ ಮರಾಠಿ ಎರಡೂ ಭಾಷೆಯಲ್ಲಿ ಪ್ರಕಟಗೊಳ್ಳುತ್ತಿದ್ದವು. ಈ ಪತ್ರಿಕೆಯನ್ನು 'ಸಹಕಾರಿ ಒಕ್ಕೂಟ'ದ ಮೂಲಕ ಹೊರತರಲಾಗುತ್ತಿತ್ತು.

**ಅರುಣೋದಯ ಮಾಸ ಪತ್ರಿಕೆ** : ೧೯೩೬ ರಲ್ಲಿ ಪಂಡಿತ ವೆಂಕಟರಾವ್ ಅವರ ಸಂಪಾದಕತ್ವದಲ್ಲಿ ಆರಂಭಗೊಂಡ 'ಅರುಣೋದಯ' ಮಾಸ ಪತ್ರಿಕೆ (ಸ್ವಲ್ಪ ಕಾಲ ವಾರ ಪತ್ರಿಕೆಯಾಗಿ ಪ್ರಕಟ) ಅಂದಿನ ಮಹತ್ವದ ಪತ್ರಿಕೆಯಾಗಿ ಪರಿಗಣಿಸಲ್ಪಟ್ಟಿತ್ತು. ವೆಂಕಟರಾವ್‌ರು ಬಿ. ಎ. ಎಲ್.ಎಲ್.ಬಿ ಪದವೀಧರರಾಗಿದ್ದು ಶ್ರೀಮಂತ ಕುಟುಂಬದಿಂದ ಬಂದವರಾಗಿದ್ದರು. ಸಾಮಾಜಿಕ ಕಳಕಳಿಯನ್ನಿಟ್ಟುಕೊಂಡು ಪತ್ರಿಕಾ ವಲಯಕ್ಕೆ ಬಂದಿದ್ದರು. ಸಾಮಾಜಿಕ, ಸಾಹಿತ್ಯಿಕ, ರಾಜಕೀಯ ಸಾಂಸ್ಕೃತಿಕ ವಲಯದ ಬಗೆಗೆ ಮಹತ್ವದ ಲೇಖನಗಳು ಈ ಪತ್ರಿಕೆಯಲ್ಲಿ ಪ್ರಕಟಗೊಂಡವು. ವಿಶೇಷಾಂಕ: ೧೯೩೬ ರಲ್ಲಿ ವಿಜಯನಗರ ಷಟ್ ಸಾಂವತ್ಸರಿಕ ಮಹೋತ್ಸವದ ಸಂದರ್ಭದಲ್ಲಿ ಅರುಣೋದಯ ಪತ್ರಿಕೆಯ ವಿಶೇಷ ಸಂಪುಟ ಪ್ರಕಟಗೊಂಡಿತು. ಸಮಗ್ರ ಕನ್ನಡ ನಾಡಿನ ವಿವಿಧ ವಿದ್ವಾಂಸರ ಮಹತ್ವದ ಲೇಖನಗಳನ್ನು ಆಯ್ಕೆ ಮಾಡಿ ವಿಜಯನಗರ ಸಾಮ್ರಾಜ್ಯದ ಮೇಲೆ ಬೆಳಕು ಚೆಲ್ಲಿದರು. ಇಂದಿಗೂ ಕೂಡ ಸಂಶೋಧಕರಿಗೆ ಇದೊಂದು ಆಕರ ಗ್ರಂಥವಾಗಿ ಬಳಕೆಗೊಳ್ಳುತ್ತಿದೆ. ಕಿರೀಟ ೧/೪ ಆಕಾರದ ಸುಮಾರು ಮೂರು ನೂರು ಪುಟಗಳ ಬೃಹತ್ ಗ್ರಂಥವನ್ನು ಏಕಾಂಗಿಯಾಗಿ ಪ್ರಕಟಿಸಿದ ಅಂದಿನ ಅವರ ಧೈರ್ಯ ಮೆಚ್ಚುವಂತಹದ್ದಾಗಿತ್ತು. ಅದುವರೆಗೆ ಯಾವ ಪತ್ರಿಕೆಯವರು ಇಂತಹ ಸಾಹಸವನ್ನು ಕೈಗೊಂಡಿರಲಿಲ್ಲ. ಈ ವಿಶೇಷಾಂಕದ ಪ್ರಕಟಣೆಯ ಕಾರ್ಯದಲ್ಲಿ ಶಿಕ್ಷಕರಾಗಿದ್ದ ಶ್ರೀ ಪ್ರಗೋ. ಕುಲಕರ್ಣಿ, ಅನಂತರಾಯ ಬೋಶೆಯವರು ಪರಿಶ್ರಮಪಟ್ಟರು. ತಮ್ಮದೇ ಆದ 'ಸೀತಾರಾಮ ಪ್ರಿಂಟಿಂಗ ಪ್ರೆಸ್' ಮೂಲಕ ಪತ್ರಿಕೆಯನ್ನು ಮುದ್ರಿಸುತ್ತಿದ್ದರು. ವಿಜಯನಗರ ಸಾಮ್ರಾಜ್ಯದ ಸ್ಥಾಪನೆ, ಹೋರಾಟಗಳು, ಕಲೆ, ಸಾಹಿತ್ಯ, ಸಂಸ್ಕೃತಿ, ರಾಜರ ಯುದ್ಧಗಳು ಮುಂತಾದ ವಿಷಯಗಳ ಮೇಲೆ ಬೆಳಕು ಚೆಲ್ಲುವ ಲೇಖನಗಳು ಇದರಲ್ಲಿವೆ. ಇದರಲ್ಲಿ ಲೇಖನಗಳನ್ನು ಬರೆದ ಪ್ರಮುಖರೆಂದರೆ ಆಲೂರ ವೆಂಕಟರಾಯರು, ದಿವಾಕರ ರಂಗರಾಯ, ಗೋವಿಂದ ಪೈ, ರಂ. ಶ್ರೀ. ಮುಗಳಿ, ಸೊಸಲೆ ಕೃಷ್ಣರಾಯರು, ವಿ.ಕೃ.ಗೋಕಾಕ, ಬಿ. ಶಿವಮೂರ್ತಿಶಾಸ್ತ್ರಿ, ಶಂ.ಬಾ. ಜೋಶಿ, ಆನಂದಕಂದ, ಈಶ್ವರ ಸಣಕಲ್ಲ, ಕೃಷ್ಣಮೂರ್ತಿ ಪುರಾಣಿಕ ಹೀಗೆ ವಿವಿಧ

ಪ್ರಮುಖ ಸಾಹಿತಿಗಳ ಸಂಶೋಧಕರ ೮೦ ಲೇಖನಗಳನ್ನು ಒಳಗೊಂಡಿದೆ. ಅಂದಿನ ಕರ್ನಾಟಕದ ಎಲ್ಲಾ ಪ್ರಮುಖ ಸಾಹಿತಿಗಳು ಇದರಲ್ಲಿ ಲೇಖನಗಳನ್ನು ಬರೆದಿದ್ದಾರೆ. ಇದೊಂದು ಅಖಂಡ ಕರ್ನಾಟಕದಲ್ಲಿ ಪ್ರಚಾರವನ್ನು ಪಡೆದ ವಿಶೇಷಾಂಕವಾಗಿ ಹೊರಹೊಮ್ಮಿತು.

**ಸಂದೇಶ :** ೧೯೩೮ ರಲ್ಲಿ 'ಸಂದೇಶ' ವಾರಪತ್ರಿಕೆ ಗೋಪಾಳರಾವ್ ದೇಶಪಾಂಡೆಯವರ ಸಂಪಾದಕತ್ವದಲ್ಲಿ ಬೆಳಗಾವಿಯಿಂದ ಹೊರಡಿತು. ೧೯೪೨ ರಿಂದ ದ್ವಿವಾರ ಪತ್ರಿಕೆಯಾಗಿ ಪರಿವರ್ತಿತವಾಗಿ ಇಂದಿಗೂ ಪ್ರಕಟಗೊಳ್ಳುತ್ತಿದೆ. ಸುಮಾರು ೭೦ ವರ್ಷದ ಬೆಳಗಾವಿಯ ಸಾಂಸ್ಕೃತಿಕ ಬದುಕನ್ನು ದಾಖಲೀಕರಿಸಿಕೊಂಡ ಪ್ರಮುಖ ಪತ್ರಿಕೆಯಾಗಿದೆ. ಆರಂಭದಿಂದಲೂ ಕ್ರೌನ್ ೧/೪ ಆಕಾರದ ನಾಲ್ಕು ಪುಟಗಳಲ್ಲಿ ಪ್ರಕಟನೆಗೊಂಡು ೧೯೩೮ ರ ಮೇ ೨ ರಂದು ಹೊರಬಂದ ಮೊದಲ ಸಂಚಿಕೆಯ ಆಗಿನ ಬೆಲೆ 'ಅರ್ಧಾಣೆ'. ಮೊದಲ ಸಂಚಿಕೆಯ ಮೊದಲ ಪುಟದ ಮೇಲೆ ಕನ್ನಡ ವಾಙ್ಮಯ ಪ್ರಸಾರಕ ಸಂಪುಟದಿಂದ ಹೊರಡುವ ರಾಷ್ಟ್ರೀಯ ವಾರ ಪತ್ರಿಕೆ ಎಂದು ಮುದ್ರಿಸಲಾಗಿದೆ. ೧೯೬೪ ರಿಂದ ಸ್ವಂತ ಮುದ್ರಣಾಲಯವನ್ನು ಹೊಂದಿ ಅರವಿಂದ ದೇಶಪಾಂಡೆಯವರ ಸಂಪಾದಕತ್ವದಲ್ಲಿ ಮುನ್ನಡೆದಿದೆ. ಪತ್ರಿಕೆಯ ಸಂಸ್ಥಾಪಕರಾದ ಗೋಪಾಳರಾವ ದೇಶಪಾಂಡೆಯವರು ಸ್ವಾತಂತ್ರ್ಯ ಹೋರಾಟ ಏಕೀಕರಣ ಚಳುವಳಿಯಲ್ಲಿ ಭಾಗವಹಿಸಿದ್ದರು. ಬ್ರಿಟಿಷರ ವಿರುದ್ಧ ನಿರ್ಭಯವಾಗಿ ಲೇಖನಗಳನ್ನು ಬರೆಯುತ್ತಿದ್ದರು. ಇದರಿಂದ ಬ್ರಿಟಿಷರು ಅಂದಿನ ಕಾಲದಲ್ಲಿ ಆರು ಸಾವಿರ ರೂ.ಗಳನ್ನು ಪತ್ರಿಕೆಗೆ ದಂಡ ವಿಧಿಸಿದರು. ಆದರೂ ಇವರು ಧೈರ್ಯಗೆಡದೆ ಪರಿಣಾಮಕಾರಿಯಾದ ಲೇಖನಗಳನ್ನು ಪ್ರಕಟಿಸತೊಡಗಿದರು. ಸ್ವಾತಂತ್ರ್ಯ ಹೋರಾಟಗಾರರಿಗೆ ಸ್ಫೂರ್ತಿಯನ್ನು ತುಂಬುವಲ್ಲಿ ಈ ಪತ್ರಿಕೆ ಮಹತ್ವವನ್ನು ವಹಿಸಿತು. ಅಣ್ಣು ಗುರೂಜಿ, ವೆಂಕಟರೆಡ್ಡಿ ಹೂಲಿ, ಅನಂತರಾವ್ ಚಿಕ್ಕೋಡಿ, ಅರವಿಂದ ಜೋಶಿ ಮೊದಲಾದವರ ಉಗ್ರ ವಿಚಾರಗಳ ಲೇಖನಗಳನ್ನು ಪ್ರಕಟಿಸಿದರು. ಗೋಪಾಳರಾವ್‌ರು ಈ ಪತ್ರಿಕೆಯನ್ನು ತಾವೇ ಮನೆಮನೆಗೆ ಹೋಗಿ ಹಂಚಿ ಬರುತ್ತಿದ್ದರು. ಇದು ಅಂದಿನ ಸಂಪಾದಕರು ಪತ್ರಿಕೆಯ ಮೇಲಿಟ್ಟ ಕಾಳಜಿಯನ್ನು ತೋರಿಸುತ್ತದೆ.

೧೯೩೮ ರ ಅವಧಿಯಲ್ಲಿ ಪ್ರಕಟಗೊಂಡ ವಾರ್ತಾ ಮರಾಠಿ ವಾರಪತ್ರಿಕೆ ಬ್ರಿಟಿಷರ ಕೆಂಗಣ್ಣಿಗೆ ಗುರಿಯಾದ ಮತ್ತೊಂದು ಮಹತ್ವದ ಪತ್ರಿಕೆ. ಜರ್ಮನಿಯಲ್ಲಿದ್ದ ಡಾ. ಎ.ಜಿ. ತೆಂಡೂಲಕರ ಭಾರತಕ್ಕೆ ಮರಳಿ ಬೆಳಗಾವಿಯಲ್ಲಿ ಪತ್ರಿಕೆಯನ್ನು ಪ್ರಾರಂಭಿಸಿದರು. ಆಗ ನಡೆಯುತ್ತಿದ್ದ ದ್ವಿತೀಯ ಜಾಗತಿಕ ಮಹಾಯುದ್ಧದ ವಾರ್ತೆಗಳು ವಿಶೇಷವಾಗಿ ಪ್ರಕಟಗೊಳ್ಳುತ್ತಿದ್ದವು. ಇದರಿಂದ ಬ್ರಿಟಿಷರು ಇವರನ್ನು ಡಿಫೆನ್ಸ್ ಆಫ್ ಇಂಡಿಯಾ ಕಾಯ್ದೆಯಡಿ ಬಂಧಿಸಿದರು. ಇವರೊಂದಿಗೆ ಪತ್ರಿಕೆಯ ಮುದ್ರಕರನ್ನೂ ಬಂಧಿಸಿದರು. ಇವರೆಲ್ಲರಿಗೂ ಶಿಕ್ಷೆಯನ್ನು ವಿಧಿಸಿದರು. ಮುಂದೆ ಕೆಲವು ವರ್ಷ ಪತ್ರಿಕೆ ನಡೆದು ನಿಂತಿತು.

೧೯೩೮ ರಲ್ಲಿ ಹೊರ ಬಂದ 'ಶಿಕ್ಷಕ ಮಿತ್ರ' ಪತ್ರಿಕೆಯು ಬೆಳಗಾವಿಯಲ್ಲಿ ಕನ್ನಡ ಬೆಳೆಸಿದ ಪತ್ರಿಕೆಗಳಲ್ಲೊಂದು. ಶಿಕ್ಷಕರಾಗಿದ್ದ ಅರವಿಂದರಾವ ಜೋಶಿಯವರ ಸಂಪಾದಕತ್ವದಲ್ಲಿ ಶೈಕ್ಷಣಿಕ ಕ್ಷೇತ್ರದಲ್ಲಿ ಮಹತ್ವದ ಪತ್ರಿಕೆಯಾಗಿ ಹೆಸರುಪಡೆಯಿತು. ಕರ್ನಾಟಕ ಏಕೀಕರಣ ಚಳುವಳಿ ಹಾಗೂ ಬೆಳಗಾವಿಯ ಕನ್ನಡಪರ ಹೋರಾಟಗಳಲ್ಲಿ ಜೋಶಿಯವರು ಮಹತ್ವದ ಪಾತ್ರವನ್ನು ನಿರ್ವಹಿಸಿದರು. ಸುಮಾರು ಹದಿಮೂರು ವರ್ಷಗಳ ವರೆಗೆ ಈ ಪತ್ರಿಕೆ ನಡೆಯಿತು. ಮುಂದೆ ಇವರು ನೆಹರು ಮಂತ್ರಿ ಮಂಡಲದಲ್ಲಿ ಗೃಹಸಚಿವರಾಗಿದ್ದ ದಾತಾರರ ಆಪ್ತಕಾರ್ಯದರ್ಶಿಯಾಗಿ ದೆಹಲಿಗೆ ಹೋದರು.

೧೯೪೧ ರಲ್ಲಿ 'ಸ್ವತಂತ್ರ' ಎನ್ನುವ ಮರಾಠಿ ಸಾಪ್ತಾಹಿಕವನ್ನು ನ್ಯಾಯವಾದಿ ಲಿಮಯೆ ಎನ್ನುವವರು ಪ್ರಾರಂಭಿಸಿದರು. ೧೯೪೨ ರಲ್ಲಿ ಬೆಳಗಾವಿ ಲಿಂಗಾಯತ ವಿದ್ಯಾಭಿವೃದ್ಧಿ ಸಮಿತಿಯ ಪರವಾಗಿ 'ಲಿಂಗಾಯತ' ಮಾಸ ಪತ್ರಿಕೆ, ೧೯೪೪ ರಲ್ಲಿ ಜಿಲ್ಲೆಯ ಹಿರಿಯ ಪತ್ರಕರ್ತ, ಸ್ವಾತಂತ್ರ್ಯ ಹೋರಾಟಗಾರ ಅನಂತರಾವ್ ಚಿಕ್ಕೋಡಿಯವರ 'ಕರ್ನಾಟಕ' ವಾರಪತ್ರಿಕೆ, ಮುಂತಾದ ಪತ್ರಿಕೆಗಳು ಕೆಲಕಾಲ ನಡೆದು ನಿಂತವು.

**ಜನ ಜೀವಾಳ :** ಕ್ರಾಂತಿಕಾರಿ ಮನೋಭಾವದ ದಿಟ್ಟ ಪತ್ರಕರ್ತರಾಗಿದ್ದ ಬ.ಮ. ಏಳುಕೋಟಿಯವರು ೧೯೪೮ ರಲ್ಲಿ 'ಜನ ಜೀವಾಳ' ವಾರಪತ್ರಿಕೆಯನ್ನು ಪ್ರಾರಂಭಿಸಿದರು. ಈ ಪತ್ರಿಕೆಯು ಅಂದಿನಿಂದ ಇಂದಿನವರೆಗೂ ತನ್ನದೇ ಆದ ವೈಶಿಷ್ಟ್ಯಗಳನ್ನು ಕಾಯ್ದುಕೊಂಡು ಬಂದಿದೆ. ಬ.ಮ. ಏಳುಕೋಟಿಯವರು ನೇರನಿಷ್ಠುರ ಮಾತು ಹಾಗೂ ಬರಹಗಳಿಂದ ಅನ್ಯಾಯ, ಅನಾಚಾರ, ಭ್ರಷ್ಟಾಚಾರ ಗೈಯುವವರ ಪಾಲಿಗೆ ಸಿಂಹ ಸ್ವಪ್ನವಾಗಿದ್ದರು.'ಸರ್ವರಿಗೆ ಸಮಬಾಳು, ಸರ್ವರಿಗೆ ಸಮಪಾಲು' ಎಂಬ ಧ್ಯೇಯವಾಕ್ಯವನ್ನಿಟ್ಟುಕೊಂಡು ರಾಜಕೀಯ ಸ್ವಾತಂತ್ರ್ಯ, ಸಾಂಸ್ಕೃತಿಕ ಸೋದರ ಭಾವ, ಆರ್ಥಿಕ ಸರಿಸಮಾನತೆ, ಪ್ರೌಢರಿಗೆ ಮತದಾನ ಈ ಉದ್ದೇಶ ಸಾಧನೆಗಾಗಿ ಪತ್ರಿಕೆಯನ್ನು ಮಾಧ್ಯಮವನ್ನಾಗಿಸಿಕೊಂಡರು. ಬಸವಣ್ಣನವರ ಉಳ್ಳವರು ಶಿವಾಲಯ ಮಾಡುವರಯ್ಯ ಎನ್ನುವ ವಚನವನ್ನು ಪ್ರತಿಸಂಚಿಕೆಯ ಮುಖಪುಟದಲ್ಲಿ ಪ್ರಕಟಿಸುತ್ತ ಬಂದರು. ಸುಮಾರು ೪೦ ವರ್ಷಗಳ ಪತ್ರಿಕೋದ್ಯಮದಲ್ಲಿ ಎಂದೂ ತಮ್ಮ ತತ್ವ ಸಿದ್ಧಾಂತಗಳನ್ನು ಬಿಟ್ಟುಕೊಡಲಿಲ್ಲ. ಅವರ ಎದುರಿಗೆ ಯ್ಯಾರೇ ಇದ್ದರೂ ಎಷ್ಟೇ ಪ್ರಭಾವಿ ವ್ಯಕ್ತಿಯಾಗಿದ್ದರೂ ಅವರ ತಪ್ಪುಗಳನ್ನು ನೇರವಾಗಿ ಹೇಳುತ್ತಿದ್ದರು. ನಿಷ್ಠುರ ಬರಹಗಳಿಂದ ಜನರ ಕೋಪ ತಾಪ ಎದುರಿಸಿದರು. ಈ ಪತ್ರಿಕೆಯ ಬರಹಗಾರರಲ್ಲಿ ಪ್ರಮುಖರಾಗಿ ಬಸವರಾಜ ಕಟ್ಟಿಮನಿ, ಕೋ. ಚೆನ್ನಬಸಪ್ಪ, ನಿರಂಜನ, ಡಾ. ಬುದ್ದಣ್ಣ ಹಿಂಗಮಿರೆ ಮುಂತಾದವರಿದ್ದರು. ಆರಂಭದಲ್ಲಿ ಪತ್ರಿಕೆ ಬೆಲೆ ಒಂದು ಆಣೆ ಇತ್ತು. ಈಗ ಒಂದು ರೂ. ಇದೆ. ಸ್ವಂತ ಮುದ್ರಣಾಲಯವನ್ನು ಹೊಂದಿದೆ.

೧೯೪೮ ರಲ್ಲಿ ಸ್ವಾತಂತ್ರ್ಯ ಯೋಧರಾದ ಜಯದೇವರಾವ್ ಕುಲಕರ್ಣಿಯವರು 'ಸರ್ವೋದಯ' ಎಂಬ ಸಾಪ್ತಾಹಿಕವನ್ನು ಕನ್ನಡ ಮರಾಠಿ ಎರಡೂ ಭಾಷೆಗಳಲ್ಲಿ ಆರಂಭಿಸಿದರು. ವಿನೋಬಾ ಭಾವೆಯವರ ಸರ್ವೋದಯ ಚಳುವಳಿಯ ಪ್ರಭಾವದಿಂದ ಈ ಪತ್ರಿಕೆ ಕೆಲವು ಕಾಲ ನಡೆದು ನಿಂತಿತು.

೧೯೪೯ರಲ್ಲಿ 'ಪ್ರಕಾಶ' ಮಾಸ ಪತ್ರಿಕೆ ಸುಮಾರು ಹತ್ತು ವರ್ಷಗಳ ಕಾಲ ನಡೆಯಿತು. ಆರ್. ಸಿ. ಮೆಣಸಿ ಅವರ ಸಂಪಾದಕತ್ವದಲ್ಲಿ ಕರ್ನಾಟಕ ಪ್ರಾದೇಶಿಕ ಸಮಾಜ ಶಿಕ್ಷಣ ಸಮಿತಿಯಿಂದ ಪ್ರಕಾಶನಗೊಳ್ಳುತ್ತಿದ್ದ ಈ ಮಾಸಿಕವು ೨೪ ಪುಟಗಳನ್ನು ಹೊಂದಿತ್ತು. ಮುಖ್ಯವಾಗಿ ಶೈಕ್ಷಣಿಕ ವಿಷಯಗಳಿಗೆ ಪ್ರಾಧಾನ್ಯ ನೀಡಲಾಗುತ್ತಿತ್ತು. ಈ ಪತ್ರಿಕೆಯು ಶಹಾಪುರದ ವಿಶ್ವಭಾರತಿ ಪ್ರೆಸ್ಸಿನಲ್ಲಿ ಮುದ್ರಣಗೊಳ್ಳುತ್ತಿತ್ತು. ಅತ್ಯಂತ ಕಡಿಮೆ ಬೆಲೆಯ ಈ ಪತ್ರಿಕೆಯ ವಾರ್ಷಿಕ ಚಂದಾ ೧೯೬೬ ರಲ್ಲಿ ಕೇವಲ ಮೂರು ರೂಪಾಯಿ ಇತ್ತು.

೧೯೫೦ ರ ದಶಕದ ನಂತರ ಬೆಳಗಾವಿ ಪತ್ರಿಕೆಗಳ ಧೋರಣೆಗಳು ಬದಲಾದವು. ಈ ಅವಧಿಯಲ್ಲಿ ಬೆಳಗಾವಿ ಗಡಿ ವಿವಾದ ಕನ್ನಡ ಮರಾಠಿ ಭಾಷಿಕರಲ್ಲಿ ವೈಷಮ್ಯವನ್ನು ಮೂಡಿಸಿತ್ತು. ಆಯಾ ಭಾಷಿಕರ ಪರವಾಗಿ ಪತ್ರಿಕೆಗಳು ಕಾರ್ಯ ಮಾಡತೊಡಗಿದವು. ಈ ನಿಟ್ಟಿನಲ್ಲಿ ಕನ್ನಡ ಪತ್ರಿಕೆಗಳು ಕನ್ನಡ ಹೋರಾಟಗಳಿಗೆ ಪ್ರೇರಣೆಯನ್ನು ನೀಡಿ ಹೋರಾಟದಲ್ಲಿ ಪಾಲ್ಗೊಂಡವು. ಇದರಿಂದಾಗಿ ಮರಾಠಿಗರಿಂದ ಶೋಷಣೆಗೆ ಕೆಲವು ಪತ್ರಿಕೆಗಳು ಒಳಗಾದವು. ಪತ್ರಿಕೆಯ ಕಾರ್ಯಾಲಯಗಳ ಮೇಲೆ ಬೆಂಕಿ ಹಚ್ಚುವುದು, ವರದಿಗಾರರ ಮೇಲೆ ಸಂಪಾದಕರ ಮೇಲೆ ಹಲ್ಲೆ ಮುಂತಾದವುಗಳನ್ನು ಎದುರಿಸಬೇಕಾಯಿತು. ಲೋಕದರ್ಶನ, ಸಮತೋಲ, ನಾಡೋಜ, ಕನ್ನಡಮ್ಮ, ಸಿರಿನಾಡು, ಹಸಿರು ಕ್ರಾಂತಿ ಮುಂತಾದ ಪತ್ರಿಕೆಗಳು ಬೆಳಗಾವಿಯ ಕನ್ನಡ ಹೋರಾಟದಲ್ಲಿ ಪ್ರಮುಖ ಪಾತ್ರವಹಿಸಿದವು.

**ಲೋಕ ದರ್ಶನ :** ೧೯೫೬ ರ ಡಿಸೆಂಬರ ೫ ರಂದು 'ದರ್ಶನ' ಎನ್ನುವ ಹೆಸರಿನಿಂದ ವಾರಪತ್ರಿಕೆಯಾಗಿ ಪ್ರಕಟಣೆ ಆರಂಭಿಸಿ ಮುಂದೆ ೧೯೬೩ ರಲ್ಲಿ 'ಲೋಕದರ್ಶನ' ದಿನಪತ್ರಿಕೆಯಾಗಿ ಪ್ರಕಟಣೆಯನ್ನು ಆರಂಭಿಸಿತು. ಗಡಿ ಹೋರಾಟ ತೀವ್ರವಾಗಿರುವ ಸಂದರ್ಭದಲ್ಲಿಯೇ ಪತ್ರಿಕೆ ಪ್ರಾರಂಭಿಸುವ ಧೈರ್ಯ ತೋರಿದ ಎಂ. ಬಿ. ದೇಸಾಯಿಯವರು ಬೆಳಗಾವಿಯ ಪ್ರಮುಖ ಪತ್ರಕರ್ತರಾಗಿದ್ದಾರೆ. ಮೂಲತಃ ಸ್ವಾತಂತ್ರ್ಯ ಹೋರಾಟಗಾರರ ಮನೆತನದಿಂದ ಬಂದವರು. ಅಪ್ಪಟ ಗಾಂದಿವಾದಿಗಳು. ಹೀಗಾಗಿ ಸತ್ಯ, ನ್ಯಾಯ, ನಿಷ್ಠುರವಾಗಿ ಹೋರಾಡುತ್ತಲೇ ಬಂದರು. ಈಗ ಲೋಕದರ್ಶನ ಪತ್ರಿಕೆಯು ಬೆಳಗಾವಿ, ಬಳ್ಳಾರಿ, ಕಲ್ಬುರ್ಗಿ, ವಿಜಾಪುರ ಈ ನಾಲ್ಕು ಆವೃತ್ತಿಗಳನ್ನು ಹೊರತರುತ್ತದೆ. ಡೆಮಿ ಆಕಾರದ ನಾಲ್ಕು ಪುಟಗಳಲ್ಲಿ ಹೊರಬರುತ್ತಿದ್ದು, ಅತ್ಯಾಧುನಿಕ ವೆಬ್ ಆಫ್‌ಸೆಟ್ ಮುದ್ರಣಯಂತ್ರ, ಟೈಪ್ ಸೆಟ್ಟಿಂಗ್ ಘಟಕ, ಫ್ಯಾಕ್ಸ್, ಮೋಡಂಗಳೊಂದಿಗೆ ಸುಸಜ್ಜಿತವಾಗಿದೆ. ಬೆಳಗಾವಿ ಜಿಲ್ಲೆಯಲ್ಲಿ ಪ್ರೆಸ್ ಟ್ರಸ್ಟ್ ಆಫ್ ಇಂಡಿಯಾ ಸುದ್ದಿ ಸಂಸ್ಥೆಯನ್ನು ಮೊದಲು ಬಳಸಿಕೊಂಡ ಪತ್ರಿಕೆ ಲೋಕದರ್ಶನವಾಗಿದೆ. ೧೯೬೭ ರಲ್ಲಿಯೇ ಪಿ ಟಿ ಐ ಮೂಲಕ ಟೆಲಿಪ್ರಿಂಟರ್ ಸುದ್ದಿಗಳನ್ನು ಪಡೆದು ನೀಡಲಾರಂಭಿಸಿತು.

**ಸಮದರ್ಶಿ:** ೧೯೫೭ ರಲ್ಲಿ ವಾರಪತ್ರಿಕೆಯಾಗಿ ೧೯೬೭ ರಿಂದ ದಿನಪತ್ರಿಕೆಯಾಗಿ ಕಳೆದ ೫೫ ವರ್ಷಗಳಿಂದ ಬಿ.ಎ. ಧಾರವಾಡಕರ ಸಂಪಾದಕತ್ವದಲ್ಲಿ ಪ್ರಕಟಣೆಗೊಳ್ಳುತ್ತಿದೆ. ಮಧ್ಯದಲ್ಲಿ ೧೯೬೫ ರಿಂದ ೧೯೯೧ ರವರೆಗೆ ಗೋಕಾಕಕ್ಕೆ ಸ್ಥಳಾಂತರಗೊಂಡು ಮುಂದೆ ೧೯೯೧ ರಿಂದ ಬೆಳಗಾವಿಯಿಂದಲೇ ನಿರಂತರವಾಗಿ ಪ್ರಕಟಗೊಳ್ಳುತ್ತಿದೆ. ಕಮ್ಯುನಿಷ್ಟ ಸಿದ್ಧಾಂತಗಳಿಗೆ ಮಾರು ಹೋದ ಧಾರವಾಡಕರರು ಕಾರ್ಮಿಕಪರ ಹೋರಾಟ ಸಂಘಟನೆಗಳಲ್ಲಿ ತೊಡಗಿ, ರೈತ ಚಳುವಳಿಯ ಕಾಲಕ್ಕೆ ಬಂಧನಕ್ಕೊಳಗಾಗಿ ನಾಸಿಕ ಜೈಲಿನಲ್ಲಿ ಹಲವು ವರ್ಷ ಕಳೆದರು. ಹೋರಾಟಕ್ಕೆ ಬೆಂಬಲವಾಗಿ ಪತ್ರಿಕೆಯೊಂದು ಬೇಕೆನಿಸಿದಾಗ 'ಸಮದರ್ಶಿ'ಯನ್ನು ಪ್ರಾರಂಭಿಸಿದರು. ಸಾಮಾಜಿಕ ಸಮಾನತೆಯ ಕನಸು ಕಾಣುತ್ತ, ತಮ್ಮ ಉದ್ದೇಶ ಸಾಧನೆಗಾಗಿ ಪತ್ರಿಕೆಯನ್ನು ಪರಿಣಾಮಕಾರಿಯಾಗಿ ಬಳಸಿಕೊಂಡರು. ಏಕೀಕರಣ ಚಳುವಳಿಯಲ್ಲೂ ಪಾಲ್ಗೊಂಡು ೧೯೫೩ ರ ಸುಮಾರಿನಲ್ಲಿ ಬಂಧನಕ್ಕೊಳಗಾಗಿ ಹಿಂಡಲಗಾ ಜೈಲಿನಲ್ಲಿದ್ದರು. ಎಡಪಂಥೀಯ ನಿಲುವಿನ ನಿರಂಜನ, ಬಸವರಾಜ ಕಟ್ಟಿಮನಿ, ಹಿಂಗಮಿರೆ ಮೊದಲಾದ ಬರಹಗಾರರ ಬರಹಗಳನ್ನು ಹೆಚ್ಚಾಗಿ ಪ್ರಕಟಿಸುತ್ತಾ ಬಂದರು. ನಡುವೆ 'ಯುಗದೀಪ' ಎಂಬ ವಾರ ಪತ್ರಿಕೆಯನ್ನು ಕೆಲಕಾಲ ಹೊರತಂದು ತಾವೊಬ್ಬ ಉತ್ತಮ ಬರಹಗಾರರು ಎಂಬುದನ್ನು ಸಾಬೀತುಪಡಿಸಿದರು. ಸಮದರ್ಶಿ ವಾರಪತ್ರಿಕೆಯಾಗಿದ್ದಾಗ ಬಿಡಿ ಪ್ರತಿಯ ಬೆಲೆ ಆರು ಪೈಸೆಗಳಿದ್ದವು. ಈಗ ಪತ್ರಿಕೆಯ ನಿರ್ವಹಣೆಯಲ್ಲಿ ಪುತ್ರರಾದ ಶಹೀದ್, ಸಲೀಮ್ ಇಬ್ಬರೂ ಸಹಕರಿಸುತ್ತಿದ್ದಾರೆ.

**ರಣಝುಂಝಾರ :** ಕಾಲಕುಂದ್ರೀಕರ ಸಹೋದರರ ಸಂಪಾದಕತ್ವದಲ್ಲಿ ೧೯೭೦ ರಲ್ಲಿ ವಾರಪತ್ರಿಕೆಯಾಗಿ, ೧೯೭೮ ರಿಂದ ದಿನಪತ್ರಿಕೆಯಾಗಿ ಪ್ರಕಟಗೊಳ್ಳುತ್ತಿದೆ. ಇಂದು ಬೆಳಗಾವಿಯ ಮುಖ್ಯ ಮರಾಠಿ ಪತ್ರಿಕೆಗಳಲ್ಲಿ ಝುಣಝುಂಝಾರವೂ ಒಂದಾಗಿದೆ. ಈ ಪತ್ರಿಕೆಯು ಮೂರು ರಾಜ್ಯಗಳಲ್ಲಿ ತನ್ನ ಆವೃತ್ತಿಗಳನ್ನು ಹೊರತರುತ್ತಿದೆ. ಬೆಳಗಾವಿ, ಗೋವಾ, ಕೊಲ್ಲಾಪುರಗಳಲ್ಲಿ ಆವೃತ್ತಿಗಳನ್ನು ಹೊಂದಿ ಬೆಳಗಾವಿಯ ಹಿಂದವಾಡಿ ಭಾಗದಲ್ಲಿ ಸ್ವಂತ ಕಟ್ಟಡವನ್ನು ಹೊಂದಿದೆ.

**ವೀರವಾಣಿ :** ೧೯೭೭ ರಿಂದ ಪ್ರಕಟಣೆ ಆರಂಭಿಸಿದ 'ವೀರವಾಣಿ' ಮರಾಠಿವಾರಪತ್ರಿಕೆ ಗ.ಗೋ ರಾಜಾಧ್ಯಕ್ಷ ಅವರ ಸಂಪಾದಕತ್ವದಲ್ಲಿ ಪ್ರಕಟಗೊಂಡಿತು. ಗ ಗೋ ರಾಜಾಧ್ಯಕ್ಷ ಅವರು ರಾಷ್ಟ್ರೀಯ ಸ್ವಯಂ ಸೇವಕ ಸಂಘದ ನಿಷ್ಠಾವಂತ ಕಾರ್ಯಕರ್ತರಾಗಿ ಹಲವಾರು ಪತ್ರಿಕೆಗಳಲ್ಲಿ ಸೇವೆ ಸಲ್ಲಿಸಿ ಅನುಭವ ಹೊಂದಿದ್ದರು. ಈ ಪತ್ರಿಕೆಯು ವಿಶ್ವಹಿಂದೂ ಪರಿಷತ್, ಆರ್ ಎಸ್.ಎಸ್. ಮೊದಲಾದವುಗಳ ವಿಚಾರಧಾರೆಗಳನ್ನು ಪ್ರತಿಬಿಂಬಿಸುವ ರಾಷ್ಟ್ರೀಯವಾದಿ ಪತ್ರಿಕೆಯಾಗಿದೆ. ಹಿಂದೂ ಧರ್ಮ ಸಂಸ್ಕೃತಿಗಳ ಬಗ್ಗೆ ವಿಶೇಷವಾದ ಬರಹಗಳನ್ನು ಪರಿಣಾಮಕಾರಿಯಾಗಿ ಪ್ರಕಟಿಸುತ್ತ ಬಂದಿದೆ.

**ಜೋಹರ್-ಎ-ಗುಪ್ತಾರ್ :** ಉತ್ತರ ಕರ್ನಾಟಕದ ಮೊಟ್ಟ ಮೊದಲ ಉರ್ದು ಪತ್ರಿಕೆಯಾಗಿ ಬೆಳಗಾವಿಯ ಏಕೈಕ ಉರ್ದು ಪತ್ರಿಕೆಯೆಂಬ ಹೆಗ್ಗಳಿಕೆಗೆ ಪ್ರಾಪ್ತವಾದ 'ಜೋಹರ್-ಎ-ಗುಪ್ತಾರ' ೧೯೭೯ ರಿಂದ ಪ್ರಕಟಣೆಯನ್ನು ಆರಂಭಿಸಿತು. ಶ್ರೀ ಘರೂಕ ಹನ್ನನ್ ಎನ್ನುವವರು ಪತ್ರಿಕೆಯ ಸಂಪಾದಕರಾಗಿ ಮುದ್ರಕರಾಗಿ ೧೯೭೯ ರಿಂದ ವಾರಪತ್ರಿಕೆಯಾಗಿ, ದಿನಪತ್ರಿಕೆಯಾಗಿ ಪತ್ರಿಕೆಯನ್ನು ನಡೆಸಿಕೊಂಡು ಸಾಗಿದ್ದಾರೆ.

ಟೆಬ್ಲಾಯಿಡ್ ಆಕಾರದ ಈ ಉರ್ದು ಪತ್ರಿಕೆಯು ಉತ್ತರ ಕರ್ನಾಟಕದ ಜನತೆಯ ಆಶೋತ್ತರಗಳ ಪ್ರತಿನಿಧಿಯಾಗಿ ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸುತ್ತ ಬರುತ್ತಲಿದೆ. ೧೯೮೮ ರವರೆಗೆ ರಣಝುಂಝಾರ ಮರಾಠಿ ಪತ್ರಿಕೆಯ ಮುದ್ರಣಾಲಯದಲ್ಲಿ ಪ್ರಕಟಗೊಳ್ಳುತ್ತ ೧೯೮೮ ರಲ್ಲಿ ಸ್ವಂತ ಮುದ್ರಣಾಲಯವನ್ನು ಹೊಂದಿತು. ಸ್ತ್ರೀ ಶಿಕ್ಷಣ, ವರದಕ್ಷಿಣೆ ಸಮಸ್ಯೆ, ಸಾಮಾಜಿಕ ಅನಿಷ್ಟಗಳು, ಸಮಸ್ಯೆಗಳು, ಮುಂತಾದವುಗಳ ವಿರುದ್ಧ ಪರಿಣಾಮಕಾರಿಯಾದ ಲೇಖನಗಳನ್ನು ಪ್ರಕಟಿಸಿ ಗುರುತರ ಕಾರ್ಯವನ್ನು ಮಾಡಿದೆ. ರಾಷ್ಟ್ರೀಯ ದೃಷ್ಟಿ-ಧೋರಣೆಯನ್ನು ಹೊಂದಿರುವ ಪತ್ರಿಕೆ ರಾಜ್ಯ ರಚನಾ ಪ್ರಕ್ರಿಯೆಯಲ್ಲಿಯೂ ಸಕ್ರಿಯ ಪಾತ್ರವಹಿಸಿದೆ. ಬೆಳಗಾವಿಯು ಕರ್ನಾಟಕ ರಾಜ್ಯದಲ್ಲಿಯೇ ಇರಬೇಕಾದುದು ನ್ಯಾಯ ಎಂಬ ಸಂಗತಿಯನ್ನು ಎತ್ತಿ ಹಿಡಿದಿದೆ. ಮಹಾಜನ ವರದಿಯನ್ನು ಪತ್ರಿಕೆ ಬೆಂಬಲಿಸುತ್ತ ಬಂದಿದೆ. ಆದರೆ ಉರ್ದು ಭಾಷಿಕ ಅಲ್ಪ ಸಂಖ್ಯಾತರ ಹಿತಾಸಕ್ತಿಗಳಿಗೆ ವಿರುದ್ದವಾಗಿರುವ ಗೋಕಾಕ ಸಮಿತಿಯ ವರದಿಗೆ ತನ್ನ ತೀವ್ರ ಪ್ರತಿಭಟನೆಯನ್ನು ವ್ಯಕ್ತಪಡಿಸಿದೆ. ಈಗ ಈ ಪತ್ರಿಕೆಯು ಕನ್ನಡದಲ್ಲಯೂ ಪ್ರಕಟಗೊಳ್ಳುತ್ತಿದೆ.

ಪ್ರಭಾಕರ ಅನಿಗೋಳ ಎನ್ನುವವರು ಪತ್ರಿಕೋದ್ಯಮದಲ್ಲಿ ನೆಲೆ ನಿಲ್ಲಲು ಹಲವಾರು ಪತ್ರಿಕೆಗಳನ್ನು ಪ್ರಾರಂಭಿಸಿದರು. ೧೯೫೫ ರಲ್ಲಿ 'ಶಾರದಾ' ಸಾಹಿತ್ಯಿಕ ಮಾಸಪತ್ರಿಕೆ, ೧೯೬೩ ರಲ್ಲಿ 'ಅಖಂಡ ಕರ್ನಾಟಕ' ವಾರಪತ್ರಿಕೆ, ೧೯೬೪ ರಲ್ಲಿ 'ಕನ್ನಡ ತಾಯಿ' ವಾರ ಪತ್ರಿಕೆ, ೧೯೭೩ ರಲ್ಲಿ ಬೆಳಗಾಂವ್ ಟೈಮ್ಸ್ ಕನ್ನಡ ದಿನಪತ್ರಿಕೆ, ಹೀಗೆ ಹಲವಾರು ಪತ್ರಿಕೆಗಳನ್ನು ಪ್ರಾರಂಭಿಸಿ ಬೆಳಗಾವಿಯ ಪತ್ರಿಕೋದ್ಯಮದಲ್ಲಿ ಸಂಚಲನವನ್ನುಂಟು ಮಾಡಿದರು. ಇವರು ಪತ್ರಿಕೆಗಳನ್ನು ಮಾರಾಟ ಮಾಡುವ ರೀತಿ ವಿಶೇಷವಾಗಿತ್ತು. ಪತ್ರಿಕೆಗಳನ್ನು ಮಾರಾಟಮಾಡುವ ಹುಡುಗರು ಕೈಯಲ್ಲಿ ತುತ್ತುರಿ ಹಿಡಿದು ಊದುತ್ತ ಪತ್ರಿಕೆಯಲ್ಲಿಯ ವಾರ್ತೆಗಳ ಬಗ್ಗೆ ಹೇಳಿ ಜನರನ್ನು ಆಕರ್ಷಿಸುತ್ತಿದ್ದರು.

**ನಾಡೋಜ:** ಗಡಿ-ಭಾಷೆಗಳ ವಿವಾದ ತೀವ್ರತೆ ಪಡೆದುಕೊಂಡ ಕಾಲದಲ್ಲಿ ಕೆಲವು ಯುವ ಉತ್ಸಾಹಿ ಯುವಕರು ಒಂದಾಗಿ ಪತ್ರಿಕೆ ಆರಂಭಿಸುವ ನಿರ್ಧಾರಕ್ಕೆ ಬಂದರು. ಅದರ ಫಲವಾಗಿ ೧೯೭೩ ಅಕ್ಟೋಬರ ೬ ರಂದು 'ನಾಡೋಜ' ಪತ್ರಿಕೆ ಪ್ರಕಟಣೆಯನ್ನು ಆರಂಭಿಸಿತು. ಮೊದಲು ವಾರ ಪತ್ರಿಕೆಯಾಗಿ ಟ್ಯಾಬ್ಲಾಯಿಡ್ ಆಕಾರದ ನಾಲ್ಕು ಪುಟಗಳಲ್ಲಿ ಹೊರ ಬಂದು ೧೯೭೪ ಡಿಸೆಂಬರ್ ೮ ರಿಂದ ದಿನಪತ್ರಿಕೆಯಾಗಿ ಪ್ರಕಟಗೊಳ್ಳತೊಡಗಿತು. ನಿರಂತರವಾಗಿ ೩೮ ವರ್ಷಗಳಿಂದ ಪ್ರಕಟಗೊಳ್ಳುತ್ತ ಬೆಳಗಾವಿಯಲ್ಲಿ ಕನ್ನಡ ಸಂಸ್ಕೃತಿಯನ್ನು ನಿರ್ಮಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತ ಬಂದಿದೆ.

ಹಿರಿಯ ಪತ್ರಕರ್ತರಾದ ಅರವಿಂದರಾವ್ ಜೋಶಿಯವರು ಇದರ ಸಂಸ್ಥಾಪಕರಾಗಿ, ಸಂಪಾದಕರಾಗಿ ಕನ್ನಡಿಗರಲ್ಲಿ ಕನ್ನಡತನದ ಕೆಚ್ಚನ್ನು ತುಂಬಿದರು. ಹೊಯ್ಸಳ ಅರಸರ ಲಾಂಛನವನ್ನು ಮುಖಪುಟದಲ್ಲಿ ಹೊಂದಿ 'ಸಳನೇ ಹೊಯ್' ಎನ್ನುವ ಧ್ಯೇಯ ವಾಕ್ಯದೊಡನೆ ಬೆಳಗಾವಿಯ ಕನ್ನಡಪರ ಹೋರಾಟದಕ್ಕೆ ಮುಖವಾಣಿಯಾಗಿ ಬೆಳೆದು ಬಂದಿತು. ಮರಾಠಿ ಕಿಡಿಗೇಡಿಗಳಿಂದ ಸಾಕಷ್ಟು ತೊಂದರೆ ಅನುಭವಿಸಿದರೂ ತನ್ನ ನೀತಿ-ನಿಲುವಿಗೇ ಅಂಟಿಕೊಂಡೇ ಸಾಗಿ ಬಂದಿದೆ.೧ ಆಧುನಿಕ ಮುದ್ರಣ ವ್ಯವಸ್ಥೆಯನ್ನು ಹೊಂದಿದ್ದು ಬೆಳಗಾವಿಯಲ್ಲಿ ಮೊಟ್ಟ ಮೊದಲಬಾರಿಗೆ ಕಲರ್ ಸಪ್ಲಿಮೆಂಟ್ ನೀಡಿದ ದಿನಪತ್ರಿಕೆ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ.

**ಕನ್ನಡಮ್ಮ :** ೧೯೭೪ ಫೆಬ್ರುವರಿ ೨೧ ರಿಂದ ದಿ.ಎಂ.ಎಸ್. ಟೋಪಣ್ಣವರ ಅವರಿಂದ ಪ್ರಾರಂಭಗೊಂಡ 'ಕನ್ನಡಮ್ಮ' ದಿನಪತ್ರಿಕೆಯು ಉತ್ತರ ಕರ್ನಾಟಕದ ಪ್ರಮುಖ ಪತ್ರಿಕೆಗಳಲ್ಲಿ ಒಂದು. ಟೋಪಣ್ಣವರ ಅವರು ಪತ್ರಿಕೆಯೊಂದಿಗೆ ಗಡಿ ಭಾಷೆಗಳ ಚಳುವಳಿಯಲ್ಲಿ ಪ್ರಮುಖವಾದ ಪಾತ್ರವಹಿಸಿದರು. ಕನ್ನಡ ಹೋರಾಟಗಾರರ ಸಂಘ ಕಟ್ಟಿಕೊಂಡು ರೈಲು ತಡೆ ಧರಣಿ, ಸತ್ಯಾಗ್ರಹ, ಮೆರವಣಿಗೆಗಳನ್ನು ಸಂಘಟಿಸುತ್ತ ತರುಣರಲ್ಲಿ ಉತ್ಸಾಹ ತುಂಬುತ್ತಾ ಕನ್ನಡಪರ ಹೋರಾಟಗಳಲ್ಲಿ ಮಂಚೂಣಿಯಲ್ಲಿರುತ್ತಿದ್ದರು. ಬೆಳಗಾವಿ, ಧಾರವಾಡ, ವಿಜಾಪುರ, ಕಾರವಾರಗಳಲ್ಲಿ ಆವೃತ್ತಿಗಳನ್ನು ಹೊಂದಿ ಉತ್ತರ ಕರ್ನಾಟಕದ ವ್ಯಾಪ್ತಿಯನ್ನು ಹೊಂದಿದೆ. ಈ ಪತ್ರಿಕೆಯು ಗ್ರಾಮೀಣ ಭಾಗಗಳಲ್ಲಿ ತನ್ನ ಪ್ರಸಾರ ಸಂಖ್ಯೆಯನ್ನು ಹೆಚ್ಚಾಗಿ ಹೊಂದಿದೆ. ಟೊಪಣ್ಣನವರ ಅವರು ೧೯೯೦ ರಲ್ಲಿ ರಸ್ತೆ ಅಪಘಾತದಲ್ಲಿ ಅಕಾಲಿಕ ಮರಣ ಹೊಂದಿದ ಮೇಲೆ ಪತ್ನಿ ಉಮಾದೇವಿ ಟೋಪಣ್ಣವರ ಅವರು ಪತ್ರಿಕೆಯನ್ನು ಅತ್ಯಂತ ಅಚ್ಚುಕಟ್ಟುತನದಿಂದ ಮುನ್ನಡೆಸಿಕೊಂಡು ಬರುತ್ತಿದ್ದಾರೆ.

**ಸಮತೋಲ :** ಬೆಳಗಾವಿಯ ಏಕೈಕ ಸಂಜೆ ದಿನಪತ್ರಿಕೆ 'ಸಮತೋಲ' ಭೀಮಸೇನ ತೊರಗಲ್ಲರ ಸಂಪಾದಕತ್ವದಲ್ಲಿ ಪ್ರಾರಂಭಗೊಂಡಿತು. ನಾಲ್ಕು ಪುಟಗಳಲ್ಲಿ ಪ್ರಕಟಗೊಳ್ಳುತ್ತಿರುವ ಈ ಪತ್ರಿಕೆಯು ಬೆಳಗಾವಿಯಲ್ಲಿ ಕನ್ನಡ ಪತ್ರಿಕೆಗಳಲ್ಲಿ ಪ್ರಥಮವಾಗಿ ಕಂಪ್ಯೂಟರ್ ಟೈಪ್ ಸೆಟ್ಟಿಂಗ್ ಅಳವಡಿಸಿಕೊಂಡ ಹಿರಿಮೆಯನ್ನು ಹೊಂದಿದೆ. ತೊರಗಲ್ಲರು ಪತ್ರಿಕೋದ್ಯಮದ ಜೊತೆಗೆ ಸಾಹಿತ್ಯಿಕ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದಾರೆ. ಇವರ ಹಲವಾರು ಕೃತಿಗಳು ಗಮನ ಸೆಳೆದಿವೆ.

**ಹಳ್ಳಿಯ ಸಂದೇಶ :** ಪಿ ವಿಜಯಕುಮಾರ ಸಂಪಾದಕತ್ವದಲ್ಲಿ ೧೯೮೨ ರಿಂದ ಪ್ರಕಟಣಗೊಳ್ಳುತ್ತ ಬಂದಿದೆ. ಈ ಪತ್ರಿಕೆಯಲ್ಲಿ ಜಿಲ್ಲೆಯ ಗ್ರಾಮೀಣ ಭಾಗದ ಸುದ್ದಿಗಳು ಹೆಚ್ಚಾಗಿ ಪ್ರಕಟಗೊಳ್ಳುತ್ತವೆ.

**ಹಸಿರು ಕ್ರಾಂತಿ :** ೧೯೮೫ ರಲ್ಲಿ ಹಸಿರು ಕ್ರಾಂತಿ ವಾರಪತ್ರಿಕೆಯಾಗಿ, ೧೯೯೪ ರಿಂದ ದಿನಪತ್ರಿಕೆಯಾಗಿ ಪ್ರಕಟಗೊಳ್ಳುತ್ತ ಬಂದಿದೆ. ಕಲ್ಯಾಣರಾವ್ ಮುಚಳಂಬಿಯವರ ಸಂಪಾದಕತ್ವದಲ್ಲಿ ಹೊರಬರುತ್ತಿರುವ ಈ ಪತ್ರಿಕೆಯು ರೈತ ಸಂಘಟನೆ, ಗ್ರಾಮೀಣಾಭಿವೃದ್ಧಿ ವಿಷಯಗಳಿಗೆ ಹೆಚ್ಚ ಒತ್ತು ಕೊಡುತ್ತಿದೆ.

**ಸಿರಿನಾಡು :** ೧೯೮೫ ರಲ್ಲಿ ಆರಂಭಗೊಂಡ ಸಿರಿನಾಡು ದಿನಪತ್ರಿಕೆಯು ಸುರೇಶ ಟೋಪಣ್ಣವರ ಅವರ ಸಂಪಾದಕತ್ವದಲ್ಲಿ ಪ್ರಕಟಗೊಳ್ಳುತ್ತಲಿದೆ ೨೫ ವರ್ಷಗಳನ್ನು ಪೂರೈಸಿದ ಈ ಪತ್ರಿಕೆಯು ಬೆಳಗಾವಿಯ ಪಾಟೀಲಗಲ್ಲಿಯಲ್ಲಿ ಕಾರ್ಯಾಲಯವನ್ನು ಹೊಂದಿದೆ.

ಈ ಎಲ್ಲ ಪತ್ರಿಕೆಗಳ ಜೊತೆಗೆ ಇನ್ನೂ ಹಲವಾರು ಪತ್ರಿಕೆಗಳು ಬೆಳಗಾವಿ ನಗರದಿಂದ ಪ್ರಕಟಣೆಗೊಂಡಿವೆ. ಎಂ. ಎಲ್. ಭೋಸಲೆಯವರ ರಜತ ಪ್ರಕಾಶ (೧೯೮೨) ಅಶೋಕ ಪಾಟೀಲರ ಕಲಿಯುಗ (೧೯೮೨) ಅಶೋಕ ಚಂದರಗಿಯವರ ರವಿವಾರ (೧೯೮೩) ಬಗಲಿ ಪಾಟೀಲರ ಬೆಳಗಾವ್ ಹೆರಾಲ್ಡ್ (೧೯೮೩), ಎಸ್. ಆರ್ ಬುಖಾರಿಯವರ ಬೆಳಗಾವ್ ಸನ್ (೧೯೮೪) ಪಿ. ಎಸ್. ಪಾಟೀಲರ ಕರ್ನಾಟಕ ಮುನ್ನಡೆ (೧೯೮೪) ಶ್ರೀಮತಿ ಶಾರದಾ ಆನಿಗೋಳರ ಬೆಳಗಾವಿ ಕನ್ನಡಿಗ (೧೯೮೪) ಎಂ. ಕೆ. ಜುವೇಕರ ಅವರ ಡೇಲಿ ದೈನಂದಿನ (೧೯೮೫)ಅಶೋಕ ಪಾಟೀಲರ ಸ್ನೇಹವಾಣಿ (೧೯೮೫) ಆರ್. ಎಲ್. ಬೋಗಾರರ ಪ್ರಜಾದೇಶ (೧೯೮೫) ರವದಿಯವರ ಹೂಮಾಲೆ (೧೯೮೫) ಕಾಂಗಲೆಯವರ ಲೋಕವೃತ್ತ, ಶಾಸ್ತ್ರಿಯವರ 'ಆಚಾರ' ಘೀವಾರಿಯವರ 'ಬಸವ ಕ್ರಾಂತಿ', ಪೀರಜಾದೆಯವರ 'ರವಿರಾಜ' ಎಸ್. ಎ. ಪಾಟೀಲರ 'ಬೆಳವಲ' ಕರಾಳೆಯವರ 'ದೀರ್ಘ ಬಾಹು' ಚೌಗುಟಿಯವರ 'ಮಹಿಳಾ ಜ್ಯೋತಿ' ಶ್ರೀಮತಿ ಗಂಗಾದೇವಿ ಶಿ ಕುಸುಗಲ್ಲರ 'ನಾಡಸಿರಿ' ಶ್ರೀ ವಲ್ಲಭ ದೇಸಾಯಿಯವರ 'ಬೆಳಗಾವಿ ಮಹಾನಗರ' ಮೋಹನ ಗಡಾದರ 'ಇಂದಿನ ಕಲಿಯುಗ' ಚಂದ್ರಶೇಖರ ಶಿರೂರರ 'ಕಾನೂನು' ಮಹಾಂತೇಶ ಮೂಗಿಯವರ 'ಸಮರ ಭೂಮಿ' ರಾಜಶೇಖರ ಕೊರವಾರರ 'ಶ್ರಿಮಾದರಸ' ಎಲ್. ಎಸ್. ಶಾಸ್ತ್ರೀಯವರ 'ಗೌರವ' ಗಿರೀಶ ಉದೋಶಿಯವರ 'ಕನ್ನಡ ಮಲ್ಲ' ಅರ್ಜುನ ಕಾಂಬಳೆಯವರ 'ಮುಂಜಾವಿನ ಮಂಜು' ಸಿ. ಎ. ಖರಾಡೆಯವರ 'ಕಾರ್ಮಿಕ ರಂಗ' ವೈ ಎಸ್ ಕೃಷ್ಣಮೂರ್ತಿಯವರ 'ಕನ್ನಡ ಪ್ರಭ' ಶೇಖರ ಗುಪ್ತಾರವರ 'ಇಂಡಿಯನ್ ಎಕ್ಸಪ್ರೆಸ್' ಪ್ರತಾಸಿಂಗ್ ಜಾಧವರ 'ಪುಢಾರಿ' ಬುಕಿಟಗಾರರ 'ಸಹಕಾರಿ ಜಗತ್ತು' ಶಶಿಕಲಾ ಜೋಶಿಯವರ 'ಭಂಡ ಕನ್ನಡಿಗ' ಎನ್. ಡಿ. ಬಂಡಿವಡ್ಡರರ ಸ್ಫೂರ್ತಿಯ ಸೆಲೆ, ಮಾಧವ ದೇಶಪಾಂಡೆಯವರ 'ಹಾಯ್ ಬೆಳಗಾವಿ' ಮುಂತಾದ ಪತ್ರಿಕೆಗಳು ಹುಟ್ಟಿಕೊಂಡು ಕೆಲವು ತಿಂಗಳು, ವರ್ಷಗಳನ್ನು ಪೂರೈಸಿವೆ. ಕನ್ನಡ, ಮರಾಠಿ, ಇಂಗ್ಲಿಷ್, ಹಿಂದಿ, ಉರ್ದು ಭಾಷೆಗಳಲ್ಲಿ ದಿನಪತ್ರಿಕೆ, ವಾರ, ಪಾಕ್ಷಿಕ,ಮಾಸ ಪತ್ರಿಕೆಗಳಾಗಿ ಪ್ರಕಟಗೊಂಡು ತನ್ನದೆ ಆದ ಸೀಮಿತ ವಲಯವನ್ನು, ಓದುಗರನ್ನು ಹೊಂದಿ ಧರ್ಮ, ಸಮಾಜ, ಸಾಹಿತ್ಯ, ಭಾಷಾ ವಲಯಗಳಲ್ಲಿ ಜಾಗೃತಿಯನ್ನುಂಟು ಮಾಡುವಲ್ಲಿ ಪ್ರಯತ್ನಿಸಿವೆ. ಬೆಳಗಾವಿ ಪತ್ರಿಕೆಗಳನ್ನು ಗಮನಿಸಿದಾಗ ನಿರಂತರವಾಗಿ ನಡೆಯುವ ಪತ್ರಿಕೆಗಳ ಸಂಖ್ಯೆ ಕಡಿಮೆ ಇದೆ. ಪ್ರಕಟಣೆಯನ್ನು ನಿಲ್ಲಿಸಿದ ಪತ್ರಿಕೆಗಳಿಗೆ ಮುಖ್ಯವಾದ ಕಾರಣ ಆರ್ಥಿಕ ಸಮಸ್ಯೆ ಎನ್ನುವುದು ಮೇಲ್ನೋಟಕ್ಕೆ ಕಂಡು ಬಂದರೂ ಈ ಪರಿಸ್ಥಿತಿ ಒದಗಿಬರುವುದರ ಹಿಂದೆ ಪತ್ರಿಕೆಯ ಗುಣ-ದೋಷಗಳು ಪ್ರಮುಖವಾದ ಕಾರಣಗಳಾಗಿವೆ. ಕರ್ನಾಟಕ ವೃತ್ತ ಪತ್ರಿಕೆಗಳ ಇತಿಹಾಸಕ್ಕೆ ಈಗ ೧೬೯ ವರ್ಷಗಳು. ಬೆಳಗಾವಿ ಪತ್ರಿಕಾರಂಗಕ್ಕೆ

ಈಗ ೧೬೩ ವರ್ಷಗಳು. ಅಂದರೆ ಕನ್ನಡ ಪತ್ರಿಕೋದ್ಯಮ ಪ್ರಾರಂಭಗೊಂಡು ಕೇವಲ ಆರು ವರ್ಷಗಳ ಅಂತರದಲ್ಲಿ ಬೆಳಗಾವಿ ಪತ್ರಿಕೋದ್ಯಮವು ಕಾರ್ಯಾರಂಭ ಮಾಡಿತು. ಈ ಸುದೀರ್ಘ ಅವಧಿಯಲ್ಲಿ ಬೆಳಗಾವಿಯಿಂದ ೨೦೦ಕ್ಕೂ ಹೆಚ್ಚು ಪತ್ರಿಕೆಗಳು ಹುಟ್ಟಿಕೊಂಡಿವೆ. ಅವುಗಳಲ್ಲಿ ಇಂದು ಕೇವಲ ೨೦-೨೫ ಪತ್ರಿಕೆಗಳು ಮಾತ್ರ ಹೊರಬರುತ್ತಿವೆ. ಇನ್ನೂ ಕೆಲವು ಪತ್ರಿಕೆಗಳು ಹುಟ್ಟುತ್ತಲೇ ಇವೆ.

ಬೆಳಗಾವಿ ಪತ್ರಿಕಾರಂಗಕ್ಕೆ ಬೇರೆಯಾವ ಪ್ರದೇಶದಲ್ಲಿಯೂ ಕಂಡು ಬರದ ವೈಶಿಷ್ಟ್ಯತೆ ಇದೆ. ಬಹು ಸಂಸ್ಕೃತಿಯ ನೆಲೆಯಾದ ಬೆಳಗಾವಿಯಲ್ಲಿ ಎಲ್ಲ ವಲಯಗಳಲ್ಲಿ ಕಂಡು ಬರುವ ವೈವಿಧ್ಯತೆ ಇಲ್ಲಿಯ ಪತ್ರಿಕೆಗಳಲ್ಲಿಯೂ ಕಾಣಬರುತ್ತದೆ. ದೇಶದ ಸ್ವಾತಂತ್ರ್ಯ ಹೋರಾಟ, ನಾಡಿನ ಏಕೀಕರಣ ಚಳುವಳಿ, ಗಡಿ ಸಮಸ್ಯೆ,ಧರ್ಮ ಧರ್ಮಗಳಲ್ಲಿ ಸಂಘರ್ಷ, ಸಮಾಜಗೊಳಗಿನ ಅಸಮಾನತೆ, ಸಾಮಾಜಿಕ ಸಮಸ್ಯೆಗಳು, ಮೂಢನಂಬಿಕೆಗಳು, ಅನ್ಯಾಯ, ಭ್ರಷ್ಟಾಚಾರ, ಮೋಸ, ವಂಚನೆ, ಕೊಲೆ, ಸುಲಿಗೆ-ಹೀಗೆ ಹಲವಾರು ಸಂದರ್ಭಗಳಲ್ಲಿ ಬೆಳಗಾವಿಯ ಪತ್ರಿಕೆಗಳು ಮಹತ್ವದ ಪಾತ್ರವನ್ನು ವಹಿಸಿವೆ, ಸಮಾಜವನ್ನು ಸುಸ್ಥಿತಿಗೆ ತಂದಿವೆ, ವಂಚಕರನ್ನು ದಂಡಿಸಿವೆ. ಕೋಪ, ತಾಪಕ್ಕೆ ಗುರಿಯಾಗಿವೆ. ಕಷ್ಟ ಅನುಭವಿಸಿವೆ. ಇವೆಲ್ಲದರ ನಡುವೆಯೂ ಪತ್ರಿಕೆಗಳು ತಮ್ಮ ಧ್ಯೇಯ, ಉದ್ದೇಶ, ಸಿದ್ಧಾಂತಗಳನ್ನು ಎಂದೂ ಕಳೆದುಕೊಳ್ಳದೆ ಸಾಗಿ ಬಂದದ್ದು ಬೆಳಗಾವಿ ಪತ್ರಿಕೆಗಳ ವೈಶಿಷ್ಟ್ಯವಾಗಿದೆ.

ಒಟ್ಟಿನಲ್ಲಿ ಬೆಳಗಾವಿ ಪತ್ರಿಕೆಗಳು ಬೆಳಗಾವಿಯನ್ನು ಸಾಂಸ್ಕೃತಿಕವಾಗಿ ನಿರ್ಮಿಸಿವೆ. ಕಲೆ, ಸಾಹಿತ್ಯ, ಭಾಷೆಗಳ ಬೆಳವಣಿಗೆಯಲ್ಲಿ ಮಹತ್ವದ ಪಾತ್ರವನ್ನು ವಹಿಸಿವೆ. ಗಡಿ ಸಮಸ್ಯೆ-ಸಂಘರ್ಷಗಳ ಸಂದರ್ಭಗಳಲ್ಲಿ ಮಾತ್ರ ಬೆಳಗಾವಿ ಪತ್ರಿಕೆಗಳು ತಂತಮ್ಮ ಭಾಷಿಕರ ಬೆಂಬಲಕ್ಕೆ ನಿಂತಿರಬಹುದು. ಉಳಿದೆಲ್ಲಾ ಸಂದರ್ಭಗಳಲ್ಲಿ ಎರಡೂ ಭಾಷೆಗಳನ್ನು ಸಮಾನ ದೃಷ್ಟಿಕೋನದಿಂದ ನೋಡಿ ಪತ್ರಿಕಾ ಧರ್ಮವನ್ನು ಕಾಪಾಡಿಕೊಂಡು ಬಂದಿರುವುದು ಬೆಳಗಾವಿ ಪತ್ರಿಕೆಗಳ ಹಿರಿಮೆ.

**೪. ಸಂಘ-ಸಂಸ್ಥೆಗಳು:**

ಕರ್ನಾಟಕದ ಮಹಾನಗರಗಳಲ್ಲಿಯೇ ವಿಶಿಷ್ಟವಾದ, ವೈವಿಧ್ಯಮಯವಾದ ಸಂಸ್ಕೃತಿಯನ್ನು ಹೊಂದಿದ ಬೆಳಗಾವಿ ಮಹಾನಗರವು ಹಳ್ಳಿಯಿಂದ ಹಂತಹಂತವಾಗಿ ಬೆಳೆದು ಪ್ರಮುಖ ಮಹಾನಗರವಾಗಿ ಬೆಳೆದಿದೆ, ಬೆಳೆಯುತ್ತಿದೆ. ಬೆಳವಣಿಗೆಯ ಈ ದಾರಿಯಲ್ಲಿ ಹಲವಾರು ಸಂಘ-ಸಂಸ್ಥೆಗಳು ಹುಟ್ಟುಕೊಂಡು ಬೆಳಗಾವಿಯ ಧಾರ್ಮಿಕ, ಸಾಮಾಜಿಕ, ಶಿಕ್ಷಣ, ಸಾಹಿತ್ಯ, ಸಾಂಸ್ಕೃತಿಕ ವಲಯಗಳಲ್ಲಿ ಮಹತ್ವದ ಪರಿಣಾಮವನ್ನುಂಟುಮಾಡಿವೆ. ಬೆಳಗಾವಿಯು ಕ್ರಿ. ಶ. ೧೮೧೮ರಲ್ಲಿ ಬ್ರಿಟಿಷರ ವಶವಾದ ನಂತರ ಹೋರಾಟದ ನೆಲೆಯಾಗಿ ರೂಪಗೊಂಡಿತು. ಈ ಹೋರಾಟಗಳ ಹಿನ್ನೆಲೆಯಲ್ಲಿ ಸಾಂದರ್ಭಿಕವಾಗಿ ಬೆಳಗಾವಿ ನೆಲದಲ್ಲಿ ಹಲವಾರು ಸಂಘ-ಸಂಸ್ಥೆಗಳು ಹುಟ್ಟಿಕೊಂಡು, ಬೆಳಗಾವಿ

ಸಂಸ್ಕೃತಿಯ ನಿರ್ಮಾಣದಲ್ಲಿ ಮಹತ್ವದ ಕಾರ್ಯಗಳನ್ನು ಮಾಡಿವೆ. ಸ್ವಾತಂತ್ರ್ಯ ಹೋರಾಟ, ಏಕೀಕರಣ ಹೋರಾಟ, ಸಾಮಾಜಿಕ ಆಂದೋಲನಗಳು, ಧಾರ್ಮಿಕ ಆಂದೋಲನಗಳು–ಹೀಗೆ ಹಲವಾರು ಸಂದರ್ಭಗಳಲ್ಲಿ ನೆಲ, ಭಾಷೆ, ಕಲೆ, ಸಂಸ್ಕೃತಿಯ ರಕ್ಷಣೆಗಾಗಿ, ಉಳಿವಿಗಾಗಿ, ಬೆಳವಣಿಗೆಗಾಗಿ ಹಲವಾರು ಜನರು ಹೋರಾಟವನ್ನು ಕೈಗೊಂಡಿದ್ದಾರೆ. ಸೆರೆಮನೆ ಸೇರಿದ್ದಾರೆ. ಪ್ರಾಣ ನೀಡಿದ್ದಾರೆ. ಅವರೆಲ್ಲರ ಸೇವೆಯ ಫಲವೇ ಇಂದಿನ ಮಹಾನಗರದ ಬೆಳವಣಿಗೆಗೆ ಕಾರಣವಾಗಿದೆ.

**ಕರ್ನಾಟಕ ಸಂಘ :** ಕ್ರಿ.ಶ. ೧೯೧೫ ರಲ್ಲಿ ಸ್ಥಾಪನೆಗೊಂಡ ಬೆಳಗಾವಿಯ ಕರ್ನಾಟಕ ಸಂಘವು ಕರ್ನಾಟಕದಲ್ಲಿ ಸ್ಥಾಪನೆಗೊಂಡ ಅನೇಕ ಕರ್ನಾಟಕ ಸಂಘಗಳಲ್ಲಿ ಮಹತ್ವದ್ದಾಗಿದೆ. ಅಂದಿನ ಮುಂಬಯಿ ಸರಕಾರದ ನಿಯಮದಂತೆ ನೋಂದಣಿಯಾದ ಬೆಳಗಾವಿಯ ಮೊಟ್ಟ ಮೊದಲ ಸಂಘವಾಗಿದೆ. ಈ ಸಂಘದ ಸ್ಥಾಪನೆಯನ್ನು ಡಾ. ಸವಣೂರ ಹಣಮಂತರಾಯರು ಮಾಡಿದರು. ಇವರ ಜೊತೆಗೆ ಶ್ರೀ ಬೆಳವಿ ದತ್ತರಾಯರೂ ಕೂಡಿಕೊಂಡು ಹಲವಾರು ಕಾರ್ಯಗಳನ್ನು ನಿರ್ವಹಿಸಿದರು. ಡಾ. ಸವಣೂರರ ಕನ್ನಡದ ಬಗೆಗಿನ ಕಳಕಳಿ ಅಂದು ನಾಡಿನ ಉದ್ದಕ್ಕೂ ಪರಿಚಿತವಾಗಿದ್ದಿತು. ಅವರು ಬೆಳಗಾವಿಯಲ್ಲಿ ಕನ್ನಡವನ್ನು ಉಳಿಸಿ ಬೆಳೆಸುವದಕ್ಕಾಗಿ ಬೆಂಗಳೂರ, ಮೈಸೂರುಗಳವರೆಗೂ ಹೋಗಿ ಅಲ್ಲಿಯ ಹಿರಿಯರು, ಸಾಹಿತ್ಯ–ಸಂಸ್ಕೃತಿಗಳಲ್ಲಿ ಆಸಕ್ತಿ ಇದ್ದವರನ್ನೆಲ್ಲ ಕಂಡು ಬೆಳಗಾವಿ ಮತ್ತು ಸುತ್ತ ಮುತ್ತಲಿನ ಭಾಗದಲ್ಲಿ ಕನ್ನಡವನ್ನು ಬೆಳೆಸಲು ಸಹಾಯ ಮಾಡುವಂತೆ ವಿನಂತಿಸಿಕೊಂಡರು. ಧಾರವಾಡದ ಹಿರಿಯರಾದ ಕಡಪಾ ರಾಘವೇಂದ್ರರಾಯರು ಮುದವೀಡು ಕೃಷ್ಣರಾಯರು, ಆಲೂರು ವೆಂಕಟರಾಯರಂತಹ ಹಿರಿಯರ ಜೊತೆಗೆ ಆತ್ಮೀಯ ಸಂಬಂಧವನ್ನಿಟ್ಟುಕೊಂಡು ಈ ಭಾಗದ ಕನ್ನಡಿಗರ ಸಮಸ್ಯೆಗಳನ್ನು ಚರ್ಚಿಸಿದರು.

ಕರ್ನಾಟಕ ಸಂಘವು ಉಗಮವಾದಾಗಿನಿಂದ ಏಕಪ್ರಕಾರ ಕಾರ್ಯವನ್ನು ನಡೆಸುತ್ತಾ ಸಭೆ, ಭಾಷಣಗಳು, ನಾಡಹಬ್ಬ ಮುಂತಾದ ಕಾರ್ಯಗಳ ಮುಖಾಂತರವಾಗಿ ಕನ್ನಡ ಸಂದೇಶವನ್ನು ಸಾರುತ್ತ ಬಂದಿದೆ. ಸಂಘದ ಸದಸ್ಯರ ಸಂಖ್ಯೆ ಹೆಚ್ಚಾಗತೊಡಗಿದಂತೆ ಕನ್ನಡ ಕಾರ್ಯ ಚಟುವಟಿಕೆಗಳು ವೈವಿಧ್ಯಮಯವಾಗಿ ನಡೆಯತೊಡಗಿದವು. ಅಂದು ಬೆಳಗಾವಿಯಲ್ಲಿ ಪ್ರಸಿದ್ಧರಾದವರೆಲ್ಲಾ ಸಂಘದ ಸದಸ್ಯರಾಗಿದ್ದರು. ಸಾಹಿತಿ ಕಲ್ಲೋ ಗಣೇಶ ವಿಜಾಪೂರ, ಶೂರಪಾಲಿ ಆಚಾರ್ಯ, ಶ್ರೀ ಶೇ.ಪೋ ಗಿರಿಯಾಚಾರ್ಯ ಕಟ್ಟಿ, ಅನಂತರಾವ ಚಿಕ್ಕೋಡಿ, ಪ್ಯಾಟಿ ಶ್ಯಾಮರಾಯ, ಕೃಷ್ಣರಾವ ಜೋಶಿ, ನರಸಿಂಗರಾವ ಜೋಶಿ, ಅರವಿಂದರಾವ ಜೋಶಿ, ಬೋಠೆ ಅನಂತರಾಯ, ಪ್ರಗೋ.ಕುಲಕರಣಿ, ಶ್ರೀ ಶಾಮಾಜಿ ಬಿಂದ್ರೋ, ಬೆಂಗೋ ತೊರಗಲ್ಲ, ಸಾತ್ವಿಕ ವಕೀಲರು, ಮುತಾಲಿಕ ವೆಂಕಟರಾಯರು ಮುಂತಾದ ಮಹನೀಯರು ಕರ್ನಾಟಕ ಸಂಘದ ಸದಸ್ಯರಾಗಿ ಬೆಳಗಾವಿಯಲ್ಲಿ ಕನ್ನಡ ಕಾರ್ಯಕ್ರಮಗಳನ್ನು ರಚನಾತ್ಮಕವಾಗಿ ರಚಿಸಿ ಕನ್ನಡ ವಾತಾವರಣದ ಬೆಳವಣಿಗೆಗೆ ಕಾರಣರಾದರು.

ಕರ್ನಾಟಕ ಸಂಘದ ನಿರ್ವಹಣೆ ಯುವಕರ ಕೈಗೆ ಬಂದಾಗ ಸಂಘವು ಹೆಚ್ಚು ಕ್ರಿಯಾಶೀಲವಾಯಿತು. ತನ್ನ ಕಾರ್ಯಕ್ರಮಗಳಲ್ಲಿ ವೈವಿಧ್ಯತೆಯನ್ನು ತರತೊಡಗಿತು. ಕನ್ನಡ ಸಾಂಸ್ಕೃತಿಕ ಕಾರ್ಯಕ್ರಮಗಳು ಹೆಚ್ಚಾಗಿ ನಡೆಯತೊಡಗಿದವು. ಧ್ರುವರಾಜ ಮುತಾಲಿಕ ದೇಸಾಯಿ, ವೆಂ. ನಾ. ಕುಲಕರ್ಣಿ, ಹೇಮಂತ ಧರ್ಮಟ್ಟಿ, ವಸಂತ ಬೆಟಗೇರಿ, ಶ್ರೀ ಕೃಷ್ಣ ಪಾಟೀಲ ಮೊದಲಾದ ಯುವ ಉತ್ಸಾಹಿಗಳು ಕರ್ನಾಟಕ ಸಂಘದ ಹೊಣೆಗಾರಿಕೆಯನ್ನು ಹೊತ್ತರು. ಹಲವಾರು ಕನ್ನಡ ನಾಟಕಗಳನ್ನು ಪ್ರದರ್ಶಿಸಿದರು. ಶ್ರೀರಂಗರ ಪ್ರಪಂಚ ಪಾಣಿಪತ್ತು, ಸಂಧ್ಯಾಕಾಲ ಮೊದಲಾದ ನಾಟಕಗಳನ್ನು ರಂಗದ ಮೇಲೆ ತಂದರು.

ವಾಚನಾಲಯ : ಕರ್ನಾಟಕದ ಸಂಘದಿಂದ ವಾಚನಾಲಯವು ಕಾರ್ಯಾರಂಭಗೊಂಡು ಬೆಳಗಾವಿಯಲ್ಲಿ ಕನ್ನಡದ ಬೆಳವಣಿಗೆಯಲ್ಲಿ ಮಹತ್ವದ ಕಾರ್ಯಗಳನ್ನು ಮಾಡಿತು. ಅಂದಿನ ದಿನಗಳಲ್ಲಿ ಕನ್ನಡ ಪತ್ರಿಕೆಗಳನ್ನು ಓದುವವರೆ ಕಡಿಮೆ. ಎಲ್ಲರೂ ಮರಾಠಿ ಪತ್ರಿಕೆಗಳನ್ನು ಓದುತ್ತಿದ್ದರು. ಕನ್ನಡ ಪತ್ರಿಕೆಗಳನ್ನು ಕನ್ನಡಿಗರೇ ಓದದಿದ್ದರೆ ಹೇಗೆ ಎನ್ನುವ ನೋವು ಕರ್ನಾಟಕ ಸಂಘದ ಸದಸ್ಯರಲ್ಲಿ ಉಂಟಾಗಿ ವಾಚನಾಲಯವನ್ನು ಪ್ರಾರಂಭಿಸಿದರು. ಇದರಿಂದ ವಾಚನಾಲಯಕ್ಕೆ ಬಂದು ಓದುವವರ ಸಂಖ್ಯೆ ಹೆಚ್ಚಾಯಿತು. ಆಗಿನ ಪ್ರಸಿದ್ಧ ಕೃತಿಗಳನ್ನು ವಾಚನಾಲಯದಲ್ಲಿ ಸಂಗ್ರಹಿಸಿದರು. ಹೀಗಾಗಿ ಸಾಹಿತ್ಯವನ್ನು ಓದುವ ಅಭಿರುಚಿ ಕನ್ನಡಿಗರಲ್ಲಿ ಬೆಳೆಯಿತು. ಕನ್ನಡ ಸಾಹಿತ್ಯ ಸಂಸ್ಕೃತಿಯ ಬಗೆಗೆ ಅರಿವು ಮೂಡಿಸುವಲ್ಲಿ ಕರ್ನಾಟಕ ಸಂಘ ಮತ್ತು ವಾಚನಾಲಯಗಳು ಮಹತ್ವದ್ದಾಗಿವೆ.

**ಕೆ.ಎಲ್.ಇ. ಸಂಸ್ಥೆ :** ೧೯೧೬ರಲ್ಲಿಸ್ಥಾಪನೆಗೊಂಡ ಕೆ.ಎಲ್.ಇ. ಸಂಸ್ಥೆ ಬೆಳಗಾವಿಯಲ್ಲಿ ಹುಟ್ಟಿಕೊಂಡು ಬೆಳೆದಂತೆ ಕನ್ನಡತನವನ್ನು ಗಟ್ಟಿಗೊಳಿಸುತ್ತ ಕನ್ನಡಿಗರನ್ನು ಹುರಿದುಂಬಿಸುತ್ತ ಬಂದಿದೆ. ಕನ್ನಡಕ್ಕೂ ಈ ಸಂಸ್ಥೆಗೂ ಇರುವ ಅವಿನಾಭಾವ ಸಂಬಂಧವಿದೆ. ಕೆ.ಎಲ್.ಇ. ಸಂಸ್ಥೆಯು ಕನ್ನಡ ಸಂಸ್ಕೃತಿ ಸಂವರ್ಧನೆಗೆ ಅನುಪಮ ಸೇವೆಯನ್ನು ನೀಡಿದೆ. (ಸಂಸ್ಥೆಯ ಬಗೆಗೆ ವಿವರವಾಗಿ ಶೈಕ್ಷಣಿಕ ಕೊಡುಗೆ ಅಧ್ಯಾಯದಲ್ಲಿ ವಿವರಿಸಲಾಗಿದೆ. ಇಲ್ಲಿ ಸಂಸ್ಥೆಯ ಒಟ್ಟು ಸಾಂಸ್ಕೃತಿಕ ಕೊಡುಗೆಯನ್ನು ವಿಶ್ಲೇಷಿಸಲಾಗಿದೆ).

ಕೆ.ಎಲ್.ಇ. ಸಂಸ್ಥೆಯ ಪದಾಧಿಕಾರಿಗಳು ೧೯೧೬ರಿಂದಲೂ ಸಮಾಜದಲ್ಲಿ ಇತರ ಸಂಸ್ಥೆಗಳ ಅಧ್ಯಕ್ಷರಾಗಿ, ಉಪಾಧ್ಯಕ್ಷರಾಗಿ, ಆಡಳಿತ ಮಂಡಳಿ ಸದಸ್ಯರಾಗಿ, ಗುರುತಿಸಿಕೊಂಡವರಲ್ಲದೇ ಸರಕಾರಿ ಮತ್ತು ಸಹಕಾರಿ ಕ್ಷೇತ್ರಗಳಲ್ಲಿ ವಿವಿಧ ಪದವಿಗಳನ್ನು ಅಲಂಕರಿಸಿದವರು. ಅನೇಕರು ಮುಂಬೈ ಸರಕಾರದಲ್ಲಿ ಮಂತ್ರಿಗಳಾಗಿ, ಶಾಸಕರಾಗಿ, ವಿಧಾನ ಸಭೆ, ವಿಧಾನಪರಿಷತ್ ಸದಸ್ಯರಾಗಿ ಮಹತ್ವದ ಸ್ಥಾನಗಳನ್ನು ನಿರ್ವಹಿಸಿದ್ದಾರೆ. ಕನ್ನಡ ಸಂರಕ್ಷಣೆಯ ಸಂದರ್ಭಗಳಲ್ಲಿ ಕನ್ನಡಪರ ನಿಲುವುಗಳನ್ನು ತಳೆದಿದ್ದಾರೆ. ಕನ್ನಡ ಅಭಿವೃದ್ಧಿಗೆ ಯೋಜನೆಗಳನ್ನು ರೂಪಿಸಿದ್ದಾರೆ. ಗಡಿ ಆಯೋಗಗಳೆದುರು ಕೆ.ಎಲ್.ಇ. ಸಂಸ್ಥೆಯ ಪರವಾಗಿ ಮನವಿಗಳನ್ನು ಸಲ್ಲಿಸಿದ್ದಾರೆ. ಕನ್ನಡಿಗರ ಸಭೆ–ಸಮಾರಂಭಗಳಲ್ಲಿ ಹಾಗೂ ಸಮಾವೇಶಗಳಲ್ಲಿ ನಾಯಕತ್ವ ವಹಿಸಿ ಕೆ.ಎಲ್.ಇ. ಸಂಸ್ಥೆ ಕನ್ನಡ ಕೋಟೆಯೆಂಬುದನ್ನು ಸಾಬೀತುಪಡಿಸುತ್ತ ಬಂದಿದ್ದಾರೆ.

ಬೆಳಗಾವಿಯಲ್ಲಿ ನಡೆದುಕೊಂಡು ಬರುತ್ತಿರುವ ನಾಡಹಬ್ಬದ ಉತ್ಸವಗಳು ಪ್ರಾರಂಭದಲ್ಲಿ ಸಂಸ್ಥೆಯ ಲಿಂಗರಾಜ ಮಹಾವಿದ್ಯಾಲಯದಲ್ಲಿಯೇ ನಡೆಯುತ್ತಿದ್ದವು. ಬೆಳಗಾವಿಯಲ್ಲಿ ಇಲ್ಲಿಯವರೆಗೂ ಜರುಗಿದ ಎಲ್ಲ ಕನ್ನಡ ಸಾಹಿತ್ಯ ಸಮ್ಮೇಳನಗಳಲ್ಲಿ ಸಂಸ್ಥೆಯು ತನ್ನನ್ನು ಸಂಪೂರ್ಣವಾಗಿ ತೊಡಗಿಸಿಕೊಂಡು ಯಶಸ್ವಿಗೊಳಿಸಿದೆ. ವೀರಶೈವ ಮಹಾಸಭೆಯ ಅಧಿವೇಶನ, ಶರಣ ಸಾಹಿತ್ಯ ಸಮ್ಮೇಳನಗಳು ಕೆ.ಎಲ್.ಇ. ಸಂಸ್ಥೆಯ ಸಹಕಾರದಲ್ಲಿ ಯಶಸ್ವಿಯಾಗಿವೆ. ಬೆಳಗಾವಿಯಲ್ಲಿ ನಡೆದ ವಿಧಾನ ಮಂಡಲದ ಅಧಿವೇಶನವು ಕೆ.ಎಲ್.ಇ. ಸಂಸ್ಥೆಯ ನೆಲದಲ್ಲಿ ನಡೆದು ಯಶಸ್ವಿಯಾಗಿ ನಾಡಿನ ಜನತೆಯ ಅಭಿಮಾನಕ್ಕೆ ಪಾತ್ರವಾಗಿದೆ. ವಿಶ್ವಕನ್ನಡ ಸಮ್ಮೇಳನದಲ್ಲಿ ಸಂಸ್ಥೆಯು ಸಂಪೂರ್ಣವಾಗಿ ತನ್ನನ್ನು ತೊಡಗಿಸಿಕೊಂಡು ಅತ್ಯಂತ ಯಶಸ್ವಿಯಾಗಲು ಕಾರಣವಾಗಿದೆ.

**ಕರ್ನಾಟಕ ಸಾಹಿತ್ಯ ಸಂಘ (೧೯೩೩):** ಕೆ.ಎಲ್.ಇ. ಸಂಸ್ಥೆಯ ಲಿಂಗರಾಜ ಮಹಾವಿದ್ಯಾಲಯದಲ್ಲಿ ೧೯೩೩ರಂದು ಪ್ರೊ. ಶಿ.ಶಿ.ಬಸವನಾಳರು 'ಕರ್ನಾಟಕ ಸಾಹಿತ್ಯ ಸಂಘ'ವನ್ನು ಸ್ಥಾಪಿಸಿದರು. ಸಂಘದ ಪ್ರಥಮ ವರ್ಷದ ಪ್ರಾರಂಭೋತ್ಸವವನ್ನು ಖ್ಯಾತ ನಾಟಕಕಾರ ಪ್ರೊ. ಆರ್. ವ್ಹಿ. ಜಹಗೀರದಾರ ಅವರು ನೆರವೇರಿಸಿಕೊಟ್ಟರು. ಬೆಳಗಾವಿಯಲ್ಲಿ ಕನ್ನಡ ಜಾಗೃತಿಯನ್ನು ಮೂಡಿಸಿ ಕನ್ನಡತನವನ್ನು ಉಳಿಸಿ, ಬೆಳೆಸಿಕೊಂಡು ಹೋಗುವಲ್ಲಿ "ಈ ಸಂಘವು ಮಹತ್ವದ ಕಾರ್ಯವನ್ನು ಕೈಗೊಂಡಿತು. ಕನ್ನಡ ನಾಡು ನುಡಿಯ ಏಳಿಗೆಯ ಸಲುವಾಗಿ ಬೆಳಗಾವಿಯಲ್ಲಿ ಹೋರಾಟದಲ್ಲಿಯೂ ನಿರತವಾಯಿತು. ಈ ಸಂಘವು ಎರಡು ಗೊತ್ತು ಗುರಿಗಳನ್ನು ಇಟ್ಟುಕೊಂಡು ಕಾರ್ಯಾರಂಭ ಮಾಡಿತು. ಮೊದಲನೆಯದಾಗಿ ವಿದ್ಯಾರ್ಥಿ ವರ್ಗದಲ್ಲಿ ಕನ್ನಡಭಾಷೆಯ ಮೇಲೆ ಮಮತೆಯನ್ನು, ಉತ್ಸಾಹವನ್ನು ಹುಟ್ಟಿಸಿ ಬೆಳೆಸುವುದು. ಎರಡನೆಯದಾಗಿ ಅಭ್ಯಾಸ ಮಂಡಳಿಯನ್ನು ಏರ್ಪಡಿಸಿ, ಸಾಹಿತ್ಯದಲ್ಲಿ ಅಭಿರುಚಿಯುಳ್ಳ ಹಾಗೂ ಸಾಹಿತ್ಯ ಕ್ಷೇತ್ರದಲ್ಲಿ ದುಡಿಯಬೇಕೆಂಬ ಉತ್ಸಾಹಶಕ್ತಿಯುಳ್ಳ ವಿದ್ಯಾರ್ಥಿಗಳನ್ನು ವಿಮರ್ಶೆಯ ಕಾರ್ಯದಲ್ಲಿಯಾಗಲಿ, ಸಂಶೋಧನೆಯ ಕಾರ್ಯದಲ್ಲಿಯಾಗಲಿ ತೊಡಗಿಕೊಳ್ಳುವಂತೆ ಮಾಡುವುದು.

'ಕರ್ನಾಟಕ ಸಾಹಿತ್ಯ ಸಂಘ'ವು ಈ ರೀತಿಯ ಉದ್ದೇಶಗಳನ್ನಿಟ್ಟುಕೊಂಡು ಬೆಳಗಾವಿಯನ್ನು ಕಾರ್ಯಕ್ಷೇತ್ರವನ್ನಾಗಿಸಿಕೊಂಡು ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತು. ವರ್ಷದುದ್ದಕ್ಕೂ ಹಲವಾರುಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿತ್ತು. ಪ್ರತಿಯೊಂದು ಕಾರ್ಯಕ್ರಮಕ್ಕೂ ನಾಡಿನ ಹಾಗೂ ಹೊರನಾಡಿನ ವಿದ್ವಾಂಸರನ್ನು ಅತಿಥಿಗಳನ್ನಾಗಿ ಆಮಂತ್ರಿಸಿ ಅವರಿಂದ ಸಾಹಿತ್ಯ-ಸಂಸ್ಕೃತಿ ವಿಷಯದ ಮೇಲೆ ಉಪನ್ಯಾಸಗಳನ್ನು ಏರ್ಪಡಿಸಲಾಗುತ್ತಿತ್ತು. ವಿದ್ಯಾರ್ಥಿಗಳ ಸಲುವಾಗಿಯೇ ಲೇಖನ, ಪ್ರಬಂಧ ಸ್ಪರ್ಧೆಗಳನ್ನು ಏರ್ಪಡಿಸಿ, ವೇದಿಕೆಯ ಮೇಲೆ ಅವರಿಗೂ ಮಾತನಾಡಲು ಅವಕಾಶ ಕಲ್ಪಿಸಲಾಗುತ್ತಿತ್ತು.

ಬೆಳಗಾವಿಯಲ್ಲಿ ಮರಾಠಿಭಾಷೆಯ ಪ್ರಭಾವದಲ್ಲಿ ಇಂತಹ ಕನ್ನಡ ಕಾರ್ಯಕ್ರಮಗಳು ನಡೆಯುದಿದ್ದ ಸಂದರ್ಭದಲ್ಲಿ 'ಕರ್ನಾಟಕ ಸಾಹಿತ್ಯ ಸಂಘ'ದ ಈ ಚಟುವಟಿಕೆಗಳು ಕನ್ನಡಿಗರಲ್ಲಿ ಭಾಷೆ ಸಾಹಿತ್ಯ ಕುರಿತು

ಅಭಿಮಾನ ಮೂಡಲು ನೆರವಾದವು. ಮಹಾವಿದ್ಯಾಲಯಕ್ಕೆ ಕರ್ನಾಟಕದ ಬೇರೆ ಬೇರೆ ಭಾಗಗಳಿಂದ ಶಿಕ್ಷಣ ಪಡೆಯಲು ಬರುತ್ತಿದ್ದ ವಿದ್ಯಾರ್ಥಿಗಳು ಇಲ್ಲಿಯೇ ಉಳಿದು ವಿದ್ಯಾಭ್ಯಾಸ ಮಾಡುತ್ತಿದ್ದರು. ಹೆಚ್ಚಿನ ವಿದ್ಯಾರ್ಥಿಗಳು ನಾಗನೂರು ರುದ್ರಾಕ್ಷಿಮಠದಲ್ಲಿ ಉಳಿದುಕೊಳ್ಳುತ್ತಿದ್ದರು. ಕೆಲವರು ಬೇರೆ ಬೇರೆ ಕಡೆಗಳಲ್ಲಿ ಬಾಡಿಗೆ ಕೋಣೆಗಳನ್ನು ಮಾಡಿಕೊಂಡು ಇರುತ್ತಿದ್ದರು. ಕಾಲೇಜಿನಲ್ಲಿ ಪಡೆದ ಸ್ಫೂರ್ತಿಯಿಂದ ಬೆಳಗಾವಿಯಲ್ಲಿ ಜರುಗುತ್ತಿರುವ ಕನ್ನಡ ಕಾರ್ಯಕ್ರಮಗಳು, ಚಳುವಳಿಗಳಲ್ಲಿ ಸಕ್ರೀಯವಾಗಿ ಭಾಗವಹಿಸುತ್ತಿದ್ದರು. ಒಂದು ದೃಷ್ಟಿಯಲ್ಲಿ ಕನ್ನಡ ಹೋರಾಟಗಾರರಿಗೆ ಹಿಂದಿನ ಬೆಂಬಲವೆಂದರೆ ಲಿಂಗರಾಜ ಮಹಾವಿದ್ಯಾಲಯದ 'ಕರ್ನಾಟಕ ಸಾಹಿತ್ಯ ಸಂಘ' ಎನ್ನುವಷ್ಟರ ಮಟ್ಟಿಗೆ ವಿದ್ಯಾರ್ಥಿಗಳು ಬೆಳಗಾವಿಯಲ್ಲಿ ಚಟುವಟಿಕೆಯುಳ್ಳವರಾಗಿದ್ದರು. 'ಕರ್ನಾಟಕ ಸಾಹಿತ್ಯ ಸಂಘ'ದ ಆಶ್ರಯದಲ್ಲಿ ನಡೆಯುತ್ತಿದ್ದ ವಿವಿಧ ಉಪನ್ಯಾಸಗಳು ಕೇವಲ ವಿದ್ಯಾರ್ಥಿಗಳಿಗಷ್ಟೇ ಮೀಸಲಾಗದೆ ಬೆಳಗಾವಿನಗರದ ಸುತ್ತಮುತ್ತಲಿನ ಊರು, ಪಟ್ಟಣಗಳ ಸಾಹಿತ್ಯಾಸಕ್ತರನ್ನೂ ಆಕರ್ಷಿಸಿದ್ದವು. ನಾಡಿನ ಪ್ರಸಿದ್ಧ ಸಾಹಿತಿಗಳು, ಚಿಂತಕರು, ಹೋರಾಟಗಾರರು ಕರ್ನಾಟಕ ಸಾಹಿತ್ಯ ಸಂಘದ ಆಶ್ರಯದಲ್ಲಿ ಜರುಗುತ್ತಿರುವ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಉಪನ್ಯಾಸಗಳನ್ನು ನೀಡುತ್ತಿದ್ದರು. ಶ್ರೀ ಎಂ. ಆರ್. ಶ್ರೀನಿವಾಸ, ಶ್ರೀ ರಂಗನಾಥ ದಿವಾಕರ, ಶ್ರೀ ಶಿವಮೂರ್ತಿಸ್ವಾಮಿಗಳು, ವೈ. ನಾಗೇಶಶಾಸ್ತ್ರಿ, ಜಿ. ಪಿ. ರಾಜರತ್ನಂ. ಪ್ರೊ. ರಂ.ಶ್ರೀ. ಮುಗಳಿ, ಗರುಡ ಸದಾಶಿವರಾಯ, ಆನಂದಕಂದ, ತೀ.ನಂ.ಶ್ರೀ ಮುಂತಾದವರು ಮಹತ್ವದ ವಿಷಯಗಳನ್ನು ಕುರಿತು ಉಪನ್ಯಾಸಗಳನ್ನು ನೀಡಿದ್ದಾರೆ.

**ನಾಡಹಬ್ಬ ಉತ್ಸವ ಸಮಿತಿ :** ವಿಜಯನಗರ ಸಾಮ್ರಾಜ್ಯದ ದೊರೆಗಳು ತಮ್ಮ ಔದಾರ್ಯವನ್ನು ಪ್ರದರ್ಶಿಸಲು, ಕಲಾಕಾರರನ್ನು, ಕವಿಗಳನ್ನು ಪಂಡಿತರನ್ನು, ನೃತ್ಯಗಾರ್ತಿಯರನ್ನು ಒಂದೆಡೆ ಸೇರಿಸಿ ನವರಾತ್ರಿ ಸಮಯದಲ್ಲಿ ಒಂಬತ್ತು ದಿನಗಳ ಕಾಲ ಕಾವ್ಯ ಗೋಷ್ಠಿ ಪಾಂಡಿತ್ಯಪೂರ್ಣ ವಿಷಯಗಳ ಚರ್ಚೆ, ಸಂಗೀತಸುಧೆ, ಕುಸ್ತಿ–ಹೀಗೆ ಹತ್ತು ಹಲವು ಕಾರ್ಯಕ್ರಮಗಳನ್ನು ಏರ್ಪಡಿಸುತ್ತ ಕೊನೆಯದಿನ ಸಾರ್ವಜನಿಕರೊಂದಿಗೆ ಬನ್ನಿಯ ದಿಬ್ಬಕ್ಕೆ ಬಂದು ಸೀಮೋಲ್ಲಂಘನೆ ಮಾಡುತ್ತಿದ್ದರು. ನಾಡಿನ ಭವ್ಯ ಪರಂಪರೆಯ ಹಬ್ಬವೇ ಈಗ ನಾಡಹಬ್ಬವೆಂದು ಪ್ರಖ್ಯಾತವಾಗಿದೆ. ನಾಡಿನ ಸಂಸ್ಕೃತಿಯನ್ನು ಮೆರೆಸಲು ಕನ್ನಡ ಭಾಷೆಯನ್ನು ವೈಭವೀಕರಣಗೊಳಿಸಲು ಅವರೇ ಪ್ರಾರಂಭ ಮಾಡಿದ ಭುವನೇಶ್ವರಿಯ ಉತ್ಸವವೇ ಮುಂದೆ ವಿದ್ಯಾರಣ್ಯರ ಉತ್ಸವವಾಗಿ ನಡೆದು ಬಂದು ಕೊನೆಗೆ ನಾಡಿನ ಹಬ್ಬದ ಈ ಉತ್ಸವ ಇಂದು ನಾಡ ಹಬ್ಬವಾಗಿ ಪ್ರಚಲಿತಗೊಂಡಿದೆ.

ಬೆಳಗಾವಿಯಲ್ಲಿ ೧೯೨೭ರಲ್ಲಿ ವಿದ್ಯಾರಣ್ಯರ ಉತ್ಸವ (ನಾಡಹಬ್ಬ)ವನ್ನು ಆಲೂರ ವೆಂಕಟರಾಯರ ಮಹದಾಶೆಯಂತೆ ಮುದವೀಡು ಕೃಷ್ಣರಾಯರು, ಕಡಪಾ ರಾಘವೇಂದ್ರರಾಯರು ಸೇರಿ ಸ್ಥಳೀಯ ಬೆಳಗಾವಿಯ ತರುಣರಾದ ಶ್ರೀ ಅನಂತರಾವ ಚಿಕ್ಕೋಡಿ ಹಾಗೂ ಶಿವಲಿಂಗ ದೇಸಾಯಿ ರುದ್ರಾಪುರ ಇವರ ಸಹಕಾರದೊಂದಿಗೆ ಪ್ರಾರಂಭಿಸಿದರು.

ನಾಡಹಬ್ಬ ಉತ್ಸವ ಸಮಿತಿಯು ಪ್ರಾರಂಭದಿಂದ ಇಂದಿನವರೆಗೂ ನಿರಂತರವಾಗಿ ಕನ್ನಡ ಜಾಗೃತಿಯನ್ನು ಮಾಡುತ್ತ ಬಂದಿದೆ. ಕನ್ನಡಿಗರಲ್ಲಿ ಸಂಘಟನಾ ಶಕ್ತಿಯನ್ನು, ಆತ್ಮವಿಶ್ವಾಸವನ್ನು ತುಂಬಿದೆ. ಕನ್ನಡಭಾಷೆ, ಸಾಹಿತ್ಯ, ಸಂಸ್ಕೃತಿಯ ಬಗೆಗೆ ಹಲವಾರು ಉಪನ್ಯಾಸಗಳನ್ನು ಕಾರ್ಯಾಗಾರಗಳನ್ನು, ವಿಚಾರ ಸಂಕಿರಣಗಳನ್ನು ಏರ್ಪಡಿಸಿ ಕನ್ನಡಿಗರಲ್ಲಿ ಅಭಿಮಾನ ಮೂಡಿಸುತ್ತಿದೆ. ನಾಡದೇವಿಯ ಆರಾಧನೆಯ ಮೂಲಕ ಧಾರ್ಮಿಕ ಮನೋಭಾವನೆಯನ್ನು ಬೆಳೆಸಿದೆ. ನಾಡಿನ ಹೆಸರಾಂತ ಸಾಹಿತಿಗಳು, ಚಿಂತಕರು, ಪಂಡಿತರು, ಕಲಾವಿದರು, ರಾಜಕಾರಣಿಗಳು, ಹೋರಾಟಗಾರರು, ಪ್ರತಿವರ್ಷ ನಾಡದೇವಿಯ ಉತ್ಸವದ ಸಂದರ್ಭದಲ್ಲಿ ಬೆಳಗಾವಿಗೆ ಬಂದು ಭಾಷಣ, ಉಪನ್ಯಾಸಗಳನ್ನು ನೀಡಿದ್ದಾರೆ. ಇದರಿಂದ ಗಡಿಭಾಗದಲ್ಲಿರುವ ಕನ್ನಡಿಗರಿಗೆ ಎಲ್ಲ ಮಹನೀಯರೊಡನೆ ಸಂಪರ್ಕ ಹೊಂದುವಂತಾಗಿದೆ. ಹಲವಾರು ಸಾಂಸ್ಕೃತಿಕ ಕಾರ್ಯಕ್ರಮಗಳ ಮೂಲಕ ಚಿತ್ರಕಲೆ, ನಾಟಕ, ಸಂಗೀತ ಮುಂತಾದ ಕಲೆಗಳಿಗೆ ಪ್ರೋತ್ಸಾಹ, ಪ್ರೇರಣೆಯನ್ನು ನೀಡಿದೆ. ನಾಡದೇವಿಯ ಮೆರವಣಿಗೆಯ ಸಂದರ್ಭದಲ್ಲಿ ಕರ್ನಾಟಕದ ಜಾನಪದ ಕಲೆಗಳ ಪ್ರದರ್ಶನಗೊಳ್ಳುತ್ತವೆ. ಭುವನೇಶ್ವರಿದೇವಿಯ ಮೆರವಣಿಗೆ ನಗರದ ತುಂಬೆಲ್ಲಾ ಸಾಗುವಾಗ ಡೊಳ್ಳು, ಕರಡಿಮಜಲು, ಶಹನಾಯಿ, ಭಜನೆ ಮುಂತಾದ ಜಾನಪದ ಕಲಾ ತಂಡಗಳು ತಮ್ಮ ಕಲೆಯನ್ನು ಪ್ರದರ್ಶಿಸುತ್ತವೆ. ೨೦೦೧ನೆಯ ಸಾಲಿನಲ್ಲಿ ನಾಡಹಬ್ಬದ ಅಮೃತ ಮಹೋತ್ಸವವನ್ನು ಅದ್ದೂರಿಯಾಗಿ ಆಚರಿಸಲಾಯಿತು. ನಾಡಹಬ್ಬದ ಉತ್ಸವ ಸಮಿತಿಯ ಯಶಸ್ಸಿನ ಹಿಂದೆ ನೂರಾರು ಜನರು ದುಡಿದರು.

**ಭುವನೇಶ್ವರಿ ಮೇಳ** : ಬೆಳಗಾವಿಯ ಸಾರ್ವಜನಿಕ ಜೀವನದಲ್ಲಿ ಕನ್ನಡವು ಪ್ರವೇಶ ಪಡೆದದ್ದು ೧೯೩೬ರಲ್ಲಿ ಸ್ಥಾಪಿತವಾದ ಭುವನೇಶ್ವರಿ ಮೇಳದಿಂದ. ಎಲ್ಲೆಲ್ಲೂ ಮರಾಠಿಮಯವಾಗಿದ್ದ ಆ ಕಾಲದಲ್ಲಿ ಕನ್ನಡಮೇಳ ಕಟ್ಟಿ ನಡೆಯಿಸಿದ ಕೀರ್ತಿ ಶ್ರೀ ಮುತಾಲಿಕ ವೆಂಕಟರಾಯರು, ನರಸಿಂಹ ಜೋಶಿ, ಜಿ.ವಿ.ಕಟ್ಟಿ, ಆರ್. ಹೆಚ್. ಕುಲಕರ್ಣಿ ಮುಂತಾದ ಮಹನೀಯರಿಗೆ ಸಲ್ಲುತ್ತದೆ.

ಮೂವತ್ತರ ದಶಕದ ಆರಂಭಕ್ಕಾಗಲೇ ಬೆಳಗಾವಿಯಲ್ಲಿ 'ಮೇಳಾ' ಎಂಬ ಮರಾಠಿ ಚಟುವಟಿಕೆ ಜನರನ್ನು ಆಕರ್ಷಿಸಿತ್ತು. ಸಂಗೀತದ ಮಧುರ ಧ್ವನಿಯಲ್ಲಿ ಮರಾಠಿ ಭಕ್ತಿಗೀತೆ, ದೇಶಭಕ್ತಿಗೀತೆಗಳನ್ನು ಹೇಳುತ್ತ ಬಾಲಕ ಬಾಲಕಿಯರ ಗುಂಪುಗಳು ಬೀದಿಯಲ್ಲಿ ಸೂರ್ಯೋದಯಕ್ಕೆ ಬರುತ್ತಿದ್ದರು. ಅಂದಿನ 'ಪ್ರಭಾತಫೇರಿ'ಗಳು ಜನತೆಯಲ್ಲಿ ಜಾಗೃತಿಯನ್ನುಂಟು ಮಾಡುವಲ್ಲಿ ತುಂಬ ಪ್ರಭಾವಶಾಲಿಯಾಗಿದ್ದವು.

ಇದೇ ಮಾದರಿಯಲ್ಲಿಯೇ 'ಕನ್ನಡಮೇಳ' ಆರಂಭಗೊಂಡವು. ಅದರಲ್ಲಿ ಹೆಣ್ಣುಮಕ್ಕಳು ಪಾಲ್ಗೊಳ್ಳುತ್ತಿದ್ದರು. ಅಲ್ಲದೆ ಮರಾಠಿ ಮನೆತನದ ಹೆಣ್ಣುಮಕ್ಕಳನ್ನು ಈ ಕನ್ನಡಮೇಳಗಳು ಆಕರ್ಷಿಸಿದವು. ಹೀಗೆ ಕನ್ನಡ ಮತ್ತು ಮರಾಠಿ ಎರಡೂ ಭಾಷೆಯ ಮೇಳಗಳು ಬೆಳಗಾವಿಯ ಸಾಮಾಜಿಕ ಜೀವನದಲ್ಲಿ ಮಹತ್ವದ್ದಾಗಿದ್ದವು.

**ಕನ್ನಡ ನಾಡ ನರಿಗಳ ಸಂಘ** : ೧೯೨೯ರಲ್ಲಿ ೧೫ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಬೆಳಗಾವಿಯಲ್ಲಿ ಜರುಗಿದ ಸಂದರ್ಭದಲ್ಲಿ ಸ್ವಯಂ ಸೇವಕರಾಗಿ ಕೆಲಸ ಮಾಡುತ್ತಿದ್ದ ಶ್ರೀ ಕೃಷ್ಣ ಪಾಟೀಲ ಎನ್ನುವವರು

ಸಮ್ಮೇಳನಕ್ಕೆ ಆಗಮಿಸಿದ ಸಾಹಿತಿಗಳನ್ನು ಪ್ರತ್ಯಕ್ಷ ದರ್ಶನ ಪಡೆದು, ಅವರ ಉಪನ್ಯಾಸಗಳನ್ನು ಕೇಳಿ ಪ್ರಭಾವಿತರಾಗಿ ತಾನೂ ಏನಾದರೂ ಕನ್ನಡ ಸೇವೆಯನ್ನು ಮಾಡಬೇಕೆಂದು ನಿರ್ಧರಿಸಿ ಸ್ನೇಹಿತರನ್ನು ಕೂಡಿಸಿ ಕನ್ನಡ ನಾಡ ನರಿಗಳ ಸಂಘವನ್ನು ಸ್ಥಾಪಿಸಿದರು. ಸಂಘದ ಸದಸ್ಯರೆಲ್ಲಾ ವಿದ್ಯಾರ್ಥಿಗಳೇ ಆಗಿದ್ದರು. ತಮ್ಮ ಕಾರ್ಯಾಲಯವನ್ನು ಡಾ. ಸವಣೂರ ಹಣಮಂತರಾಯರ ಕರ್ನಾಟಕ ಸಂಘದ ವಾಚನಾಲಯದಲ್ಲಿಯೇ ಪ್ರಾರಂಭಿಸಿದರು. ಜೊತೆಗೆ ವಾಚನಾಲಯವನ್ನು ನಡೆಸುವ ಜವಾಬ್ದಾರಿಯನ್ನೂ ಹೊತ್ತರು.

ಈ ಸಂಘದ ಮೂಲಕ ಜನತೆಯಲ್ಲಿ ವಾಕ್ ಚಾತುರ್ಯ ಬೆಳೆಸಲು ಭಾಷಣ ಸ್ಪರ್ಧೆಗಳನ್ನು ಏರ್ಪಡಿಸುತ್ತಿದ್ದರು. ಅಲ್ಲದೆ ಬರಹದಲ್ಲಿಯೂ ಪಳಗಬೇಕೆಂದು ಹಸ್ತಲಿಖಿತ ಮಾಸಿಕ ಪತ್ರಿಕೆಗಳನ್ನು ಕರ್ನಾಟಕ ಸಂಘವು ಹೊರಡಿಸಲು ಪ್ರಾರಂಭಿಸಿತು. ಈ ಎಲ್ಲ ಜವಾಬ್ದಾರಿಯನ್ನು ಶ್ರೀ ಕೃಷ್ಣ ಪಾಟೀಲರು ವಹಿಸಿಕೊಂಡರು. 'ನವನೀತ', 'ತಾವರೆ', 'ವಿದ್ಯಾರ್ಥಿ' ಎನ್ನುವ ಹಸ್ತಲಿಖಿತ ಪತ್ರಿಕೆಗಳು ಅಂದು ಕರ್ನಾಟಕ ಸಂಘದ ವಾಚನಾಲಯದಲ್ಲಿ ಹಲವಾರು ಜನರಿಗೆ ಉಪಯುಕ್ತವಾದವು. ಈ ಹಸ್ತಲಿಖಿತ ಪತ್ರಿಕೆಗಳಿಗೆ ಲೇಖನ ಕೊಡುವುದರಲ್ಲಿ ಶ್ರೀ ಬಸವರಾಜ ಕಟ್ಟಿಮನಿ ಹಾಗೂ ಶ್ರೀ ಕೃಷ್ಣ ಪಾಟೀಲರು ಪ್ರಮುಖರಾಗಿದ್ದರು. ಈ ಪತ್ರಿಕೆಗಳ ಮೂಲಕವೇ ಇವರಲ್ಲಿ ಬರೆಯುವ ಹವ್ಯಾಸ, ಸಾಹಿತ್ಯದ ಬಗೆಗೆ ಆಸಕ್ತಿ, ಗೌರವ ಬೆಳೆಯಿತು. ಬಸವರಾಜ ಕಟ್ಟೀಮನಿಯವರು ಮುಂದೆ ದೊಡ್ಡ ಸಾಹಿತಿಯಾಗಲಿಕ್ಕೆ ಈ ನಾಡನರಿಗಳ ಪತ್ರಿಕೆಗಳೇ ಉತ್ತಮವಾದ ತಳಹದಿಯನ್ನು ಒದಗಿಸಿದವು. ೧೯೩೮-೩೯ರ ಸುಮಾರಿಗೆ ನಾಡ ನರಿಗಳು ನಡೆಸುತ್ತಿದ್ದ ಕರ್ನಾಟಕ ಸಂಘ ಮತ್ತು ವಾಚನಾಲಯಕ್ಕೆ ೨೫ ವರ್ಷಗಳಾದವು. ಅದರ ಬೆಳ್ಳಿಹಬ್ಬವನ್ನು ಆಚರಿಸಬೇಕೆಂದು ಡಾ. ಸವಣೂರ ಅವರಲ್ಲಿ ಒಪ್ಪಿಗೆ ಪಡೆದುಕೊಂಡು ಶ್ರೀ ಕೃಷ್ಣ ಪಾಟೀಲ ಮತ್ತು ಸಂಗಡಿಗರು ಸೇರಿ ಮನೆ ಮನೆಗೆ ಹೋಗಿ ವಂತಿಗೆಯನ್ನು ಸಂಗ್ರಹಿಸಿದರು. ಈ ಸಂದರ್ಭದಲ್ಲಿ ತಮಗೆ ಆದ ಅನುಭವವನ್ನು ಕುರಿತು 'ನಮ್ಮೂರ ನಡತೆ' ಎಂಬ ನಾಟಕವನ್ನು ಬರೆದರು. ಈ ನಾಟಕವನ್ನು ನಾಡನರಿಗಳಸಂಘದವರೇ ಅಭಿನಯಿಸಿದರು. ನಾಟಕ ಪರಿಣಾಮಕಾರಿಯಾಗಿ ಮೂಡಿ ಜನರ ಮೆಚ್ಚುಗೆಯನ್ನು ಪಡೆದು ಹತ್ತಾರು ಬಾರಿ ಪ್ರದರ್ಶನಗೊಂಡಿತು.

**ತುಂಟರ ತಂಡ :** ೧೯೩೦-೪೦ ರ ಅವಧಿಯ ಬೆಳಗಾವಿಯಲ್ಲಿ ಹಲವಾರು ಸಂಘಗಳು ಹುಟ್ಟಿಕೊಂಡು ಕನ್ನಡದ ಕಾರ್ಯವನ್ನು ನಡೆಸುತ್ತಿದ್ದವು. ಅವುಗಳಲ್ಲಿ 'ತುಂಟರ ತಂಡ' ಎನ್ನುವ ಯುವಕರ ಸಂಘವು ಒಂದಾಗಿತ್ತು. ಬೆಳಗಾವಿಯಲ್ಲಿ ಮರಾಠಿಗರ ಉಪಟಳ ಕನ್ನಡಿಗರ ಮೇಲೆ ಹೆಚ್ಚಾಗಿ ಕನ್ನಡಿಗರು ಬೀದಿಯಲ್ಲಿ ಬರದ ಹಾಗೆ ವಾತಾವರಣ ನಿರ್ಮಾಣವಾಗಿತ್ತು. ಮರಾಠಿಗರ ಉಪಟಳಕ್ಕೆ ಪ್ರತಿಯಾಗಿ ಉಪಟಳವನ್ನು ಕೊಡುವುದಕ್ಕಾಗಿಯೇ ಹುಟ್ಟಿಕೊಂಡಿದ್ದು ಈ 'ತುಂಟರ ತಂಡ'. ಈ ತಂಡದ ಸ್ಥಾಪನೆಯಿಂದ ಕನ್ನಡಿಗರ ಹೋರಾಟಕ್ಕೆ ಸ್ಫೂರ್ತಿ ದೊರೆಯಿತು.[೫]

**ನಾಗನೂರು ರುದ್ರಾಕ್ಷಿಮಠದ ವಿದ್ಯಾರ್ಥಿ ಪ್ರಸಾದ ನಿಲಯ :** ಧರ್ಮ, ಸಮಾಜ, ಶಿಕ್ಷಣ, ನಾಡುನುಡಿಗಳ ಹಿತ ಚಿಂತನೆ ಹೀಗೆ ವಿವಿಧ ಮುಖಗಳಲ್ಲಿ ಶ್ರಮಿಸುತ್ತಿರುವ ನಾಗನೂರು ರುದ್ರಾಕ್ಷಿಮಠವು ಬೆಳಗಾವಿಯಲ್ಲಿ ಕನ್ನಡ ವಾತಾವರಣವನ್ನು ನಿರ್ಮಿಸುವಲ್ಲಿ ಪ್ರಮುಖ ಪಾತ್ರ ವಹಿಸಿದೆ.

೧೯೩೨ ಜೂನ್ ೬ ರಂದು ನಾಗನೂರಿನಿಂದ ಬೆಳಗಾವಿಗೆ ಬಂದ ಪೂಜ್ಯ ಶ್ರೀ ಶಿವಬಸವ ಸ್ವಾಮಿಗಳು ಬೆಳಗಾವಿಯ ಕೋಟೆ ಆವರಣದಲ್ಲಿ ವಿದ್ಯಾರ್ಥಿ ಪ್ರಸಾದ ನಿಲಯವನ್ನು ಸ್ಥಾಪಿಸಿದರು. ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಾದಂತೆ ಬೇರೆ ಬೇರೆ ಸ್ಥಳಗಳಿಗೆ ಸ್ಥಳಾಂತರ ಹೊಂದಿ ೧೯೫೧ ರಲ್ಲಿ ಮಾರುತಿ ಬೀದಿಯ ಭವ್ಯ ಕಟ್ಟಡದಲ್ಲಿ ನೆಲೆ ನಿಂತಿತು. ಈ ಕಟ್ಟಡವು ಮೈಸೂರಿನ ಜಯಚಾಮರಾಜೇಂದ್ರ ಒಡೆಯರಿಂದ ಉದ್ಘಾಟನೆಗೊಂಡಿತು. ಅಂದಿನಿಂದ ಇದು ಕನ್ನಡದ ಶಕ್ತಿ ಕೇಂದ್ರವಾಗಿ ರೂಪಗೊಂಡಿತು. ಸಂಪೂರ್ಣ ಮರಾಠಿಮಯವಾಗಿದ್ದ ಪ್ರದೇಶದಲ್ಲಿಯೇ ತಲೆ ಎತ್ತಿ ನಿಂತಿತು. ಮರಾಠಿಗರು ಪ್ರತಿರೋಧವನ್ನು ಮೌನವಾಗಿಯೇ ಸ್ವೀಕರಿಸಿ ಕನ್ನಡಿಗರಲ್ಲಿ ಸ್ವಾಭಿಮಾನವನ್ನು ಶಿವಬಸವಸ್ವಾಮಿಗಳು ಬೆಳೆಸಿದರು.

ನಾಡಹಬ್ಬ ಕಾರ್ಯಕ್ರಮ, ರಾಜ್ಯೋತ್ಸವ, ಸಾಹಿತ್ಯಿಕ ಕಾರ್ಯಕ್ರಮಗಳನ್ನು ಈ ಪ್ರಸಾದ ನಿಲಯದಲ್ಲಿ ಆಯೋಜಿಸಿ ಕನ್ನಡ ಚಟುವಟಿಕೆಗಳಿಗೆ ಜೀವ ತುಂಬಿದರು. ಮರಾಠಿಗರ ಉಪಟಳ ಹೆಚ್ಚಾದಾಗ ಪ್ರಸಾದ ನಿಲಯದ ವಿದ್ಯಾರ್ಥಿಗಳು ಅವರನ್ನು ಎದುರಿಸಲು ಸಜ್ಜಾಗುತ್ತಿದ್ದರು. ಮರಾಠಿಗರ ಘೋಷಣೆಗಳಿಗೆ ಪ್ರತಿಯಾಗಿ ಕನ್ನಡಪರ ಘೋಷಣೆಗಳನ್ನು ಕೂಗುತ್ತಿದ್ದರು.[೯೬] ಇದರಿಂದ ಮರಾಠಿಗರು ಪ್ರಸಾದ ನಿಲಯದ ವಿದ್ಯಾರ್ಥಿಗಳ ಜೊತೆಗೆ ಕಾರಣವಿಲ್ಲದೆ ಜಗಳ ತೆಗೆದು ಹೊಡೆದು ಬಡೆದು ವಿದ್ಯಾರ್ಥಿಗಳಲ್ಲಿ ಭೀತಿಯನ್ನುಂಟು ಮಾಡಿದರು.[೯೭] ಇದನ್ನು ತಿಳಿದ ಸ್ವಾಮೀಜಿಯವರು ಕನ್ನಡ ಧುರೀಣರಾದ ಶ್ರೀ ಹನುಮಂತರಾವ್ ತೆರಗುಂಡಿ. ಅಣ್ಣ ಗುರುಜಿ, ಚೆನ್ನಪ್ಪ ವಾಲಿ, ತಲ್ಲೂರ ರಾಯನಗೌಡರು ಅಪ್ಪಣ್ಣಗೌಡ ಪಾಟೀಲ ವಿರುಪಾಕ್ಷಪ್ಪ ಸುತಗಟ್ಟಿ ಮುಂತಾದವರನ್ನು ಕರೆಸಿ ಸಭೆ ನಡೆಸಿ ವಿದ್ಯಾರ್ಥಿಗಳಲ್ಲಿ ಧೈರ್ಯ ತುಂಬಿದರು. ಇದರಿಂದ ಕುಪಿತರಾದ ಮರಾಠಿಗರು ಸ್ವಾಮೀಜಿಗಳಿಗೆ ಪ್ರಾಣ ಬೆದರಿಕೆಯ ಫಲಕವನ್ನು ಪ್ರಸಾದ ನಿಲಯಕ್ಕೆ ಅಂಟಿಸಿದರು. ಆದರೆ ಇದ್ಯಾವುದಕ್ಕೂ ಹೆದರದೆ ಸ್ವಾಮೀಜಿಯವರು ಕನ್ನಡ ಕಟ್ಟುವ ಕಾರ್ಯದಲ್ಲಿ ತೊಡಗಿದರು.[೯೮] ಪ್ರಸಾದ ನಿಲಯವು ಕನ್ನಡ ಚಟುವಟಿಕೆಗಳ ಮುಖ್ಯಕೇಂದ್ರವಾಗಿ ದಿನದಿಂದ ದಿನಕ್ಕೆ ಕನ್ನಡಪರ ವಾತಾವರಣವನ್ನು ಹೆಚ್ಚಿಸಿತು. ಹೀಗೆ ಬೆಳಗಾವಿಯ ಕನ್ನಡ ಹೋರಾಟದಲ್ಲಿ ಪ್ರಸಾದ ನಿಲಯವು ವಿಶಿಷ್ಟವಾದ ಪಾತ್ರವನ್ನು ವಹಿಸಿತು.

**ಕರ್ನಾಟಕ ಲಾ ಸೊಸೈಟಿ :** ಬೆಳಗಾವಿಯ ಶೈಕ್ಷಣಿಕ ವಲಯದಲ್ಲಿ ಮಹತ್ವದ ಸ್ಥಾನವನ್ನು ಹೊಂದಿದ ಕರ್ನಾಟಕ ಲಾ ಸೊಸೈಟಿಯು ೧೯೩೯ ರಲ್ಲಿ ಸ್ಥಾಪನೆಗೊಂಡು ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯಾನಂತರದ ದಿನಗಳಲ್ಲಿಯೂ

ಕನ್ನಡಪರ ಚಟುವಟಿಕೆ, ಹೋರಾಟಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದೆ. ಈ ಸಂಸ್ಥೆಯ ರಾಜಾಲಖಮಗೌಡ ಕಾನೂನು ಮಹಾವಿದ್ಯಾಲಯವು ಕನ್ನಡ ಹೋರಾಟಗಾರರನ್ನು ಹುಟ್ಟುಹಾಕಿದೆ. ನಾಡೋಜ ಡಾ. ಪಾಟೀಲ ಪುಟ್ಟಪ್ಪನವರು. ಶ್ರೀ ಹಾರ್ನಹಳ್ಳಿ ರಾಮಸ್ವಾಮಿಯವರು ಇದೇ ಕಾಲೇಜಿನ ವಿದ್ಯಾರ್ಥಿಗಳಾಗಿದ್ದುಕೊಂಡೇ ಕನ್ನಡದ ಹೋರಾಟಗಾರರಾಗಿ ರೂಪುಗೊಂಡರು. ಈ ಸಂಸಂಸ್ಥೆಯ ಪದಾಧಿಕಾರಿಗಳಾಗಿದ್ದ ದಿವಂಗತ ಆರ್ ಎಚ್. ಕುಲಕರ್ಣಿ ವಕೀಲರು ಹಾಗೂ ಈಗಿನ ಶ್ರೀ ಎಸ್. ಎಂ. ಕುಲಕರ್ಣಿ ವಕೀಲರು ಕನ್ನಡಪರ ಚಟುವಟಿಕೆಗಳಲ್ಲಿ ಹಾಗೂ ಹೋರಾಟಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತ ಕನ್ನಡವನ್ನು ಉಳಿಸಿ ಬೆಳೆಸಿದ್ದಾರೆ.

**ಕನ್ನಡ ಗೆಳೆಯರ ಬಳಗ ಖಾಸಬಾಗ :** ಬೆಳಗಾವಿಯ ಖಾಸಬಾಗದಲ್ಲಿ ೧೯೬೪ ರಲ್ಲಿ ಸ್ಥಾಪಿತವಾದ ಕನ್ನಡ ಗೆಳೆಯರ ಬಳಗವು ಕನ್ನಡಿಗರನ್ನು ಸಂಘಟಿಸುವಲ್ಲಿ ಮಹತ್ವದ ಪಾತ್ರವನ್ನು ವಹಿಸಿದೆ. ಶ್ರೀ ಶಂಕರ ಬುಚಡಿ, ನಾಗಪ್ಪ ಧವಳಿ, ಪಾಂಡುರಂಗ ಭಸ್ಮೆ, ನಾರಾಯಣ ಪಾಡಮುಖಿ, ಭೀಮರಾವ ಸಾತಪುತೆ, ಸಿದ್ಧಲಿಂಗ ಧವಳಿ, ಜಯವಂತ ಟರಕಿ ಮುಂತಾದ ಕನ್ನಡ ತರುಣರಿಂದ ಕೂಡಿ ಕನ್ನಡ ಗೆಳೆಯರ ಬಳಗವು ಅಧಿಕೃತವಾಗಿ ರಚನೆಯಾಯಿತು. ಮರಾಠಿಮಯವಾದ ಖಾಸಭಾಗ ಪ್ರದೇಶದಲ್ಲಿ ಕನ್ನಡ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರ ಮೂಲಕ ಕನ್ನಡಿಗರಲ್ಲಿ ಆತ್ಮವಿಶ್ವಾಸ ತುಂಬಿದರು. ಕನ್ನಡ ಪತ್ರಿಕೆಗಳನ್ನು ಸಂಘ ಕಾರ್ಯಾಲಯದಲ್ಲಿ ಇಟ್ಟು ಜನರಲ್ಲಿ ಕನ್ನಡ ಭಾಷೆಯ ಬಗೆಗೆ ಆಸಕ್ತಿಯನ್ನು ಮೂಡಿಸಿದರು. (ಅಂದು ಕನ್ನಡಿಗರೂ ಕೂಡ ಮರಾಠಿ ಪತ್ರಿಕೆಗಳನ್ನೇ ಓದುತ್ತಿದ್ದರು) ಪತ್ರಿಕೆಗಳ ಜೊತೆಗೆ ಕನ್ನಡ ಸಾಹಿತ್ಯದ ಕೃತಿಗಳನ್ನು ಓದುಗರಿಗೆ ಒದಗಿಸಿ ಸಾಹಿತ್ಯದ ರುಚಿಯನ್ನು ಹಚ್ಚಿದರು.

ಕನ್ನಡ ಗೆಳೆಯರ ಬಳಗದ ಹೋರಾಟದ ಫಲವಾಗಿ ನಗರ ಸಭೆಯಲ್ಲಿ ಮರಾಠಿಯಲ್ಲಿ ನೀಡುತ್ತಿದ್ದ ದಾಖಲೆ ಪತ್ರಗಳನ್ನು ಕನ್ನಡದಲ್ಲಿ ನೀಡತೊಡಗಿದರು. ಬೀದಿಗಳ ನಾಮಫಲಕಗಳೆಲ್ಲ ಮರಾಠಿಯಲ್ಲಿದ್ದವು. ಅವುಗಳನ್ನು ಕನ್ನಡದಲ್ಲಿಯೂ ಬರೆಸಿ ಒದಗಿಸಿದರು. ಮಹಾರಾಷ್ಟ್ರವಾದಿಗಳ ದಾಳಿಗೆ ಪ್ರತಿದಾಳಿ ಮಾಡಲು ಬಳಗದ ಪಡೆ ಸಿದ್ಧವಾಯಿತು. ಹೋರಾಟ, ಸತ್ಯಾಗ್ರಹದಲ್ಲಿ ಶಹಪೂರ, ಖಾಸಬಾಗದ ಕನ್ನಡಿಗರನ್ನು ಸಂಘಟಿಸಿ ಹೋರಾಟಗಳಿಗೆ ಉಗ್ರಸ್ವರೂಪವನ್ನುಂಟು ಮಾಡಿದರು. ಕೇಂದ್ರ ಸರಕಾರ ಗಡಿ ಆಯೋಗ ನೇಮಿಸಲು ನಿರ್ಧರಿಸಿದಾಗ ದಿ. ಹಳ್ಳಿಕೇರಿ ಗುದ್ಲೆಪ್ಪನವರು ನಡೆಸಿದ ಸತ್ಯಾಗ್ರಹ, ರೈಲು ತಡೆ, ರಸ್ತೆ ತಡೆ ಹೋರಾಟದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಡಗಾವಿ ಹಾಗೂ ಖಾಸಬಾಗ ಕನ್ನಡಿಗರು ಭಾಗವಹಿಸಿ ಹೋರಾಟಕ್ಕೆ ಹೆಚ್ಚಿನ ಮಹತ್ವ ತಂದು ಕೊಟ್ಟರು.

ನಗರದ ಚಿತ್ರಮಂದಿರಗಳಲ್ಲಿ ಕನ್ನಡ ಚಲನಚಿತ್ರಗಳ ಪ್ರದರ್ಶನ ಹಾಗೂ ಚಿತ್ರಮಂದಿರಗಳ ಹೆಸರುಗಳನ್ನು ಕನ್ನಡದಲ್ಲಿ ಬರೆಸುವಂತೆ ಹೋರಾಟ ಮಾಡಲು ಬಳಗದ ಆಶ್ರಯದಲ್ಲಿ ಕನ್ನಡ ಚಿತ್ರ ಪ್ರೇಮಿಗಳ ಸಂಘವನ್ನು ಸ್ಥಾಪಿಸಿ ಈ ಕಾರ್ಯದಲ್ಲಿ ಯಶಸ್ವಿಯಾದರು. ನಗರ ಸಭೆಯ ಚುನಾವಣೆಗಳಲ್ಲಿಯೂ ಭಾಗವಹಿಸಿ ಕನ್ನಡ ಪ್ರದೇಶಗಳಲ್ಲಿ

ಚುನಾವಣೆಯನ್ನು ನಡೆಸದೆ ಅವಿರೋಧವಾಗಿ ಕನ್ನಡಿಗರು ಆಯ್ಕೆಗೊಳ್ಳುವಂತೆ ಪ್ರಮುಖ ಪಾತ್ರ ವಹಿಸಿದರು. ಈ ಬಳಗವು ಮುಂದೆ ೧೯೭೩ ರಲ್ಲಿ ಕನ್ನಡ ಚಳುವಳಿಗಾರರ ಸಂಘ-ಸ್ಥಾಪನೆಯಾದ ಕೂಡಲೆ ಅದರ ಜೊತೆ ಸೇರಿ ಕಾರ್ಯ ನಿರ್ವಹಿಸತೊಡಗಿತು.

**ಕನ್ನಡ ಚಳುವಳಿಗಾರರ ಸಂಘ :** ೧೯೭೩ ರಿಂದ ಕಾರ್ಯಾರಂಭಗೊಂಡ ಈ ಸಂಘವು ಬೆಳಗಾವಿಯಲ್ಲಿ ಉಗ್ರ ಚಳುವಳಿಗಳನ್ನು ಹಮ್ಮಿಕೊಂಡು ಹಲವಾರು ಐತಿಹಾಸಿಕ ಮಹತ್ವವನ್ನು ಪಡೆದುಕೊಂಡ ಕಾರ್ಯಗಳನ್ನು ಮಾಡಿದೆ. ಎಸ್.ಬಿ. ಕಣಬರಗಿ, ಸಿದ್ಧನಗೌಡ ಪಾಟೀಲ, ಎಚ್.ಬಿ. ದೇಸಾಯಿ ವಕೀಲರು, ರಾಘವೇಂದ್ರ ಜೋಶಿ, ಶಂಕರ ಟೊಪಗಿ, ಶಂಖರ ಬುಚಡಿ, ಹರಿದೇಶಪಾಂಡೆ, ಭೀಮಸೇನ ತೊರಗಲ್ಲ, ಮುಂತಾದವರು ಕೂಡಿಕೊಂಡು ಈ ಸಂಘದ ಮೂಲಕ ಚಳುವಳಿಯನ್ನು ಹಮ್ಮಿಕೊಂಡು ಕನ್ನಡ ಕಟ್ಟುವ ಕಾರ್ಯದಲ್ಲಿ ತೊಡಗಿದರು.

ಈ ಚಳುವಳಿಗಾರರ ಹೋರಾಟದ ಫಲವಾಗಿ ಬೆಳಗಾವಿ ಮಹಾನಗರ ಸಭೆಯ ನಾಮಫಲಕದಲ್ಲಿ ಕನ್ನಡ ಭಾಷೆ ಮೊಟ್ಟ ಮೊದಲಬಾರಿಗೆ ಕಾಣಿಸಿಕೊಂಡಿತು. ನಿರ್ಭೀತ ಹೋರಾಟಗಾರರಾಗಿದ್ದ ಸಿದ್ಧನಗೌಡ ಪಾಟೀಲರ ನೇತೃತ್ವದಲ್ಲಿ ಹೋರಾಟಗಳನ್ನು ಹಮ್ಮಿಕೊಂಡು ಕನ್ನಡ ಪರವಾದ ಕಾರ್ಯಗಳನ್ನು ಜಾರಿಗೊಳಿಸಲಾಯಿತು. ಕರ್ನಾಟಕ ಎಲ್ಲ ಲೋಕಸಭೆ ಸದಸ್ಯರ ಸಮಾವೇಶವನ್ನು ಹಮ್ಮಿಕೊಂಡಿದ್ದು ಈ ಸಂಘದಮಹತ್ವದ ಕಾರ್ಯವಾಗಿದೆ. ಬೆಳಗಾವಿ ವಿಷಯವನ್ನು ಲೋಕಸಭೆಯಲ್ಲಿ ಸಮರ್ಪಕವಾಗಿ ಚರ್ಚಿಸಿ ಬೆಳಗಾವಿ ಕರ್ನಾಟಕದ್ದು ಎಂಬುದನ್ನು ಕರ್ನಾಟಕದ ಎಂ.ಪಿ ಗಳು ದೃಢಪಡಿಸಬೇಕು ಎಂಬ ಉದ್ದೇಶದೊಂದಿಗೆ ಸಮಾವೇಶವನ್ನು ಹಮ್ಮಿಕೊಂಡರು. ಸಮಾವೇಶದಲ್ಲಿ ಎಲ್ಲರೂ ಇದಕ್ಕೆ ಸ್ಪಂದಿಸಿ ಚಳುವಳಿಗಾರರ ಉದ್ದೇಶದಂತೆ ಪ್ರಯತ್ನಿಸುವುದಾಗಿ ತಿಳಿಸಿದರು. ಈ ಸಮಾವೇಶದಲ್ಲಿ ಭಾಗವಹಿಸಿದ್ದ ಕರ್ನಾಟಕದ ಅಂದಿನ ಮಾನ್ಯ ಮುಖ್ಯಮಂತ್ರಿಗಳಾದ ದೇವರಾಜ ಅರಸರೊಡನೆ ಬೆಳಗಾವಿ ಕನ್ನಡಿಗರ ಸಮಸ್ಯೆಗಳನ್ನು ಚರ್ಚಿಸಿದರು. ನಗರದಲ್ಲಿ ಕನ್ನಡಿಗರ ಸಂಖ್ಯೆಯನ್ನು ಹೆಚ್ಚಿಸಲು ಧಾರವಾಡದಲ್ಲಿರುವ ಎಲ್ಲ ವಿಭಾಗೀಯ ಕಚೇರಿಗಳನ್ನು ಬೆಳಗಾವಿಗೆ ವರ್ಗಾಯಿಸುವಂತೆ ಮನವಿ ಮಾಡಿಕೊಂಡರು. ಇದಕ್ಕೆ ಸ್ಪಂದಿಸಿದ ಮುಖ್ಯಮಂತ್ರಿಗಳು ಬೆಂಗಳೂರಿಗೆ ಹೋದ ತಕ್ಷಣ ಇದರ ಬಗ್ಗೆ ಚಿಂತನೆ ಮಾಡಿದ್ದಲ್ಲದೆ ಧಾರವಾಡದಲ್ಲಿದ್ದ ಎಲ್ಲ ವಿಭಾಗೀಯ ಕಾರ್ಯಾಲಯಗಳನ್ನು ಬೆಳಗಾವಿಗೆ ವರ್ಗಾಯಿಸುವಂತೆ ಸೂಕ್ತ ಆದೇಶ ಹೊರಡಿಸಿದರು. ಇದರ ಪರಿಣಾಮವಾಗಿ ಬೆಳಗಾವಿ ನಗರದಲ್ಲಿ ಕನ್ನಡಿಗರ ಸಂಖ್ಯೆ ಸಾಕಷ್ಟು ವೃದ್ಧಿಯಾಯಿತು.

೧೯೭೪ ರಲ್ಲಿ ಬೆಳಗಾವಿಯಲ್ಲಿ ಕನ್ನಡಿಗರ ಗಡಿ ಪರಿಷತ್ತು ಈ ಸಂಘದ ಸಂಯೋಜನೆಯಲ್ಲಿ ಜರುಗಿತು. ಹಲವಾರು ಜನ ಸಂಸದರು, ರಾಜ್ಯದ ಮುಖ್ಯಮಂತ್ರಿಗಳು ಇದರಲ್ಲಿ ಪಾಲ್ಗೊಂಡು ಹಲವಾರು ನಿರ್ಣಯಗಳನ್ನು ಕೈಕೊಂಡರು. ೧೯೭೭ ರಲ್ಲಿ ದೆಹಲಿಗೆ ಚಳುವಳಿಗಾರರ ನಿಯೋಗ ತೆರಳಿ ಪ್ರಧಾನ ಮಂತ್ರಿಗಳನ್ನು ಬೆಟ್ಟಿಯಾಗಿ ಮಹಾಜನ ವರದಿಯನ್ನು ಕೂಡಲೆ ಜಾರಿಗೊಳಿಸುವಂತೆ ಒತ್ತಾಯಿಸಿದರು. ಮುಂದೆ ಬೆಳಗಾವಿಯ ಉಪನಗರಗಳೀಗೆ

ಕನ್ನಡ ಹೆಸರಿಡಲು ಹೋರಾಟ ನಡೆಸಿ ಯಶಸ್ವಿಯಾಯಿತು. ಇದರಿಂದ ಮಹಾಂತೇಶ ನಗರ, ವಿಶ್ವೇಶ್ವರಯ್ಯಾ ನಗರಗಳು ಹುಟ್ಟಿಕೊಂಡವು. ನಗರಸಭೆ, ವಿಧಾನಸಭೆ, ಲೋಕಸಭೆ ಚುನಾವಣೆಗಳಲ್ಲಿ ಒಬ್ಬನೇ ಕನ್ನಡಿಗ ಸ್ಪರ್ಧಿಸುವಂತೆ ಮಾಡಿದರು. ಮಹಾನಗರ ಸಭೆಯ ಚಿಹ್ನೆಯಲ್ಲಿ ಕಿತ್ತೂರಚನ್ನಮ್ಮಳ ಭಾವಚಿತ್ರ ಇರುವಂತೆ ಮಾಡಿದರು. ಇಂಡಾಲ ಅಲ್ಯುಮಿನಿಯಂ ಪ್ಯಾಕ್ಟರಿಯಲ್ಲಿ ಕನ್ನಡಿಗರಿಗೆ ಉದ್ಯೋಗ ದೊರಕಿಸಿ ಕೊಟ್ಟು ಫ್ಯಾಕ್ಟರಿ ಕ್ಯಾಂಪಿನಲ್ಲಿ ಕನ್ನಡ ಶಾಲೆಯನ್ನು ತೆರೆಯುವಂತೆ ಹೋರಾಟ ಮಾಡಿ ಯಶಸ್ವಿಯಾದರು. ಬೆಳಗಾವಿಯಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕೇಂದ್ರಸ್ಥಾಪನೆ ಗಾಗಿಯೂ ಈ ಚಳುವಳಿಗಾರರು ಶ್ರಮಿಸಿದವರು. ಹೀಗೆ ಬೆಳಗಾವಿಯಲ್ಲಿ ಕನ್ನಡ ವಾತಾವರಣ ಬೆಳೆಯಲು ಕನ್ನಡ ಚಳುವಳಿಗಾರರ ಸಂಘ ಪ್ರಮುಖ ಪಾತ್ರವಹಿಸಿತು. ಈ ಸಂಘಟನೆಯು ಕಲ್ಲು ಎಸೆದು, ಬೆಂಕಿ ಹಚ್ಚಿ, ಹೋರಾಟಮಾಡದೆ ರಚನಾತ್ಮಕವಾಗಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಬೆಳಗಾವಿಯಲ್ಲಿ ಕನ್ನಡ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡಿದ್ದು ಮಾದರಿಯಾಗಿದೆ.

**ಜವಾಹರಲಾಲ್ ನೆಹರು ವೈದ್ಯಕೀಯ ಕಾಲೇಜಿನ ಕನ್ನಡ ಬಳಗ :** ರಾಜ್ಯ ನಾನಾ ಭಾಗಗಳಿಂದ ವೈದ್ಯಕೀಯ ಶಿಕ್ಷಣ ಪಡೆಯಲು ಬೆಳಗಾವಿಗೆ ಬಂದ ವಿದ್ಯಾರ್ಥಿಗಳು ಬೆಳಗಾವಿಯಲ್ಲಿಯ ಕನ್ನಡದ ಸ್ಥಿತಿಯನ್ನು ಕಂಡು ಕನ್ನಡಿಗರನ್ನು ಎಚ್ಚರಿಸಿ ಸಂಘಟಿತರನ್ನಾಗಿ ಮಾಡಲು ಹುಟ್ಟಿಕೊಂಡ ಮಹತ್ವದ ಕನ್ನಡ ಸಂಘಟನೆ ಜವಾಹರಲಾಲ್ ನೆಹರು ವೈದ್ಯಕೀಯ ಮಹಾವಿದ್ಯಾಲಯದ ಕನ್ನಡ ಬಳಗ. ೧೯೬೩ ರಲ್ಲಿ ಹುಟ್ಟಿಕೊಂಡ ಈ ಬಳಗವು ಹಲವಾರು ರಚನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಬೆಳಗಾವಿಯಲ್ಲಿ ಕನ್ನಡ ವಾತಾವರಣ ನಿರ್ಮಾಣವಾಗುವಂತೆ ಮಾಡಿದೆ. ಉಚಿತ ವಾಚನಾಲಯ ಮತ್ತು ಗ್ರಂಥಾಲಯ ಸ್ಥಾಪನೆ. ಬಸವೇಶ್ವರರ ಅಷ್ಟ ಶತಮಾನೋತ್ಸವದ ಸಂದರ್ಭದಲ್ಲಿ ಬೃಹತ್ ಮೆರವಣಿಗೆ, ೧೯೭೨ ರಲ್ಲಿ ಅಖಿಲ ಕರ್ನಾಟಕ ವೈದ್ಯಕೀಯ ಸಾಹಿತ್ಯ ಸಮ್ಮೇಳನವನ್ನು ಯಶಸ್ವಿಯಾಗಿ ಆಯೋಜಿಸಿ ಪ್ರತಿಭಾ ಸ್ಮರಣ ಸಂಚಿಕೆ ಬಿಡುಗಡೆ, ೧೯೭೩ ರಲ್ಲಿ ಔಷಧ ಶಾಸ್ತ್ರದ ಪ್ರಾಧ್ಯಾಪಕರಾಗಿದ್ದ ಡಾ. ಶಿವಪ್ಪ ಅವರಿಂದ ರಚಿತಗೊಂಡ ಇಂಗ್ಲಿಷ್–ಕನ್ನಡ ವೈದ್ಯ ಪದಕೋಶದ ಬಿಡುಗಡೆ–ಹೀಗೆ ಹಲವು ಮಹತ್ವದ ಕಾರ್ಯಗಳನ್ನು ಮಾಡಿದೆ.

ಪ್ರತಿವರ್ಷ ಕನ್ನಡ ಸಾಹಿತ್ಯ, ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ನಾಡಿನ ಪ್ರಸಿದ್ಧ ವಿದ್ವಾಂಸರನ್ನು ಕರೆಸಿ ಉಪನ್ಯಾಸ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರ ಮೂಲಕ ಕನ್ನಡಿಗರಲ್ಲಿ ಆತ್ಮವಿಶ್ವಾಸ ಮೂಡಿಸುತ್ತಿದೆ. ನಾಡಿನ ಹಿರಿಯ ಸಾಹಿತಿಗಳಾದ ದ.ರಾ. ಬೇಂದ್ರೆ, ಪಾಟೀಲ ಪುಟ್ಟಪ್ಪ, ಕೃಷ್ಣಮೂರ್ತಿ ಪುರಾಣಿಕ, ಸಿದ್ಧಯ್ಯ ಪುರಾಣಿಕ, ಬೆಟಗೇರಿ ಕೃಷ್ಣಶರ್ಮ, ಈಶ್ವರ ಸಣಕಲ್ಲ ಹೀಗೆ ಪ್ರಮುಖ ಸಾಹಿತಿಗಳು, ಕವಿಗಳು ಈ ಕನ್ನಡ ಬಳಗದ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದಾರೆ. ೧೯೮೮ ರಲ್ಲಿ ಕನ್ನಡ ಬಳಗದ ರಜತೋತ್ಸವ ಸಂದರ್ಭದಲ್ಲಿ ಎರಡನೆಯ ಬಾರಿಗೆ ಅಖಿಲ ಕರ್ನಾಟಕ ವೈದ್ಯಕೀಯ ಸಮ್ಮೇಳನವನ್ನು ಹಮ್ಮಿಕೊಂಡು ಯಶಸ್ವಿಗೊಳಿಸಿತು. ಈ ಸಮ್ಮೇಳನದಲ್ಲಿ

ಉಳಿಸಿದ ಹಣದೊಂದಿಗೆ ಪ್ರಾಧ್ಯಾಪಕರು ಮತ್ತು ಸ್ಥಳೀಯ ದಾನಿಗಳು ಕೊಡಮಾಡಿದ ದೇಣಿಗೆಯಿಂದ ವಿದ್ಯಾಲಯದ ಆವರಣದ ಮಧ್ಯಭಾಗದಲ್ಲಿ ೧೯೭೭ ರಲ್ಲಿ ಶಿವಾಲಯ ದೇವಸ್ಥಾನ ನಿರ್ಮಾಣಗೊಂಡಿತು.

ಮಹಾಜನ ಆಯೋಗದ ಮುಂದೆ ಕನ್ನಡ ಪರವಾದವನ್ನು ಕನ್ನಡ ಬಳಗವು ಸಮರ್ಥವಾಗಿ ಮಂಡಿಸಿತು. ಈ ಸಂದರ್ಭದಲ್ಲಿ ಗಡಿ ಸಮಸ್ಯೆಯನ್ನು ಕುರಿತು ಡಾ. ಅಶೋಕ ಪೈಯವರು ಬರೆದ ಪುಸ್ತಕವನ್ನು ತೆಗೆದುಕೊಂಡು ನಿಯೋಗದೊಂದಿಗೆ ತೆರಳಿ ಪ್ರಧಾನ ಮಂತ್ರಿಗಳಿಗೆ ಸಲ್ಲಿಸಿತು. ಹೀಗೆ ನಾಡು ನುಡಿಯ ಸೇವೆಯಲ್ಲಿ ನಿರಂತರವಾಗಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಬೆಳಗಾವಿಯ ಕನ್ನಡ ಚಟುವಟಿಕೆಗಳಲ್ಲಿ ಸಂಚಲನವನ್ನುಂಟುಮಾಡಿದೆ.

ಈ ಎಲ್ಲ ಕನ್ನಡ ಸಂಘಟನೆಗಳ ಜೊತೆಗೆ ಇನ್ನೂ ಹಲವಾರು ಸಂಘಟನೆಗಳು ಬೆಳಗಾವಿಯಲ್ಲಿ ಮಹತ್ವದ ಕಾರ್ಯಗಳನ್ನು ಮಾಡಿವೆ. ಅವುಗಳಲ್ಲಿ ಮುಖ್ಯವಾಗಿ ಭಡಕಲಬೀದಿಯ ಕರ್ನಾಟಕ ಸಂಘ, ಖಾಸಭಾಗದ ಕನ್ನಡ ತರುಣ ಬಳಗ, ರಾಜಕುಮಾರ ಅಭಿಮಾನಗಳ ಸಂಘ, ಖಾಸಭಾಗದ ಹೊಯ್ಸಳಸೇನೆ, ಮಠಬೀದಿಯ ಚಾಣಕ್ಯ ಯುವಕ ಮಂಡಳ, ಖಾಸಭಾಗದ ಭುವನೇಶ್ವರಿ ಯುವಕ ಮಂಡಳ, ವೀರರಾಣಿ ಚೆನ್ನಮ್ಮ ಯುವಕ ಮಂಡಳ, ವೀರ ಪುಲಿಕೇಶಿ ತರುಣ ಸಂಘ, ಮಾರುತೇಶ್ವರ ಯುವಕ ಮಂಡಳ, ವಡಗಾವಿಯ ಸರ್ವೋದಯ ಸ್ವಯಂಸೇವಾ ಸಂಘ, ಕರ್ನಾಟಕ ರಂಗಭೂಮಿ ಸಹಕಾರಿ ಸಂಘ, ಕನ್ನಡ ಸಂಘಟನೆಗಳ ಕ್ರಿಯಾ ಸಮಿತಿ, ಜಯಕರ್ನಾಟಕ ಕನ್ನಡ ಒಕ್ಕೂಟ ಮುಂತಾದವುಗಳು ಬೆಳಗಾವಿಯಲ್ಲಿ ಕನ್ನಡ ನೆಲ, ಭಾಷೆಯ ರಕ್ಷಣೆಗಾಗಿ ಹೋರಾಡುತ್ತಿವೆ. ಕನ್ನಡಿಗರಲ್ಲಿ ಆತ್ಮವಿಶ್ವಾಸವನ್ನು ಮೂಡಿಸಿ ಕನ್ನಡ ವಾತಾವರಣವನ್ನು ನಿರ್ಮಿಸಲು ಶ್ರಮಿಸುತ್ತಿವೆ. ಇವುಗಳ ಜೊತೆಗೆ ಹಲವಾರು ಸಾಹಿತ್ಯಿಕ ಸಂಘಟನೆಗಳೂ ಕನ್ನಡ ಸಾಹಿತ್ಯ ಭಾಷೆಯ ಬೆಳವಣಿಗೆಯಲ್ಲಿ ತೊಡಗಿಕೊಂಡಿವೆ. ಅವುಗಳಲ್ಲಿ ಮುಖ್ಯವಾಗಿ ಎಸ್.ಡಿ. ಇಂಚಲ ಸ್ಮಾರಕ ಸಮಿತಿ, ಸಾಹಿತ್ಯ ಮಂಟಪ, ಸಾಹಿತ್ಯ ಸಂವಾದ, ಜಿಲ್ಲಾ ಲೇಖಕಿಯರ ಸಂಘ, ಚುಟುಕು ಸಾಹಿತ್ಯ ಪರಿಷತ್ತು, ಕನ್ನಡ ಸಾಹಿತ್ಯ ಪರಿಷತ್ತು, ರಾಜ್ಯ ಸರಕಾರಿ ನೌಕರರ ಸಂಘ, ಕಲಾವಿದರ ಒಕ್ಕೂಟ, ಹೊಂಬೆಳಕು ಸಾಂಸ್ಕೃತಿಕ ಸಂಘ, ಕಲಾರಂಗ ಮೊದಲಾದ ಸಂಸ್ಥೆಗಳು ಬೆಳಗಾವಿಗಾಗಿ ಕನ್ನಡ ಜಾಗೃತಿ ನಿರ್ಮಾಣಕ್ಕಾಗಿ ಕನ್ನಡ ಭಾಷೆ ಸಾಹಿತ್ಯದ ಬೆಳವಣಿಗೆಗಾಗಿ ಶ್ರಮಿಸುತ್ತಿರುವುದು ಅಭಿನಂದನೀಯವಾಗಿದ್ದು ಅವುಗಳ ಸೇವೆ ಉಲ್ಲೇಖಾರ್ಹವಾಗಿದೆ.

**ಮರಾಠಾ ಸಂಘಟನೆಗಳು** : ಬೆಳಗಾವಿ ನಗರ ಹಾಗೂ ಜಿಲ್ಲೆಯ ನಿಪ್ಪಾಣಿ, ಚಿಕ್ಕೋಡಿ, ಖಾನಾಪೂರ ಭಾಗಗಳಲ್ಲಿ ಮರಾಠಿಗರು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಹೀಗಾಗಿ ಈ ಪ್ರದೇಶಗಳಲ್ಲಿ ದ್ವಿಭಾಷಾ ಸಂಸ್ಕೃತಿ ವಿಶೇಷವಾಗಿ ಬೆಳೆದು ಬಂದಿತು. ಈ ಪ್ರದೇಶದ ಮರಾಠಿಗರು ತಮ್ಮ ಅಸ್ತಿತ್ವಕ್ಕಾಗಿ ಸಂಘಟಿತರಾಗಿ ಹಲವಾರು ಸಂಘ ಸಂಸ್ಥೆಗಳನ್ನು ಕಟ್ಟಿಕೊಂಡರು. ಅವುಗಳಲ್ಲಿ ಮುಖ್ಯವಾಗಿ ಸಾಮಾಜಿಕ, ಸಾಹಿತ್ಯಿಕ ಸಾಂಸ್ಕೃತಿಕ, ಶೈಕ್ಷಣಿಕ ಸಂಘಟನೆಗಳು ರೂಪು ತಳೆದವು. ಈ ಸಂಘಟನೆಗಳು ಹುಟ್ಟಿಕೊಳ್ಳುವುದರ ಹಿಂದೆ ಮಹಾತ್ಮಾ ಫುಲೆ, ರಾಜರ್ಷಿ ಶಾಹು ಮಹಾರಾಜ,

ಡಾ. ಬಿ.ಆರ್. ಅಂಬೇಡ್ಕರ ಮುಂತಾದವರ ಪ್ರಭಾವ ಎದ್ದುಕಾಣುತ್ತದೆ. ಫುಲೆಯವರ 'ಸತ್ಯಶೋಧಕ ಸಮಾಜ' ಚಳುವಳಿಯ ಪ್ರಭಾವ ದಟ್ಟವಾಗಿರುವುದು ಎದ್ದು ಕಾಣುತ್ತದೆ.'ಸತ್ಯಶೋಧಕ ಸಮಾಜ'ದ ಚಳುವಳಿಯ ಪ್ರಭಾವದಿಂದ ಹುಟ್ಟಿಕೊಂಡ ಬೆಳಗಾವಿಯ ಹೊಸೂರ ಶಹಾಪೂರ ಭಾಗದ ಪಂಚ ಮಂಡಳಿಯು ಮಹತ್ವದ್ದಾಗಿದೆ. ಈ ಮಂಡಳಿಯ ವತಿಯಿಂದ ಮರಾಠಾ ಮಂಗಲ ಕಾರ್ಯಾಲಯವನ್ನು ನಿರ್ಮಿಸಿ ಮರಾಠಾ ಸಮಾಜ ಬಾಂಧವರ ಮದುವೆ ಹಾಗೂ ಇತರ ಶುಭ ಸಮಾರಂಭಗಳಿಗೆ ವಿನಿಯೋಗಿಸತೊಡಗಿದರು. ಈ ಕಾರ್ಯಾಲಯದಿಂದ ಬರುತ್ತಿದ್ದ ಬಾಡಿಗೆ ಹಣವನ್ನೇ ಮತ್ತೆ ಸದ್ಬಳಕೆ ಮಾಡಿ ಮರಾಠಿ ಸಮಾಜದ ಬಡಮಕ್ಕಳಿಗೆ ಪಠ್ಯಪುಸ್ತಕ, ಹಣಕಾಸಿನ ಸಹಾಯವನ್ನು ದೊರಕಿಸಿಕೊಡುವ ಉಪಕ್ರಮವನ್ನು ಆರಂಭಿಸಿದರು.

ಶಾಹುಮಹಾರಾಜರು ಕೊಲ್ಲಾಪುರದಲ್ಲಿ ಜಮೀನ್ದಾರರ ಕಪಿಮುಷ್ಠಿಯಿಂದ ರೈತರನ್ನು ಮುಕ್ತಗೊಳಿಸುವ ಸಲುವಾಗಿ ಸಹಕಾರಿ ತತ್ವಗಳ ಆಧಾರದಲ್ಲಿ ಸೊಸೈಟಿಗಳನ್ನು ಪ್ರಾರಂಭಿಸಿದರು. ಇದರ ಪ್ರಭಾವಕ್ಕೆ ಒಳಗಾಗಿ ಬೆಳಗಾವಿಯ ಇತರೇ ಹಿಂದುಳಿದ ಚರ್ಮಕಾರ, ಹಡಪದ, ಕೋಷ್ಠಿ ಇತ್ಯಾದಿ ಸಮಾಜದ ಯುವಕರು ಸಂಘಟಿತರಾಗಿ ಸ್ವಉದ್ಯೋಗಗಳನ್ನು ಕೈಕೊಂಡರು.

ಬಹುಜನ ಸಮಾಜವು ಹಿಂದುಳಿಯಲು 'ಅಜ್ಞಾನ'ವೇ ಮೂಲ ಕಾರಣವೆಂಬುದನ್ನರಿತ ಶಾಮರಾವ ದೇಸಾಯಿಯಂತಹವರು ಬೆಳಗಾವಿ ಹಾಗೂ ಇತರ ಪ್ರದೇಶಗಳಲ್ಲಿ ಶಿಕ್ಷಣ ಸಂಸ್ಥೆಗಳನ್ನು ಹುಟ್ಟು ಹಾಕಿದರು. ತನ್ಮೂಲಕ ನಿಸ್ವಾರ್ಥ ಕಾರ್ಯಕರ್ತರ ಒಂದು ಪಡೆಯನ್ನೇ ನಿರ್ಮಿಸಿದರು. ಇದರ ಫಲವಾಗಿ ಬೆಳಗಾವಿ ಜಿಲ್ಲಾ ಶೇತಕರಿ ಶಿಕ್ಷಣ ಸಮಿತಿ ೧೯೪೧ ರಲ್ಲಿ ಸ್ಥಾಪನೆಗೊಂಡಿತು. ಇದರಿಂದಾಗಿ ಹಲವಾರು ಶಾಲೆ, ಕಾಲೇಜುಗಳು ಪ್ರಾರಂಭಗೊಂಡವು. ಇದಕ್ಕಿಂತಲೂ ಪೂರ್ವದಲ್ಲಿಯೇ ೧೯೩೭ ರಲ್ಲಿ ಮರಾಠಾ ಮಂಡಳ ಹೈಸ್ಕೂಲ ಬೆಳಗಾಂವ ಎಂಬ ಹೆಸರಿನಲ್ಲಿ ಹೈಸ್ಕೂಲನ್ನು ಪ್ರಾರಂಭಿಸಿದ್ದರು. ಮುಂದೆ ೧೯೬೫ ರಲ್ಲಿ 'ಭಾರತಿ ವಿದ್ಯಾಲಯ' ಅಸ್ತಿತ್ವಕ್ಕೆ ಬಂದಿತು.

**ಸಾರ್ವಜನಿಕ ವಾಚನಾಲಯ :** ಬೆಳಗಾವಿಯ ಸಾಹಿತ್ಯಿಕ ಚಳುವಳಿಗೆ ಸಾರ್ವಜನಿಕ ವಾಚನಾಲಯದ ಪಾತ್ರ ಹಿರಿದಾಗಿದೆ. ೧೮೪೮ ರಲ್ಲಿ ಬ್ರಿಟಿಷ ಕಲೆಕ್ಟರ್‌ನಿಂದ ಪ್ರಾರಂಭವಾದ ಈ ವಾಚನಾಲಯವು ೧೯೫೬ರವರೆಗೂ ಮರಾಠಿ ಹಾಗೂ ಕನ್ನಡಿಗರ ಅಧೀನತ್ವದಲ್ಲಿಯೇ ಕಾಯನಿರ್ವಹಿಸುತ್ತಿತ್ತು. ತದನಂತರ ಭಾಷಾ ಸಮಸ್ಯೆಯಿಂದ ವಾಚನಾಲಯವು ಮರಾಠಿ ಸಂಘಟಕರ ಜವಾಬ್ದಾರಿಗೆ ಒಳಪಟ್ಟಿದೆ. ಮರಾಠಿ ಸಾಹಿತ್ಯದ ಸಾವಿರಾರು ಪುಸ್ತಕಗಳು ಈ ವಾಚನಾಲಯದಲ್ಲಿವೆ ಈ ವಾಚನಾಲಯದ ಮೂಲಕವೇ ೧೯೯೯ ರಲ್ಲಿ ಅಖಿಲ ಭಾರತೀಯ ಮರಾಠಿ ಸಾಹಿತ್ಯ ಸಮ್ಮೇಳನವು ಬೆಳಗಾವಿಯಲ್ಲಿ ಆಯೋಜನೆಗೊಂಡಿತು. ಈ ನಿಮಿತ್ತ ಸಂಗ್ರಹಿಸಿದ ಹಣದ ಕೆಲವು ಭಾಗವನ್ನು ವಾಚನಾಲಯದ ಅಭಿವೃದ್ಧಿಗೆ, ಮರಾಠಿ ಸಾಹಿತ್ಯ, ಶಿಕ್ಷಣದ ಅಭಿವೃದ್ಧಿಗೆ ವಿನಯೋಗಿಸುವ ಯೋಜನೆ ರೂಪತಾಳಿ

ಇದೀಗ ಕಾರ್ಯೋನ್ಮುಖವಾಗಿದೆ. ಮರಾಠಿ ವಿಷಯದಲ್ಲಿ ಹೆಚ್ಚು ಅಂಕಗಳಿಸುವ ಸ್ನಾತಕೋತ್ತರ ವಿದ್ಯಾರ್ಥಿಗಳನ್ನು ಸನ್ಮಾನಿಸುವ ಪ್ರತಿವರ್ಷ ಶ್ರೇಷ್ಠ ಮರಾಠಿ ಪತ್ರಕರ್ತರನ್ನು ಗುರುತಿಸಿ ರಾಜಾಧ್ಯಕ್ಷ ಪುರಸ್ಕಾರ ನೀಡುವ ವಿಶೇಷ ಕಾರ್ಯವನ್ನು ಕೈಕೊಂಡಿದೆ.

**ವಾಙ್ಮಯ ಚರ್ಚಾಮಂಡಳ** : ಮರಾಠಿ ಜನರ ಸ್ವಧರ್ಮ, ಸ್ವಭಾಷೆ, ಸ್ವ ಸಂಸ್ಕೃತಿಯ ಸಂವರ್ಧನೆಗಾಗಿ ರೂಪ ತಾಳಿದ ವಾಙ್ಮಯ ಚರ್ಚಾಮಂಡಳವು ಮಹತ್ವದ ಕಾರ್ಯಗಳನ್ನು ಕೈಕೊಂಡು ಮರಾಠಿ ಬಾಂಧವರಲ್ಲಿ ಸಂಘಟನೆಯನ್ನು ಉಂಟು ಮಾಡಿದೆ. ಬೆಳಗಾವಿ ನಗರದ ಮರಾಠಿ ಸಾಹಿತ್ಯ ಪ್ರೇಮಿ ತರುಣರು ಒಂದೆಡೆ ಸೇರಿ ಡಾ. ಕೇಶವರಾವ ಸಾಠೆಯವರ ಮುಂದಾಳತ್ವದಲ್ಲಿ ಸಾಹಿತ್ಯದ ಚರ್ಚೆಗಾಗಿಯೇ ೧೯೧೬ ರಲ್ಲಿ 'ಮಿತ್ರ ಮಂಡಳ'ವನ್ನು ಸ್ಥಾಪಿಸಿದರು. ತರುಣ ಸದಸ್ಯರು ಸ್ವಂತದ ಪುಸ್ತಕಗಳನ್ನೆಲ್ಲ ಸಂಗ್ರಹಿಸಿ ಚಲಿಸುವ ಗ್ರಂಥಾಲಯವನ್ನು ಕಟ್ಟಿಕೊಂಡು ಮನೆಮನೆಗೆ ಕೃತಿಗಳನ್ನು ತಲುಪಿಸುವ ಕಾರ್ಯವನ್ನು ಅತ್ಯಂತ ನಿಷ್ಠೆಯಿಂದ ಮಾಡಿಕೊಂಡು ಬಂದ ಬಗೆ ಅನುಕರಣೀಯವಾದುದು. ಇದೇ ಮಿತ್ರಮಂಡಳಿ ಮುಂದೆ ೧೯೨೭ ರಲ್ಲಿ ವಾಙ್ಮಯ ಚರ್ಚಾ ಮಂಡಳ ವಾಗಿ ಹೊಸ ನಾಮಕರಣದೊಂದಿಗೆ ಕಾರ್ಯಪ್ರವೃತ್ತವಾಯಿತು. ೧೯೨೯ ರಲ್ಲಿ ಮರಾಠಿ ಸಾಹಿತ್ಯ ಸಮ್ಮೇಳನವು ಯಶಸ್ವಿಯಾಗಲಿಕ್ಕೆ ಮುಖ್ಯ ಪಾತ್ರವಹಿಸಿತು. ಅಲ್ಲದೆ ನಾಟ್ಯಮಹರ್ಷಿ ಅಣ್ಣಾಸಾಹೇಬ ಕಿರ್ಲೋಸ್ಕರ ಅವರ ಸ್ಮಾರಕ ಮಂದಿರ ನಿರ್ಮಾಣ ಮಾಡಬೇಕೆಂಬ ನಿರ್ಣಯಕ್ಕೆ ಎಡೆ ಮಾಡಿಕೊಟ್ಟಿತು. ಅದರಂತೆ ೧೯೪೧ ರಲ್ಲಿ ಕಿರ್ಲೋಸ್ಕರ ಸ್ಮಾರಕ ಮಂದಿರ ನಿರ್ಮಾಣವಾಯಿತು. ೧೯೪೩ ರಿಂದ 'ವಸಂತ ವ್ಯಾಖ್ಯಾನ ಮಾಲಾ' ಪ್ರಾರಂಭಗೊಂಡು ಹೆಸರಾಂತ ಮರಾಠಿ ಸಾಹಿತಿಗಳಿಂದ ಉಪನ್ಯಾಸಗಳನ್ನು ಹಮ್ಮಿಕೊಳ್ಳುವ ಕ್ರಿಯೆಗೆ ಚಾಲನೆ ದೊರೆಯಿತು. ಅದರೊಂದಿಗೆ ಮಹಾರಾಷ್ಟ್ರ ಸಾಹಿತ್ಯ ಪರಿಷತ್ ನಡೆಸುವ ಪ್ರಾಜ್ಞ ಹಾಗೂ ವಿಶಾರದ ಪರೀಕ್ಷೆಗಳ ಅಭ್ಯಾಸ ಕ್ರಮವನ್ನು ಬೋಧಿಸುವ ವಿನೂತನ ಕ್ರಿಯೆಗೆ ಮಂಡಳಿಯವರು ಚಾಲನೆ ನೀಡಿದರು. ಹೀಗೆ ಚರ್ಚಾ ಮಂಡಳವು ಹಲವಾರು ರಚನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಮರಾಠಿ ಸಾಹಿತ್ಯ ಭಾಷೆಯ ಬೆಳವಣಿಗೆಯ ಜೊತೆಗೆ ಮರಾಠಿಗರನ್ನು ಸಂಘಟಿಸುವ ಕಾರ್ಯದಲ್ಲಿ ತೊಡಗಿದೆ.

**ಬ್ಯಾರಿಸ್ಟರ ನಾಥ ಪೈ ವ್ಯಾಖ್ಯಾನ ಮಾಲಾ** : ಮರಾಠಿ ಸಮಾಜದ ಹಿರಿಯ ಧುರೀಣರಾಗಿದ್ದ ಬ್ಯಾರಿಸ್ಟರ ನಾಥ ಪೈ ಅವರ ಹೆಸರಿನಲ್ಲಿ ರೂಪತಾಳಿದ ವ್ಯಾಖ್ಯಾನ ಮಾಲೆಯು ಮಹಾರಾಷ್ಟ್ರ, ಗೋವಾ, ಹಾಗೂ ಕರ್ನಾಟಕದ ಹೆಸರಾಂತ ವಿಚಾರವಂತರನ್ನು ಆಮಂತ್ರಿಸಿ ಅವರ ವೈಚಾರಿಕ ವ್ಯಾಖ್ಯಾನಗಳನ್ನು ಆಲಿಸುವ ಅವಕಾಶವನ್ನು ಬೆಳಗಾವಿಯ ಸಹೃದಯರಿಗೆ ಒದಗಿಸಿಕೊಟ್ಟಿದೆ. ಇದರೊಂದಿಗೆ ನಾಟ್ಯ ಸಾಹಿತ್ಯ ಸಂಗೀತಗೋಷ್ಠಿಗಳಿಗೆ ಸದವಕಾಶಗಳನ್ನು ಒದಗಿಸಿಕೊಟ್ಟಿರುವ ಈ ಮಾಲೆಯು ಶ್ರೀ ಅಣ್ಣಾ ಹಜಾರೆ, ಅರುಣ ಸಾಧು, ಸ್ಮಿತಾ ತಳವಲಕರ ಮುಂತಾದ ವಿಚಾರವಂತರನ್ನು ಆಹ್ವಾನಿಸಿದೆ.

**ಸರಸ್ವತಿ ವಾಚನಾಲಯ :** ಮರಾಠಿ ಭಾಷೆ, ಸಾಹಿತ್ಯವನ್ನು ಸಹೃದಯರಿಗೆ ತಲುಪಿಸುವ ನಿಟ್ಟಿನಲ್ಲಿ ಮಹತ್ವದ ಕಾರ್ಯವನ್ನು ಮಾಡುತ್ತಿರುವ ಶಹಪುರದ ಸರಸ್ವತಿ ವಾಚನಾಲಯವು ೧೮೭೪ ರಿಂದ ಕಾರ್ಯಾರಂಭ ಮಾಡಿದೆ. ೧೯೩೪ ರಲ್ಲಿ ಪಟವರ್ಧನರವರ ಸಹಾಯ ಸಹಕಾರದಿಂದ ಸ್ವಂತ ಕಟ್ಟಡವನ್ನು ಹೊಂದಿ ಸುಮಾರು ಹದಿನೇಳು ಸಾವಿರಕ್ಕಿಂತಲೂ ಹೆಚ್ಚಿನ ಪುಸ್ತಕಗಳನ್ನು ಹೊಂದಿದೆ. ಮರಾಠಿ ಸಾಹಿತ್ಯದ ಹಲವಾರು ಮಹತ್ವದ ಹಳೆಯ ಗ್ರಂಥಗಳು ಈ ವಾಚನಾಲಯದಲ್ಲಿವೆ. ಮರಾಠಿ ಸಾಹಿತ್ಯವನ್ನು ಅಧ್ಯಯನ ಮಾಡುವವರಿಗೆ ಒಳ್ಳೆಯ ಆಕರ ಗ್ರಂಥಗಳು ಇಲ್ಲಿ ದೊರೆಯುತ್ತವೆ.

ಈ ಸಂಘಟನೆಗಳ ಜೊತೆಗೆ ಇನ್ನೂ ಹಲವಾರು ಸಂಘಟನೆಗಳು ಮರಾಠಿ ಸಾಹಿತ್ಯವನ್ನು ಬೆಳೆಸುವಲ್ಲಿ ಕಾರ್ಯನಿರತವಾಗಿವೆ. ಅವುಗಳಲ್ಲಿ ಮುಖ್ಯವಾಗಿ ವಿ.ಗೊ. ಸಾಠೆ ಮರಾಠಿ ಪ್ರಬೋಧಿನಿ, ವರೇಕರ ನಾಟ್ಯ ಸಂಘ, ಆಕಾರ, ಇಂದ್ರಧನುಷ, ನಾಟ್ಯಾಂಕುರ, ಮಂಥನ, ಶಬ್ದಗಂಧ, ಸಾಂಗಾತಿ ಸಾಹಿತ್ಯ ಅಕಾಡೆಮಿ ಮುಂತಾದವುಗಳು ನಾಟಕ ಪ್ರದರ್ಶನ, ಗ್ರಂಥ ಪ್ರಕಾಶನ, ಸಾಹಿತ್ಯ ಸಮ್ಮೇಳನಗಳನ್ನು ಹಮ್ಮಿಕೊಳ್ಳುವುದರ ಮೂಲಕ ಸೃಜನಾತ್ಮಕ ಕಾರ್ಯದಲ್ಲಿ ತೊಡಗಿವೆ.

ಆರ್ಥಿಕ ಕ್ಷೇತ್ರದಲ್ಲಿಯೂ ಮರಾಠಿ ಸಮುದಾಯವನ್ನು ಬಲಪಡಿಸುವ ಕಾರ್ಯ ಸಂಘ ಸಂಸ್ಥೆಗಳಿಂದ ನಡೆಯಿತು. ಈ ನಿಟ್ಟಿನಲ್ಲಿ ಹಲವಾರು ಸೊಸೈಟಿಗಳು, ಬ್ಯಾಂಕುಗಳು ಹುಟ್ಟಿಕೊಂಡವು. ಅವುಗಳಲ್ಲಿ ಮುಖ್ಯವಾಗಿ ೧೯೪೨ ರಲ್ಲಿ ಸ್ಥಾಪಿತವಾದ ದಿ. ಮರಾಠಾ ಕೋ ಆಪರೇಟೀವ್ ಕ್ರೆಡಿಟ್ ಸೊಸೈಟಿ, ೧೯೪೫ ರಲ್ಲಿ ಸ್ಥಾಪಿತವಾದ ಶ್ರೀ ತುಕಾರಾಮ ಅರ್ಬನ್ ಕೋ-ಆಪ್ ಕ್ರೆಡಿಟ್ ಬ್ಯಾಂಕ್ ಲಿ. ಶಹಾಪುರ, ೧೯೭೪ ರಲ್ಲಿ ಪ್ರಾರಂಭಗೊಂಡ ಜೀಜಾಮಾತಾ ಮಹಿಳಾ ಸಹಕಾರಿ ಬ್ಯಾಂಕ ಲಿ ಇದೇ ರೀತಿ ಲೋಕಮಾನ್ಯ ಕೋ-ಆಪ್ ಕ್ರೆಡಿಟ್ ಸೊಸೈಟಿ, ಆದರ್ಶ ಕೋ ಆಪ್ ಕ್ರಡಿಟ್ ಸೊಸೈಟಿ ಹೀಗೆ ೫೦ ಕ್ಕೂ ಹೆಚ್ಚು ಸಹಕಾರಿ ಸಂಘಗಳು ಸ್ಥಾಪನೆಗೊಂಡು ಮರಾಠಿಗರಿಗೆ ಆರ್ಥಿಕ ನೆರವು ನೀಡುತ್ತಿವೆ.

ಒಟ್ಟಿನಲ್ಲಿ ಬೆಳಗಾವಿಯ ಸಾಹಿತ್ಯ ಸಂಘಗಳು, ಸಾಮಾಜಿಕ ಸಂಸ್ಥೆಗಳು, ಸಹಕಾರಿ ಸಂಘಗಳು ಬೆಳಗಾವಿಯ ಮರಾಠಿ ಜನರ ಸಂಘಟನೆ, ಅಭಿವೃದ್ಧಿಯನ್ನು ಮುಖ್ಯ ಧ್ಯೇಯವಾಗಿಟ್ಟುಕೊಂಡು ಎಲ್ಲ ಭಾಷೆ, ಸಮಾಜದವರೊಡನೆ ಸಹಕಾರದಿಂದ ಕಾರ್ಯ ನಿರ್ವಹಿಸಿ, ಎಲ್ಲ ಜನರೊಂದಿಗೆ ಬೆರೆತು ಕಾರ್ಯ ನಿರ್ವಹಿಸುತ್ತಿವೆ.

**೫. ಸಾಹಿತ್ಯ ಸಮ್ಮೇಳನಗಳು:**

ಕನ್ನಡ ಭಾಷೆ, ಸಹಿತ್ಯ, ಕಲೆ, ಸಂಸ್ಕೃತಿ ಮತ್ತು ಜನಪದದ ಸರ್ವತೋಮುಖ ಬೆಳವಣಿಗೆ ಹಾಗೂ ರಕ್ಷಣೆಯನ್ನು ಉದ್ದೇಶವಾಗಿರಿಸಿಕೊಂಡು ಸ್ಥಾಪಿತವಾದ ಮಹಾನ್ ಸಂಸ್ಥೆ-ಕನ್ನಡ ಸಾಹಿತ್ಯ ಪರಿಷತ್ತು.

ಮೈಸೂರಿನ ಅಂದಿನ ಶ್ರೀಮಾನ್ ಮಹಾರಾಜ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಸಾಹಿತ್ಯಾಭಿಮಾನ, ಅಂದಿನ ದಿವಾನರಾಗಿದ್ದ ಸರ್. ಎಂ. ವಿಶ್ವೇಶ್ವರಯ್ಯನವರ ಪ್ರೋತ್ಸಾಹ ಹಾಗೂ ನಾಡಿನ ಅನೇಕ ಕನ್ನಡ ಹಿರಿಯರ ದೂರದೃಷ್ಟಿಯ ಫಲವಾಗಿ ೧೯೧೫ ಮೇ ೨ನೇ ತಾರೀಖಿನಂದು 'ಕರ್ನಾಟಕ ಸಾಹಿತ್ಯ ಪರಿಷತ್ತು" ಉದಯವಾಯಿತು.

**ಬೆಳಗಾವಿ ಜಿಲಾ ಘಟಕ:** ಕನ್ನಡ ಸಾಹಿತ್ಯ ಪರಿಷತ್ತಿನ ಜಿಲ್ಲಾ ಶಾಖೆ ೧೯೭೦ ರಲ್ಲಿ ಪ್ರಾರಂಭವಾಯಿತು. ಜಿಲ್ಲಾ ಶಾಖೆಯ ಪ್ರಾರಂಭದ ಅಧ್ಯಕ್ಷರಾಗಿ ಮಿರ್ಜಿ ಅಣ್ಣಾರಾಯರು ನೇಮಕಗೊಂಡರು. ಅಣ್ಣಾರಾಯರ ಪ್ರಾಮಾಣಿಕ ಪರಿಶ್ರಮ ಮತ್ತು ಎಸ್.ಡಿ. ಇಂಚಲರ ಸ್ಫೂರ್ತಿದಾಯಕ ಪ್ರಚೋದನೆ ಇವು ಪರಿಷತ್ತಿಗೆ ಚೈತನ್ಯದಾಯಕ ಶಕ್ತಿಗಳಾಗಿ ನಿಂತವು.

**ಸಮ್ಮೇಳನಗಳು :** ಕನ್ನಡ ಸಾಹಿತ್ಯ ಪರಿಷತ್ತು ಅಖಿಲ ಭಾರತ ವ್ಯಾಪ್ತಿಯ ಕನ್ನಡ ಸಾಹಿತ್ಯಸಮ್ಮೇಳನಗಳನ್ನು ಏರ್ಪಡಿಸುತ್ತ ಬಂದಿದೆ. ಇದುವರೆಗೆ ಅಂತಹ ೭೮ ಸಮ್ಮೇಳನಗಳು ನಡೆದಿವೆ. ರಾಜ್ಯದ ಹೊರಗಡೆ ಹೈದರಾಬಾದ್, ಮದ್ರಾಸ, ಮುಂಬೈ, ದೆಹಲಿಗಳಲ್ಲಿಯೂ ಸಮ್ಮೇಳನಗಳನ್ನು ನಡೆಸಲಾಗಿದೆ. ರಾಜ್ಯದ ಎಲ್ಲಾ ಪ್ರಮುಖ ಭಾಗಗಳಲ್ಲಿ ಇದುವರೆಗೆ ಸಾಹಿತ್ಯ ಸಮ್ಮೇಳನಗಳು ನಡೆಯುತ್ತ ಬಂದಿವೆ.

ಬೆಳಗಾವಿಯಲ್ಲಿ ಇದುವರೆಗೆ ಅಖಿಲಭಾರತ ಮಟ್ಟದು ಐದು ಕನ್ನಡ ಸಾಹಿತ್ಯ ಸಮ್ಮೇಳನಗಳು ಹಾಗೂ ಜಿಲ್ಲಾ ಮಟ್ಟದ ಏಳು ಸಾಹಿತ್ಯ ಸಮ್ಮೇಳನಗಳು ಜರುಗಿವೆ ಅಲ್ಲದೆ ಶರಣ ಸಾಹಿತ್ಯ ಸಮ್ಮೇಳನ, ಚುಟುಕು ಸಾಹಿತ್ಯ ಸಮ್ಮೇಳನ, ಯಕ್ಷಗಾನ ಬಯಲಾಟ ಸಾಹಿತ್ಯ ಸಮ್ಮೇಳನಗಳು ಜರುಗಿವೆ. ಈ ಎಲ್ಲ ಸಾಹಿತ್ಯ ಸಮ್ಮೇಲನಗಳ ಜೊತೆಗೆ ಇತ್ತೀಚೆಗೆ ನಡೆದ ವಿಶ್ವಕನ್ನಡ ಸಮ್ಮೇಳನ ಬೆಳಗಾವಿಯಲ್ಲಿ ಜರುಗಿ ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿದೆ.

ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಗಳು: ಕನ್ನಡ ಸಾಹಿತ್ಯ ಪರಿಷತ್ತಿನವತಿಯಿಂದ ಪ್ರತಿವರ್ಷ ನಾಡಿನ ಬೇರೆ ಬೇರೆ ಭಾಗಗಳಲ್ಲಿ ಸಾಹಿತ್ಯ ಸಮ್ಮೇಳನಗಳು ಜರುಗುತ್ತವೆ. ಇದುವರೆಗೆ ೭೮ ಸಾಹಿತ್ಯ ಸಮ್ಮೇಳನಗಳು ಜರುಗಿವೆ. ಇವುಗಳಲ್ಲಿ ಐದು ಬಾರಿ ಬೆಳಗಾವಿ ನಗರದಲ್ಲಿ ಜರುಗಿ ರಾಜ್ಯದ ಮಟ್ಟಿಗೆ ಅತಿ ಹೆಚ್ಚು ಬಾರಿ ಸಾಹಿತ್ಯ ಸಮ್ಮೇಳನಗಳನ್ನು ನಡೆಸಿದ ಹಿರಿಮೆ ಬೆಳಗಾವಿ ನಗರಕ್ಕಿದೆ. ಅಖಿಲ ಭಾರತ ೧೧ನೆಯ ಕನ್ನಡ ಸಾಹಿತ್ಯ ಸಮ್ಮೇಳನ ೧೯೨೫ ರಲ್ಲಿ ಬೆಳಗಾವಿಯಲ್ಲಿ ಜರುಗಿತು. ಇದು ಬೆಳಗಾವಿಗೆ ಮೊಟ್ಟಮೊದಲನೆಯ ಸಾಹಿತ್ಯ ಸಮ್ಮೇಳನ. ೧೯೨೯ ರಲ್ಲಿ ೧೫ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ೧೯೩೯ ರಲ್ಲಿ ೨೪ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ೧೯೮೦ ರಲ್ಲಿ ೫೨ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ೨೦೦೩ ರಲ್ಲಿ ಅಖಿಲ ಭಾರತ ೭೦ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಹೀಗೆ ಒಟ್ಟು ಐದು ಬಾರಿ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಗಳು ಇದುವರೆಗೆ ಬೆಳಗಾವಿಯಲ್ಲಿ ಜರುಗಿವೆ.

**ಜಿಲ್ಲಾ ಸಾಹಿತ್ಯ ಸಮ್ಮೇಳನಗಳು :** ಬೆಳಗಾವಿ ಜಿಲ್ಲಾಕನ್ನಡ ಸಾಹಿತ್ಯ ಪರಿಷತ್ತಿನ ಘಟಕದ ವತಿಯಿಂದ ಏಳು ಬಾರಿ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನಗಳು ಜಿಲ್ಲೆಯ ಬೇರೆ ಬೇರೆ ಭಾಗಗಳಲ್ಲಿ ಜರುಗಿವೆ.

೧ನೆಯ ಸಮ್ಮೇಳನ ೧೯೭೧ ರಲ್ಲಿ, ೨ನೆಯ ಸಮ್ಮೇಳನ ೧೯೮೪ರಲ್ಲಿ ೩ನೆಯ ಸಮ್ಮೇಳನ ೧೯೯೧ ರಲ್ಲಿ, ೪ನೆಯ ಸಮ್ಮೇಳನ ೧೯೯೯ ರಲ್ಲಿ, ೫ನೆಯ ಸಮ್ಮೇಳನ ೨೦೦೬ ರಲ್ಲಿ , ೬ನೆಯ ಸಮ್ಮೇಳನ ೨೦೧೦ ರಲ್ಲಿ, ೭ನೆಯ ಸಮ್ಮೇಳನ ೨೦೧೧ ರಲ್ಲಿ ಜರುಗಿವೆ.

ಸಾಹಿತ್ಯ ಸಮ್ಮೇಳನಗಳು ನಾಡಿನ ಬೇರೆ ಬೇರೆ ಪ್ರದೇಶಗಳಲ್ಲಿ ನಡೆಯುವುದಕ್ಕೂ ಬೆಳಗಾವಿಯಲ್ಲಿ ನಡೆಯುವುದಕ್ಕೂ ಬಹಳಷ್ಟು ವ್ಯತ್ಯಾಸವಿದೆ. ಇದುವರೆಗೆ ಬೆಳಗಾವಿಯಲ್ಲಿ ನಡೆದ ಸಾಹಿತ್ಯ ಸಮ್ಮೇಳನಗಳನ್ನು ಅವಲೋಕಿಸಿದಾಗ ವ್ಯತ್ಯಾಸ ಎದ್ದುಕಾಣುತ್ತದೆ.

ಉತ್ತರ ಕರ್ನಾಟಕ ಪ್ರದೇಶದಲ್ಲಿ ತುಂಬಾ ವಿಶಿಷ್ಟವಾದ ಸಂಸ್ಕೃತಿಯನ್ನು ಹೊಂದಿದ ಬೆಳಗಾವಿ ನಗರವು ಅಷ್ಟೇ ಸಂಕೀರ್ಣವಾದ ಸಂಸ್ಕೃತಿಯನ್ನು ಹೊಂದಿದೆ. ನಗರದ ಗಲ್ಲಿಗಳಷ್ಟೇಅಲ್ಲ ಮನೆ ಮನೆಗಳಲ್ಲಿಯೂ ಈ ವೈವಿಧ್ಯತೆಯನ್ನು ಕಾಣಬಹುದು. ಈ ವೈವಿದ್ಯತೆಯೇ ಬೆಳಗಾವಿ ಸಮ್ಮೇಳನಗಳಿಗೆ ವಿಶಿಷ್ಟವಾದ ಮಹತ್ವವನ್ನು ತಂದುಕೊಡುವುದಕ್ಕೆ ಕಾರಣವಾಗಿದೆ. ಜೊತೆಗೆ ಗಡಿ ವಿವಾದ, ರಾಜಕೀಯ, ಜನರ ಕನ್ನಡ ಪ್ರೀತಿ, ನೆಲದ ಗುಣ, ಊಟ ಉಪಚಾರ, ಇವೆಲ್ಲವೂ ಕೂಡಿಕೊಂಡು ಬೆಳಗಾವಿಯಲ್ಲಿ ಜರುಗಿದ ಸಾಹಿತ್ಯ ಸಮ್ಮೇಳನಗಳಿಗೆ ಮಹತ್ವ ಬಂದಿದೆ. ಇಲ್ಲಿಯವರೆಗೆ (೧೯೨೫ ರಿಂದ ೨೦೧೧ ವಿಶ್ವಕನ್ನಡ ಸಮ್ಮೇಳನದವರೆಗೆ) ಜರುಗಿದ ಸಮ್ಮೇಳನಗಳವನ್ನು ಗಮನಿಸಿದಾಗ ಪ್ರಾರಂಭದ ಹದಿನಾಲ್ಕು ವರ್ಷಗಳಲ್ಲಿ ಮೂರು ಸಮ್ಮೇಳನ ನಡೆದರೆ ಮುಂದಿನ ನಾಲ್ವತ್ತೊಂದು ವರ್ಷಗಳವರೆಗೆ ಒಂದೂ ಅಖಿಲಭಾರತ ಮಟ್ಟದ ಕನ್ನಡ ಸಾಹಿತ್ಯ ಸಮ್ಮೇಳನಗಳು ನಡೆಯಲಿಲ್ಲ. ಇದಕ್ಕೆ ಸ್ಪಷ್ಟವಾದ ಕಾರಣ ಗಡಿ ಸಮಸ್ಯೆಯೇ ಆಗಿದೆ. ಕರ್ನಾಟಕ ಮಹಾರಾಷ್ಟ್ರದ ನಡುವೆ ಬೆಳಗಾವಿಗಾಗಿ ನಡೆದ ವಿವಾದದ ಪರಿಣಾಮದಿಂದಾಗಿ ಸಮ್ಮೇಳನಗಳು ಬೆಳಗಾವಿಯತ್ತ ಸುಳಿಯಲೇ ಇಲ್ಲ. ಬೆಳಗಾವಿಯಲ್ಲಿ ಕನ್ನಡ ಕ್ಷೀಣಿಸುತ್ತ ಸಾಗುವ ಕಾರಣಗಳಲ್ಲಿ ಇದೂ ಒಂದಾಯಿತು. ಬೆಳಗಾವಿಯಲ್ಲಿ ಜರುಗುವ ಸಮ್ಮೇಳನಗಳು ಕೇವಲ ಜಾತ್ರೆಯ ಸ್ವರೂಪದ್ದಲ್ಲ. ಅದು ಇಲ್ಲಿಯ ಕನ್ನಡಿಗರ ಸ್ವಾಭಿಮಾನದ ಪ್ರತೀಕ, ಸ್ಫೂರ್ತಿಗೆ ಪ್ರೇರಕ; ಹೀಗಾಗಿ ಈ ನಲ್ವತ್ತು ವರ್ಷಗಳ ಅವಧಿಯಲ್ಲಿ ಮರಾಠಿಗರ ಪ್ರಾಬಲ್ಯ ಹೆಚ್ಚಾಗಿ ಕನ್ನಡಿಗರು ತೊಂದರೆ ಅನುಭವಿಸಬೇಕಾಯಿತು. ಈ ಅವಧಿಯಲ್ಲಿ ಕನ್ನಡಿಗರು ಅನುಭವಿಸಿದ ಕಿರುಕುಳವನ್ನು ಪತ್ರಕರ್ತ ರಾಘವೇಂದ್ರ ಜೋಶಿಯವರು 'ಬೆಳಗಾವಿ: ಕನ್ನಡ ಹೋರಾಟದ ಕೆಲವು ಪುಟಗಳು' ಎನ್ನುವ ಕೃತಿಯಲ್ಲಿ ದಾಖಲಿಸಿದ್ದಾರೆ.[೯೯] ೧೯೭೦ ರಲ್ಲಿ ಸ್ಥಾಪನೆಗೊಂಡು ಇಲ್ಲಿಯ ತನಕ (೪೧ ವರ್ಷ) ಕೇವಲ ಏಳು ಸಾಹಿತ್ಯ ಸಮ್ಮೇಳನಗಳನ್ನು ಮಾತ್ರ ನಡೆಸಲು ಶಕ್ಯವಾಗಿದೆ. ಜಿಲ್ಲಾಮಟ್ಟದಲ್ಲಿ ಜರುಗಿದ ಎಲ್ಲ ಸಮ್ಮೇಳನಗಳು ಯಶಸ್ವಿಯಾಗಿ ಜರುಗಿ, ಅದರ ಪರಿಣಾಮದಿಂದ ಕನ್ನಡ ವಾತಾವರಣ ನಿರ್ಮಾಣವಾಗುವಂತಾಗಿದೆ. ಈ ಎಲ್ಲ ಸಮ್ಮೇಳನಗಳ ಸ್ವರೂಪ, ಪರಿಣಾಮವನ್ನು ಸಂಕ್ಷಿಪ್ತವಾಗಿ ಈ ಕೆಳಗಿನಂತೆ ವಿವರಿಸಲಾಗಿದೆ.

ಮೊದಲನೆ ಬಾರಿ : ಅಖಿಲ ಭಾರತ ೧೧ನೇ ಕನ್ನಡ ಸಾಹಿತ್ಯ ಸಮ್ಮೇಳನ :

ಅಧ್ಯಕ್ಷತೆ : ಬೆನಗಲ್ ರಾಮರಾಯರು

ದಿನಾಂಕ : ೧೯೨೫ ಮೇ ೯,೧೦,೧೧. ಶನಿವಾರ, ರವಿವಾರ, ಸೋಮವಾರ.

ಸ್ಥಳ : ಖಡೇಬಜಾರದಲ್ಲಿದ್ದ ಶಿವಾನಂದ ನಾಟ್ಯ ಮಂದಿರ.

೧೯೨೫ ರಲ್ಲಿ ಜರುಗಿದ ಈ ಸಮ್ಮೇಳನದ ಸಂದರ್ಭದಲ್ಲಿ ಬೆಳಗಾವಿಯಲ್ಲಿ ಸಂಪೂರ್ಣವಾಗಿ ಕನ್ನಡ, ಕರ್ನಾಟಕ ಎಂಬ ಬಲವಾದ ಗಾಳಿ ಬೀಸಿತ್ತು. ಅಖಿಲ ಭಾರತ ಕಾಂಗ್ರೆಸ್ ಅಧಿವೇಶನ ಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ಜರುಗಿ ಕೆಲವೇ ತಿಂಗಳುಗಳು (೧೯೨೪ ಡಿಸೆಂಬರ ೨೬, ೨೭, ೨೮) ಕಳೆದಿದ್ದವು. ಕಾಂಗ್ರೆಸ್ ಅಧಿವೇಶನದಿಂದ ಬೆಳಗಾವಿಯಲ್ಲಿ ಕನ್ನಡದ ಕಹಳೆ ಮೊಳಗಿತ್ತು. ಮೊಟ್ಟಮೊದಲು ಕರ್ನಾಟಕ ಏಕೀಕರಣ ಸಂಘ ಉದಯಗೊಂಡು ಸರ್ ಸಿದ್ಧಪ್ಪ ಕಂಬಳಿಯವರ ಅಧ್ಯಕ್ಷತೆಯಲ್ಲಿ ಮಹತ್ವದ ಸಭೆ ಜರುಗಿತ್ತು. ಸ್ವಾತಂತ್ರ್ಯ ಹೋರಾಟದ ಜೊತೆಗೆ ಕರ್ನಾಟಕ ಏಕೀಕರಣ ಚಳುವಳಿಯು ಸೇರಿಕೊಂಡು 'ಸ್ವತಂತ್ರ ಭಾರತ: ಅಖಂಡ ಕರ್ನಾಟಕ' ಎನ್ನುವ ಘೋಷಣೆ ಮೊಳಗಿತ್ತು. ಜೊತೆಗೆ ಕರ್ನಾಟಕ ಲಿಂಗಾಯತ ಸಂಸ್ಥೆ ಸ್ಥಾಪನೆಗೊಂಡು (೧೯೧೬) ಶಿಕ್ಷಣದ ಜೊತೆಗೆ ನಾಡು, ನುಡಿಯ ಹೋರಾಟದಲ್ಲಿ ತೊಡಗಿಸಿಕೊಂಡಿತ್ತು. 'ಕರ್ನಾಟಕ ಸಂಘ ಮತ್ತು ವಾಚನಾಲಯ' ಎಂಬ ಸಂಘ (೧೯೧೫)ದ ಮೂಲಕ ಡಾ. ಸವಣೂರ ಹನುಮಂತರಾಯರು ಬೆಳಗಾವಿಯಲ್ಲಿ ಕನ್ನಡ ಚಟುವಟಿಕೆಯಲ್ಲಿ ತೊಡಗಿದ್ದರು. ಇಂತಹ ವಾತಾವರಣದಲ್ಲಿಯೇ ಕನ್ನಡ ಸಾಹಿತ್ಯ ಸಮ್ಮೇಳನ ನಡೆದದ್ದು ಮಹತ್ವದ್ದಾಗಿದೆ.

ಬೆಳಗಾವಿ ಕಾಂಗ್ರೆಸ್ ಅಧಿವೇಶನದಿಂದ ಬೆಳಗಾವಿಯ ಶ್ರೀ ಗಂಗಾಧರರಾವ್ ದೇಶಪಾಂಡೆಯವರು ರಾಷ್ಟ್ರಮಟ್ಟದ ನಾಯಕರಾಗಿ ಹೊರಹೊಮ್ಮಿದ್ದರು. ಸಾಹಿತ್ಯ ಸಮ್ಮೇಳನದ ಸಭಾಧ್ಯಕ್ಷರು, ಸ್ವಾಗತಾಧ್ಯಕ್ಷರು ಅವರೇ ಆಗಿದ್ದರು. ವೇದಿಕೆಯ ಮೇಲೆ ಇದ್ದ ಇನ್ನುಳಿದ ಗಣ್ಯರೆಂದರೆ ಮೆ. ಬೆಳವಿಯವರು, ಶ್ರೀ ಬೆಳ್ಳಾವೆ ವೆಂಕಟ ನಾರಾಯಣ ಕರ್ಪೂರ ಶ್ರೀನಿವಾಸರಾಯರು. ಶ್ರೀ ತಮ್ಮಣ್ಣಪ್ಪ ಚಿಕ್ಕೋಡಿ ಮುಂತಾದವರಿದ್ದರು. ಚಿಕ್ಕೋಡಿಯವರೂ ಸ್ವಾಗತಾಧ್ಯಕ್ಷರಲ್ಲಿ ಒಬ್ಬರಾಗಿದ್ದರು. ಪಂಡಿತಪ್ಪ ಚಿಕ್ಕೋಡಿಯವರು ಕಾರ್ಯದರ್ಶಿಗಳಾಗಿ ಗೆಜ್ಜೆ ಕೃಷ್ಣರಾಯರು ಮತ್ತು ರಂಗಪ್ಪ ಪೋತದಾರರು ಸಹಕಾರ್ಯದರ್ಶಿಗಳಾಗಿ ಕಾರ್ಯನಿರ್ವಹಿಸಿದರು. ಅಂದು ಕವಿಗಳಾಗಿ ಬೆಳಗಾವಿಯ ಸಾಹಿತ್ಯ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿದ ಬೆಟಗೇರಿ ಕೃಷ್ಣಶರ್ಮರು ಸಮ್ಮೇಳನಕ್ಕಾಗಿಯೇ ಒಂದು ಸ್ವಾಗತ ಗೀತೆಯನ್ನು ಬರೆದರು. ಈಗಾಗಲೇ ಕಾಂಗ್ರೆಸ್ ಅಧಿವೇಶನದಲ್ಲಿ ಇವರ ಪದ್ಯವನ್ನೇ ಸ್ವಾಗತಗೀತೆಯನ್ನಾಗಿ ಹಾಡಲಾಗಿತ್ತು.

ಶ್ರೀ ಗಂಗಾಧರರಾಯ ದೇಶಪಾಂಡೆಯವರು ಮಾಡಿದ ಭಾಷಣವು ಅತ್ಯಂತ ಸ್ಫೂರ್ತಿದಾಯಕವಾಗಿತ್ತು. ಬೆಂಗಳೂರು, ಮೈಸೂರು, ಮಂಗಳೂರಿನ ಭಾಗದ ಜನರಿಗೆ ಬೆಳಗಾವಿಯ ಭಾಷೆ ಪರಿಣಾಮವನ್ನುಂಟು ಮಾಡಿತ್ತು.

ಗಂಗಾಧರರಾಯರು ತಮ್ಮ ಭಾಷಣದಲ್ಲಿ "ಮೊನ್ನೆ ತಾನೆ ಇದೇ ಬೆಳಗಾವಿಯಲ್ಲಿ ಕಾಂಗ್ರೆಸ್ ಅಧಿವೇಶನವನ್ನು ಜರುಗಿಸಿ ಅಖಿಲ ಭಾರತ ನಕ್ಷೆಯಲ್ಲಿ ಕರ್ನಾಟಕದ ಹೆಸರನ್ನು ಅಚ್ಚಳಿಯದಂತೆ ಮೂಡಿಸುವಲ್ಲಿ ಮುಖ್ಯ ಪಾತ್ರವನ್ನಾಡಿದ ನಾನು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಬೆಳಗಾವಿಯ ಹೆಸರನ್ನು ಮೆರೆಯಿಸುವ ಇಂದಿನ ಈ ಮಹತ್ಕಾರ್ಯದಲ್ಲಿಯೂ ಸಂತೋಷದಿಂದ ಸಹಭಾಗಿಯಾಗಲಿದ್ದೇನೆ" ಎಂದು ಹೇಳಿದರು. ಈ ಸಂದರ್ಭದಲ್ಲಿ ಶ್ರೀ ಬೆನಗಲ್ ರಾಮರಾಯರೂ ಅಧ್ಯಕ್ಷ ಪದವನ್ನು ಸ್ವೀಕರಿಸಿ ತಾವು ಬರೆದು ತಂದಿದ್ದ ಭಾಷಣವನ್ನು ಓದಿದರು. ಈ ಸಮ್ಮೇಳನದಲ್ಲಿ ಕೆಲವು ಠರಾವುಗಳನ್ನು ಸ್ವೀಕರಿಸಲಾಯಿತು. ಅವುಗಳಲ್ಲಿ ಪ್ರಮುಖವಾದವುಗಳೆಂದರೆ, ಕರ್ನಾಟಕದಲ್ಲಿ ಹಾಯ್ದುಹೋಗುವ ಮದ್ರಾಸ ಆ್ಯಂಡ್ ಸದರ್ನ ಮರಾಠಾ ಕಂಪನಿಯ ಹೆಸರು ಮದ್ರಾಸ ಕರ್ನಾಟಕ ರೇಲ್ವೆ ಎಂದು ಆಗಬೇಕು ಅಖಿಲ ಕರ್ನಾಟಕಕ್ಕೆ ಟ್ರೇನಿಂಗ್ ಕಾಲೇಜ ಬದಲು ಮೈಸೂರಿನಲ್ಲಿ ಇರುವಂತೆ ಪಂಡಿತ ಕಾಲೇಜವೊಂದು ಸ್ಥಾಪಿತವಾಗಿ ಬ್ರಿಟಿಷ್ ಸರಕಾರದವರು ಅದರ ಖರ್ಚು ವಹಿಸಬೇಕು. ಅಲ್ಲದೆ ಕರ್ನಾಟಕಕ್ಕೆ ವಿಶ್ವವಿದ್ಯಾಲಯವಿರಬೇಕು ಎಂಬ ಠರಾವು ಪಾಸಾಯಿತು.

ಈ ಸಮ್ಮೇಳನಕ್ಕೆ ಮಂಗಳೂರು, ಮೈಸೂರು, ಉತ್ತರ ಕರ್ನಾಟಕದ ಹಲವಾರು ಭಾಗಗಳಿಂದ ಸಾಹಿತ್ಯಾಸಕ್ತರು ಬಂದಿದ್ದರು. ಈ ಸಮ್ಮೇಳನದಲ್ಲಿ ಹೊಸ ವಿಷಯವನ್ನು ಚರ್ಚಿಸಲಿಲ್ಲ. ಪ್ರತಿನಿಧಿಗಳಿಗೆ ಇಳಿದುಕೊಳ್ಳಲು ಸರಕಾರಿ ಹೈಸ್ಕೂಲಿನ ಹಾಸ್ಟೇಲಿನಲ್ಲಿ ವ್ಯವಸ್ಥೆ ಮಾಡಲಾಗಿತ್ತು. ಊಟದ ವ್ಯವಸ್ಥೆ ಉತ್ತಮವಾಗಿತ್ತು. ಉತ್ತರ ಕರ್ನಾಟಕದ ವಿಶಿಷ್ಟವಾದ ಶಾವಿಗೆಯ ಪಾಯಸ, ತರತರಹದ ಕಾಯಿಪಲ್ಲೆ, ಹಪ್ಪಳ, ಸಂಡಿಗೆ, ಮಸಾಲೆ ಅನ್ನ, ಶ್ರೀಖಂಡ, ಪುರಿ ಮುಂತಾದ ಅಡಿಗೆಯು ಎಲ್ಲರ ಮೆಚ್ಚುಗೆ ಪಡೆದುಕೊಂಡಿತು. ಸಮಾರೋಪದ ಕೊನೆಗೆ ಚಿಕ್ಕೋಡಿ ತಮ್ಮಣಪ್ಪನವರು "ಜಯವಕ್ಕೆ ಜಯವಕ್ಕೆ ಸಿರಿಗನ್ನಡಕ್ಕೆ" ಎನ್ನುವ ಪದ್ಯವನ್ನು ಹಾಡಿದರು. ಹೀಗೆ ಬೆಳಗಾವಿಯಲ್ಲಿ ಕನ್ನಡ, ಕರ್ನಾಟಕದ ಅಭಿಮಾನ ಮೂಡುವ ಸಂದರ್ಭದಲ್ಲಿಯೇ ಕನ್ನಡ ಸಾಹಿತ್ಯ ಸಮ್ಮೇಳನ ಜರುಗಿದ್ದು ಮಹತ್ವವನ್ನು ಒದಗಿಸಿತು. ಈ ಸಮ್ಮೇಳನದ ಅಧ್ಯಕ್ಷರ ಆಯ್ಕೆಯಲ್ಲಿ ವಿಶೇಷ ಸಂಗತಿಯೊಂದು ಜರುಗಿತು. ಸಮ್ಮೇಳನಾಧ್ಯಕ್ಷತೆಗೆ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ ಅವರ ಹೆಸರೇ ಇತ್ತು. ಆಗ ಅವರು "ನನಗಿಂತ ಹಿರಿಯರು ಅನೇಕರಿದ್ದಾರೆ. ಅವರನ್ನು ಆಯ್ದು ಗೌರವಿಸಬೇಕು" ಎಂದು ವಿನಯಪೂರ್ವಕವಾಗಿ ಸೂಚಿಸಿ ಹಿಂದೆ ಸರಿದಿದ್ದರು. ಆಗ ಬೆನಗಲ್ಲ ರಾಮರಾಯರನ್ನು ಅಧ್ಯಕ್ಷರನ್ನಾಗಿ ಮಾಡಲಾಯಿತು.[೧೦೦]

ಎರಡನೆಯ ಬಾರಿ : ಅಖಿಲ ಕರ್ನಾಟಕ ೧೫ನೆಯ ಸಾಹಿತ್ಯ ಸಮ್ಮೇಳನ : ಬೆಳಗಾವಿ

ಅಧ್ಯಕ್ಷತೆ : ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ

ದಿನಾಂಕ : ೧೯೨೯ ಮೇ ೧೨, ೧೩, ೧೪

ಸ್ಥಳ : ಬೆನನ್‌ಸ್ಮಿಥ್ ಹೈಸ್ಕೂಲಿನ ಸಭಾಂಗಣ

ಬೆಳಗಾವಿಯಲ್ಲಿ ಜರುಗಿದ ೧೫ನೆಯ ಕನ್ನಡ ಸಾಹಿತ್ಯ ಸಮ್ಮೇಳನವು ಹಲವಾರು ದೃಷ್ಟಿಯಿಂದ ಮಹತ್ವವನ್ನು ಪಡೆದುಕೊಂಡಿದೆ. ಈ ಸಮ್ಮೇಳನ ನಡೆದ ಕಾಲದಲ್ಲಿ ಬೆಳಗಾವಿಯು ರಾಷ್ಟ್ರಮಟ್ಟದಲ್ಲಿ ಗಮನಸೆಳೆದಿತ್ತು. ಸ್ವಾತಂತ್ರ್ಯ ಹೋರಾಟದ ಚಳುವಳಿ ಉಗ್ರರೂಪವನ್ನು ಪಡೆದುಕೊಂಡಿತ್ತು. ದೇಶದ ಪ್ರಮುಖ ಮುಖಂಡರು ಮೇಲಿಂದ ಮೇಲೆ ಬೆಳಗಾವಿಗೆ ಬಂದು ಭಾಷಣಗಳನ್ನು ಮಾಡುತ್ತಿದ್ದರು. ಇದರ ಜೊತೆಗೆ ಸಾಗಿದ ಕರ್ನಾಟಕ ಏಕೀಕರಣ ಚಳುವಳಿಯು ಬಲಗೊಂಡಿತ್ತು. ಕನ್ನಡ ಭಾಷೆ, ಸಾಹಿತ್ಯ ಚಟುವಟಿಕೆಗಳು ತೀವ್ರಗೊಂಡಿದ್ದವು. ಹಲವಾರು ಸಂಘ ಸಂಸ್ಥೆಗಳು, ಶಾಲೆಗಳು ಸ್ಥಾಪನೆಗೊಂಡು ಶೈಕ್ಷಣಿಕ ವಿಕಾಸವಾಗಿತ್ತು. ಶಿಕ್ಷಣದಿಂದ ಜನರಲ್ಲಿ ನಾಡು ನುಡಿಯ ಬಗೆಗೆ ಅಭಿಮಾನ ಮೂಡಿತ್ತು. ಇವೆಲ್ಲಕ್ಕಿಂತ ಹೆಚ್ಚಾಗಿ ಬೆಳಗಾವಿಯನ್ನು ತಮ್ಮದಾಗಿಸಿಕೊಳ್ಳಲು ಮರಾಠಿಗರು ವೇದಿಕೆಯನ್ನು ನಿರ್ಮಿಸುತ್ತಿದ್ದರು. ನಿರಂತರವಾಗಿ ನಡೆಯುತ್ತಿದ್ದ ಕನ್ನಡ ಚಟುವಟಿಕೆಗಳಿಂದ ಮರಾಠಿಗರು ಜಾಗ್ರತರಾದರು. ತಮ್ಮ ಭಾಷೆ, ಧರ್ಮ. ಸಂಸ್ಕೃತಿಯನ್ನು ಪ್ರಚಾರಪಡಿಸಿ ಬೆಳಗಾವಿಯು ತಮ್ಮದೆಂದು ಸಾಬೀತು ಪಡಿಯುವ ಯೋಜನೆಯನ್ನು ರೂಪಿಸಿಕೊಂಡು ಅದನ್ನು ಬಹಿರಂಗಗೊಳಿಸಿದರು. ಅದೇ ವರ್ಷ ಬೆಳಗಾವಿಯಲ್ಲಿ ಮರಾಠಿ ಸಾಹಿತ್ಯ ಸಮ್ಮೇಳನವನ್ನು ಹಮ್ಮಿಕೊಂಡರು. ಇದರಿಂದ ಕರ್ನಾಟಕದಾದ್ಯಂತ ವಿರೋಧ ವ್ಯಕ್ತವಾಯಿತು. ಕನ್ನಡಿಗರು ಜಾಗೃತರಾದರು. ಅಲ್ಲದೆ ಗುಲಬರ್ಗದಲ್ಲಿ ಜರುಗಿದ್ದ ೧೪ನೆಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಎಲ್ಲಾ ಸಂದರ್ಭಗಳಲ್ಲೂ ಕರ್ನಾಟಕದ ಏಕೀಕರಣವನ್ನು ಒತ್ತಾಯಿಸುವ ನಿರ್ಣಯಗಳನ್ನು ಕೈಗೊಳ್ಳಲಾಗಿತ್ತು. ಈ ವಿಷಯ ಪ್ರಸ್ತುತ ಸಾಹಿತ್ಯ ಸಮ್ಮೇಳನದಲ್ಲಿ ಚರ್ಚಿತ ವಿಷಯವೂ ಆಗಿತ್ತು. ಇದರ ಜೊತೆಗೆ ೧೯೨೭ ರಲ್ಲಿ ಕರ್ನಾಟಕದ ಎಲ್ಲಾ ವರ್ಗ ಮತ್ತು ಧರ್ಮಗಳನ್ನು ಪ್ರತಿನಿಧಿಸುವ ಏಕೀಕರಣದ ಪರವಾಗಿ ಆಸಕ್ತರಾಗಿದ್ದ ೩೪ ಜನ ನಾಯಕರು ಏಕೀಕರಣವನ್ನು ಬೆಂಬಲಿಸುವವರ ಸಹಿಯನ್ನು ಪಡೆದು ಸಾರ್ವತ್ರಿಕ ಮನವಿಯನ್ನು ಸಲ್ಲಿಸಿದ್ದರು. ಈ ೩೪ ಜನ ನಾಯಕರಲ್ಲಿ ಬೆಳಗಾವಿಯವರೇ ಹೆಚ್ಚಿಗಿದ್ದರು ಎನ್ನುವುದು ಮಹತ್ವದ ಸಂಗತಿಯಾಗಿದೆ.[೧೦೧]

ಶ್ರೀ ಪಿ.ಆರ್. ಚಿಕ್ಕೋಡಿ, ಶ್ರೀ ಡಿ.ವಿ. ಬೆಳವಿ, ಶ್ರೀ ನಾರಾಯಣರಾವ ಜೋಶಿ, ಶ್ರೀ ಎಸ್. ಎಸ್. ಅಂಗಡಿ, ಶ್ರೀ ಅರಟಾಳ ರುದ್ರಗೌಡ, ಶ್ರೀ ಗಂಗಾಧರರಾವ್ ದೇಶಪಾಂಡೆ ಮುಂತಾದವರತಂಡ ಬೆಳಗಾವಿಯಲ್ಲಿ ಕನ್ನಡ ಕಟ್ಟುವ ಕಾರ್ಯಕ್ಕೆ ಬೆನ್ನೆಲುಬಾಗಿತ್ತು.

೧೯೨೯ ರಲ್ಲಿ ಮಹಾರಾಷ್ಟ್ರದವರು ಮರಾಠಿ ಸಾಹಿತ್ಯ ಸಮ್ಮೇಳನಗಳನ್ನು ಬೆಳಗಾವಿಯಲ್ಲಿ ನಡೆಸಲು ಮುಂದಾದಾಗ ಅದನ್ನು ಕನ್ನಡಿಗರು ಬಲವಾಗಿ ವಿರೋಧಿಸಿದರು. ಈ ಸಂದರ್ಭದಲ್ಲಿ ಮಹಾರಾಷ್ಟ್ರದ ಹಿರಿಯರಾದ ನ.ಚ. ಕೇಳಕರರು ಬೆಳಗಾವಿಗೆ ಬಂದು ಕನ್ನಡಿಗರ ಭಯ ಸಂದೇಹವನ್ನು ನಿವಾರಿಸಲು ಪ್ರಯತ್ನಿಸಿದರು. ಆ ಪ್ರಸಂಗದಲ್ಲಿ ಬೆಳಗಾವಿ ನಗರ ಕರ್ನಾಟಕದ್ದೇ ಎಂದು ಹೇಳಿ ಅದರ ಮೇಲೆ ನಮ್ಮ ಹಕ್ಕುಗಾರಿಕೆ ಏನೂ ಇಲ್ಲವೆಂದು ಹೇಳಿದಾಗಲೇ ಅವರಿಗೆ ಸಮ್ಮೇಳನವನ್ನು ನಡೆಸುವುದಕ್ಕೆ ಅವಕಾಶವನ್ನು ಮಾಡಿಕೊಡಲಾಯಿತು.[೧೦೨]

ಈ ಎಲ್ಲ ಹಿನ್ನೆಲೆಯಲ್ಲಿಯೇ ಬೆಳಗಾವಿಯಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಬೆಳಗಾವಿಯಲ್ಲಿ ನಡೆಸಲು ತೀರ್ಮಾನಿಸಲಾಯಿತು.[೧೦೩]

ನಿಯೋಜಿತ ಅಧ್ಯಕ್ಷರಾಗಿದ್ದ ಮಾಸ್ತಿಯವರು ಹಿಂದಿನ ದಿನವೇ ಬೆಳಗಾವಿಗೆ ಆಗಮಿಸಿದ್ದರು. ಬೆಳಗಾವಿಯ ಬಗೆಗೆ ಆತ್ಮೀಯ ಸಂಬಂಧವನ್ನು ಮಾಸ್ತಿಯವರು ಹೊಂದಿದ್ದರು. ೧೨ನೆಯ ತಾರೀಖಿನಂದು ಮಧ್ಯಾಹ್ನ ೨.೦೦ಗಂಟೆಗೆ ಸಮ್ಮೇಳನದ ಸಭೆ ಪ್ರಾರಂಭವಾಯಿತು. ಸ್ವಾಗತಾಧ್ಯಕ್ಷರಾದ ಚೌಗಲೆ ಅಣ್ಣಪ್ಪನವರ ಭಾಷಣವನ್ನು ಪ್ರೊ. ಕೆ. ಜಿ. ಕುಂದಣಗಾರರು ಓದಿ ತೋರಿಸಿದರು. ಆಮೇಲೆ ಪರಿಷತ್ತಿನ ವಾರ್ಷಿಕ ವರದಿಯನ್ನು ಓದಿದರು. ನಾಡಿನ ಗಣ್ಯರು ಕಳುಹಿಸಿದ ಆಶೀರ್ವಾದ ಪರ ಸಂದೇಶಗಳನ್ನು ಓದಲಾಯಿತು. ಮಹಾರಾಷ್ಟ್ರದ ಭೋಪಟಕರವರೂ ಶುಭಸಂದೇಶವನ್ನು ಕಳುಹಿಸಿದ್ದರು. ಸಮ್ಮೇಳನದಲ್ಲಿ ನಾಡಿನ ಪ್ರಮುಖ ಸಾಹಿತಿಗಳು, ಮುಖಂಡರು, ಕಲಾವಿದರು, ಸಾಹಿತ್ಯಾಸಕ್ತರು ಸೇರಿದ್ದರು. ಬಿ. ಎಂ. ಶ್ರೀಕಂಠಯ್ಯ. ಶ್ರೀ. ಸಿ.ಕೆ.ವೆಂಕಟರಾಮಯ್ಯ, ಕುವೆಂಪು, ಬೇಂದ್ರೆ, ಬೆಟಗೇರಿ ಕೃಷ್ಣಶರ್ಮ, ಶ್ರೀ ರಂಗನಾಥ ಮುದಲಿಯಾರ, ಶ್ರೀ ಚಿಕ್ಕೋಡಿ ಅನಂತರಾಯ, ಮುಂತಾದವರೆಲ್ಲ ಉಪಸ್ಥಿತರಿದ್ದರು.

**ಠರಾವುಗಳು:** ೧. ಬೆಳಗಾವಿ ಜಿಲ್ಲೆಯಲ್ಲಿರುವ ಕೋರ್ಟುಗಳಲ್ಲಿ ಇತ್ತೀಚೆಗೆ ಕೋರ್ಟಿನ ವ್ಯವಹಾರಗಳನ್ನು ಮರಾಠಿ ಬಾಷೆಯಲ್ಲಿ ನಡೆಸಬೇಕೆಂದು ಮುಂಬಯಿ ಹೈಕೋರ್ಟಿನವರು ನಿರ್ಣಯಿಸಿದುದರಿಂದ ಇಲ್ಲಿಯ ಕನ್ನಡ ಜನಕ್ಕೆ ಅನಾನುಕೂಲತೆಯುಂಟಾಗಿದೆ. ಈ ಜಿಲ್ಲೆಯಲ್ಲಿ ಮೊದಲಿನಂತೆಯೇ ಎಲ್ಲ ವ್ಯವಹಾರಗಳು ಕನ್ನಡದಲ್ಲಿಯೇ ನಡೆಯುವಂತೆ ಅಪ್ಪಣೆ ಮಾಡಬೇಕೆಂದು ಹೈಕೋರ್ಟಿನ ಅಧಿಕಾರಿಗಳಿಗೆ ಈ ಸಮ್ಮೇಳನವು ವಿಜ್ಞಾಪಿಸುತ್ತದೆ.

೨. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ೬೦೦ ನೆಯ ಉತ್ಸವವು ೧೯೩೬ ರಲ್ಲಿ ಬರುವುದು ಅದರ ಷಟ್ಶಂವರಿಕೋತ್ಸವವನ್ನು ನಡೆಸಬೇಕೆಂದು ತೀರ್ಮಾನಿಸಲಾಯಿತು.[೧೦೪]

ಇದೇ ಸಂದರ್ಭದಲ್ಲಿ ಕವಿ ಗೋಷ್ಠಿಯು ದಿನಾಂಕ ೧೪ ರಂದು ಮುಂಜಾನೆ ಬಿ. ಎಂ. ಶ್ರೀ ಯವರ ಅಧ್ಯಕ್ಷತೆಯಲ್ಲಿ ಸಮ್ಮೇಳನದ ಅಂಗವಾಗಿ ಜರುಗಿತು. ಈ ಸಂದರ್ಭದಲ್ಲಿ ವರಕವಿ ದ.ರಾ.ಬೇಂದ್ರೆಯವರು ಹಕ್ಕಿ ಹಾರುತಿದೆ ನೋಡಿದಿರಾ.......ಕವಿತೆಯನ್ನು ಭಾವುಕರಾಗಿ ಆಕಾಶದತ್ತ ಕೈಮಾಡಿ ಹಾಡಲು ಆರಂಭಿಸಿದಾಗ ಕುಳಿತ ಜನ ಆಕಾಶದತ್ತ ನೋಡಿದ್ದರಂತೆ.[೧೦೫] ಹಾಡು ಮುಗಿದ ಮೇಲೆ ವೇದಿಕೆಯ ಮೇಲಿದ್ದ ಮಾಸ್ತಿಯವರು ಬೇಂದ್ರೆಯವರನ್ನು ಬಿಗಿಯಾಗಿ ತಬ್ಬಿಕೊಂಡರು. ಬೆಟಗೇರಿ ಕೃಷ್ಣಶರ್ಮರು "ಕೊಡು ಕೊಡು ತಾಯೆ ಖಡುಗವ ನೊಂದೆನು ನಾನು ಪೋಗುವೆ ಕಾಳಗಕೆ" ಎಂದು ಭಾವಪೂರ್ಣವಾಗಿ ಹಾಡಿದರು. ಕುವೆಂಪುರವರು 'ಬೊಮ್ಮನಹಳ್ಳಿಯ ಕಿಂದರ ಜೋಗಿ' ಕವಿತೆಯನ್ನು ಹೃದಯಂಗಮವಾಗಿ ಹಾಡಿ ಜನಮನವನ್ನು ತಮ್ಮೆಡೆಗೆ ಸೆಳೆದುಕೊಂಡರು.

ಮೂರನೆಯ ಬಾರಿ : ೨೪ನೆಯ ಕನ್ನಡ ಸಾಹಿತ್ಯ ಸಮ್ಮೇಳನ : ಬೆಳಗಾವಿ

ಅಧ್ಯಕ್ಷತೆ : ಮುದವೀಡು ಕೃಷ್ಣರಾಯರು

ದಿನಾಂಕ : ೧೯೩೯ ಡಿಸೆಂಬರ ೨೫, ೨೬, ೨೭, ೨೮.

ಸ್ಥಳ : ಶಾಲಿಮಾರ ಟಾಕೀಜ್ (ಇಂದಿನ ರೆಕ್ಸ್ ಸ್ಟೋರ್ಸ)

ಈ ಸಮ್ಮೇಳನದ ಹೊತ್ತಿಗೆ ಬೆಳಗಾವಿ ಕನ್ನಡಿಗರಿಗೆ ಆನೆ ಬಲ ಬಂದಿತ್ತು. ನೂರಾರು ಕನ್ನಡ ಪರ ಹೋರಾಟಗಾರರು ಚಟುವಟಿಕೆಯಿಂದ ಕನ್ನಡ ಕಾರ್ಯಗಳಲ್ಲಿ ತೊಡಗಿದ್ದರು. ಹಲವಾರು ನಾಟಕ ಕಂಪನಿಗಳು ಕನ್ನಡ ನಾಟಕಗಳನ್ನು ಪ್ರದರ್ಶಿಸಿ ಕನ್ನಡಿಗರನ್ನು ಗುರುತಿಸಿದ್ದವು. (ಆ ಕಾಲದಲ್ಲಿ ಕನ್ನಡಿಗರೆಂದು ಹೇಳಿಕೊಳ್ಳಲು ಹೆದರುತ್ತಿದ್ದರು) ಹಲವಾರು ಜನ ಸಾಹಿತಿಗಳು, ವಿದ್ವಾಂಸಕರು, ಸಂಶೋಧಕರು ಬೆಳಗಾವಿಯಲ್ಲಿ ನೆಲೆ ನಿಂತಿದ್ದರು. ಇವೆಲ್ಲಕ್ಕಿಂತ ಹೆಚ್ಚಾಗಿ ಲಿಂಗರಾಜ ಮಹಾವಿದ್ಯಾಲಯು ಸ್ಥಾಪನೆಗೊಂಡು ಬಿಸಿ ರಕ್ತದ ಕನ್ನಡಿಗರ ಪಡೆ ತಯಾರಾಗಿತ್ತು. ಕರ್ನಾಟಕ ಸಂಘ ಮತ್ತು ವಾಚನಾಲಯವು ಹೆಚ್ಚು ಚಟುವಟಿಕೆಯಿಂದ ಕೂಡಿತ್ತು. ನಾಡಸರಿಗಳ ಸಂಘ, 'ತುಂಟರ ತಂಡ' ಮುಂತಾದ ಸಂಘಟನೆಗಳ ಮೂಲಕ ಕನ್ನಡಿಗರಲ್ಲಿ ಸಂಘಟನೆ ಉಂತಾಗಿತ್ತು. ಬೆಟಗೇರಿ ಕೃಷ್ಣಶರ್ಮ, ಬಸವರಾಜ ಕಟ್ಟಿಮನಿ, ಡಿ. ಎಸ್. ಕರ್ಕಿ, ಎಸ್. ಡಿ. ಇಂಚಲ ಮುಂತಾದ ಯುವ ಕವಿಗಳಿಂದ ಮಹತ್ವದ ಪರಿಣಾಮಕಾರಿಯಾದ ಸಾಹಿತ್ಯ ರಚನೆಗೊಂಡು ಬೆಳಗಾವಿ ನಗರದ ತುಂಬೆಲ್ಲಾ ಕನ್ನಡದ ಕಂಪು ಪಸರಿಸುವ ಕಾಲದಲ್ಲಿ ಈ ಸಾಹಿತ್ಯ ಸಮ್ಮೇಳನವು ಜರುಗಿತು.

ಬೆಳಗಾವಿ ನಗರದ ಕನ್ನಡಿಗರಲ್ಲಿ ಸಂಘಟನೆಯ ಮನೋಭಾವ ಈ ಸಾಹಿತ್ಯ ಸಮ್ಮೇಳನದಲ್ಲಿ ಎದ್ದುಕಂಡು ಬಂದಿತು. ಒಳಗೊಳಗೆ ಭಿನ್ನಾಭಿಪ್ರಾಯಗಳಿದ್ದರೂ ಸಮ್ಮೇಳನದ ಸಂದರ್ಭದಲ್ಲಿ ಸಂಘಟಿಕರಾದರು. ಶೇಷೋ ಗಿರಿಯಾಚಾರ್ಯ ಕಟ್ಟಿ, ಪ್ಯಾಟಿ ಶಾಮರಾಯರು, ಚಿಕ್ಕೋಡಿ ಅನಂತರಾಯರು, ಜೋಶಿ ಕೃಷ್ಣರಾಯರು, ನರಸಿಂಗರಾಯರು, ಅರವಿಂದರಾಯರು, ಮುತಾಲಿಕ ವೆಂಕಟರಾಯರು, ಸಾತ್ವಿಕ ಗುಂಡೇರಾಯರು, ತೊರಗಲ್ಲ ವೆಂಕಟರಾಯರು, ಡಾ. ತೆರಗುಂಡಿ ವೆಂಕಟರಾಯರು, ಡಾ. ಸವಣೂರ ಹಣಮಂತರಾಯರು, ಶ್ರೀ ಬೆಳವಿ ದತ್ತರಾಯರು, ಜೋಶಿ ನಾರಾಯಣರಾಯರು, ಬಳವಂತರಾವ ದಾತಾರರು, ಶ್ರೀ ಅಡ್ಡಣಗಿ ವಕೀಲರು, ಆ ವೇಳಗೆ ಪ್ರೊ. ವ್ಹಿ.ಜಿ. ಕುಲಕರ್ಣಿಯವರು, ಡಿ. ಎಸ್. ಕರ್ಕಿಯವರು, ಶ್ರೀ ಎಸ್. ಡಿ. ಇಂಚಲರವರು, ಈಶ್ವರ ಸಣಕಲ್ಲರು, ಶ್ರೀ ಬ.ಗಂ ತುರಮರಿಯವರು, ಮುಂತಾದವರೆಲ್ಲರೂ ಬೆಳಗಾವಿಯಲ್ಲಿ ಬೇರೆ ಬೇರೆ ವಲಯಗಳ ಮೂಲಕ ಕನ್ನಡ ಕೈಂಕರ್ಯವನ್ನು ಕೈಗೊಂಡಿದ್ದರು. ಪ್ರೊ. ವ್ಹಿ. ಜಿ. ಕುಲಕರ್ಣಿಯವರು ಲಿಂಗರಾಜ ಕಾಲೇಜಿನಲ್ಲಿ ಉಪನ್ಯಾಸಕರಾಗಿದ್ದರು. ವಿದ್ಯಾರ್ಥಿ ತಂಡವನ್ನು ಕಟ್ಟಿಕೊಂಡು ಸಮ್ಮೇಳನದಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ವಿದ್ಯಾರ್ಥಿಗಳಿಂದ ನಾಟಕಗಳನ್ನು ಪ್ರದರ್ಶಿಸಿದರು. (ರಂಗಭೂಮಿ ಅಧ್ಯಾಯದಲ್ಲಿ ವಿವರವಾಗಿ ತೆಗೆದುಕೊಳ್ಳಲಾಗಿದೆ).

ನಾಡಿನ ಬೇರೆ ಬೇರೆ ಬಾಗಗಳಿಂದಲೂ ಸಾಹಿತಿಗಳು, ವಿದ್ವಾಂಸರು ಆಗಮಿಸಿದ್ದರು. ಟಿ. ಪಿ. ಕೈಲಾಸ ಅವರಂತೂ ನಾಲ್ಕು ದಿನಗಳವರೆಗೆ ಪ್ರೊ. ವಿ.ಜಿ. ಕುಲಕರ್ಣಿಯವರ ಮನೆಯಲ್ಲಿಯೇ ಉಳಿದುಕೊಂಡಿದ್ದರು. ಬಿ. ಎಂ. ಶ್ರೀ. ಶಿವರಾಮ ಕಾರಂತ, ಮುಳಿಯ ತಿಮ್ಮಪ್ಪಯ್ಯ, ಆರ್. ಕಲ್ಯಾಣಮ್ಮ, ಚಂದ್ರಶೇಖರ ಶಾಸ್ತ್ರಿ, ಅಶ್ವತ್ಥರಾವ್, ಮಹಿಷಿ, ಹಳಕಟ್ಟಿ, ಶ್ರೀ ರಂಗನಾಥ ದಿವಾಕರ, ಆಲೂರ ವೆಂಕಟರಾಯರು, ಮಾಸ್ತಿಯವರು, ದ.ರಾ.ಬೇಂದ್ರೆ, ಚನ್ನಪ್ಪ ಉತ್ತಂಗಿ, ವಂಟಮೂರಿ ದೇಸಾಯರು, ರಂ.ಶ್ರೀ. ಮುಗಳಿ ಮುಂತಾದ ನಾಡಿನ ಪ್ರಮುಖ ಸಾಹಿತಿಗಳೆಲ್ಲ ಬೆಳಗಾವಿಗೆ ಆಗಮಿಸಿದ್ದರು. ಈ ಸಮ್ಮೇಳನದ ಮೂಲಕ ಇವರೆಲ್ಲರನ್ನು ನೋಡುವ ಭಾಗ್ಯ ಬೆಳಗಾವಿ ಕನ್ನಡಿಗರಿಗೆ ಒದಗಿ ಬಂದಿತು.

ಸಿಂಹಗರ್ಜನೆಗೆ ಹೆಸರಾಗಿದ್ದ ಶ್ರೀ ಮುದವೀಡು ಕೃಷ್ಣರಾಯರು ತಮ್ಮ ಅಧ್ಯಕ್ಷತೆಯ ಭಾಷಣದಲ್ಲಿ ಇಂದು ಕೃಷ್ಣೆಯ ಎತ್ತರಕ್ಕೆ ಗೋದಾವರಿಗೆ ಪಶ್ಚಿಮ ಘಟ್ಟಗಳ ಪೂರ್ವದ ತಪ್ಪಲು ಸೀಮೆಯಲ್ಲಿ ಮಹಾರಾಷ್ಟ್ರವೆಂಬ ಹೆಸರಿನಿಂದ ಹಬ್ಬಿಕೊಂಡಿರುವ ಪ್ರದೇಶವು ಮೊದಲು ಕನ್ನಡ ನಾಡೇ ಆಗಿತ್ತು. ಅಷ್ಟೇ ಏಕೆ ಬೆಳಗಾವಿಗೆ ಕರ್ನಾಟಕದ ಹೆಬ್ಬಾಗಿಲು ಎಂದು ಮಹಾರಾಷ್ಟ್ರದ ಲೋಕಮಾನ್ಯ ತಿಲಕರೇ ಹೇಳಿದ್ದಾರೆ"[೧೦೬] ಎಂದು ಹೇಳಿ ಪ್ರಸ್ತುತ ಸಂದರ್ಭದಲ್ಲಿ ಸಾಹಿತ್ಯ, ಸಾಹಿತಿಗಳು ಮಾಡಬೇಕಾದ ಕಾರ್ಯಗಳ ಕುರಿತು ಸುಮಾರು ಒಂದು ಗಂಟೆ ಕಾಲ ಮಾತನಾಡಿದರು. ಇವರ ಭಾಷಣ ಯುವ ಬರಹಗಾರರಿಗೆ ಅತ್ಯಂತ ಸ್ಫೂರ್ತಿಯನ್ನು ನೀಡಿತು. ಸಮ್ಮೇಳನದಲ್ಲಿ ನಾಟಕ ಗೋಷ್ಠಿಯನ್ನು ಇಟ್ಟುಕೊಂಡಿದ್ದರು. ನಾಟಕ ರಚನಕಾರ ಶ್ರೀ. ಸಿ. ಕೆ. ವೆಂಕಟರಾಮಯ್ಯ ಗೋಷ್ಠಿಯ ಅಧ್ಯಕ್ಷತೆಯನ್ನು ವಹಿಸಿಕೊಂಡಿದ್ದರು. ವಿ. ಸೀತಾರಾಮಯ್ಯ, ಶ್ರೀರಂಗರು ನಾಟಕ ಕುರಿತು ಉಪನ್ಯಾಸ ನೀಡಿದರು. ನಾಟಕ, ಕಂಪನಿ ನಾಟಕಗಳ ಪ್ರಯೋಗಳಲ್ಲಿ ಎದುರಿಸುತ್ತಿರುವ ಸಮಸ್ಯೆಗಳ ಬಗೆಗೆ ಚರ್ಚೆ ನಡೆಯಿತು.

ನಾಲ್ಕನೆಯ ಬಾರಿ : ೫೨ನೆಯ ಅಖಿಲ ಕನ್ನಡ ಸಾಹಿತ್ಯ ಸಮ್ಮೇಳನ: ಬೆಳಗಾವಿ

ಅಧ್ಯಕ್ಷರು : ಶ್ರೀ ಬಸವರಾಜ ಕಟ್ಟಿಮನಿ

ದಿನಾಂಕ : ೧೯೮೦ ಫೆಬ್ರುವರಿ ೭,೮,೯,೧೦.

ಸ್ಥಳ : ಲಿಂಗರಾಜ ಮಹಾವಿದ್ಯಾಲಯದ ಮೈದಾನ.

ಭಾರತದೇಶ ಸ್ವಾತಂತ್ರ್ಯವನ್ನು ಪಡೆದುಕೊಂಡು, ಅಖಂಡ ಕರ್ನಾಟಕ ರಾಜ್ಯ ನಿರ್ಮಾಣವಾದ ಬಳಿಕ ಬೆಳಗಾವಿಯಲ್ಲಿ ನಡೆದ ಮೊದಲ ಅಖಿಲ ಕನ್ನಡ ಸಾಹಿತ್ಯ ಸಮ್ಮೇಳನ. ದೀರ್ಘಕಾಲದ ನಂತರ ಬೆಳಗಾವಿಯಲ್ಲಿ ಈ ಸಮ್ಮೇಳನವನ್ನು ಹಮ್ಮಿಕೊಳ್ಳಲಾಯಿತು. (೧೯೭೧ ರಲ್ಲಿ ಬೆಳಗಾವಿ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನ ಜರುಗಿತ್ತು) ಅಂದರೆ ಸುಮಾರು ೪೧ ವರ್ಷಗಳ ತರುವಾಯ (೧೯೩೯ ರಲ್ಲಿ ೨೪ನೆಯ ಅಖಿಲ ಭಾರತ ಕನ್ನಡ ಸಮ್ಮೇಳನ ಜರುಗಿತ್ತು) ಪ್ರಸ್ತುತ ೫೨ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಜರುಗಿತು.

ನಗರದ ಲಿಂಗರಾಜ ಮಹಾವಿದ್ಯಾಲಯದ ಆಟದ ಮೈದಾನದ ಭವ್ಯವಾದ ಮಂಟಪವನ್ನು ಸಿದ್ಧಪಡಿಸಿ ಅದಕ್ಕೆ ದಿ. ಗಂಗಾಧರ ಮಡಿವಾಳೇಶ್ವರ ತುರಮರಿ ಮಂಟಪ ಎಂದು ಹೆಸರಿಸಿದರು. ಮುಖ್ಯ ವೇದಿಕೆಗೆ ದಿ. ಡಾ. ಹಣಮಂತರಾವ ಸವಣೂರ ಹೆಸರನ್ನೂ ಹಾಗೂ ಮೂರು ಪ್ರವೇಶದ್ವಾರಗಳನ್ನು ನಿರ್ಮಿಸಿ ಅವಕ್ಕೆ ಮಿರ್ಜಿ ಅಣ್ಣಾರಾಯ, ಜೋಶಿ ಅರವಿಂದರಾಯ ಎಸ್.ಡಿ. ಇಂಚಲರ ಹೆಸರನ್ನು ಇಡಲಾಯಿತು.

ಈ ಸಮ್ಮೇಳನದ ವೈಶಿಷ್ಟ್ಯವೆಂದರೆ ಮೈಸೂರು ದಸರಾ ಮಾದರಿಯ ಮೆರವಣಿಗೆಯ ಮೂಲಕ ಆಚರಿಸಿದ್ದು. ದಿನಾಂಕ ೭ ರಂದು ಭುವನೇಶ್ವರಿ ದೇವಿಯ ಭಾವಚಿತ್ರದ ಹಾಗೂ ಸಮ್ಮೇಳನಾಧ್ಯಕ್ಷ ಶ್ರೀ ಬಸವರಾಜ ಕಟ್ಟಿಮನಿಯವರ ಭವ್ಯ ಮೆರವಣಿಗೆಯು ಪ್ರವಾಸಿ ಬಂಗ್ಲೆಯಿಂದ ಪ್ರಾರಂಭವಾಯಿತು. ಅಲಂಕೃತವಾದ ವೇದಿಕೆಯ ಮೇಲೆ ಶ್ರೀ ಕಟ್ಟಿಮನಿಯವರ ಜೊತೆಗೆ ಶ್ರೀಯುತರಾದ ಆರ್. ಎಸ್. ಪಾಟೀಲ, ಬಿ. ವಿ. ಬೆಲ್ಲದ, ಕ.ಸಾಪ ಅಧ್ಯಕ್ಷ ಹಂಪನಾಗರಾಜಯ್ಯ ವಿ.ಎಸ್. ಕೌಜಲಗಿ ಮೊದಲಾದವರಿದ್ದರು. ಹಿಂದಿನ ಜೀಪಿನಲ್ಲಿ ಚಲನಚಿತ್ರ ಕಲಾವಿದರಾದ ಶ್ರೀನಾಥ. ಚಂದ್ರಶೇಖರ, ಶಿವರಾಮ, ಗೀತಾ, ರೇಖಾರಾವ ಮೊದಲಾದವರಿದ್ದರು.

ಮೆರವಣಿಗೆಯಲ್ಲಿ ರೂಪಕಗಳು ೧೦೧ ಎತ್ತಿನ ಜೋಡಿಗಳು, ಕುದುರೆ, ಆನೆ, ಡೊಳ್ಳಿನವರು, ಕರಡಿಮಜಲು, ಲೇಝಿಮ ತಂಡ ಮುಂತಾದ ವಾದ್ಯ ಸಂಗೀತಗಳೊಂದಿಗೆ ಮೆರವಣಿಗೆಯು ಖಡೇಬಜಾರ, ರಾಮದೇವಗಲ್ಲಿ, ಮಾರುತಿಗಲ್ಲಿ, ರವಿವಾರ ಪೇಠೆ ಮಾರ್ಗವಾಗಿ ಅನಂತಶಯನಗಲ್ಲಿ ಟಿಳಕಚೌಕ, ರಾಮಲಿಂಗಖಿಂಡಗಲ್ಲಿ ಕಾಲೇಜ ರೋಡ ಮುಖಾಂತರ ಸಮ್ಮೇಳನದ ಸ್ಥಳಕ್ಕೆ ಹೋಯಿತು. ಸುಮಾರು ನಾಲ್ಕು ತಾಸುಗಳವರೆಗೆ ಈ ಮೆರವಣಿಗೆ ನಡೆಯಿತು.

'ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು' ನಾಡಗೀತೆಯ ಮೂಲಕ ಕಾರ್ಯಕ್ರಮವನ್ನು ಪ್ರಾರಂಭಗೊಳಿಸಲಾಯಿತು. ಮುಖ್ಯಮಂತ್ರಿ ಆರ್ ಗುಂಡುರಾವ್‌ರು ದೀಪ ಬೆಳಗಿಸಿ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಹಚ್ಚೇವು ಕನ್ನಡ ದೀಪ ಎನ್ನುವ ಹಾಡನ್ನು ಹಾಡುತ್ತ ಒಂದೊಂದೇ ದೀಪಗಳನ್ನು ಬೆಳಗಿಸುತ್ತ ಸಾಗುವ ದೃಶ್ಯ ಮೈರೋಮಾಂಚನವನ್ನುಂಟು ಮಾಡುವಂತಿತ್ತು ಎಂದು ಭಾಗವಹಿಸಿದ ಆಸಕ್ತರು ನೆನಪಿಸಿಕೊಳ್ಳುತ್ತಾರೆ.[೧೦೭] ಈ ಸಂದರ್ಭದಲ್ಲಿ ವೇದಿಕೆಯ ಮೇಲೆ ಇದ್ದ ಕೇಂದ್ರ ಸಚಿವರಾದ ಬಿ. ಶಂಕರಾನಂದರು ಹೊತ್ತಾಯಿತು ಹಾಡನ್ನು ನಿಲ್ಲಿಸಿ ಎಂದು ಹೇಳಿದಾಗ ಸಂಘಟಕರು 'ಸ್ವಾಮಿ ನೀವು ಬರುವವರೆಗೆ ಎರಡು ಗಂಟೆಯವರೆಗೆ ಹತ್ತು ಸಾವಿರ ಜನ ಕಾಯುತ್ತಿದ್ದರು. ಈ ಸುಂದರ ವಾತಾವರಣ ಮುಗಿಯುವವರೆಗೆ ನೀವೆಲ್ಲ ಸಹಿಸಬೇಕು' ಎಂದಕು ಹೇಳಿದಾಗ ಸುಮ್ಮನಾದರು.[೧೦೮]

ಉದ್ಘಾಟನಾ ಪರ ಭಾಷಣವನ್ನು ಮುಖ್ಯಮಂತ್ರಿ ಗುಂಡೂರಾವರು ಒಂದು ಗಂಟೆಯವರೆಗೆ ಮಾಡಿದರು. ನಂತರ ಖ್ಯಾತ ಕವಿ ಗೋಪಾಲಕೃಷ್ಣ ಅಡಿಗರಿಂದ ಸಮ್ಮೇಳನ ಪೂರ್ವ ಭಾಷಣ, ಆಮೇಲೆ ಸಮ್ಮೇಳಾನಧ್ಯಕ್ಷ

ಬಸವರಾಜ ಕಟ್ಟಿಮನಿಯವರ ಭಾಷಣ. ಬೆಳಗಾವಿಯು ನಮ್ಮ ಕುಡಗೋಲಿದ್ದಂತೆ, ಕತ್ತಿಗಿಂತಲೂ ಹರಿತವಾದ ಕುಡಗೋಲು, ಇದನ್ನು ನುಂಗಬೇಕೆನ್ನುವವರೇ ಜೋಕೆ![೧೦೯] ಎಂದು ಗುಡುಗಿದರು.

ಗಡಿ ಸಮಸ್ಯೆ : ಕನ್ನಡ ಮರಾಠಿ ಬಾಂಧವ್ಯ ಸಾಹಿತ್ಯ-ಗ್ರಂಥಾಲಯ ಜಾನಪದ ಗೋಷ್ಠಿ, ಕಾನೂನಿಗೆ ಸಂಬಂಧಿಸಿದ ಗೋಷ್ಠಿ, ಕವಿಗೋಷ್ಠಿ, ಕೃಷಿ, ವಿಜ್ಞಾನಗಳ ಗೋಷ್ಠಿ, ಚಲನಚಿತ್ರ, ನಾಟಕ, ಪ್ರಸಾರ ಮಾಧ್ಯಮ, ಕಲಾ ಪ್ರದರ್ಶನ ಮುಂತಾದ ವಿಷಯಗಳ ಕುರಿತು ಗೋಷ್ಠಿಗಳು ಜರುಗಿದವು.

ಸಾಹಿತ್ಯ ಭವನ ನಿರ್ಮಾಣ : ಈ ಸಾಹಿತ್ಯ ಸಮ್ಮೇಳನದ ನೆನಪಿಗಾಗಿ ಚನ್ನಮ್ಮ ವೃತ್ತದ ಪಕ್ಕದಲ್ಲಿ ಸಾಹಿತ್ಯ ಭವನವನ್ನು ನಿರ್ಮಿಸಲು ನಿರ್ಧರಿಸಲಾಯಿತು. ಮುಖ್ಯಮಂತ್ರಿ ಆರ್ ಗುಂಡುರಾವ್ ರು ತಮ್ಮ ಭಾಷಣದಲ್ಲಿ "ಬೆಳಗಾವಿ ನಗರದಲ್ಲಿ ಒಂದು ಸಾಹಿತ್ಯ ಭವನವಿಲ್ಲದ್ದು ನಾಚಿಗೇಡಿತನ ವಿಷಯ. ಹಿಂದಿನ ಮುಖ್ಯಮಂತ್ರಿಗಳೇನು ನಿದ್ದೆ ಮಾಡುತ್ತಿದ್ದರೆ?" ಎಂದು ಕೇಳಿದ್ದರು.[೧೧೦] ವಿ.ಸಿ. ಮಾಲಗತ್ತಿಯವರ ಕಳಕಳಿಯು ಈ ಸಾಹಿತ್ಯ ಭವನ ನಿರ್ಮಾಣದ ಹಿಂದೆ ಕಂಡುಬರುತ್ತದೆ ಅಲ್ಲದೆ ಸಮ್ಮೇಳನವನ್ನು ಯಶಸ್ವಿಯಾಗಿ ನಡೆಸಿಕೊಟ್ಟರು.

ಐದನೆಯ ಬಾರಿ : ೭೦ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಬೆಳಗಾವಿ ಮಾರ್ಚ ೭, ೮, ೯, ೨೦೦೩.

ಅಧ್ಯಕ್ಷರು : ಪಾಟೀಲ ಪುಟ್ಟಪ್ಪ

ದಿನಾಂಕ: ೨೦೦೩ ಮಾರ್ಚ ೭, ೮, ೯.

ಸ್ಥಳ : ಜಿಲ್ಲಾ ಕ್ರೀಡಾಂಗಣ ಬೆಳಗಾವಿ.

೨೦೦೩ ರಲ್ಲಿ ಬೆಳಗಾವಿಯಲ್ಲಿ ಜರುಗಿದ ೭೦ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಕಾಲಕ್ಕೆ ಬೆಳಗಾವಿ ಬಹಳಷ್ಟು ಬದಲಾಗಿತ್ತು. ಸಂಪೂರ್ಣ ನಗರವೆಲ್ಲಾ ಕನ್ನಡ ವಾತಾವರಣವನ್ನು ಹೊಂದಿ ಹಲವಾರು ಸಂಘ ಸಂಸ್ಥೆಗಳು, ಪತ್ರಿಕೆಗಳು, ಮಠ-ಮಾನ್ಯಗಳು, ಶಾಲೆ-ಕಾಲೇಜುಗಳು, ಚಲನಚಿತ್ರ ಮಂದಿರಗಳು, ಸಾಹಿತಿಗಳು, ಹೋರಾಟಗಾರರು, ಅಭಿಮಾನಿಗಳು ವಿವಿಧ ಕನ್ನಡ ಚಟುವಟಿಕೆಯಲ್ಲಿ ತೊಡಗಿ ಕನ್ನಡ ಸಂಸ್ಕೃತಿಯನ್ನು ಬೆಳೆಸುವಲ್ಲಿ ಕಾರ್ಯನಿರತರಾಗಿದ್ದರು.

ಇದಕ್ಕೆ ಪ್ರತಿಯಾಗಿ ಮರಾಠಿ ಸಂಘಟನೆಗಳು ಕನ್ನಡಿಗರಿಗೆ ವಿನಾಕಾರಣ ತೊಂದರೆಗಳನ್ನು ನೀಡುತ್ತಲೇ ಇದ್ದರು. ಕರಾಳ ದಿನಾಚರಣೆ, ಕನ್ನಡ ಆಸ್ತಿ-ಪಾಸ್ತಿಗೆ ಹಾನಿ, ಕನ್ನಡ ಧ್ವಜ ನಾಶ, ಕನ್ನಡಿಗರ ಮೇಲೆ ದೌರ್ಜನ್ಯ, ಕನ್ನಡ ಕಾರ್ಯಕ್ರಮಗಳಿಗೆ ಅಡ್ಡಿ ಸೀಮಾ ಪರಿಷತ್ತು, ಎಂ.ಇ.ಎಸ್. ಶಿವಸೇನೆ ಹೀಗೆ ಹಲವಾರು ಸಂಘಟನೆಗಳು ಈ ಕಾರ್ಯದಲ್ಲಿ ತೊಡಗಿದವು. ಇವೆಲ್ಲಕ್ಕೂ ಪ್ರೇರಣೆಯಾಗಿ 'ತರುಣ ಭಾರತ' ಪತ್ರಿಕೆಯು ವರ್ಣರಂಜಿತ ವರದಿಯನ್ನು ಪ್ರಕಟಿಸಿ ಮರಾಠಿಗರನ್ನು ಭಾವನಾತ್ಮಕವಾಗಿ ಪ್ರಚೋದಿಸಿತ್ತು.[೧೧೧] ಕೆ.ಎಲ್.ಇ. ಸಂಸ್ಥೆ ಅಂತರಾಷ್ಟ್ರೀಯ ಮಟ್ಟದಲ್ಲಿ

ಬೃಹದಾಕಾರವಾಗಿ ಬೆಳೆದು ಬೆಳಗಾವಿ ನೆಲದಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ನೆಲ, ಭಾಷೆ, ಜನರಿಗೆ ರಕ್ಷಣೆಯನ್ನು ಒದಗಿಸಿತು. ನಾಗನೂರು ರುದ್ರಾಕ್ಷಿಮಠವು ಎಲ್ಲ ಕನ್ನಡ ಕಾರ್ಯಗಳಿಗೆ ರಕ್ಷಾ ಕವಚವಾಗಿ ಕಾರ್ಯಗಳನ್ನು ಮಾಡುತ್ತ ಸಾಗಿತು. ಇವೆಲ್ಲದರಿಂದ ಕನ್ನಡಿಗರ ಜಾಗೃತಿಯ ಫಲವಾಗಿ ಬೆಳಗಾವಿಯಲ್ಲಿ ರಾಜಕೀಯವಾಗಿ ಪ್ರಬಲವಾಗಿದ್ದ ಎಂ. ಇ. ಎಸ್. ಸಂಘಟನೆಯು ನೈಪತ್ಯಕ್ಕೆ ಸರಿಯಿತು. ಮಹಾನಗರ ಪಾಲಿಕೆಯಲ್ಲಿ ಕನ್ನಡ ನಗರ ಸೇವಕರ ಪ್ರಭಾವ ಹೆಚ್ಚಾಯಿತು. ಕನ್ನಡಿಗರು ನಗರ ಸಭೆಯ ಆಡಳಿತದ ಚುಕ್ಕಾಣಿಯನ್ನು ಹಿಡಿದರು. ಒಂದು ಕಾಲಕ್ಕೆ ಬೆಳಗಾವಿ ಜಿಲ್ಲೆಯಲ್ಲಿ ಆರು-ಏಳು ವಿಧಾನಸಭೆಯ ಸ್ಥಾನಗಳನ್ನು ಪಡೆಯುತ್ತಿದ್ದ ಎಂ. ಇ. ಎಸ್. ಶೂನ್ಯಕ್ಕೆ ಇಳಿಯಿತು. ಜನರು ಜಾಗೃತರಾದರು. ನಗರದ ವ್ಯಾಪ್ತಿ ಹೆಚ್ಚಾಯಿತು. ಬಡಾವಣೆಗಳಲ್ಲಿ ಕನ್ನಡಿಗರು ಬಂದು ನೆಲೆಸಿದರು. ಆಡಳಿತ, ವ್ಯವಹಾರ, ಶಿಕ್ಷಣ, ಸಮಾಜದಲ್ಲಿ ಕನ್ನಡ ಭಾಷೆ ರಾರಾಜಿಸತೊಡಗಿತು. ಇಂತಹ ಸಂದರ್ಭದಲ್ಲಿ ೭೦ನೆ ಕನ್ನಡ ಸಾಹಿತ್ಯ ಸಮ್ಮೇಳನ ಬೆಳಗಾವಿಯಲ್ಲಿ ಜರುಗಿತು.

ದಿನಾಂಕ ೭ ರಂದು ಮುಂಜಾನೆ ಒಂಬತ್ತು ಗಂಟೆಗೆ ಮೆರವಣಿಗೆ ಪ್ರವಾಸಿ ಮಂದಿರದಿಂದ ಪ್ರಾರಂಭಗೊಂಡು ಖಡೇಬಜಾರ-ರಾಮದೇವಗಲ್ಲಿ ಕಿರ್ಲೋಸ್ಕರ ರಸ್ತೆ, ಕಾಲೇಜು ರಸ್ತೆ, ಚನ್ನಮ್ಮ ವೃತ್ತದ ಮೂಲಕ ಜಿಲ್ಲಾ ಕ್ರೀಡಾಂಗಣಕ್ಕೆ ಸಾಗಿತು. ಸಾವಿರಾರು ಜನರು ಮೆರವಣಿಗೆಯಲ್ಲಿ ಪಾಲ್ಗೊಂಡಿದ್ದರು. ಡೊಳ್ಳು, ಕರಡಿಮಜಲು, ಭಜನೆ, ರೂಪಕಗಳು, ಜನಪದ ಕಲಾತಂಡಗಳು, ಲೇಝಿಮ್, ಕೋಲಾಟ ಹೀಗೆ ಹತ್ತಾರು ವಾದ್ಯಮೇಳ, ಕಲಾಮೇಳಗಳ ಜೊತೆಗೆ ವಿಜ್ರಂಭಣೆಯಿಂದ ಮೆರವಣಿಗೆಯನ್ನು ಮಾಡಲಾಯಿತು. ಮೆರವಣಿಗೆಯಲ್ಲಿ ಜನರು ನಿರ್ಭಿತಿಯಿಂದ ಪಾಲ್ಗೊಂಡರು. ೧೯೩೦-೪೦ ರ ದಶಕದಲ್ಲಿ ಬೆಳಗಾವಿಯ ಪೇಠೆಗಳಲ್ಲಿ ಕೆಲವು ಗಲ್ಲಿಗಳಲ್ಲಿ ಕನ್ನಡವನ್ನು ಮಾತನಾಡುತ್ತ ಹೊರಟರೆ ಮರಾಠಿಗರು ಬಡಿಯುತ್ತಿದ್ದರು. ಕಲ್ಲು ಎಸೆಯುತ್ತಿದ್ದರು.[೧೧೨] ಅಂದಿನ ಸ್ಥಿತಿಗೂ ಇಂದಿನ ವಾತಾವರಣಕ್ಕೂ ಹೋಲಿಸಿದಾಗ ಬೆಳಗಾವಿಯಲ್ಲಿ ಮಹತ್ವದ ಬದಲಾವಣೆಗಳಾದದ್ದು ಸ್ಪಷ್ಟವಾಗುತ್ತದೆ.

ಮಧ್ಯಾಹ್ನ ಎರಡು ಗಂಟೆಗೆ ಸಮ್ಮೇಳನದ ಉದ್ಘಾಟನೆಯು ಮುಖ್ಯಮಂತ್ರಿ ಶ್ರೀ ಎಸ್. ಎಂ. ಕೃಷ್ಣ ಅವರಿಂದ ನೆರವೇರಿತು. ನಿಕಟಪೂರ್ವ ಅಧ್ಯಕ್ಷರಾಗಿದ್ದ ಡಾ. ಯು. ಆರ್. ಅನಂತಮೂರ್ತಿಯವರು ಮಾತನಾಡಿದ ಮೇಲೆ ಸಮ್ಮೇಳನದ ಅಧ್ಯಕ್ಷರ ಬಾಷಣ ಪ್ರಾರಂಭವಾಯಿತು. ಪುಟ್ಟಪ್ಪನವರ ಭಾಷಣದರೆ ಅದು ಇತಿಹಾಸದ ಒಂದೊಂದೇ ಪುಟಗಳನ್ನು ತಿರುವಿದಂತೆ. ಕನ್ನಡ ನಾಡುನುಡಿಯ ಪ್ರಾಚೀನತೆ, ಕನ್ನಡ ಭಾಷೆ, ಸಾಹಿತ್ಯಕ್ಕೆ ಒದಗಿ ಬಂದ ಸಮಸ್ಯೆಗಳು ಅವುಗಳಿಗೆ ಪರಿಹಾರಗಳು ಮುಂತಾದ ವಿಷಯಗಳ ಮೇಲೆ ಗಂಭೀರವಾದ ಭಾಷಣವನ್ನು ಮಾಡಿದರು. ಅವರ ಭಾಷಣ ನಡೆದ ಸಂದರ್ಭದಲ್ಲಿ ಮಾನ್ಯ ಮುಖ್ಯಮಂತ್ರಿಗಳು ಬೇರೆ ಕಾರ್ಯದ ನಿಮಿತ್ಯ ಬೆಂಗಳೂರಿಗೆ ಹೋಗುವುದಿತ್ತು. ಅದಕ್ಕಾಗಿ ಹೊರಟು ನಿಂತರು. ಆಗ ಪುಟ್ಟಪ್ಪನವರು ನೋಡ್ರಿ ವರ್ಷಪೂರ್ತಿ ನಿಮ್ಮ ಬಾಷಣ ಕೇಳಿದ್ದೇವೆ. ಈಗ ನಮ್ಮ ಮಾತನ್ನು ಸ್ವಲ್ಪ ಕೇಳ್ರಿ ಎಂದು ತಡೆದರು. ಅವರ ಮಾತಿಗೆ ಬೆಲೆಕೊಟ್ಟು

ಕೃಷ್ಣ ಅವರು  ಕಾರ್ಯಕ್ರಮ ಮುಗಿಯುವವರೆಗೆ ಕುಳಿತರು. ಸಂಜೆ ಡಾ. ಸರೋಜಿನಿ ಅಧ್ಯಕ್ಷತೆಯಲ್ಲಿ ಕವಿಗೋಷ್ಠಿ ಜರುಗಿತು. ಸಮ್ಮೇಳನದ ಅಂಗವಾಗಿ ಹಲವಾರು ಗೋಷ್ಠಿಗಳನ್ನು ಹಮ್ಮಿಕೊಳ್ಳಲಾಗಿತ್ತು. ನಿಂತ ನೆಲ-ಬೆಳಗಾವಿ, ಸಾಹಿತ್ಯ-ಶೋಧ, ಸಂಸ್ಕೃತಿ, ಜಾಗತೀಕರಣ ಮತ್ತು ಜಾನಪದ ಸಂಸ್ಕೃತಿ, ಬುಡಕಟ್ಟು ಜನಾಂಗ ಮತ್ತು ಉಪಸಂಸ್ಕೃತಿ, ಸಂಗೀತ, ನೃತ್ಯ, ಶಿಲ್ಪ, ಸಾಂಸ್ಕೃತಿಕ ಪರಂಪರೆ ಮುಂತಾದ ವಿಷಯಗಳ ಮೇಲೆ ಗೋಷ್ಠಿಗಳು ಜರುಗಿದವು. ಪ್ರೊ ಸೋಮಶೇಖರ ಇಮ್ರಾಪೂರ, ಡಾ. ಪ್ರಧಾನ ಗುರುದತ್ತ ಪೊ. ಎನ್. ಚಂದ್ರಪ್ಪ, ಡಾ. ಕರುಣಾ ವಿಜೇಂದ್ರ, ಶ್ರೀ ಜಯವಂತ ಕಾಡದೇವರು ಮುಂತಾದವರು ತಮ್ಮ ಪ್ರಬಂಧಗಳನ್ನು ಮಂಡಿಸಿದರು.

ಮೊದಲನೆಯ ಬೆಳಗಾವಿ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನ : ೧೯೭೧ ಸೆಪ್ಟೆಂಬರ್ ೧೧ ಹಾಗೂ ೧೨. ಕನ್ನಡ ಸಾಹಿತ್ಯ ಪರಿಷತ್ತಿನ ಬೆಳಗಾವಿ ಜಿಲ್ಲಾ ಶಾಖೆಯು ೧೯೭೦ ರ ಎಪ್ರಿಲ್ ತಿಂಗಳಿನಲ್ಲಿ ಪ್ರಾರಂಭವಾಯಿತು. ಹಿರಿಯ ವಿದ್ವಾಂಸ ಶ್ರೀ ಮಿರ್ಜಿ ಅಣ್ಣಾರಾಯರನ್ನು ಅವಿರೋಧವಾಗಿ ಬೆಳಗಾವಿ ಶಾಖೆಯ ಅಧ್ಯಕ್ಷರನ್ನಾಗಿ ಆಯ್ಕೆಮಾಡಲಾಯಿತು. ಇವರ ಅವಧಿಯಲ್ಲಿಯೇ ಮೊದಲ ಜಿಲ್ಲಾ ಸಾಹಿತ್ಯ ಸಮ್ಮೇಳನ ಬೆಳಗಾವಿಯಲ್ಲಿ ಜರುಗಿತು.

ನಗರದ ಕಲಾಮಂದಿರದಲ್ಲಿ ನಡೆದ ಈ ಸಾಹಿತ್ಯ ಸಮ್ಮೇಳನಕ್ಕಾಗಿ ಶ್ರೀ ಎಸ್. ಡಿ ಇಂಚಲ, ಜೋಶಿ ಅರವಿಂದರಾಯರು, ಕಾಲೇಜುಗಳಲ್ಲಿದ್ದ ಎಲ್ಲ ಕನ್ನಡದ  ಪ್ರಾಧ್ಯಾಪಕರು, ಪ್ರೌಢಶಾಲೆ ಶಿಕ್ಷಕರು, ಸಾಹಿತ್ಯಾಸಕ್ತರು ಎಲ್ಲರೂ ದುಡಿದರು.

ಸಮ್ಮೇಳನವನ್ನು ಶ್ರೀ ದ.ರಾ.ಬೇಂದ್ರೆಯವರು ಉದ್ಘಾಟಿಸಿದರು. ಡಾ. ಹಾ.ಮಾ. ನಾಯಕರು ಅಧ್ಯಕ್ಷರಾಗಿದ್ದರು. ಸಮ್ಮೇಳನದಲ್ಲಿ ಜಿ. ನಾರಾಯಣ, ಡಾ. ರಂ.ಶ್ರೀ. ಮುಗಳಿ, ಶ್ರೀ ಬೆಟಗೇರಿ ಕೃಷ್ಣಶರ್ಮ, ಡಾ. ಆರ್.ಸಿ.ಹಿರೇಮಠ, ಡಾ. ಎಂ. ಎಸ್. ಸುಂಕಾಪುರ, ಶ್ರೀ ಚನ್ನವೀರ ಕಣವಿ ಮೊದಲಾದ ಗಣ್ಯರೆಲ್ಲ ಬಂದಿದ್ದರು. ಸಮ್ಮೇಳನದಲ್ಲಿ ಬೆಳಗಾವಿ ಜಿಲ್ಲೆಯ ಗಣ್ಯ ಸಾಹಿತಿಗಳಾದ ಶಂ.ಬಾ.ಜೋಶಿ, ಬೆಟಗೇರಿ ಕೃಷ್ಣಶರ್ಮ, ಪ್ರ.ಗೋ.ಕುಲಕರ್ಣಿ ಡಾ.ಡಿ.ಎಸ್. ಕುಲಕರ್ಣಿ, ಈಶ್ವರ ಸಣಕಲ್ಲ, ಬಸವರಾಜ ಕಟ್ಟಿಮನಿ ಮೊದಲಾದವರನ್ನು ಆತ್ಮೀಯವಾಗಿ ಸತ್ಕರಿಸಲಾಯಿತು. ಆಗ ಬೆಳಗಾವಿಯ ಜಿಲ್ಲಾಧಿಕಾರಿಗಳಾಗಿದ್ದ ಶ್ರೀ ಸಿದ್ಧಯ್ಯ ಪುರಾಣಿಕರು ತುಂಬ ಕ್ರಿಯಾಶೀಲರಾಗಿ ಉತ್ಸವದಲ್ಲಿ ಸಹಾಯಕರಾಗಿದ್ದರು. ಈ ಸಂದರ್ಭದಲ್ಲಿ ಬೆಳಗಾವಿ ಬಳುವಳಿ ಸ್ಮರಣ ಸಂಚಿಕೆಯೊಂದನ್ನು ಹೊರತರಲಾಯಿತು.

ಎರಡನೆಯ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನ ಬೆಳಗಾವಿ : ೧೯೮೪ ರ ಮೇ ೨೭, ೨೮.

ನಗರದ ಮಾಣಿಕಭಾಗ ಜೈನ್ ಹಾಸ್ಟೇಲ್‌ದಲ್ಲಿ ಜರುಗಿತು. ಈ ಸಮ್ಮೇಳನದ ಅಧ್ಯಕ್ಷತೆ ವಹಿಸಿದವರು ಹಂಪನಾರವರು. ಡಾ. ಯು. ಆರ್. ಅನಂತಮೂರ್ತಿಯವರು ಉದ್ಘಾಟಕರಾಗಿ ಆಗಮಿಸಿದ್ದರು. ಜಿಲ್ಲೆಯ ಖ್ಯಾತ ಕಾದಂಬರಿಕಾರರಾದ ಕೃಷ್ಣಮೂರ್ತಿ ಪುರಾಣಿಕ ಹಾಗೂ ಭಾಷಾ ತಜ್ಞ ಪ್ರ.ಗೋ ಕುಲಕರಣಿ ಅವರಿಗೆ ಫಲಪುಷ್ಪ ಕೊಟ್ಟು ಗೌರವಿಸಿ ಅವರ ಸಾಹಿತ್ಯಿಕ ಸೇವೆಯನ್ನು ಕೊಂಡಾಡಿದರು.

ಮೂರನೆಯ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನ: ೧೯೯೧ ಮಾರ್ಚ ೨೩, ೨೪.

ಸಮ್ಮೇಳನವು ನಗರದ ಕಲಾಮಂದಿರದಲ್ಲಿ ಜರುಗಿತು. ಜಾನಪದ ವಿದ್ವಾಂಸ, ಸಂಶೋಧಕರಾದ ಡಾ. ಎಂ. ಎಸ್. ಲಠ್ಠೆ ಅವರು ಅಧ್ಯಕ್ಷತೆಯನ್ನು ವಹಿಸಿದ್ದರು. ನಾಲ್ಕನೆಯ ಮತ್ತು ಐದನೆಯ ಜಿಲ್ಲಾ ಸಾಹಿತ್ಯ ಸಮ್ಮೇಳನಗಳು ಮೊದಲಬಾರಿ ಬೆಳಗಾವಿಯ ಹೊರವಲಯದಲ್ಲಿ ಜರುಗಿದವು. ನಾಲ್ಕನೆಯ ಸಮ್ಮೇಳನವು ೧೯೯೯ನೇ ಸಾಲಿನ ಎಪ್ರಿಲ್ ತಿಂಗಳ ೧೭ ಮತ್ತು ಹದಿನೆಂಟರಂದು ಬೈಲಹೊಂಗಲ ತಾಲೂಕಿನ ತಿರುಳ್ಗನ್ನಡ ನಾಡೆಂದು ಖ್ಯಾತವಾದ ವಕ್ಕುಂದದಲ್ಲಿ ನಡೆಯಿತು. ಇದರ ಅಧ್ಯಕ್ಷತೆಯನ್ನು ಬ. ಗಂ. ತುರಮರಿಯವರು ವಹಿಸಿಕೊಂಡಿದ್ದರು. ಐದನೆಯ ಬೆಳಗಾವಿ ಜಿಲ್ಲಾ ಮಟ್ಟದ ಕನ್ನಡ ಸಾಹಿತ್ಯ ಸಮ್ಮೇಳನವು ೨೦೦೬ ನೆಯ ಸಾಲಿನ ನವಂಬರದಲ್ಲಿ. ಬೆಳಗಾವಿ ಜಿಲ್ಲೆಯಲ್ಲಿಯೇ ಜನಸಂಖ್ಯೆ ದೃಷ್ಟಿಯಿಂದ ಅತಿ ದೊಡ್ಡ ಗ್ರಾಮ ರಾಯಬಾಗ ತಾಲೂಕಿನ ಹಾರೂಗೇರಿಯಲ್ಲಿ ಜರುಗಿತು. ಈ ಸಮ್ಮೇಳನದ ಅಧ್ಯಕ್ಷತೆಯನ್ನು ನಾಡಿನ ಖ್ಯಾತ ಜಾನಪದ ಕವಿ, ವಿದ್ವಾಂಸ, ಸಂಶೋಧಕರಾದ ಡಾ. ಶ್ರೀರಾಮ ಇಟ್ಟಣ್ಣವರ ಅವರು ವಹಿಸಿಕೊಂಡಿದ್ದರು. ಆರನೆಯ ಬೆಳಗಾವಿ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನವು ೨೦೧೦ ರ ಮಾರ್ಚ ೨೭, ೨೮ ರಂದು ಬೆಳಗಾವಿಯ ಜೀರಿಗೆ ಸಭಾಂಗಣದಲ್ಲಿ ಜರುಗಿತು. ಈ ಸಮ್ಮೇಳನದ ಅಧ್ಯಕ್ಷತೆಯನ್ನು ಜಾನಪದ ತಜ್ಞರಾದ ಡಾ. ಬಸವರಾಜ ಮಲಶೆಟ್ಟಿಯವರು ವಹಿಸಿಕೊಂಡಿದ್ದರು. ಏಳನೆಯ ಬೆಳಗಾವಿ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಚನ್ನಮ್ಮನ ಕಿತ್ತೂರಿನಲ್ಲಿ ದಿನಾಂಕ ೧೫, ೧೬ ಎಪ್ರಿಲ್ ೨೦೧೧ ರಂದು ಆಯೋಜಿಸಲಾಯಿತು. ಈ ಸಮ್ಮೇಳನವು ನಾಡಿನ ಖ್ಯಾತ ಕವಿಗಳಾದ ಡಾ. ಜಿ. ಎ. ಸನದಿಯವರ ಅಧ್ಯಕ್ಷತೆಯಲ್ಲಿ ಜರುಗಿತು.

ಈ ಎಲ್ಲ ಸಾಹಿತ್ಯ ಸಮ್ಮೇಳನಗಳ ಜೊತೆಯಲ್ಲಿಯೇ ಬೆಳಗಾವಿ ತಾಲೂಕ ಸಾಹಿತ್ಯ ಸಮ್ಮೇಳನಗಳು ಜರುಗಿವೆ. ಇದುವರೆಗೆ ಎರಡು ಬಾರಿ ಬೆಳಗಾವಿ ತಾಲೂಕ ಸಾಹಿತ್ಯ ಸಮ್ಮೇಳನಗಳು ಜರುಗಿವೆ. ಮೊದಲನೆಯ ಸಮ್ಮೇಳನವು ೧೯೯೭ ರಲ್ಲಿ ಜರುಗಿತು. ಸಮ್ಮೇಳನದ ಅಧ್ಯಕ್ಷತೆಯನ್ನು ಎರಡನೆಯ ಬಾರಿ ಬೆಳಗಾವಿ ತಾಲೂಕ ಸಾಹಿತ್ಯ ಸಮ್ಮೇಳನವು ೨೦೧೧ ರ ಮೇ ೧೦ ರಂದು ಪಂತಬಾಳೇಕುಂದ್ರಿ ಗ್ರಾಮದಲ್ಲಿ ಜರುಗಿತು. ಸಮ್ಮೇಳನದ ಅಧ್ಯಕ್ಷತೆಯನ್ನು ಕವಿ ಮಲ್ಲಿಕಾರ್ಜುನ ಇಂಚಲರು ವಹಿಸಿಕೊಂಡಿದ್ದರು. ಸಮ್ಮೇಳನದ ಅಂಗವಾಗಿ ಕುಂಭ ಮೇಳ, ಎತ್ತುಗಳ ಮೆರವಣಿಗೆ, ಬೈಕ್ ರ್‍ಯಾಲಿ, ಸಂಜೆ ರಸಮಂಜರಿ ಕಾರ್ಯಕ್ರಮಗಳು ಜರುಗಿದವು. ವಿವಿಧ ವಿಷಯಗಳ ಬಗ್ಗೆ ಗೋಷ್ಠಿ, ಉಪನ್ಯಾಸಗಳು, ಕವಿಗೋಷ್ಠಿಗಳು ಜರುಗಿದವು.

ಜಿಲ್ಲಾ ಸಾಹಿತ್ಯ ಸಮ್ಮೇಳನ ೧೯೯೫ : ೧೯೯೫ ರಲ್ಲಿ ಪತ್ರಕರ್ತರ ಹಾಗೂ ಬರಹಗಾರರ ಸಹಕಾರಿ ಸಂಘದ ವತಿಯಿಂದ ಬೆಳಗಾವಿಯಲ್ಲಿ ಬೆಳಗಾವಿ ಜಿಲ್ಲಾ ಸಾಹಿತಿಗಳ ಸಮ್ಮೇಳನವನ್ನು ಹಮ್ಮಿಕೊಳ್ಳಲಾಗಿತ್ತು. ಸಮ್ಮೇಳನದ ಅಧ್ಯಕ್ಷತೆಯನ್ನು ಪ್ರಾ. ಪ್ರಹ್ಲಾದಕುಮಾರ ಭಾಗೋಜಿಯವರು ವಹಿಸಿಕೊಂಡಿದ್ದರು. ಸಮ್ಮೇಳನದ ಉದ್ಘಾಟಕರಾಗಿ

ಖ್ಯಾತ ವಿಮರ್ಶಕರು ಕವಿಗಳಾದ ಡಾ. ಕೀರ್ತಿನಾಥ ಕುರ್ತಕೋಟಿಯವರು ಆಗಮಿಸಿದ್ದರು. ಅಲ್ಲದೆ ಜಿಲ್ಲೆಯ ಹಲವಾರು ಜನ ಸಾಹಿತಿಗಳು ಆಸಕ್ತರು ಆಗಮಿಸಿದ್ದರು. ಅಧ್ಯಕ್ಷತೆಯನ್ನು ವಹಿಸಿದ ಭಾಗೋಜಿಯವರು ಬೆಳಗಾವಿ ಜಿಲ್ಲೆಯಲ್ಲಿ ಬಹಳಷ್ಟು ಜನ ವಿದ್ವಾಂಸರು, ಸಂಶೋಧಕರು, ಸಾಹಿತಿಗಳು, ಕಾದಂಬರಿಕಾರರು ರಾಷ್ಟ್ರ/ಅಂತರಾಷ್ಟ್ರೀಯ ಮಟ್ಟದ ಖ್ಯಾತಿಯನ್ನು ಪಡೆದುಕೊಂಡಿದ್ದಾರೆ. ಆದರೆ ಇವರ್ಯಾರೂ ಬೆಳಗಾವಿ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷಸ್ಥಾನದ ಗೌರವವನ್ನು ನೀಡಲಿಲ್ಲ. ಇವರಲ್ಲಿ ಕೆಲವರು ರಾಜ್ಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷಸ್ಥಾನದ ಗೌರವವನ್ನು ಪಡೆದುಕೊಂಡಿದ್ದಾರೆ. ನಮ್ಮ ನಮ್ಮರನ್ನು ಗೌರವದಿಂದ ಕಾಣುವ ಭಾವ ಬೆಳೆಯದಿದ್ದರೆ ನಮ್ಮ ಜನ ದೊಡ್ಡವರೂ ಆಗುವುದಿಲ್ಲ. ಇನ್ನು ಮುಂದಾದರೂ ಈ ತಪ್ಪನ್ನು ತಿದ್ದಿಕೊಳ್ಳಬೇಕಾಗಿದೆ ಎಂದು ಎಚ್ಚರಿಸಿದರು. ಕುರ್ತಕೋಟಿಯವರು ತಮ್ಮ ಉದ್ಘಾಟನಾ ಪರ ಭಾಷಣದಲ್ಲಿ ಬೆಳಗಾವಿಯ ನೆಲದ ಹಿರಿಮೆಯನ್ನು ಹೊಗಳಿ ಸಾಹಿತ್ಯದ ಗೊತ್ತು ಗುರಿಗಳನ್ನು ತಿಳಿಸಿದರು. ಈ ಸಮ್ಮೇಳನ ಸಾಹಿತಿಗಳಲ್ಲಿ ಜಾಗೃತಿಯನ್ನುಂಟು ಮಾಡಿತು. ತಮ್ಮ ತಪ್ಪನ್ನು ತಿದ್ದಿಕೊಳ್ಳುವ ಅವಕಾಶ ಒದಗಿಬಂದಿತು.

ಅಖಿಲ ಭಾರತ  ಐದನೆಯ ಶರಣ ಸಾಹಿತ್ಯ ಸಮ್ಮೇಳನ ಬೆಳಗಾವಿ:

ದಿನಾಂಕ: ೬ ರಿಂದ ೮ ಡಿಸೆಂಬರ್ ೧೯೯೯ರಂದು ಬೆಳಗಾವಿಯಲ್ಲಿ ೫ ನೆಯ ಶರಣ ಸಾಹಿತ್ಯ ಸಮ್ಮೇಳನವು ಜರುಗಿತು. ಈ ಸಮ್ಮೇಳನದ ಅಧ್ಯಕ್ಷತೆಯನ್ನು ನಾಡಿನ ಖ್ಯಾತ ಮಹಿಳಾ ಸಾಹಿತಿ ಶಾಂತಾದೇವಿ ಮಾಳವಾಡ ವಹಿಸಿಕೊಂಡಿದ್ದರು.

ಈ ಸಮ್ಮೇಳನವು ಹಲವಾರು ವೈಶಿಷ್ಟ್ಯಗಳಿಂದ ಕೂಡಿತ್ತು.  ಸಮ್ಮೇಳನಾಧ್ಯಕ್ಷರನ್ನು  ಸಾಲಂಕೃತ ತೆರೆದ ಜೀಪಿನಲ್ಲಿ ಕಿತ್ತೂರು ಚೆನ್ನಮ್ಮ ವೃತ್ತದಿಂದ ಜವಾಹರಲಾಲ ನೆಹರು ವೈದ್ಯಕೀಯ ಕಾಲೇಜಿನ ವರೆಗೆ ಮೆರವಣಿಗೆಯಲ್ಲಿ ತರಲಾಯಿತು. ವೈವಿಧ್ಯಮಯವಾದ  ವಾದ್ಯಗಳು  ವಿದ್ಯಾರ್ಥಿ ವಿದ್ಯಾರ್ಥಿನಿಯರು ಸ್ಕೌಟ್ಸ ಹಾಗೂ ಗೈಡ್ಸ್, ಎನ್.ಸಿ.ಸಿ., ಏರವಿಂಗ್ ಸೇವಾದಳ ಮುಂತಾದ ಘಟಕದವರು ಪಾಲ್ಗೊಂಡು ಮೆರವಣಿಗೆಗೆ ಕಳೆಯನ್ನು ತಂದಿದ್ದರು. ಸಮ್ಮೇಳನವನ್ನು ಪೂಜ್ಯ ಸಿದ್ಧೇಶ್ವರ ಸ್ವಾಮಿಗಳು ಉದ್ಘಾಟಿಸಿದರು.  ಶರಣರ ವಚನಗಳ ಭಾಷೆಯಲ್ಲಿ ಅದ್ಭುತ ಶಕ್ತಿ ಇದೆ ನಮ್ಮ ಮನಸ್ಸುಗಳನ್ನು ವಿಶಾಲಗೊಳಿಸುವ ಸಾಮರ್ಥ್ಯವಿದೆ, ವಚನಗಳನ್ನು ಅಧ್ಯಯನ ಮಾಡುವುದರಿಂದ ಮನುಷ್ಯನ ದೃಷ್ಟಿಕೋನ  ಬದಲಾಗುತ್ತದೆಂದು ಉದ್ಘಾಟನಾ ಪರ ಮಾತುಗಳನ್ನಾಡಿದರು.

ಅಧ್ಯತೆಯನ್ನು ವಹಿಸಿದ ಶ್ರೀಮತಿ ಶಾಂತಾದೇವಿ ಮಾಳವಾಡರು "ಇಲೆಕ್ಟ್ರಾನಿಕ್  ಮಾಧ್ಯಮಗಳ ಹಾವಳಿಗೆ ಸಿಕ್ಕಿ ಗೀತ ರೂಪದ ಶರಣ ಸಾಹಿತ್ಯ ಅಪಾಯವನ್ನೇದುರಿಸುತ್ತಿರುವ ಬಗೆಗೆ ಎಚ್ಚರಿಸಿದರು. ಶರಣ ಸಾಹಿತ್ಯ ಕೀರ್ತಿ ವಾರ್ತೆಗಾಗಿ ಬರೆದುದಲ್ಲ. ಶರಣ ಸ್ಥಾನ ತಲುಪಿದವರು ಅಂತರಂಗರದ ಆನಂದವೇ ಸಹಜವಾಗಿ ಹೊರಹೊಮ್ಮಿ ವಚನ ಸಾಹಿತ್ಯವಾಗಿದೆ. ಅದು ಸಮಾನತೆಯನ್ನು ಬಲವಾಗಿ ಪ್ರತಿಪಾದಿಸಿದೆ......... ಅನ್ನದಾನ ಗೋದಾನ,

ಭೂದಾನ ಗಳಂತೆ  ಕನ್ಯಾದಾನವೂ ಮಾಡುವುದು ಸರಿಯೇ ಎಂದು ಪ್ರಶ್ನಿಸಿದ ಮಾಳವಾಡ ಅವರು ಸಭಿಕರನ್ನು ಚಿಂತನೆಗೆ ಹಚ್ಚಿದರು. ಸಮಾರಂಭದ ಸಾನಿಧ್ಯವನ್ನು ವಹಿಸಿದ ಡಾ. ಶೀವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳು ಆಶಿರ್ವಚನ ನೀಡಿದರು. ಕಾರ್ಯಕ್ರಮದಲ್ಲಿ ಗೋ.ರು. ಚನ್ನಬಸಪ್ಪ. ಎಂ. ಚಿದಾನಂದಮೂರ್ತಿ, ಗುರುಲಿಂಗ ಕಾಪಸೆ, ಭೀಮಣ್ಣ ಕಂಡ್ರೆ, ಗಿರಡ್ಡಿ ಗೋವಿಂದರಾಜ ಮೊದಲಾದವರು ಉಪಸ್ಥಿತರಿದ್ದರು. ಸಮ್ಮೇಳನದ ಅಂಗವಾಗಿ ವಿವಿಧ ಗೋಷ್ಠಿಗಳನ್ನು ಹಮ್ಮಿಕೊಳ್ಳಲಾಗಿತ್ತು. ಕನ್ನಡೇತರ ಭಾಷೆಗಳಲ್ಲಿ ಶರಣ ಸಾಹಿತ್ಯ, ಶರಣರ ಆಧ್ಯಾತ್ಮಿಕ ಸಾಧನೆ ಶರಣರ ಪ್ರತಿಭಟನೆ, ಶರಣೆಯರು ಶರಣ ನೆರಳೆ?, ಸಮಕಾಲೀನ ಸಮಾಜದಲ್ಲಿ ಮಠಗಳ ಪಾತ್ರ-ಹೀಗೆ ಹಲವಾರು ವಿಷಯಗಳನ್ನು ಕುರಿತು ಚಿಂತನ, ಗೋಷ್ಠಿ, ಉಪನ್ಯಾಸ, ಸಂವಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿತ್ತು. ಬೆಳಗಾವಿಯಲ್ಲಿ ಜರುಗಿದ ಈ ಸಮ್ಮೇಳನವು ವೀರಶೈವರನ್ನು ಸಂಘಟಿಸುವಲ್ಲಿ ಯಶಸ್ವಿಯಾಯಿತು. ಸಾಹಿತ್ಯದ ಬಗೆಗೆ ಆಸಕ್ತಿಯನ್ನು ಮೂಡಿಸಲು ಸಹಕಾರಿಯಾಯಿತು.

ಅಖಿಲ ಭಾರತ ಯಕ್ಷಗಾನ-ಬಯಲಾಟ ಸಮ್ಮೇಳನ : ಅಧ್ಯಕ್ಷರು : ಡಾ. ಶ್ರೀರಾಮ ಇಟ್ಟಣ್ಣವರ, ದಿನಾಂಕ: ೨೦೧೧ ರ ಎಪ್ರಿಲ್ ೮, ೯, ೧೦. ಸ್ಥಳ : ಗಾಂಧಿ ಭವನ ಬೆಳಗಾವಿ.

ಬೆಂಗಳೂರಿನ ಕರ್ನಾಟಕ ಸಾಂಸ್ಕೃತಿಕ ಕಲಾ ಪ್ರತಿಷ್ಠಾನದ ವತಿಯಿಂದ ಬೆಳಗಾವಿಯಲ್ಲಿ ಮೂರು ದಿನಗಳ ಕಾಲ ಅಖಿಲ ಭಾರತ ಯಕ್ಷಗಾನ-ಬಯಲಾಟ ಸಮ್ಮೇಳನ ಜರುಗಿತು. ಸಮ್ಮೇಳನದ ಅಧ್ಯಕ್ಷತೆಯನ್ನು ನಾಡಿನ ಖ್ಯಾತ ಜಾನಪದ ವಿದ್ವಾಂಸರು, ಕವಿಗಳು, ಸಂಶೋಧಕರು, ಆದ ಡಾ. ಶ್ರೀರಾಮ ಇಟ್ಟಣ್ಣವರ ಅವರು ವಹಿಸಿಕೊಂಡಿದ್ದರು.

ಆಧುನಿಕ ಕಾಲದ ಟಿ.ವಿ. ಸಂಸ್ಕೃತಿಯಲ್ಲಿ ಜನಪದ ಕಲೆ, ನಾಟಕಗಳು ನಶಿಸುತ್ತಿರುವ ಸಂದರ್ಭದಲ್ಲಿ ಈ ಸಮ್ಮೇಳನವು ಸಮಯೋಚಿತವೆನಿಸಿತು. ಬೆಳಗಾವಿಯಲ್ಲಿ ಜರುಗಿದ ವಿಶ್ವಕನ್ನಡ ಸಮ್ಮೇಳನದ ಬೆನ್ನಲ್ಲೇ ಈ ಸಮ್ಮೇಳನವು ಜರುಗಿತು. ಜನರು ಇನ್ನೂ ವಿಶ್ವಕನ್ನಡ ಸಮ್ಮೇಳನದ ಗುಂಗಿನಲ್ಲಿಯೇ ಇದ್ದರು. ಹೀಗಾಗಿ ಈ ಸಮ್ಮೇಳನವು ನಾಡಿನ ಬೇರೆ ಬೇರೆ ಭಾಗಗಳಿಂದ ಆಗಮಿಸಿದ ಪಂಡಿತವರ್ಗ, ಸಾಹಿತಿಗಳು, ಕಲಾವಿದರು, ಸಮ್ಮೇಳನದಲ್ಲಿ ಭಾಗವಹಿಸಿ ಸಮ್ಮೇಳನವನ್ನು ಯಶಸ್ವಿಗೊಳಿಸಿದರು. ಸಮ್ಮೇಳನದ ಸರ್ವಾಧ್ಯಕ್ಷರಾಗಿದ್ದ ಡಾ. ಶ್ರೀರಾಮ ಇಟ್ಟಣ್ಣವರ ಅವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಕರ್ನಾಟಕ ಜನಪದ ರಂಗಭೂಮಿ ನಡೆದು ಬಂದ ದಾರಿಯನ್ನು ಕುರಿತು ವಿವರವಾಗಿ ತಿಳಿಸುತ್ತ ಕರ್ನಾಟಕದ ಜನಪದ ರಂಗಭೂಮಿಯನ್ನು ದ್ರಾವಿಡ ರಂಗಭೂಮಿಯ ಹಿನ್ನೆಲೆಯಲ್ಲಿ ನೋಡುವ ಅವಶ್ಯಕತೆಯಿದೆ. ದ್ರಾವಿಡ ಪರಂಪರೆಯಲ್ಲಿ ಮುಖ್ಯವಾಗಿ ಸೇರಿರುವ ಎರಡು ಸ್ರೋತಗಳು ಇಲ್ಲಿಯ ರಂಗಭೂಮಿಯ ಹರವನ್ನು ವಿಸ್ತರಿಸಿವೆ. ಜಾನಪದ ಕಲಾವಿದರು ಪ್ರಾದೇಶಿಕ ಗಡಿಗಳನ್ನು ಮೀರಿ ತಮ್ಮ ಮನಕ್ಕೆ ನಾಟಿದ್ದನ್ನೆಲ್ಲ ಸ್ವೀಕರಿಸುತ್ತ ರಂಗಭೂಮಿಯನ್ನು ಬೆಳೆಸುತ್ತಾರೆ. ಇಂತಹ ಸಂದರ್ಭದಲ್ಲಿ ನಮ್ಮ ಭಾರತೀಯ ಸಂಸ್ಕೃತಿಯ

ಅನನ್ಯತೆಯೆಂಬುದು ಇಷ್ಟರ ಮಟ್ಟಿಗೆ ನಮ್ಮ ರಂಗಭೂಮಿಯ ಮುಖಾಂತರ ಫಲಿಸಿದೆಯೆಂಬುದನ್ನು ನಾವು ಒಟ್ಟು ಭಾರತೀಯ ಹಿನ್ನೆಲೆಯಲ್ಲಿ ನೋಡುವ ಅವಶ್ಯಕತೆಯಿದೆ ಎಂದು ತಿಳಿಸಿದರು. ಜನಪದ ರಂಗಭೂಮಿಯನ್ನು ಬೆಳೆಸಿದವರಲ್ಲಿ ರಂಗಕವಿಗಳು, ಕಲಾವಿದರು, ಪ್ರೇಕ್ಷಕರು ಪ್ರಧಾನವೆನ್ನಿಸುತ್ತಾರೆ. ಯಕ್ಷಗಾನ ಕವಿಗಳಿಗೆ ಸಮಕಾಲೀನ ಅಥವಾ ಆ ಪೂರ್ವದ ಕನ್ನಡ ಕಾವ್ಯಗಳು ಪ್ರೇರಣೆ ನೀಡಿವೆ. ಜನಪದ ರಂಗಭೂಮಿಯನ್ನು ಬೆಳೆಯಿಸಿದ ಶ್ರೇಯಸ್ಸಿನ ಬಹುಪಾಲು ಕಲಾವಿದರಿಗೆ ಸಲ್ಲುತ್ತದೆ. ಕುಲಗೋಡ ತಮ್ಮಣ್ಣ ಕೌಜಲಗಿ ನಿಂಗವ್ವ, ಯಾದವಾಡ ಮಲಕಪ್ಪ ಹೀಗೆ ಹಲವಾರು ಜನ ಕಲಾವಿದರು ಪಾರಿಜಾತ ರಂಗಭೂಮಿಗೆ ತಮ್ಮದೇ ಆದ ಸೇವೆ ಸಲ್ಲಿಸಿದ್ದಾರೆ. ಅಲ್ಲದೆ ಬಯಲಾಟದ ಕಲಾವಿದರನ್ನು ಪ್ರೋತ್ಸಾಹಿಸುವವರು ಗ್ರಾಮೀಣ ಪ್ರೇಕ್ಷಕರು. ಇವರ ಪ್ರೀತಿ, ಅಭಿಮಾನಗಳಿಂದ ಈ ರಂಗಭೂಮಿ ಬೆಳವಣಿಗೆ ಹೊಂದಿತೆಂದು ತಿಳಿಸಿದರು. ಅಲ್ಲದೆ ಜನಪದ ಬೈಲಾಟಗಳ ವೈವಿಧ್ಯತೆ, ಸ್ವತ್ವವನ್ನು ಕುರಿತು, ಬಯಲಾಟಗಳ ಪರಿಷ್ಕರಣೆಯ ಕಾರ್ಯವನ್ನು ಮಾಡುವವರು ಸಾಂಪ್ರದಾಯಿಕ ಬಯಲಾಟ ಮತ್ತು ಪ್ರಾಯೋಗಿಕ ನಾಟಕಗಳ ಒಳವಿನ್ಯಾಸ ಎರಡನ್ನು ಬಲ್ಲವರಾಗಿರಬೇಕು ಎಂದು ತಿಳಿಸಿದರು.

ಬಯಲಾಟಗಳ ವರ್ತಮಾನದ ವಿದ್ಯಮಾನಗಳನ್ನು ಕುರಿತು ಹಲವಾರು ಮಹತ್ವದ ಸಲಹೆ ಸೂಚನೆಗಳನ್ನು ಡಾ. ಶ್ರೀರಾಮ ಇಟ್ಟಣ್ಣವರ ಅವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ತಿಳಿಸಿದರು.

ರಾಜ್ಯ ಮಟ್ಟದ ೧೯ನೆಯ ಚುಟುಕು ಸಾಹಿತ್ಯ ಸಮ್ಮೇಳನ ಚುಟುಕು ಸಾಹಿತ್ಯ ಪರಿಷತ್ ವತಿಯಿಂದ ಎಪ್ರಿಲ್ ೩೦ ಹಾಗೂ ಮೇ ೧ ೨೦೧೧ ರಂದು ರಾಜ್ಯ ಮಟ್ಟದ ೧೯ನೆಯ ಚುಟುಕು ಸಾಹಿತ್ಯ ಸಮ್ಮೇಳನವು ನಗರದ ಹೊಸ ಕೋರ್ಟ ಆವರಣದಲ್ಲಿ ಬೆಳಗಾವಿ ವಕೀಲರ ಸಂಘದ ಸಮುದಾಯ ಭವನದಲ್ಲಿ ಜರುಗಿತು. ಸಮ್ಮೇಳನದ ಸಾನಿಧ್ಯವನ್ನು ಗದಗ-ಮುಂಡರಗಿ ಸಂಸ್ಥಾನ ಮಠದ ಡಾ. ಅನ್ನದಾನೇಶ್ವರ ಸ್ವಾಮೀಜಿಯವರು ವಹಿಸಿಕೊಂಡಿದ್ದರು. ಶಾಸಕನ ಸತೀಶ ಜಾರಕಿಹೊಳಿಯವರು ಕಾರ್ಯಕ್ರಮವನ್ನು ಉದ್ಘಾಟಿಸಿದರು.

ಎರಡು ದಿನದ ಸಮ್ಮೇಳನದಲ್ಲಿ ಚುಟುಕು ಸಾಹಿತ್ಯ ಕುರಿತು ವಿಚಾರ ಗೋಷ್ಠಿಗಳು ಉಪನ್ಯಾಸ ಕಾರ್ಯಕ್ರಮಗಳು ಚುಟುಕು ಕವಿಗೋಷ್ಠಿ, ಮಹತ್ವದ ಚುಟುಕು ಕಾವ್ಯ ಕೃತಿಗಳ ಬಿಡುಗಡೆ, ಸಂವಾದ ಚರ್ಚೆ ಮುಂತಾದ ಕಾರ್ಯಕ್ರಮಗಳು ಜರುಗಿದವು. ಚುಟುಕು ಸಾಹಿತ್ಯ ಪರಿಷತ್ತಿನ ರಾಜ್ಯ ಸಂಚಾಲಕ ಡಾ. ಎಂ. ಜಿ. ಆರ್. ಅರಸು, ಜಿನದತ್ತ ದೇಸಾಯಿ, ವಿಶ್ರಾಂತ ಕುಲಪತಿ ಡಾ. ಚಿದಾನಂದಗೌಡ, ಡಾ. ಪಂಚಾಕ್ಷರಿ ಹಿರೇಮಠ, ಚಂದ್ರಕಾಂತ ಬೆಲ್ಲದ ಮುಂತಾದವರು ಕಾರ್‍ಯಕ್ರಮದಲ್ಲಿ ಉಪಸ್ಥಿತರಿದ್ದರು.

**ವಿಶ್ವಕನ್ನಡ ಸಮ್ಮೇಳನ ಬೆಳಗಾವಿ-೨೦೧೧ ಮಾರ್ಚ ೧೧, ೧೨, ೧೩:**

ಹಿನ್ನೆಲೆ: ೧೯೮೧ ರಲ್ಲಿ ತಮಿಳುನಾಡಿನ ಮಧುರೈನಲ್ಲಿ ವಿಶ್ವ ತಮಿಳು ಸಮ್ಮೇಳನ ಜರುಗಿತು. ಈ ಸಮ್ಮೇಳನ ಭಾರೀ ಯಶಸ್ವಿಯಾಗಿತ್ತು. ತಮಿಳು ಭಾಷೆಗಳಲ್ಲಿ ಭಾಷೆಯ ಮೇಲಿನ ವ್ಯಾಮೋಹ, ಪ್ರೀತಿ, ವಿಶ್ವಾಸವನ್ನು ಸಮ್ಮೇಳನ

ಮತ್ತಷ್ಟು ಹೆಚ್ಚಿಸಿತು. ಭಾಷೆಯ ಶ್ರೀಮಂತಿಕೆಗೆ ಈ ಸಮ್ಮೇಳನ ಪೂರಕವಾಗಿತ್ತು. ಈ ಸಮ್ಮೇಳನದಲ್ಲಿ ಭಾಗವಹಿಸಿದ್ದ ಅಂದಿನ ಕರ್ನಾಟಕದ ಮುಖ್ಯಮಂತ್ರಿಯಾಗಿದ್ದ ಆರ್ ಗುಂಡೂರಾವ್ ಅವರು ತಮಿಳು ಭಾಷೆಗಳ ಅದಮ್ಯ ಉತ್ಸಾಹ, ಭಾಷೆಯ ಮೇಲಿನ ಅಭಿಮಾನ, ಅಕ್ಕರೆ, ಪ್ರೀತಿ, ವಿಶ್ವಾಸ ಕಂಡು ಗುಂಡುರಾಯರು ಇಂತಹದೆ ಸಮ್ಮೇಳನವನ್ನು ಕನ್ನಡದಲ್ಲಿ ನೆರವೇರಿಸಿ ಜನರಲ್ಲಿ ನಾಡು-ನುಡಿಯ ಬಗೆಗೆ ಅಭಿಮಾನವನ್ನು ಮೂಡಿಸಬಹುದೆಂದು ಸಂಕಲ್ಪಮಾಡಿದರು. ಈ ಪ್ರಶ್ನೆ ಸಚಿವ ಸಂಪುಟದ ಮುಂದೆ ಇಟ್ಟರು. ಎಲ್ಲರೂ ಒಪ್ಪಿಗೆ ಸೂಚಿಸಿದರು. ಅದರ ಫಲವಾಗಿ ೧೯೮೫ ರ ಡಿಸೆಂಬರ್ ೧೫, ೧೬, ೧೭ ರಂದು ಮೈಸೂರಿನಲ್ಲಿ ಅದ್ದೂರಿಯಾಗಿ ಮೊಟ್ಟ ಮೊದಲ ವಿಶ್ವಕನ್ನಡ ಸಮ್ಮೇಳನ ಜರುಗಿತು. ೧೯೮೨ ರಲ್ಲಿಯೇ ಜರುಗಬೇಕಾದ ಈ ಸಮ್ಮೇಳನವು ರಾಜಕೀಯ ಸ್ಥಿತ್ಯಂತರದಿಂದ ಮುಂದೆ ಸಾಗುತ್ತ ೧೯೮೫ ರಲ್ಲಿ ಜರುಗಿತು. ಆದರೆ ರಾಜಕೀಯ ಬೆಳವಣಿಗೆಯಲ್ಲಿ ೧೯೮೨-೮೩ ರಲ್ಲಿ ವಿಧಾನಸಭೆ ಚುನಾವಣೆ ನಡೆದು ರಾಮಕೃಷ್ಣ ಹೆಗಡೆ ಮುಖ್ಯ ಮಂತ್ರಿಯಾದರು. ಆದರೆ ಅಲ್ಪ ಅವಧಿಯಲ್ಲಿಯೇ ಮಧ್ಯಂತರ ಚುನಾವಣೆ ನಡೆದು ೧೯೮೫ ರಲ್ಲಿ ರಾಮಕೃಷ್ಣ ಹೆಗಡೆಯವರೇ ಬಹುಮತದಿಂದ ಮುಖ್ಯಮಂತ್ರಿಯಾದರು. ಮೌಲ್ಯಾಧಾರಿತ ರಾಜಕಾರಣಕ್ಕೆ ಹೆಸರಾಗಿದ್ದ ರಾಮಕೃಷ್ಣ ಹೆಗಡೆಯವರು ಗುಂಡುರಾವ್ ಅವರ ಚಿಂತನೆಯನ್ನು ಅನುಷ್ಠಾನಗೊಳಿಸಿದರು.

ಎರಡನೆಯ ವಿಶ್ವಕನ್ನಡ ಸಮ್ಮೇಳನದ ಹಿನ್ನೆಲೆ : ೨೦೦೩ ರಲ್ಲಿ ಬೆಳಗಾವಿಯಲ್ಲಿ ಜರುಗಿದ ೭೦ ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ವಿಶ್ವಕನ್ನಡ ಸಮ್ಮೇಳನ ನಡೆಸುವಂತೆ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಲಾಗಿತ್ತು. ಅಂದು ಬೆಳಗಾವಿ ಕನ್ನಡಿಗರು ಹಾಗೂ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಹರಿಕೃಷ್ಣ ಪುನರೂರರು ಸೇರಿ ಮುಖ್ಯಮಂತ್ರಿ ಎಸ್. ಎಂ. ಕೃಷ್ಣರಿಗೆ ಎರಡು ಮನವಿಗಳನ್ನು ಅರ್ಪಿಸಿದರು. ಒಂದು ವಿಶ್ವಕನ್ನಡ ಸಮ್ಮೇಳನವನ್ನು ಬೆಳಗಾವಿಯಲ್ಲಿ ನಡೆಸಬೇಕು ಮತ್ತೊಂದು ಬೆಳಗಾವಿಯಲ್ಲಿ ವಿಧಾನ ಮಂಡಲದ ಅಧಿವೇಶನವನ್ನು ನಡೆಸಬೇಕು ಎಂದು ಮನವಿ ಮಾಡಿಕೊಳ್ಳಲಾಗಿತ್ತು. ಅಂದು ವಿಶ್ವಕನ್ನಡ ಸಮ್ಮೇಳನವನ್ನು ನಡೆಸುವುದಕ್ಕೆ ಬೆಳಗಾವಿ, ಮೈಸೂರು ಮಂಗಳೂರುಗಳನ್ನು ಹೆಸರಿಸಲಾಗಿದ್ದರೂ ಕೊನೆಗೆ ಬೆಳಗಾವಿಯನ್ನು ತೀರ್ಮಾನಿಸಲಾಯಿತು.

೨೦೦೩ ರಲ್ಲಿ ಬಿತ್ತಿದ ಎರಡನೆಯ ವಿಶ್ವಕನ್ನಡ ಸಮ್ಮೇಳನ ನಡೆಯುವ ದಿನವೂ ಮುಂದೆ ಮುಂದೆ ಸಾಗುತ್ತಲೇ ಇತ್ತು. ೨೦೦೭ ರಲ್ಲಿ ಅಂದಿನ ಮುಖ್ಯಮಂತ್ರಿ ಎಚ್. ಡಿ. ಕುಮಾರಸ್ವಾಮಿಯವರು ಬೆಳಗಾವಿಯಲ್ಲಿ ವಿಶ್ವಕನ್ನಡ ಆಯೋಜಿಸುವುದಾಗಿ ಘೋಷಿಸಿದ್ದರು. ಆದರೆ ರಾಜಕೀಯ ಬದಲಾವಣೆಯಿಂದ ಮುಂದೂಡುತ್ತಾ ಸಾಗಿತು. ಕೊನೆಗೆ ಬೆಳಗಾವಿ ಕನ್ನಡಿಗರು ಹೋರಾಟಕ್ಕೆ ಇಳಿದರು, ಪ್ರತಿಭಟಿಸಿದರು. ಕೊನೆಗೆ ೨೦೧೧ ಮಾರ್ಚ ೧೧,೧೨,೧೩ ರಂದು ಜರುಗಿಸುವುದಾಗಿ ಮುಖ್ಯಮಂತ್ರಿ ಬಿ. ಎಸ್. ಯಡಿಯೂರಪ್ಪನವರು ನಿರ್ಧರಿಸಿದರು. ಬೆಳಗಾವಿಯಲ್ಲಿ ಜರುಗುವ ಸಮ್ಮೇಳನಗಳಿಗೆ ಒಂದು ಪರಂಪರೆ ಇದೆ. ೧೯೨೪ ರ ಅಖಿಲಭಾರತ ಕಾಂಗ್ರೆಸ್ ಅಧಿವೇಶನದಿಂದ ವಿಶ್ವಕನ್ನಡ ಸಮ್ಮೇಳನದವರೆಗೆ ನಡೆದ ಸಮ್ಮೇಳನಗಳು ಬೆಳಗಾವಿ ಕನ್ನಡಿಗರ ಮೇಲೆ

ಪರಿಣಾಮಕಾರಿಯಾದ ಪ್ರಭಾವವನ್ನು ಬೀರಿವೆ. ಬೆಳಗಾವಿಯಲ್ಲಿ ಸಮ್ಮೇಳನ ನಡೆದಾಗೊಮ್ಮೆ ಬೆಳಗಾವಿ ಕನ್ನಡಿಗ ಮೈಕೊಡವಿಕೊಂಡು ಮೇಲೆದ್ದಿದ್ದಾನೆ. ಧೈರ್ಯದಿಂದ ತಲೆ ಎತ್ತಿ ನಿಂತಿದ್ದಾನೆ. ಅನಾಥ ಪ್ರಜ್ಞೆಯನ್ನು ಮರೆತು ಸ್ವಾಭಿಮಾನದಿಂದ ನಾನು ಕನ್ನಡಿಗ ಎಂದು ಜೈಕಾರಹಾಕಿದ್ದಾನೆ. ಇದು ಚಾರಿತ್ರಿಕವಾಗಿ ದಾಖಲಾಗಿದೆ. ಬೆಳಗಾವಿಯಲ್ಲಿ ಜರುಗಿದ ಎರಡನೆಯ ವಿಶ್ವಕನ್ನಡ ಸಮ್ಮೇಳನವೂ ಒಂದು ಐತಿಹಾಸಿಕ ಮೈಲುಗಲ್ಲಾಗಿ ದಾಖಲಾಯಿತು.

ಸಮ್ಮೇಳನಕ್ಕಿಂತ ಎರಡು–ಮೂರು ತಿಂಗಳುಗಳಿಗಿಂತ ಮೊದಲೇ ಬೆಳಗಾವಿಯಲ್ಲಿ ಸಿದ್ಧತೆಯ ಕಾರ್ಯಗಳು ನಡೆಯತೊಡಗಿದವು. ನಗರದ ರಸೆಗಳ ದುರಸ್ತಿ, ಸರ್ಕಾರಿ ಕಟ್ಟಡಗಳ ದುರಸ್ತಿ, ಸುಣ್ಣ–ಬಣ್ಣ ಇತ್ಯಾದಿಗಳಿಂದ ಅಲಂಕೃತಗೊಳ್ಳತೊಡಗಿದವು. ನಗರದ ತುಂಬೆಲ್ಲಾ ಗೋಡೆಗಳ ಮೇಲೆ ಬಿತ್ತಿ ಚಿತ್ರಗಳನ್ನು ಚಿತ್ರಿಸುವ ಕೆಲಸ ಪ್ರಾರಂಭಗೊಂಡಿತು. ಕರ್ನಾಟಕದ ಸಂಸ್ಕೃತಿಯ ಒಟ್ಟು ದರ್ಶನ ಈ ಭಿತ್ತಿ ಚಿತ್ರಗಳಲ್ಲಿ ಪ್ರದರ್ಶಿತವಾಯಿತು. ನಗರದ ತುಂಬೆಲ್ಲಾ ಜಗಮಗಿಸುವ ಬೀದಿ ದೀಪಗಳು, ಬ್ಯಾನರ್‌ಗಳು, ತಳಿರು ತೋರಣಗಳು, ಎಲ್ಲಿ ನೋಡಿದಲ್ಲೆಲ್ಲ ಹಳದಿ–ಕೆಂಪು ಧ್ವಜಗಳು, ನಾಡಿನ ಎಲ್ಲಾ ಪತ್ರಿಕೆಗಳಲ್ಲಿ ಜಾಹಿರಾತುಗಳು, ರೇಡಿಯೋ, ದೂರದರ್ಶನ, ಮೊಬೈಲಗಳ ಮೆಸೆಜ್‌ಗಳಲ್ಲಿಯೂ ವಿಶ್ವಕನ್ನಡ ಸಮ್ಮೇಳನದ ಧ್ವನಿಯೇ ಕೇಳಿಬರುತ್ತಿತ್ತು. ಬೆಳಗಾವಿಯ ಮರಾಠಿ ಪತ್ರಿಕೆಗಳು ಸಹ ಜಾಹಿರಾತನ್ನು ನೀಡಿದವು.

ವಿಶ್ವಕನ್ನಡ ಸಮ್ಮೇಳನಕ್ಕೆ ಪೂರ್ವಭಾವಿಯಾಗಿ ನಾಡಿನಾದ್ಯಂತ ಅದರಲ್ಲಿಯೂ ಹೆಚ್ಚಾಗಿ ಬೆಳಗಾವಿ ಜಿಲ್ಲೆ ಹಾಗೂ ನಗರದಲ್ಲಿ ಹಲವಾರು ಕಾರ್‍ಯಕ್ರಮಗಳು ಜರುಗಿದವು. ನಾಟಕ, ಕಲೆ ವಸ್ತು ಪ್ರದರ್ಶನಗಳು, ಉಪನ್ಯಾಸ, ವಿಚಾರಸಂಕಿರಣ, ಗೋಷ್ಠಿಗಳು, ಚರ್ಚೆಗಳು ಜರುಗಿದವು. ಬೆಳಗಾವಿ ನಗರದಲ್ಲಿ ವಿಶ್ವಮಟ್ಟದ ಗಾಳಿಪಟ ಉತ್ಸವ ಜರುಗಿತು. ಸಂಗೀತಗೋಷ್ಠಿಗಳು, ಚಿತ್ರಕಲೆ ಪ್ರದರ್ಶನಗಳು ಹೀಗೆ ಹಲವು ವೈವಿಧ್ಯಮಯವಾದ ಕಾರ್ಯಕ್ರಮಗಳು ವಿಶ್ವಕನ್ನಡ ಸಮ್ಮೇಳನದ ಅಂಗವಾಗಿ ಜರುಗಿದವು.

ಸಮ್ಮೇಳನದ ಉದ್ಘಾಟನೆಯನ್ನು ಡಾ. ಎನ್.ಆರ್. ನಾರಾಯಣ ಮೂರ್ತಿ ಅವರು ನೆರವೇರಿಸಿದರು. ವಿಶೇಷ ಅತಿಥಿಯಾಗಿ ಶ್ರೀಮತಿ ಐಶ್ವರ್ಯ ರೈ ಬಚ್ಚನ್ ಆಗಮಿಸಿದ್ದು ವಿಶೇಷವಾದ ಆಕರ್ಷಣೆಯನ್ನುಂಟುಮಾಡಿತ್ತು. ಅಲ್ಲದೆ ನಾಡಿನ, ದೇಶದ, ಹೊರರಾಷ್ಟ್ರದ ಕನ್ನಡಿಗರು ಈ ಸಮ್ಮೇಳನದಲ್ಲಿ ಭಾಗವಹಿಸಿದ್ದರು. ಮೂರು ದಿನಗಳವರೆಗೆ ಈ ಸಮ್ಮೇಳನವಿದ್ದರೂ ೧೫ ದಿನಗಳವರೆಗೆ ಸಮ್ಮೇಳದ ವಾತಾವರಣ ನಿರ್ಮಾಣಗೊಂಡಿತ್ತು. ಸಮ್ಮೇಳನದ ಅಂಗವಾಗಿ ಜರುಗಿದ ಗ್ರಾಮೀಣ ಕ್ರೀಡೆಗಳು, ನಾಟಕ ಪ್ರದರ್ಶನ, ಚಿತ್ರಕಲಾ ಪ್ರದರ್ಶನಗಳು ಗಮನ ಸೆಳೆದವು. ನಾಡು–ನುಡಿ–ಸಂಸ್ಕೃತಿಯನ್ನು ಕುರಿತು ನಡೆದ ಉಪನ್ಯಾಸಗಳು ಅರ್ಥಪೂರ್ಣವಾಗಿದ್ದವು.

ಈ ಸಮ್ಮೇಳನದಿಂದ ಬೆಳಗಾವಿ ಕನ್ನಡಿಗರಲ್ಲಿ ಆತ್ಮವಿಶ್ವಾಸ ಹೆಚ್ಚಾಯಿತು. ಕನ್ನಡಿಗರಿಗೆ ನೈತಿಕ ಬಲ ಬಂದಂತಾಯಿತು. ಮರಾಠಿಗರ ಧೋರಣೆಯು ಬದಲಾಯಿತು. ಬೆಳಗಾವಿಯ ಹಲವಾರು ಮರಾಠಿಗರು ಈ

ಸಮ್ಮೇಳನದಲ್ಲಿ ಭಾಗವಹಿಸಿದರು. ಒಟ್ಟನಲ್ಲಿ ಕನ್ನಡ ಸಂಸ್ಕೃತಿಯ ನಿರ್ಮಾಣದಲ್ಲಿ ಈ ಸಮ್ಮೇಳನವು ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿತು.

ಒಟ್ಟನಲ್ಲಿ ಬೆಳಗಾವಿಯಲ್ಲಿ ಜರುಗಿದ ಸಮ್ಮೇಳನಗಳು ಬೆಳಗಾವಿ ಕನ್ನಡಿಗರ ಮೇಲೆ ಮಹತ್ವದ ಪರಿಣಾಮವನ್ನು ಬೀರಿದ್ದು ಸ್ಪಷ್ಟವಾಗುತ್ತದೆ. ಬೆಳಗಾವಿಯಲ್ಲಿ ಸಮ್ಮೇಳನ ನಡೆದಾಗೊಮ್ಮೆ ಅದು ಎರಡೂ ರಾಜ್ಯಗಳಲ್ಲಿ ಕೆಲವು ದಿನ ವಾದ–ವಿವಾದವನ್ನುಂಟು ಮಾಡುತ್ತದೆ. ಆದರೆ ಇಂತಹ ಸಮ್ಮೇಳನಗಳಿಂದಲೇ ಬೆಳಗಾವಿಯಲ್ಲಿ ಕನ್ನಡ ಜಾಗೃತಿ ಉಂಟಾಗಲು ಸಾಧ್ಯವಾಗಿದೆ.



ಸಂದರ್ಭಸೂಚಿ:


೧. ಡಾ. ಜಿ. ಎಸ್. ಉಪಾಧ್ಯ: ಮಹಾರಾಷ್ಟ್ರ ಕರ್ನಾಟಕ ಸಾಂಸ್ಕೃತಿಕ ಸಂಬಂಧ, ಪುಟ. ೩೩.

೨. ಪಾಟೀಲ ಪುಟ್ಟಪ್ಪ: ನಾಡು–ನುಡಿ, ೪೭.

೩. ಚಂದ್ರಕಾಂತ ಪೋಕಳೆ: ಗಡಿ ಪ್ರದೇಶ ಭಾಷೆ ಒಂದು ಚಿಂತನೆ, ತಿರುಳ್ಗನ್ನಡ ಸಿರಿ, ಪುಟ. ೨೬.

೪. ಮಹಾದೇವ ಬಣಕಾರ: ಮಹಾಜನ ವರದಿಯ ವಿಶ್ಲೇಷಣೆ, ಪುಟ. ೧೯.

೫. ಪಾಟೀಲ ಪುಟ್ಟಪ್ಪ: ನಾಡು–ನುಡಿ, ಪು. ೪೮.

೬ ಭುಜೇಂದ್ರ ಮಹೇಶವಾಡಿ: ಬೆಳಗಾವಿ ಕೋಟೆಯ ಮೇಲೆ ಕನ್ನಡ ಧ್ವಜ, ವೇಣು ಸಂಪದ, ಪುಟ. ೧.

೭ ಅದೇ. ಪುಟ. ೨.

೮. ಡಾ. ಬಿ. ಎಸ್. ಕುಲಕರ್ಣಿ: ನೇಮಿಚಂದ್ರ ಕವಿ ಕಾವ್ಯ ವಿಮರ್ಶೆ. ಪುಟ. ೧೪.

೯. ಆರ್. ನರಸಿಂಹಾಚಾರ್: ಕರ್ನಾಟಕ ಕವಿಚರಿತೆ, ಪುಟ. ೨೮೭.

೧೦. ಡಾ. ಶಿ. ಬಾ. ಪಾಟೀಲ: ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ, ಪುಟ. ೧೮.

೧೧. ಆರ್. ನರಸಿಂಹಾಚಾರ್, 'ಕರ್ನಾಟಕ ಕವಿಚರಿತೆ', ಪುಟ. ೨೯೦.

೧೨. ಬೊಮ್ಮರಸ: ಪಾರ್ಶ್ವನಾಥ, ಆಶ್ವಾಸ. ೯೧. ಪದ್ಯ.೨೫.

೧೩. ಅದೇ. ಆಶ್ವಾಸ. ೧೬. ಪದ್ಯ ೧೮೫.

೧೪. ಎಂ. ಮರಿಯಪ್ಪ ಭಟ್ ಮತ್ತು ಎಂ. ಗೋವಿಂದರಾವ್: ಪಾರ್ಶ್ವಪಂಡಿತನ ಪಾರ್ಶ್ವನಾಥ ಪುರಾಣಂ, ಆಶ್ವಾಸ. ೧೬, ಪದ್ಯ. ೧೮೬.

೧೫. ಡಾ. ರಾಜಶೇಖರ ಇಚ್ಚಂಗಿ: ಪಾರ್ಶ್ವನಾಥ ಪುರಾಣ ಒಂದು ತೌಲನಿಕ ಅಧ್ಯಯನ, ಪುಟ. ೨೬೪,

೧೬. Journal of the Bombay Branch of the Royal Asiatic Society, Vol. X, P. 220.

೧೭. ಆರ್. ನರಸಿಂಹಾಚಾರ್ಯ: ಕರ್ನಾಟಕ ಕವಿಚರಿತೆ ಸಂಪುಟ-೧, ಪುಟ. ೩೭೨.

೧೮. EP Ind. Vol. XIII, P.18.

೧೯. ಡಾ. ಶಿ. ಬಾ. ಪಾಟೀಲ: ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ, ಪುಟ.೧೧೨.

೨೦. ಮೇವುಂಡಿ ಮಲ್ಲಾರಿ: ಕನ್ನಡ ನಾಡಿನ ಶಾಸನ ಕವಿಗಳು, ಪುಟ. ೨೩೫-೨೩೬.

೨೧. ಅದೇ. ಪುಟ. ೨೩೬.

೨೨. ಡಾ. ಬಿ. ಆರ್. ಹಂದೂರ: ಜೈನ ಪರಂಪರೆ ಬೆಳಗಾವಿ ಪ್ರಾದೇಶಿಕ ಕೊಡುಗೆ, ಪುಟ. ೩೧೪.

೨೩. ಆರ್. ನರಸಿಂಹಾಚಾರ್: ಕರ್ನಾಟಕ ಕವಿಚರಿತೆ, ಪುಟ. ೩೭೦.

೨೪. EP Ind. Vol. XIII, P.18.

೨೫. ಆರ್. ನರಸಿಂಹಾಚಾರ್: ಕರ್ನಾಟಕ ಕವಿಚರಿತೆ, ಪುಟ. ೨೮೪.

೨೬. ಅದೇ. ಪುಟ. ೨೮೭.

೨೭ ಡಾ. ಬಿ. ಆರ್. ಹಂದೂರ: ಜೈನ ಪರಂಪರೆ ಬೆಳಗಾವಿ ಪ್ರಾದೇಶಿಕ ಕೊಡುಗೆ, ಪುಟ. ೩೧೫.

೨೮. ಆರ್. ನರಸಿಂಹಾಚಾರ್: ಕರ್ನಾಟಕ ಕವಿಚರಿತೆ, ಪುಟ. ೩೮೮.

೨೯. ಡಾ. ಬಿ. ಆರ್. ಹಂದೂರ: ಜೈನ ಪರಂಪರೆ ಬೆಳಗಾವಿ ಪ್ರಾದೇಶಿಕ ಕೊಡುಗೆ, ಪುಟ. ೩೧೭.

೩೦. ಅದೇ. ಪುಟ. ೩೧೯.

೩೧. ಅದೇ. ಪುಟ. ೩೧೮.

೩೨. ಆರ್. ನರಸಿಂಹಾಚಾರ್: ಕರ್ನಾಟಕ ಕವಿಚರಿತೆ, ಪುಟ. ೨೯೨.

೩೩. ಡಾ. ಬಿ. ಆರ್. ಹಂದೂರ: ಜೈನ ಪರಂಪರೆ ಬೆಳಗಾವಿ ಪ್ರಾದೇಶಿಕ ಕೊಡುಗೆ, ಪುಟ. ೩೦೨.

೩೪. ಆರ್. ನರಸಿಂಹಾಚಾರ್: ಕರ್ನಾಟಕ ಕವಿಚರಿತೆ, ಪುಟ. ೪೦೧.

೩೫. ರಾಯಲ್ ಏಷ್ಯಾಟಿಕ್ ಸೊಸೈಟಿ ಜರ್ನಲ್, ಬಾಂಬೆ ಬ್ರಾಂಚ್, ಸಂ. ೧೦, ಪುಟ. ೨೬೦.

೩೬. ಡಾ. ಶಿ. ಬಾ. ಪಾಟೀಲ: ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ, ಪುಟ. ೧೧೫,

೩೭. ಆರ್. ನರಸಿಂಹಾಚಾರ್ಯ: ಕನ್ನಡ ಕವಿ ಚರಿತೆ, ಪುಟ. ೩೮೭,

೩೮. ಡಾ. ಮಲ್ಲಿಕಾರ್ಜುನ ಲಠ್ಠೆ ಜನಪದ ಕವಿಗಳು, ವೇಣುನಾದ, ವಿಶೇಷ ಸಂಪುಟ, ಪುಟ. ೨೫.

೩೯. ಡಾ. ಎಸ್. ಪಿ. ಪಾಟೀಲ: ಕವಿ ದ್ವಾರಪಾಲಕ, ಬೆಳಗಾವಿ ಬೆಳಕು, ಸಂಸ್ಕರಣ ಸಂಪುಟ, ಪುಟ. ೩೦೮.

೪೦. ಪಿ. ಈ. ಕೆಂಪಣ್ಣವರ: ಸಾಹಿತ್ಯಕ್ಕೆ ಬೆಳಗಾವಿ ತಾಲೂಕಿನ ಕೊಡುಗೆ, ವೇಣು ಸಂಪದ, ಸ್ಮರಣ ಸಂಚಿಕೆ. ಪುಟ. ೩೫.

೪೧. ಡಾ. ಶ್ರೀನಿವಾಸ ಹಾವನೂರ: ಹೊಸಗನ್ನಡದ ಅರುಣೋದಯ, ಪುಟ. ೯೬.

೪೨. ಅದೇ. ಪು. ೯೭.

೪೩. ರಾ.ಯ. ಧಾರವಾಡಕರ: ಹೊಸಗನ್ನಡ ಸಾಹಿತ್ಯದ ಉದಯಕಾಲ, ಪುಟ. ೧೯೧.

೪೪. ಅದೇ. ಪುಟ. ೨೩೫.

೪೫. ಅದೇ. ಪುಟ. ೨೩೪.

೪೬. ಅದೇ. ಪುಟ. ೨೪೨.

೪೭ ಪಿ.ಕೆ. ಬಾಗೋಜಿ: ನನ್ನ ಬೆಳಗಾವಿ. ಪುಟ. ೨೦.

೪೮. ದು. ನಿಂ. ಬೆಳಗಲಿ: ಆನಂದಕಂದ. ಪುಟ. ೨೬.

೪೯. ಜಯಶ್ರೀ ಬಾಗೋಜಿ, ಶ್ರೀಕೃಷ್ಣ ಪಾಟೀಲ. ವೇಣುಸಂಪದ. ಪುಟ. ೪೬.

೫೦. ಡಾ. ಶ್ರೀನಿವಾಸ ಹಾವನೂರ: ಹೊಸಗನ್ನಡದ ಅರುಣೋದಯ, ಪುಟ. ೩೫.

೫೧. ಜಿ. ಎಸ್. ರಂಗನಾಥರಾವ್: ಪತ್ರಿಕೋದ್ಯಮ, ಪುಟ. ೧೧೨.

೫೨. ಡಾ. ಶ್ರೀನಿವಾಸ ಹಾವನೂರ: ಹೊಸಗನ್ನಡದ ಅರುಣೋದಯ, ಪುಟ. ೩೮.

೫೩. ಕೃಷ್ಣ ಕೊಲ್ಹಾರ ಕುಲಕರ್ಣಿ: ಅಖಂಡ ಕರ್ನಾಟಕ ಹೆಜ್ಜೆಗಳು, ಪುಟ. ೬೫

೫೪. ಡಾ. ಶ್ರೀನಿವಾಸ ಹಾವನೂರ: ಹೊಸಗನ್ನಡದ ಅರುಣೋದಯ, ಪುಟ. ೫೦.

೫೫. ರಾ.ಯ. ಧಾರವಾಡಕರ: ಹೊಸಗನ್ನಡ ಸಾಹಿತ್ಯದ ಉದಯಕಾಲ, ಪುಟ. ೭೧.

೫೬. ಅದೇ. ೧೯೧.

೫೭. ಅದೇ. ಪುಟ. ೨೪೨

೫೮. ಅದೇ. ಪುಟ. ೨೭೬.

೫೯. ರಾ. ಯ. ಧಾರವಾಡಕರ: ಹೊಸಗನ್ನಡ ಸಾಹಿತ್ಯದ ಉದಯಕಾಲ, ಪುಟ. ೭೧.

೬೦. ಡಾ. ಬಾಳಣ್ಣ ಶೀಗೀಹಳ್ಳಿ: ಡೆಪ್ಯೂಟಿ ಚೆನ್ನಬಸಪ್ಪನವರು ಜೀವನ-ಸಾಧನೆ.ಪುಟ. ೬೬.

೬೧. ಅದೇ ಪುಟ. ೬೬.

೬೨. ಅದೇ ಪುಟ. ೯೫.

೬೩. ಡಾ. ಶ್ರೀನಿವಾಸ ಹಾವನೂರ: ಹೊಸಗನ್ನಡದ ಅರುಣೋದಯ, ಪುಟ. ೫೬೮.

೬೪. ಕರ್ನಾಟಕ ಪತ್ರಿಕಾ ಇತಿಹಾಸ, ಸಂಪುಟ-೩, ಕರ್ನಾಟಕ ಪತ್ರಿಕಾ, ಬೆಂಗಳೂರು, ಪುಟ. ೫೫.

೬೫. ಪಿ.ಕೆ. ಬಾಗೋಜಿ: ನನ್ನ ಬೆಳಗಾವಿ. ಪುಟ.೪೭

೬೬. ಡಾ. ಶ್ರೀನಿವಾಸ ಹಾವನೂರ: ಹೊಸಗನ್ನಡದ ಅರುಣೋದಯ, ಪುಟ. ೫೮.

೬೭. ಸಂದರ್ಶನ ವಿನೋದ ಸಾವಂತ.(ಅ.ರಾ. ಸಾಮಂತರ ಮೊಮ್ಮಗ) ದಿನಾಂಕ: ೦೧-೦೭-೨೦೧೧.

೬೮. ಡಾ. ಶ್ರೀನಿವಾಸ ಹಾವನೂರ: ಹೊಸಗನ್ನಡದ ಅರುಣೋದಯ, ಪುಟ. ೫೭೧.

೬೯. ಕರ್ನಾಟಕ ಪತ್ರಿಕಾ ಇತಿಹಾಸ, ಸಂಪುಟ-೩, ಕರ್ನಾಟಕ ಪತ್ರಿಕಾ, ಬೆಂಗಳೂರು, ಪುಟ. ೫೩.

೭೦. ಪಿ.ಕೆ. ಬಾಗೋಜಿ: ನನ್ನ ಬೆಳಗಾವಿ. ಪುಟ. ೨೬.

೭೧. ಅದೇ.

೭೨. ಡಾ. ಶ್ರೀನಿವಾಸ ಹಾವನೂರ: ಹೊಸಗನ್ನಡದ ಅರುಣೋದಯ, ಪುಟ. ೪೯೦.

೭೩. ಡಾ. ಜೆ.ಎಂ. ಚಂದುನವರ: ಪತ್ರಕರ್ತರಾಗಿ ಮೊಹರೆ ಹನುಮಂತರಾಯ. ಪುಟ. ೩೫.

೭೪. ಅದೇ ಪುಟ. ೪೩.

೭೫. ಶರಚಂದ್ರ ಧರಮಟ್ಟಿ: ಬೆಳಗಾವಿ ಜಿಲ್ಲೆಯ ಕನ್ನಡ ಗ್ರಂಥ ಪ್ರಕಾಶನ ಸಂಸ್ಥೆಗಳು. ಬೆಳಗಾವಿ ಬೆಳಗು. ಪುಟ. ೬೯೧-೬೯೨.

೭೬. ಕರ್ನಾಟಕ ಪತ್ರಿಕಾ ಇತಿಹಾಸ, ಸಂಪುಟ–೩, ಕರ್ನಾಟಕ ಪತ್ರಿಕಾ, ಬೆಂಗಳೂರು, ಪುಟ. ೪೫.

೭೭. ಅದೇ ಪುಟ. ೪೬.

೭೮. ರಾ. ಯ. ಧಾರವಾಡಕರ: ಹೊಸಗನ್ನಡ ಸಾಹಿತ್ಯದ ಉದಯಕಾಲ, ಪುಟ. ೬೯.

೭೯. ೧೯೨೮ರಲ್ಲಿ ಆರಂಭವಾದ 'ತರುಣ ಭಾರತ' ಎಂಬ ವಾರಪತ್ರಿಕೆಯನ್ನು ಹೊರಡಿಸಿದ ಬಾಬುರಾವ್ ಠಾಕೂರರು ಕನ್ನಡ ಮರಾಠಿ ಎರಡೂ ಭಾಷೆಗಳಲ್ಲಿ ಪ್ರಕಟಿಸುತ್ತಿದ್ದರು. ಮುಂದೆ ಕೆಲ ಕಾಲದ ನಂತರದ ಕೇವಲಮರಾಠಿಯಲ್ಲಿ ಪ್ರಕಟಗೊಳ್ಳತೊಡಗಿತು. ಆದರೆ ಇದಕ್ಕೆ ಕಾರಣ ಯಾವುದೇ ಭಾಷಾ ವೈಷಮ್ಯವಲ್ಲ. ಅಂದಿನ ದಿನಗಳಲ್ಲಿ ಕನ್ನಡಿಗರೆಲ್ಲರೂ ಮರಾಠಿಯನ್ನು ಬಲ್ಲವರಾಗಿದ್ದರು. ಕನ್ನಡದಲ್ಲಿ ಪತ್ರಿಕೆ ಬಂದರೂ ಸಹ ಅದನ್ನು ಓದುವ ವರ್ಗ ಇರಲಿಲ್ಲ. ಇಂದಿಗೂ ಕೂಡ ಶೇ. ೩೦% ರಷ್ಟು ಕನ್ನಡಿಗರು 'ತರುಣ ಭಾರತ' ಪತ್ರಿಕೆಯನ್ನು ಬೆಳಗಾವಿಯಲ್ಲಿ ಓದುವರು.

೮೦. ಒಂದು ಸಂಚಿಕೆಯಲ್ಲಿ ನಾಲ್ಕು ಪುಟಗಳಿರುತ್ತಿದ್ದವು ಎಂದು ರಾಯ ಧಾರವಾಡಕರ ತಿಳಿಸಿದ್ದಾರೆ. (ಹೊಸಗನ್ನಡ ಸಾಹಿತ್ಯದ ಉದಯಕಾಲ, ಪುಟ. ೬೯.)

೮೧. ಕರ್ನಾಟಕ ಪತ್ರಿಕಾ ಇತಿಹಾಸ, ಸಂಪುಟ–೩, ಕರ್ನಾಟಕ ಪತ್ರಿಕಾ, ಬೆಂಗಳೂರು, ಪುಟ. ೪೮.

೮೨. ಕಿಟೆಲ್‌ರು ೧೮೭೭ರಲ್ಲಿ ನಿಘಂಟು ರಚನೆಯನ್ನು ಪ್ರಾರಂಭಿಸಿ ೧೮೯೪ ರಲ್ಲಿ ಅದನ್ನು ಮುಗಿಸಿದರು. ಇವರಿಗಿಂತ ಪೂರ್ವದಲ್ಲಿ 'ರೀವರವರೇಸೋ' ಎನ್ನುವವರು ೧೮೩೨ ರಲ್ಲಿ ಕನ್ನಡ – ಇಂಗ್ಲೀಷ ನಿಘಂಟನ್ನು ರಚಿಸಿದ್ದರು. ೧೮೭೬ ರಲ್ಲಿ ಜಿಗ್ಲರ್‌ನ ಕನ್ನಡ – ಇಂಗ್ಲೀಷ್ ನಿಘಂಟು ರಚನೆಯಾಯಿತು. ಆದರೆ ಇವೆರಡೂ ಶಾಸ್ತ್ರೀಯವಾಗಿ ರಚನೆಗೊಂಡಿರಲಿಲ್ಲ.

೮೩. 'ಸುಬುದ್ಧಿ ಪ್ರಕಾಶ' ಪತ್ರಿಕೆಯ ಬೆಲೆಯು ಎಂಟು ಪುಟಗಳಿಗೆ ಎರಡು ಆಣೆ ಇತ್ತು. ಹೆಚ್ಚು ಕಡಿಮೆ ಎರಡೂ ಪತ್ರಿಕೆಗಳು ಒಂದೇ ಕಾಲಘಟ್ಟದಲ್ಲಿ ಒಂದೇ ಪ್ರದೇಶದಿಂದ ಪ್ರಕಟಗೊಳ್ಳುತ್ತಿದ್ದವು.

೮೪. ಕರ್ನಾಟಕ ಪತ್ರಿಕಾ ಇತಿಹಾಸ, ಸಂಪುಟ–೩, ಕರ್ನಾಟಕ ಪತ್ರಿಕಾ, ಬೆಂಗಳೂರು, ಪುಟ. ೫೦.

೮೫. ಡಾ. ಶ್ರೀನಿವಾಸ ಹಾವನೂರ: ಹೊಸಗನ್ನಡದ ಅರುಣೋದಯ, ಪುಟ. ೪೯೩.

೮೬. ಕೃಷ್ಣ ಕೊಲ್ಹಾರ ಕುಲಕರ್ಣಿ: ಅಖಂಡ ಕರ್ನಾಟಕ ಹೆಜ್ಜೆಗಳು, ಪುಟ. ೩೨.

೮೭. ಅದೇ.

೮೮. ಡಾ. ಬಾಳಣ್ಣ ಶೀಗೀಹಳ್ಳಿ: ಡೆಪ್ಯೂಟಿ ಚೆನ್ನಬಸಪ್ಪನವರು ಜೀವನ–ಸಾಧನೆ.ಪುಟ. ೬೬.

೮೯. ಅದೇ ಪುಟ. ೭೭.

೯೦. ಕರ್ನಾಟಕ ಪತ್ರಿಕಾ ಇತಿಹಾಸ, ಸಂಪುಟ-೩, ಕರ್ನಾಟಕ ಪತ್ರಿಕಾ, ಬೆಂಗಳೂರು, ಪುಟ. ೫೨.

೯೧. ಅದೇ ಪುಟ. ೫೨-೫೩.

೯೨. ಭೀಮಪರ್ವ. ಭೀಮಸೇನ ತೋರಗಲ್ಲದ ಅಭಿನಂದನ ಗ್ರಂಥ. ಪುಟ. ೧೫೭.

೯೩. ಡಾ. ಜೆ.ಎಂ. ಚಂದುನವರ: ಪತ್ರಕರ್ತರಾಗಿ ಮೊಹರೆ ಹನುಮಂತರಾಯ. ಪುಟ. ೩೭.

೯೪. ಕರ್ನಾಟಕ ಪತ್ರಿಕಾ ಇತಿಹಾಸ, ಸಂಪುಟ-೩, ಕರ್ನಾಟಕ ಪತ್ರಿಕಾ, ಬೆಂಗಳೂರು, ಪುಟ. ೬೨.

೯೫. ಮಹಾಂತೇಶ ಗದ್ದಿಹಳ್ಳಿಶೆಟ್ಟಿ: ಬೆಳಗಾವಿಯ ಕನ್ನಡ ಪರ ಹೋರಾಟಗಳು ಹಾಗೂ ಸಂಘಟನೆಗಳು, ಬೆಳಗಾವಿ ಬೆಡಗು, ಪುಟ. ೩೦.

೯೬. ಡಾ. ಬಸವರಾಜ ಜಗಜಂಪಿ: ವಿದ್ಯಾರ್ಥಿ ಪ್ರಸಾದ ನಿಲಯ. ಬೆಳಗಾವಿ ಕನ್ನಡ ಕನ್ನಡಿಗ. ಪುಟ. ೧೩೮.

೯೭ ಅದೇ. ಪುಟ. ೧೩೯.

೯೮. ಅದೇ.

೯೯. ಅಕ್ಷರ ಮಂಟಪ ಪ್ರಕಾಶನ, ೨೦೧೦.

೧೦೦. ಗುಂಡೇನಟ್ಟಿ ಮಧುಕರ: ಬೆಳಗಾವಿ ಸಿರಿ. ಪುಟ. ೮೪.

೧೦೧. ಎಚ್. ಎಸ್. ಗೋಪಾಲರಾವ: ಕರ್ನಾಟಕ ಏಕೀಕರಣ ಇತಿಹಾಸ. ಪುಟ. ೧೯೧.

೧೦೨. ಡಾ. ಪಾಟೀಲ ಪುಟ್ಟಪ್ಪ, ನಾಡು-ನುಡಿ, ಪುಟ. ೨೨೯.

೧೦೩. ಗುಂಡೇನಟ್ಟಿ ಮಧುಕರ: ಬೆಳಗಾವಿ ಸಿರಿ. ಪುಟ. ೮೪.

೧೦೪. ಕೃಷ್ಣ ಕೊಲ್ಹಾರ ಕುಲಕರ್ಣಿ: ಅಖಂಡ ಕರ್ನಾಟಕ ಹೆಜ್ಜೆಗಳು, ಪುಟ. ೧೨೯.

೧೦೫. ಗುಂಡೇನಟ್ಟಿ ಮಧುಕರ: ಬೆಳಗಾವಿ ಸಿರಿ. ಪುಟ. ೮೬.

೧೦೬. ಮುದವೀಡು ಕೃಷ್ಣರಾಯ: ಅಧ್ಯಕ್ಷೀಯ ಭಾಷಣ, ಕನ್ನಡ ನುಡಿ-ಫೆಬ್ರುವರಿ, ೨೦೦೩. ಪುಟ. ೮.

೧೦೭. ಸಂದರ್ಶನ: ಡಾ. ಎಸ್. ಆರ್. ಗುಂಜಾಳ. ದಿನಾಂಕ: ೨೦-೦೩-೨೦೦೯. ಶ್ರೀ ಮೋಹನ್ ಬಸನಗೌಡ ಪಾಟೀಲ ದಿನಾಂಕ: ೦೧-೦೩-೨೦೧೦. ಶ್ರೀ ಸ. ರಾ ಸೂಳಕೂಡೆ ದಿನಾಂಕ: ೧೫-೦೫-೨೦೧೧.

೧೦೮. ಪಿ. ಕೆ. ಬಾಗೋಜಿ: ನನ್ನ ಬೆಳಗಾವಿ, ಪುಟ. ೧೮೨.

೧೦೯. ಬಸವರಾಜ ಕಟ್ಟೀಮನಿ. ಅಧ್ಯಕ್ಷೀಯ ಭಾಷಣ. ಬೆಳಗಾವಿ ಸಾಹಿತ್ಯ ಸಮ್ಮೇಳನ ಸಂಪುಟ. ಪುಟ. ೨೮.

೧೧೦. ಗುಂಡೇನಟ್ಟಿ ಮಧುಕರ: ಬೆಳಗಾವಿ ಸಿರಿ. ಪುಟ. ೮೬.

೧೧೧. ರಾಘವೇಂದ್ರ ಜೋಶಿ: ಬೆಳಗಾವಿ-ಕನ್ನಡ ಹೋರಾಟದ ಕೆಲವು ಪುಟಗಳು, ಪುಟ. ೪೭.

೧೧೨. ಸಂದರ್ಶನ: ಸಿದ್ಧನಗೌಡ ಪಾಟೀಲ. ವಯಸ್ಸು-೮೦. ದಿನಾಂಕ:೦೫-೧೦-೨೦೧೦. ಸ್ಥಳ: ಶಿವಬಸವ ನಗರ.



## ಅಧ್ಯಾಯ : ಒಂಬತ್ತು

# ಶಿಕ್ಷಣ

ಆದಿ ಶಿಲಾಯುಗದ ಕಾಲದಿಂದಲೂ ಅತ್ಯಂತ ಮಹತ್ವದ ಮಾನವನ ನೆಲೆಯಾದ ಬೆಳಗಾವಿಯು ಭಾರತದ ಇತಿಹಾಸದಲ್ಲಿ ಅತ್ಯಂತ ವೈಶಿಷ್ಟ್ಯಪೂರ್ಣ ನಗರಗಳಲ್ಲಿ ಒಂದಾಗಿದೆ. ಧಾರ್ಮಿಕ, ಆರ್ಥಿಕ, ಸಾಮಾಜಿಕ, ರಾಜಕೀಯ ಕ್ಷೇತ್ರಗಳಲ್ಲಿ ವಿಶೇಷ ಸಾಧನೆಯನ್ನು ಮಾಡಿದಂತೆ, ಶೈಕ್ಷಣಿಕ ಕ್ಷೇತ್ರದಲ್ಲಿಯೂ ವಿಶಿಷ್ಟವಾದ ಸಾಧನೆಯನ್ನು ಮಾಡಿ ದೇಶ ವಿದೇಶಗಳ ಗಮನವನ್ನು ಸೆಳೆದಿದೆ. ಪ್ರಾಚೀನ ಕಾಲದಲ್ಲಿ ಮಠ. ಮಂದಿರ, ಗುರುಕುಲ, ಅಗ್ರಹಾರಗಳಲ್ಲಿ ಸಾಗಿಬಂದ ಶಿಕ್ಷಣವು ಅರ್ವಾಚಿನ ಘಟ್ಟಕ್ಕೆ ಬರುವ ವೇಳೆಗೆ ಬೇರೆ ಸ್ವರೂಪತಾಳಿದೆ. ಪ್ರಾಚೀನ ಕಾಲದಲ್ಲಿ ಸಂಸ್ಕೃತ, ಪ್ರಾಕೃತ, ಪಾಲಿ, ಕನ್ನಡ ಭಾಷೆಗಳಲ್ಲಿ ಶಿಕ್ಷಣವು ನಡೆದು ಇಂದು ಕನ್ನಡ, ಇಂಗ್ಲಿಷ. ಹಿಂದಿ, ಮರಾಠಿ, ಉರ್ದು ಭಾಷೆಗಳಲ್ಲಿ ನಡೆಯುತ್ತಿದೆ. ಆಧುನಿಕ ಶಿಕ್ಷಣ ಪದ್ಧತಿಯ ಎಲ್ಲ ವಲಯಗಳಲ್ಲಿಯೂ ಶಿಕ್ಷಣ ನೀಡುವ ವ್ಯವಸ್ಥೆಯನ್ನು ಬೆಳಗಾವಿಯು ಹೊಂದಿದೆ. ವೈದ್ಯಕೀಯ, ತಂತ್ರಜ್ಞಾನದ ಶಿಕ್ಷಣವನ್ನು ನೀಡುವ ಮಹತ್ವದ ಶಿಕ್ಷಣ ಸಂಸ್ಥೆಗಳು ಬೆಳಗಾವಿಯಲ್ಲಿ ಉದಯಿಸಿ ದೇಶ ವಿದೇಶಗಳಿಂದ ವಿದ್ಯಾರ್ಥಿಗಳನ್ನು ಆಕರ್ಷಿಸಿ ದೇಶದ ಪ್ರಮುಖ ಶೈಕ್ಷಣಿಕ ನಗರಗಳಲ್ಲಿ ಒಂದಾಗಿ ಗುರುತಿಸಿಕೊಂಡಿದೆ. ಇಂದು ಒಟ್ಟು ಮೂರು ವಿಶ್ವವಿದ್ಯಾಲಯಗಳನ್ನು ಹೊಂದಿದ್ದು ಬೆಳಗಾವಿಯ ವೈಶಿಷ್ಟ್ಯಗಳಲ್ಲೊಂದಾಗಿದೆ. ಬೆಳಗಾವಿಯಲ್ಲಿ ನಡೆದ ಈ ಶೈಕ್ಷಣಿಕ ಕ್ರಾಂತಿಯಿಂದಾಗಿ ಬೆಳಗಾವಿಯು ಸಾಂಸ್ಕೃತಿಕವಾಗಿಯೂ ಬೆಳೆದಿದೆ. ಅಕ್ಷರಜ್ಞಾನದಿಂದ ಜನರ ಜೀವನ ಮಟ್ಟ ಸುಧಾರಿಸಿತು. ಜನರ ಅಜ್ಞಾನ ತೊಲಗಿ ಸಾಮಾಜಿಕ ಬದುಕು ಉತ್ತಮಗೊಂಡಿತು. ಹೀಗೆ ಬೆಳಗಾವಿಯ ಬೆಳವಣಿಗೆಯಲ್ಲಿ ಶಿಕ್ಷಣವು ಮಹತ್ವದ ಪಾತ್ರವನ್ನು ವಹಿಸಿದೆ. ಈ ಹಿನ್ನೆಲೆಯಲ್ಲಿ ಬೆಳಗಾವಿಯ ಶೈಕ್ಷಣಿಕ ಕ್ಷೇತ್ರದ ಅಧ್ಯಯನವು ಮಹತ್ವದ್ದಾಗಿದೆ. ಬೆಳಗಾವಿಯ ಶಿಕ್ಷಣಕ್ಕೆ ಸಂಬಂಧಿ ವಿಷಯವನ್ನು ಮೂರು ಹಂತಗಳಲ್ಲಿ ಗುರುತಿಸಲಾಗಿದೆ. ೧. ಪ್ರಾಚೀನ ಕಾಲದ ಶಿಕ್ಷಣ ೨. ಬ್ರಿಟಿಷ ಕಾಲದ ಶಿಕ್ಷಣ ೩. ಆಧುನಿಕ ಕಾಲದ ಶಿಕ್ಷಣ.

## ೧. ಪ್ರಾಚೀನ ಕಾಲದ ಶಿಕ್ಷಣ :

ಪ್ರಾಚೀನ ಶಿಕ್ಷಣ ಪದ್ಧತಿಯಲ್ಲಿ ವೇದಾಧ್ಯಯನ, ಕಾವ್ಯ, ಶಾಸ್ತ್ರ, ಲಲಿತಕಲೆ, ಸಂಗೀತ, ನೃತ್ಯ, ಶಿಲ್ಪಕಲೆ ಮುಂತಾದ ವಿಷಯಗಳ ಅಧ್ಯಯನವು ನಡೆಯುತ್ತಿತ್ತು. 'ವೇಣುಗ್ರಾಮ'ವೆಂದು ಕರೆಯಲ್ಪಡುವ ದಿನಗಳಲ್ಲಿ ಬೆಳಗಾವಿಯು ವೇದಗಳ ಪ್ರತಿಗಳನ್ನು ತಯಾರಿಸುವ ಪ್ರಮುಖ ಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ.[೧] ಸುಮಾರು ೧೮೦೦ ವರ್ಷಗಳಷ್ಟು ಹಿಂದೆ 'ಪ್ಲೀನಿ' ಎಂಬ ವಿದೇಶಿ ಪ್ರವಾಸಿ ಭಾರತಕ್ಕೆ ಬಂದು ಕರ್ನಾಟಕದ ಪ್ರಮುಖ ಸ್ಥಳಗಳಿಗೆಲ್ಲ ಭೆಟ್ಟಿಕೊಟ್ಟನು. ಈ ಸಂದರ್ಭದಲ್ಲಿ ವೇಣುಗ್ರಾಮಕ್ಕೂ ಭೆಟ್ಟಿಕೊಟ್ಟು ಇಲ್ಲಿನ ವಿಶಿಷ್ಟತೆಯನ್ನು ದಾಖಲಿಸಿದ್ದಾನೆ. ಅವನ ಸಂದರ್ಶನದ ಕಾಲಕ್ಕೆ ವೇಣುಗ್ರಾಮವು ಬಿದಿರು ಬೆಳೆಯುವ ಊರಾಗಿತ್ತು. ಇಲ್ಲಿಯ ಬ್ರಾಹ್ಮಣರು ಗಲಗಿನಿಂದ ವೇದಗಳನ್ನು ನಕಲು ಮಾಡುತ್ತಿದ್ದರು ವೇದಗಳ ಪ್ರತಿಗಳನ್ನು ತಯಾರಿಸುವ ಜ್ಞಾನವನ್ನು ಹೊಂದಿದ ಬೆಳಗಾವಿಯ ಜನರು ಉತ್ತಮವಾದ ಶಿಕ್ಷಣವನ್ನು ಹೊಂದಿದ್ದರು ಎನ್ನುವುದು ಇದರಿಂದ ಸ್ಪಷ್ಟವಾಗುತ್ತದೆ.

ಕ್ರಿ ಪೂ ಒಂದನೆಯ ಶತಮಾನದಲ್ಲಿ. ದೊರೆತ ಶಿಲಾಶಾಸನವು ಶಾತವಾಹನರ ಕಾಲದ ಬೆಳಗಾವಿಯ ಚಿತ್ರಣವನ್ನು ನೀಡುವ ಅತ್ಯಂತ ಮಹತ್ವದ ದಾಖಲೆಯಾಗಿದೆ. ಈ ಶಾಸನವು ಬ್ರಾಹ್ಮೀ ಲಿಪಿಯಲ್ಲಿದ್ದು ಪ್ರಾಕೃತ ಭಾಷೆಯಲ್ಲಿದೆ. ಶಾತವಾಹನರ ಕಾಲದಲ್ಲಿಯ ಶಿಕ್ಷಣವು ಈ ಎರಡೂ ಭಾಷೆಗಳ ಮೂಲಕವೇ ನಡೆಯುತ್ತಿದ್ದುದು ಇದರಿಂದ ಸ್ಪಷ್ಟವಾಗುತ್ತದೆ. ಪ್ರಾಚೀನ ವಿದ್ಯಾಭ್ಯಾಸ ಪದ್ಧತಿಯು ಪ್ರಮುಖವಾಗಿ ಧಾರ್ಮಿಕವಾಗಿತ್ತು. ಅಂದಿನ ಜನರ ಜೀವನದ ಗುರಿ ಆತ್ಮಜ್ಞಾನ ಅಥವಾ ಮೋಕ್ಷ ಸಾಧನೆಯಾಗಿತ್ತು. ಹೀಗಾಗಿ ಈ ಆತ್ಮಜ್ಞಾನವನ್ನು ಪಡೆಯಲು ವಿದ್ಯಾಭ್ಯಾಸವೆನ್ನುವುದು ಒಂದು ಮಾರ್ಗವಾಗಿತ್ತು.

ವಿದ್ಯಾದದಾತಿ ವಿನಯಂ ವಿನಯಾದ್ಯಾತಿ ಪಾತ್ರತಾಂ

ಪಾತ್ರತ್ವಾದ್ಧನಮಾಪ್ನೋತಿ ಧನಾದ್ಧರ್ಮಂ ತತಃ ಸುಖಃ ॥

ವಿದ್ಯೆಯಿಂದ ಬರುವ ಸುಖವೇ ನಿಜವಾದ ಸುಖ. ವಿದ್ಯೆಯಿಂದ ವಿನಯ, ವಿನಯದಿಂದ ಪಾತ್ರತೆ, ಪಾತ್ರತೆಯಿಂದ ಧನ, ಧನದಿಂದ ಧರ್ಮ, ಧರ್ಮದಿಂದ ಸುಖ ಎಂಬುದನ್ನು ಅಂದಿನವರು ಅರಿತಿದ್ದರು.

ಬೆಳಗಾವಿಯ ಸ್ತಂಭ ಶಾಸನದಲ್ಲಿ ಉಲ್ಲೇಖಿತವಾದ ವಿಷಯವೂ ಧಾರ್ಮಿಕವಾದುದ್ದಾಗಿದೆ. ವೈದಿಕರು ಯಜ್ಞಗಳನ್ನು ಮಾಡಿದ ವಿವರವು ಈ ಶಾಸನದಲ್ಲಿ ಉಲ್ಲೇಖಿತಗೊಂಡಿದೆ. ಅಲ್ಲದೆ ಮತ್ತೊಂದು ಗಮನಾರ್ಹ ವಿಶಿಷ್ಟ ಸಂಗತಿಯೆಂದರೆ ಕಲಿಯುಗ ಆರಂಭವಾದ ದಿನದಿಂದ ಸ್ತಂಭವು ಸ್ಥಾಪನೆಯಾಗುವ ವರೆಗಿನ ದಿನಗಳನ್ನು ಉಲ್ಲೇಖಿಸಲಾಗಿದೆ. ಇದರಿಂದ ಪ್ರಾಚೀನ ಬೆಳಗಾವಿಯ ಜನರು ಗಣಿತಶಾಸ್ತ್ರದಲ್ಲಿಯೂ ಹಾಗೂ ಜ್ಯೋತಿಷ್ಯಶಾಸ್ತ್ರದಲ್ಲಿಯೂ ಅಪಾರವಾದ ಜ್ಞಾನವನ್ನು ಹೊಂದಿದ್ದರು ಎನ್ನುವುದು ತಿಳಿದುಬರುತ್ತದೆ.

ಪ್ರಾಚೀನ ಕಾಲದಲ್ಲಿ ಅಗ್ರಹಾರ, ಬ್ರಹ್ಮಪುರಿ, ದೇವಸ್ಥಾನ (ಅಥವಾ ಮಠ, ಜಿನಾಲಯ, ಬೌದ್ಧ ವಿಹಾರಗಳು) ಹಾಗೂ ಘಟಿಕಾಸ್ಥಾನಗಳಲ್ಲಿ ವಿದ್ಯಾಭ್ಯಾಸವು ಸಾಗುತ್ತಿತ್ತು. ಪ್ರಾಚೀನ ಭಾರತದ ಶಿಕ್ಷಣ ಪದ್ಧತಿಯಲ್ಲಿದ್ದ ಈ ವಿದ್ಯಾಭ್ಯಾಸದ ಕೇಂದ್ರಗಳು ಬೆಳಗಾವಿಯಲ್ಲಿರುವುದು ಕಂಡುಬರುತ್ತದೆ. ಅಗ್ರಹಾರಗಳೆಂದರೆ ಅಗ್ರರಿಗೆ (ಶ್ರೇಷ್ಠರಿಗೆ) ಬಿಟ್ಟುಕೊಟ್ಟ ಊರು ಎಂದರ್ಥ. ನಗರಗಳಲ್ಲಿ ಅಥವಾ ಪಟ್ಟಣಗಳಲ್ಲಿ ಬ್ರಾಹ್ಮಣ ವಿದ್ವಾಂಸರು ವಾಸಿಸುವ ಭಾಗವು ಬ್ರಹ್ಮಪುರಿಯಾಗಿತ್ತು. ಶಾತವಾಹನರ ಕಾಲದಲ್ಲಿ ಬ್ರಾಹ್ಮಣರು ಹೆಚ್ಚಿನ ಪ್ರಮಾಣದಲ್ಲಿದ್ದರು ಎನ್ನುವುದು ಇಲ್ಲಿ ನಡೆದ ಯಜ್ಞಗಳ ಮೂಲಕ ತಿಳಿದುಬರುತ್ತದೆ.

ದೇವಸ್ಥಾನಗಳಲ್ಲಿ ವಿಶೇಷವಾಗಿ ಶೈವ ಯತಿಗಳು ವಾಸಿಸುತ್ತಿದ್ದರು. ಇವರು ತಪಃಕರ್ಮದ ಜೊತೆಯಲ್ಲಿ ವಿದ್ಯಾದಾನವನ್ನು ಕೈಕೊಂಡರು. ಶಾತವಾಹನರ ಕಾಲದಲ್ಲಿ ಶೈವಧರ್ಮದ ಹಲವಾರು ಕುರುಹುಗಳು ಬೆಳಗಾವಿಯಲ್ಲಿ ಕಂಡುಬಂದಿದ್ದರಿಂದ ಶೈವಧರ್ಮದ ಪ್ರಭಾವವಿದ್ದುದು ಸ್ಪಷ್ಟವಾಗುತ್ತದೆ.

ಬೌದ್ಧವಿಹಾರಗಳು ಅಶೋಕನ ಕಾಲದಲ್ಲಿಯೇ ದೊಡ್ಡ ಸಂಸ್ಥೆಗಳಾಗಿ ಬೆಳೆದು ಕ್ರಮೇಣ ವಿದ್ಯಾಕೇಂದ್ರಗಳಾಗಿ ಪರಿಣಮಿಸಿದ್ದನ್ನು ಕಾಣಬಹುದು. ಬೆಳಗಾವಿಯ ವಡಗಾವಿ ಪ್ರದೇಶದಲ್ಲಿ ಹಲವಾರು ಬೌದ್ಧವಿಹಾರಗಳು, ಅಗ್ರಹಾರ, ಬ್ರಹ್ಮಪುರಿ, ದೇವಸ್ಥಾನಗಳಂತೆ ಘಟಿಕಾಸ್ಥಾನಗಳೂ ವಿದ್ಯಾಕೇಂದ್ರಗಳಾಗಿದ್ದುದು ಪ್ರಾಚೀನ ಭಾರತದ ಇತಿಹಾಸದ ಅಧ್ಯಯನದಿಂದ ತಿಳಿದು ಬರುತ್ತದೆ. ಆದರೆ ಇವು ಬೆಳಗಾವಿಯಲ್ಲಿರುವ ಬಗೆಗೆ ಸ್ಪಷ್ಟವಾದ ಆಧಾರಗಳು ದೊರೆಯುವುದಿಲ್ಲ. ಪ್ರಾಚೀನ ಸಾಮಾಜಿಕ ವ್ಯವಸ್ಥೆಯು ವೇದಮೂಲವಾಗಿರುವುದು ಸ್ಪಷ್ಟ. ಈ ಹಿನ್ನೆಲೆಯಲ್ಲಿ ವೈದಿಕಧರ್ಮದ ಪ್ರಭಾವವನ್ನು ಹೊಂದಿದ ಪ್ರಾಚೀನ ಬೆಳಗಾವಿಯು ಎಲ್ಲ ವ್ಯವಸ್ಥೆಯಲ್ಲಿಯೇ ಸಾಗಿರುವುದು ಕಂಡುಬರುತ್ತದೆ.

ರಟ್ಟ ವಂಶದ ಪ್ರಸಿದ್ಧರಾಜನಾದ ನಾಲ್ವಡಿ ಕಾರ್ತವೀರ್ಯನು ವೇಣುಗ್ರಾಮವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸುತ್ತಿದ್ದಾಗ ಪಾರ್ಶ್ವಪಂಡಿತನು ಆಸ್ಥಾನದ ಕವಿಯಾಗಿದ್ದನು. ಈತನ ಪ್ರಸಿದ್ಧ ಕೃತಿ ಪಾರ್ಶ್ವನಾಥ ಪುರಾಣದಲ್ಲಿ ರಾಜಕುಮಾರನಿಗೆ ಗುರುಮುಖದಿಂದ ಕಲಿಸಿದ ವಿದ್ಯೆಯನ್ನು ಹೇಳಿದ್ದಾನೆ.[೨] ಐದು ವರ್ಷ ತುಂಬುವ ಸಮಯದಲ್ಲಿ ಒಳ್ಳೇ ಶುಭ ಮುಹೂರ್ತ ನೋಡಿ ರಾಜವಿದ್ಯಾ ವಿಶಾರದರಾಗಿದ್ದ ಆಚಾರ್ಯರನ್ನು ಕರೆಯಿಸಿ ಶಬ್ದಶಾಸ್ತ್ರ, ರಾಜ್ಯತಂತ್ರ ಶಾಸ್ತ್ರ ಮೊದಲಾದ ಎಲ್ಲಾ ಶಾಸ್ತ್ರಗಳನ್ನು ಮುಕ್ತ, ಆಮುಕ್ತ, ಮುಕ್ತಾ ಮುಕ್ತ, ಕರಮುಕ್ತ, ಯಂತ್ರಮುಕ್ತ, ಮಂತ್ರಮುಕ್ತ ಎಂಬ ಪ್ರಭೇದಗಳುಳ್ಳ ಎಲ್ಲಾ ಶಾಸ್ತ್ರ ವಿದ್ಯೆಗಳನ್ನು ಮತ್ತು ತುಂಟತನ ಮಾಡುವ ಹಂದಿ, ಕುದುರೆ, ಮದಸಿದ ಆನೆ ಮೊದಲಾದ ಪ್ರಾಣಿಗಳನ್ನು ವಶಪಡಿಸಿಕೊಳ್ಳುವ ಎಲ್ಲಾ ಬಗೆಯ ಆರೂಢ ವಿದ್ಯೆಗಳನ್ನು ತನ್ನ ಮಗನಿಗೆ ರಾಜನು ಕಲಿಸುವ ಏರ್ಪಾಡು ಮಾಡುತ್ತಿದ್ದನೆಂದು ಉಲ್ಲೇಖಿಸಿದ್ದಾನೆ.

ರಟ್ಟರ ಕಾಲದಲ್ಲಿ ಗುರುಕುಲ ಪದ್ಧತಿಯು ಇದ್ದದ್ದು ಕಂಡುಬ ರುತ್ತದೆ. ವಿದ್ಯಾಕೇಂದ್ರಗಳಲ್ಲಿ ವಾದ್ಯ, ನೃತ್ಯ, ಗೀತಾದಿ ವಿಷಯಗಳಿಗೆ ಹೆಚ್ಚಿನ ಆದ್ಯತೆಯನ್ನು ಕೊಡುತ್ತಿದ್ದರು. ಪಾರ್ಶ್ವಪಂಡಿತನು ತನ್ನ ಪಾರ್ಶ್ವನಾಥ ಪುರಾಣದಲ್ಲಿ

'ಇಂದೋಳ' ಹಾಗೂ 'ಬಸಂತ' ರಾಗಗಳ ಬಗ್ಗೆ ವಿವರಣೆ ನೀಡಿದ್ದಾನೆ. ಸಂಗೀತದಲ್ಲಿ 'ಢಕ್ಕೆ', 'ಮಡಿಕೆ'ಗಳೆಂಬ ಸಂಗೀತ ವಾದನಗಳನ್ನು ಬಳಸುತ್ತಿದ್ದರು. 'ಗಡ' ಎಂಬ ವಾದ್ಯವನ್ನು ಹಾಗೂ 'ಕವುತ' 'ಢೇಂಕಾರ', 'ಮಲದವಡೆ', 'ತುಡುಂಕು', 'ಜಂಕೆಯ', 'ತರಿ', 'ಜತಿ', 'ರಗ್ಗವಣೆ' 'ಪಹರಣಿ' ಮೊದಲಾದ ವಾದ್ಯ ಸಲಕರಣೆಗಳನ್ನು ಸಂಗೀತಕ್ಕೆ ಬಳಸುತ್ತಿದ್ದರು ಎಂದು ಪಾರ್ಶ್ವಪಂಡಿತನು ಹೇಳಿದ್ದಾನೆ.

ಸ್ತ್ರೀ ಶಿಕ್ಷಣ ಹೆಚ್ಚಿನ ಆಧ್ಯತೆಯನ್ನು ನೀಡಿದ ರಟ್ಟರು ಇವರ ಆಳ್ವಿಕೆಯಲ್ಲಿ ನಿರ್ಮಾಣಗೊಂಡ ಶಿವ ದೇವಾಲಯದ ಕೆಲವು ಶಿಲ್ಪಕೃತಿಗಳು ಈ ವಿಷಯವನ್ನು ಸ್ಪಷ್ಟಪಡಿಸುತ್ತವೆ. ಇಲ್ಲಿಯ ಒಂದು ಶಿಲ್ಪವು ಲಿಪಿಸುಂದರಿಯದಾಗಿದ್ದು ಸ್ತ್ರೀಯರು ಅಕ್ಷರ ಜ್ಞಾನವನ್ನು ಹೊಂದಿದ್ದರು ಎನ್ನುವುದನ್ನು ತಿಳಿಸುತ್ತದೆ. ಅಲ್ಲದೆ ಕುಶಲಕಲೆ, ನೃತ್ಯ, ಸಂಗೀತವೂ ಶಿಕ್ಷಣದಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿತ್ತು.

ರಟ್ಟರು ೧೩ನೆಯ ಶತಮಾನದ ಪ್ರಾರಂಭದ ಕೆಲವು ವರ್ಷಗಳವರೆಗೆ ಆಳ್ವಿಕೆಯನ್ನು ನಡೆಸಿದರು. ಮುಂದೆ ಸೇವುಣರ ಆಡಳಿತಕ್ಕೆ ಕೆಲವು ವರ್ಷ ಒಳಪಟ್ಟಿತು. ಹದಿನಾಲ್ಕನೆಯ ಶತಮಾನದ ಪ್ರಥಮಾರ್ಧದಲ್ಲಿ ವಿಜಯನಗರ ಸ್ಥಾಪನೆಯು ಭಾರತೀಯ ಇತಿಹಾಸದಲ್ಲಿಯೇ ಅತ್ಯಂತ ಮಹತ್ವದೆನಿಸಿದೆ. ಕಲೆ, ಸಾಹಿತ್ಯ, ಶಿಕ್ಷಣ, ಸಂಸ್ಕೃತಿ, ಧರ್ಮ–ಹೀಗೆ ಎಲ್ಲ ವಲಯಗಳಲ್ಲಿ ಮಹತ್ವದ ಸಾಧನೆಯೊಂದಿಗೆ ಹಿಂದೂ ಸಂಸ್ಕೃತಿಯನ್ನು ಕಟ್ಟಿ ಬೆಳಸಿದರು. ಇವರ ಆಳ್ವಿಕೆಗೆ ಒಳಪಟ್ಟ ಬೆಳಗಾವಿಯು ಶೈಕ್ಷಣಿಕವಾಗಿ ಬದಲಾವಣೆಗಳನ್ನು ಹೊಂದಿತು.

ವಿಜಯನಗರ ಆಳ್ವಿಕೆಯ ನಂತರ ಬೆಳಗಾವಿಯು ಬಹಮನಿ ಸುಲ್ತಾನರ ಆಡಳಿತಕ್ಕೆ ಒಳಪಟ್ಟಿತು. ಬಹಮನಿ ಅರಸರ ಮಂತ್ರಿಯಾದ ಮಹಮದ್ ಗವಾನನು ಬೆಳಗಾವಿ ಕೋಟೆಯನ್ನು ವಶಪಡಿಸಿಕೊಂಡು ಮುಸ್ತಫಾ ಎಂಬುವನನ್ನು ಅಲ್ಲಿ ತನ್ನ ಪ್ರತಿನಿಧಿಯನ್ನಾಗಿ ನೇಮಿಸಿ, ಬೆಳಗಾವಿಗೆ 'ಮುಸ್ತಾಫಾಬಾದ್' ಎಂದು ಕರೆದನು.[೬] ಇವರ ಕಾಲದಲ್ಲಿ ಇಸ್ಲಾಂಧರ್ಮ ಪ್ರಚಾರಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಿದರು. ಸುನ್ನಿ ಮತ್ತು ಷಿಯಾ ಪಂಥಗಳಿಗೆ ಮಹತ್ವ ನೀಡಿ ಪರ್ಷಿಯಾ ದೇಶದ ಅನೇಕ ಮುಖಂಡರು, ದಾರ್ಶನಿಕರೂ, ತತ್ವಜ್ಞಾನಿಗಳನ್ನು ಬೆಳಗಾವಿಗೆ ಬರಮಾಡಿಕೊಂಡು ಅವರಿಂದ ಧಾರ್ಮಿಕ ಶಿಕ್ಷಣವನ್ನು ಪ್ರಚಾರಪಡಿಸಿದನು.[೪]

ಬಹಮನಿ ಸುಲ್ತಾನರ ನಂತರ ವಿಜಾಪುರ ಆದಿಲ್ ಶಾಹಿಗಳ ಆಡಳಿತಕ್ಕೆ ಒಳಪಟ್ಟ ಬೆಳಗಾವಿಯಲ್ಲಿಯ ಶಿಕ್ಷಣವು ಉರ್ದು, ಪರ್ಶಿಯನ್ ಭಾಷೆಗಳಲ್ಲಿ ನಡೆದದ್ದು ತಿಳಿದು ಬರುತ್ತದೆ. ಬಹಮನಿಗಳಂತೆ ಇವರೂ ಧರ್ಮ ಪ್ರಚಾರಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಿದರು. ಹೀಗಾಗಿ ಬೆಳಗಾವಿಯಲ್ಲಿ ಹಲವಾರು ಮಸಿದಿಗಳು ನಿರ್ಮಾಣಗೊಂಡವು. ಆಡಳಿತವು ಉರ್ದು ಭಾಷೆಯಲ್ಲಿಯೇ ನಡೆಯುತ್ತಿದುದರಿಂದ ಶಿಕ್ಷಣದ ಮಾಧ್ಯಮವೂ ಅದೇ ಭಾಷೆಯಲ್ಲಿಯೇ ಸಾಗುತ್ತಿತ್ತು. ಆದಿಲ್ ಶಾಹಿಗಳ ಕಾಲದ ಹಲವಾರು ಶಾಸನಗಳು ಉರ್ದುಭಾಷೆಯಲ್ಲಿಯೇ ಇರುವುದು ಕಂಡುಬರುತ್ತದೆ.

ಹದಿನೆಳನೆಯ ಶತಮಾನದ ದ್ವಿತೀಯಾರ್ಧದಲ್ಲಿಯೇ ಪ್ರಬುದ್ಧಮಾನಕ್ಕೆ ಬಂದ ಮರಾಠರು ಉತ್ತರ ಕರ್ನಾಟಕದ ಭಾಗದಲ್ಲಿ ರಾಜಕೀಯ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಪರಂಪರೆಯನ್ನು ಆರಂಭಿಸಿದರು. ಇದರಿಂದಾಗಿ ಶಿಕ್ಷಣದ ಮಾಧ್ಯಮವು ಮರಾಠಿ ಮಯವಾಯಿತು. ಭಾಷೆ, ಸಾಹಿತ್ಯ ಸಂಸ್ಕೃತಿಯಲ್ಲಿ ಮರಾಠಿಯು ಪ್ರಾಬಲ್ಯವನ್ನು ಪಡೆದುಕೊಂಡಿತು.

ಪೇಶ್ವೆಗಳ ಕಾಲದಲ್ಲಿ ಬೆಳಗಾವಿಯಲ್ಲಿ ಮೊಡಿಲಿಪಿ ಜಾರಿಯಲ್ಲಿ ಬಂದಿತು. ಮರಾಠಾ ಮತ್ತು ಪೇಶ್ವೆಯರ ಕಾಲದ ಎಲ್ಲ ಪತ್ರ ವ್ಯವಹಾರ ಮೋಡಿಯಲ್ಲೆ ನಡೆಯುತ್ತಿತ್ತು. (ಈಗ ಪುಣೆಯ ಪೇಶ್ವೆ ದಪ್ತರಿನಲ್ಲಿ ಸುಮಾರು ೩೦೦ ರುಮಾಲುಗಳು ಬೆಳಗಾವಿ ಜಿಲ್ಲೆಗೆ ಸಂಬಂಧಿಸಿದ್ದಾಗಿದ್ದು ಅವೆಲ್ಲವೂ ಮೋಡಿಲಿಪಿಯಲ್ಲಿವೆ). ಮೋಡಿ ಲಿಪಿಯಲ್ಲಿ ವೇಗವಾಗಿ ಬರೆಯಲಿಕ್ಕೆ ಅನುಕೂಲವಾಗುವುದರಿಂದ ಈ ಲಿಪಿಯನ್ನು ಬಳಕೆಗೆ ತಂದಿರಬಹುದೆಂದು ಡಾ. ಎಂ. ವೈ. ಸಾವಂತರು ಅಭಿಪ್ರಾಯ ಪಟ್ಟಿದ್ದಾರೆ.[೫]

ಪೇಶ್ವೆಗಳ ಅವರ ಮರಾಠಿ ಭಾಷೆಯ ಒತ್ತಾಯದ ಹೇರಿಕೆಯಿಂದ ಶೈಕ್ಷಣಿಕ ರಂಗಕ್ಕೆ ದೊಡ್ಡ ಪೆಟ್ಟಬಿತ್ತು. ನೀಡಿತು. ಪೇಶ್ವೆಗಳ ಮರಾಠಿ ಭಾಷೆಯ ಹೇರಿಕೆಯನ್ನು ಡಾ. ಎಂ. ಎಂ. ಕಲಬುರ್ಗಿಯವರು ಈ ರೀತಿ ಹೇಳಿದ್ದಾರೆ: ೧೭ನೆಯ ಶತಮಾನದಲ್ಲಿ ಪೇಶ್ವೆಯರು ಕರ್ನಾಟಕದ ಆಡಳಿತ ಸೂತ್ರವನ್ನು ಕೈವಶ ಮಾಡಿಕೊಳ್ಳುವುದೇ ತಡ, ನಿಂತಕಾಲ ಮೇಲೆಯೇ ಕನ್ನಡವನ್ನು ಕೈಬಿಟ್ಟು ಮರಾಠಿಯನ್ನು ಕೈಗೆತ್ತಿಕೊಂಡರು.

ಪೇಶ್ವೆಗಳು ಉತ್ತರ ಕರ್ನಾಟಕದ ಮೇಲೆ ಸಂಪೂರ್ಣ ಅಧಿಕಾರವನ್ನು ಹೊಂದಿ ಅದನ್ನು ಬೇರೆ ಬೇರೆ ಸಂಸ್ಥಾನಿಕರಿಗೆ (ಮಿರ್ಜಿ, ಕಾಗವಾಡ, ಸಾಂಗಲಿ, ಕೊಲ್ಲಾಪೂರ, ಕುರುಂದವಾಡ) ಹಂಚಿದರು. ಈ ಸಂಸ್ಥಾನಿಕರೂ ಮರಾಠಿಯವರೇ ಆಗಿದ್ದರಿಂದ ಕನ್ನಡ ಭಾಷೆ, ಶಿಕ್ಷಣವು ಕ್ಷೀಣಿಸತೊಡಗಿತು. ಅಲ್ಲದೆ ಪೇಶ್ವೆಗಳ ಕಾಲದಲ್ಲಿ ಬ್ರಾಹ್ಮಣರೇ ಎಲ್ಲಾ ಕ್ಷೇತ್ರಗಳಲ್ಲಿ ಹೆಚ್ಚಾಗಿದ್ದರು. ಉನ್ನತ ಹುದ್ದೆಗಳನ್ನೆಲ್ಲಾ ಪಡೆದುಕೊಂಡು ಉಳಿದ ಜಾತಿ, ಧರ್ಮದವರನ್ನು ಬೆಳೆಯಗೊಡದೆ ರಾಜರಿಗೆ ನಿಷ್ಠರಾಗಿ ಉಳಿದರು. ಇದರಿಂದ ಶಿಕ್ಷಣವು ಬ್ರಾಹ್ಮಣೇತರಿಗೆ ನಿಲುಕದಾಯಿತು. ಇವರ ಅವಕಾಶವಾದಿ ಬದುಕಿನಿಂದ ಕನ್ನಡವು ಅಳಿಯತೊಡಗಿತು. ಕನ್ನಡಭಾಷೆಯು ಅಳಿದು ಮರಾಠಿ ಹೆಚ್ಚಾಗಲು ಬ್ರಾಹ್ಮಣರೇ ಕಾರಣರೆಂದು ಡಾ. ಎಂ. ಎಂ. ಕಲಬುರ್ಗಿಯವರು ಅಭಿಪ್ರಾಯಪಟ್ಟಿದ್ದಾರೆ.[೬]

**೨. ಬ್ರಿಟಿಷ್ ಕಾಲದ ಶಿಕ್ಷಣ:**

ಬೆಳಗಾವಿಯಲ್ಲಿ ಶೈಕ್ಷಣಿಕ ವಿಕಾಸವಾದದ್ದು ಬ್ರಿಟಿಷರ ಕಾಲದಲ್ಲಿ. ೧೯ನೆಯ ಶತಮಾನದ ಪ್ರಾರಂಭದಲ್ಲಿ ರಾಜಕೀಯ ಬದಲಾವಣೆಗಳುಂಟಾದವು. ಬ್ರಿಟಿಷರು ದೇಶದ ಒಂದೊಂದೇ ಪ್ರದೇಶಗಳನ್ನು ಕಬಳಿಸುತ್ತ ತಮ್ಮ ಸಾಮ್ರಾಜ್ಯವನ್ನು ವಿಸ್ತರಿಸತೊಡಗಿದರು. ಅಂತೆಯೇ ಕ್ರಿ. ಶ. ೧೮೧೮ರಲ್ಲಿ ಬ್ರಿಟಿಷ ಅಧಿಕಾರಿ ಜನರಲ್ ಮನ್ರೋ ಪೇಶ್ವೆಗಳ ಜೊತೆ ಯುದ್ಧ ಮಾಡಿ ಉತ್ತರ ಕರ್ನಾಟಕದ ಪ್ರದೇಶವನ್ನು ಗೆದ್ದುಕೊಂಡನು. ಇದರಿಂದ ಬೆಳಗಾವಿಯು ಕ್ರಿ. ಶ. ೧೮೧೮ ಮಾರ್ಚ ೧೪ರಂದು ಬ್ರಿಟಿಷರ ವಶವಾಯಿತು.[೭]

ಬ್ರಿಟಿಷರ ಕೈಸೇರಿದ ದಕ್ಷಿಣ ಮಹಾರಾಷ್ಟ್ರವೆಂದು ಕರೆಯಲ್ಪಟ್ಟ ಉತ್ತರ ಕರ್ನಾಟಕದ ೪ ಜಿಲ್ಲೆಗಳು ಮೊದಲಿಗೆ ಬಳ್ಳಾರಿಯ ಕಲೆಕ್ಟರನ ಆಡಳಿತಕ್ಕೆ ಒಳಪಟ್ಟು, ಮದ್ರಾಸ ಅಧಿಪತ್ಯಕ್ಕೆ ಸೇರಿತು. ೧೮೩೦ರಲ್ಲಿ ದಕ್ಷಿಣ ಮಹಾರಾಷ್ಟ್ರ ಪ್ರಾಂತವನ್ನು ಧಾರವಾಡ ಜಿಲ್ಲೆಯೆಂದು ಪರಿಗಣಿಸಲಾಯಿತು. ಮುಂದೆ. ೧೮೩೮ರಲ್ಲಿ ಬೆಳಗಾವಿ ಪ್ರತ್ಯೇಕ ಜಿಲ್ಲೆಯಾಗಿ ರೂಪುಗೊಂಡಿತು.

ಬ್ರಿಟಿಷರ ಆಡಳಿತದಲ್ಲಿಯೂ ಮರಾಠಿ ಶಿಕ್ಷಣವೇ ಪ್ರಧಾನವಾಯಿತು. ಇದಕ್ಕೆ ಮುಖ್ಯ ಕಾರಣ ಉತ್ತರ ಕರ್ನಾಟಕದ ನಾಲ್ಕು ಜಿಲ್ಲೆಗಳಾದ ವಿಜಾಪುರ, ಬೆಳಗಾವಿ, ಕಾರವಾರ, ಧಾರವಾಡಗಳು ಮುಂಬೈ ಪ್ರಾಂತ್ಯದ ಆಡಳಿತ ವಿಭಾಗಕ್ಕೆ ಸೇರಿದವು. ಮುಂಬೈನಿಂದ ದೂರದಲ್ಲಿದ್ದ ಬೆಳಗಾವಿಯು ಬ್ರಿಟಿಷರ ನಿರ್ಲಕ್ಷ್ಯಕ್ಕೆ ಒಳಗಾಯಿತು. ಅಲ್ಲದೆ ಉನ್ನತ ಸ್ಥಾನಗಳಲ್ಲಿದ್ದ ಮರಾಠರು ಕನ್ನಡವನ್ನು ಹೇಳ ಹೆಸರಿಲ್ಲದಂತೆ ಮಾಡಿದರು. ಪೇಶ್ವೆಗಳ ಕಾಲದಲ್ಲಿ ನಲುಗಿದ್ದ ಮಾತೃಭಾಷಾ ಶಿಕ್ಷಣವು ಬ್ರಿಟಿಷರ ಕಾಲದಲ್ಲಿ ಸಂಪೂರ್ಣವಾಗಿ ಅವನತಿಯನ್ನು ಹೊಂದಿತು.

ವೆಂಕಟ ರಂಗೋ ಕಟ್ಟಿಯವರು ಕರ್ನಾಟಕದ ಅಂದಿನ ಸ್ಥಿತಿಗತಿಯ ಚಿತ್ರಣವನ್ನು ಈ ರೀತಿ ತೋರಿಸಿದ್ದಾರೆ: "ಕೊಲ್ಲಾಪೂರ, ಬೀದರ, ನೀಲಗಿರಿ, ಪಶ್ಚಿಮ ಸಮುದ್ರ ಈ ೪ ಮರ್ಯಾದೆಗಳ ಮಧ್ಯದಲ್ಲಿ ವಿಸ್ತಾರವಾಗಿ ಹಬ್ಬಿದ ಸೀಮೆಯು ಕರ್ನಾಟಕವೆಂದೆನಿಸಿಕೊಳ್ಳುತ್ತದೆ. ಈ ದೇಶದ ಕ್ಷೇತ್ರಫಲವು ಸುಮಾರು ೬೬೦೦೦ ಚೌಕು ಮೈಲು. ಇದಕ್ಕೂ ಚಿಕ್ಕದಿದ್ದಾಗ್ಯೂ ಇವೆರಡು ದೇಶಗಳ ಈಗಿನ ಸ್ಥಿತಿಗತಿಗಳನ್ನು ಸರಿನೋಡಲಾಗಿ ಅತಿ ಖೇದವಾದ ವ್ಯತ್ಯಾಸವು ಕಂಡುಬರುತ್ತದೆ. ಮಹಾರಾಷ್ಟ್ರದಲ್ಲಿ ನಾಲ್ಕೈದು ಕಾಲೇಜುಗಳೂ ಬಹುಶಃ ಪ್ರತಿ ಜಿಲ್ಲೆ ಗೊಂದರಂತೆ ಹೈಸ್ಕೂಲುಗಳೂ, ೨೦೦೦ಕ್ಕಿಂತ ಹೆಚ್ಚು ಇತರ ಶಾಲೆಗಳೂ ಇರುತ್ತವೆ. ಕರ್ನಾಟಕದಲ್ಲಿ ಕಾಲೇಜುವೆಂಬ ಹೆಸರೇ ಗೊತ್ತಿಲ್ಲ. ಹೈಸ್ಕೂಲಗಳು ಐದಾರಕ್ಕಿಂತ ಹೆಚ್ಚಿಲ್ಲ. ಇತರ ಶಾಲೆಗಳು(ಪ್ರಾಥಮಿಕ) ಎಲ್ಲ ಸೇರಿ ಆರೇಳು ನೂರರೊಳಗೇ."

ಕಟ್ಟಿಯವರ ಈ ವಿವರಣೆಯಿಂದ ಅಂದಿನ ಕರ್ನಾಟಕದ ಶೈಕ್ಷಣಿಕ ವಲಯದ ವಾಸ್ತವ ಚಿತ್ರಣ ದೊರೆಯುತ್ತದೆ. ಇಷ್ಟೆಲ್ಲ ಅನಾನುಕೂಲತೆಗಳ ನಡುವೆಯೂ ಕನ್ನಡಿಗರು ಮಹಾನ್ ವಿದ್ವಾಂಸರು, ಪಂಡಿತರು ಆಗಿದ್ದರು ಎನ್ನುವುದು ಹೆಮ್ಮೆಯ ವಿಷಯವೆಂದು ಹೇಳಿ ಮೈಸೂರು, ಉಡುಪಿ, ಶೃಂಗೇರಿ, ಸ್ವಾದಿ, ಮಂತ್ರಾಲಯ, ಗದ್ವಾಲ, ಬಾಗಲಕೋಟೆ, ಮುಧೋಳ, ಗಲಗಲಿ, ಖೇಡ ಮುಂತಾದ ಸ್ಥಳಗಳು ವಿದ್ಯಾಪೀಠಗಳೆಂದೆನಿಸಿಕೊಳ್ಳುತ್ತವೆ ಎಂದು ತಿಳಿಸಿದ್ದಾರೆ. 'ಶೋಧಕ' ಪತ್ರಿಕೆಯ ಪ್ರಥಮ ಸಂಪಾದಕೀಯದಲ್ಲಿ (೧೮೭೫) ವೆಂಕಟ ರಂಗೋ ಕಟ್ಟಿಯವರು ಬರೆದ ಈ ಮಾತುಗಳನ್ನು ಡಾ. ಶ್ರೀನಿವಾಸ ಹಾವನೂರರು 'ಹೊಸಗನ್ನಡದ ಅರುಣೋದಯ' ಎಂಬ ತಮ್ಮ ಸಂಶೋಧನ ಪ್ರಬಂಧದಲ್ಲಿ ಉಲ್ಲೇಖಿಸಿದ್ದಾರೆ.

ಬೆಳಗಾವಿಯಲ್ಲಿಯ ಶಿಕ್ಷಣ ವ್ಯವಸ್ಥೆಯ ಸ್ವರೂಪ ಸಾಮಾನ್ಯವಾಗಿ ಎಲ್ಲ ಪ್ರದೇಶಗಳಲ್ಲಿ ಇರುವಂತೆಯೇ ಇತ್ತು. ಅಂದರೆ ಶಿಕ್ಷಣವನ್ನು ನೀಡುವ ಶಾಲೆ (ಮಠ)ಗಳು ಎಲ್ಲ ಹಳ್ಳಿಗಳಲ್ಲಿ ಇರುವಂತೆಯೇ ಇದ್ದವು. ಶಾಲೆಮಠ

(ಈಗ ಸಾಲಿಮಠ) ಹಿರೇಮಠ, ಕಲ್ಮಠ–ಹೀಗೆ ಅನೇಕ ಅಯ್ಯನವರ ಮಠಗಳೇ ಶಿಕ್ಷಣ ನೀಡುವ ಕೇಂದ್ರಗಳಾಗಿದ್ದವು. ಇಲ್ಲಿ ಪರಂಪರಾಗತವಾಗಿ ಬಂದ ಧೂಳಾಕ್ಷರ, ಕಡತ, ಹಸ್ತಪ್ರತಿ ಇವುಗಳ ಮೂಲಕ ಓದು ಮತ್ತು ಬರಹಗಳನ್ನು ಕಲಿಸಲಾಗುತ್ತಿತ್ತು. ಆಗ ಮಕ್ಕಳನ್ನು ಏಳನೆಯ ವರ್ಷಕ್ಕೆ ಅಕ್ಷರಾಭ್ಯಾಸ ಮಾಡಿಸಲು ಕಳಿಸುವ ಪದ್ಧತಿ ಇತ್ತು. ಶಾಲೆಯ ಅಧ್ಯಾಪಕರಿಗೆ ಅಯ್ಯನವರು, ದಾದಾನವರು, ಪಂತೋಜಿಯವರು ಎಂದು ಕರೆಯುತ್ತಿದ್ದರು. ಬೆಳಗಾವಿಯಲ್ಲಿ ಇಂತಹ ಶಾಲೆಗಳು ಹಲವಾರು ಕಡೆಗಳಲ್ಲಿದ್ದುದು ಕಂಡುಬರುತ್ತದೆ. ಕಪಿಲೇಶ್ವರ ದೇವಾಲಯ, ಮಾರುತಿ ದೇವಾಲಯ, ವೀರಭದ್ರ ದೇವಾಲಯ, ಕೋಟೆ ಆವರಣದೊಳಗಿರುವ ಕಮಲ ಬಸದಿ ಮುಂತಾದ ಕಡೆಗಳಲ್ಲಿ ಶಿಕ್ಷಣವು ನಡೆಯುತ್ತಿತ್ತು. ಗುರುಗಳು ವಿದ್ಯಾರ್ಥಿಗಳಿಗೆ ಮೂಲಾಕ್ಷರಗಳನ್ನು ಕಲಿಸುತ್ತಿದ್ದರು. ವಿದ್ಯಾರ್ಥಿಗಳು ಶಾಲೆಗೆ ಹೋಗುವಾಗ ಸ್ವಲ್ಪ ಮಣ್ಣನ್ನು ಒಯ್ಯುತ್ತಿದ್ದರು. ಅದನ್ನು ಶಾಲೆಯಲ್ಲಿ ನೆಲದ ಮೇಲೆ ಹಾಸಿ ಅದರ ಮೇಲೆ ಬರೆಯಲು ಕಲಿಸುತ್ತಿದ್ದರು.[೮] ಮರಾಠಿಯಲ್ಲಿ ಇದಕ್ಕೆ 'ಬಾರಾಖಡಿ' ಎನ್ನುತ್ತಿದ್ದರು. ಮುಂದೆ ಕಟ್ಟಿಗೆಯ ಹಲಿಗೆಯು ಬಂದ ಬಳಿಕ ಈ ಪದ್ಧತಿ ಹೋಯಿತು. ಕಟ್ಟಿಗೆಯ ಹಲಿಗೆಯ ಮೇಲೆ ಬಿಳಿ ಮಟ್ಟಿಯಿಂದ ಸಾರಿಸಿ, ಕೆಮ್ಮಣ್ಣು ಮೇಲೆ ಅದರ ಲೆಕ್ಕಣಿಯಿಂದ ಬರೆಯುವ ಪದ್ಧತಿ ಬಂದಿತು. ೧೯ನೆಯ ಶತಮಾನದ ಅಂತ್ಯದ ವೇಳೆಗೆ ಗಲಗಿನಿಂದ ಬರೆಯುವ ಪದ್ಧತಿಯು ಬಂದಿತು. ಗಲಗನ್ನು ಮಸಿಯಲ್ಲಿ ಎದ್ದಿ ಬರೆಯಲಾಗುತ್ತಿತ್ತು. ಈ ಗಲಗವು ನಾಗರಕೆರೆಯ ದಂಡೆಯಸುತ್ತ ಸಿಗುತ್ತಿತ್ತು.[೯] ಹಲಗೆಯ ಮೇಲೆ ಅಕ್ಷರಗಳನ್ನು ಬರೆಯಲಿಕ್ಕೆ ಕಲಿತ ಮೇಲೆ ಮತಿ ಹಿಡಿಸುವ ಪದ್ಧತಿಯು ಕೆಲವು ಸಂದರ್ಭಗಳಲ್ಲಿ ನಡೆಯುತ್ತಿತ್ತು. ವಿಶೇಷವಾಗಿ ವಿರಶೈವ ಧರ್ಮದ ಶ್ರೀಮಂತವರ್ಗದಲ್ಲಿ ಈ ಪದ್ಧತಿಯು ಕಂಡುಬರುತ್ತಿತ್ತು. ಕೆಲವು ಸಲ ಈ ಮತಿ ಹಿಡಿಸುವ ಪದ್ಧತಿಯು ಸಾಮೂಹಿಕವಾಗಿ ನಡೆಯುತ್ತಿತ್ತು. ಅಂದರೆ ಶಾಲೆಯಲ್ಲಿಯ ಎಲ್ಲ ವಿದ್ಯಾರ್ಥಿಗಳೂ ಈ ಕಾರ್ಯಕ್ರಮದಲ್ಲಿ ಭಾಗವಹಿಸುತ್ತಿದ್ದರು. ಶುಭ–ಮುಹೂರ್ತದಲ್ಲಿ ವಿದ್ಯಾರ್ಥಿಗಳಿಗೆ ಸರಸ್ವತಿ ಗಣಪತಿಯ ಪೂಜೆಯನ್ನು ಮಾಡಿಸಿ, ಗುರು, ಜಂಗಮರಿಗೆ ದಕ್ಷಿಣೆಯನ್ನು ನೀಡುತ್ತಿದ್ದರು. ಈ ಸಂದರ್ಭದಲ್ಲಿ ಬಡವರಿಗೆ ದಾನವನ್ನೂ ನೀಡುತ್ತಿದ್ದರು. ದೇವರ ಸ್ತುತಿಯನ್ನು ಗುರುಗಳು ಬರೆದು ಅದನ್ನು ಓದುವಂತೆ ಹೇಳುತ್ತಿದ್ದರು. ಅವನು ಅದನ್ನು ಓದಿದರೆ ಅವನಿಗೆ ಮತಿ(ಜ್ಞಾನ) ಹಿಡಿದಂತಾಯಿತು ಎನ್ನುವ ನಂಬಿಕೆ ಜನರಲ್ಲಿತ್ತು.[೧೦] ಈ ಮತಿ ಹಿಡಿಸುವ ಪದ್ಧತಿಯು ಉತ್ತರ ಕರ್ನಾಟಕದ ಬಹುಭಾಗಗಳಲ್ಲಿ ಆಗ ಜಾರಿಯಲ್ಲಿತ್ತು.

ಹೀಗೆ ೧೮ ಮತ್ತು ೧೯ ನೆಯ ಶತಮಾನದಲ್ಲಿ ಪೇಶ್ವೆಗಳ ಆಡಳಿತಕ್ಕೆ ಒಳಗಾದ ಬೆಳಗಾವಿ ಪ್ರದೇಶದಲ್ಲಿ ಮರಾಠಿಯ ಶಿಕ್ಷಣವೇ ಪ್ರಧಾನವಾಗಿ ದೇವಸ್ಥಾನ, ಮಠಗಳಲ್ಲಿ ಶಿಕ್ಷಣಕೇಂದ್ರಗಳಾಗಿ ಸಂಪ್ರದಾಯಬದ್ಧವಾದ ಕೆಲವು ಆಚರಣೆ, ನಂಬಿಕೆಗಳ ಮೂಲಕ ಶಿಕ್ಷಣವು ಸಾಗುತ್ತಿತ್ತು. ಕ್ರಿ. ಶ. ೧೮೧೮ರಲ್ಲಿ ಥಾಮಸ್ ಮನ್ರೊ ಉತ್ತರ ಕರ್ನಾಟಕದ ಭಾಗವನ್ನು ಪೇಶ್ವೆಗಳ ಜೊತೆ ಯುದ್ಧವಾಡಿ ಗೆದ್ದುಕೊಂಡ ಸಂದರ್ಭದಲ್ಲಿ ಈ ಪ್ರಾಂತವನ್ನು ಈ ಪ್ರದೇಶವನ್ನು ಮುಂಬೈ ಪ್ರಾಂತಕ್ಕೆ ಸೇರಿಸುವುದು ಯುಕ್ತವಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದನು.[೧೧] ಈ ಭಾಗವನ್ನು

ಮದ್ರಾಸ್ ರಾಜ್ಯಕ್ಕೆ ಸೇರಿಸಿ ಮರಾಠರ ಪ್ರಭುತ್ವವನ್ನು ಅವರ ಆಡಳಿತದ ಹಳೆಯ ನೆನಪನ್ನು ಉಳಿಯಗೊಡದಂತೆ ಮಾಡಬೇಕೆಂದು ಪ್ರತಿಪಾದಿಸಿದನು. ಆದರೆ ಮುಂಬೈ ರಾಜ್ಯಪಾಲರು ಮುಂಬೈಗೆ ಈ ಪ್ರದೇಶವನ್ನು ಸೇರಿಸಬೇಕೆಂದು ವಾದವನ್ನು ಮಾಡಿದನು. ಕೊನೆಗೆ ಈಸ್ಟ ಇಂಡಿಯಾ ಕಂಪನಿಯು ರಾಜ್ಯಪಾಲರ ಹೇಳಿಕೆಯನ್ನು ಮಾನ್ಯ ಮಾಡಿ ಮುಂಬೈ ಪ್ರಾಂತ್ಯಕ್ಕೆ ಸೇರಿಸಿದರು.

ಒಂದು ವೇಳೆ ಮನ್ರೊ ಹೇಳಿದ ರೀತಿಯಲ್ಲಿ ಮದ್ರಾಸ್ ಪ್ರಾಂತ್ಯಕ್ಕೆ ಈ ಭಾಗವು ಸೇರ್ಪಡೆಗೊಂಡಿದ್ದರೆ ಉತ್ತರ ಕರ್ನಾಟಕದ ಸ್ವರೂಪವೇ ಬದಲಾಗುತ್ತಿತ್ತು. ಈಗ ಮಹಾರಾಷ್ಟ್ರಕ್ಕೆ ಸೇರಿದ ಸೊಲ್ಲಾಪುರ, ಕೊಲ್ಲಾಪುರ, ಜತ್ತ, ಅಕ್ಕಲಕೋಟೆ, ಚಂದಗಡ ಪ್ರದೇಶಗಳು ಕರ್ನಾಟಕದಲ್ಲಿಯೇ ಉಳಿಯುತ್ತಿದ್ದವು. ಮನ್ರೊನ ವಾದದಂತೆ ಕೃಷ್ಣಾ ನದಿಯ ದಕ್ಷಿಣಕ್ಕಿರುವ ಪ್ರದೇಶಗಳು, ಸೊಲ್ಲಾಪುರದ ಸಾಂಗ್ಲಿ ಮತ್ತು ಮಿರಜ್‌ಗಳ ಕೆಲವು ಪ್ರದೇಶಗಳನ್ನು ಮುಂಬೈ ಪ್ರಾಂತ್ಯದಿಂದ ಮದರಾಸು ಪ್ರಾಂತ್ಯಕ್ಕೆ ಸೇರಿಸಿದರೆ ಆಡಳಿತ, ವಿದ್ಯಾಭ್ಯಾಸ ಮತ್ತು ಸಾಮಾಜಿಕ ದೃಷ್ಟಿಯಿಂದ ಕನ್ನಡಿಗರೆಲ್ಲರ ಸಾಮರಸ್ಯಕ್ಕೆ ಅನುಕೂಲವಾಗುವುದೆಂದು ಈತನ ವಾದವಾಗಿತ್ತು.

ಬ್ರಿಟಿಷರು ನಾಡಿನ ಆಡಳಿತ ವಹಿಸಿಕೊಂಡ ಮೇಲೆ ಹೊಸ ಶಿಕ್ಷಣಕ್ಕೆ ನಾಂದಿಹಾಡಿದರು. ಶಿಕ್ಷಣ ಪದ್ಧತಿಯಲ್ಲಿದ್ದ ದೋಷಗಳನ್ನು ಗುರುತಿಸಿ ಅದನ್ನೂ ಸುಧಾರಿಸತೊಡಗಿದರು. ಅಂದಿನ ಶಿಕ್ಷಣವು ಹೆಚ್ಚು ವ್ಯಾಪಕವಾಗಿರದೆ ಕೆಲವೇ ಜನರು ಅದರ ಪ್ರಯೋಜನವನ್ನು ಪಡೆಯುತ್ತಿದ್ದರು. ಅಲ್ಲದೆ ಕಲಿಸುವ ವಿಷಯವೂ ಕೇವಲ ಅಕ್ಷರ ಲೆಕ್ಕ ಶಾಸ್ತ್ರ ಕಾವ್ಯಗಳ ಪಠಣ ಇವುಗಳಿಗೆ ಮಾತ್ರ ಸೀಮಿತವಾಗಿತ್ತು. ಮತ್ತೊಂದು ಮಹತ್ವದ ದೋಷವೆಂದರೆ ಕಲಿಸುವ ಶಿಕ್ಷಕರಿಗೆ ಯಾವುದೇ ತರಬೇತಿ ಇಲ್ಲದೆ ತಮಗೆ ಗೊತ್ತಿದ್ದನ್ನು ಮಾತ್ರ ಕಲಿಸುತ್ತಿದ್ದರು. ಸರಿಯಾದ ಪಠ್ಯವಾಗಿಲಿ, ಪಠ್ಯಪುಸ್ತಕವಾಗಲಿ ಹೀಗಾಗಿ ಪ್ರತಿಯೊಂದು ಶಾಲೆಯ ಕಲಿಸುವ ಪದ್ಧತಿ, ಕಲಿಯುವ ವಿಷಯ ಬೇರೆ ಬೇರೆಯಾಗಿತ್ತು. ಈ ಎಲ್ಲ ದೋಷಗಳನ್ನು ಕಂಡುಕೊಂಡ ಬ್ರಿಟಿಷ ಅಧಿಕಾರಿಗಳೂ ಅವುಗಳನ್ನು ಸುಧಾರಿಸಲು ಹಲವಾರು ಯೋಜನೆಗಳನ್ನು ಹಮ್ಮಿಕೊಂಡರು. ಇದರಿಂದ ಹೊಸ ಶಿಕ್ಷಣ ಜಾರಿಗೆ ಬಂದಿತು.

ಕ್ರಿ. ಶ. ೧೮೨೦ರಲ್ಲಿ ಮುಂಬೈ ಪ್ರಾಂತದ ಗವರ್ನರರಾಗಿದ್ದ ಎಲ್‌ಫಿನ್‌ಸ್ಟನ್ ಎಂಬುವವನು ಬಾಂಬೆ ಎಜುಕೇಶನ್ ಸೊಸೈಟಿ' ಮತ್ತು 'ನೇಟಿವ್ ಸ್ಕೂಲ್ ಎಂಡ್ ಬುಕ್ ಸೊಸೈಟಿ'ಗಳನ್ನು ಸ್ಥಾಪಿಸಿ ಶಿಕ್ಷಣ ಮಟ್ಟವನ್ನು ಸುಧಾರಿಸಿದನು. ಇದರಿಂದ ಮುಂಬೈ ಪ್ರಾಂತ್ಯದಲ್ಲಿ ಪಠ್ಯಪುಸ್ತಕಗಳು ರಚನೆಗೊಳ್ಳತೊಡಗಿದವು.

ಕನ್ನಡ ಕ್ರಮಿಕ ಪುಸ್ತಕಗಳು ಮುಂಬೈ ಪ್ರಾಂತದಲ್ಲಿ ಮುದ್ರಣಗೊಳ್ಳತೊಡಗಿದ್ದು ಧಾರವಾಡ ವಿಭಾಗದ ಅಸಿಸ್ಟೆಂಟ್ ಕಲೆಕ್ಟರನಾಗಿದ್ದ ವಾಲ್ಟರ್ ಎಲಿಯಟ್‌ನಿಂದ. ಕ್ರಿ. ಶ. ೧೮೨೬ರಲ್ಲಿ ಧಾರವಾಡದಲ್ಲಿ ಸರಕಾರಿ ಮರಾಠಿ ಶಾಲೆ ಪ್ರಾರಂಭಗೊಂಡಾಗ "ಅದು ತಪ್ಪು" ಇಲ್ಲಿಯ ಜನರ ಭಾಷೆ ಕನ್ನಡ, ಮಾತೃ ಭಾಷೆಯಲ್ಲಿಯೇ ಶಿಕ್ಷಣ ನಡೆಯಬೇಕಾದದ್ದು ನ್ಯಾಯವಾದುದು" ಎಂದು ವರದಿ ಮಾಡಿದನು. ಆದರೆ ಸರಕಾರ ಗಮನಕ್ಕೆ ತೆಗೆದುಕೊಳ್ಳದೆ

ಇದ್ದಾಗ·ಈತನೇ ಒಂದು ಕನ್ನಡ ಶಾಲೆಯನ್ನು ಧಾರವಾಡದಲ್ಲಿ ಆರಂಭಿಸಿದನು. ಇದರ ಖರ್ಚು ವೆಚ್ಚುಗಳನ್ನೂ ತಾನೇ ವಹಿಸಿಕೊಂಡನು.

ಶಿಕ್ಷಣವು ಪ್ರಾದೇಶಿಕ ಭಾಷೆಯಲ್ಲಿಯೇ ಇರಬೇಕು ಎನ್ನುವುದಕ್ಕೆ ಈ ಕಾಲದಲ್ಲಿ ಬಹಳಷ್ಟು ಚರ್ಚೆಗಳು ನಡೆದವು. ಇಂಗ್ಲಿಷ ಭಾಷೆಯನ್ನು ಆಯ್ದುಕೊಂಡ ಮೇಲುವರ್ಗದವರನ್ನು ಕುರಿತು ಲಾರ್ಡ ಕರ್ಜನ್ "ಎಲ್ಲ ಕಡೆಗಳಲ್ಲಿ ಪದಗಳನ್ನು ಅಭ್ಯಾಸ ಮಾಡುತ್ತಾರೆಯೇ ಹೊರತು ಆಲೋಚನೆಗಳನ್ನಲ್ಲ. ಕಾಳುಗಳನ್ನು ಚೆಲ್ಲಾಡಿ ಅಥವಾ ಪೋಲು ಮಾಡಿ ಕೇವಲ ಹೊಟ್ಟನ್ನು ಸ್ವೀಕರಿಸಲಾಗುತ್ತಿದೆ" ಎಂದು ಹೇಳಿದ್ದಾನೆ. ರವೀಂದ್ರನಾಥ ಠಾಗೋರ್‌ರು "ಭಾರತವನ್ನು ಬಿಟ್ಟರೆ, ಜಗತ್ತಿನ ಇನ್ನಾವ ರಾಷ್ಟ್ರದಲ್ಲೂ ಶಿಕ್ಷಣ ಭಾಷೆ ವಿದ್ಯಾರ್ಥಿಯ ಭಾಷೆಗಿಂತ ಭಿನ್ನವಾಗಿರುವಂತ ಈ ಪರಿಸ್ಥಿತಿ ದೊರೆಯುವುದಿಲ್ಲ" ಎಂದಿದ್ದಾರೆ. "ಪ್ರೊ. ಎಚ್. ವೈ. ಲಾಂಗ್ ಹಾರ್ನನ "ಯಾವ ವಿದೇಶಿ ಭಾಷೆಯೂ ಮಾತೃಭಾಷೆಯ ಸ್ಥಾನವನ್ನು ಪಡೆಯಲಾರದು. ಸ್ವತಂತ್ರವಾದ ಆಲೋಚನಾ ಪದ್ಧತಿ, ಸಂಕೀರ್ಣವಾದ ಭಾವಗಳ ಸಹಜ ಹಾಗೂ ಖಚಿತವಾದ ಅಭಿವ್ಯಕ್ತಿ ಸಾಮರ್ಥ್ಯಗಳು ಮಾತೃಭಾಷೆಯಲ್ಲಿಯೇ ಬೆಳೆಯಲು ಸಾಧ್ಯ" ಎಂಬ ಅಭಿಪ್ರಾಯ ಪಟ್ಟಿದ್ದಾರೆ. ಭಾರತದ ಶಿಕ್ಷಣ ವ್ಯವಸ್ಥೆಯ ಬಗ್ಗೆ ಅತ್ಯಂತ ಕಾಳಜಿವಹಿಸಿ ಚಿಂತನೆ ಮಾಡಿದ ಜೇಮ್ಸ್ ವಿಲ್ ಎಂಬುವವನು "ಜನರ ಶಿಕ್ಷಣವನ್ನು ಪ್ರಾದೇಶಿಕ ಭಾಷೆಯಲ್ಲಿಯೇ ನಡೆಸಬೇಕು' ಎಂದು ವಾದಮಾಡಿದನು. ವಾಲ್ಟರ್ ಎಲಿಯಟ್‌ನು ದಕ್ಷಿಣ ಮಹಾರಾಷ್ಟ್ರ ಪ್ರದೇಶವು ಕನ್ನಡ ಪ್ರದೇಶವೆಂದು ತಿಳಿಸಿ ಇಲ್ಲಿ ಕನ್ನಡವೇ ಮಾತೃಭಾಷೆಯಾಗಿದ್ದರಿಂದ ಕನ್ನಡ ಶಾಲೆಗಳನ್ನು ಸ್ಥಾಪಿಸಬೇಕು" ಎಂಬ ವಾದವನ್ನು ಮಂಡಿಸಿದನು. ಈ ಎಲ್ಲ ಅಬಿಪ್ರಾಯಗಳನ್ನು ಗಂಭೀರವಾಗಿ ಪರಿಗಣಿಸಿದ ಮುಂಬೈ ಸರ್ಕಾರವು ೧೮೩೬ರಲ್ಲಿ 'ಸದರನ್ ಮರಾಠಾ ಪ್ರದೇಶದ ಜನರ ಭಾಷೆ ಕನ್ನಡ. ಆದ್ದರಿಂದ ಕನ್ನಡದಲ್ಲೆ ಆಡಳಿತ ಮತ್ತು ಶಿಕ್ಷಣ ಕಾರ್ಯ ನಡೆಯಬೇಕು' ಎಂಬ ಮಹತ್ವಪೂರ್ಣ ನಿರ್ಣಯವನ್ನು ಸ್ವೀಕರಿಸಿತು.

ಬೆಳಗಾವಿಯಲ್ಲಿ ಸರ್ಕಾರಿ ಶಾಲೆಗಳು ಪ್ರಾರಂಭಗೊಂಡದ್ದು ಕ್ರಿ.ಶ. ೧೮೩೦ರಲ್ಲಿ. ಇದೂ ಮರಾಠಿ ಶಾಲೆಯೇ ಆಗಿದ್ದಿತು. ಈಗಾಗಲೇ ೧೮೨೬ರಲ್ಲಿ ಧಾರವಾಡದಲ್ಲಿ ಮರಾಠಿ ಶಾಲೆ ಪ್ರಾರಂಭಗೊಂಡಿದ್ದನ್ನು ವಿರೋಧಿಸಿದ್ದ ವಾಲ್ಟರ್ ಎಲ್ಲಿಯಟ್ ವಾದವನ್ನು ಲೆಕ್ಕಿಸದೆ ಧಾರವಾಡ ಭಾಗದಲ್ಲಿಯೇ ಬೆಳಗಾವಿಯಲ್ಲಿ ಮತ್ತೊಂದು ಮರಾಠಿ ಶಾಲೆಯನ್ನು ಮುಂಬೈ ಸರ್ಕಾರ ಪ್ರಾರಂಭಮಾಡಿತು. ಇದಕ್ಕೆ ಮುಖ್ಯ ಕಾರಣವೆಂದರೆ ಅಂದಿನ ಮುಂಬೈ ಪ್ರಾಂತದಲ್ಲಿದ್ದ ಉನ್ನತ ಹುದ್ದೆಯಲ್ಲಿದ್ದ ಮರಾಠಿ ಅಧಿಕಾರಿ ವರ್ಗ. ಇಂತಹ ಸಂದರ್ಭದಲ್ಲಿಯೇ ಬೆಳಗಾವಿಗೆ ಕ್ರೈಸ್ತ ಮಿಶನರಿಗಳ ಆಗಮನವಾಯಿತು. ಕ್ರೈಸ್ತಧರ್ಮವನ್ನು ಪ್ರಚಾರ ಮಾಡುವ ಮೂಲೋದ್ದೇಶದಿಂದ ಬೈಬಲ್ ಸಾಹಿತ್ಯ ಮತ್ತು ಇತರ ಕ್ರೈಸ್ತ ಸಾಹಿತ್ಯದ ನಿರ್ಮಿತಿಗೆ ಪಾದ್ರಿಗಳು ಕೈಹಾಕಿದರು. ಇದರ ಜೊತೆಗೆ ಶಿಕ್ಷಣವನ್ನು ನೀಡತೊಡಗಿದರು. ಇದರಿಂದ ಉತ್ತರಕರ್ನಾಟಕದ ಭಾಗದಲ್ಲಿ ಮೊಟ್ಟಮೊದಲ ಹಾಯಸ್ಕೂಲು ಕ್ರಿ. ಶ. ೧೮೩೨ರಲ್ಲಿ ಬೆಳಗಾವಿಯಲ್ಲಿ 'ಆಂಗ್ಲೋ

ವ್ಹರ್ನಾಕ್ಯುಲರ ಸ್ಕೂಲ್' ಎಂಬ ಹೆಸರಿನಿಂದ ಪ್ರಾರಂಭಗೊಂಡಿತು. ಈ ಶಾಲೆಯು ಲಂಡನ್ನಿನಿಂದ ಆಗಮಿಸಿದ ಮಿಶನರಿಗಳಾದ ರೆವ್ಹರೆಂಡ ಟೇಲರ, ರೆವರೆಂಡ್ ಸ್ಮಿಥ್ ಹಾಗೂ ರೆವ್ಹರೆಂಡ ಬೆನನ್ ಎಂಬುವವರಿಂದ ಸ್ಥಾಪಿತವಾಯಿತು. ಮುಂದೆ ರೆವ್ಹರೆಂಡ್ ಸ್ಮಿಡ್ ಎನ್ನುವವರು ಈ ಶಾಲೆಯನ್ನು ಉಚ್ಚಮಟ್ಟದಲ್ಲಿ ಬೆಳೆಸಿದರು. ಹೀಗಾಗಿ ೧೮೭೩ರಲ್ಲಿ ಈ ಶಾಲೆಗೆ 'ಬೆನನ್ ಸ್ಮಿತ್ ಹೈಸ್ಕೂಲು' ಎಂದು ಮರುನಾಮಕರಣ ಮಾಡಲಾಯಿತು. ಬೆನನ್ ಸ್ಮಿತ್ ಹೈಸ್ಕೂಲ್ ಸ್ಥಾಪನೆಯೊಂದಿಗೆ ಬೆಳಗಾವಿಯಲ್ಲಿ ಹೊಸಶಿಕ್ಷಣಕ್ಕೆ ನಾಂದಿ ಹಾಡಲಾಯಿತು. ಬೆಳಗಾವಿಯ ಸಾಂಸ್ಕೃತಿಕ ವಿಕಾಸದಲ್ಲಿ, ಶಿಕ್ಷಣದ ಬೆಳವಣಿಗೆಯಲ್ಲಿ ಈ ಹೈಸ್ಕೂಲು ಮಹತ್ವದ ಪಾತ್ರವನ್ನು ವಹಿಸಿತು. ಆಗ ಇಡೀ ಉತ್ತರ ಕರ್ನಾಟಕದಲ್ಲಿಯೇ ಇದೊಂದೇ ಇಂಗ್ಲೀಷ ಮಾಧ್ಯಮದ ಹೈಸ್ಕೂಲಾಗಿತ್ತು. ಈ ಶಾಲೆಯನ್ನು ಬ್ರಿಟಿಷ ಸೈನಿಕರ ಮಕ್ಕಳಿಗೆ ಶಿಕ್ಷಣ ನೀಡುವ ಉದ್ದೇಶದಿಂದ ಸ್ಥಾಪಿಸಲಾಯಿತು. ಮುಂದೆ ಇಂಗ್ಲಿಷ ಶಿಕ್ಷಣ ಪಡೆಯುವ ಆಸಕ್ತಿಯುಳ್ಳ ಉಚ್ಚವರ್ಗದ ಎಲ್ಲ ಜನರು ಅದರಲ್ಲಯೂ ಬ್ರಾಹ್ಮಣರು ಹೆಚ್ಚಿನ ಸಂಖ್ಯೆಯಲ್ಲಿ ಈ ಶಾಲೆಗೆ ಬಂದು ಸೇರಿದರು. ಲಂಡನ್ ಮಿಥನ್ ಮಾದರಿಯಲ್ಲಿ ಶಿಕ್ಷಣವನ್ನು ಕೊಡುವ ಏಕೈಕ ಶಿಕ್ಷಣ ಸಂಸ್ಥೆಯಾಗಿ ಅಂದು ಪ್ರಸಿದ್ಧಿಯನ್ನು ಪಡೆದುಕೊಂಡಿತು. ಮುಂದೆ ೧೮೩೭ರಲ್ಲಿ ಇದನ್ನು ಅಮೇರಿಕನ್ ಮೆಥೊಡಿಸ್ಟ್ ಸಂಸ್ಥೆಗೆ ವರ್ಗಾಯಿಸಲಾಯಿತು. ಹೀಗೆ ಬ್ರಿಟಿಷರ ಆಡಳಿತಕ್ಕೆ ಒಳಪಟ್ಟ ಬೆಳಗಾವಿಯಲ್ಲಿ ಮರಾಠಿ, ಇಂಗ್ಲಿಷ ಶಿಕ್ಷಣವು ಪ್ರಾರಂಭಗೊಂಡಿತು. ಶಿಕ್ಷಣದ ವಿಕಾಸ ಹಂತದಲ್ಲಿ ಕನ್ನಡ ಶಾಲೆಗಳನ್ನು ತೆರೆಯುವ ಮನಸ್ಸು ಸರಕಾರಕ್ಕಿದ್ದರೂ ಇನ್ನುಳಿದ ಮರಾಠಿ ಅಧಿಕಾರಿಗಳ ಪ್ರಭಾವದಿಂದ ಈ ಕಾರ್ಯವಿಳಂಬಗೊಳ್ಳತೊಡಗಿತು. ಮುಂದೆ ೧೮೩೬ರಲ್ಲಿ ಮುಂಬೈ ನಿರ್ಣಯದಂತೆ ಕ್ರಿ. ಶ. ೧೮೩೮ರಲ್ಲಿ ಬೆಳಗಾವಿಯಲ್ಲಿ ಪ್ರಥಮ ಸರಕಾರಿ ಕನ್ನಡ ಪ್ರಾಥಮಿಕ ಶಾಲೆ ಪ್ರಾರಂಭಗೊಂಡಿತು. ಹೀಗೆ ಕ್ರಿ.ಶ. ೧೮೩೮ರ ಅವಧಿಯಲ್ಲಿ ಮರಾಠಿ, ಇಂಗ್ಲಿಷ ಮತ್ತು ಕನ್ನಡ ಭಾಷೆಗಳ ಮೂರು ಶಾಲೆಗಳು ಪ್ರಾರಂಭಗೊಂಡವು ಬೆಳಗಾವಿ ಮತ್ತು ಜಿಲ್ಲೆಯ ಉಳಿದ ಭಾಗಗಳಾದ ಸವದತ್ತಿ, ಸಂಪಗಾವಿ, ಬೀಡಿ, ಬೈಲಹೊಂಗಲ, ಗೋಕಾಕಗಳಲ್ಲಿ ಈ ಸಂದರ್ಭದಲ್ಲಿಯೇ (೧೮೩೦ ರಿಂದ ೧೮೪೦ ಅವಧಿಯಲ್ಲಿ) ಕನ್ನಡ ಪ್ರಾಥಮಿಕ ಶಾಲೆಗಳು ಪ್ರಾರಂಭಗೊಂಡವು. ಆಗ ಕನ್ನಡ ಶಾಲೆಗಳಲ್ಲಿ ಇದ್ದ ದೊಡ್ಡ ಕೊರತೆ ಎಂದರೆ ಕಲಿಸಲು ಪಠ್ಯಪುಸ್ತಕಗಳು ಇಲ್ಲದಿರುವುದು. ಇದರಿಂದ ಕನ್ನಡ ಶಿಕ್ಷಣ ಕುಂಠಿತಗೊಳ್ಳತೊಡಗಿತು. ಮರಾಠಿ ಭಾಷೆಯ ಪ್ರಭಾವಕ್ಕೊಳಗಾದ ಇಲ್ಲಿಯ ಕನ್ನಡಿಗರು ಆ ಭಾಷೆಯ ಹಿಡಿತದಿಂದ ಹೊರ ಬರಲಾರದ ಸ್ಥಿತಿಗೆ ತಲುಪಿದ್ದರು. ವ್ಯವಹಾರ, ಮಾತು, ಆಚರಣೆಗಳಲ್ಲಿ ಮರಾಠಿಯೇ ತುಂಬಿಕೊಂಡಿದ್ದರಿಂದ ಬೆಳಗಾವಿಯ ಕನ್ನಡಿಗರು ಮರಾಠಿ ಶಿಕ್ಷಣಕ್ಕೇ ಹೆಚ್ಚು ಒತ್ತು ಕೊಡತೊಡಗಿದರು.

ಪಠ್ಯ ಪುಸ್ತಕಗಳ ಕೊರತೆಯನ್ನು ಕಂಡುಕೊಂಡಿದ್ದ ಎಲಿಯಟ್‌ನ ನೇತೃತ್ವದಲ್ಲಿ ಕನ್ನಡ ಪಠ್ಯಪುಸ್ತಕಗಳು ಮುಂಬೈ ಪ್ರಾಂತದಲ್ಲಿ ಮೊಟ್ಟ ಮೊದಲ ಬಾರಿಗೆ ಪ್ರಕಟಗೊಂಡವು. ಅವೆಂದರೆ 'ಇಸೋಪನ ನೀತಿ ಕತೆಗಳು', 'ಗಣಿತ ಪುಸ್ತಕ-ಪೂರ್ಣಾಂಕ' ಮತ್ತು 'ಶಾಲಾಪದ್ಧತಿ'. ಈ ಮೂರು ಪುಸ್ತಕಗಳು ಕ್ರಿ.ಶ. ೧೮೩೩ ರಲ್ಲಿ ಬಳ್ಳಾರಿಯ ಮಿಶನ್ ಪ್ರೆಸ್‌ನಲ್ಲಿ ಮುದ್ರಣಗೊಂಡವು.[೨] ಇವು ಅಂದಿನ ಕನ್ನಡ ಪ್ರಾಥಮಿಕ ಶಾಲೆಯ ಪುಸ್ತಕಗಳಾಗಿದ್ದವು.

ಮುಂದೆ ಬಾಳಾಶಾಸ್ತ್ರಿ ಜಾಂಭೇಕರ ಎನ್ನುವವರು ಮುಂಬೈ ಪ್ರಾಂತದ ಶಿಕ್ಷಣಾಧಿಕಾರಿಗಳಾಗಿದ್ದಾಗ ಕನ್ನಡ ಪುಸ್ತಕಗಳ ನಿರ್ಮಿತಿಗಾಗಿ ಸಮಿತಿಯನ್ನು ರಚಿಸಿದರು. ಜಾಂಭೇಕರನೇ ಇದರ ಅಧ್ಯಕ್ಷನಾಗಿದ್ದನು. ಇದರಿಂದ ಹಲವಾರು ಮಹತ್ವದ ಪಠ್ಯಪುಸ್ತಕಗಳು ಈ ಸಂದರ್ಭದಲ್ಲಿ ರಚನೆಗೊಂಡವು. 'ಲಘು ವ್ಯಾಕರಣ, 'ಶಾಲಾ ನಿಯಮಾವಳಿ', 'ಅಪೂರ್ಣಾಂಕ', 'ಬೀಜಗಣಿತ', 'ಏಶಿಯಾ ಖಂಡದ ಭೂಗೋಲ' 'ಭೂಗೋಲ ವಿದ್ಯೆ' ಮತ್ತು 'ಮಹಾರಾಷ್ಟ್ರದ ಇತಿಹಾಸ' ಇವು ಅಂದಿನ ಪ್ರಾಥಮಿಕ ಶಾಲೆಯ ಪಠ್ಯಪುಸ್ತಕಗಳಾಗಿದ್ದವು. ಜಾಂಭೇಕರನು ಕೈಗೊಂಡ ಈ ಪುಸ್ತಕ ಪ್ರಕಟಣೆಯ ಕಾರ್ಯದಿಂದ ಉತ್ತರ ಕರ್ನಾಟಕದ ಭಾಗದಲ್ಲಿ ಶಿಕ್ಷಣ ಪ್ರಗತಿಹೊಂದಲು ಕಾರಣವಾಯಿತು ಎಂಬುದನ್ನು ಮುಂಬಯಿಯ 'ಬೋಡ್ ಆಫ್ ಎಜುಕೇಶನ್'ನವರು ವರದಿಮಾಡಿದ್ದರು ಎನ್ನುವುದನ್ನು ಡಾ. ಶ್ರೀನಿವಾಸ ಹಾವನೂರರು ತಿಳಿಸಿದ್ದಾರೆ.[೧೩]

ಬೆಳಗಾವಿಯ ಶೈಕ್ಷಣಿಕ ಇತಿಹಾಸದಲ್ಲಿ ಒಂದು ಮಹತ್ವದ ಘಟ್ಟವೆಂದರೆ ಸರದಾರ ಹೈಸ್ಕೂಲಿನ ಸ್ಥಾಪನೆ. ಸರದಾರರ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ದಕ್ಷಿಣಭಾಗದ ಸರದಾರರಿಂದ ಮತ್ತು ಜಹಗೀರದಾರರಿಂದ ವಂತಿಗೆ ಸಂಗ್ರಹಿಸಿ ಕ್ರಿ.ಶ. ೧೮೬೦ರಲ್ಲಿ ಸರದಾರ್ಸ ಹೈಸ್ಕೂಲನ್ನು ಸ್ಥಾಪಿಸಲಾಯಿತು. ಈ ಶಾಲೆಯಲ್ಲಿ ಕೇವಲ ದೇಸಾಯಿ, ದೇಶಪಾಂಡೆ, ನಾಡಗೇರ ಮುಂತಾದ ಸರದಾರ ಮಕ್ಕಳಿಗೆ ಮಾತ್ರ ಪ್ರವೇಶವಿತ್ತು. ಅಲ್ಲದೆ ಇಲ್ಲಿ ಮರಾಠಿ ಭಾಷೆಯೇ ಪ್ರಧಾನವಾಗಿತ್ತು. ಶ್ರೀಸಾಮಾನ್ಯರಿಗೆ ಅಲ್ಲಿ ಪ್ರವೇಶವಿರಲಿಲ್ಲ. ಇಲ್ಲಿಯ ವಿದ್ಯಾಭ್ಯಾಸವು ಕೇವಲ ಶ್ರೀಮಂತ ವರ್ಗದ ಸೊತ್ತಾಗಿತ್ತು. ಇಲ್ಲಿ ಕಲಿಯುತ್ತಿರುವ ವಿದ್ಯಾರ್ಥಿಗಳು ಸಂಸ್ಥಾನೀ ರೀವಿಯನ್ನು ನಡೆಸಿಕೊಂಡು ಬಂದವರಾಗಿದ್ದರು. ಇಲ್ಲಿಯ ವಿದ್ಯಾರ್ಥಿಗಳ ವಸತಿಗಾಗಿ ಒಂದು ಭವ್ಯವಾದ ಹಾಸ್ಟೆಲನ್ನು ಕಟ್ಟಲಾಯಿತು. ಇದು ಅತ್ಯಂತ ಸುವ್ಯವಸ್ಥಿತವಾದ ವಸತಿನಿಲಯವಾಗಿತ್ತು. ರಾಜಕುಮಾರರ ಅರಮನೆಯಂತೆ ತಕ್ಕ ವ್ಯವಸ್ಥೆಯನ್ನು ಹೊಂದಿತ್ತು. ಪ್ರತಿಕೋಣೆಯಲ್ಲಿ ಒಬ್ಬ ವಿದ್ಯಾರ್ಥಿ ಮಾತ್ರ ಇರುವ ಸೌಕರ್ಯವಿತ್ತು. ಪ್ರತಿಯೊಂದು ಕೋಣೆಯ ಬಾಗಿಲಿನಲ್ಲೂ ಪಟ್ಟೇವಾಲನ ರೂಪದಲ್ಲಿ ಒಬ್ಬೊಬ್ಬ ಸೇವಕನಿರುತ್ತಿದ್ದನು.[೧೪] ಈ ರೀತಿಯ ವೈಭೋಗದ ವ್ಯವಸ್ಥೆಯಿಂದಾಗಿಯೇ ಅಂದಿನ ಕಾಲದಲ್ಲಿ ಸರದಾರ್ಸ ಹೈಸ್ಕೂಲ ಉತ್ತರ ಕರ್ನಾಟಕದಲ್ಲಿ ಪ್ರತಿಷ್ಠಿತ ಹೈಸ್ಕೂಲ ಎಂಬ ಹೆಸರು ಗಳಿಸಿತು.

ಸರ್ದಾರ ಸ್ಕೂಲಿನ ವಿದ್ಯಾರ್ಥಿಗಳ ಚಿತ್ರಣ ಈ ರೀತಿಯದಾಗಿದ್ದರೆ ಇನ್ನು ಶಿಕ್ಷಣ ನೀಡುವ ಶಿಕ್ಷಕರ ವರ್ಗವೂ ವಿಶಿಷ್ಟವಾಗಿತ್ತು. ಇಲ್ಲಿರುವ ಶಿಕ್ಷಕರಲ್ಲಿ ಹೆಚ್ಚಿನವರು ಮರಾಠಿಗರು ಅದರಲ್ಲಿಯೂ ಬ್ರಾಹ್ಮಣರಾಗಿದ್ದರು. ಶಿಕ್ಷಣದಲ್ಲಿ ಮರಾಠಿಗೇ ಅಗ್ರಮಾನ್ಯ ಸ್ಥಾನಕೊಟ್ಟಿದ್ದರು. ಒಂದು ವೇಳೆ ಯಾರಾದರೂ ಕನ್ನಡದ ಪ್ರಾಧ್ಯಾಪಕರು ಬಂದರೆ ಅವರಿಗೆ ತೊಂದರೆಯನ್ನು ನೀಡಿ ಆದಷ್ಟು ಬೇಗ ಅವರು ಅಲ್ಲಿಂದ ವರ್ಗಾವಣೆಗೊಳ್ಳುವಂತೆ ಮಾಡುತ್ತಿದ್ದರು. ಇಂತಹ ಒಂದು ಪ್ರಸಂಗ–ರಾ.ಹ.ದೇಶಪಾಂಡೆಯವರು ಸಹಾಯಕ ಹೆಡ್ ಮಾಸ್ತರರೆಂದು ಸರದಾರ ಹೈಸ್ಕೂಲಿಗೆ ಬಂದಾಗ ಅಲ್ಲಿದ್ದ ಮರಾಠಿ ಶಿಕ್ಷಕರು ನಾನಾ ತರಹದ ತೊಂದರೆಗಳನ್ನು ನೀಡಿದರು.[೧೫] ಇನ್ನು ವಿದ್ಯಾರ್ಥಿಗಳು

ಕನ್ನಡಿಗರಾಗಿದ್ದರೆ ಅವರಿಗೆ ಮರಾಠಿ ಸಹಪಾಠಿಗಳು ಹಾಗೂ ಶಿಕ್ಷಕರು ತೊಂದರೆಗಳನ್ನು ನೀಡುತ್ತಿದ್ದರು; ಅವಮಾನಿಸುತ್ತಿದ್ದರು. ಕನ್ನಡ ವಿದ್ಯಾರ್ಥಿಗಳ ಬಗ್ಗೆ ತೀರ ಅಸಡ್ಡೆಯನ್ನು ಮರಾಠಿ ಶಿಕ್ಷಕರು ಹೊಂದಿದ್ದರು. ಇಂತಹ ಪರಿಸ್ಥಿತಿಯಲ್ಲಿ ಕನ್ನಡಿಗರು ಕನ್ನಡದ ನೆಲದಲ್ಲಿ ಮರಾಠಿ ಜನರಿಗೆ ತಲೆ ತಗ್ಗಿಸಿ ದೀನ ಭಾವದಿಂದ ಇರಬೇಕಾಗುತ್ತಿತ್ತು.[೧೬] ವೀರಶೈವ ವಿದ್ಯಾರ್ಥಿಗಳು ಇಲ್ಲಿ ಪ್ರವೇಶ ಪಡೆಯುವುದು ಬಲು ದುಸ್ತರವಾಗಿತ್ತು. ಶ್ರೀ ಎಂ. ಆರ್. ಸಾಖರೆಯವರು ಹೆಚ್ಚಿನ ಅಂಕಗಳನ್ನು ಗಳಿಸಿದ್ದರೂ ಅವರಿಗೆ ಅಲ್ಲಿ ಕಲಿಯಲು ಪ್ರವೇಶ ದೊರೆಯಲಿಲ್ಲ ಎನ್ನುವುದು ಇದಕ್ಕೆ ನಿದರ್ಶನ.[೧೭]

ಈ ರೀತಿಯ ಭಾಷೆ, ಧರ್ಮ ಅಂತಸ್ತಿನ ತಾರತಮ್ಯದ ವಾತಾವರಣವನ್ನು ಹೊಂದಿದ ಸರದಾರ ಹೈಸ್ಕೂಲ ಕನ್ನಡಿಗರಿಗೆ, ಬೆಳಗಾವಿಯವರಿಗೆ ಇದ್ದೂ ಇಲ್ಲದಂತಾಯಿತು.ಮರಾಠಿಯ ದಬ್ಬಾಳಿಕೆಯು ಈ ಹೈಸ್ಕೂಲನಲ್ಲಿ ಹಲವಾರು ವರ್ಷಗಳವರೆಗೆ ನಡೆದುಬಂದಿತು. ಆದರೆ ಈ ಹೈಸ್ಕೂಲಿನ ಇಂತಹ ವಾತಾವರಣವೇ ಬೆಳಗಾವಿಯನ್ನು ಸಾಂಸ್ಕೃತಿಕವಾಗಿ ಜಾಗೃತಿ ಮಾಡುತ್ತಾ ಸಾಗಿತು. ಹೈಸ್ಕೂಲಿನ ಮರಾಠಿ ವಾತಾವರಣವೇ ಕನ್ನಡಿಗರನ್ನು ಬಡಿದೆಬ್ಬಿಸಿತು. ಬ್ರಾಹ್ಮಣರ ಬಿಗಿ ಹಿಡಿತ ಲಿಂಗಾಯತರನ್ನು ಸ್ವಾವಲಂಬಿಗಳನ್ನಾಗಿ ಮಾಡುವಲ್ಲಿ ಕಾರಣವಾಯಿತು. ಅದರಿಂದಾಗಿಯೇ ಲಿಂಗಾಯತರು ಸಂಘಟಿಕರಾಗಿ ವಿದ್ಯಾ ಸಂಸ್ಥೆಯನ್ನು ತೆರೆಯುವ ಚಿಂತನೆಯನ್ನು ಮಾಡಿದರು. ಕನ್ನಡವನ್ನು, ಕನ್ನಡಿಗರನ್ನು ಮರಾಠಿಯ ಬಿಗಿ ಹಿಡಿತದಿಂದ ಬಿಡಿಸಬೇಕೆನ್ನುವ ಛಲ ವೀರಶೈವ ಮುಖಂಡರಲ್ಲಿ ಮೂಡಿತು.

ಮುಂಬೈ ಪ್ರಾಂತದ ಆಗಿನ ಸರ್ಕಾರಿ ಶಾಲೆಗಳೆಲ್ಲ 'ಬೋರ್ಡ ಆಫ್ ಎಜ್ಯುಕೇಶನ್' ವಿಭಾಗಕ್ಕೆ ಸೇರಿದ್ದವು. ಮುಂದೆ ೧೮೫೫ ಮೇ ೧ರಂದು ಡಿಪಿಐ (ಡಾಯ್‌ರೆಕ್ಟೋರೆಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್) ಕಚೇರಿ ಅಸ್ತಿತ್ವಕ್ಕೆ ಬಂದಿತು. ಇದರಿಂದಾಗಿ ಉತ್ತರ ಕರ್ನಾಟಕದ ಪ್ರಾಥಮಿಕ ಶಿಕ್ಷಣ ಪ್ರಗತಿಯನ್ನು ಹೊಂದತೊಡಗಿತು.

ಬ್ರಿಟಿಷರ ಕಾಲದಲ್ಲಿ ಸ್ತ್ರೀ ಶಿಕ್ಷಣವೂ ಮಹತ್ವವನ್ನು ಪಡೆದುಕೊಂಡಿತ್ತು. ಈ ಕಾರ್ಯದಲ್ಲಿ ಮಿಶನರಿಗಳೂ ಪ್ರಮುಖ ಪಾತ್ರವನ್ನು ವಹಿಸಿದವು. ಕ್ರಿ.ಶ. ೧೮೫೯ರಲ್ಲಿ ಬೆಳಗಾವಿಯಲ್ಲಿ ಮೊಟ್ಟಮೊದಲ ಮಹಿಳೆಯರಿಗಾಗಿಯೇ ಪ್ರತ್ಯೇಕ ಶಾಲೆ ಪ್ರಾರಂಭವಾಯಿತು. ಯುರೋಪಿಯನ್ ಮಹಿಳೆಯಾದ ಸೆಟನ್‌ಕರ್ ಬೆಳಗಾವಿಯ ಮಾರುತಿ ಬೀದಿಯಲ್ಲಿ ಈ ಹೆಣ್ಣುಮಕ್ಕಳ ಶಾಲೆಯನ್ನು ಪ್ರಾರಂಭಿಸಿದಳು.[೧೮] ಮಹಿಳೆಯೊಬ್ಬಳು ಮಹಿಳಾ ಶಾಲೆಯನ್ನು ಪ್ರಾರಂಭಿಸಿದ್ದು ವಿಶಿಷ್ಟವಾಗಿದೆ. ಈ ಶಾಲೆಯ ಸ್ಥಾಪನೆಯಿಂದ ಬೆಳಗಾವಿಯಲ್ಲಿ ಸ್ತ್ರೀ ಶಿಕ್ಷಣ ಬಲಗೊಳ್ಳತೊಡಗಿತು. ೧೮೫೭ರಲ್ಲಿಯೇ ಇನ್ನೊಂದು ಮಹತ್ವದ ಇಂಗ್ಲಿಷ ಶಾಲೆ ಬೆಳಗಾವಿಯಲ್ಲಿ ಪ್ರಾರಂಭವಾಯಿತು. ಜರ್ಮನ್‌ದ ಜೇಸುಯಿಟ್ಸ ಸಂಸ್ಥೆಯವರು 'ಸೇಂಟ್ ಪಾಲ್ಸ ಹೈಸ್ಕೂಲ' ಎಂಬ ಹೆಸರಿನಿಂದ ಪ್ರಾರಂಭಿಸಿದರು.

೧೮೫೫ರಲ್ಲಿ ದಕ್ಷಿಣ ಮುಂಬೈ ಪ್ರಾಂತದ ಪ್ರತ್ಯೇಕ ಶಿಕ್ಷಣ ಇಲಾಖೆ ಸ್ಥಾಪನೆಗೊಂಡಾಗ ಈ ಇಲಾಖೆಯ ಇನ್ ಸ್ಪೆಕ್ಟರ್ ಆಗಿದ್ದ ಕ್ಯಾಪ್ಟನ್ ಜೆ.ಎಫ್. ಲಿಸ್ಟರ್‌ನು ಶಿಕ್ಷಣದ ಸುಧಾರಣೆಗೆ ಹಲವಾರು ಯೋಜನೆಗಳನ್ನು ಹಾಕಿಕೊಂಡನು.

ಅದರಲ್ಲಿ ಮುಖ್ಯವಾದುದೆಂದರೆ ಶಿಕ್ಷಕರಿಗೆ ತರಬೇತಿ ಶಾಲೆಯನ್ನು ತೆರೆಯುವುದು. ತನ್ನ ಈ ವಿಚಾರವನ್ನು ೧೯೫೫-೫೬ನೆಯ ಸಾಲಿನ ವಾರ್ಷಿಕ ವರದಿಯಲ್ಲಿ ಈ ರೀತಿಯಾಗಿ ವ್ಯಕ್ತಪಡಿಸಿದ- "Untile we have a better set of teachers, there will be very little real use in rapidly expanding ourvernacular schools. what we want is most normal schools and candidates to teachers classes."

ಕ್ಯಾಪ್ಟನ್ ಲಿಸ್ಟರ್‌ನು ಶಿಕ್ಷಣದ ಸುಧಾರಣೆಗಾಗಿ ವ್ಯಕ್ತಪಡಿಸಿದ ಈ ವಿಚಾರವು ಅಂದಿನ ಮುಂಬೈ ಸರ್ಕಾರದ ಗಮನವನ್ನು ಸೆಳೆಯಿತು. ಇದರಿಂದ ಇಡೀ ಮುಂಬೈ ಪ್ರಾಂತದೊಳಗೆ ಭಾಷೆಗನುಗುಣವಾಗಿ ಮರಾಠಿ, ಗುಜರಾತಿ ಕನ್ನಡಭಾಷೆಗಳಲ್ಲಿ ಪ್ರಾಥಮಿಕ ಶಿಕ್ಷಕರ ತರಬೇತಿ ಶಾಲೆಗಳನ್ನು ತೆರೆಯಲು ನಿರ್ಣಯಕೈಗೊಂಡರು. ಈ ನಿರ್ಣಯದಂತೆ ಧಾರವಾಡದಲ್ಲಿ ಫೆಬ್ರುವರಿ ೧೮೫೬ರಲ್ಲಿ 'ನಾರ್ಮಲ್ ಸ್ಕೂಲ' ಪ್ರಾರಂಭಗೊಂಡಿತು.

'ನಾರ್ಮಲ್ ಸ್ಕೂಲ' ಸ್ಥಾಪನೆಯು ಶೈಕ್ಷಣಿಕ ಕ್ಷೇತ್ರದಲ್ಲಿ ಮಹತ್ವದ ಬದಲಾವಣೆಗೆ ಕಾರಣವಾಯಿತು. ಧಾರವಾಡದಲ್ಲಿ ಸ್ಥಾಪನೆಯಾಗಿದ್ದರೂ ಮುಂಬೈ ಪ್ರಾಂತದ ನಾಲ್ಕು ಜಿಲ್ಲೆಯ ವಿದ್ಯಾರ್ಥಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಈ ಸ್ಕೂಲನ್ನು ಸ್ಥಾಪಿಸಲಾಗಿದ್ದರಿಂದ ಬೆಳಗಾವಿಯ ಬೇರೆ ಬೇರೆ ಭಾಗದ ವಿದ್ಯಾರ್ಥಿಗಳು ತರಬೇತಿಯನ್ನು ಪಡೆಯತೊಡಗಿದರು. ಶಿಕ್ಷಣದ ಗುಣಮಟ್ಟ ಸುಧಾರಣೆಗೊಳ್ಳಲು ಇಂತಹ ಶಾಲೆಯ ಅವಶ್ಯಕತೆ ಇತ್ತು. ಅಂದಿನ ಶಿಕ್ಷಕರು ಯಾವುದೇ ತರಬೇತಿಯಿಲ್ಲದೆ ತಮಗೆ ಹೇಗೆ ಬೇಕೋ ಹಾಗೆ ಕಲಿಸುತ್ತಿದ್ದರು. ಈ ಕಲಿಸುವಿಕೆ ಶಾಲೆಯಿಂದ ಶಾಲೆಗೆ ಬೇರೆಯಾಗಿತ್ತು. ಹೀಗಾಗಿ ಶಿಕ್ಷಣದಲ್ಲಿ ಶಿಸ್ತು ಕಾಣದಾಗಿತ್ತು. ಇಂತಹ ಸಂದರ್ಭದಲ್ಲಿಯೇ 'ನಾರ್ಮಲ್ ಸ್ಕೂಲ' ಸ್ಥಾಪನೆಗೊಂಡಿತಾದರೂ ಅಲ್ಲಿ ಕಲಿಯಲು ಹೆಚ್ಚಿನ ವಿದ್ಯಾರ್ಥಿಗಳು ಬರಲೇ ಇಲ್ಲ. ಬಂದವರೆಲ್ಲರೂ ಮರಾಠಿಗರಾಗಿದ್ದರು. ಕನ್ನಡಿಗರಲ್ಲಿ ಶಿಕ್ಷಕರಾಗುವ ಮನಸ್ಸು ಇನ್ನೂ ಮೂಡಿರಲಿಲ್ಲ. ಅಲ್ಲದೆ ಕಲಿತರೂ ಶಿಕ್ಷಕರಾಗಿ ಮರಾಠಿಯನ್ನೇ ಕಲಿಸಬೇಕು ಎನ್ನುವ ವಿಚಾರದಿಂದ ಕನ್ನಡ ವಿದ್ಯಾರ್ಥಿಗಳು ದೂರ ಉಳಿದರು. ಮತ್ತೊಂದು ಕಾರಣವೆಂದರೆ ತರಬೇತಿಯನ್ನು ಪಡೆಯುವುದೆಂದರೆ ಅದು ಅವಮಾನದ ಸಂಗತಿಯಾಗಿತ್ತು. ಏನೂ ಕಲಿಸಲು ಬಾರದವನು ತರಬೇತಿಯನ್ನು ಪಡೆಯುತ್ತಾನೆ ಎನ್ನುವ ನಂಬಿಕೆ ಅನೇಕ ಜನರಲ್ಲಿತ್ತು. ಹೀಗಾಗಿ ತರಬೇತಿಯನ್ನು ಪಡೆಯಲು ಹೋಗಿದ್ದ ಬೆಳಗಾವಿಯ ಕನ್ನಡ ಶಾಲೆಯ ಶಿಕ್ಷಕರಾದ ಸಿದ್ಧಯ್ಯ ಎನ್ನುವವರು ಟ್ರೈನಿಂಗ ಪಡೆಯುವುದು ಅಪಮಾನವೆಂದು ಭಾವಿಸಿ ತಮ್ಮ ವೃತ್ತಿಗೆ ರಾಜೀನಾಮೆ ಕೊಟ್ಟರು.[೧೯] ಇಂತಹ ವಾತಾವರಣದಲ್ಲಿಯೇ 'ನಾರ್ಮಲ್ ಸ್ಕೂಲ' ಕುಂಟುತ್ತಾ ಸಾಗಿತು. ಹತ್ತರಿಂದ ಇಪ್ಪತ್ತು ವಿದ್ಯಾರ್ಥಿಗಳು ಮಾತ್ರ ತರಬೇತಿಗಾಗಿ ಬರುತ್ತಿದ್ದರು. ಬಂದವರಲ್ಲಿ ಹೆಚ್ಚಿನವರು ಮರಾಠಿಗರಿರುತ್ತಿದ್ದರು. ಇಲ್ಲಿ ತರಬೇತಿ ಪಡೆಯುವವರಿಗೆ ತಿಂಗಳಿಗೆ ಮೂರು ರೂಪಾಯಿ ವಿದ್ಯಾರ್ಥಿ ವೇತನವನ್ನು ನೀಡುತ್ತಿದ್ದರು. ಇಷ್ಟೆಲ್ಲ ಅನುಕೂಲತೆಗಳ ನಡುವೆ ಟ್ರೇನಿಂಗ ಪಡೆಯಲು ಕನ್ನಡ ವಿದ್ಯಾರ್ಥಿಗಳು ಬಾರದಿರುವುದು ಅಂದಿನ ಮುಖಂಡರಲ್ಲಿ ಬೇಸರವನ್ನುಂಟುಮಾಡಿತ್ತು. ಸರ್ಕಾರವೂ ಇದನ್ನು ಗಂಭೀರವಾಗಿ

ಪರಿಗಣಿಸಿ 'ನಾರ್ಮಲ್ ಸ್ಕೂಲ'ನ ಸುಧಾರಣೆಗಾಗಿ ಚಿಂತನೆ ನಡೆಸಿ, ಧಾರವಾಡದಿಂದ ಬೆಳಗಾವಿಗೆ 'ನಾರ್ಮಲ್ ಸ್ಕೂಲ'ನ್ನು ಸ್ಥಳಾಂತರಿಸಲು ನಿರ್ಧರಿಸಲಾಯಿತು. ಆಗ ದಕ್ಷಿಣ ವಿಭಾಗದ ವಿದ್ಯಾ ಇಲಾಖೆಯ ಮುಖ್ಯ ಕಚೇರಿಯು ಬೆಳಗಾವಿಯಲ್ಲಿದ್ದಿದ್ದರಿಂದ ಈ ಸಂಸ್ಥೆಯ ಏಳಿಗೆಗೆ ಸಹಕಾರಿಯಾಗುತ್ತದೆ ಎನ್ನುವ ವಿಚಾರದಿಂದ ಕ್ರಿಶ. ೧೮೬೧ರಲ್ಲಿ ಧಾರವಾಡದಿಂದ ಬೆಳಗಾವಿಗೆ ಸ್ಥಳಾಂತರಿಸಲ್ಪಟ್ಟಿತು.[೨೦] ಈ ಸಂದರ್ಭದಲ್ಲಿಯೇ ಡೆಪ್ಯುಟಿ ಚೆನ್ನಬಸಪ್ಪನವರು ಈ ಸ್ಕೂಲಿನ ಪ್ರಿನ್ಸಿಪಾಲರೆಂದು ಅಧಿಕಾರವನ್ನು ವಹಿಸಿಕೊಂಡರು.

'ನಾರ್ಮಲ್ ಸ್ಕೂಲ' ಬೆಳಗಾವಿಗೆ ಸ್ಥಳಾಂತರಗೊಂಡ ಮೇಲೆ ಮತ್ತಷ್ಟು ದುಃಸ್ಥಿತಿಗೆ ಬಂದು ನಿಂತಿತು. ಇಲ್ಲಿ ತರಬೇತಿ ಪಡೆಯಲು ಬರುವವರ ಸಂಖ್ಯೆ ಇಳಿಮುಖವಾಯಿತು. ಅಲ್ಲದೆ ಸಂಪೂರ್ಣ ಮರಾಠಿಯ ವಾತಾವರಣ ಶಾಲೆಯನ್ನು ಆವರಿಸಿತು. ಹೀಗಾಗಿ ಈ ಶಾಲೆಯ ಸುಧಾರಣೆಯ ದೊಡ್ಡ ಜವಾಬ್ದಾರಿ ಚನ್ನಬಸಪ್ಪನವರ ಮೇಲೆ ಬಿದ್ದಿತು. ಅದಕ್ಕಾಗಿ ಹಲವಾರು ಯೋಜನೆಗಳನ್ನು ತಂದರು. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಕೇವಲ ಶಿಕ್ಷಕರಾಗಿದ್ದವರು ಮಾತ್ರ ಇಲ್ಲಿ ತರಬೇತಿಯನ್ನು ಪಡೆಯಲು ಅರ್ಹರೆನ್ನುವ ನಿಯಮವನ್ನು ಸಡಿಲಿಸಿ ಎಲ್ಲರಿಗೂ ಮುಕ್ತವಾದ ಅವಕಾಶವನ್ನು ಕಲ್ಪಿಸಿದರು. ಎರಡನೆಯದಾಗಿ ಎರಡು ಪ್ರತ್ಯೇಕ ಕೋರ್ಸಗಳನ್ನು ಮಾಡಿ ಒಂದು ಆರು ತಿಂಗಳು ಮತ್ತೊಂದು ಎರಡು ವರ್ಷದ ಕೋರ್ಸಗಳನ್ನು ಮಾಡಿದರು. ಆರು ತಿಂಗಳ ಕೋರ್ಸನ ತರಬೇತಿ ಪಡೆದವರು ಹಳ್ಳಿಗಳಲ್ಲಿ ಹೋಗಿ ಶಿಕ್ಷಕರಾಗುವ ಅರ್ಹತೆಯನ್ನು ಹೊಂದಿದ್ದರೆ ಎರಡು ವರ್ಷ ತರಬೇತಿ ಪಡೆದವರು ದೊಡ್ಡ ದೊಡ್ಡ ಊರುಗಳಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸಬಹುದಾಗಿತ್ತು. ಈ ಎರಡು ವರ್ಷದಲ್ಲಿ ಅವರು ಇತಿಹಾಸ, ಭೂಗೋಲ, ಗಣಿತ, ವಿಜ್ಞಾನ, ಸಂಸ್ಕೃತ ಮೊದಲಾದ ವಿಷಯಗಳನ್ನು ಕುರಿತು ಆಳವಾದ ಅಧ್ಯಯನವನ್ನು ಮಾಡಲು ಅವಕಾಶವಿತ್ತು. ಅಲ್ಲದೆ ಪ್ರಾಯೋಗಿಕವಾಗಿ ತರಬೇತಿಯನ್ನು ನೀಡಲು 'ಪ್ರಾಕ್ಟೀಸಿಂಗ್ ಸ್ಕೂಲ್'ನ್ನು ತೆರೆದು ದಿನಾಲು ಒಂದು ತಾಸು ಕಲಿಸುವ ವ್ಯವಸ್ಥೆಯನ್ನು ಮಾಡಿದರು. ಮೂರನೆಯದಾಗಿ ವಿದ್ಯಾರ್ಥಿಗಳನ್ನು ಆಕರ್ಷಿಸಲು ಶಿಷ್ಯವೇತನವನ್ನು ಮೂರು ರೂಪಾಯಿಯಿಂದ ಐದು ರೂಪಾಯಿಗೆ ಹೆಚ್ಚಿಸಿದರು. ನಾಲ್ಕನೆಯ ಮತ್ತೊಂದು ಮಹತ್ವದ ಬದಲಾವಣೆಯೆಂದರೆ 'ನಾರ್ಮಲ್ ಸ್ಕೂಲ'ನ್ನು ಕಾಲೇಜಿನ ಮಟ್ಟಕ್ಕೆ ಏರಿಸಿದುದು. ಇದುವರೆಗೆ ಸ್ಕೂಲ ಆಗಿದ್ದರಿಂದ ಕಲಿಯಲು ಬರುವವರು ಸಂಕೋಚಪಡುತ್ತಿದ್ದರು. ಹೀಗಾಗಿ ಈ ಮನೋಭಾವನೆಯನ್ನು ಹೋಗಲಾಡಿಸಲು ಕ್ರಿಶ. ೧೮೬೪ರಲ್ಲಿ 'ನಾರ್ಮಲ್ ಸ್ಕೂಲ್' ಎಂಬುದು 'ನಾರ್ಮಲ್ ಟ್ರೆನಿಂಗ್' ಕಾಲೇಜ" ಎಂದು ರೂಪುಗೊಂಡಿತು. ಈ ಕಾಲೇಜಿನ ಪ್ರಥಮ ಪ್ರಾಚಾರ್ಯರು ಡೆಪ್ಯುಟಿ ಚನ್ನಬಸಪ್ಪನವರೇ ಆದರು. ಈ ಮಹತ್ವದ ಬದಲಾವಣೆಯಿಂದ ಬೆಳಗಾವಿಯಲ್ಲಿ ಟ್ರೇನಿಂಗ ಕಾಲೇಜು ಮಹತ್ವವನ್ನು ಪಡೆದುಕೊಂಡಿತು. ಕರ್ನಾಟಕ ಸಾಂಸ್ಕೃತಿಕ ಇತಿಹಾಸದ ಉಜ್ವಲ ಅಧ್ಯಾಯಕ್ಕೆ ಇಲ್ಲಿಂದಲೇ ಶ್ರೀಕಾರ ಹಾಕಿದಂತಾಯಿತೆಂದು ಡಾ. ಬಾಳಣ್ಣ ಶೀಗೀಹಳ್ಳಿಯವರು ಹೇಳಿದ್ದಾರೆ.[೨೧]

ಬೆಳಗಾವಿಯಲ್ಲಿ ಪ್ರಾರಂಭವಾದ ಶಿಕ್ಷಕರ ಟ್ರೇನಿಂಗ್ ಕಾಲೇಜು ಉತ್ತರ ಕರ್ನಾಟಕದ ಸಾಂಸ್ಕೃತಿಕ ವಿಕಾಸಕ್ಕೆ ಮುಖ್ಯ ಪ್ರೇರಣೆಯಾಯಿತು. ಅನಕ್ಷರತೆ, ದ್ರಾರಿದ್ರ್ಯ, ಮೂಢನಂಬಿಕೆ, ಭಾಷಾ ನಿರಾಭಿಮಾನದಿಂದ ಬಸವಳಿದಿದ್ದ ಈ ಭಾಗದ ಜನರಿಗೆ ಸುವ್ಯವಸ್ಥಿವಾದ ಶಿಕ್ಷಣವನ್ನು ನೀಡಿ ಜನರಲ್ಲಿ ಜಾಗೃತಿಯನ್ನುಂಟುಮಾಡಿತು. ಡೆಪ್ಯೂಟಿ ಚನ್ನಬಸಪ್ಪನವರು ಈ ಕಾಲೇಜಿನ ಅಭ್ಯುದಯಕ್ಕಾಗಿ ಹಗಲಿರುಳು ಶ್ರಮಿಸಿದರು. ಪುಣೆಯಲ್ಲಿ ತಾವು ಪಡೆದುಕೊಂಡ ಜ್ಞಾನ, ಶಿಕ್ಷಣವನ್ನು ಈ ಸಂಸ್ಥೆಯ ಮೂಲಕ ಸಾಕಾರಗೊಳಿಸಿದರು. ಇಂತಹ ಸಂದರ್ಭದಲ್ಲಿಯೇ ಮತ್ತೊಂದು ಮಹತ್ವದ ಬದಲಾವಣೆ ಶಿಕ್ಷಣ ವಲಯದಲ್ಲಿ ಉಂಟಾಯಿತು–ಅದೆಂದರೆ ವಿಲಿಯಮ್ ಎ. ರಸೆಲ್‌ರು ದಕ್ಷಿಣ ಭಾಗದ ಎಜ್ಯುಕೇಶನ್ ಇನ್‌ಸ್ಪೆಕ್ಟರ ಎಂದು ನೇಮಕಗೊಂಡಿದ್ದು. ಆಕ್ಸ್‌ಫರ್ಡ ವಿಶ್ವವಿದ್ಯಾಲಯದಲ್ಲಿ ಎಂ.ಎ ಪದವೀಧರರಾದ ಕುಶಾಗ್ರ ಬುದ್ಧಿಯ ಇವರು ಪುಣೆಯ ಡೆಕ್ಕನ್ ಕಾಲೇಜಿನ ಪ್ರಿನ್ಸಿಪಾಲರಾಗಿ ಎಜ್ಯುಕೇಶನ್ ಇನ್‌ಸ್ಪೆಕ್ಟರಾಗಿ ಅಪಾರವಾದ ಅನುಭವದೊಂದಿಗೆ ಕ್ರಿ.ಶ. ೧೮೬೫ ರ ಮೇ ತಿಂಗಳಿನಲ್ಲಿ ಬೆಳಗಾವಿ ಭಾಗಕ್ಕೆ ಇನ್‌ಸ್ಪೆಕ್ಟರಾಗಿ ನೇಮಕ ಹೊಂದಿದರು.[೨೨] ಚನ್ನಬಸಪ್ಪನವರ ಕಾಯಕನಿಷ್ಠೆ ರಸೆಲ್‌ರ ಅನುಭವ, ಇವೆರಡು ಸೇರಿ 'ನಾರ್ಮಲ್ ಕಾಲೇಜ್' ಉನ್ನತ ಸ್ಥಾನವನ್ನು ಪಡೆದುಕೊಂಡಿತು. ರಸೆಲ್‌ರು ದಕ್ಷಿಣ ಭಾಗದ ಶಿಕ್ಷಣಾಧಿಕಾರಿಗಳಾಗಿ ಬಂದ ಬಳಿಕ ಕನ್ನಡದ ಸ್ಥಾನಮಾನವನ್ನು ಹೆಚ್ಚಿಸಲು ಯತ್ನಿಸಿದರು. ಕನ್ನಡವನ್ನು ಕಲಿಸಲು ಅತ್ಯಂತ ಸಮರ್ಥರಾದವರನ್ನು ನಿಯಮಿಸಿದರು. ಬೆಳಗಾವಿಯ ಈ ಕಾಲೇಜನ್ನು ಪುಣೆ, ಅಹಮ್ಮದಾಬಾದದ ಕಾಲೇಜುಗಳ ಮಟ್ಟಕ್ಕೆ ತರಲು ಹಣವನ್ನು ನಿಗದಿ ಮಾಡಿದ್ದಾಗಿ ೧೮೬೫–೬೬ ರ ಶೈಕ್ಷಣಿಕ ವರದಿಯಲ್ಲಿ ತಿಳಿಸಿದ್ದಾರೆ.[೨೩]

ರಸೆಲ್‌ರು ಬೆಳಗಾವಿಗೆ ಶಿಕ್ಷಣಾಧಿಕಾರಿಗಳಾಗಿ ಬಂದಾಗ ಶಿಕ್ಷಣ ಕ್ಷೇತ್ರವು ತುಂಬಾ ಶೋಚನೀಯವಾಗಿತ್ತು. ಸರಕಾರದ ಕಾಗದ ಪತ್ರಗಳು ಕನ್ನಡದಲ್ಲಿರಬೇಕೆಂದು ಠರಾವು ಇದ್ದಾಗಲೂ ವಿದ್ಯಾಖಾತೆಯ ಕಾಗದ ಪತ್ರಗಳೆಲ್ಲ ಮರಾಠಿಯಲ್ಲಿಯೇ ಸಾಗುತ್ತಿದ್ದವು. ಅಧಿಕಾರಿಗಳು, ಶಿಕ್ಷಕರು ಇವರೆಲ್ಲವೂ ಮರಾಠಿಯವರೇ ಆಗಿದ್ದರು. ಶಾಲೆಗಳಿಗೆ ಕೇವಲ ಸರ್ಕಾರಿ ನೌಕರರ ಮಕ್ಕಳು, ಬ್ರಾಹ್ಮಣ ಮತದವರು ಮಾತ್ರ ಬರುತ್ತಿದ್ದರು. ವಿದ್ಯಾರ್ಥಿಗಳಿಗೆ ಸರಿಯಾಗಿ ಪಠ್ಯಪುಸ್ತಕಗಳು ಲಭ್ಯವಾಗುತ್ತಿರಲಿಲ್ಲ. ಪುಸ್ತಕಗಳ ಮುದ್ರಣದ ವ್ಯವಸ್ಥೆ ಇರಲಿಲ್ಲ. ಶಿಕ್ಷಕರರಲ್ಲಿ ಶಿಸ್ತೂ ಇರಲಿಲ್ಲ. ಹೀಗೆ ಶಿಕ್ಷಣ ವಲಯದಲ್ಲಿ ಕಂಡುಬಂದ ದೋಷಗಳನ್ನು ಹೋಗಲಾಡಿಸಲು ರಸೆಲ್‌ರು ಪಣತೊಟ್ಟರು. ಶಾಲೆಗಳಲ್ಲಿ ಕನ್ನಡವನ್ನು ಕಡ್ಡಾಯವಾಗಿ ಕಲಿಸಬೇಕು; ಎಲ್ಲ ವ್ಯವಹಾರಗಳನ್ನು ಕನ್ನಡದಲ್ಲಿಯೇ ನಡೆಸಬೇಕು ಎಂದು ನೋಟಿಸು ಹೊರಡಿಸಿದರು. ಕನ್ನಡ ಬಾರದ ಅಧಿಕಾರಿಗಳನ್ನು ಬೇರೆ ಕಡೆಗೆ ವರ್ಗ ಮಾಡಿ ಕನ್ನಡಿಗರನ್ನು ಅವರ ಸ್ಥಾನಕ್ಕೆ ನೇಮಿಸಿದರು. ಕನ್ನಡ ಬಾರದ ಅಧಿಕಾರಿಗಳು ಕಡ್ಡಾಯವಾಗಿ ಕನ್ನಡ ಪರೀಕ್ಷೆಗಳಿಗೆ ಕುಳಿತು ಕನ್ನಡವನ್ನು ಕಲಿಯುವಂತೆ ಮಾಡಿದರು. ಪಠ್ಯ ಪುಸ್ತಕಗಳ ಪ್ರಕಟಣೆಗೆ ವಿಶೇಷ ಕಾಳಜಿವಹಿಸಿ ವೆಂಕಟ ರಂಗೋ ಕಟ್ಟಿಯವರನ್ನು ಕೆನರೀಸ್ ಟ್ರಾನ್ಸಲೇಟರ್ ಎಂದು ಮತ್ತು ಗಂಗಾಧರ ಮಡಿವಾಳೇಶ್ವರ ತುರಮರಿಯವರನ್ನು ಅಸಿಸ್ಟಂಟ ಟ್ರಾನ್ಸಲೇಟರ ಎಂದು ನೇಮಿಸಿದರು. ರಸೆಲ್‌ರ ಮಾರ್ಗದರ್ಶನದಲ್ಲಿ ಈ ಇಬ್ಬರು ಮಾಡಿದ ಕಾರ್ಯವು ಅಂದಿನ ದಿನಗಳಲ್ಲಿ ಕನ್ನಡ

ಸಾಹಿತ್ಯ, ಭಾಷೆ, ಶಿಕ್ಷಣ, ಪ್ರಗತಿ ಹೊಂದಲು ಕಾರಣವಾಯಿತು. ಅತ್ಯಂತ ಉಪಯುಕ್ತವಾದ ಪಠ್ಯಪುಸ್ತಕಗಳನ್ನು ಇವರು ತಯಾರಿಸಿದರು. ಪಠ್ಯಪುಸ್ತಕಗಳನ್ನು ಸರಕಾರಿ ಡಿಪೋಗಳ ಮೂಲಕ ಮಾರಾಟ ಮಾಡುವ ವ್ಯವಸ್ಥೆಯನ್ನು ರಸೆಲ್‌ರು ಕೈಗೊಂಡರು. ಕ್ರಿ. ಶ. ೧೮೬೭-೬೮ರಲ್ಲಿ ಸುಮಾರು ೨೭ ಸಾವಿರ ಕನ್ನಡ ಪಠ್ಯಪುಸ್ತಕಗಳು ಮಾರಾಟವಾದವು. ಪಠ್ಯ ಪುಸ್ತಕಗಳ ಮುದ್ರಣದಲ್ಲಿ ಇನ್ನೂ ಹೆಚ್ಚಿನ ಪ್ರಗತಿಯನ್ನು ಸಾಧಿಸಲು ಬೆಳಗಾವಿಯಲ್ಲಿಯೇ ಒಂದು ಮುದ್ರಣಾಲಯವನ್ನು ಸ್ಥಾಪಿಸಿದರು. ಅದಕ್ಕಾಗಿ ತಮ್ಮ ಸ್ವಂತ ಎರಡು ಸಾವಿರ ರೂಪಾಯಿಗಳನ್ನು ಕೊಟ್ಟರು. ಕ್ರಿ. ಶ. ೧೮೪೯ರಲ್ಲಿ ಮುದ್ರಣಾಲಯವು ಪ್ರಾರಂಭಗೊಂಡಿತು. (ಈ ವಿಷಯವನ್ನು ಅಧ್ಯಾಯ ಎಂಟರಲ್ಲಿ ಮುದ್ರಣಾಲಯಗಳು ಎನ್ನುವ ಭಾಗದಲ್ಲಿ ವಿವರಿಸಲಾಗಿದೆ).

ಕನ್ನಡ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ನೀಡಲು ರಸೆಲ್ ಅವರು ತಮ್ಮ ಸ್ನೇಹಿತನಾದ ವರ್ಥ ಸಾಹೇಬರ ಹೆಸರಿನಲ್ಲಿ 'ವರ್ಥ ಪ್ರಾಯಿಜ್' ಬಹುಮಾನವನ್ನು ಇಟ್ಟರು. ಕನ್ನಡಭಾಷೆಯಲ್ಲಿ ನಿಪುಣರಾದವರಿಗೆ ಈ ಬಹುಮಾನವನ್ನು ನೀಡತೊಡಗಿದರು. ಇದಕ್ಕೆ ಒಂದು ಸಾವಿರ ರೂಪಾಯಿಗಳನ್ನು ಇಟ್ಟು ಅದಕ್ಕೆ ಬರುವ ೪% ರ ಬಡ್ಡಿಯ ಹಣವನ್ನು ಬಹುಮಾನವಾಗಿ ನೀಡತೊಡಗಿದರು. ಕಚೇರಿಯ ಶಿಸ್ತನ್ನು ಬಿಗಿಗೊಳಿಸಿ ಗೈರುಹಾಜರಿರುವವರಿಗೆ ದಂಡವನ್ನು ವಿಧಿಸಿದರು. ಲಂಚ ಪಡೆಯುವವರನ್ನು ಗುರುತಿಸಿ ದಂಡ ವಿಧಿಸಿದರು. ಹೀಗೆ ರಸೆಲ್‌ರು ಉತ್ತರ ಕರ್ನಾಟಕದ ಶೈಕ್ಷಣಿಕ ರಂಗದಲ್ಲಿ ಅಖಂಡ ೨೦ ವರ್ಷಗಳವರೆಗೆ ಸೇವೆ ಸಲ್ಲಿಸಿದರು. ಇದರಿಂದ ಶೈಕ್ಷಣಿಕವಾಗಿ ಕತ್ತಲೆಯಲ್ಲಿದ್ದ ಈ ಪ್ರದೇಶ ಜ್ಞಾನದ ಬೆಳಕನ್ನು ಕಂಡಿತು. ಕನ್ನಡ ಭಾಷೆ, ಸಾಹಿತ್ಯ, ಶಿಕ್ಷಣ, ಸಮಾಜ, ಸಂಸ್ಕೃತಿ-ಹೀಗೆ ಎಲ್ಲ ವಲಯಗಳಲ್ಲಿ ಬೆಳಗಾವಿ ಬದಲಾವಣೆಗಳನ್ನು ಕಾಣತೊಡಗಿತು. ಕನ್ನಡಭಾಷೆ, ಸಂಸ್ಕೃತಿಯ ಮೇಲೆ ಅಭಿಮಾನ ಕಳೆದುಕೊಂಡ ಕನ್ನಡಿಗರನ್ನು ಕನ್ನಡಿಗನಲ್ಲದ ಒಬ್ಬ ಬ್ರಿಟಿಷ್ ಅಧಿಕಾರಿ ಎಚ್ಚರಿಸಿದನು. ನೀವು ಕನ್ನಡಿಗರು ಅದಕ್ಕಾಗಿ ಈ ಪ್ರದೇಶ ನಿಮ್ಮದು ಎನ್ನುವ ಪರಿಜ್ಞಾನವನ್ನು ಕನ್ನಡಿಗರಲ್ಲಿ ತುಂಬಿದರು. ಶಿಕ್ಷಣ ಕೇವಲ ಬ್ರಾಹ್ಮಣರಿಗೆ, ಶ್ರೀಮಂತರಿಗೆ ಅಷ್ಟೇ ಅಲ್ಲ ಎಲ್ಲರಿಗೂ ಬೇಕು ಎನ್ನುವುದನ್ನು ತಿಳಿಸಿಕೊಟ್ಟರು. ಅವರ ಈ ಕಾರ್ಯಸಾಧನೆಗಳನ್ನು ಮೆಚ್ಚಿ ಸರಕಾರವು ಅವರ ಸಂಬಂಧದಲ್ಲಿ ಪ್ರತಿ ತಿಂಗಳು ೧೦೦ ರೂಪಾಯಿಗಳನ್ನು ಹೆಚ್ಚಿಗೆ ನೀಡತೊಡಗಿತು. ರಸೆಲ್‌ರ ಈ ಕಾರ್ಯಸಾಧನೆಯ ಫಲವೂ ಮಹತ್ವದ್ದಾಗಿದೆ. ಇಡೀ ಉತ್ತರ ಕರ್ನಾಟಕದ ನಾಲ್ಕು ಜಿಲ್ಲೆಗಳಲ್ಲಿ ಮಹಾರಾಷ್ಟ್ರದ ಭಾಷೆ, ಸಾಹಿತ್ಯ, ಸಂಸ್ಕೃತಿ ಒಂದೊಂದೇ ಹೆಜ್ಜೆಗಳನ್ನು ಹಿಂದಿಡತೊಡಗಿತು. ಇದು ಕಣ್ಣಿಗೆ ಕಾಣದು. ಆದರೆ ಅಂದಿನ ಒಟ್ಟು ಪರಿಸರವನ್ನು ಅವಲೋಕಿಸಿದಾಗ ಈ ಸತ್ಯವನ್ನು ಒಪ್ಪಲೇಬೇಕಾಗುತ್ತದೆ.

ಡೆಪ್ಯುಟಿ ಚನ್ನಬಸಪ್ಪನವರು ಟ್ರೇನಿಂಗ್ ಕಾಲೇಜನ್ನು ಬೆಳಗಾವಿಯಲ್ಲಿ ಸ್ಥಾಪಿಸುವದರ ಮೂಲಕ ಉತ್ತರ ಕರ್ನಾಟಕದ ಶೈಕ್ಷಣಿಕ ವಲಯಕ್ಕೆ ಭದ್ರವಾದ ಬುನಾದಿಯನ್ನು ಹಾಕಿದಂತೆ, ಹೊಸಗನ್ನಡ ಸಾಹಿತ್ಯದ ಉದಯಕ್ಕೂ ಶ್ರೀಕಾರ ಹಾಕಿದರು. ಕ್ರಿ. ಶ. ೧೮೬೫ರಲ್ಲಿ ಬೆಳಗಾವಿ ನೆಲದಲ್ಲಿ ಹುಟ್ಟಿದ 'ಮಠ ಪತ್ರಿಕೆ'ಯ ಮೂಲಕ ಕನ್ನಡ ಸಾಹಿತ್ಯಕ್ಕೆ ಹೊಸಹಾದಿಯನ್ನೂ ಚನ್ನಬಸಪ್ಪನವರು ನಿರ್ಮಿಸಿದರು. (ಈ ಮಠ ಪತ್ರಿಕೆಯ ವಿವರವಾದ ಮಾಹಿತಿಯನ್ನು

'ಭಾಷೆ–ಸಾಹಿತ್ಯ–ಸಂವಹನ')ಎಂಬ ಅಧ್ಯಾಯದ 'ಪತ್ರಿಕೆಗಳು' ಎಂಬ ಭಾಗದಲ್ಲಿ ವಿವೇಚಿಸಲಾಗಿದೆ. ಇಲ್ಲಿ ಪತ್ರಿಕೆಯ ಶೈಕ್ಷಣಿಕ ಕೊಡುಗೆಯನ್ನು ಮಾತ್ರ ವಿವರಿಸಲಾಗಿದೆ) ಮಠ ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದ ಶೈಕ್ಷಣಿಕ ವಿಷಯಗಳನ್ನು ಕುರಿತು ಡಾ. ಬಾಳಣ್ಣ ಶೀಗೀಹಳ್ಳಿಯವರು ತಮ್ಮ ಡೆಪ್ಯುಟಿ ಚನ್ನಬಸಪ್ಪನವರು ಜೀವನ–ಸಾಧನೆ ಎನ್ನುವ ಮಹಾಪ್ರಬಂಧದಲ್ಲಿ ಈ ರೀತಿ ಉಲ್ಲೇಖಿಸಿದ್ದಾರೆ.

೧. ವಿದ್ಯಾರ್ಥಿಗಳಿಗೆ ಕಲಿಸುವ ಕ್ರಮ ಪದ್ಧತಿಗಳು

೨. ನಿಯಮಗಳು

೩. ಈ ಖಾತೆಗೆ ಸಂಬಂಧಿಸಿದ ಕೆಲಸಾಳಿಗಳ ನೇಮಕಾತಿಗಳು

೪. ಅನೇಕ ವಿಧವಾದ ವಿದ್ಯಾವೃದ್ಧಿಕರವಾದ ಸದ್ಬೋಧನೆಗಳು

೫. ಸರಕ್ಯೂಲರ್–ಹುಕುಮುಗಳು

೬. ವರ್ತಮಾನ ಸಮಾಚಾರಗಳು

೭. ಮಠಗಳ ಗುರು(ಪಂತರು)ಗಳಿಗೆ ಸಂಬಳ ಹೆಚ್ಚಾಗುವ ಬಗ್ಗೆ ಕೊಡಲ್ಪಟ್ಟ ಸರಕ್ಯೂಲರ್ ಹುಕುಮುಗಳು

ಇವುಗಳಲ್ಲದೆ ಕೆಲವು ನಾನಾವಿಧವಾದ ಶಾಸ್ತ್ರವರ್ಣನೆಗಳು ಸಹ ಪ್ರಸಂಗವತ್ತಾಗಿ ಬರಿಯಲ್ಪಡುವವು.

ಪತ್ರಿಕೆಯಲ್ಲಿ ಪ್ರಕಟಗೊಳ್ಳುತ್ತಿರುವ ಈ ವಿಷಯಗಳನ್ನು ಗಮನಿಸಿದಾಗ ಇದೊಂದು ಶೈಕ್ಷಣಿಕ ಪತ್ರಿಕೆ ಎನ್ನುವುದು ಸ್ಪಷ್ಟವಾಗುತ್ತದೆ. ಪತ್ರಿಕೆಯ ಹೆಸರೇ ಸೂಚಿಸುವಂತೆ ಅಂದಿನ ಶಾಲೆಗಳಿಗೆ ಮಠ ಎನ್ನುವ ರೂಢಿಯಿದ್ದದ್ದರಿಂದ ಶಾಲೆಗೆ ಸಂಬಂಧಿಸಿದ ವಿಷಯಗಳು ಇದರಲ್ಲಿ ಪ್ರಕಟಗೊಳ್ಳುತ್ತಿದ್ದವು.

'ಮಠ ಪತ್ರಿಕೆ' ಯ ಮತ್ತೊಂದು ಮಹತ್ವದ ಕಾರ್ಯವೆಂದರೆ ಹೊಸಗನ್ನಡ ಸಾಹಿತ್ಯವನ್ನು ಪೋಷಿಸಿದ್ದು. ಪ್ರಾಚೀನ ಗ್ರಂಥಗಳ ಸಂಪಾದನೆ, ಪರಿಷ್ಕರಣೆ, ಸಂಶೋಧನೆಗಳಿಗೆ ವ್ಯಾಖ್ಯಾನ, ಟೀಕೆ–ಟಿಪ್ಪಣಿಗಳನ್ನು ಬರೆಯುವ, ಪ್ರಕಟಿಸುವ ಮಹತ್ವದ ಕಾರ್ಯವನ್ನು ಈ ಪತ್ರಿಕೆ ಕೈಗೊಂಡಿತು. ಹೀಗಾಗಿ ಹೊಸ ಸಾಹಿತ್ಯದ ಬೆಳವಣಿಗೆಗೆ ಬೆಳಗಾವಿ ನೆಲೆಯಾಯಿತು. ನಾಡಿನ ಹಲವಾರು ಪ್ರಮುಖ ಕವಿಗಳು, ಸಾಹಿತಿಗಳು, ಸಂಶೋಧಕರು ಈ ಪತ್ರಿಕೆಯ ಮೂಲಕ ಬೆಳಕಿಗೆ ಬಂದರು. ಚನ್ನಬಸಪ್ಪನವರು ಬೆಳಗಾವಿ ಜಿಲ್ಲೆಯ ಡೆಪ್ಯುಟಿ ಇನ್ ಸ್ಪೆಕ್ಟರರಾಗಿ ೧೮೬೬ ರಿಂದ ೧೮೬೯ರ ವರೆಗೆ ಮೂರು ವರ್ಷಗಳ ಕಾಲ ಹಲವಾರು ಮಹತ್ವದಕಾರ್ಯಗಳನ್ನು ಕೈಗೊಂಡರು. ಕನ್ನಡ ಶಾಲೆಗಳ ಪ್ರಾರಂಭ, ಪಠ್ಯಪುಸ್ತಕಗಳ ಮುದ್ರಣ, ಕನ್ನಡಿಗರಲ್ಲಿ ಕನ್ನಡಾಭಿಮಾನವನ್ನು ಮೂಡಿಸುವುದು, ಆಡಳಿತದಲ್ಲಿ ಸಂಪೂರ್ಣವಾಗಿ ಕನ್ನಡವನ್ನು ಜಾರಿಗೊಳಸುವುದು, ಇವೇ ಮೊದಲಾದ ಕಾರ್ಯಗಳಿಂದ ಬೆಳಗಾವಿಯಲ್ಲಿ ಕನ್ನಡ ಬೆಳೆಯುವಂತಾಯಿತು.

ಡೆಪ್ಯುಟಿ ಚನ್ನಬಸಪ್ಪನವರು ಬೆಳಗಾವಿ ಭಾಗದ ಡೆಪ್ಯುಟಿ ಇನ್‌ಸ್ಪೆಕ್ಟರರಾಗಿದ್ದಾಗಲೇ ಮಾಡಿದ ಮತ್ತೊಂದು ಮಹತ್ವದ ಕಾರ್ಯವೆಂದರೆ, ಉಚಿತ ಪ್ರಸಾದ ನಿಲಯವನ್ನು ಸ್ಥಾಪಿಸಿದ್ದು. ಕ್ರಿ. ಶ. ೧೮೬೮ರಲ್ಲಿ ಬೆಳಗಾವಿಯಲ್ಲಿ ಸ್ಥಾಪಿಸಲ್ಪಟ್ಟ ಈ ಪ್ರಸಾದ ನಿಲಯವು ರಾಜ್ಯದ ಮೊಟ್ಟ ಮೊದಲ ಪ್ರಸಾದ ನಿಲಯವಾಗಿದೆ. ಇಲ್ಲಿಂದಲೇ ಫ್ರೀ ಬೋರ್ಡಿಂಗ್‌ಗಳು ಕರ್ನಾಟಕದಲ್ಲಿ ಪ್ರಾರಂಭಗೊಳ್ಳತೊಡಗಿದವು.

ಡೆಪ್ಯುಟಿ ಚನ್ನಬಸಪ್ಪನವರು ನಾರ್ಮಲ್ ಸ್ಕೂಲಿನ ಶಿಕ್ಷಕರಾಗಿ, ಟ್ರೇನಿಂಗ್ ಕಾಲೇಜಿನ ಪ್ರಿನ್ಸಿಪಾಲರಾಗಿ, ಮಠ ಪತ್ರಿಕೆಯ ಸಂಪಾದಕರಾಗಿ ಡೆಪ್ಯುಟಿ ಇನ್‌ಸ್ಪೆಕ್ಟರರಾಗಿ ಶಿಕ್ಷಣ ಕ್ಷೇತ್ರವನ್ನು ಸುಧಾರಿಸಿದರು. ವಿದ್ಯಾರ್ಥಿಗಳಿಗೆ ಶಿಕ್ಷಣದಲ್ಲಿ ಆಕರ್ಷಣೆ ಮೂಡಲು ಹಲವಾರು ಮಹತ್ವದ ಸುಧಾರಣೆಗಳನ್ನು ತಂದರೂ ಈ ಭಾಗದ ವೀರಶೈವ ಸಮುದಾಯವು ಶಿಕ್ಷಣದಿಂದ ಇನ್ನೂ ದೂರ ಉಳಿದಿತ್ತು. ಅದಕ್ಕೆ ಕಾರಣ ಬಡತನದಲಿಯೇ ಬದುಕುತ್ತಿದ್ದ ವೀರಶೈವರಿಗೆ ತಮ್ಮ ಮಕ್ಕಳಿಗೆ ವಿದ್ಯಾಭ್ಯಾಸ ಕೊಡಿಸುವ ಶಕ್ತಿ ಇಲ್ಲದ್ದನ್ನು ಅರಿತು ಉಚಿತ ಊಟ, ವಸತಿ ಶಿಕ್ಷಣವನ್ನು ನೀಡಲು ಫ್ರೀ ಬೋರ್ಡಿಂಗ್ (ಉಚಿತ ಪ್ರಸಾದ ನಿಲಯ) ಸ್ಥಾಪಿಸಲು ನಿರ್ಧರಿಸಿದರು. ಇದು ಬೆಳಗಾವಿಯ ಕೇಳಕರಭಾಗದಲ್ಲಿ ಕ್ರಿ. ಶ. ೧೮೬೮ ರಿಂದ ಕಾರ್ಯಾರಂಭ ಮಾಡಿತು.[೨೪] ಈ ಕಾರ್ಯಕ್ಕೆ ಮುಖ್ಯ ಪ್ರೇರಣೆ, ಸಹಾಯ ನೀಡಿದವರೆಂದರೆ ಚಿತ್ರದುರ್ಗದ ಮಹಾಲಿಂಗ ಸ್ವಾಮಿಗಳು. ಅವರು ಪ್ರತಿ ತಿಂಗಳು ಮೂರುನೂರು ರೂಪಾಯಿಗಳನ್ನು ಪ್ರಸಾದ ನಿಲಯದ ನಿರ್ವಹಣೆಗಾಗಿ ನೀಡಿದರು. ಚನ್ನಬಸಪ್ಪನವರು ಚಿತ್ರದುರ್ಗದ ಸ್ವಾಮಿಗಳ ಮನಸ್ಸನ್ನು ಒಲಿಸಿ ಈ ಮಹತ್ವದ ಕಾರ್ಯದಲ್ಲಿ ಯಶಸ್ವಿಯಾದರು. ಅಷ್ಟೇ ಅಲ್ಲ ಕರ್ನಾಟಕದಲ್ಲಿ ದಾನ ಪರಂಪರೆಗೆ ನಾಂದಿ ಹಾಡಿದರು. ಚನ್ನಬಸಪ್ಪನವರ ಈ ಕಾರ್ಯಕ್ಕೆ ಅಂದಿನ ಹಲವಾರು ಶ್ರೀಮಂತರು ದಾನ ನೀಡಲು ಮುಂದೆ ಬಂದರು. ಚಿಕ್ಕೋಡಿಯ ಮುನಶಿಫರಾದ ವೀರಭದ್ರಯ್ಯನವರು ಒಬ್ಬ ಹುಡುಗನ ಖರ್ಚು, ಇಟಗಿಯ ಸಾಣಿಕೊಪ್ಪ ಮಲ್ಲಪ್ಪಣ್ಣನವರು ಒಬ್ಬಹುಡುಗನ ಖರ್ಚು, ಬೆಳಗಾವಿಯ ಶಹಾಪುರದ ಕೆಲವು ಶ್ರೀಮಂತ ನಾಗರಿಕರು ವಸತಿ ನಿಲಯಕ್ಕೆ ಅಡಿಗೆ ಮಾಡಲು ಬೇಕಾಗುವ ಸುಮಾರು ನಾಲ್ಕು ನೂರು ರೂಪಾಯಿಗಳ ಪಾತ್ರೆಗಳನ್ನು, ಬೆಳಗಾವಿಯ ಗಣಾಚಾರಿ ಪಟ್ಟದಪ್ಪನವರೂ, ಶಹಪುರದ ಬೋಳಮಲ್ಲ ಶಿವಲಿಂಗಪ್ಪನವರೂ, ಬೈಲಹೊಂಗಲದ ಜವಳಿ ಉಳವಪ್ಪನವರು ಒಬ್ಬೊಬ್ಬ ವಿದ್ಯಾರ್ಥಿಗೆ ಆಗುವಷ್ಟು ಖರ್ಚು ಹೀಗೆ ಹಲವಾರು ಜನರು ವಸತಿನಿಲಯಕ್ಕೆ ಸಹಾಯ ನೀಡುವುದಾಗಿ ಒಪ್ಪಿಕೊಂಡರು. ಚನ್ನಬಸಪ್ಪನವರು ಇಡೀ ಸಮಾಜವನ್ನೇ ಜಾಗೃತಗೊಳಿಸಿದರು. ಶಿಕ್ಷಣ ಕ್ಷೇತ್ರದಲ್ಲಿ ಹಿಂದುಳಿದಿದ್ದ ಲಿಂಗಾಯತ ಸಮುದಾಯವು ಎಚ್ಚರಗೊಂಡು ಶಿಕ್ಷಣದ ಸುಧಾರಣೆಗೆ ಮನಸ್ಸು ಮಾಡುವಂತೆ ಚನ್ನಬಸಪ್ಪನವರು ಈ ವಸತಿ ನಿಲಯದ ಮೂಲಕ ಪ್ರಯತ್ನಿಸಿದರು.

ಈ ವಸತಿ ನಿಲಯಕ್ಕೆ ಪ್ರವೇಶ ಪಡೆಯಲು ಹಲವಾರು ನಿಯಮಗಳನ್ನು ರೂಪಿಸಿದರು. ೧೨ ರಿಂದ ೧೮ ವರ್ಷದೊಳಗಿನ ಕೇವಲ ೫೦ ವಿದ್ಯಾರ್ಥಿಗಳಿಗೆ ಪ್ರವೇಶ ಪರೀಕ್ಷೆಯನ್ನು ಏರ್ಪಡಿಸಿ ಅದರಲ್ಲಿ ಆಯ್ಕೆಯಾದವರಿಗೆ ಶಿಕ್ಷಣ, ವಸತಿ, ಊಟದ ವ್ಯವಸ್ಥೆಯನ್ನು ಮಾಡಲಾಗಿತ್ತು. ಮೊದಲಿಗೆ ೧೪೮ ಜನ ವಿದ್ಯಾರ್ಥಿಗಳು ಪ್ರವೇಶ

ಪಡೆಯಲು ಅರ್ಜಿಯನ್ನು ಹಾಕಿದ್ದರು. ಧಾರವಾಡ, ಕಲಾದಗಿ ಮತ್ತು ಬೆಳಗಾವಿ ಜಿಲ್ಲೆಗಳಿಂದ ಬಂದ ಈ ವಿದ್ಯಾರ್ಥಿಗಳಲ್ಲಿ ೫೦ ಜನರನ್ನು ಆಯ್ಕೆ ಮಾಡಿಕೊಳ್ಳಲಾಗಿತ್ತು. ಅಂದಿನ ದಿನಗಳಲ್ಲಿ ಶಿಕ್ಷಣದ ಬಗೆಗೆ ಅಧಿಕಾರಿಗಳಲ್ಲಿದ್ದ ಕಾಳಜಿಯು ಎಷ್ಟಿತ್ತೆಂಬುದು ವಿದ್ಯಾರ್ಥಿಗಳ ಆಯ್ಕೆ ಪ್ರಕ್ರಿಯೆ ಸಂದರ್ಭದಿಂದ ತಿಳಿದುಬರುತ್ತದೆ. ಆಯ್ಕೆ ಬಯಸಿದ ವಿದ್ಯಾರ್ಥಿಗಳಿಗೆ ಪರೀಕ್ಷೆ ತೆಗೆದುಕೊಳ್ಳುವ ದಿನದಂದು ಅಧಿಕಾರಿಗಳಾದ ರಸೆಲ್‌ರು, ಕಲೆಕ್ಟರರಾದ ಫ್ರೋಕ, ಅಸಿಸ್ಟಂಟ್ ಜಡ್ಜರಾದ ಮಿ. ಜಾರ್ಡನ್ ಮತ್ತು ಹಲವಾರು ಜನ ಹಿರಿಯ ಮುಖಂಡರು ಉಪಸ್ಥಿತರಿದ್ದರು. ಅಲ್ಲದೆ ವಸತಿನಿಲಯದ ಮೇಲ್ವಿಚಾರಣೆಯನ್ನು ಗಂಗಾಧರ ಮಡಿವಾಳೇಶ್ವರ ತುರುಮರಿಯವರಿಗೆ ವಹಿಸಿಕೊಡಲಾಯಿತು.

ಈ ವಸತಿನಿಲಯವು ಎರಡು ವರ್ಷಗಳವರೆಗೆ ನಡೆದ ದಾಖಲೆಗಳು ಇವೆ. ಚಿತ್ರದುರ್ಗದ ಮಹಾಸ್ವಾಮಿಗಳು ಆಕಸ್ಮಿಕವಾಗಿ ಶಿವಾಧೀನರಾದ ಮೇಲೆ ಈ ವಸತಿನಿಲಯಕ್ಕೆ ಬರುತ್ತಿದ್ದ ಸಹಾಯ (ಪ್ರತಿ ತಿಂಗಳು ೩೦೦ ರೂ) ನಿಂತುಹೋಯಿತು. ಕೆಲವು ದಿನಗಳವರೆಗೆ ಚನ್ನಬಸಪ್ಪನವರು ತಮ್ಮ ಸ್ವಂತ ಹಣದಿಂದ ಹಾಗೂ ಹೀಗೂ ಸಾಗಿಸಿದರು. ಆದರೆ ನಿರ್ವಹಣೆಯ ವೆಚ್ಚ ಹೆಚ್ಚಾಗಿದ್ದರಿಂದ ಸಾಲ ಹೆಚ್ಚಾಗಿ ಅಂಗಡಿಯ ಮಾಲೀಕರು ಕೋರ್ಟಿನಲ್ಲಿ ದಾವೆ ಹೂಡಿದರು. ಇದರಿಂದ ಚನ್ನಬಸಪ್ಪನವರು ತಮ್ಮ ಹೆಂಡತಿಯ ಮೈಮೇಲಿನ ಆಭರಣಗಳನ್ನು ಮಾರಿ ಬಾಕಿಯನ್ನೂ ತೀರಿಸಿದರು. ಮುಂದೆ ಚನ್ನಬಸಪ್ಪನವರು ೧೮೬೯ರಲ್ಲಿ ಡೆಪ್ಯುಟಿ ಇನ್‌ಸ್ಪೆಕ್ಟರಾಗಿ ವರ್ಗ ಆಗಿ ಹೋದ ಮೇಲೆ ಈ ವಸತಿನಿಲಯವು ನಿಂತು ಹೋಯಿತು.

ಬೆಳಗಾವಿಯಲ್ಲಿ ವಸತಿನಿಲಯವು ಕೇವಲ ಎರಡು ವರ್ಷಗಳ ವರೆಗೆ ಸಾಗಿ ಬಂದಿದ್ದರೂ ಅದರ ಪರಿಣಾಮ ನಿರಂತರವಾಯಿತು. ಮುಂದೆ ಕರ್ನಾಟಕದಲ್ಲಿ ಸ್ಥಾಪಿತಗೊಳ್ಳತೊಡಗಿದ ಹಲವಾರು ಸಂಸ್ಥೆಗಳಿಗೆ ಪ್ರೇರಣೆಯನ್ನು ಒದಗಿಸಿತು. ಬೆಳಗಾವಿ ಭಾಗದ ಶೈಕ್ಷಣಿಕ ವಲಯದಲ್ಲಿ ಅಭೂತಪೂರ್ಣವಾದ ಬದಲಾವಣೆಗಳು ಉಂಟಾದವು. ಹಲವಾರು ಉಚಿತ ಪ್ರಸಾದನಿಲಯಗಳು ಬೇರೆ ಬೇರೆ ಭಾಗಗಳಲ್ಲಿ ಪ್ರಾರಂಭವಾಗಲು ದಾರಿಮಾಡಿಕೊಟ್ಟಿತು. ಚಿತ್ರದುರ್ಗದ ಜಗದ್ಗುರುಗಳು ಕೊಲ್ಲಾಪುರದಲ್ಲಿ, ಮೃತ್ಯುಂಜರ ಅಪ್ಪಗಳು ಧಾರವಾಡದಲ್ಲಿ, ವೀರಶೈವ ವರ್ತಕರಿಂದ ಮುಂಬೈಯಲ್ಲಿ, ನಾಗನೂರು ರುದ್ರಾಕ್ಷಿಮಠ ಬೆಳಗಾವಿಯಲ್ಲಿ ಹೀಗೆ ಹಲವಾರು ಮಹತ್ವದ ಉಚಿತ ಪ್ರಸಾದನಿಲಯಗಳು ಸ್ಥಾಪನೆಗೊಂಡು ಉತ್ತರ ಕರ್ನಾಟಕದ ಶೈಕ್ಷಣಿಕ ವಿಕಾಸಕ್ಕೆ ಕಾರಣವಾದವು.

ಹೀಗೆ ೧೯ನೆಯ ಶತಮಾನದ ಕೊನೆಯ ಘಟ್ಟದಲ್ಲಿ ಬ್ರಿಟಿಷ ಅಧಿಕಾರಿಗಳಿಂದ ವೀರಶೈವ ಸಮಾಜದ ಮುಖಂಡರಿಂದ, ಶಿಕ್ಷಣ ಪ್ರೇಮಿಗಳ ದಾನದಿಂದ ಬೆಳಗಾವಿಯಲ್ಲಿ ಶಿಕ್ಷಣದ ಬೀಜಗಳನ್ನು ಬಿತ್ತುವ ಕಾರ್ಯ ನಡೆದಾಗಲೇ ಸ್ಥಾನಿಕ ಸಂಸ್ಥಾನಿಕರ ಪೋಷಣೆಯಲ್ಲಿ ಇಂಗ್ಲಿಷ ಶಾಲೆ ಸ್ಥಾಪನೆಗೊಂಡಿತು. ಸಾಂಗ್ಲಿ ಸಂಸ್ಥಾನದ ದೊರೆ ಚಿಂತಾಮಣಿರಾವ್ ಪಟವರ್ಧನರ ಪೋಷಣೆಯಲ್ಲಿ ಕ್ರಿ.ಶ. ೧೮೬೫ರಲ್ಲಿ ಇಂದಿನ ಶಹಪೂರ ಭಾಗದಲ್ಲಿ ಇದು ಸ್ಥಾಪನೆಗೊಂಡಿತು. ಶಹಪೂರವು ಅಂದು ಸಾಂಗ್ಲಿ ಪಟವರ್ಧವ ಮನೆತನದ ಆಡಳಿತಕ್ಕೆ ಒಳಪಟ್ಟಿತ್ತು. ಇದು ಸಂಸ್ಥಾನಿಕರಿಂದ ಸ್ಥಾಪನೆಗೊಂಡ ಮೊಟ್ಟ ಮೊದಲ ಶಾಲೆ. ಈ ಶಾಲೆಯ ಸ್ಥಾಪನೆಯೊಂದಿಗೆ ಇಂಗ್ಲಿಷ ಮಾಧ್ಯಮದ

ಶಿಕ್ಷಣಕ್ಕೆ ಮಹತ್ವ ಒದಗಿತು. ಶಹಪೂರ ಪ್ರದೇಶದ ವ್ಯಾಪ್ತಿಯ ವಿದ್ಯಾರ್ಥಿಗಳಿಗೆ ಹೆಚ್ಚಿನ ಆದ್ಯತೆ ದೊರೆತರೂ ಬೇರೆ ಬೇರೆ ಭಾಗಗಳಿಂದಲೂ ಇಲ್ಲಿ ಶಿಕ್ಷಣ ಪಡೆಯಲು ವಿದ್ಯಾರ್ಥಿಗಳು ಆಗಮಿಸಿದರು. ಈಗಾಗಲೇ ಬೆಳಗಾವಿಯಲ್ಲಿದ್ದ ಸರದಾರ ಹೈಸ್ಕೂಲ್, ಸೆಂಟಪಾಲ್ ಹೈಸ್ಕೂಲಗಳಲ್ಲಿ ಪ್ರವೇಶ ದೊರೆಯುವುದು ಕಷ್ಟಕರವಾಗಿತ್ತು. ಹೀಗಾಗಿ ಶಹಪುರದ ಶಾಲೆಯು ಎಲ್ಲರಿಗೂ ಮುಕ್ತವಾದ ಅವಕಾಶವನ್ನು ಒದಗಿಸಿತು. ಪ್ರಾರಂಭದಲ್ಲಿ ಇಂಗ್ಲಿಷ ಮಾಧ್ಯಮದಲ್ಲಿ ಮಾತ್ರ ಶಿಕ್ಷಣವನ್ನು ನೀಡುತ್ತಿದ್ದು ಮುಂದೆ ಕನ್ನಡ ಮರಾಠಿ ಭಾಷೆಗಳಲ್ಲಿಯೂ ಶಿಕ್ಷಣ ಸಾಗಿತು. ಕ್ರಿ ಶ. ೧೯೨೦ರಲ್ಲಿ ಈ ಶಾಲೆಗೆ ಸಾಂಗ್ಲಿ ಸಂಸ್ಥಾನದ ದೊರೆ **ಚಿಂತಾಮಣಿರಾವ್** ಅವರ ಹೆಸರನ್ನು ಇಡಲಾಯಿತು. ಬೆಳಗಾವಿಯ ಶೈಕ್ಷಣಿಕ ವಿಕಾಸದಲ್ಲಿ ಈ ಶಾಲೆಯು ಮಹತ್ವವನ್ನು ಪಡೆದುಕೊಂಡಿತು.

ಡೆಪ್ಯುಟಿ ಚನ್ನಬಸಪ್ಪನವರು ಬೆಳಗಾವಿಯಲ್ಲಿ ಬಿತ್ತಿದ ಬೀಜ ಧಾರವಾಡದಲ್ಲಿ ಮೊಳೆತು ಫಲ ನೀಡತೊಡಗಿತು, ದಾನ ಪರಂಪರೆಯನ್ನು ಹುಟ್ಟುಹಾಕಿದ ಚನ್ನಬಸಪ್ಪನವರ ಕಾರ್ಯ ಚಟುವಟಿಕೆಗಳಿಂದ ವೀರಶೈವ ಸಮುದಾಯದಲ್ಲಿ ಶೈಕ್ಷಣಿಕ ಪ್ರಗತಿಗಾಗಿ ದುಡಿಯುವ, ಚಿಂತನೆ ಮಾಡುವ ದೊಡ್ಡ ಪಡೆಯೇ ನಿರ್ಮಾಣಗೊಂಡಿತು. ಇಂತವರಲ್ಲಿ ಪ್ರಮುಖರಾದವರೆಂದರೆ ಗಿಲಗಂಚಿ ಗುರುಸಿದ್ದಪ್ಪ ಮತ್ತು ಅರಟಾಳ ರುದ್ರಗೌಡರು ಪ್ರಮುಖರು. ಈ ಇಬ್ಬರು ಮಹನೀಯರಿಂದ ಕ್ರಿ. ಶ. ೧೮೮೩ರಲ್ಲಿ ಧಾರವಾಡದಲ್ಲಿ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯು ಸ್ಥಾಪನೆಗೊಂಡು ಶಿಕ್ಷಣ ಕ್ಷೇತ್ರದಲ್ಲಿ ಕ್ರಾಂತಿಯನ್ನು ಮಾಡಿತು. 'ಲಿಂಗಾಯತ ಫಂಡ್' ಸಂಗ್ರಹಿಸಿ ಉನ್ನತ ಶಿಕ್ಷಣ ಪಡೆಯುವ ವಿದ್ಯಾರ್ಥಿಗಳಿಗೆ ಶಿಷ್ಯವೇತನವನ್ನು ನೀಡಿ ಉನ್ನತ ಶಿಕ್ಷಣ ಪಡೆಯಲು ನೆರವು ನೀಡಲಾಯಿತು. ಬೆಳಗಾವಿಯ ಶೈಕ್ಷಣಿಕ ವಿಕಾಸದಲ್ಲಿ, ಬೆಳವಣಿಗೆಯಲ್ಲಿ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಪಾತ್ರ ಮಹತ್ವದ್ದಾಗಿದೆ. ಭಾರತದ ಶೈಕ್ಷಣಿಕ ಕ್ಷೇತ್ರದಲ್ಲಿಯೇ ಮಹತ್ವದ ಸಾಧನೆ ಮಾಡಿದ ಕೆ.ಎಲ್.ಇ ಸಂಸ್ಥೆಯ ಸ್ಥಾಪಕರಲ್ಲಿ ಕೆಲವರು ಈ ಸಂಸ್ಥೆಯ 'ಲಿಂಗಾಯತ್ ಫಂಡ್' ದಿಂದ ಪುಣೆಯಲ್ಲಿ, ಉನ್ನತ ಶಿಕ್ಷಣ ಪಡೆಯಲು ಸಾಧ್ಯವಾಯಿತು. ಪುಣೆಯಲ್ಲಿ ಉನ್ನತ ಶಿಕ್ಷಣ ಪಡೆಯುವ ಸಂದರ್ಭದಲ್ಲಿಯೇ ಇವರು ಕೆ. ಎಲ್. ಇ. ಸಂಸ್ಥೆಯನ್ನು ಕಟ್ಟುವ ಯೋಜನೆಯನ್ನು ರೂಪಿಸಿದ್ದು. ಹೀಗಾಗಿ ಕೆ.ಎಲ್.ಇ ಸಂಸ್ಥೆಯ ಹುಟ್ಟಿಗೆ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯು ಪರೋಕ್ಷವಾಗಿ ಕಾರಣವಾಗಿದೆ.ಇಲ್ಲಿಂದಲೇ ಮುಂದೆ ನಾವು ಬೆಳಗಾವಿಯ ಆಧುನಿಕ ಕಾಲದ ಶಿಕ್ಷಣದ ವಿಷಯವನ್ನು ಕೈಗೆತ್ತಿಕೊಳ್ಳಬಹುದೆನಿಸುತ್ತದೆ. ಶಿಕ್ಷಣಕ್ಷೇತ್ರದಲ್ಲಿ ಬ್ರಿಟಿಷರು ಇದುವರಿಗೆ ತೋರಿದ ಹಿತಾಸಕ್ತಿಗಳನ್ನು ಮುರಿದು ನಮ್ಮ ಸಂಸ್ಕೃತಿಯನ್ನು ಕಾಪಾಡಬಲ್ಲ, ರೂಪಿಸಬಲ್ಲ ಶಿಕ್ಷಣಕ್ರಮವನ್ನು ನಮ್ಮವರು ಕಲ್ಪಿಸಿಕೊಂಡು ಮುಂದುವರಿದರು. ಇದರಲ್ಲಿ ಈ ನೆಲದ ಪಾಲು ಬಹುದೊಡ್ಡದಿದೆ.

**೩.ಆಧುನಿಕ ಕಾಲದ ಶಿಕ್ಷಣ:**

ಇಪ್ಪತ್ತನೆಯ ಶತಮಾನದ ಪ್ರಾರಂಭದಲ್ಲಿ ಬೆಳಗಾವಿಯ ಶೈಕ್ಷಣಿಕ ವಲಯವು ಮಹತ್ವದ ಬದಲಾವಣೆಗೆ ಒಳಗಾಯಿತು. ಶೈಕ್ಷಣಿಕ ಮಹಾಕ್ರಾಂತಿಯೇ ಈ ಶತಮಾನದ ಪ್ರಾರಂಭದಲ್ಲಿ ಉಂಟಾಯಿತು. ಮರಾಠಿಯ ಪ್ರಭಾವದಲ್ಲಿ,

ಅಧಿಕಾರಿಗಳ ನಿರ್ಲಕ್ಷ್ಯದಲ್ಲಿ, ನಲುಗಿದ್ದ ಬೆಳಗಾವಿಯ ಭಾಷೆ, ಶಿಕ್ಷಣ, ಸಂಸ್ಕೃತಿಯು ಕನ್ನಡಿಗರಿಂದ ದೂರ ಉಳಿದಿತ್ತು. ಇಂತಹ ಸಂದರ್ಭದಲ್ಲಿಯೇ ಜನ್ಮತಾಳಿದ 'ಕರ್ನಾಟಕ ಲಿಂಗಾಯತ ಶಿಕ್ಷಣ ಸಂಸ್ಥೆ'ಯು ಕರ್ನಾಟಕದ ಶೈಕ್ಷಣಿಕ ಇತಿಹಾಸದಲ್ಲಿ ಹೊಸ ಯುಗಕ್ಕೆ ನಾಂದಿ ಹಾಡಿತು. ಈ ಸಂಸ್ಥೆಯು ಕೇವಲ ಶಿಕ್ಷಣ ನೀಡುವ ಕಾರ್ಯದಲ್ಲಿ ತೊಡಗದೆ ಬೆಳಗಾವಿಯು ಕನ್ನಡದ ನೆಲ ಎಂಬುವದನ್ನು ದೃಢಪಡಿಸಿತು. ಈ ಭಾಗದ ಸಾಮಾಜಿಕ, ಆರ್ಥಿಕ, ಸಾಹಿತ್ಯಿಕ, ಸಾಂಸ್ಕೃತಿಕ ವಲಯಗಳಲ್ಲಿ ಮಹತ್ವದ ಬದಲಾವಣೆಗಳಿಗೆ ಕಾರಣವಾಯಿತು. ಕನ್ನಡಿಗರಲ್ಲಿದ್ದ ಮರಾಠಿ ಮೋಹವನ್ನು ಕಳಚಿ ಮಾತೃಭಾಷೆಯ ಅಭಿಮಾನದ ಜ್ಯೋತಿಯನ್ನು ಹಚ್ಚಲು ಕೆ.ಎಲ್.ಇ. ಸಂಸ್ಥೆ ಮುಂದಾಯಿತು. ಸಂಸ್ಥೆ ಬೆಳೆದಂತೆ ಬೆಳಗಾವಿಯಲ್ಲಿರುವ ಕನ್ನಡಭಾಷೆ ಗಟ್ಟಿಗೊಳ್ಳುತ್ತಾ ಸಾಗಿ, ಕನ್ನಡ ಸಂಸ್ಕೃತಿ ಮರಳಿ ನಿರ್ಮಾಣಗೊಳ್ಳುವಂತಾಯಿತು. ಅದಕ್ಕಾಗಿಯೇ ಈ ಸಂಸ್ಥೆಯನ್ನು 'ಕನ್ನಡ ಕೋಟೆ' ಎಂದು ಕರೆಯಲಾಗಿದೆ.[೨೫]

ಬೆಳಗಾವಿ ಭಾಗದಲ್ಲಿ ಕನ್ನಡಭಾಷೆ, ಶಿಕ್ಷಣಕ್ಕೆ ಪ್ರೇರಣೆ ನೀಡಿದ ಡೆಪ್ಯುಟಿ ಚನ್ನಬಸಪ್ಪ, ರಸೆಲ್ ಮುಂತಾದವರ ಕಾರ್ಯವನ್ನು ವೀರಶೈವ ಮುಖಂಡರು ಮುಂದುವರಿಸಿದರು. ಧಾರವಾಡದಲ್ಲಿ ಸ್ಥಾಪಿತವಾದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯು ಉತ್ತರ ಕರ್ನಾಟಕದ ಶಿಕ್ಷಣ ಕ್ಷೇತ್ರದ ಪ್ರಗತಿಯಲ್ಲಿ ಮಹತ್ವದ ಪಾತ್ರ ವಹಿಸಿತು. ಅದರಲ್ಲಿಯೂ ವೀರಶೈವ ವಿದ್ಯಾರ್ಥಿಗಳಿಗೆ ಶಿಷ್ಯವೇತನ ನೀಡಿ ಉನ್ನತ ಶಿಕ್ಷಣ ಬೆಳೆಯಲು ಕಾರಣವಾಯಿತು. ಹೀಗೆ ಶಿಕ್ಷಣ ಪಡೆಯಲು ಮುಂಬೈಗೆ ಹೋದ ಉತ್ಸಾಹಿ ವೀರಶೈವ ಯುವಕರಿಗೆ ಮುಂಬೈಯಲ್ಲಿ ಮತ್ತೊಂದು ಆಶ್ರಯ ದೊರೆಯಿತು. ಮುಂಬೈಯಲ್ಲಿದ್ದ ವೀರಶೈವ ವರ್ತಕರು ಧಾರ್ಮಿಕ ಕಾರ್ಯಗಳಿಗಾಗಿ ಮಠ ಕಟ್ಟಿಸಲು ನಿಧಿ ಸಂಗ್ರಹಿಸಿದ್ದರು. ಆದರೆ ಇದೆ ಸಮಯದಲ್ಲಿ ಉನ್ನತ ಶಿಕ್ಷಣ ಪಡೆಯಲು ಮುಂಬೈಗೆ ಬರುವ ಬಡ ಮಕ್ಕಳು ಅನುಭವಿಸುವ ತೊಂದರೆಯನ್ನು ಮನಗಂಡು ಅವರಿಗಾಗಿ ಆಶ್ರಮವನ್ನು ಕಟ್ಟಬೇಕೆಂದು ನಿರ್ಧರಿಸಿದರು. ಇದರಿಂದ ಕ್ರಿ. ಶ. ೧೯೧೩ರಲ್ಲಿ ಮುಂಬೈಯಲ್ಲಿ 'ವೀರಶೈವ ಆಶ್ರಮ' ಪ್ರಾರಂಭವಾಯಿತು.[೨೬] ಕೆ.ಎಲ್.ಇ. ಸಂಸ್ಥೆಯನ್ನು ಹುಟ್ಟುಹಾಕಿದ ಸಂಸ್ಥಾಪಕರಲ್ಲಿ ಏಳು ಜನ ಮಹನೀಯರು ಅತ್ಯಂತ ಪ್ರಮುಖರೆನಿಸಿರುತ್ತಾರೆ. ಇವರಲ್ಲಿ ಎಚ್. ಎಫ್. ಕಟ್ಟೀಮನಿ, ಬಿ.ಎಸ್. ಹಂಚಿನಾಳ, ಶಿ.ಶಿ. ಬಸವನಾಳ ಮತ್ತು ಬಿ.ಬಿ. ಮಮದಾಪುರ ಇವರು ಡೆಕ್ಕನ್ ಕಾಲೇಜಿನಲ್ಲಿ ಎಂ. ಆರ್. ಸಾಖರೆ ಮತ್ತು ಪಂಡಿತಪ್ಪ ಚಿಕ್ಕೋಡಿ ಇವರು ಫರ್ಗ್ಯುಸನ್ ಕಾಲೇಜಿನಲ್ಲಿ ಹಾಗೂ ಸರದಾರ ವೀರನಗೌಡರು ಸರಕಾರಿ ಒಕ್ಕಲುತನ ಕಾಲೇಜಿನಲ್ಲಿ ಓದುತ್ತಿದ್ದರು. ಇವರೆಲ್ಲರು ಲಿಂಗಾಯತ ವಿದ್ಯಾರ್ಥಿ ಸಂಘವನ್ನು ಮಾಡಿಕೊಂಡು ಪ್ರತಿದಿನ ಒಂದು ಸ್ಥಳದಲ್ಲಿ ಸೇರಿ ಕನ್ನಡ ನಾಡುನುಡಿಗಳ ಬಗೆಗೆ, ಲಿಂಗಾಯತ ಸಮಾಜದ ಸ್ಥಿತಿಗತಿಗಳ ಬಗ್ಗೆ ಚಿಂತನೆ ಮಾಡುತ್ತಿದ್ದರು. ಅಂದು ಮಹಾರಾಷ್ಟ್ರದ ಸಾಂಸ್ಕೃತಿಕ ವಿಕಾಸಕ್ಕೆ ಕಾರಣರಾದ ಲೋಕಮಾನ್ಯ ಟಿಳಕ, ಗೋಪಾಲಕೃಷ್ಣ ಗೋಖಲೆಯವರ ಪ್ರಭಾವ ಈ ಯುವಕರನ್ನು ಜಾಗೃತಗೊಳಿಸಿತು. ಪುಣೆಯ ಡೆಕ್ಕನ್ ಕಾಲೇಜು, ಫರ್ಗ್ಯುಸನ್ ಕಾಲೇಜುಗಳ ಮೂಲಕ ಸಮಾಜದಲ್ಲಿ ಉಂಟಾಗಿದ್ದ ಶೈಕ್ಷಣಿಕ, ಸಾಂಸ್ಕೃತಿಕ ಕ್ರಾಂತಿಗಳನ್ನು ಕಂಡರು.

ಇಂತಹ ಕಾಲೇಜು ನಮ್ಮ ನಾಡಿನಲ್ಲಿಯೂ ಸ್ಥಾಪನೆಗೊಳ್ಳಬೇಕು ಎನ್ನುವ ವಿಚಾರ ಅವರಲ್ಲಿ ಹೊಳೆದು ಶಿಕ್ಷಣವನ್ನು ಮುಗಿಸಿ ತಾಯ್ನಾಡಿಗೆ ಮರಳಿ ಶಿಕ್ಷಣ ಸಂಸ್ಥೆಯನ್ನು ಕಟ್ಟುವ ತಯಾರಿ ನಡೆಸಿದರು.

ಪುಣೆಯಿಂದ ಉನ್ನತ ಶಿಕ್ಷಣ ಮುಗಿಸಿ ಬಂದ ಸಂದರ್ಭದಲ್ಲಿ ಕರ್ನಾಟಕದಲ್ಲಿ ಹಲವಾರು ಬದಲಾವಣೆಗಳು ಉಂಟಾಗಿದ್ದವು. ಅಖಿಲ ಭಾರತ ವೀರಶೈವ ಮಹಾಸಭೆಯು ನಾಡಿನ ತುಂಬೆಲ್ಲಾ ಶಿಕ್ಷಣದ ಜಾಗೃತಿಯನ್ನುಂಟು ಮಾಡಿತ್ತು. ವೀರಶೈವರನ್ನು ಸಂಘಟಿಸುವ ಸಮ್ಮೇಳನಗಳು ನಾಡಿನ ಬೇರೆ ಬೇರೆ ಭಾಗಗಳಲ್ಲಿ ಜರುಗುತ್ತಿದ್ದವು. ೧೯೦೪ ರಿಂದ ಧಾರವಾಡ, ಬಳ್ಳಾರಿ, ಬಾಗಲಕೋಟೆ, ನಿಪ್ಪಾಣಿ ಮುಂತಾದ ಕಡೆಗಳಲ್ಲಿ ಅಧಿವೇಶನಗಳು ಜರುಗಿ ಶಿಕ್ಷಣ ಪ್ರಸಾರಕ್ಕಾಗಿ ಶಾಲೆ-ಕಾಲೇಜುಗಳನ್ನು ತೆರೆಯಲು ನಿರ್ಣಯಗಳನ್ನು ಪಾಸು ಮಾಡಲಾಯಿತು. ಇದರ ಫಲವಾಗಿ ಬೆಳಗಾವಿಯ ಕಲ್ಮಠದಲ್ಲಿ ಅರಟಾಳ ರುದ್ರಗೌಡರು, ಶಿವಮೂರ್ತಿಸ್ವಾಮಿ ಕಣಬರಗಿಮಠರ ಮುಖಂಡತ್ವದಲ್ಲಿ ಸಭೆ ಸೇರಿ ಬೆಳಗಾವಿಯಲ್ಲಿ ಶಿಕ್ಷಣ ಸಂಸ್ಥೆ ಪ್ರಾರಂಭಿಸಲು ನಿರ್ಣಯಿಸಲಾಯಿತು. ಹೀಗೆ ಈ ಏಳು ಜನ ಯುವ ಉತ್ಸಾಹಿಗಳಿಗೆ ಸಮಾಜದ ಬೆಂಬಲ ದೊರೆತು. **ಕ್ರಿ ಶ. ೧೯೧೬ ಅಕ್ಟೋಬರ ೧೧ ರಂದು ಕರ್ನಾಟಕ ಲಿಂಗಾಯತ ಎಜ್ಯುಕೇಶನ್ ಸೊಸೈಟಿ**ಯನ್ನು ಸ್ಥಾಪಿಸಲು ನಿರ್ಣಯಿಸಿದರು. ಈ ಏಳು ಜನರಲ್ಲಿ ಒಬ್ಬರಾದ ಶ್ರೀ. ಬಿ. ಎಲ್. ಪಾಟೀಲರು ತಮ್ಮ ವೈಯಕ್ತಿಕ ತೊಂದರೆಗಳ ಕಾರಣದಿಂದ ಈ ಸಂಘಟನೆಯಿಂದ ದೂರ ಉಳಿದರು. ಮುಂದೆ ೧೯೧೭ ರಲ್ಲಿ ಸರದಾರ ವೀರನಗೌಡ ಪಾಟೀಲರು ಅಜೀವ ಸದಸ್ಯರಾಗಿ ಸೇರಿಕೊಂಡರು.

'ಕರ್ನಾಟಕ ಲಿಂಗಾಯತ ಎಜ್ಯುಕೇಶನ್ ಸೊಸಾಯಿಟಿ'ಯ ಮೊದಲನೆಯ ವಿದ್ಯಾಸಂಸ್ಥೆಯನ್ನು ೧೯೧೬ ನವೆಂಬರ ೧೩ ರಂದು 'ಆಂಗ್ಲೋ ವರ್ನಾಕುಲರ್ ಸ್ಕೂಲ್' ಎಂಬ ಹೆಸರಿನಿಂದ ಬೆಳಗಾವಿಯ ಕಿಲ್ಲಾದೊಳಗಿನ ಒಂದು ಬಂಗ್ಲೆಯನ್ನು ಬಾಡಿಗೆಗೆ ಪಡೆದುಕೊಂಡು ಪ್ರಾರಂಭಿಸಿದರು. ಅಂದಿನ ಶಿಕ್ಷಣಾಧಿಕಾರಿಗಳಾಗಿದ್ದ ಮಿ. ಶಾರ್ಪ ಅವರು ೧ ರಿಂದ ೬ನೆಯ ತರಗತಿಯವರೆಗೆ ಅನುಮತಿಯನ್ನು ನೀಡಿದರು. ಮೊದಲನೆಯ ವರ್ಷ ಶಾಲೆ ತಡವಾಗಿ (ನವಂಬರ ೧೩) ಪ್ರಾರಂಭಗೊಂಡರೂ ಸುಮಾರು ೩೦ ವಿದ್ಯಾರ್ಥಿಗಳು, ಬೆಳಗಾವಿ, ಧಾರವಾಡ, ವಿಜಾಪುರ, ಶಿರಸಿ, ಸಿದ್ದಾಪುರ, ಶಿವಮೊಗ್ಗಾ, ಬಳ್ಳಾರಿ ಜಿಲ್ಲೆಗಳ ಭಾಗಗಳಿಂದ ಬಂದರು.

ಎಂ. ಆರ್. ಸಾಖರೆಯವರು ಮುಖ್ಯೋಪಾಧ್ಯಾಯರಾಗಿ ಶಾಲೆಯನ್ನು ಅಭಿವೃದ್ಧಿಪಡಿಸಿದರು. ಶಿ. ಶಿ. ಬಸವನಾಳ, ಎಚ್. ಎಫ್. ಕಟ್ಟೀಮನಿ, ಬಿ.ಬಿ. ಮಮದಾಪುರ, ಪಿ.ಆರ್. ಚಿಕ್ಕೋಡಿ ಇವರು ಶಿಕ್ಷಕರಾಗಿ ಸೇವೆ ಮಾಡತೊಡಗಿದರು. ಈ ಶಾಲೆಗೆ ಸರಕಾರದಿಂದ ಯಾವುದೇ ಆರ್ಥಿಕ ಸಹಾಯ ದೊರೆಯುತ್ತಿರಲಿಲ್ಲ. ಹೀಗಾಗಿ ವಿದ್ಯಾರ್ಥಿಗಳು ನೀಡಿದ ಫೀ ಹಣವೇ ಪ್ರಮುಖ ಆದಾಯವಾಗಿತ್ತು. ಎಲ್ಲ ಶಿಕ್ಷಕರು ಫೀ ಹಣದಲ್ಲಿಯೇ ತಿಂಗಳಿಗೆ ಸಾಮೂಹಿಕವಾಗಿ ನೂರು ನೂರೈವತ್ತರಂತೆ ಪಡೆದು ಎಲ್ಲರೂ ಒಂದೇ ಮನೆಯಲ್ಲಿ ಇದ್ದು ಅಡಿಗೆ ಮಾಡಿಕೊಂಡು ಜೀವನ ಸಾಗಿಸುತ್ತಿದ್ದರು. ಪ್ರಾರಂಭದಲ್ಲಿ ಖಡೇಬಜಾರದ ಭುಜಣ್ಣವರ ಅವರ ಮನೆಯಲ್ಲಿ ಬಾಡಿಗೆಯಲ್ಲಿದ್ದರು.

ಅಲ್ಲಿ ಪಂಡಿತಪ್ಪ ಚಿಕ್ಕೋಡಿಯವರ ಮಡದಿ ಅದೇ ಮನೆತನದವರಾಗಿದ್ದರು. ಈ ಎಲ್ಲರಿಗೂ ಅವರೊಬ್ಬರೇ ಅಡಿಗೆ ಮಾಡಿ ನೀಡುತ್ತಿದ್ದರು.

ಕೆ.ಎಲ್.ಇ ಸಪ್ತರ್ಷಿಗಳೆಂದೇ ಗುರುತಿಸಲ್ಪಡುವ ಏಳು ಜನರು ಕಷ್ಟದಲ್ಲಿಯೇ ಜೀವನವನ್ನು ಸಾಗಿಸಿದರು. ಸದಾ ಶಿಕ್ಷಣದ ಬಗೆಗೆ ಚಿಂತಿಸುತ್ತಾ ಸಂಸ್ಥೆಯ ಏಳ್ಗೆಗಾಗಿ ದುಡಿದರು. ತಮ್ಮ ವೈಯಕ್ತಿಕ ಸುಖವನ್ನು ಬದಿಗಿಟ್ಟು ಶಿಕ್ಷಣದ ಅಭಿವೃದ್ಧಿಯ ಸಲುವಾಗಿ ನಿರಂತರ ಶ್ರಮಿಸಿದರು. ಅಂದಿನ ಕಾಲದಲ್ಲಿ ಸ್ನಾತಕೋತ್ತರ ಪದವಿ ಪಡೆದ ಕೆಲವೇ ಜನರಲ್ಲಿ ಇವರಿದ್ದರು. ಅಂದು ಇವರಿಗೆ ಸರಕಾರದಲ್ಲಿ ದೊಡ್ಡ ದೊಡ್ಡ ಹುದ್ದೆಗಳು ದೊರೆಯುತ್ತಿದ್ದವು. ಆದರೆ ಅಧಿಕಾರಕ್ಕೆ ಆಸೆ ಪಡದೆ ಶಿಕ್ಷಣ ಕ್ಷೇತ್ರದ ಅಭಿವೃದ್ಧಿಗಾಗಿ ತ್ಯಾಗ ಜೀವನವನ್ನು ಸಾಗಿಸಿದರು. ಇವರ ತ್ಯಾಗ, ಶ್ರಮದಿಂದಲೇ ಶಿಕ್ಷಣ ಕ್ಷೇತ್ರ ಬೆಳೆಯಿತು. ಶೈಕ್ಷಣಿಕವಾಗಿ ಕರ್ನಾಟಕವು ವಿಕಾಸಗೊಳ್ಳುವಂತಾಯಿತು. ಇವರು ಸ್ಥಾಪಿಸಿದ ಸಂಸ್ಥೆ ವರ್ಷದಿಂದ ವರ್ಷಕ್ಕೆ ದೇಶದ ಉದ್ದಗಲಕ್ಕೂ ಬೆಳೆದು ಶಿಕ್ಷಣ ಕ್ಷೇತ್ರದಲ್ಲಿ ಮಹಾಕ್ರಾಂತಿಯನ್ನುಂಟುಮಾಡಿತು.

ಕ್ರಿ. ಶ. ೧೯೧೭ರಲ್ಲಿ ಮೊದಲನೆಯ ಬ್ಯಾಚನಲ್ಲಿ ಮ್ಯಾಟ್ರಿಕ್ ಪರೀಕ್ಷೆಗೆ ಕುಳಿತ ೪೦ ಜನ ವಿದ್ಯಾರ್ಥಿಗಳಲ್ಲಿ ೧೮ ಜನರು ಪಾಸಾಗಿ ಸರಾಸರಿ ಪ್ರಮಾಣಕ್ಕಿಂತ ಹೆಚ್ಚಿನ ಫಲಿತಾಂಶ ಬಂದಿತು. ಶಾಲೆಯಲ್ಲಿ ಹಾಕಿ, ಕ್ರಿಕೆಟ್ ಟೀಮುಗಳು ಪ್ರಾರಂಭಗೊಂಡು ವಿದ್ಯಾರ್ಥಿಗಳಲ್ಲಿ ಕ್ರೀಡಾ ಮನೋಭಾವ ಮೂಡತೊಡಗಿತು. ವಾರ್ಷಿಕೋತ್ಸವಗಳಿಗೆ ಮಹಾರಾಷ್ಟ್ರದ ಮೇಧಾವಿಗಳನ್ನು, ಬ್ರಿಟಿಷ ಅಧಿಕಾರಿಗಳನ್ನು ಆಮಂತ್ರಿಸಿ ಅವರಿಂದ ವಿದ್ಯಾರ್ಥಿಗಳಿಗೆ ಸ್ಫೂರ್ತಿ ತುಂಬುವಂತೆ ಮಾಡಿದರು. ಪ್ರೊ, ಜಿ.ಸಿ. ಭಾಟೆ, ಪ್ರೊ, ಸದಾಶಿವಯ್ಯ, ಮಿ. ಎಲ್. ಜೆ. ಮೌಂಟಫರ್ಡ, ಮಿ. ಎಸ್. ಎಸ್. ಲಾರೆನ್ಸ ಸರ್ ಜಾರ್ಜ ಲಾಯ್ಡ, ಕೊಲ್ಲಾಪುರದ ಛತ್ರಪತಿ ಶಾಹೂ ಮಹಾರಾಜರು ಮುಂತಾದವರು ಅಂದಿನ ಕಾರ್ಯಕ್ರಮಗಳಿಗೆ ಆಗಮಿಸಿ ಶಿಕ್ಷಕರಿಗೆ, ವಿದ್ಯಾರ್ಥಿಗಳಿಗೆ ಸ್ಫೂರ್ತಿಯನ್ನು ತುಂಬಿದರು. ಈ ಎಲ್ಲ ಕಾರ್ಯ ಚಟುವಟಿಕೆಗಳು ಅಂದಿನ ವಿದ್ಯಾರ್ಥಿಗಳಿಗೆ ಹೊಸದಾಗಿದ್ದವು. ಇದರಿಂದ ಶಿಕ್ಷಣದ ಗುಣಮಟ್ಟ ಸುಧಾರಿಸಿ ಶಾಲೆ ಹೆಚ್ಚು ಪ್ರಸಿದ್ಧಿಯನ್ನು ಪಡೆದುಕೊಂಡಿತು.

ಕೆ.ಎಲ್.ಇ. ಸಂಸ್ಥೆಯ ಮೊದಲ ಶಾಲೆ 'ಆಂಗ್ಲೋ ವರ್ನಾಕುಲರ್ ಸ್ಕೂಲ' ಪ್ರಾರಂಭಗೊಳ್ಳಲು ಅರಟಾಳ ರುದ್ರಗೌಡರು ನೀಡಿದ ಧನಸಹಾಯವೇ ಮುಖ್ಯ ಕಾರಣವಾಯಿತು. ರುದ್ರಗೌಡರು ತಮ್ಮ ಬಳಿಯಲ್ಲಿದ್ದ ಕರ್ನಾಟಕ ಕಾಲೇಜ ನಿಧಿಯಿಂದ ೨೭೨೭, ೪ ಆಣೆಯನ್ನು ಸಂಸ್ಥೆಗೆ ದೇಣಿಗೆಯಾಗಿ ನೀಡಿದರು. ಅಲ್ಲದೆ ತಾವು ಸ್ವತಃ ೪೦೦ ರೂ ನೀಡಿದರು.[೨] ಈ ಹೈಸ್ಕೂಲಿಗೆ ಹೆಸರಿಡುವ ಕುರಿತು ಚರ್ಚೆ ನಡೆದು ಗಿಲಗಂಚಿ ಗುರುಸಿದ್ದಪ್ಪ ಮತ್ತು ಅರಟಾಳ ರುದ್ರಗೌಡರು ವೀರಶೈವ ಸಮಾಜಕ್ಕೆ ಸಲ್ಲಿಸಿದ ಸೇವೆಯು ಚಿರಕಾಲ ಉಳಿಯಲಿ ಎಂದು 'ಆಂಗ್ಲೋ ವರ್ನಾಕ್ಯುಲರ್ ಸ್ಕೂಲ್'ಗೆ 'ಗಿಲಗಂಚಿ–ಅರಟಾಳ ಹೈಸ್ಕೂಲ್' ಎಂದು ನಾಮಕರಣ ಮಾಡಲಾಯಿತು. ಈಗ ಇದು ಜಿ.ಎ. ಹಾಯಸ್ಕೂಲ್ ಎಂದೇ ನಾಡಿನಲ್ಲಿ ಪರಿಚಿತವಾಗಿದೆ.

ಬೆಳಗಾವಿಯ ಸಾಂಸ್ಕೃತಿಕ ಚರಿತ್ರೆಯಲ್ಲಿ ಜಿ.ಎ. ಹಾಯಸ್ಕೂಲಿಗೆ ಮಹತ್ವದ ಸ್ಥಾನವಿದೆ. ಈ ಭಾಗದ ಬಹಳಷ್ಟು ಜನರು ಈ ಶಾಲೆಯಲ್ಲಿಯೇ ಕಲಿತು ವಿವಿಧ ರಂಗಗಳಲ್ಲಿ ಸಾಧನೆಯನ್ನು ಮಾಡಿದ್ದಾರೆ. ಸಾಹಿತಿಗಳು, ಡಾಕ್ಟರ, ಇಂಜಿನಿಯರ, ಉದ್ಯಮಿಗಳು ಹಾಗೂ ಅಧಿಕಾರಿಗಳಾಗಿ ದೇಶ ವಿದೇಶಗಳಲ್ಲಿ ಪ್ರಸಿದ್ಧಿಯನ್ನು ಪಡೆದಿದ್ದಾರೆ. ಇವರೆಲ್ಲ, ಉತ್ತಮವಾದ ಭವಿಷ್ಯವನ್ನು ರೂಪಿಸಿಕೊಳ್ಳುವಲ್ಲಿ ಜಿ.ಎ. ಹಾಯಸ್ಕೂಲನಲ್ಲಿ ಕಲಿತ ಶಿಸ್ತು, ಅಧ್ಯಯನವೇ ಕಾರಣವಾಗಿದೆ ಎಂಬುದನ್ನು ವಿವಿಧ ಸಂದರ್ಭಗಳಲ್ಲಿ ಹೇಳಿಕೊಂಡಿದ್ದಾರೆ.

ಜಿ.ಎ. ಹಾಯಸ್ಕೂಲಿನ ಮತ್ತೊಂದು ಮಹತ್ವದ ವೈಶಿಷ್ಟ್ಯವೆಂದರೆ ಜಾತಿಭೇದವಿಲ್ಲದೆ ಶಿಕ್ಷಣ ನೀಡುತ್ತಿರುವುದು. ಲಿಂಗಾಯತ ಸಮಾಜಕ್ಕಾಗಿಯೇ ಸ್ಥಾಪನೆಗೊಂಡ ಈ ಶಾಲೆಯಲ್ಲಿ ಬ್ರಾಹ್ಮಣ, ಮರಾಠಾ, ಮುಸಲ್ಮಾನ್, ಕ್ರೈಸ್ತ, ಹೀಗೆ ಹಲವಾರು ಜಾತಿ ಧರ್ಮದವರು ಶಿಕ್ಷಣವನ್ನು ಪಡೆದರು. ಇದು ಅಂದಿನ ಕಾಲದ ಸಂದರ್ಭದಲ್ಲಿ ಅತ್ಯಂತ ಮಹತ್ವದ್ದಾಗಿದೆ. ಬೆಳಗಾವಿಯ ಸಾಮರಸ್ಯ ಬದುಕಿಗೆ ಲಿಂಗಾಯತ ಸಮಾಜದವರ ಕೊಡುಗೆ ಮಹತ್ವದ್ದಾಗಿದೆ. ಅಂದಿನ ಪರಿಸ್ಥಿತಿಯಲ್ಲಿ ಕನ್ನಡಿಗರಿಗೆ ಶಿಕ್ಷಣ ದೊರೆಯುವುದು ದುಸ್ತರವಾಗಿತ್ತು. ಬ್ರಾಹ್ಮಣರಿಗೆ, ಶ್ರೀಮಂತರಿಗೆ, ಮರಾಠರಿಗೆ ಸುಲಭವಾಗಿ ಸಿಗುತ್ತಿದ್ದ ಶಿಕ್ಷಣವು ಇತರರಿಗೆ ಅಷ್ಟು ಸುಲಭವಾಗಿ ಸಿಗುತ್ತಿರಲಿಲ್ಲ. ಹಾಗೂ ಹೀಗೂ ಮಾಡಿ ಶಾಲೆಯಲ್ಲಿ ಪ್ರವೇಶ ಪಡೆದರೂ ಉಳಿದವರಿಂದ ತೊಂದರೆಯನ್ನು ಅನುಭವಿಸಬೇಕಾಗಿತ್ತು. ಇಂತಹ ವಾತಾವರಣದಲ್ಲಿ ಜಿ.ಎ. ಹಾಯಸ್ಕೂಲನಲ್ಲಿ ಜಾತಿಭೇದವಿಲ್ಲದೆ, ಬಡವ-ಶ್ರೀಮಂತರೆನ್ನದೆ ಎಲ್ಲರಿಗೂ ಸೂಕ್ತವಾದ ಅವಕಾಶ ದೊರೆತದ್ದು ಬೆಳಗಾವಿಯ ಸಾಂಸ್ಕೃತಿಕ ವಿಕಾಸಕ್ಕೆ ಕಾರಣವಾಯಿತು. ಸಾಮಾಜಿಕವಾದ ನ್ಯಾಯ ದೊರೆತು ಸಮಾಜದಲ್ಲಿ ಮಹತ್ವದ ಬದಲಾವಣೆಗಳಾದವು. ಶಿಕ್ಷಣವು ಧರ್ಮದಿಂದ ದೂರವಿರಬೇಕೆನ್ನುವ ವಿಚಾರ ಸಪ್ತರ್ಷಿ ಶಿಕ್ಷಕರಲ್ಲಿದ್ದುದರಿಂದಲೇ ಜಿ.ಎ. ಹಾಯಸ್ಕೂಲಿನ ಪ್ರಗತಿ, ಪ್ರತಿಷ್ಠೆ ಬೆಳೆಯತೊಡಗಿತು. ಸಮಾಜವು ವಿಘಟನೆಯ ಹಾದಿಯಲ್ಲಿರುವಾಗ ಅದರ ಸಂಘಟನೆಗಾಗಿ ಪ್ರತ್ಯೇಕ ಹೋರಾಟ ಮಾಡದೆ ಶಿಕ್ಷಣದ ಮೂಲಕ ಈ ಮಹತ್ಕಾರ್ಯವನ್ನು ಸಾಧಿಸಿದ ಶ್ರೇಯಸ್ಸು ಈ ಸಪ್ತರ್ಷಿ ಶಿಕ್ಷಕರಿಗೆ ಸಲ್ಲುತ್ತದೆ.

ಜಿ.ಎ. ಹಾಯಸ್ಕೂಲನಲ್ಲಿ ಕಲಿಯಲು ದೂರದಿಂದ ಬರುವ ವಿದ್ಯಾರ್ಥಿಗಳಿಗೆ ಊಟ-ವಸತಿ ಸೌಕರ್ಯವನ್ನು ಕೆ.ಎಲ್.ಇ ಸಂಸ್ಥೆ ಒದಗಿಸಿತು. ಈ ಹಾಯಸ್ಕೂಲ್ ಸ್ಥಾಪನೆಯಾಗುವುದಕ್ಕಿಂತ ಮೊದಲು 'ಬೆಳಗಾವಿ, ವಿಜಾಪೂರ ವೀರಶೈವ ಬೋರ್ಡಿಂಗ್' ಎಂಬ ಸಂಸ್ಥೆಯು ಈ ಎರಡೂ ಜಿಲ್ಲೆಗಳ ಲಿಂಗಾಯತ ಹಿರಿಯರಿಂದ ಸ್ಥಾಪಿಸಲ್ಪಟ್ಟಿತ್ತು. ಆದರೆ ಅದು ೧೯೧೮ರಲ್ಲಿ ನಿಂತು ಹೋಗಿದ್ದರಿಂದ ವಿದ್ಯಾರ್ಥಿಗಳಿಗೆ ತೊಂದರೆ ಉಂಟಾಯಿತು. ಆಗ ಸಂಸ್ಥೆಯು 'ಸುಖನಿವಾಸ' ಎಂಬ ಹೆಸರಿನ ಖಾಸಗಿ ವಸತಿಗೃಹವನ್ನು ಪ್ರಾರಂಭಿಸಿತು. ಇದೂ ಕೂಡ ಒಂದು ವರ್ಷದವರೆಗೆ ನಡೆದು ಮುಚ್ಚಿತು. ಮುಂದೆ ಸಿರಸಂಗಿ ಫಂಡಿನ ಟ್ರಸ್ಟಿಗಳು ತಿಂಗಳಿಗೆ ೫೦ ರೂಪಾಯಿ ಗ್ರ್ಯಾಂಟ್ ಕೊಡಲು ಒಪ್ಪಿದ್ದರಿಂದ ಕಿಲ್ಲೆಯಲ್ಲಿ ಒಂದು ಬಂಗಲೆಯನ್ನು ಬಾಡಿಗೆಗೆ ಹಿಡಿದು ಲಿಂಗಾಯತ ವಿದ್ಯಾರ್ಥಿಗಳಿಗೆ ವಸತಿ-

ಊಟದ ವ್ಯವಸ್ಥೆಯನ್ನು ಮಾಡಲಾಯಿತು. ಆದರೆ ಕೇವಲ ३೦ ವಿದ್ಯಾರ್ಥಿಗಳಿಗೆ ಅವಕಾಶವಿದ್ದದ್ದರಿಂದ ಸಮಸ್ಯೆಯಾಗತೊಡಗಿತು. ಮುಂದೆ ೧೯೨೨ರಲ್ಲಿ ಮತ್ತೊಂದು ದೊಡ್ಡ ಬಂಗಲೆಯನ್ನು ಬಾಡಿಗೆ ಹಿಡಿದು ಅದರಲ್ಲಿ ೫೦ ವಿದ್ಯಾರ್ಥಿಗಳಿಗೆ ಅವಕಾಶ ಕಲ್ಪಿಸಲಾಯಿತು. ಇಲ್ಲಿ ವಾಸಿಸಲು ಮತ್ತು ಊಟದ ಖರ್ಚಿಗಾಗಿ ಪ್ರತಿಯೊಬ್ಬ ವಿದ್ಯಾರ್ಥಿಯಿಂದ ತಿಂಗಳಿಗೆ ೧೨ ರೂಪಾಯಿಗಳನ್ನು ಪಡೆಯಲಾಗುತ್ತಿತ್ತು.

ಈ ರೀತಿಯಾಗಿ ಕೆ.ಎಲ್.ಇ ಸಂಸ್ಥೆಯವರು ಬೆಳಗಾವಿಯಲ್ಲಿ ಶಿಕ್ಷಣಕ್ಕೆ ಭದ್ರವಾದ ಬುನಾದಿಯನ್ನು ಹಾಕುತ್ತಾ ಸಾಗಿದರು. ಉತ್ತಮವಾದ ವ್ಯವಸ್ಥೆ, ಪರಿಣಾಮಕಾರಿಯಾದ ಶಿಕ್ಷಣವನ್ನು ನೀಡುತ್ತಾ ಬೆಳಗಾವಿಯು ಶೈಕ್ಷಣಿಕ ಕೇಂದ್ರವಾಗುವಂತೆ ಮಾಡಿದರು.

'ಜಿ.ಎ. ಹಾಯಸ್ಕೂಲ' ತನ್ನ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳತೊಡಗಿದಾಗ ಅದಕ್ಕೊಂದು ಸ್ವಂತ ಕಟ್ಟಡದ ಅವಶ್ಯಕತೆಯಿದೆ ಎನ್ನುವುದನ್ನು ಅರಿತ ಸಂಸ್ಥೆಯ ಅಜೀವ ಸದಸ್ಯರು ಅದಕ್ಕಾಗಿ ದೇಣಿಗೆಯನ್ನು ಸಂಗ್ರಹಿಸತೊಡಗಿದರು. ಈ ಸಂದರ್ಭದಲ್ಲಿ ವಂಟಮೂರಿಯ ರಾಜಾ ಲಖಮಗೌಡ ಸರದೇಸಾಯರು ೨೦,೦೦೦ ರೂಪಾಯಿ ದೇಣಿಗೆ ನೀಡಿದರು. ಅಲ್ಲದೆ ಅನೇಕ ದಾನಿಗಳು ಕಟ್ಟಡ ನಿರ್ಮಾಣಕ್ಕೆ ಧನ ಸಹಾಯ ಮಾಡಿದರು. ಇದರಿಂದ ಬೆಳಗಾವಿಯ ಅಮರಾಯಿ ಪ್ರದೇಶದಲ್ಲಿ ೧೭ ಎಕರೆ ಭಾಗವನ್ನು ಖರೀದಿಸಿ ಸುಮಾರು ೮೦,೦೦೦ ರೂಪಾಯಿಗಳ ಖರ್ಚಿನಿಂದ ಭವ್ಯವಾದ ಕಟ್ಟಡವನ್ನು ನಿರ್ಮಿಸಿದರು. ಮುಂದೆ ಕ್ರಿ. ಶ. ೧೯३೦ ರಲ್ಲಿ ಜಿ.ಎ. ಹಾಯಸ್ಕೂಲ ಕಿಲ್ಲೆಯಿಂದ ಈ ಹೊಸ ಕಟ್ಟಡಕ್ಕೆ ಸ್ಥಳಾಂತರಗೊಂಡಿತು.

ಬೆಳಗಾವಿಯಲ್ಲಿ ಮಾಧ್ಯಮಿಕ ಶಿಕ್ಷಣವು ಅತ್ಯಂತ ಸುವ್ಯವಸ್ಥೆಯಲ್ಲಿ ಸಾಗಿ ಅಂದಿನ ಮುಂಬೈ ಪ್ರಾಂತದಲ್ಲಿಯೇ ಪ್ರಮುಖ ವಿದ್ಯಾಕೇಂದ್ರವಾಗಿ ರೂಪಗೊಂಡಿತು. ಬೆನನ್ ಸ್ಮಿತ್ ಹೈಸ್ಕೂಲ, ಸರದಾರ ಹೈಸ್ಕೂಲ್, ಸೇಂಟ್ ಪಾಲ್ ಹೈಸ್ಕೂಲ್, ಮಹಿಳಾ ಹೈಸ್ಕೂಲ್–ಹೀಗೆ ಇವೆಲ್ಲವುಗಳಿಂದ ಮಾಧ್ಯಮಿಕ ಶಿಕ್ಷಣವು ಗಟ್ಟಿಗೊಂಡಿತು. ಆದರೆ ಉನ್ನತ ಶಿಕ್ಷಣವನ್ನು ಪಡೆಯಬೇಕೆಂದರೆ ಕೊಲ್ಲಾಪುರ, ಸಾಂಗಲಿ, ಪುಣೆ, ಮುಂಬೈಗೆ ಹೋಗಬೇಕಾಗಿತ್ತು. ಧಾರವಾಡದಲ್ಲಿ ಹೊಸದಾಗಿ ಪ್ರಾರಂಭಗೊಂಡ (೧೯೧೭) ಕರ್ನಾಟಕ ಕಾಲೇಜಿನಲ್ಲಿ ಪ್ರವೇಶ ದೊರೆಯುವುದು ಸಾಹಸದ ಕೆಲಸವಾಗಿತ್ತು. ಹೀಗಾಗಿ ಮಾಧ್ಯಮಿಕ ಶಿಕ್ಷಣವನ್ನು ಪಡೆದ ವಿದ್ಯಾರ್ಥಿಗಳು ಆರ್ಥಿಕ ತೊಂದರೆಗಳಿಂದಾಗಿ ಉನ್ನತ ಶಿಕ್ಷಣವನ್ನು ಪಡೆಯಲು ತೊಂದರೆ ಅನುಭವಿಸತೊಡಗಿದರು. ಇದನ್ನರಿತ ಕೆ.ಎಲ್.ಇ. ಸಂಸ್ಥೆಯ ಆಜೀವ ಸದಸ್ಯರು ಬೆಳಗಾವಿಯಲ್ಲಿಯೇ ಕಾಲೇಜನ್ನು ಸ್ಥಾಪಿಸಲು ತೀರ್ಮಾನಿಸಿದರು. ಕ್ರಿ. ಶ. ೧೯೨೧ರಲ್ಲಿಯೇ ಸಂಸ್ಥೆಯ ವತಿಯಿಂದ ಆರ್ಟ್ಸ್ ಕಾಲೇಜನ್ನು ಸ್ಥಾಪಿಸುವ ವಿಚಾರವನ್ನು ಸಂಸ್ಥೆಯ ಜನರಲ್ ಸೆಕ್ರೆಟರಿಯವರು ಹೊಂದಿದ್ದರು.[೨೮] ಕ್ರಿ. ಶ. ೧೯೨೭ರಲ್ಲಿ ಎಂ. ಆರ್. ಸಾಖರೆಯವರು ಕಾಲೇಜು ಸ್ಥಾಪಿಸುವ ಯೋಜನೆಯನ್ನು ರೂಪಿಸಿಕೊಂಡು ಎಚ್. ಎಫ್. ಕಟ್ಟೀಮನಿ, ಶಿ.ಶಿ. ಬಸವನಾಳರ ಜೊತೆಗೆ ಅಂದಿನ ಮುಂಬೈ ವಿಶ್ವವಿದ್ಯಾಲಯದ ಕುಲಪತಿಗಳಾದ

ಸರ್. ಸೆಟಲ್‌ವಾಡ ಹಾಗೂ ಸಿಂಡಿಕೇಟ್ ಸದಸ್ಯರಿಗೆ ಮನವಿಯನ್ನು ಅರ್ಪಿಸಿದರು. ಅದರಂತೆ ಮುಂಬೈ ವಿಶ್ವವಿದ್ಯಾಲಯದಲ್ಲಿ ಸಿನೇಟ ಮತ್ತು ಸಿಂಡಿಕೇಟ ಸಭೆಗಳಲ್ಲಿ ಇವರ ಯೋಜನೆ ಮಾನ್ಯವಾಯಿತು. ಆದರೆ ಧಾರವಾಡದ ಕರ್ನಾಟಕ ಕಾಲೇಜು, ಸಾಂಗಲಿಯ ವಿಲಿಂಗ್ಡನ್ ಕಾಲೇಜು ಮತ್ತು ಕೊಲ್ಲಾಪುರದ ರಾಜಾರಾಮ ಕಾಲೇಜಿನ ಪ್ರಿನ್ಸಿಪಾಲರುಗಳು ಬೆಳಗಾವಿಯಲ್ಲಿ ಕಾಲೇಜು ಸ್ಥಾಪಿಸಲಿಕ್ಕೆ ವಿರೋಧ ವ್ಯಕ್ತಪಡಿಸಿದರು. ಇದರಿಂದ ಸರ್ಕಾರವು ಬೆಳಗಾವಿಯ ಕಾಲೇಜನ್ನು ಪ್ರಾರಂಭಿಸಲು ನಿರಾಕರಿಸಿತು. ಇದರಿಂದ ಕೆ.ಎಲ್.ಇ. ಸಂಸ್ಥೆಯು ತೀವ್ರ ಹತಾಶೆಗೊಳಗಾದರೂ ಪ್ರಯತ್ನವನ್ನು ಬಿಡಲಿಲ್ಲ. ಈಗಾಗಲೇ ಇಂಗ್ಲೆಂಡಿನಿಂದ ರ‍್ಯಾಂಗ್ಲರ ಪದವಿಯನ್ನು ಪಡೆದುಕೊಂಡು ಬಂದಿದ್ದ ಡಿ. ಸಿ. ಪಾವಟೆಯವರನ್ನು ನಿಯೋಜಿತ ಪ್ರಿನ್ಸಿಪಾಲರೆಂದು ನೇಮಕ ಮಾಡುವುದಾಗಿ ಅವರನ್ನು ಒಪ್ಪಿಸಿದ್ದರು. ಆದರೆ ಸರ್ಕಾರದ ಅನುಮತಿ ಸಿಗದಿದ್ದಾಗ ಪಾವಟೆಯವರು ೧೯೨೮ರಲ್ಲಿ ಬನಾರಸ ಹಿಂದೂ ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರೆಂದು ಸೇರಿಕೊಂಡರು. ಮುಂದೆ ೧೯೩೦ರಲ್ಲಿ ಶ್ರೀ ಎಸ್. ಸಿ. ನಂದಿಮಠರು ಡಾಕ್ಟರೇಟ ಪದವಿಯನ್ನು ಪಡೆದುಕೊಂಡು ಇಂಗ್ಲೆಂಡಿನಿಂದ ಮರಳಿ ಬಂದಿದ್ದರು. ೧೯೩೧ರಲ್ಲಿ ನಂದಿಮಠರು ಗಿಲಗಂಚಿ-ಅರಟಾಳ ಹೈಸ್ಕೂಲಿನಲ್ಲಿ ಶಿಕ್ಷಕರಾಗಿ ಸೇರಿಕೊಂಡರು. ಆಗ ಸಾಖರೆಯವರು ಮುಖ್ಯೋಪಾಧ್ಯಾಯ ಹುದ್ದೆಯನ್ನು ಡಾ. ನಂದಿಮಠರಿಗೆ ಬಿಟ್ಟುಕೊಟ್ಟರು. ಡಾ. ನಂದೀಮಠರ ಆಗಮನದಿಂದ ಉತ್ಸಾಹಗೊಂಡ ಆಜೀವ ಸದಸ್ಯರು ಕಾಲೇಜು ಸ್ಥಾಪನೆಗೆ ಪುನಃ ಪ್ರಯತ್ನಿಸಿದರು. ಆಗ ಮುಂಬೈ ವಿಶ್ವವಿದ್ಯಾಲಯದ ಕುಲಪತಿಗಳಾಗಿದ್ದ ನ್ಯಾಮೂರ್ತಿ ಶ್ರೀ ಚಂದಾವರಕರ ಅವರು ಅನುಮೋದಿಸಿ ಮುಂಬೈ ಗವರ್ನರ್ ಆಗಿದ್ದ ಸರ್. ವಿಲ್‌ಸನ್ ಅವರಿಗೆ ಕಳಿಸಿದರು. ಅದು ಅನುಮೋದನೆಗೊಂಡು ಅಂದು ಶಿಕ್ಷಣ ಮಂತ್ರಿಗಳಾಗಿದ್ದ ಸರ್. ಸಿದ್ದಪ್ಪ ಕಂಬಳಿಯವರ ಹತ್ತಿರ ಬಂದಿತು. ಕಂಬಳಿಯವರು ಅತ್ಯಂತ ಮುತುವರ್ಜಿಯಿಂದ ಮುಂಬೈ ಲೆಜಿಸ್ಲೇಟಿವ್ ಅಸೆಂಬ್ಲಿಯಲ್ಲಿ ಮಂಡಿಸಿ ಪಾಸು ಮಾಡಿಸಿದರು. ಇದರಿಂದ ೧೯೩೩ ರಲ್ಲಿ ಕಮೀಶನ್ ಬೆಳಗಾವಿಗೆ ಬಂದು ವಸ್ತುಸ್ಥಿತಿಯನ್ನು ಪರಿಶೀಲಿಸಿ ಕಾಲೇಜು ಸ್ಥಾಪನೆಗೆ ಅನುಮತಿಯನ್ನು ನೀಡುವಂತೆ ಶಿಫಾರಸು ಮಾಡಿತು. ಇದರಿಂದ ೧೯೩೩ ಜೂನ್ ತಿಂಗಳಲ್ಲಿ ಕಾಲೇಜು ಸ್ಥಾಪನೆಗೆ ಮುಂಬೈ ವಿಶ್ವವಿದ್ಯಾಲಯವು ಅನುಮತಿ ನೀಡಿತು. ಹೀಗೆ ಬೆಳಗಾವಿಯಲ್ಲಿ ಮೊಟ್ಟಮೊದಲ ಕಾಲೇಜು ಸ್ಥಾಪನೆಗೊಂಡಿತು. ಈ ಕಾಲೇಜಿಗೆ ಡಾ. ಶಿ. ಚೆ. ನಂದೀಮಠರು ಪ್ರಿನ್ಸಿಪಾಲರಾಗಿ, ಶಿ.ಶಿ. ಬಸವನಾಳರು ವೈಸ್ ಪ್ರಿನ್ಸಿಪಾಲರಾಗಿ ಕಾರ್ಯನಿರ್ವಹಿಸತೊಡಗಿದರು. ಮುಂದೆ ಕಾಲೇಜಿಗೆ ಹೆಸರಿಡಲು ಸಭೆ ಸೇರಿ ಶಿಕ್ಷಣ ಪ್ರಸಾರಕ್ಕೆ ತಮ್ಮ ಸರ್ವಸ್ವವನ್ನೇ ದಾನ ನೀಡಿದ ಸಿರಸಂಗಿ ಲಿಂಗರಾಜರ ಹೆಸರನ್ನು ಕಾಲೇಜಿಗೆ ಇಡಬೇಕೆಂದು ಮಂಡಳಿಯು ತೀರ್ಮಾನಿಸಿತು. ಅದರಂತೆ ೧೯೩೩ ಆಗಸ್ಟ ೨೪ ರಂದು 'ಲಿಂಗರಾಜ ಕಾಲೇಜು' ಎಂದು ನಾಮಕರಣ ಮಾಡಲಾಯಿತು. ಮುಂದೆ ಸಪ್ಟಂಬರ್ ೨೯ ರಂದು ಅಂದಿನ ಮುಂಬೈ ಸರಕಾರದ ಗವರ್ನರಾಗಿದ್ದ ಸರ್. ಫ್ರೆಡರಿಕ್ ಸೈಕ್ಸ ಅವರಿಂದ ಕಾಲೇಜನ್ನು ಉದ್ಘಾಟನೆಗೊಳಿಸಲಾಯಿತು.

ಈ ಎಲ್ಲ ಬೆಳವಣಿಗೆಗಳನ್ನು ನೋಡಿದಾಗ ಅಂದಿನ ಶಿಕ್ಷಣ ವ್ಯವಸ್ಥೆಯ ಸ್ಪಷ್ಟ ಚಿತ್ರಣ ಗೋಚರವಾಗುತ್ತದೆ. ಬೆಳಗಾವಿಯಂತಹ ಗಡಿ ಭಾಗದಲ್ಲಿ ಶಿಕ್ಷಣ ಕ್ಷೇತ್ರವನ್ನು ನಿರ್ಮಿಸಲು ಎದುರಾದ ತೊಂದರೆಗಳು, ಅವುಗಳನ್ನು ನಿವಾರಿಸಿಕೊಂಡು ಯಶಸ್ಸನ್ನು ಪಡೆದ ಶಿಕ್ಷಣ ಪ್ರೇಮಿಗಳ ಹೋರಾಟದ ಫಲವೇ ಬೆಳಗಾವಿಯು ಶೈಕ್ಷಣಿಕ ಪ್ರಗತಿಯನ್ನು ಸಾಧಿಸಲಿಕ್ಕೆ ಕಾರಣವಾಯಿತು.

ಲಿಂಗರಾಜ ಕಾಲೇಜಿನ ಸ್ಥಾಪನೆಯೊಂದಿಗೆ ಉತ್ತರ ಕರ್ನಾಟಕದ ಭಾಗದಲ್ಲಿ ಕನ್ನಡತನವು ಗಟ್ಟಿಗೊಳ್ಳುತ್ತಾ ಸಾಗಿತು. ಕನ್ನಡಿಗರು ಮೈಕೊಡವಿಕೊಂಡು ಮೇಲೆದ್ದರು. ದೇಶದ ಮೂಲೆಮೂಲೆಗಳಿಂದ, ಹೊರದೇಶಗಳಿಂದಲೂ ಇಲ್ಲಿ ಶಿಕ್ಷಣ ಪಡೆಯಲು ವಿದ್ಯಾರ್ಥಿಗಳು ಆಗಮಿಸತೊಡಗಿದರು. ಶಿಸ್ತುಬದ್ಧವಾದ ಪರಿಣಾಮಕಾರಿಯಾದ ಶಿಕ್ಷಣ ಇಲ್ಲಿಯ ಉಪನ್ಯಾಸಕರಿಂದ ದೊರೆಯತೊಡಗಿತು. ಶಿಕ್ಷಣಕ್ಕೆ ಹೊಸ ಆಯಾಮವನ್ನು ಲಿಂಗರಾಜ ಕಾಲೇಜು ಒದಗಿಸಿತು.

೧೯೩೫ ರಲ್ಲಿ ಲಿಂಗರಾಜ ಕಾಲೇಜಿನಲ್ಲಿ ವಿಜ್ಞಾನದ ವಿಭಾಗವು ಕಾರ್ಯಾರಂಭ ಮಾಡಿತು. ೧೯೩೯ ರಲ್ಲಿ ಎಂ.ಎ. ತರಗತಿಗಳು ಲಿಂಗರಾಜ ಕಾಲೇಜಿನಲ್ಲಿ ಪ್ರಾರಂಭಗೊಂಡವು. ಕನ್ನಡ, ಇಂಗ್ಲಿಷ, ಸಂಸ್ಕೃತ ತತ್ವಜ್ಞಾನ ವಿಷಯಗಳಲ್ಲಿ ಎಂ. ಎ. ಕಲಿಕೆಗೆ ಅವಕಾಶ ಕಲ್ಪಿಸಲಾಯಿತು. ರಾಜಾ ಲಖಮಗೌಡರು ಐವತ್ತು ಸಾವಿರ ರೂಪಾಯಿಗಳನ್ನು ದೇಣಿಗೆ ನೀಡಿದ್ದರಿಂದ ೧೯೪೪ ರಲ್ಲಿ ಲಿಂಗರಾಜ ಕಾಲೇಜಿನಿಂದ ವಿಜ್ಞಾನ ವಿಭಾಗವು ಬೇರ್ಪಟ್ಟು ಸ್ವತಂತ್ರ ಸಂಸ್ಥೆಯಾಗಿ ರೂಪಗೊಂಡಿತು. ಈ ಕಾಲೇಜಿಗೆ 'ರಾಜಾ ಲಖಮಗೌಡ ವಿಜ್ಞಾನ ಸಂಸ್ಥೆ'ಯೆಂದು ನಾಮಕರಣ ಮಾಡಲಾಯಿತು. ಭಾರತರತ್ನ ಡಾ. ಸಿ.ವಿ. ರಾಮನ್‌ರು ಈ ಕಾಲೇಜನ್ನು ಉದ್ಘಾಟಿಸಿದರು. ರಾಜಾ ಲಖಮಗೌಡ ವಿಜ್ಞಾನ ಮಹಾವಿದ್ಯಾಲಯ ಸ್ಥಾಪನೆಗೊಂಡ ನಂತರ ಬೆಳಗಾವಿ ಜನರ ಭಾವನೆಗಳೂ ಬದಲಾವಣೆಗೊಳ್ಳತೊಡಗಿದವು. ವಿಜ್ಞಾನ ಶಿಕ್ಷಣವನ್ನು ಪಡೆದು ವೈದ್ಯಕೀಯ ರಂಗ ಪ್ರವೇಶಿಸುವ ಅವಕಾಶ ಒದಗಿತು. ಅದರಲ್ಲಿಯೂ ಸಾಮಾನ್ಯ ವರ್ಗದ ಜನರಿಗೆ ವರದಾನವಾಯಿತು. ಬಡವರು ಪ್ರತಿಭೆಗಳಿದ್ದರೂ ಆರ್ಥಿಕ ಪರಿಸ್ಥಿತಿಯಿಂದ ದೂರದ ಕೊಲ್ಲಾಪುರ, ಪುಣಾಕ್ಕೆ ಹೋಗಲಾರದೆ ವಿಜ್ಞಾನ ಶಿಕ್ಷಣದಿಂದ ವಂಚಿತರಾಗುತ್ತಿದ್ದರು. ಕೇವಲ ಬ್ರಾಹ್ಮಣರಿಗೆ, ಶ್ರೀಮಂತರಿಗೆ ಮೀಸಲಾಗಿದ್ದ ಕ್ಷೇತ್ರದ ಬಾಗಿಲುಗಳು ಎಲ್ಲಾ ವರ್ಗದ ಜನರಿಗೂ ತೆರೆದುಕೊಂಡವು. ಹೀಗಾಗಿ ರಾಜಾ ಲಖಮಗೌಡ ವಿಜ್ಞಾನ ಮಹಾವಿದ್ಯಾಲಯವು ಮಹತ್ವವನ್ನು ಪಡೆದುಕೊಂಡಿತು.

ಬೆಳಗಾವಿಯಲ್ಲಿ ಕೆ.ಎಲ್.ಇ. ಸಂಸ್ಥೆ ಸ್ಥಾಪನೆಗೊಂಡು ಶೈಕ್ಷಣಿಕ ಕ್ಷೇತ್ರದಲ್ಲಿ ಮಹತ್ವದ ಬೆಳವಣಿಗೆಯನ್ನುಂಟು ಮಾಡುತ್ತಿರುವ ಸಂದರ್ಭದಲ್ಲಿಯೇ **ನಾಗನೂರು ರುದ್ರಾಕ್ಷಿಮಠದ ಪ್ರಸಾದನಿಲಯವು** ಸ್ಥಾಪನೆಗೊಂಡು ಕೆ.ಎಲ್.ಇ. ಸಂಸ್ಥೆಯ ವಿದ್ಯಾರ್ಥಿಗಳಿಗೆ ಅನ್ನ, ಆಶ್ರಯ ದೊರೆಯುವಂತಾಯಿತು. ಕ್ರಿ. ಶ. ೧೯೩೨ ಜೂನ್ ೬ ರಂದು ವಿದ್ಯಾರ್ಥಿ ಪ್ರಸಾದನಿಲಯವು ಬೆಳಗಾವಿಯ ಕಿಲ್ಲೆಯಲ್ಲಿ ಪ್ರಾರಂಭಗೊಂಡಿತು. ಬೆಳಗಾವಿಯ ನಡೆದಾಡುವ ದೇವರೆಂದೇ

ಸಮಾಜದಲ್ಲಿ ಗುರುತಿಸಲ್ಪಡುವ ಪರಮ ಪೂಜ್ಯ ಶಿವಬಸವಸ್ವಾಮಿಗಳ ಪರಿಶ್ರಮದಿಂದ ಪ್ರಸಾದನಿಲಯವು ಮಹತ್ವದ ಬೆಳವಣಿಗೆಯನ್ನು ಕಾಣತೊಡಗಿತು. ಬೆಳಗಾವಿ ಭಾಗದ ಶಿಕ್ಷಣ ವಿಕಾಸಕ್ಕೆ ಈ ಪ್ರಸಾದ ನಿಲಯವು ವರದಾನವಾಯಿತು. ಪ್ರಾರಂಭದಲ್ಲಿ ಜೆ.ಎ. ಹಾಯಸ್ಕೂಲಿನಲ್ಲಿ ಕಲಿಯುವ ವಿದ್ಯಾರ್ಥಿಗಳು ಇಲ್ಲಿರುತ್ತಿದ್ದರು. ಮುಂದೆ ಲಿಂಗರಾಜ ಕಾಲೇಜು ಸ್ಥಾಪನೆಗೊಂಡ ಮೇಲೆ ವಿದ್ಯಾರ್ಥಿಗಳ ಸಂಖ್ಯೆ ಬೆಳೆಯತೊಡಗಿತು. ಇದರಿಂದ ಶಹಪೂರದಲ್ಲಿ ದೊಡ್ಡದಾದ ಮನೆಯೊಂದನ್ನು ಬಾಡಿಗೆ ಪಡೆದು ಅಲ್ಲಿ ಪ್ರಸಾದನಿಲಯವು ಮುಂದುವರೆಯಿತು. ಬೆಳಗಾವಿಯ ಸಾಮಾಜಿಕ, ಧಾರ್ಮಿಕ, ಸಾಹಿತ್ಯಿಕ, ಸಾಂಸ್ಕೃತಿಕ ವಲಯದಲ್ಲಿ ಈ ಪ್ರಸಾದ ನಿಲಯವು ಮಹತ್ವದ ಬದಲಾವಣೆಗಳಿಗೆ ಕಾರಣವಾಯಿತು. ಶಿಕ್ಷಣದಿಂದ ಸಮಾಜ ನಿರ್ಮಾಣವಾಗುತ್ತದೆ ಎನ್ನುವುದನ್ನು ಈ ಪ್ರಸಾದನಿಲಯ ಸಾಧಿಸಿತೋರಿಸಿದೆ. ಬೆಳಗಾವಿಯಲ್ಲಿ ಕನ್ನಡ ಸಂಸ್ಕೃತಿಯ ನಿರ್ಮಾಣದ ಹೊಣೆಯನ್ನು ಕೆ.ಎಲ್.ಇ. ಸಂಸ್ಥೆ ಮತ್ತು ನಾಗನೂರು ರುದ್ರಾಕ್ಷಿಮಠದ ಪ್ರಸಾದನಿಲಯಗಳು ಹೊತ್ತುಕೊಂಡವು. ಯಾವುದೇ ಕ್ರಾಂತಿಯಿಲ್ಲದೆ, ಹೋರಾಟವಿಲ್ಲದೆ, ಅಕ್ಷರದಾಸೋಹ, ಅನ್ನದಾಸೋಹದ ಮೂಲಕ ಕಳೆದು ಹೋದ ಕನ್ನಡ ಸಂಸ್ಕೃತಿಯನ್ನು ಮರಳಿ ಕಟ್ಟಿದ್ದು ಬೆಳಗಾವಿಯ ಚರಿತ್ರೆಯಲ್ಲಿ ವಿಶೇಷವಾದದ್ದಾಗಿದೆ.

೧೯೩೯ ನೆಯ ವರ್ಷವು ಬೆಳಗಾವಿಯ ಶೈಕ್ಷಣಿಕ ಕ್ಷೇತ್ರದಲ್ಲಿ ಅತ್ಯಂತ ಮಹತ್ವದ್ದಾಗಿದೆ. ಈ ವರ್ಷ ಮೂರು ಮಹತ್ವದ ಮಹಾವಿದ್ಯಾಲಯಗಳು ಬೆಳಗಾವಿಯಲ್ಲಿ ಸ್ಥಾಪನೆಗೊಂಡವು. ಅವುಗಳೆಂದರೆ ಸರ್ಕಾರಿ ಮಾಧ್ಯಮಿಕ ಶಿಕ್ಷಕರ ತರಬೇತಿ ಸಂಸ್ಥೆ, ಕೆ.ಎಲ್.ಇ. ಸಂಸ್ಥೆಯ ಪ್ರಾಥಮಿಕ ಶಾಲಾ ಶಿಕ್ಷಕರ ತರಬೇತಿ ಕೇಂದ್ರ ಮತ್ತು ರಾಜಾ ಲಖಮಗೌಡ ಕಾನೂನು ಮಹಾವಿದ್ಯಾಲಯ. ಈ ಮೂರು ಸಂಸ್ಥೆಗಳಿಂದ ಬೆಳಗಾವಿಯು ಶೈಕ್ಷಣಿಕ ಕ್ಷೇತ್ರದಲ್ಲಿ ಮಹತ್ವದ ಬೆಳವಣಿಗೆಯನ್ನು ಹೊಂದಿ ಪ್ರಮುಖ ವಿದ್ಯಾಕೇಂದ್ರವಾಗಿ ರೂಪಗೊಳ್ಳತೊಡಗಿತು.

ಬೆಳಗಾವಿಯಲ್ಲಿ ಸರ್ಕಾರಿ ಮಾಧ್ಯಮಿಕ ಶಾಲಾ ತರಬೇತಿ ಕೇಂದ್ರ ಸ್ಥಾಪನೆಯಾಗಲಿಕ್ಕೆ ಕೆ.ಎಲ್.ಇ ಸಂಸ್ಥೆಯೇ ಅಪರೋಕ್ಷವಾಗಿ ಕಾರಣವಾಗಿದೆ. ಕೆ.ಎಲ್.ಇ. ಸಂಸ್ಥೆ ವರ್ಷದಿಂದ ವರ್ಷಕ್ಕೆ ಬೆಳೆಯುತ್ತಾ ಸಾಗಿದಂತೆ ಶಿಕ್ಷಣದ ಬೆಳಗಾವಿಯ ಸಾಂಸ್ಕೃತಿಕ ಜೀವನದಲ್ಲಿ ಸರಕಾರಿ ಮಾಧ್ಯಮಿಕ ಶಿಕ್ಷಕರ ತರಬೇತಿ ಕೇಂದ್ರ ಸ್ಥಾಪನೆಗೊಂಡಿದ್ದು ಅತ್ಯಂತ ಮಹತ್ವದ್ದಾಗಿದೆ. ಈ ಕಾಲೇಜು ಸ್ಥಾಪನೆಯಾಗಲು ಕೆ.ಎಲ್.ಇ. ಸಂಸ್ಥೆಯೇ ಅಪರೋಕ್ಷವಾಗಿ ಕಾರಣವಾಗಿವೆ. ಕೆ.ಎಲ್.ಇ ಸಂಸ್ಥೆಯು ಮಾಧ್ಯಮಿಕ ಶಿಕ್ಷಕರಿಗೆ ತರಬೇತಿ ಕಾಲೇಜನ್ನು ಸ್ಥಾಪಿಸಲು ಅಂದಿನ ಮುಂಬೈ ವಿಶ್ವವಿದ್ಯಾಲಯಕ್ಕೆ ಮನವಿಯನ್ನು ಸಲ್ಲಿಸಿತು. ವಿಶ್ವವಿದ್ಯಾಲಯದಲ್ಲಿ ಈ ಅರ್ಜಿಯ ಪರಿಶೀಲನೆ ನಡೆದು ೧೯೩೮ ರಲ್ಲಿ ಪರಿಶೀಲನಾ ಸಮಿತಿಯನ್ನು ಬೆಳಗಾವಿಗೆ ಕಳುಹಿಸಿಕೊಡುವವರಿದ್ದರು. ಆದರೆ ಒಮ್ಮಿಂದೊಮ್ಮೆಲೆ ತಮ್ಮ ವಿಚಾರವನ್ನು ಬದಲಿಸಿ ೧೯೩೯ ರಲ್ಲಿ ಸರ್ಕಾರದವರೇ ಬೆಳಗಾವಿಯಲ್ಲಿ ಮಾಧ್ಯಮಿಕ ಶಿಕ್ಷಕರಿಗೆ ತರಬೇತಿ ನೀಡುವ ಸರ್ಕಾರಿ ಶಿಕ್ಷಣ ಕಾಲೇಜನ್ನು ಸ್ಥಾಪಿಸಿದರು. ಒಂದು ವೇಳೆ ಕೆ.ಎಲ್.ಇ. ಸಂಸ್ಥೆಯವರು ಕಾಲೇಜನ್ನು ಸ್ಥಾಪಿಸಲು ಮನವಿಯನ್ನು

ಮಾಡಿಕೊಳ್ಳದಿದ್ದರೆ ಸರ್ಕಾರವು ಬೆಳಗಾವಿಯಲ್ಲಿ ಈ ಕಾಲೇಜನ್ನು ಸ್ಥಾಪಿಸಲು ಸಾಧ್ಯವಿರುತ್ತಿರಲಿಲ್ಲ. ಇಲ್ಲಿ ಮುಖ್ಯವಾಗಿ ಕಂಡುಬರುವ ಸತ್ಯವೆಂದರೆ ಕೆ.ಎಲ್.ಇ. ಸಂಸ್ಥೆಯ ಬೆಳವಣಿಗೆ ಅಂದಿನ ಮುಂಬೈ ಸರ್ಕಾರಕ್ಕೆ ಸವಾಲಾಗಿತ್ತು. ಕೆ.ಎಲ್.ಇ. ಸಂಸ್ಥೆ ಒಂದೊಂದು ಕಾಲೇಜನ್ನು ಸ್ಥಾಪಿಸಬೇಕೆಂದರೂ ಅನುಮತಿಗಾಗಿ ತೊಂದರೆಯನ್ನು ಅನುಭವಿಸಬೇಕಾಗುತ್ತಿತ್ತು. ಸರ್ದಾರ ಹೈಸ್ಕೂಲಿನ ಕಟ್ಟಡದಲ್ಲಿ ಪ್ರಾರಂಭಗೊಂಡ ಈ ಮಹಾವಿದ್ಯಾಲಯವು ಉತ್ತರ ಕರ್ನಾಟಕದ ನಾಲ್ಕು ಜಿಲ್ಲೆಗಳಿಗೆಲ್ಲ ಇದೊಂದೇ ಆಗಿತ್ತು. ಕಾಲೇಜಿನ ಪ್ರಥಮ ಪ್ರಾಚಾರ್ಯರಾಗಿ ಕನ್ನಡ ನಾಡಿನ ದೊಡ್ಡ ವಿದ್ವಾಂಸರೆಂದು ಪ್ರಸಿದ್ಧರಾದ, ಕೇಂಬ್ರಿಜ್ ವಿಶ್ವವಿದ್ಯಾಲಯದಿಂದ ರ್‍ಯಾಂಗಲರ್ ಪದವಿ ಪಡೆದುಕೊಂಡ ಪಿ.ಎಸ್. ಕಟ್ಟಿಯವರು ನೇಮಕಗೊಂಡರು. ಅಲ್ಲದೆ ಪ್ರೊ. ಮೀಮಾಂಸಿ, ಪ್ರೊ. ಆರ್. ಎ. ಕುಲಕರ್ಣಿ ಮುಂತಾದ ವಿದ್ವಾಂಸರು ಅಲ್ಲಿ ಪ್ರಾಧ್ಯಾಪಕರಾಗಿ ಸೇರಿಕೊಂಡು ಕಾಲೇಜಿನ ಪ್ರತಿಷ್ಠೆಯನ್ನು ಹೆಚ್ಚಿಸಿದರು. ಕಾಲೇಜಿನ ಪ್ರಾರಂಭದ ವರ್ಷದಲ್ಲಿಯೇ ಇಲ್ಲಿ ಬೇರೆ ಬೇರೆ ಜಿಲ್ಲೆಗಳಿಂದ ವಿದ್ಯಾರ್ಥಿಗಳು ಆಗಮಿಸಿದರು. ವಿದ್ಯಾರ್ಥಿಗಳ ವಸತಿಗಾಗಿ ಸರ್ದಾರ ಹಾಯಸ್ಕೂಲಿನ ಹಾಸ್ಟೆಲಿನಲ್ಲಿ ಅವಕಾಶ ಕಲ್ಪಿಸಲಾಯಿತು. ಇಲ್ಲಿ ತರಬೇತಿ ಪಡೆದ ಅನೇಕರು ನಾಡಿನ ಬೇರೆ ಬೇರೆ ಭಾಗಗಳಲ್ಲಿ ಶಿಕ್ಷಕರಾಗಿ, ಶಿಕ್ಷಣ ಇಲಾಖೆಯ ಅಧಿಕಾರಿಗಳಾಗಿ, ಶಿಕ್ಷಣ ತಜ್ಞರಾಗಿ, ಸಾಹಿತಿಗಳಾಗಿ ಉತ್ತಮ ಸಾಧನೆಯನ್ನು ಮಾಡಿದ್ದಾರೆ. ಸಾಹಿತಿಗಳಾದ ಎನ್ಕೆ ಕುಲಕರ್ಣಿ, ಕೃಷ್ಣಮೂರ್ತಿ ಪುರಾಣಿಕ, ಪಿ.ಕೆ ಬಾಗೋಜಿ ಮುಂತಾದ ಸಾಹಿತಿಗಳು, ರೋಹಿಡೇಕರ ಶಾಮರಾಯರಂತಹ ಶಿಕ್ಷಣ ತಜ್ಞರು ಈ ಮಹಾವಿದ್ಯಾಲಯದ ವಿದ್ಯಾರ್ಥಿಗಳಾಗಿದ್ದರು.

೧೯೩೯ ರಲ್ಲಿ ಬೆಳಗಾವಿಯಲ್ಲಿ ಪ್ರಾರಂಭಗೊಂಡ ಮತ್ತೊಂದು ಮಹತ್ವದ ಮಹಾವಿದ್ಯಾಲಯವೆಂದರೆ ಕೆ.ಎಲ್.ಇ. ಸಂಸ್ಥೆಯವರ ಪ್ರಾಥಮಿಕ ಶಿಕ್ಷಕರ ತರಬೇತಿ ಕೇಂದ್ರ. ಈಗ ಇದು ಬಿ.ಎ. ಹಂಚಿನಾಳ ಪ್ರಾಥಮಿಕ ಶಿಕ್ಷಕರ ತರಬೇತಿ ಮಹಾವಿದ್ಯಾಲಯವೆಂಬ ಹೆಸರಿನಿಂದ ನಡೆಯುತ್ತಿದೆ. ಒಳ್ಳೆಯ ಶಿಕ್ಷಕ ಒಳ್ಳೆಯ ವಿದ್ಯಾರ್ಥಿಯನ್ನು ತಯಾರಿಸಬಲ್ಲ ಎನ್ನುವುದನ್ನು ಅರಿತ ಸಪ್ತರ್ಷಿ ಶಿಕ್ಷಕರು ಪ್ರಾಥಮಿಕ ಶಿಕ್ಷಣಕ್ಕೆ ಭದ್ರವಾದ ಬುನಾದಿಯನ್ನು ಹಾಕಿದರು. ಅಂದು ಈ ಶಿಕ್ಷಣವನ್ನು ಪಡೆದುಕೊಳ್ಳಲು ಉತ್ತರ ಕರ್ನಾಟಕದ ನಾಲ್ಕು ಜಿಲ್ಲೆಗಳಿಗೆ ಧಾರವಾಡದಲ್ಲಿರುವ ಒಂದೇ ಕಾಲೇಜು ಆಧಾರವಾಗಿತ್ತು. ಈಗಾಗಲೇ ಕೆಲವು ವರ್ಷ ಬೆಳಗಾವಿಯಲ್ಲಿ 'ಟ್ರೇನಿಂಗ್ ಕಾಲೇಜ್' ಎಂಬ ಹೆಸರಿನಿಂದ ನಡೆದು ಬೆಳಗಾವಿಯ ಶೈಕ್ಷಣಿಕ ವಲಯದಲ್ಲಿ ಮಹತ್ವದ ಬೆಳವಣಿಗೆಯನ್ನುಂಟುಮಾಡಿ ತರುವಾಯ ಇದು ಧಾರವಾಡಕ್ಕೆ ಸ್ಥಳಾಂತರಗೊಂಡಿತ್ತು. ಅಲ್ಲಿ ಎಲ್ಲರಿಗೂ ಅವಕಾಶಗಳು ದೊರೆಯದಿದ್ದರಿಂದ ಬೆಳಗಾವಿಯಲ್ಲೊಂದು ಇಂತಹ ಕಾಲೇಜಿನ ಅವಶ್ಯಕತೆ ಇರುವುದನ್ನು ಮನಗಂಡು ಕ್ರಿ. ಶ. ೧೯೩೯ ರಲ್ಲಿ ಪ್ರಾಥಮಿಕ ಶಿಕ್ಷಕರ ತರಬೇತಿ ಮಹಾವಿದ್ಯಾಲಯವನ್ನು ಸ್ಥಾಪಿಸಿದರು. ಶಿಕ್ಷಕರ ತರಬೇತಿಗೆ ಪ್ರಾಯೋಗಿಕ ಪಾಠ ನಡೆಸಲು ೧೯೪೨ ರಲ್ಲಿ ಕಾಲೇಜಿನ ಒಂದು ಅಂಗವಾಗಿ ಕನ್ನಡ ಪ್ರಾಥಮಿಕ ಶಾಲೆಯನ್ನು ಪ್ರಾರಂಭಿಸಿದರು. ಈ ಕಾಲೇಜಿಗೆ ಬಿ. ಎಸ್. ಹಂಚಿನಾಳರು ಪ್ರಾಚಾರ್ಯರಾಗಿ ಉತ್ತಮವಾದ ಶಿಕ್ಷಣವನ್ನು ನೀಡಿದರು.

ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಆಧುನಿಕ ಬೆಳಗಾವಿಯನ್ನು ರೂಪಿಸಿದವರಲ್ಲಿ ಹೆಚ್ಚಿನವರು ವೀರಶೈವರು. ಅದರಲ್ಲಿಯೂ ಶಿಕ್ಷಣ ಕ್ಷೇತ್ರಕ್ಕೆ ನೀಡಿದ ಕೊಡುಗೆ ಮಹತ್ವದ್ದಾಗಿದೆ. ಅಧಿಕಾರಿಗಳಾಗಿ, ಶಿಕ್ಷಕರಾಗಿ, ಶಿಕ್ಷಣ ಸಂಸ್ಥೆಗಳ ಸ್ಥಾಪಕರಾಗಿ, ದಾನಿಗಳಾಗಿ, ಸ್ವಯಂ ಸೇವಕರಾಗಿ, ಹೋರಾಟಗಾರರಾಗಿ ಹೀಗೆ ನಾನಾ ಮುಖಗಳಲ್ಲಿ ಬೆಳಗಾವಿಯ ಶಿಕ್ಷಣ ಕ್ಷೇತ್ರವನ್ನು ಬೆಳಗಿ ಕನ್ನಡ ಸಂಸ್ಕೃತಿಯ ನಿರ್ಮಾಣಕ್ಕೆ ಕಾರಣರಾಗಿದ್ದಾರೆ. ಅದರಲ್ಲಿಯೂ ಶ್ರೀಮಂತ ವರ್ಗದವರಲ್ಲಿ ದಾನ ನೀಡುವ ಗುಣವನ್ನು ಹುಟ್ಟುಹಾಕಿದ ಡೆಪ್ಯುಟಿ ಚನ್ನಬಸಪ್ಪನವರು, ಅರಟಾಳ ರುದ್ರಗೌಡರು ಮತ್ತು ಕೆ.ಎಲ್.ಇ. ಸಂಸ್ಥೆಯ ಸಪ್ತರ್ಷಿ ಶಿಕ್ಷಕರು. ಇವರೆಲ್ಲರ ನಿಸ್ವಾರ್ಥ ಸೇವೆಗೆ ಹಲವಾರು ಜನರು ದಾನಿಗಳಾಗಿ ರೂಪಗೊಂಡರು. ಅಂತವರಲ್ಲಿ ರಾಜಾ ಲಖಮಗೌಡರು ಪ್ರಮುಖರು. ವಂಟಮುರಿ ಸಂಸ್ಥಾನದ ರಾಜರಾದ ಲಖಮಗೌಡರ ಸಹಾಯವನ್ನು ಕಂಡು ಬಹಳಷ್ಟು ಸಂಸ್ಥೆಗಳು ಬೆಳಗಾವಿಯಲ್ಲಿ ಪ್ರಾರಂಭಗೊಂಡವು. ಧರ್ಮ ಜಾತಿಯ ತಾರತಮ್ಯವಿಲ್ಲದೆ ಎಲ್ಲಾ ಧರ್ಮದವರಿಗೂ ದಾನವನ್ನು ನೀಡಿ ಬೆಳಗಾವಿಯ ಶೈಕ್ಷಣಿಕ ವಲಯ ಏಳ್ಗೆಯನ್ನು ಹೊಂದುವಂತೆ ಮಾಡಿದರು. ಇವರು ನೀಡಿದ ದಾನದ ಫಲವಾಗಿ ಬೆಳಗಾವಿಯಲ್ಲಿ ಪ್ರಾರಂಭವಾದ ಮತ್ತೊಂದು ಮಹತ್ವದ ಮಹಾವಿದ್ಯಾಲಯವೆಂದರೆ ಕಾನೂನು ಮಹಾವಿದ್ಯಾಲಯ. ಇಂದು ರಾಜಾ ಲಖಮಗೌಡ ಕಾನೂನು ಮಹಾವಿದ್ಯಾಲಯವೆಂಬ ಹೆಸರಿನಿಂದ ಪ್ರಸಿದ್ಧವಾಗಿರುವ ಕಾನೂನು ಮಹಾವಿದ್ಯಾಲಯ **೧೯೩೯ ರಲ್ಲಿ ಬೆಳಗಾವಿಯಲ್ಲಿ ಪ್ರಾರಂಭಗೊಂಡು ಕರ್ನಾಟಕದ ಮೊಟ್ಟ ಮೊದಲ ಕಾನೂನು ಮಹಾವಿದ್ಯಾಲಯ**ವೆನಿಸಿತು. ಅಷ್ಟೇ ಅಲ್ಲ ಸಮಗ್ರ ದಕ್ಷಿಣ ಭಾರತಕ್ಕೇ ಮೊಟ್ಟ ಮೊದಲ ಕಾನೂನು ಮಹಾವಿದ್ಯಾಲಯವನ್ನು ಹೊಂದಿದ ಕೀರ್ತಿ ಬೆಳಗಾವಿಯದ್ದಾಯಿತು.[೨೯]

ಈ ಕಾನೂನು ಮಹಾವಿದ್ಯಾಲಯವನ್ನು ಸ್ಥಾಪಿಸಿದವರು ಬೆಳಗಾವಿ ಮತ್ತು ಧಾರವಾಡಗಳಲ್ಲಿ ಪ್ರಸಿದ್ಧರಾದ ಏಳು ಜನ ನ್ಯಾಯವಾದಿಗಳು. ಬೆಳಗಾವಿಯ ಶ್ರೀ ನಾರಾಯಣರಾವ ಜೋಶಿ, ಶ್ರೀ ಬಳವಂತರಾವ ದಾತಾರ, ಶ್ರೀ ಮಜುಮದಾರ, ಶ್ರೀ ಲೀಲೆ ಮತ್ತು ಧಾರವಾಡದ ಶ್ರೀ ಸಾವಕಾರ ವಕೀಲರು, ಶ್ರೀ ಡಿ.ಪಿ. ಕರಮರಕರ ಹಾಗೂ ಶ್ರೀ ಜಮಖಂಡಿ ವಕೀಲರು. ಬ್ರಾಹ್ಮಣ ಸಮಾಜದ ಇವರೆಲ್ಲರು ಬೆಳಗಾವಿ ಮತ್ತು ಧಾರವಾಡದಲ್ಲಿ ವಕೀಲ ವೃತ್ತಿಯನ್ನು ಮಾಡುತ್ತಿದ್ದರು. ಬೆಳಗಾವಿಯಲ್ಲಿ ಕೆ.ಎಲ್.ಇ. ಸಂಸ್ಥೆಯ ಏಳು ಜನ ಶಿಕ್ಷಕರು ಶಿಕ್ಷಣ ಕ್ಷೇತ್ರದಲ್ಲಿ ಮಹಾಕ್ರಾಂತಿ ಮಾಡುತ್ತಿದ್ದುದು ಇವರಿಗೆ ಪ್ರೇರಣೆಯಾಯಿತು. ಅಂದಿನ ದಿನಗಳಲ್ಲಿ ಬ್ರಾಹ್ಮಣ ಮತ್ತು ವೀರಶೈವ ಸಮಾಜದ ನಡುವೆ ದೊಡ್ಡ ಸ್ಪರ್ಧೆಯೇ ಇತ್ತು. ರಾಜಕೀಯವಾಗಿ ಬ್ರಾಹ್ಮಣೇತರರ ಸಂಘ ಸ್ಥಾಪನೆಯಾಗಿ ಬೆಳಗಾವಿ ಭಾಗದಲ್ಲಿ ಮಹತ್ವದ ಬದಲಾವಣೆಗಳಿಗೆ ಕಾರಣವಾಗಿತ್ತು. ಈ ಹಿನ್ನೆಲೆಯಲ್ಲಿ ಶೈಕ್ಷಣಿಕವಾಗಿಯೂ ಈ ಸ್ಪರ್ಧೆ ಬೆಳಗಾವಿಯಲ್ಲಿ ಕಾಣತೊಡಗಿತು. ಆದರೆ ಈ ಸ್ಪರ್ಧೆಯು ವೈಮನಸ್ಸಿನಿಂದ, ಸಂಘರ್ಷದಿಂದ ಕೂಡಿರಲಿಲ್ಲ. ಒಂದು ರೀತಿಯ ಆರೋಗ್ಯಕರ ಸ್ಪರ್ಧೆಯಿತ್ತು ಎರಡೂ ಸಮಾಜದವರಲ್ಲಿ ಸಾಮರಸ್ಯವಿತ್ತು. ಇದಕ್ಕೆ ನಿದರ್ಶನವಾಗಿ ಕಾನೂನು ಮಹಾವಿದ್ಯಾಲಯದ ಸ್ಥಾಪನೆಗೆ ಕಾರಣರಾದವರು ವೀರಶೈವ ಸಮಾಜದ ಮಹಾದಾನಿಗಳಾದ ರಾಜಾ ಲಖಮಗೌಡರು.

ಮೇಲೆ ತಿಳಿಸಿದ ಏಳು ಜನ ವಕೀಲರು ಕಾನೂನು ಮಹಾವಿದ್ಯಾಲಯವನ್ನು ಸ್ಥಾಪಿಸಲು ಮುಂಬೈ ವಿಶ್ವವಿದ್ಯಾಲಯಕ್ಕೆ ಮನವಿಯನ್ನು ಅರ್ಪಿಸಿದರು. ಆದರೆ ಒಂದು ಮಹಾವಿದ್ಯಾಲಯವನ್ನು ಆರಂಭಿಸುವಾಗ ವಿಶ್ವವಿದ್ಯಾಲಯಕ್ಕೆ ೫೦ ಸಾವಿರ ರೂಪಾಯಿ ನಿಧಿಯನ್ನು ಇಡುಗಂಟಾಗಿ ಕೊಡಬೇಕಿತ್ತು. ಅಲ್ಲದೆ ಕಾಲೇಜಿಗೆ ಕಟ್ಟಡ, ಗ್ರಂಥಾಲಯ, ಸಿಬ್ಬಂದಿ ವರ್ಗ ಹಾಗೂ ಪ್ರಾಧ್ಯಾಪಕ ವರ್ಗದ ಸಂಬಳ, ನಿರ್ವಹಣೆ ಖರ್ಚು ಇದೆಲ್ಲವನ್ನು ನಿರ್ವಹಿಸುವುದು ಕಷ್ಟಕರವಾಗಿತ್ತು. ಆಗ ಈ ಏಳು ಜನ ವಕೀಲರು ರಾಜಾ ಲಖಮಗೌಡರ ಸಹಾಯ ಪಡೆಯಬೇಕೆಂದು ನಿರ್ಧರಿಸಿದರು. ಇಷ್ಟು ದೊಡ್ಡ ಮೊತ್ತದ ಹಣವನ್ನು ಹೇಗೆ ಕೇಳುವುದು ಎನ್ನುವ ಅಳುಕು ಒಂದು ಕಡೆಗಿದ್ದರೆ ಬ್ರಾಹ್ಮಣ ಸಮಾಜದವರಾದ ನಮಗೆ ಕೊಡುವರೋ ಇಲ್ಲವೋ ಎನ್ನುವ ಸಂದೇಹ ಮತ್ತೊಂದು ಕಡೆಗಿತ್ತು. ಆದರೆ ಇವರ ಊಹೆ ಸುಳ್ಳಾಯಿತು. ಲಖಮಗೌಡರು ಉದಾರ ದಾನಿಗಳಷ್ಟೇ ಅಲ್ಲ, ಆದರ್ಶ ದಾನಿಗಳಾಗಿದ್ದರು. ತಾವು ನೀಡಿದ ದಾನವು ಒಳ್ಳೆಯದಕ್ಕೆ ಬಳಕೆಯಾಗುತ್ತದೆ ಎನ್ನುವುದು ಮುಖ್ಯವಾಗಿತ್ತು. ಶಿಕ್ಷಣದ ಸಲುವಾಗಿ ಯಾವುದೇ ಧರ್ಮ, ಜಾತಿಯವರು ಸಹಾಯ ಕೇಳಿದರೂ ಇಲ್ಲವೆನ್ನುತ್ತಿರಲಿಲ್ಲ. ಇಂತಹ ದಾನಿಯ ಹತ್ತಿರ ಬಂದ ಆದರ್ಶ ವಕೀಲರ ಗುಂಪು ನಿರೀಕ್ಷೆ ಮಾಡದಷ್ಟು ಹಣ ಲಖಮಗೌಡರಿಂದ ಒದಗಿತು. ಒಂದು ಲಕ್ಷ ರೂಪಾಯಿಗಳನ್ನು ಅವರು ಕಾನೂನು ಮಹಾವಿದ್ಯಾಲಯದ ಸ್ಥಾಪನೆಗೆ ನೀಡಿದರು. ಇದರಿಂದ ಕ್ರಿ. ಶ. ೧೯೩೯ ರಲ್ಲಿ ಬೆಳಗಾವಿಯಲ್ಲಿ ಕಾನೂನು ಮಹಾವಿದ್ಯಾಲಯ ತಲೆ ಎತ್ತಿ ನಿಂತಿತು.

ರಾಜಾ ಲಖಮಗೌಡರ ಪವಿತ್ರದಾನದಿಂದ ಪ್ರಾರಂಭಗೊಂಡ ಕಾನೂನು ಮಹಾವಿದ್ಯಾಲಯವು ರಾಜಾ ಲಖಮಗೌಡ ಕಾನೂನು ಮಹಾವಿದ್ಯಾಲಯವಾಗಿ ಕರ್ನಾಟಕ ಶೈಕ್ಷಣಿಕ ಚರಿತ್ರೆಯಲ್ಲಿ ಉಳಿದುಕೊಂಡಿತು.

ಬೆಳಗಾವಿಯ ಸಾಂಸ್ಕೃತಿಕ ವಿಕಾಸದಲ್ಲಿ ಕನ್ನಡ ಭಾಷೆ, ಸಂಸ್ಕೃತಿಯ ಬೆಳವಣಿಗೆಯಲ್ಲಿ ಈ ಮಹಾವಿದ್ಯಾಲಯವು ಮಹತ್ವದ ಪಾತ್ರವನ್ನು ವಹಿಸಿತು. ನಾಡಿನ ಬೇರೆ ಬೇರೆ ಭಾಗಗಳಿಂದ, ಹೊರರಾಜ್ಯಗಳಿಂದ ಕೇರಳ, ಗೋವ, ಮಹಾರಾಷ್ಟ್ರ, ಆಂಧ್ರಪ್ರದೇಶ ಮುಂತಾದ ಭಾಗಗಳಿಂದಲೂ ಕಾನೂನು ಅಧ್ಯಯನ ಮಾಡಲು ವಿದ್ಯಾರ್ಥಿಗಳು ಬೆಳಗಾವಿಗೆ ಆಗಮಿಸತೊಡಗಿದರು. ಈ ಮಹಾವಿದ್ಯಾಲಯದಲ್ಲಿ ಕಲಿತ ಅನೇಕರು ನಾಡಿನಲ್ಲಿ ಪ್ರಮುಖ ನ್ಯಾಯವಾದಿಗಳಾಗಿ ಕೆಲಸ ಮಾಡಿದ್ದಾರೆ. ರಾಜ್ಯದ, ರಾಷ್ಟ್ರದ ಪ್ರಮುಖ ಹುದ್ದೆಗಳಲ್ಲಿ ಸೇವೆ ಸಲ್ಲಿಸಿದ್ದಾರೆ. ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿ ಇಲ್ಲಿ ಕಲಿತ ವಿದ್ಯಾರ್ಥಿಗಳು ಸೇವೆಯನ್ನು ಸಲ್ಲಿಸಿದ್ದಾರೆ. ರಾಜ್ಯದ, ರಾಷ್ಟ್ರದ ಅನೇಕ ಜನ ಶಾಸಕರು, ಮಂತ್ರಿಗಳು ಈ ಕಾಲೇಜಿನ ಗರಡಿಯಲ್ಲಿ ರೂಪಗೊಂಡಿದ್ದಾರೆ. ಬಿ. ಶಂಕರಾನಂದ, ವಿರೇಂದ್ರ ಪಾಟೀಲ, ಕೃಷ್ಣಮೂರ್ತಿ, ಹಾರನಹಳ್ಳಿ ರಾಮಸ್ವಾಮಿ, ಪಾಟೀಲ ಪುಟ್ಟಪ್ಪ ಮುಂತಾದವರು ಇಲ್ಲಿ ಶಿಕ್ಷಣ ಪಡೆದವರಾಗಿದ್ದಾರೆ.

ಕಾನೂನು ಮಹಾವಿದ್ಯಾಲಯದ ಮತ್ತೊಂದು ವಿಶಿಷ್ಟತೆಯೆಂದರೆ ಆರಂಭದಲ್ಲಿ ಈ ಸಂಸ್ಥೆಯಲ್ಲಿ ಪ್ರಾಧ್ಯಾಪಕರಾಗಿದ್ದವರು ಸಂಬಳಕ್ಕಾಗಿ ದುಡಿದವರಲ್ಲ. ತಮ್ಮ ವಕೀಲವೃತ್ತಿಯಲ್ಲಿದ್ದುಕೊಂಡು ಗೌರವ ಪ್ರಾಧ್ಯಾಪಕರಾಗಿ

ಸೇವೆ ಸಲ್ಲಿಸಿದರು. ಶ್ರೀಖಂಡೆ ವಕೀಲರು, ಆರ್.ವ್ಹಿ.ಭಟ್ಟ, ಬಳವಂತರಾವ ದಾತಾರ, ಶ್ರೀ ಮುಜುಮದಾರ, ಡಿ.ಪಿ.ಕರಮರಕರ, ಶ್ರೀ ಜಮಖಂಡಿ ವಕೀಲರು ಮುಂತಾದವರ ನಿಸ್ವಾರ್ಥ ಸೇವೆಯಿಂದ ಮಹಾವಿದ್ಯಾಲಯವು ಪ್ರತಿಷ್ಠೆಯನ್ನು ಪಡೆದುಕೊಂಡಿತು. ಕಾಲೇಜಿನ ಪ್ರಥಮ ಪ್ರಾಚಾರ್ಯರಾದ ಗೋವಿಂದರಾವ ಕೇಳಕರರು ಕಾಲೇಜಿನ ಉನ್ನತಿಗಾಗಿ ಶ್ರಮಿಸಿದರು. ಶ್ರೀ ಜಿ.ಪಿ. ಕುಲಕರ್ಣಿ, ಬಡಕುಂದ್ರಿ ಮುಂತಾದವರ ಸೇವೆಯಿಂದ ಕಾಲೇಜು ಉನ್ನತಿಯನ್ನು ಪಡೆದುಕೊಂಡಿತು. ಅಲ್ಲದೆ ಇಂಗ್ಲೆಂಡಿನಿಂದ ಬಾರ್-ಆ್ಯಟ್-ಲಾ ಪದವಿಯನ್ನು ಪಡೆದುಕೊಂಡಿದ್ದ ರಾಜಾ ಲಖಮಗೌಡರ ಸಲಹೆಗಳು ದೊರೆತು ಕಾನೂನು ಮಹಾವಿದ್ಯಾಲಯ ಪ್ರಗತಿಯನ್ನು ಹೊಂದಲು ಕಾರಣವಾಯಿತು.

ಬೆಳಗಾವಿಯ ಶಿಕ್ಷಣ ಕ್ಷೇತ್ರವು ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದಿಂದ ಇಪ್ಪತ್ತನೆಯ ಶತಮಾನದ ಮಧ್ಯದವರೆಗೆ ಮಹತ್ವದ ಬೆಳವಣಿಗೆಯನ್ನು ಹೊಂದಿತು. ಈ ಮಹತ್ವದ ಬೆಳವಣಿಗೆಗೆ ಕಾರಣವಾಗಿದ್ದು ಕೆ.ಎಲ್.ಇ. ಸಂಸ್ಥೆ. ವೀರಶೈವ ಸಮುದಾಯದ ಈ ಕಾರ್ಯದಿಂದ ಬೆಳಗಾವಿಯಲ್ಲಿರುವ ಬೇರೆ ಬೇರೆ ಧರ್ಮ ಜಾತಿಯವರೂ ಎಚ್ಚೆತ್ತುಕೊಂಡರು. ತಮ್ಮ ತಮ್ಮ ಸಮುದಾಯದ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವ ಕಾರ್ಯದಲ್ಲಿ ತೊಡಗಿದರು. ಪ್ರಮುಖವಾಗಿ, ಮರಾಠಿ ಸಮುದಾಯ, ಮುಸ್ಲಿಂ, ಜೈನ ಸಮುದಾಯಗಳು ಶಿಕ್ಷಣ ಕ್ಷೇತ್ರಕ್ಕೆ ಕಾಲಿಟ್ಟವು. ಹಲವಾರು ಶಾಲೆ-ಕಾಲೇಜುಗಳು ಸ್ಥಾಪನೆಗೊಂಡವು.

ಮಹಾರಾಷ್ಟ್ರದ ಪುಣೆಯಲ್ಲಿ ಮಹಾತ್ಮಾ ಜ್ಯೋತಿಬಾ ಫುಲೆಯವರು ಪ್ರಾರಂಭಿಸಿದ 'ಸತ್ಯಶೋಧಕ ಸಮಾಜ' ಚಳುವಳಿಯು ಸಾಮಾಜಿಕ ಬದಲಾವಣೆಗೆ ಕಾರಣವಾಗಿತ್ತು. ಈ ಚಳುವಳಿಯ ಮುಖಾಂತರ ಶೋಷಿತರನ್ನು ಶೋಷಣೆಯಿಂದ ಮುಕ್ತಗೊಳಿಸುವ ಕಾರ್ಯ ನಡೆಯಿತು. ಶಿಕ್ಷಣದ ಮಹತ್ವವನ್ನು ಅರಿತ ಈ ಚಳುವಳಿಯ ನಾಯಕರು ಶೋಷಿತವರ್ಗದ ಶೈಕ್ಷಣಿಕ ವಿಕಾಸಕ್ಕೂ ಕಾರಣರಾದರು. ಈ ಚಳುವಳಿಯ ಪ್ರಭಾವ ಗಡಿಭಾಗದ ಬೆಳಗಾವಿಗೂ ಒದಗಿತು. ಈ ಚಳುವಳಿಯು ಮುಖ್ಯವಾಗಿ ಬ್ರಾಹ್ಮಣಶಾಹಿ ವಿರೋಧಿಯಾಗಿತ್ತು. ಭಾರತದ ಪ್ರಪ್ರಥಮ ಬ್ರಾಹ್ಮಣೇತರ ಚಳುವಳಿಯಾಗಿದ್ದರಿಂದ ಇದು ರಾಷ್ಟ್ರ ಮಟ್ಟದಲ್ಲಿ ಪರಿಣಾಮವನ್ನು ಬೀರಿತು. ಕೆ.ಎಲ್.ಇ. ಸಂಸ್ಥೆಯ ಬೆಳವಣಿಗೆಗೂ ಈ ಚಳುವಳಿಯ ನಾಯಕರು ಬೆಂಬಲನೀಡಿದ್ದರು. ೧೯೨೨ ರಲ್ಲಿಯೇ ಕೆ.ಎಲ್.ಇ.ಸಂಸ್ಥೆಯ ಶಿಕ್ಷಣ ಸಂಸ್ಥೆಗೆ ಛತ್ರಪತಿ ಶಾಹು ಮಹಾರಾಜರು ಆಗಮಿಸಿ ಬಹುಮಾನ ವಿತರಣಾ ಸಮಾರಂಭದಲ್ಲಿ ಭಾಗವಹಿಸಿದ್ದರು. ಬೆಳಗಾವಿ ಪ್ರದೇಶದಲ್ಲಿ ಶಾಮರಾವ ದೇಸಾಯಿಯವರು ಈ ಚಳುವಳಿಯು ತೀವ್ರ ಸ್ವರೂಪ ಪಡೆಯಲು ಕಾರಣರಾದರು. ರೈತಾಪಿ ವರ್ಗವನ್ನೂ ಸಂಘಟಿಸಿ ಶೇತಕರಿ ಸಭೆಯನ್ನು ಹುಟ್ಟುಹಾಕಿದರು.[೨೦] ಈ ಎಲ್ಲದರ ಫಲವಾಗಿ ೧೯೩೭ ರಲ್ಲಿ **'ಮರಾಠಾ ಮಂಡಳ ಶಿಕ್ಷಣ ಸಂಸ್ಥೆ'** ಮತ್ತು ೧೯೪೧ ರಲ್ಲಿ **'ಬೆಳಗಾವಿ ಜಿಲ್ಲಾ ಶೇತಕರಿ ಶಿಕ್ಷಣ ಸಮಿತಿ'** ಬೆಳಗಾವಿಯಲ್ಲಿ ಪ್ರಾರಂಭಗೊಂಡವು. ಮರಾಠಿ ಪ್ರಾಥಮಿಕ, ಮಾಧ್ಯಮಿಕ ಶಾಲೆಗಳನ್ನು ಬೆಳಗಾವಿ ಮತ್ತು ಸುತ್ತಮುತ್ತಲಿನ ಹಳ್ಳಿಗಳಲ್ಲಿ ಈ ಸಂಸ್ಥೆಗಳು ಪ್ರಾರಂಭಿಸಿ ಮರಾಠಿ ಶಿಕ್ಷಣದ ಅಭಿವೃದ್ಧಿಗೆ ಕಾರಣವಾದವು.

ಕೆ.ಎಲ್.ಇ ಸಂಸ್ಥೆಯ ಶೈಕ್ಷಣಿಕ ಕ್ರಾಂತಿ ಮತ್ತೊಂದು ಕಡೆ ಸ್ವಾತಂತ್ರ್ಯ ಹೋರಾಟ, ಕನ್ನಡ-ಮರಾಠಿ ಭಾಷಾ ಸಮಸ್ಯೆ, ಬ್ರಾಹ್ಮಣೇತರ ಸಂಘಟನೆಗಳ ಸಮಾವೇಶಗಳು, ಕರ್ನಾಟಕ ಏಕೀಕರಣ ಚಳುವಳಿ, ಸಾಮಾಜಿಕ, ಧಾರ್ಮಿಕ ಆಂದೋಲನಗಳು ಬೆಳಗಾವಿಯಲ್ಲಿ ನಿರಂತರವಾಗಿ ನಡೆಯುತ್ತಿದ್ದವು. ಇವೆಲ್ಲವುಗಳ ಪರಿಣಾಮದಿಂದ ಒಳಿತು-ಕೆಡುಕುಗಳೆರಡೂ ಬೆಳಗಾವಿ ಶಿಕ್ಷಣಕ್ಷೇತ್ರಕ್ಕೆ ಉಂಟಾದವು. ಸ್ವಾತಂತ್ರ್ಯ ಹೋರಾಟದ ಫಲವಾಗಿ ವಿದ್ಯಾರ್ಥಿಗಳು ಶಾಲೆ-ಕಾಲೇಜುಗಳನ್ನು ತೊರೆದು ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡರು. ರಾಷ್ಟ್ರೀಯ ಶಿಕ್ಷಣವೇ ಮುಖ್ಯವಾಗಿ ರಾಷ್ಟ್ರೀಯ ಶಾಲೆಗಳು ಪ್ರಾರಂಭವಾಗಿ ಅನೇಕ ವಿದ್ಯಾರ್ಥಿಗಳು ಅದರತ್ತ ತಿರುಗಿದರು. ನಿರಂತರವಾದ ಚಳುವಳಿಯಿಂದ ಶಾಲೆ-ಕಾಲೇಜುಗಳು ತಿಂಗಳವರೆಗೂ ನಡೆಯದೆ ಮುಚ್ಚಿದವು. ಇದರಿಂದ ಶಿಕ್ಷಣದ ಮೇಲೆ ಪ್ರತಿಕೂಲ ಪರಿಣಾಮ ಉಂಟಾಯಿತು. ಸ್ವಾತಂತ್ರ್ಯ ಹೋರಾಟದ ಜೊತೆಯಲ್ಲಿಯೇ ಸಾಗಿದ ಏಕೀಕರಣ ಚಳುವಳಿಯೂ ಬೆಳಗಾವಿಯಲ್ಲಿ ವಿಶೇಷವಾಗಿ ನಡೆಯಿತು. ಮರಾಠಿ ಭಾಷೆಯ ತುಳಿತಕ್ಕೆ ನಲುಗಿದ್ದ ಕನ್ನಡಿಗರು ಜಾಗೃತಗೊಂಡಿದ್ದ ಸಂದರ್ಭದಲ್ಲಿಯೇ ಮರಾಠಿಗರು ತಮ್ಮ ಹಿಡಿತವನ್ನು ಬಿಗಿಗೊಳಿಸಿದರು. ಬೆಳಗಾವಿ ತಮ್ಮಿಂದ ಕೈತಪ್ಪಿ ಹೋಗುವುದೆಂಬ ಭೀತಿ ಆವರಿಸಿ ಮರಾಠಿ ಭಾಷೆ, ಸಾಹಿತ್ಯ, ಸಂಸ್ಕೃತಿಯನ್ನು ಬೆಳೆಸಲು ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸತೊಡಗಿದರು. ಇವುಗಳಿಗೆ ಬೆಂಬಲವಾಗಿ ಮಹಾರಾಷ್ಟ್ರದ ಹಲವಾರು ಜನರು ನಿಂತರು. ಇದರಿಂದಾಗಿ ಕ್ರಿ. ಶ. ೧೯೪೪ ರಲ್ಲಿ **ದಕ್ಷಿಣ ಕೊಂಕಣ ಶಿಕ್ಷಣ ಸಂಸ್ಥೆ** ಬೆಳಗಾವಿಯಲ್ಲಿ ಸ್ಥಾಪನೆಗೊಂಡಿತು. ಡಾ. ಗೋವಿಂದರಾವ ಹೇರೇಕರ, ಅಣ್ಣಾಸಾಹೇಬ ಲಟ್ಟೆ, ಬಾಬುರಾವ ಠಾಕೂರ ಮೊದಲಾದವರು ಸೇರಿ ಸಾವಂತವಾಡಿಯಲ್ಲಿ ೧೯೪೫ ರಲ್ಲಿ ಸ್ಥಾಪನೆಗೊಂಡಿದ್ದ ಸಾವಂತವಾಡಿ ಸಂಸ್ಥಾನದ ರಾಜಮಾತಾ ಶ್ರೀಮತಿ ಪಾರ್ವತಿದೇವಿಯ ಹೆಸರಿನ ಕಾಲೇಜನ್ನು ಬೆಳಗಾವಿಗೆ ಸ್ಥಳಾಂತರಗೊಳಿಸಿದರು.

ಬೆಳಗಾವಿಯ ವಡಗಾವಿ ಪ್ರದೇಶದಲ್ಲಿ ಜಮಖಂಡಿ ಸಂಸ್ಥಾನದವರು ಕಟ್ಟಿಸಿದ್ದ ಬೇಸಿಗೆ ಅರಮನೆಯ ಪ್ರದೇಶದ ಸುಮಾರು ೩೨ ಎಕರೆ ಪ್ರದೇಶದಲ್ಲಿ ಕಾಲೇಜು ಪ್ರಾರಂಭಮಾಡಿತು. ಆಗ ವಡಗಾವಿಯಲ್ಲಿದ್ದ ಕುರುಂದವಾಡ(ಕಿರಿಯ) ಸಂಸ್ಥಾನದ ಬೆಂಬಲ ದೊರೆಯಿತು. ಅಲ್ಲದೆ ಮುಂಬೈಯಲ್ಲಿದ್ದ ಡಾ. ಎ.ವಿ. ಬಾಳಿಗ ಅವರು ಉದಾರವಾದ ದೇಣಿಗೆಯನ್ನು ನೀಡಿದ್ದರಿಂದ ಮಹಾವಿದ್ಯಾಲಯವು ಭದ್ರವಾದ ನೆಲೆಯನ್ನು ಪಡೆಯಿತು. ರಾಣಿ ಪಾರ್ವತಿದೇವಿ ಕಾಲೇಜಿನ ಸ್ಥಾಪನೆಗೆ ಬೆಳಗಾವಿಯಲ್ಲಿ ಕನ್ನಡಿಗರಿಂದ ತೀವ್ರವಾದ ವಿರೋಧ ಉಂಟಾಯಿತು. ಆದರೆ ಅಂದಿನ ಮುಂಬೈ ಸರ್ಕಾರದಲ್ಲಿ ಶಿಕ್ಷಣ ಮಂತ್ರಿಗಳಾಗಿದ್ದ. ಬಿ.ಜಿ. ಖೇರ್ ಅವರು ಭಾಷಾವಾರು ಪ್ರಾಂತಗಳಿಗೂ ಶಿಕ್ಷಣ ಸಂಸ್ಥೆಗಳಿಗೂ ಸಂಬಂಧವನ್ನು ಕಲ್ಪಿಸಬಾರದು ಬೆಳಗಾವಿ ಎಂದೆಂದಿಗೂ ಕರ್ನಾಟಕದ್ದೆ ಎಂದು ತಿಳಿಸಿದರು. ಇದರಿಂದ ಕನ್ನಡಿಗರು ಕಾಲೇಜಿನ ಸ್ಥಾಪನೆಗೆ ಅವಕಾಶ ಕಲ್ಪಿಸಿದರು.

ಬೆಳಗಾವಿಯಲ್ಲಿ ಮರಾಠಿ ಸಮುದಾಯದ ಶಿಕ್ಷಣ ಸಂಸ್ಥೆಗಳು ಪ್ರಾರಂಭಗೊಂಡ ಮೇಲೆ ಶೈಕ್ಷಣಿಕ, ಸಾಂಸ್ಕೃತಿಕ, ಭಾಷಿಕ, ಸ್ಪರ್ಧಾ ಮನೋಭಾವನೆ ಬೆಳೆಯತೊಡಗಿತು. ಇದು ಕ್ರೀಡಾಕೂಟ, ಯುವಜನಮೇಳ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಬಹಿರಂಗಗೊಳ್ಳುತ್ತಿತ್ತು. ಮರಾಠಿ ಸಂಸ್ಥೆಯ ಕಾಲೇಜುಗಳು ಇನ್ನೂ ಸ್ಥಾಪನೆಗೊಳ್ಳದ ಕಾಲದಲ್ಲಿ

ಎಲ್ಲರೂ ಲಿಂಗರಾಜ ಕಾಲೇಜಿನಲ್ಲಿಯೇ ಕಲಿಯುತ್ತಿದ್ದರು. ಮುಂದೆ ಆರ್.ಪಿ.ಡಿ. ಕಾಲೇಜು, ಜ್ಯೋತಿ ಕಾಲೇಜುಗಳು ಸ್ಥಾಪನೆಗೊಂಡ ಮೇಲೆ ಮರಾಠಿಗರು ಪ್ರತ್ಯೇಕವಾಗಿ ಗುರುತಿಸಿಕೊಳ್ಳತೊಡಗಿದರು. ಲಿಂಗರಾಜ ಕಾಲೇಜು, ಕನ್ನಡಿಗರದ್ದು ಎನ್ನುವ ಮನೋಭಾವನೆ ಬೆಳೆಯಿತು. ಆದರೆ ಲಿಂಗರಾಜ ಕಾಲೇಜಿನಲ್ಲಿ ಭಾಷೆ, ಜಾತಿ, ಧರ್ಮದ ತಾರತಮ್ಯವಿಲ್ಲದೆ ಎಲ್ಲರಿಗೂ ಸಮನಾದ ಶಿಕ್ಷಣವನ್ನು ನೀಡುವ ಆದರ್ಶತನವಿತ್ತು. ಇದು ಮರಾಠಿ ಸಮುದಾಯದ ಕಾಲೇಜುಗಳಲ್ಲಿಯೂ ಇತ್ತು. ಆದರೆ ಗಡಿ ಸಮಸ್ಯೆಯು ವಿದ್ಯಾರ್ಥಿಗಳಲ್ಲಿ ಈ ಭಾವನೆಯನ್ನು ಮೂಡಿಸಿತ್ತು. ಲಿಂಗರಾಜ ಕಾಲೇಜಿನ ಕರ್ನಾಟಕ ಸಂಘವು ಬೆಳಗಾವಿಯ ಸಾಂಸ್ಕೃತಿಕ ವಿಕಾಸದಲ್ಲಿ, ಕನ್ನಡದ ಬೆಳವಣಿಗೆಯಲ್ಲಿ ಮಹತ್ವದ ಪಾತ್ರವಹಿಸಿತು. ನಾಡಹಬ್ಬ, ರಾಜ್ಯೋತ್ಸವ ಮುಂತಾದ ಸಂದರ್ಭಗಳಲ್ಲಿ ಮೆರವಣಿಗೆ, ವಿಶೇಷ ಉಪನ್ಯಾಸಗಳ ಮೂಲಕ ಕನ್ನಡ ಜಾಗೃತಿಯನ್ನು ಉಂಟುಮಾಡಿತು. ಕನ್ನಡದ ಪ್ರಸಿದ್ಧ ನಾಟಕಗಳ ಪ್ರದರ್ಶನವನ್ನು ಏರ್ಪಡಿಸಿ ನಾಟಕ ರಂಗಕ್ಕೆ ಹೊಸ ಆಯಾಮವನ್ನು ಕರ್ನಾಟಕ ಸಂಘ ಒದಗಿಸಿತು. ಕ್ರೀಡೆಗಳಲ್ಲಿ ಆರ್.ಪಿ.ಡಿ.ಕಾಲೇಜು, ಜೆ.ಎಸ್.ಎಸ್. ಕಾಲೇಜು, ಲಿಂಗರಾಜ ಕಾಲೇಜು, ಆರ್. ಎಲ್. ಎಸ್. ಕಾಲೇಜುಗಳ ಮಧ್ಯದಲ್ಲಿ ತೀವ್ರವಾದ ಪೈಪೋಟಿ ಏರ್ಪಡುತ್ತಿತ್ತು. ಭಾಷಣ ಸ್ಪರ್ಧೆ, ಚರ್ಚಾ ಸ್ಪರ್ಧೆಗಳಲ್ಲಿ ಬಹುಮಾನಗಳನ್ನು ಪಡೆಯುವುದು ಕಾಲೇಜುಗಳಿಗೆ ಪ್ರತಿಷ್ಠೆಯ ವಿಷಯವಾಗಿತ್ತು. ಹೀಗಾಗಿ ಕಾಲೇಜಿನ ಪ್ರಾಚಾರ್ಯರು, ಪ್ರಾಧ್ಯಾಪಕರು ಆಸಕ್ತಿ ವಹಿಸಿ ವಿದ್ಯಾರ್ಥಿಗಳಿಗೆ ತರಬೇತಿಯನ್ನು ನೀಡುತ್ತಿದ್ದರು. ಈ ಸ್ಪರ್ಧೆಯು ಬೆಳಗಾವಿಯ ಶೈಕ್ಷಣಿಕ ರಂಗದ ವಿಕಾಸಕ್ಕೆ ಕಾರಣವಾಯಿತು. ಅಂದಿನ ಮುಂಬೈ ವಿಶ್ವವಿದ್ಯಾಲಯದ ಪ್ರತಿಷ್ಠಿತ ಕಾಲೇಜುಗಳಾದ ಕೊಲ್ಲಾಪುರದ ರಾಜಾರಾಮ ಕಾಲೇಜು, ಧಾರವಾಡದ ಕರ್ನಾಟಕ ಕಾಲೇಜು, ಮುಂಬೈ ಡೆಕ್ಕನ್ ಕಾಲೇಜುಗಳ ನಡುವೆ ಪ್ರಥಮ ಸ್ಥಾನಕ್ಕಾಗಿ ತೀವ್ರ ಸ್ಪರ್ಧೆ ಏರ್ಪಡುತ್ತಿತ್ತು. ಆರ್. ಪಿ. ಡಿ. ಮತ್ತು ಲಿಂಗರಾಜ ಕಾಲೇಜಿನ ಪ್ರಾಧ್ಯಾಪಕರಿಂದ, ವಿದ್ಯಾರ್ಥಿಗಳಿಂದ ಬೆಳಗಾವಿಯಲ್ಲಿ ವಿದ್ವತ್ತಿನ ವಾತಾವರಣವನ್ನೇ ನಿರ್ಮಿಸಲು ಸಾಧ್ಯವಾಗಿತ್ತೆಂಬ ಪ್ರಹ್ಲಾದ ಕುಮಾರ ಭಾಗೋಜಿಯವರ ಮಾತು ಅಂದಿನ ವಾತಾವರಣವನ್ನು ತಿಳಿಸಿಕೊಡುತ್ತದೆ.[೩೧] ರಾಷ್ಟ್ರ, ಅಂತರಾಷ್ಟ್ರೀಯ ಮಟ್ಟದಲ್ಲಿ ತಮ್ಮ ವಿದ್ವತ್ತಿನಿಂದ ಪ್ರಸಿದ್ಧರಾದ ಹಲವಾರು ಪ್ರಾಧ್ಯಾಪಕರು ಈ ಎರಡೂ ಮಹಾವಿದ್ಯಾಲಯಗಳಲ್ಲಿದ್ದರು. ಹೀಗಾಗಿ ಬೆಳಗಾವಿಯು ಪ್ರಮುಖ ಶಿಕ್ಷಣ ಕೇಂದ್ರವಾಗಿ ರೂಪಗೊಂಡು ರಾಷ್ಟ್ರಮಟ್ಟದಲ್ಲಿ ಗುರುತಿಸಿಕೊಂಡಿತು.

ಶಿಕ್ಷಣ ಪ್ರೇಮಿಗಳಾದ ಶ್ರೀ ಶಿವಬಸವಸ್ವಾಮಿಗಳು ವಿದ್ಯಾರ್ಥಿಗಳಿಗಾಗಿ ಪ್ರಸಾದ ನಿಲಯವನ್ನು ಸ್ಥಾಪಿಸಿದಂತೆ ವಿದ್ಯಾರ್ಥಿನಿಯರಿಗಾಗಿಯೇ ಪ್ರಸಾದ ನಿಲಯವನ್ನು ಬೆಳಗಾವಿಯ ಗಣಾಚಾರಿ ಗಲ್ಲಿಯಲ್ಲಿ ಕ್ರಿ. ಶ. ೧೯೬೨ ರಲ್ಲಿ ಸ್ಥಾಪಿಸಿದರು. ಇದು ಬೆಳಗಾವಿಯಲ್ಲಿ ಸ್ಥಾಪಿತವಾದ ಮೊಟ್ಟಮೊದಲ ವಿದ್ಯಾರ್ಥಿನಿಯರ ಪ್ರಸಾದನಿಲಯ. ಇದರಿಂದ ಬೇರೆ ಬೇರೆ ಸ್ಥಳಗಳಿಂದ ಬೆಳಗಾವಿಗೆ ಶಿಕ್ಷಣ ಪಡೆಯಲು ಬರುವ ಮಹಿಳೆಯರಿಗೆ ಬಹಳಷ್ಟು ಅನುಕೂಲವಾಯಿತು.

ಈ ಎಲ್ಲ ಕಾರ್ಯಗಳಿಂದ ಬೆಳಗಾವಿಯ ಶೈಕ್ಷಣಿಕ ವಲಯ ಗಟ್ಟಿಗೊಳ್ಳತೊಡಗಿತು. ಹಲವಾರು ಬದಲಾವಣೆಗಳು ಬೆಳಗಾವಿಯ ಸಾಮಾಜಿಕ, ಶೈಕ್ಷಣಿಕ ವಲಯದಲ್ಲಿ ಉಂಟಾದವು. ಹನುಮಾನ ಬೀದಿಯ ಪ್ರಸಾದನಿಲಯವು

ಕೇವಲ ವಿದ್ಯಾರ್ಥಿಗಳಿಗೆ ಪ್ರಸಾದನಿಲಯವಾಗಿರದೆ, ಬೆಳಗಾವಿಯ ಸಾಂಸ್ಕೃತಿಕ ಬದುಕಿನ ಒಂದು ಅಂಗವಾಯಿತು. ಕನ್ನಡ ಸಂಸ್ಕೃತಿಯ ಶಕ್ತಿ ಕೇಂದ್ರವಾಯಿತು. ಬೆಳಗಾವಿಯ ಸಾಂಸ್ಕೃತಿಕ ಬದಲಾವಣೆಗೆ ಮೂಲ ನೆಲೆಯಾಗಿ ರೂಪಗೊಂಡಿತು. ಕನ್ನಡ ಹೋರಾಟ, ನಾಡಹಬ್ಬ ಉತ್ಸವ, ರಾಜ್ಯೋತ್ಸವ ಮೆರವಣಿಗೆ, ವಿಚಾರ ಸಂಕೀರ್ಣಗಳು, ಗೋಷ್ಠಿಗಳು, ಸಮ್ಮೇಳನಗಳು, ಸಭೆ–ಸಮಾರಂಭಗಳು ಈ ವಸತಿನಿಲಯದ ಆಶ್ರಯದಲ್ಲಿ ಸಾಗತೊಡಗಿದವು. ಕನ್ನಡ ಹೋರಾಟದಲ್ಲಂತೂ ಪ್ರಸಾದನಿಲಯದ ವಿದ್ಯಾರ್ಥಿಗಳು ಮುಂಚೂಣಿಯಲ್ಲಿರುತ್ತಿದ್ದರು.

ಪ್ರಸಾದನಿಲಯಗಳ ಮೂಲಕ ಶಿಕ್ಷಣಕ್ಕೆ ಪ್ರೇರಣೆ ನೀಡವುವುದರ ಜೊತೆಗೆ ಶಿಕ್ಷಣವನ್ನು ನೀಡುವ ಶಾಲೆಗಳನ್ನು ಶಿವಬಸವ ಸ್ವಾಮಿಗಳು ಪ್ರಾರಂಭಿಸಿದರು. ಕುಮಾರೇಶ್ವರ ಪ್ರಸಾದನಿಲಯದ ಅಂಗವಾಗಿಯೇ ಗುರುಕುಲ ಮಾದರಿಯ ಶ್ರೀ ಸಿದ್ಧರಾಮೇಶ್ವರ ಮಾಧ್ಯಮಿಕ ಶಾಲೆಯು ಕ್ರಿ. ಶ. ೧೯೬೯ ಜೂನ್ ೨ ರಂದು ಪ್ರಾರಂಭಗೊಂಡಿತು. ನಾಡಿನ ಬೇರೆ ಬೇರೆ ಭಾಗಗಳಿಂದ ನೂರಾರು ವಿದ್ಯಾರ್ಥಿಗಳು ಇಲ್ಲಿ ಶಿಕ್ಷಣ ಪಡೆಯಲು ಆಗಮಿಸಿದರು. ವಿದ್ಯಾರ್ಥಿಗಳಿಗೆ ಶಿಕ್ಷಣದ ಜೊತೆಗೆ ಧರ್ಮದ ಸಂಸ್ಕಾರವನ್ನೂ ನೀಡಿ ಉತ್ತಮ ಪ್ರಜೆಗಳನ್ನು ನಿರ್ಮಿಸುವಲ್ಲಿ ಶ್ರೀಗಳ ಕಾರ್ಯ ಮಹತ್ವದ್ದಾಗಿದೆ.

ಸಂಸ್ಕೃತಭಾಷೆಯ ಮಹತ್ವವನ್ನು ಅರಿತ ಶ್ರೀಗಳು ಸಂಸ್ಕೃತ ಪಾಠಶಾಲೆಯೊಂದನ್ನು ಪ್ರಸಾದನಿಲಯದ ಅಂಗವಾಗಿಯೇ ಕ್ರಿ. ಶ. ೧೯೬೫ ರಲ್ಲಿ ಸ್ಥಾಪಿಸಿದರು. ಇದರಿಂದ ಪ್ರಾಚೀನ ಭಾಷೆಯ ಅಧ್ಯಯನದ ಮೂಲಕ ವಿದ್ಯಾರ್ಥಿಗಳಲ್ಲಿ ತಾತ್ವಿಕ ಭಾವನೆಯನ್ನು ಬೆಳೆಸಿದರು. ಪ್ರತಿವರ್ಷ ಸುಮಾರು ೨೦೦ ವಿದ್ಯಾರ್ಥಿಗಳು ಇಲ್ಲಿ ಸಂಸ್ಕೃತವನ್ನು ಅಧ್ಯಯನ ಮಾಡತೊಡಗಿದರು. ಇದರಿಂದ ಬೆಳಗಾವಿಯಲ್ಲಿ ಶಿವಯೋಗ ಮಂದಿರದ ಛಾಯೆ ಮೂಡಿತು.

ನಾಗನೂರು ರುದ್ರಾಕ್ಷಿಮಠದ ಪ್ರಸಾದ ನಿಲಯ, ಮಾಧ್ಯಮಿಕ ಶಾಲೆಗಳು ಬಡಜನರಿಗೆ ಶಿಕ್ಷಣ ಪಡೆಯಲು ಅತ್ಯಂತ ಅನುಕೂಲಕರವಾದವು. ಇಲ್ಲಿ ಶಿಕ್ಷಣ ಪಡೆಯಲು ಬೇರೆ ಬೇರೆ ಜಾತಿ, ಧರ್ಮದವರೂ ಆಗಮಿಸತೊಡಗಿದರು. ಶ್ರೀಗಳು ಎಲ್ಲರಿಗೂ ಸಮಾನ ವ್ಯವಸ್ಥೆಯನ್ನು ಕಲ್ಪಿಸಿದರು. ಇದರಿಂದ ಬೆಳಗಾವಿಯಲ್ಲಿ ಸಾಮರಸ್ಯ ಮೂಡತೊಡಗಿತು.

ಗವಿಸಿದ್ಧಪ್ಪ ಬೆಳವಡಿ: ಬೆಳಗಾವಿಯ ಶೈಕ್ಷಣಿಕ ಬೆಳವಣಿಗೆಯಲ್ಲಿ ಗವಿಸಿದ್ಧಪ್ಪ ಬೆಳವಡಿಯವರ ಕೊಡುಗೆ ವಿಶಿಷ್ಟವಾಗಿದೆ. ಕುರುಬ ಸಮುದಾಯದ ಬಡ ಮಕ್ಕಳಿಗಾಗಿ ಬೆಳಗಾವಿಯಲ್ಲಿ ಉಚಿತ ಪ್ರಸಾದ ನಿಲಯವನ್ನು ೧೯೫೮ರಲ್ಲಿ ವಿಜಯನಗರ ಬಡಮಕ್ಕಳ ವಿದ್ಯಾರ್ಥಿ ನಿಲಯ ಎಂಬ ಹೆಸರಿನಿಂದ ಪ್ರಾರಂಭಿಸಿದರು. ಇದರಿಂದ ಶೈಕ್ಷಣಿಕವಾಗಿ ಹಿಂದುಳಿದಿದ್ದ ಕುರುಬ ಜನಾಂಗಕ್ಕೆ ಸ್ಫೂರ್ತಿ, ಆಶ್ರಯ ದೊರೆತಂತಾಯಿತು. ಹಲವಾರು ಜನ ವಿದ್ಯಾರ್ಥಿಗಳು ಈ ಪ್ರಸಾದ ನಿಲಯದಲ್ಲಿದ್ದುಕೊಂಡು ಶಿಕ್ಷಣವನ್ನು ಪಡೆದರು. ಮುಂದೆ ಅನ್ನ, ಆಶ್ರಯದ ಜೊತೆಗೆ ಅಕ್ಷರ ಜ್ಞಾನವನ್ನು ನೀಡಲು ವೀರ ಸಂಗೋಳ್ಳಿರಾಯಣ್ಣ ಹೈಸ್ಕೂಲನ್ನು ಪ್ರಾರಂಭಿಸಿದರು. ಮುಂದೆ ಇದೇ ಹೈಸ್ಕೂಲಿನ ಆವರಣದಲ್ಲಿಯೇ ಬಿ.ಇಡಿ.ಕಾಲೇಜನ್ನು ೧೯೮೨ರಲ್ಲಿ ಪ್ರಾರಂಭಿಸಿದರು. ಇವರ ಕಾರ್ಯಕ್ಕೆ ವೆಂಕರೆಡ್ಡಿ ಹೂಲಿ,

ಮಲ್ಲಪ್ಪ ಕಾರ್ಲಕಟ್ಟಿ ಮುಂತಾದವರು ಧನಸಹಾಯ ನೀಡಿದರು. ಈ ಶಾಲೆ, ಕಾಲೇಜು, ಸವತಿ ನಿಲಯಗಳ ಬೆಳವಣಿಗೆಯಲ್ಲಿ ಬಿ.ಎಫ್. ದಂಡಿನ ಅವರೂ ಶ್ರಮಿಸಿದ್ದಾರೆ.

ಕ್ರಿ. ಶ. ೧೯೪೯ ರಲ್ಲಿ ಧಾರವಾಡದಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಸ್ಥಾಪನೆಗೊಂಡು ಉತ್ತರ ಕರ್ನಾಟಕದ ಶೈಕ್ಷಣಿಕ ವಿಕಾಸಕ್ಕೆ ಕಾರಣವಾಯಿತು. ಇದುವರೆಗೆ ಮುಂಬೈ ವಿಶ್ವವಿದ್ಯಾಲಯದ ಅಧೀನಕ್ಕೆ ಒಳಪಟ್ಟಿದ್ದ ಬೆಳಗಾವಿಯ ಕಾಲೇಜುಗಳು ಧಾರವಾಡ ವಿಶ್ವವಿದ್ಯಾಲಯಕ್ಕೆ ಒಳಪಟ್ಟವು. ಕರ್ನಾಟಕ ವಿಶ್ವವಿದ್ಯಾಲಯವು ಧಾರವಾಡದಲ್ಲಿ ಸ್ಥಾಪಿತವಾಗಿದ್ದರೂ ಬೆಳಗಾವಿಯಲ್ಲಿಯೂ ಕೆಲವು ಸ್ನಾತಕೋತ್ತರ ತರಗತಿಗಳು ನಡೆಯತೊಡಗಿದವು. ಅಂದರೆ ಅರ್ಧ ವಿಶ್ವವಿದ್ಯಾಲಯ ಬೆಳಗಾವಿಯಲ್ಲಿಯೇ ಕಾರ್ಯಾರಂಭ ಮಾಡತೊಡಗಿತು. ಮರಾಠಿ, ಅರ್ಧ ಮಾಗಧಿ ಮತ್ತು ವಿಜ್ಞಾನದ ವಿಷಯಗಳ ತರಗತಿಗಳು, ಲಿಂಗರಾಜ ಮಹಾವಿದ್ಯಾಲಯದಲ್ಲಿಯೇ ನಡೆಯತೊಡಗಿದವು. ಮುಂದೆ (೧೯೮೨) ಸ್ನಾತಕೋತ್ತರ ಕೇಂದ್ರವಾಗಿ ಮಾರ್ಪಟ್ಟಿತು.

ಬೆಳಗಾವಿಯ ಶಿಕ್ಷಣ ಕ್ಷೇತ್ರದಲ್ಲಿ ಮಹತ್ವದ ಬೆಳವಣಿಗೆ ಕಂಡು ಬಂದದ್ದು ೨೦ನೆಯ ಶತಮಾನದ ಎಪ್ಪತ್ತರ ದಶಕದ ಪ್ರಾರಂಭದಲ್ಲಿ. ಹೊಸ ಶಿಕ್ಷಣ ರೂಪಗೊಂಡ ಸಂದರ್ಭದಲ್ಲಿ ಅದನ್ನು ಬಳಸಿಕೊಳ್ಳುತ್ತಾ ಸಾಗಿದ ಕೆ.ಎಲ್.ಇ. ಸಂಸ್ಥೆಯು ಬೆಳಗಾವಿಯಲ್ಲಿ ವೈದ್ಯಕೀಯ ಮಹಾವಿದ್ಯಾಲಯವನ್ನು ಸ್ಥಾಪಿಸಿತು. ಈ ವೈದ್ಯಕೀಯ ಮಹಾವಿದ್ಯಾಲಯ ಸ್ಥಾಪನೆಯಾಗಿರುವುದಕ್ಕಿಂತ ಪೂರ್ವದಲ್ಲಿ ಕಲೆ, ವಿಜ್ಞಾನ, ವಾಣಿಜ್ಯ, ಕಾನೂನು, ಶಿಕ್ಷಕರ ತರಬೇತಿಯಂತಹ ಕಾಲೇಜುಗಳ ಸ್ಥಾಪನೆ ಒಂದು ರೀತಿಯ ಪಾರಂಪರಿಕ ಶಿಕ್ಷಣಕ್ಕೆ ಕಾರಣವಾಗಿದ್ದವು. ಆಧುನಿಕ ಶಿಕ್ಷಣದಲ್ಲಿ ವೈದ್ಯಕೀಯ ಶಿಕ್ಷಣವು ಅತ್ಯಂತ ಮಹತ್ವದಾಗಿತ್ತು. ಆ ಶಿಕ್ಷಣವನ್ನು ಪಡೆಯುವುದು ಪ್ರತಿಷ್ಠೆಯ ವಿಷಯ ಮತ್ತು ಕೇವಲ ಶ್ರೀಮಂತರಿಗೆ ಮಾತ್ರ ಎನ್ನುವುದಾಗಿತ್ತು. ಈ ಶಿಕ್ಷಣವನ್ನು ಪಡೆಯಲು ಪುಣೆ, ಮುಂಬೈ, ಹುಬ್ಬಳ್ಳಿ, ಮಣಿಪಾಲಗಳಿಗೆ ಹೋಗಬೇಕಾಗಿತ್ತು. ಇದನ್ನರಿತ ಕೆ.ಎಲ್.ಇ. ಸಂಸ್ಥೆಯು ೧೯೬೩ ರಲ್ಲಿ ಬೆಳಗಾವಿಯಲ್ಲಿ ವೈದ್ಯಕೀಯ ಮಹಾವಿದ್ಯಾಲಯವನ್ನು ಸ್ಥಾಪಿಸಿತು. ಈ ದೊಡ್ಡ ಪ್ರಮಾಣದ ಯೋಜನೆಗೆ ಖಾಸಗಿ ಶಿಕ್ಷಣ ಸಂಸ್ಥೆಯು ಕೈಹಾಕಿದ್ದು ಸಾಹಸದ ಕಾರ್ಯವಾಗಿದೆ. ಈ ಕಾಲೇಜಿನ ಸ್ಥಾಪನೆಗೆ ಹಲವಾರು ಅಡ್ಡಿ ಆತಂಕಗಳು ಬಂದರೂ ಎಲ್ಲವನ್ನೂ ಎದುರಿಸಿ ಕಾಲೇಜು ಸ್ಥಾಪನೆಗೊಂಡಿತು. ಪಂಡಿತ ಜವಾಹರಲಾಲ್‌ನೆಹರುರವರ ಹೆಸರನ್ನು ಕಾಲೇಜಿಗೆ ಇಡಲಾಯಿತು. ಸುಮಾರು ನೂರು ಎಕರೆ ಪ್ರದೇಶದಲ್ಲಿ ಭವ್ಯವಾದ ಕಟ್ಟಡದಲ್ಲಿ ಕಾಲೇಜು ಕಾರ್ಯಾರಂಭ ಮಾಡಿತು.

ಈ ಕಾಲೇಜಿನ ಸ್ಥಾಪನೆಯೊಂದಿಗೆ ಬೆಳಗಾವಿಯ ಶಿಕ್ಷಣ ವಲಯಕ್ಕೆ ಹೊಸ ಆಯಾಮ ಒದಗಿತು. ಬೆಳಗಾವಿಯ ಚಿತ್ರಣ ಬದಲಾಗತೊಡಗಿತು. ದೇಶ ವಿದೇಶಗಳಿಂದ ವಿದ್ಯಾರ್ಥಿಗಳು ಬರತೊಡಗಿದರು. ಬೆಳಗಾವಿಯಲ್ಲಿ ವೈದ್ಯರ ಸಂಖ್ಯೆ ಹೆಚ್ಚಾಗತೊಡಗಿತು. ಸಾಮಾಜಿಕ ಜೀವನ ಸುಧಾರಿಸಿತು. ಈ ಕಾಲೇಜಿನ ಕನ್ನಡ ಬಳಗವು ನಗರದ

ಾಂಸ್ಕೃತಿಕ ಜೀವನದಲ್ಲಿ ತನ್ನ ಅಮೂಲ್ಯ ಸೇವೆಯನ್ನು ನೀಡತೊಡಗಿತು. ಆಧುನಿಕತೆಯು ಬೆಳಗಾವಿಯಲ್ಲಿ ಮೂಡತೊಡಗಿತು. ನಗರದ ಜಿಲ್ಲಾ ಆಸ್ಪತ್ರೆಯು ರೋಗಿಗಳ ಪರೀಕ್ಷೆಗಾಗಿ, ವಿದ್ಯಾರ್ಥಿಗಳ ಅಭ್ಯಾಸಕ್ಕೆ ಅನುಕೂಲ ಮಾಡಿಕೊಟ್ಟಿತು. ಇದರಿಂದ ರೋಗಿಗಳಿಗೂ ಸರಿಯಾದ ರೀತಿಯ ಉಪಚಾರ ದೊರೆಯಿತು. ದೇಶದ ನಾನಾ ಭಾಗಗಳಿಂದ ಬಂದ ವೈದ್ಯರ ಸೇವೆ ಇಲ್ಲಿಯ ಜನರಿಗೆ ಲಭ್ಯವಾಗತೊಡಗಿತು. ವೈದ್ಯಕೀಯ ಕಾಲೇಜು ಸ್ಥಾಪನೆಯಾದ ಪ್ರದೇಶವು ನೆಹರುನಗರವೆಂದೇ ಪ್ರಸಿದ್ಧಿಯನ್ನು ಪಡೆದು ಬೆಳಗಾವಿ ನಗರದಲ್ಲಿಯೇ ಅತ್ಯಂತ ಪ್ರತಿಷ್ಠೆಯ ಭಾಗವಾಯಿತು. ಬೆಳಗಾವಿ ನಗರವು ಮತ್ತೊಂದು ಮುಖದಲ್ಲಿ ಬೆಳವಣಿಗೆಯನ್ನು ಹೊಂದತೊಡಗಿತು. ಅಕ್ಕಪಕ್ಕದ ಹಳ್ಳಿಗಳು ನಗರ ಸಭೆಯ ವ್ಯಾಪ್ತಿಯೊಳಗೆ ಬರಲಾರಂಭಿಸಿದವು. ನೆಹರು ನಗರದಲ್ಲಿ ವಾಣಿಜ್ಯವೂ ಬೆಳೆಯಿತು. ಖಾನಾವಳಿಗಳು (ಮೆಸ್) ಹೆಚ್ಚಿನ ಸಂಖ್ಯೆಯಲ್ಲಿ ಬೆಳೆದವು. ಹೊಟೇಲುಗಳು, ವಸತಿಗೃಹಗಳು ನಿರ್ಮಾಣಗೊಂಡವು. ಸಾರಿಗೆ ವ್ಯವಸ್ಥೆ ಬೆಳೆಯಿತು. ಸಾಮಾನ್ಯ ಜನರು ಈ ಕಾಲೇಜಿನ ನಿರ್ಮಾಣದಿಂದ ಹಲವಾರು ಸಣ್ಣ ಸಣ್ಣ ಉದ್ಯೋಗ, ವ್ಯಾಪಾರಗಳನ್ನು ಮಾಡಿಕೊಂಡು ಬದುಕತೊಡಗಿದರು. ಕಾಲೇಜಿನ ಆವರಣದಲ್ಲಿಯೇ ಶಿವಾಲಯವೊಂದು ಸ್ಥಾಪನೆಗೊಂಡು ಧಾರ್ಮಿಕ ವಿಕಾಸಕ್ಕೆ ಕಾರಣವಾಯಿತು. ಬೇರೆ ಬೇರೆ ಭಾಗದ ವಿದ್ಯಾರ್ಥಿಗಳು ಆಗಮಿಸಿದ್ದರಿಂದ ವೇಷ-ಭೂಷಣಗಳಲ್ಲಿ ವೈವಿಧ್ಯತೆ ಕಂಡುಬಂದಿತು. ಹೀಗೆ ವೈದ್ಯಕೀಯ ಕಾಲೇಜಿನ ಸ್ಥಾಪನೆ ಬೆಳಗಾವಿಯ ಜನರ ಬದುಕಿನ ಮೇಲೆ ಪರಿಣಾಮವನ್ನು ಬೀರಿ ಸಾಂಸ್ಕೃತಿಕ ಬದಲಾವಣೆಗೆ ಕಾರಣವಾಯಿತು.

ವೈದ್ಯಕೀಯ ರಂಗದಲ್ಲಿ ಅಭೂತಪೂರ್ವವಾದ ಬದಲಾವಣೆಗಳು ಬೆಳಗಾವಿಯಲ್ಲಿ ವೈದ್ಯಕೀಯ ಕಾಲೇಜಿನಿಂದ ಉಂಟಾದವು. ರಾಷ್ಟ್ರ ಅಂತರಾಷ್ಟ್ರೀಯ ಮಟ್ಟದ ಸಮ್ಮೇಳನಗಳೂ ಕಮ್ಮಟಗಳು ನಡೆಯತೊಡಗಿದವು. ಇಲ್ಲಿ ನಿರ್ಮಿಸಿದ ಪೆಥಾಲಜಿ ಮ್ಯುಸಿಯಂ ಏಶಿಯಾ ಖಂಡದ ಅತಿ ಉತ್ತಮ ಮ್ಯೂಸಿಯಂ ಎಂದು ಹೆಸರು ಮಾಡಿ, ದೇಶ-ವಿದೇಶದ ತಜ್ಞರನ್ನು, ಜಾಗತಿಕ ಆರೋಗ್ಯ ಸಂಸ್ಥೆಯವರನ್ನು ಆಕರ್ಷಿಸಿತು.

ವೈದ್ಯಕೀಯ ಮಹಾವಿದ್ಯಾಲಯ ಸ್ಥಾಪನೆಯ ನಂತರ ಬೆಳಗಾವಿಯ ವೈದ್ಯಕೀಯ ಶಿಕ್ಷಣ ಕ್ಷೇತ್ರದಲ್ಲಿ ಮಹತ್ವದ ಬೆಳವಣಿಗೆ ಕಾಣತೊಡಗಿತು. ಕೆ.ಎಲ್.ಇ. ಸಂಸ್ಥೆ, ಮರಾಠಾ ಮಂಡಲ, ಭರತೇಶ, ಎ.ಎಮ್.**ಶೇಖ್ ಶಿಕ್ಷಣ ಸಂಸ್ಥೆ** ಹೀಗೆ ಹಲವಾರು ಶಿಕ್ಷಣ ಸಂಸ್ಥೆಗಳು ಆಯುರ್ವೇದ, ಹೋಮಿಯೋಪತಿ, ಅಲೋಪತಿ ಶಿಕ್ಷಣವನ್ನು ನೀಡುವ ಮಹಾವಿದ್ಯಾಲಯಗಳನ್ನು ಸ್ಥಾಪಿಸತೊಡಗಿದವು. ಕೆ.ಎಲ್.ಇ ಸಂಸ್ಥೆಯ ಫಾರ್ಮಸಿ ಕಾಲೇಜು ೧೯೭೦ ರಲ್ಲಿ ಪ್ರಾರಂಭವಾಯಿತು. ೧೯೮೫ ರಲ್ಲಿ ಡೆಂಟಲ್ ಕಾಲೇಜು, ೧೯೮೭ ರಲ್ಲಿ ನರ್ಸಿಂಗ್ ಕಾಲೇಜುಗಳು ಸ್ಥಾಪನೆಗೊಂಡವು.ನಂತರದ ದಿನಗಳಲ್ಲಿ **ಭರತೇಶ ಹೋಮಿಯೋಪಥಿಕ್** ಹಾಗೂ **ಮರಾಠಾ ಮಂಡಳದವರ ಡೆಂಟಲ್ ಕಾಲೇಜು,** ಫಾರ್ಮಸಿ ಕಾಲೇಜುಗಳು ಸ್ಥಾಪನೆಗೊಂಡು, ವೈದ್ಯಕೀಯ ಶಿಕ್ಷಣದ ಬೆಳವಣಿಗೆಗೆ ಮಹತ್ವವನ್ನು ಒದಗಿಸಿದವು. ೨೦೦೮ ರಿಂದ ಸರ್ಕಾರಿ ವೈದ್ಯಕೀಯ ಕಾಲೇಜು ಪ್ರಾರಂಭಗೊಂಡಿತು. ಸರ್ಕಾರಿ ವೈದ್ಯಕೀಯ

ಮಹಾವಿದ್ಯಾಲಯದ ಸ್ಥಾಪನೆಯೊಂದಿಗೆ ಈ ಭಾಗದ ಬಡ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ವೈದ್ಯಕೀಯ ಶಿಕ್ಷಣ ದೊರೆಯುಂತಾಯಿತು. ಒಟ್ಟಾರೆ ಬೆಳಗಾವಿಯಲ್ಲಿ ಎರಡು ವೈದ್ಯಕೀಯ ಮಹಾವಿದ್ಯಾಲಯಗಳು, ಎರಡು ಡೆಂಟಲ್ ಕಾಲೇಜುಗಳು, ಮೂರು ಫಾರ್ಮಸಿ ಕಾಲೇಜುಗಳು, ಮೂರು ಹೋಮಿಯೋಪಥಿಕ್ ಕಾಲೇಜುಗಳು, ಮೂರು ಆಯುರ್ವೇದ ಕಾಲೇಜುಗಳು ಹಾಗೂ ಮೂರು ನರ್ಸಿಂಗ್ ಕಾಲೇಜುಗಳು ಸ್ಥಾಪನೆಗೊಂಡು ಬೆಳಗಾವಿ ನಗರವು ದೇಶದಲ್ಲಿಯೇ ಅತ್ಯುತ್ತಮವಾದ ವೈದ್ಯಕೀಯ ಶಿಕ್ಷಣವನ್ನು ನೀಡುವ ಕೇಂದ್ರವಾಗಿ ರೂಪಗೊಂಡಿತು.

ಬೆಳಗಾವಿಯು ಇಂಜನಿಯರಿಂಗ್ ಹಾಗೂ ಪಾಲಿಟೆಕ್ನಿಕ್ ಶಿಕ್ಷಣವನ್ನು ನೀಡುವಲ್ಲಿಯೂ ರಾಷ್ಟ್ರಮಟ್ಟದ ಖ್ಯಾತಿಯನ್ನು ಪಡೆದುಕೊಂಡಿದೆ. ೧೯೭೯ ರಲ್ಲಿ ಪ್ರಾರಂಭವಾದ **ಗೋಗಟೆ ಇನ್‌ಸ್ಟಿಟ್ಯೂಟ ಆಫ್ ಟೆಕ್ನಾಲಾಜಿ** ಹಾಗೂ ಕೆ.ಎಲ್.ಇ. ಸಂಸ್ಥೆಯ ಇಂಜನಿಯರಿಂಗ್ ಕಾಲೇಜು ಇವು ದೇಶದ ಪ್ರತಿಷ್ಠಿತ ಕಾಲೇಜುಗಳಲ್ಲಿ ಒಂದಾಗಿವೆ. ಮರಾಠಾ ಮಂಡಳ ಸಂಸ್ಥೆಯೂ ಒಂದು ಇಂಜನಿಯರಿಂಗ್ ಹಾಗೂ ಪಾಲಿಟೆಕ್ನಿಕ್ ಕಾಲೇಜುಗಳನ್ನು ಸ್ಥಾಪಿಸಿದೆ. ಅಲ್ಲದೆ ೨೦೧೦ ರಲ್ಲಿ ನಾಗನೂರು ರುದ್ರಾಕ್ಷಿಮಠದ ಎಸ್. ಜಿ. ಬಾಳೇಕುಂದ್ರಿ ಇಂಜನಿಯರಿಂಗ್ ಕಾಲೇಜು ಸ್ಥಾಪನೆಗೊಂಡು ಬೆಳಗಾವಿಯಲ್ಲಿ ಇಂಜನಿಯರಿಂಗ್ ಶಿಕ್ಷಣ ಬೆಳವಣಿಗೆಯನ್ನು ಹೊಂದಲು ಕಾರಣವಾಗಿದೆ. ಪಾಲಿಟೆಕ್ನಿಕ್ ಶಿಕ್ಷಣವನ್ನು ನೀಡುತ್ತಿರುವ ಸರ್ಕಾರಿ ಪಾಲಿಟೆಕ್ನಿಕ್ ಮಹತ್ವದ್ದಾಗಿದೆ. ಖಾಸಗಿಯಾಗಿ ಭರತೇಶ ಪಾಲಿಟೆಕ್ನಿಕ್, **ಗೋಮಟೇಶ್ ಪಾಲಿಟೆಕ್ನಿಕ್**, ಮರಾಠಾ ಮಂಡಳ ಪಾಲಿಟೆಕ್ನಿಕ್ ಹಾಗೂ ನಾಗನೂರು ರುದ್ರಾಕ್ಷಿಮಠದ ಆರ್. ಎನ್. ಶೆಟ್ಟಿ ಪಾಲಿಟೆಕ್ನಿಕ್ ಮಹತ್ವದ ಶಿಕ್ಷಣವನ್ನು ನೀಡುತ್ತಿವೆ.

ಬೆಳಗಾವಿಯಲ್ಲಿ ವಿಶ್ವವಿದ್ಯಾಲಯಗಳು: ಬೆಳಗಾವಿಯು ಶಿಕ್ಷಣ ವಲಯದ ಕಾಶಿ ಎಂಬ ಅಭಿದಾನಕ್ಕೆ ಪಾತ್ರವಾಗಿದೆ. ಇದಕ್ಕೆ ಸಾಕ್ಷಿಯಾಗಿ ಮೂರು ವಿಶ್ವವಿದ್ಯಾಲಯಗಳು ಇಂದು ಬೆಳಗಾವಿಯಲ್ಲಿ ಸ್ಥಾಪಿತವಾಗಿವೆ. ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ, ಕಿತ್ತೂರು ರಾಣಿ ಚೆನ್ನಮ್ಮ ವಿಶ್ವವಿದ್ಯಾಲಯ ಹಾಗೂ ಕೆ.ಎಲ್.ಇ. ಸಂಸ್ಥೆಯ ವೈದ್ಯಕೀಯ ಹಾಗೂ ದಂತ ವೈದ್ಯಕೀಯ ಕಾಲೇಜುಗಳ ಸ್ವಾಯತ್ತ ವಿಶ್ವವಿದ್ಯಾಲಯ. ಹೀಗೆ ಮೂರು ವಿಶ್ವದ್ಯಾಲಯಗಳಿಂದ ಬೆಳಗಾವಿ ರಾಷ್ಟ್ರ ಮಟ್ಟದಲ್ಲಿ ಗಮನ ಸೆಳೆದಿದೆ. ಬೆಳಗಾವಿಯ ಮಚ್ಛೆ ಗ್ರಾಮದ ಹತ್ತಿರ ೧೧೫ ಎಕರೆ ವಿಸ್ತಾರವನ್ನು ಹೊಂದಿದ ಪ್ರದೇಶದಲ್ಲಿ ೧೯೯೮ ಎಪ್ರಿಲ್ ೧ರಂದು ಸ್ಥಾಪಿತವಾದ **ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯವು** ರಾಜ್ಯದ ಏಕೈಕ ತಾಂತ್ರಿಕ ವಿಶ್ವವಿದ್ಯಾಲಯವಾಗಿದೆ. ಅಂದು ಕೆ.ಎಲ್.ಇ. ಸಂಸ್ಥೆಯ ಅತಿಥಿ ಗೃಹದಲ್ಲಿ ಕಾರ್ಯಾರಂಭ ಮಾಡಿದ ಈ ವಿಶ್ವವಿದ್ಯಾಲಯವು ಇಂದು ರಾಜ್ಯದ ಅತ್ಯಂತ ಶ್ರೀಮಂತ ವಿಶ್ವವಿದ್ಯಾಲಯವಾಗಿ ರೂಪಗೊಂಡಿದೆ. ಇಂದಿನ ಜಾಗತೀಕರಣ ವ್ಯವಸ್ಥೆಗೆ ಹೊಂದಿಕೊಂಡು ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯವು ತಾಂತ್ರಿಕ ಜಗತ್ತಿನ ಮೇಲೆ ತನ್ನದೇ ಛಾಪು ಮೂಡಿಸುತ್ತಿದೆ. ರಾಜ್ಯದ ೨೮ ಕಾಲೇಜುಗಳ ವ್ಯಾಪ್ತಿಯನ್ನು ಪಡೆದುಕೊಂಡಿದೆ. ಒಟ್ಟು ೨೭ ಪದವಿ ಕೋರ್ಸಗಳು, ಸ್ನಾತಕೋತ್ತರ ಹಾಗೂ ಪ್ರಾರಂಭಿಸಲಾಗಿದೆ.

ಬೆಳಗಾವಿಯ ಶೈಕ್ಷಣಿಕ ರಂಗದಲ್ಲಿ ಮತ್ತೊಂದು ಮಹತ್ವದ ಬೆಳವಣಿಗೆಯೆಂದರೆ ಬೆಳಗಾವಿಯಲ್ಲಿ ಸ್ವತಂತ್ರ ವಿಶ್ವವಿದ್ಯಾಲಯ ಸ್ಥಾಪನೆಗೊಂಡದ್ದು. ಹೆಸರಾಂತ ಆರ್ಥಿಕತಜ್ಞ ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿಯಾಗಿದ್ದ ಡಾ.ಡಿ.ಎಂ ನಂಜುಂಡಪ್ಪನವರ ದೂರದೃಷ್ಟಿ ಹಾಗೂ ಪ್ರಯತ್ನದ ಫಲವಾಗಿ ಬೆಳಗಾವಿಯ ಕೆ.ಎಲ್.ಇ ಸಂಸ್ಥೆಯ ಆವರಣದಲ್ಲಿ ೧೯೮೨ ರಲ್ಲಿ ಸ್ನಾತಕೋತ್ತರ ಅಧ್ಯಯನ ಕೇಂದ್ರ ಆರಂಭಗೊಂಡಿತ್ತು. ಅಂದಿನಿಂದಲೂ ಬೆಳಗಾವಿಗೆ ಪ್ರತ್ಯೇಕವಾದ ವಿಶ್ವವಿದ್ಯಾಲಯವನ್ನು ನೀಡುವ ಕುರಿತು ಬೆಳಗಾವಿಯ ಶಿಕ್ಷಣ ತಜ್ಞರು, ಹೋರಾಡುತ್ತಲೇ ಬಂದಿದ್ದರು. ಇದರ ಫಲವಾಗಿ ೨೦೧೦ ಜುಲೈ ೨೭ ರಂದು **ರಾಣಿ ಚನ್ನಮ್ಮ ವಿಶ್ವವಿದ್ಯಾಲಯವು** ಸ್ವತಂತ್ರ ವಿಶ್ವವಿದ್ಯಾಲಯವಾಗಿ ರೂಪಗೊಂಡಿತು. ಈ ವಿಶ್ವವಿದ್ಯಾಲಯದ ವ್ಯಾಪಿಯಲ್ಲಿ ಬಾಗಲಕೋಟೆ, ವಿಜಾಪುರ ಮತ್ತು ಬೆಳಗಾವಿ ಜಿಲ್ಲೆಯ ಒಟ್ಟು ೩೦೬ ಮಹಾವಿದ್ಯಾಲಯಗಳಿದ್ದು ಇನ್ನೂ ೪೩ ಕಾಲೇಜುಗಳು ೨೦೧೧-೧೨ ನೆಯ ಸಾಲಿನಿಂದ ಸೇರಿಕೊಳ್ಳುತ್ತವೆ. ಬೆಂಗಳೂರು ವಿಶ್ವವಿದ್ಯಾಲಯದ ನಂತರ ವಿದ್ಯಾರ್ಥಿಗಳ ಸಂಸ್ಥೆಯಲ್ಲಿ ರಾಜ್ಯದ ಎರಡನೆಯ ಸ್ಥಾನವಾಗಿ ರಾಣಿ ಚನ್ನಮ್ಮ ವಿಶ್ವವಿದ್ಯಾಲಯ ಹೊಂದಿದೆ. ಸುಮಾರು ೩೭ ಸಾವಿರ ವಿದ್ಯಾರ್ಥಿಗಳು ೨೦೧೦-೧೧ ನೆಯ ಸಾಲಿನಲ್ಲಿ ಪ್ರಥಮ ಸೆಮಿಸ್ಟರ್ ಪರೀಕ್ಷೆಗೆ ಹಾಜರಾಗಿದ್ದರು. ಈಗ ಒಟ್ಟು ಎಂಟು ಬೇರೆ ಬೇರೆ ವಿಭಾಗಗಳನ್ನು ಹೊಂದಿದ್ದು ಹೊಸದಾಗಿ ಕ್ರಿಮಿನಾಲಜಿ ಪಿ.ಜಿ. ಕೋರ್ಸ ೨೦೧೧-೧೨ ನೆಯ ಸಾಲಿನಿಂದ ಪ್ರಾರಂಭಗೊಳ್ಳಲಿದೆ ಎಂದು ಕುಲಪತಿಯವರು ತಿಳಿಸಿದ್ದಾರೆ.[೨] ಮಹಾರಾಷ್ಟ್ರದ ಪುಣೆ ವಿಶ್ವವಿದ್ಯಾಲಯವನ್ನು ಹೊರತುಪಡಿಸಿದರೆ ದಕ್ಷಿಣ ಭಾರತದಲ್ಲಿ ಎಲ್ಲಿಯೂ ಈ ಕೋರ್ಸ ಇಲ್ಲ. 'ವಿದ್ವಾನ್ ಸರ್ವತ್ರ ಪೂಜ್ಯತೆ' ಎನ್ನುವ ಸಂಸ್ಕೃತ ಉಕ್ತಿಯನ್ನು ಲಾಂಛನದಲ್ಲಿ ಹೊಂದಿದ ರಾಣಿ ಚನ್ನಮ್ಮ ವಿಶ್ವವಿದ್ಯಾಲಯವು ಬೆಳಗಾವಿಯ ವಿದ್ವತ್ ಪರಂಪರೆಗೆ, ಶೈಕ್ಷಣಿಕ ವಿಕಾಸಕ್ಕೆ ಮಹತ್ವದ ಹೆಜ್ಜೆಗಳನ್ನಿಡುತ್ತಿದೆ.

**ರಾಣಿ ಚನ್ನಮ್ಮ ವಿಶ್ವವಿದ್ಯಾಲಯವು** ಬೆಳಗಾವಿ ನಗರದ ಹೊರವಲಯದಲ್ಲಿ ಬೆಳಗಾವಿಯಿಂದ ಸುಮಾರು ೨೦ ಕಿ.ಮೀ ದೂರದಲ್ಲಿ ರಾಷ್ಟ್ರೀಯ ಹೆದ್ದಾರಿ-೪ ರ ಬದಿಗೆ ಸ್ಥಾಪನೆಗೊಂಡಿದೆ. ಇದು ಬೆಳಗಾವಿಯ ವ್ಯಾಪ್ತಿಯನ್ನು ಹೆಚ್ಚಿಸಿದೆ. ಬೆಳಗಾವಿಯ ಒಂದು ತುದಿಗೆ ರಾಣಿ ಚನ್ನಮ್ಮ ವಿಶ್ವವಿದ್ಯಾಲಯ ಮತ್ತೊಂದು ತುದಿಗೆ ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ ಈ ಎರಡೂ ವಿಶ್ವವಿದ್ಯಾಲಯಗಳ ಮಧ್ಯದ ಅಂತರ ಸುಮಾರು ೨೫ ಕಿ.ಮಿ. ಆಗಿದೆ. ಈ ಎರಡೂ ವಿಶ್ವವಿದ್ಯಾಲಯಗಳ ಸ್ಥಾಪನೆಯಿಂದ ಕೇವಲ ಶೈಕ್ಷಣಿಕ ವಲಯವಷ್ಟೇ ಅಭಿವೃದ್ಧಿಯನ್ನು ಹೊಂದದೆ ಮುಂದಿನ ದಿನಮಾನದಲ್ಲಿ ಬೆಳಗಾವಿಯು ಬೃಹತ್ ನಗರವಾಗಿ ಬೆಳೆಯಲು ಸಹಕಾರಿಯಾಗಿದೆ. ಈಗಾಗಲೇ ರಾಣಿ ಚನ್ನಮ್ಮ ವಿಶ್ವವಿದ್ಯಾಲಯದ ಅಕ್ಕಪಕ್ಕದಲ್ಲಿ ಶೇಖ ಶಿಕ್ಷಣ ಸಂಸ್ಥೆಯ ಎಂ.ಬಿ.ಎ. ಮಹಾವಿದ್ಯಾಲಯ, ಮರಾಠಿ ಮಂಡಳ ಶಿಕ್ಷಣ ಸಂಸ್ಥೆಯ ಇಂಜನಿಯರಿಂಗ್ ಕಾಲೇಜು, ಜೈನ ಶಿಕ್ಷಣ ಸಂಸ್ಥೆಯ ಆಂಗ್ಲ ಮಾಧ್ಯಮ ವಸತಿ ಶಾಲೆ, ವಿವೇಕರಾವ್ ಪಾಟೀಲ ಶಿಕ್ಷಣ ಸಂಸ್ಥೆಯ ಪಿನಿಕ್ಸ್ ವಸತಿ ಶಾಲೆಗಳು ನಿರ್ಮಾಣಗೊಂಡು ಈ ಪ್ರದೇಶವು ಶೈಕ್ಷಣಿಕ

ವಲಯವಾಗಿ ನಿರ್ಮಾಣಗೊಂಡಿದೆ. ಇಲ್ಲಿಯೇ ಕೆ.ಎಲ್.ಇ. ಸಂಸ್ಥೆಯ ನೂರಾರು ಎಕರೆ ಪ್ರದೇಶವಿದ್ದು ಮುಂದಿನ ದಿನಗಳಲ್ಲಿ ಈ ಪ್ರದೇಶವು ಶಿಕ್ಷಣ ಕ್ಷೇತ್ರದಲ್ಲಿ ಅಭಿವೃದ್ಧಿಯನ್ನು ಹೊಂದಲು ಸಹಕಾರಿಯಾಗಿದೆ.

ಬೆಳಗಾವಿಯ ಮತ್ತೊಂದು ಮಹತ್ವದ ವಿಶ್ವವಿದ್ಯಾಲಯವೆಂದರೆ **ಕೆ.ಎಲ್.ಇ. ಅಕಾಡೆಮಿ ಆಫ್ ಹೈಯರ್ ಎಜ್ಯುಕೇಶನ್ ಆಂಡ್ ರಿಸರ್ಚ (ಕಾಹೆ) ಸ್ವಾಯತ್ತ ವಿಶ್ವವಿದ್ಯಾಲಯ**. ಬೆಳಗಾವಿಯ ನೆಲದಲ್ಲಿ ಶಿಕ್ಷಣದ ಬೀಜಗಳನ್ನು ಬಿತ್ತುತ್ತಾ ಬಂದ ಕೆ.ಎಲ್.ಇ. ಸಂಸ್ಥೆಯು ದೇಶದ ಪ್ರತಿಷ್ಠಿತ ಶಿಕ್ಷಣ ಸಂಸ್ಥೆಯಾಗಿ ರೂಪುಗೊಂಡು ಬೆಳಗಾವಿಯನ್ನು ಶಿಕ್ಷಣ ಕೇಂದ್ರನ್ನಾಗಿ ರೂಪಿಸಿತು. ಈ ಸಂಸ್ಥೆಯ ವೈದ್ಯಕೀಯ ಹಾಗೂ ದಂತ ವೈದ್ಯಕೀಯ ಕಾಲೇಜುಗಳಿಗೆ ಸ್ವಾಯತ್ತ ವಿಶ್ವವಿದ್ಯಾಲಯದ ಮಾನ್ಯತೆಯು ಕ್ರಿ ಶ. ೨೦೦೬ ರಲ್ಲಿ ದೊರೆಯಿತು. ಇದರೊಂದಿಗೆ ಕರ್ನಾಟಕದ ಎರಡನೇ ಸ್ವಾಯತ್ತ ವಿಶ್ವವಿದ್ಯಾಲಯವಾಗಿ ದೇಶದ ಕೆಲವೇ ಆರೋಗ್ಯ ವಿಜ್ಞಾನ ವಿಶ್ವವಿದ್ಯಾಲಯಗಳಲ್ಲಿ ಇದೂ ಒಂದಾಗಿ ಬೆಳಗಾವಿಯ ಶೈಕ್ಷಣಿಕ ಕ್ಷೇತ್ರದಲ್ಲಿ ಕ್ರಾಂತಿಕಾರಿ ಬದಲಾವಣೆಯನ್ನುಂಟು ಮಾಡಿದೆ. ಈ ವಿಶ್ವವಿದ್ಯಾಲಯವನ್ನು ವಿಶ್ವಮಟ್ಟದಲ್ಲಿ ಬೆಳಸುವ ಮಹತ್ವಾಕಾಂಕ್ಷೆಯನ್ನು ವಿಶ್ವವಿದ್ಯಾಲಯದ ಕುಲಾಧಿಪತಿಗಳು ಸಂಸ್ಥೆಯ ಕಾರ್ಯಾಧ್ಯಕ್ಷರು ಆದ ಡಾ. ಪ್ರಭಾಕರ ಕೋರೆಯವರು ಹೊಂದಿದ್ದಾರೆ. ಈಗಾಗಲೇ ವಿಶ್ವದ ಬೇರೆ ಬೇರೆ ಪ್ರತಿಷ್ಠಿತಿ ವಿಶ್ವವಿದ್ಯಾಲಯದ ಜೊತೆಗೆ ಸಹಯೋಗ ಹೊಂದಿ ಗುಣಮಟ್ಟದ ಶಿಕ್ಷಣವನ್ನು ನೀಡುವ ಮೂಲಕ ವಿಶ್ವದ ಗಮನ ಬೆಳಗಾವಿಯತ್ತ ಸೆಳೆಯುವಂತಾಗಿದೆ.

ಬೆಳಗಾವಿಯು ೨೧ ನೆಯ ಶತಮಾನಕ್ಕೆ ತೆರೆದುಕೊಂಡಿದೆ. ಆಧುನಿಕ ಶಿಕ್ಷಣದ ಅವಶ್ಯಕತೆಗಳೆಲ್ಲವು ಬೆಳಗಾವಿಯಲ್ಲಿ ಪ್ರಾರಂಭಗೊಂಡಿವೆ. ಬದಲಾದ ಶಿಕ್ಷಣ ಪದ್ಧತಿಗನುಗುಣವಾಗಿ ಹೊಸ ಹೊಸ ಕೋರ್ಸಗಳು ಪ್ರಾರಂಭಗೊಂಡಿವೆ. ಅಲ್ಲದೆ ಬೇರೆ ಬೇರೆ ಶಿಕ್ಷಣ ಸಂಸ್ಥೆಗಳು ಬೆಳಗಾವಿಯಲ್ಲಿ ಹುಟ್ಟಿಕೊಳ್ಳುತ್ತಿವೆ. ಪ್ರತಿಷ್ಠಿತ ಶಿಕ್ಷಣ ಸಂಸ್ಥೆಗಳು ನಾಡಿನ, ದೇಶದ ನಾನಾ ಭಾಗಗಳಿಂದ ಬೆಳಗಾವಿಯಲ್ಲಿ ಶಾಖೆಗಳನ್ನು ತೆರೆಯುತ್ತಿವೆ. ಬಿಜಿನೆಸ್ ಎಡ್ಮಿನಿಸ್ಟ್ರೇಶನ್ ಕಾಲೇಜುಗಳು, ಹೊಟೇಲ್ ಮ್ಯಾನೇಜಮೆಂಟ ಸ್ಟಡೀಸ್, ಬಿಜಿನೆಸ ಮ್ಯಾನೇಜಮೆಂಟ ಇನ್‌ಸ್ಟಿಟ್ಯುಟ್‌ಗಳು, ಫ್ಯಾಷನ್ ಟೆಕ್ನಾಲಾಜಿ, ಕಂಪ್ಯೂಟರ ಅಪ್ಲಿಕೇಶನ್, ಪತ್ರಿಕೋದ್ಯಮದ ಸರ್ಟಿಫಿಕೇಟ ಕೋರ್ಸಗಳು, ಎಂ.ಸಿ.ಎ ಕಾಲೇಜುಗಳು, ಟೂರಿಸಮ್ ಎಡ್ಮನಿಸ್ಟ್ರೇಶನ್ ಕಾಲೇಜುಗಳು, ಕೃಷಿ ತರಬೇತಿ ಮತ್ತು ಸಂಶೋಧನ ವಿದ್ಯಾಲಯಗಳು, ಕಾನೂನು ಮಹಾವಿದ್ಯಾಲಯಗಳು ಹೀಗೆ ಹೊಸ ಶಿಕ್ಷಣದ ಹತ್ತಾರು ಮಹಾವಿದ್ಯಾಲಯಗಳು ಬೆಳಗಾವಿಯಲ್ಲಿ ಪ್ರಾರಂಭಗೊಂಡು ಅತ್ಯುತ್ತಮವಾದ ಶಿಕ್ಷಣವನ್ನು ನೀಡುತ್ತಿವೆ. ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಕರ ತರಬೇತಿ ಮಹಾವಿದ್ಯಾಲಯಗಳು, ಚಿತ್ರಕಲೆ, ಸಂಗೀತ, ದೈಹಿಕ ಶಿಕ್ಷಣ ಹೀಗೆ ಶಿಕ್ಷಣ ವಲಯದ ಎಲ್ಲವನ್ನು ಕಲಿಸುವ ಅನುಕೂಲತೆ ಬೆಳಗಾವಿಯಲ್ಲಿ ದೊರೆಯುವಂತಾಗಿದೆ. ಇವೆಲ್ಲವುಗಳ ಜೊತೆಗೆ ಕೇಂದ್ರೀಯ ವಿದ್ಯಾಲಯಗಳು ಮಿಲಿಟರಿ ಆಡಳಿತದಲ್ಲಿ ಅತ್ಯುತ್ತಮವಾದ ಶಿಕ್ಷಣವನ್ನು ನೀಡುತ್ತಿವೆ. ಕೇಂದ್ರೀಯ ಪಠ್ಯಕ್ರಮವನ್ನು ಹೊಂದಿದ ಮೂರು ಶಾಲೆಗಳು

ಬೆಳಗಾವಿಯಲ್ಲಿ ಕಾರ್ಯನಿರ್ವಹಿಸುತ್ತಿವೆ. ಪೂರ್ವ ಪ್ರಾಥಮಿಕ, ಪ್ರಾಥಮಿಕ ಶಿಕ್ಷಣವನ್ನು ನೀಡುವ ಶಾಲೆಗಳು ಇಂದು ಗಲ್ಲಿಗೊಂದರಂತೆ ಕಂಡುಬರುತ್ತವೆ. ಆಂಗ್ಲ ಮಾಧ್ಯಮದ ಕಾನ್ವೆಂಟ್ ಸ್ಕೂಲಗಳು, ಕನ್ನಡ, ಮರಾಠಿ, ಉರ್ದು ಮಾಧ್ಯಮದ ಕಾನ್ವೆಂಟ್ ಸ್ಕೂಲಗಳು, ಬೇಬಿ ಸಿಟ್ಟಿಂಗ್ ಸ್ಕೂಲಗಳು ಬೆಳಗಾವಿ ನಗರದ ತುಂಬೆಲ್ಲಾ ಹರಡಿಕೊಂಡಿವೆ.

ಇವೆಲ್ಲವುಗಳಿಗೆ ಪೂರಕವಾಗಿ ಕಂಪ್ಯೂಟರ ಇನ್‌ಸ್ಟಿಟ್ಯೂಟಗಳು, ಟೈಪಿಂಗ್ ಸೆಂಟರ್‌ಗಳು, ಟ್ಯೂಷನ್ ಕ್ಲಾಸಗಳು, ಸ್ಪರ್ಧಾತ್ಮಕ ಪರೀಕ್ಷೆಯ ಕೋಚಿಂಗ್ ಕೇಂದ್ರಗಳು, ಪ್ರಾರಂಭಗೊಂಡು ಬೇರೆ ಬೇರೆ ಜಿಲ್ಲೆಗಳಿಂದಲೂ ತರಬೇತಿಯನ್ನು ಪಡೆಯಲು ಬರುತ್ತಿರುವರು. ಇವೆಲ್ಲವುಗಳಿಂದ ಬೆಳಗಾವಿಯು ಪ್ರಮುಖ ವಿದ್ಯಾಕೇಂದ್ರವಾಗಿ ರೂಪಗೊಂಡಿದೆ.



**ಸಂದರ್ಭ ಸೂಚಿ:**


೧. ಪಾಟೀಲ ಪುಟ್ಟಪ್ಪ : ನಾಡು ನುಡಿ ಪುಟ. ೪೮.

೨. ಶಿ. ಬಾ. ಪಾಟೀಲ : ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ. ಪುಟ. ೩೮.

೩. ಜೀರಗೆ ಕಟ್ಟೆ ಬಸವಪ್ಪ : ಕರ್ನಾಟಕದ ಯಾತ್ರೆ ಪುಟ. ೨೩೮

೪. ವಾರಿಜಾ ಆರ್. ಮೋಲಾರ್ : ಬೆಳಗಾವಿ ಜಿಲ್ಲೆಯ ಮುಸ್ಲಿಂ ಸ್ಮಾರಕಗಳು. ಪುಟ. ೩೦೯.

೫. ಎಂ. ವೈ ಸಾವಂತ : ಮರಾಠರು ಪೇಶ್ವೆಯರು ಹಾಗೂ ಸಂಸ್ಥಾನಗಳು. ಪುಟ. ೭೯.

೬. ಎಂ. ಎಂ. ಕಲಬುರ್ಗಿ : ಕನ್ನಡಿಗರ ಮಾತೃಭಾಷಾ ಪ್ರಜ್ಞೆಯ ಇತಿಹಾಸ, ಮಾರ್ಗ ಸಂಪುಟ-೧. ಪುಟ. ೫೬೭.

೭. ಎಸ್. ಎಂ. ಹರದಗಟ್ಟಿ : ಅದೇ ಪುಟ. ೮೧

೮. ಬಿ. ಎಸ್. ಗವಿಮಠ : ಬೆಳಗಾವಿ ಜಿಲ್ಲೆಯ ಶೈಕ್ಷಣಿಕ ಇತಿಹಾಸ. ಪುಟ. ೧೦೧.

೯. ಸಂದರ್ಶನ : ನಾಗಪ್ಪ ಪಡದನ್ನವರ ಸ್ಥಳ-ಆನಿಗೋಳ ವಯಸ್ಸು ೮೦. ದಿನಾಂಕ : ೩-೬-೨೦೦೯.

೧೦. ಬಸವಯ್ಯ ಕಂಬಿ : ಅರಟಾಳ ರುದ್ರಗೌಡರ ಚರಿತ್ರೆ. ಪುಟ. ೧೨.

೧೧. ಮಹದೇವ ಬಣಕಾರ : ಆಂಗ್ಲರ ಆಡಳಿತದಲ್ಲಿ ಕನ್ನಡ ಪುಟ. ೧೯.

೧೨. ಶ್ರೀನಿವಾಸ ಹಾವನೂರ : ಹೊಸಗನ್ನಡದ ಅರುಣೋದಯ. ಪುಟ. ೬೩, ೬೪.

೧೩. ಅದೇ. ಪುಟ. ೬೫.

೧೪. ಡಿ.ಕೆ. ಬಾಗೋಜಿ : ನನ್ನ ಬೆಳಗಾವಿ. ಪುಟ. ೪೬.

೧೫. ಕೃಷ್ಣಕೋಲ್ಹಾರ ಕುಲಕರ್ಣಿ : ಅಖಂಡ ಕರ್ನಾಟಕ ಹೆಜ್ಜೆಗಳು. ಪುಟ. ೩೭.

೧೬. ಅದೇ ಪುಟ. ೩೭.

೧೭ ಎಂ. ಎಸ್. ಸುಂಕಾಪುರ : ಎಂ. ಆರ್. ಸಾಖರೆಯವರು ಪುಟ. ೧೩.

೧೮. ಸಿ.ಕೆ. ಉಣಕಲ್ಲ : ಬೆಳಗಾವಿ ಜಿಲ್ಲೆಯ ಶೈಕ್ಷಣಿಕ ಸಂಸ್ಥೆಗಳು ಪುಟ. ೧೪.

೧೯. ಬಾಳಣ್ಣ ಶೀಗೀಹಳ್ಳಿ : ಡೆಪ್ಯೂಟಿ ಚನ್ನಬಸಪ್ಪನವರು–ಜೀವನ ಮತ್ತು ಸಾಧನೆ. ಪುಟ. ೫೩.

೨೦. ಅದೇ. ಪುಟ. ೫೨.

೨೧. ಬಾಳಣ್ಣ ಶೀಗೀಹಳ್ಳಿ : ಡೆಪ್ಯೂಟಿ ಚನ್ನಬಸಪ್ಪನವರು–ಜೀವನ ಮತ್ತು ಸಾಧನೆ ಪುಟ. ೫೪.

೨೨. ರಾ. ಯ. ಧಾರವಾಡಕರ: ಹೊಗಸಗನ್ನಡ ಉದಯ ಕಾಲ. ಪುಟ. ೮೨.

೨೩. ಶ್ರೀನಿವಾಸ ಹಾವನೂರ : ಹೊಸಗನ್ನಡದ ಅರುಣೋದಯ. ಪುಟ. ೮೨.

೨೪. ಕೆ.ಎಲ್.ಇ. ಸೊಸೈಟಿ ಸಂಪುಟ–೧ : ಪುಟ. ೮.

೨೫. ಬಿ.ಎಸ್. ಗವಿಮಠ : ಕನ್ನಡ ಕೋಟಿ ಕೆ.ಎಲ್.ಇ. ಪುಟ. ೨.

೨೬. ಕೆ.ಎಲ್.ಇ. ಸೊಸೈಟಿ ಸಂ–೧ : ಪುಟ. ೨೫೦.

೨೭. ಮಹೇಶ ಚಿಂತಾಮಣಿ : ಶಿ.ಶಿ. ಬಸವನಾಳರ ಜೀವನ ಮತ್ತು ಸಾಧನೆ. ಪುಟ. ೬೯

೨೮. ಅದೇ ಪು. ೭೩.

೨೯. ಪಿ. ಕೆ. ಬಾಗೋಜಿ : ನನ್ನ ಬೆಳಗಾವಿ. ಪುಟ. ೪೭.

೩೦. ಪಿ. ಜಿ. ಕೆಂಪಣ್ಣವರ : ಬೆಳಗಾವಿ ಜಿಲ್ಲೆಯ ಮರಾಠಾ ಸಂಘಟನೆಗಳು. ಪುಟ. ೬೧೯

೩೧. ಪಿ. ಕೆ. ಬಾಗೋಜಿ : ನನ್ನ ಬೆಳಗಾವಿ. ಪುಟ. ೮೯.

೩೨. ವಿಜಯ ಕರ್ನಾಟಕ : ಮಾರ್ಚ ೧೬. ೨೦೧೧, ಪುಟ. ೧.



# ಅಧ್ಯಾಯ : ಹತ್ತು

# ರಂಗಭೂಮಿ

ರಂಗಭೂಮಿ ಒಂದು ಜೀವಂತ ಕಲೆ. ಸುದೀರ್ಘ ಕಾಲದ ಗಮನಾರ್ಹ ಪರಂಪರೆಯನ್ನು ಹೊಂದಿದ ಕನ್ನಡ ರಂಗಭೂಮಿ ನಮ್ಮ ಜನಪದರ ಸಾಧನೆಗಳ ಪ್ರತೀಕವಾಗಿದೆ. ಈ ಸಾಧನೆಯಲ್ಲಿ ನಾಡಿನ ಬೇರೆ ಬೇರೆ ಪ್ರಾಂತಗಳಿಂದ ಸಂದ ಕೊಡುಗೆ ಅಭಿಮಾನಪಡುವಂತಹದು. ಉತ್ತರ ಕರ್ನಾಟಕದ ಕೇಂದ್ರಸ್ಥಳವಾದ ಬೆಳಗಾವಿಯು ಕರ್ನಾಟಕ ರಂಗಭೂಮಿಗೆ ಅಮೂಲ್ಯ ಕೊಡುಗೆಯನ್ನು ನೀಡಿದೆ.

ರಂಗಭೂಮಿಯ ಕಾರ್ಯಕ್ಷೇತ್ರವನ್ನು ಪ್ರಮುಖವಾಗಿ ಜನಪದ ರಂಗಭೂಮಿ, ವೃತ್ತಿರಂಗಭೂಮಿ ಮತ್ತು ಹವ್ಯಾಸಿ ರಂಗಭೂಮಿಯನ್ನಾಗಿ ವಿಭಜಿಸಿ ಅವಲೋಕಿಸಲಾಗಿದೆ.

**೧. ಜನಪದ ರಂಗಭೂಮಿ:**

ಕರ್ನಾಟಕದ ಜನಪದ ರಂಗಭೂಮಿ ಕ್ಷೇತ್ರಕ್ಕೆ ಬೆಳಗಾವಿ ಜಿಲ್ಲೆಯು ಮಹತ್ವದ ಕೊಡುಗೆಯನ್ನು ಕೊಟ್ಟಿದೆ. ಧಾರ್ಮಿಕ ನೆಲೆಗಟ್ಟಿನ ಮೇಲೆ ನಿರ್ಮಾಣಗೊಂಡಿರುವ ಬೆಳಗಾವಿಯಲ್ಲಿ ದೇವಾಲಯಗಳು, ಜಾತ್ರೆ ಉತ್ಸವಗಳು ವಿಶಿಷ್ಟವಾಗಿ ಜರುಗುತ್ತವೆ. ಈ ಹಿನ್ನೆಲೆಯಲ್ಲಿ ಇದರ ಒಂದು ಭಾಗವಾಗಿಯೇ ಜನಪದ ರಂಗಭೂಮಿ ಬೆಳಗಾವಿಯಲ್ಲಿ ಬೆಳೆದು ಬಂದಿದೆ.

ಉತ್ತರ ಕರ್ನಾಟಕದ ಜನಪದ ರಂಗಪ್ರಕಾರಗಳಾದ ಸಣ್ಣಾಟ (ಡಪ್ಪಿನಾಟ), ಶ್ರೀಕೃಷ್ಣ ಪಾರಿಜಾತ ಇವುಗಳ ಹುಟ್ಟು ಬೆಳಗಾವಿ ಜಿಲ್ಲೆಯಲ್ಲಿ ಎಂಬುದು ಚಾರಿತ್ರಿಕ ಸಂಗತಿಯಾಗಿದೆ. ಇಂದಿಗೂ ಉತ್ತರ ಕರ್ನಾಟಕದ ಪ್ರತಿ ಹಳ್ಳಿ, ಪಟ್ಟಣಗಳಲ್ಲಿ ಪ್ರಯೋಗಗೊಳ್ಳುತ್ತಿರುವ ಬಯಲಾಟಗಳು ಕರ್ನಾಟಕದ ಜನಪದ ರಂಗಭೂಮಿಯ

ವೈಶಿಷ್ಟ್ಯಗಳಾಗಿವೆ. ಒಂದು ಕಾಲಕ್ಕೆ 'ಜನಪದ ರಂಗಭೂಮಿಯ ಅಕ್ಷಯನಿಧಿ' ಎನಿಸಿದ್ದ ಬೆಳಗಾವಿ ಜಿಲ್ಲೆಯಲ್ಲಿ ಸಂಗ್ಯಾ ಬಾಳ್ಯಾ, ರಾಧಾನಾಟ, ತಿರುನೀಲಕಂಠ, ಮಾಯಿ ಆಟ, ಶ್ರೀಕೃಷ್ಣ ಪಾರಿಜಾತ ಮುಂತಾದವುಗಳು ಬಯಲಾಟ ಪರಂಪರೆಯಲ್ಲಿ ಬೆಳೆದುಬಂದಿವೆ.

**ಸೂತ್ರದ ಬೊಂಬೆಯಾಟ:** ಜನಪದ ಬಯಲಾಟಗಳ ಪ್ರಕಾರಗಳಲ್ಲಿ ಸೂತ್ರದ ಗೊಂಬೆಯಾಟ ಪ್ರಮುಖವಾಗಿದೆ. ಸೂತ್ರದಾರನೇ ಗೊಂಬೆಗಳನ್ನು ಆಡಿಸುವ ಮುಖ್ಯಸ್ಥನು. ಸೂತ್ರದಾರನು ಮಾತಿನ ರೀತಿಯನ್ನು ಅನುಸರಿಸಿ ಮಾತನಾಡಿ ಧಾಟಿ, ಧ್ವನಿಗಳನ್ನು ಆಯಾ ಪಾತ್ರಕ್ಕನುಸರಿಸಿ ಮಾತನಾಡುತ್ತಾನೆ. ಪರೆದೆಯ ಹಿಂದೆ, ಗೊಂಬೆಗೆ ಸೂತ್ರದಾರ ಕಟ್ಟಿ ಮೂರು ನಾಲ್ಕು ಜನರು ನಿಂತು ಆಟ ಮಾಡಬೇಕಾಗುತ್ತದೆ. ಸೂತ್ರದ ಬೊಂಬೆಯಾಟ ಬಹುಕಾಲ ಕನ್ನಡ ಜಾನಪದ ರಂಗದ ಅತ್ಯಂತ ಜನಪ್ರಿಯವಾದ ಆಟವಾಗಿತ್ತು. ನಾಟಕದ ಹುಟ್ಟಿಗಿಂತ ಹಿಂದಿನದಾದ ಬೊಂಬೆಯಾಟವು ಪ್ರಾಚೀನತೆಯ ಹಿರಿಮೆಯಿಂದಷ್ಟೇ ಅಲ್ಲದೆ ಮನೋರಂಜನೆಯ ದೃಷ್ಟಿಯಿಂದಲೂ ಮಹತ್ವದ್ದಾಗಿತ್ತು. ಬೊಂಬೆಯಾಟವಿಲ್ಲದೆ ಯಾವ ಹಬ್ಬಗಳಾಗಲಿ, ಜಾತ್ರೆಗಳಾಗಲಿ ಮುಕ್ತಾಯವನ್ನು ಕಾಣುತ್ತಿರಲಿಲ್ಲ. ಉತ್ತರ ಕರ್ನಾಟಕದ ಭಾಗದಲ್ಲಿಯಂತೂ ಬೊಂಬೆಯಾಟದ ಕಲೆಯಲ್ಲಿ ಪಂಡಿತವರ್ಗ ಬ್ರಾಹ್ಮಣ ಮನೆಗಳು ಪರಿಣತಿಯನ್ನು ಪಡೆದುಕೊಂಡಿದ್ದವು. ಬೆಳಗಾವಿಯಲ್ಲಿ ಬೊಂಬೆಯಾಟದಲ್ಲಿ ಪರಿಣತಿಯನ್ನು ಹೊಂದಿದ ಕಲಾವಿದರಿದ್ದರು. ನಾಡಿನ ತುಂಬೆಲ್ಲಾ ಸಂಚರಿಸಿ ತಮ್ಮ ಕಲೆಯನ್ನು ಪ್ರದರ್ಶಿಸುತ್ತಿದ್ದರು. ಬೆಳಗಾವಿಯ ಅನಂತಾಚಾರ್ಯ ಪಾಂಡುರಂಗಿ ಅವರು ಸೂತ್ರದ ಬೊಂಬೆಯಾಟದಲ್ಲಿ ಪ್ರಸಿದ್ಧಿಯನ್ನು ಪಡೆದ ಕಲಾವಿದನಾಗಿದ್ದನು. ಗೊಂಬೆ ಅನಂತಪ್ಪನ ಆಟವಿದೆ ಎಂದು ಗೊತ್ತಾದರೆ ಸುತ್ತಮುತ್ತಲಿನ ಊರಿನವರೂ ಬಂದು ಸೇರುತ್ತಿದ್ದರು. ಕಿಕ್ಕಿರಿದು ತುಂಬಿದ ಜನಸಾಗರವೆಲ್ಲ ಸ್ತಬ್ಧರಾಗಿ ಗೊಂಬೆಯಾಟವನ್ನು ವೀಕ್ಷಿಸುತ್ತಿದ್ದರು. ನಾಡಿನ ತುಂಬೆಲ್ಲಾ ಈತನ ಆಟ ಪ್ರಸಿದ್ಧಿಯನ್ನು ಪಡೆದುಕೊಂಡಿತ್ತು.[೧] ನಗರ ಪ್ರದೇಶಗಳಲ್ಲಿಯೂ ಈತನ ಆಟವನ್ನು ನೋಡಲು ಜನರು ಮುಗಿಬೀಳುತ್ತಿದ್ದರು. ತನ್ನ ಕೈಚಳಕದಲ್ಲಿ ಬೊಂಬೆಗಳಿಗೆ ಜೀವವನ್ನು ತುಂಬುತ್ತಿದ್ದನು. ನೋಡುವವರಿಗೆ ಜೀವಂತ ಪಾತ್ರದಂತೆ ಗೋಚರಿಸುತ್ತಿತ್ತು. ಮುದವೀಡು ಕೃಷ್ಣರಾಯರು ಅನಂತಪ್ಪನ ಕೈಚಳಕ್ಕೆ ಬೆರಗಾಗಿದ್ದರು. ಕೃಷ್ಣ ಪಾರಿಜಾತದ ಸನ್ನಿವೇಶವನ್ನು ಅನಂತಪ್ಪ ಬೊಂಬೆಗಳ ಮೂಲಕ ಅದ್ಭುತವಾದ ಪ್ರದರ್ಶನವನ್ನು ನೀಡುತ್ತಿದ್ದರು. ಈ ಪ್ರದರ್ಶನವನ್ನು ನೋಡಿದ ಮುದವೀಡು ಕೃಷ್ಣರಾಯರು ಅನಂತಪ್ಪನ ಬೊಂಬೆಗಳ ಕಲಾಸಿರಿಯನ್ನು ಬಣ್ಣಿಸಿರುವುದನ್ನು ಹೆಚ್. ಕೆ. ರಂಗನಾಥ್ ರೀತಿ ಉಲ್ಲೇಖಿಸಿದ್ದಾರೆ.

"ಪ್ರೇಮದಗ್ಧಳಾದ ಸತ್ಯಭಾಮೆಯ ಪಾತ್ರವಹಿಸಿದ್ದ ಬೊಂಬೆ ತನ್ನ ಕೈಯಿಂದಲೇ ಎಲ್ಲ ಒಡವೆಗಳನ್ನು ಕಳಚಿತು. ಸೂಕ್ಷ್ಮವಾದ ಮೂಗುತಿಯ ತಿರುಪನ್ನೂ ತಿರುಗಿಸಿ ತೆಗೆದು, ತೀವ್ರವಾದ ವಿರಹವೇದನೆಯನ್ನು ಅನುಭವಿಸುತ್ತ ಲಟಿಗೆ ತೆಗೆದು ಸೃಷ್ಟಿಕರ್ತನನ್ನು ಶಪಿಸಿದ ರೀತಿಯಿಂದಾಗಿ ಪ್ರೇಕ್ಷಕನ ಕಣ್ಣಿನಲ್ಲಿ ನೀರು ತುಂಬಿತು"ಅನಂತಪ್ಪನ ಬೊಂಬೆಯಾಟ ಇಂದ್ರಜಾಲದಂತೆ ಎಲ್ಲರನ್ನು ಮೈಮರೆಸುತ್ತಿತ್ತು. ಬೊಂಬೆಗಳನ್ನು ಕುಣಿಸುವ ಕೈಚಳಕ ಚುರುಕಾಗಿತ್ತು. ಒಂದು ನಿರ್ಜೀವ ಬಣ್ಣದ ಚಕ್ಕಳದ ಚೂರು, ರಂಗಸ್ಥಳದ ಮೇಲೆ ಜೀವಗೊಂಡು ನಮ್ಮಲ್ಲಿ ಭಾವನೆಗಳನ್ನು ಉಂಟು ಮಾಡುವುದು ಅದ್ಭುತವೇ ಸರಿ.[೨]

**ತೊಗಲುಬೊಂಬೆ ಆಟ:** ಗೊಂಬೆಯಾಟದಲ್ಲಿ ಮತ್ತೊಂದು ಪ್ರಮುಖವಾದ ಆಟವೆಂದರೆ ತೊಗಲುಬೊಂಬೆ ಆಟ. ಸೂತ್ರದ ಬೊಂಬೆ ಆಟದಂತೆ ಇದೂ ಕೂಡ ಬೆಳಗಾವಿಯಲ್ಲಿ ಹೆಚ್ಚು ಪ್ರಯೋಗಗೊಳ್ಳುತ್ತಿತ್ತು. ಈಗಲೂ ಕೂಡ ಅಲ್ಲಲ್ಲಿ ಆಟದ ಪ್ರಯೋಗಗಳು ನಡೆಯುತ್ತವೆ. ಶಾಲೆ, ಕಾಲೇಜುಗಳ ವಾರ್ಷಿಕ ಸಮ್ಮೇಳನಗಳಲ್ಲಿ ಸಾಹಿತ್ಯ ಸಮ್ಮೇಳನಗಳಲ್ಲಿ, ಧಾರ್ಮಿಕ ಕಾರ್ಯಕ್ರಮಗಳಲ್ಲಿ ಈ ಆಟವು ಈಗಲೂ ಪ್ರಯೋಗಗೊಳ್ಳುತ್ತದೆ. 'ಕಿಳ್ಳೀಕೇತ'ರೆಂಬ ಹೆಸರಿನ ಜನ ಆಡಿಸುತ್ತಿದ್ದ ಚರ್ಮದ ಬೊಂಬೆಯಾಟ ಅಥವಾ ತೊಗಲುಬೊಂಬೆಯಾಟವು ಉತ್ತರ ಕರ್ನಾಟಕ ಭಾಗದಲ್ಲಿ 'ಕಿಳ್ಳೀಕೇತರಾಟ' ಎಂದೇ ಪ್ರಸಿದ್ಧವಾಗಿದೆ. ತೊಗಲುಬೊಂಬೆಯಾಟದ ಬೊಂಬೆಗಳಿಗೆ ಘನರೂಪವಿಲ್ಲ. ಮೇಲು ನೋಟಕ್ಕೆ ಇವು ಆಕೃತಿಗಳಾಗಿ ಕತ್ತರಿಸಿ ಬಣ್ಣ ತುಂಬಿದ ಪಾರದರ್ಶಕವಾದ ತೆಳ್ಳನೆಯ ತೊಗಲು ಆಗಿರುತ್ತದೆ. ಆದರೆ ಸಂಜೆ ಮುಸುಕಿದ ಮೇಲೆ ಹಿಂದೆ ಹಿಡಿದ ದೀಪದ ಬೆಳಕು ಈ ತೊಗಲು ಚಿತ್ರಗಳ ಮೂಲಕ ಹಾಯ್ದು ಮುಂದಿನ ಬೆಳ್ಳಿಯ ತೆರೆಯ ಮೇಲೆ ಅವುಗಳ ನೆರಳು ಬಿದ್ದಾಗ ಆಗುವ ಬಣ್ಣ ಬೆಡಗುಗಳ ಮಾಟವು ನೋಡುಗರಿಗೆ ಮನರಂಜನೀಯವಾಗಿರುತ್ತದೆ.

ಗೊಂಬೆಗಳ ನಿರ್ಮಾಣಕ್ಕೆ ಬಳಸುವ ತೊಗಲು ತೆಳ್ಳಗಾಗಿರುತ್ತದೆ. ಅದನ್ನು ಜಗ್ಗಿ, ಹರವಿ ಅದರ ಮೇಲೆ ರೇಖೆಗಳಿಂದ ಚಿತ್ರ ಬರೆಯುತ್ತಾರೆ. ನಡುವೆ ಬಣ್ಣ ತುಂಬಿರುತ್ತಾರೆ. ಅನಂತರ ಬೊಂಬೆಗಳ ಆಕೃತಿಗಳನ್ನು ಕತ್ತರಿಸಿ ತೆಗೆದು ಜೋಡಿಸುತ್ತಾರೆ. ಅವುಗಳಲ್ಲಿ ಮುಂಡ ರುಂಡ ಕೂಡಿ ಒಂದು ತುಂಡು ತೊಗಲೂ, ಕೈ ಕಾಲುಗಳು ಬೇರೆ ಬೇರೆಯವೂ ಆಗಿವೆ. ಆ ಕೈಕಾಲುಗಳ ನಡುವೆ ಮೊಣಗಂಟುಗಳ ಸರದಿಯಲ್ಲಿ ಜೋಡಣೆ ಮಾಡಲಾಗುತ್ತದೆ. ಈ ಬೊಂಬೆಗಳನ್ನು ಕತ್ತಲಲ್ಲಿ ಬಿಳಿ ತೆರೆಯ ಹಿಂದೆ ಒತ್ತಿ ಹಿಡಿದು ಅದರ ಹಿಂದೆ ಪೆಟ್ರೋಮ್ಯಾಕ್ಸ್ ದೀಪವನ್ನೋ ನೀಲಾಂಜನವನ್ನೋ ಇರಿಸಿದರೆ, ತೆರೆಯ ಮುಂದಿರುವವರಿಗೆ, ಬೊಂಬೆಯು ತನ್ನ ಬಣ್ಣ ಬೆಡಗಿನೊಡನೆ ಕಾಣಿಸುತ್ತದೆ. ತೊಗಲುಗೊಂಬೆ ಆಟಗಾರರಿಗೆ 'ಗೊಂಬೆ ರಾಮರು' ಎಂದೂ ಹೆಸರು. ಇವರು ವಿಶೇಷವಾಗಿ ಹಳ್ಳಿಗಳಲ್ಲಿ ಸುಗ್ಗಿಯ ಕಾಲ ಮುಗಿದು ರೈತ ವಿಶ್ರಮಿಸುವ ಹೊತ್ತಿಗೆ ಊರೂರಿಗೆ ಪ್ರಯಾಣ ಬೆಳೆಸುತ್ತಾರೆ.

ಬೆಳಗಾವಿಯಲ್ಲಿ ದೀಪಾವಳಿ, ಹೋಳಿ, ಬಸವಣ್ಣ ದೇವರ ಜಾತ್ರೆ ಮುಂತಾದ ಸಂದರ್ಭಗಳಲ್ಲಿ ತೊಗಲು ಗೊಂಬೆಯಾಟಗಳು ಜರುಗುತ್ತಿದ್ದವು.[3] ಕಿಳ್ಳೀಕೇತರ ಯಾವುದೇ ಮನೆತನವು ಬೆಳಗಾವಿಯಲ್ಲಿ ಇದ್ದದ್ದು ಕಂಡು ಬಂದಿಲ್ಲ.

**ಶ್ರೀಕೃಷ್ಣ ಪಾರಿಜಾತ:** ಜನಪದ ಆಟಗಳಲ್ಲಿಯೇ ಶಿಖರ ಸ್ಥಾನವನ್ನು ಪಡೆಯುವ ಗೌರವ ಶ್ರೀಕೃಷ್ಣ ಪಾರಿಜಾತಕ್ಕಿದೆ. ಇದರಷ್ಟು ಲೋಕಪ್ರಿಯತೆಯನ್ನು ಗಳಿಸಿದ ಬಯಲಾಟ ಕನ್ನಡದಲ್ಲಿಯೇ ಇಲ್ಲವೆನ್ನಬಹುದು. ಈ ಆಟದ ಕೀರ್ತಿಗೆ ಮೂಲಕಾರಣರಾಗಿದವರೆಂದರೆ ಅಪರಾಳ ತಮ್ಮಣ್ಣ, ಕುಲಗೋಡ ತಮ್ಮಣ್ಣ.

ಅಪರಾಳ ತಮ್ಮಣ್ಣನ ಶ್ರೀಕೃಷ್ಣ ಪಾರಿಜಾತ ಕಾವ್ಯವನ್ನು ಕುಲಗೋಡ ತಮ್ಮಣ್ಣನು ದೃಶ್ಯಗಳಿಗೆ ಅಳವಡಿಸಿ ಶ್ರೀ ಕೃಷ್ಣ ಪಾರಿಜಾತ ಬಯಲಾಟದ ಹರಿಕಾರನಾದನು.[೪] ಕುಲಗೋಡ ತಮ್ಮಣ್ಣನು ಬೆಳಗಾವಿ ಜಿಲ್ಲೆಯ ಗೋಕಾಕ ತಾಲೂಕಿನ ಕುಲಗೋಡದವನು. ತಮ್ಮಣ್ಣನ ಹೆಂಡತಿಯ ಹೆಸರು ಯಮುನಾಬಾಯಿ. ತಮ್ಮಣ್ಣನು ಮೂಲ ಕಾವ್ಯವನ್ನು ಅಂದಿನ ರಂಗಸಂಪ್ರದಾಯದ ಅಗತ್ಯಗಳನ್ನು ಗಮನಿಸಿ ಪಾರಿಜಾತ ಬಯಲಾಟವನ್ನಾಗಿ ಮಾರ್ಪಡಿಸಿಕೊಂಡನು. ಅದನ್ನು ಬಯಲಾಟವಾಗಿ ಪ್ರದರ್ಶಿಸಲು ತಂಡವನ್ನು ಕಟ್ಟಿದನು. ತಾನೂ ಪಾತ್ರಧಾರಿಯಾಗಿ, ನಿರ್ದೇಶಕನಾಗಿ, ನಾಟಕವನ್ನು ಪ್ರದರ್ಶಿಸಿದನು. ಇಲ್ಲಿಂದ ಶ್ರೀಕೃಷ್ಣ ಪಾರಿಜಾತದ ಪರಂಪರೆ ನಾಡಿನಾದ್ಯಂತ ಹರಡಿತು. ಹಲವಾರು ಪ್ರತಿಭೆಗಳು ಈ ಕಲೆಯ ಮೂಲಕ ಬೆಳಕಿಗೆ ಬಂದವು. ಅವರಲ್ಲಿ ಆರಂಭದಲ್ಲಿ ಯಾದವಾಡ ಮಲಕಪ್ಪ, ಹುಕ್ಕೇರಿ ಸಿದ್ರಾಮಪ್ಪ, ಕೌಜಲಗಿ ನಿಂಗವ್ವ ಮುಂತಾದವರು ಪಾರಿಜಾತ ರಂಗಭೂಮಿಗೆ ವಿಶಿಷ್ಟವಾದ ಸೇವೆಯನ್ನು ಸಲ್ಲಿಸಿದರು.

ಕುಲಗೋಡ ತಮ್ಮಣ್ಣನ ಧರ್ಮಪತ್ನಿ ಯಮುನಾಬಾಯಿ ತನ್ನ ಕೊನೆಯ ದಿನಗಳನ್ನು ಕಳೆದದ್ದು ಬೆಳಗಾವಿಯಲ್ಲಿ. ಕುಲಗೋಡದಲ್ಲಿ ಪ್ಲೇಗ ಕಾಣಿಸಿಕೊಂಡಾಗ ಯಮುನಾಬಾಯಿ ಭಾವನ ಮೊಮ್ಮಕ್ಕಳಾದ (ಕುಲಗೋಡ ತಮ್ಮಣ್ಣನ ಅಣ್ಣನ ಮಗನ ಮಕ್ಕಳು) ಕೃಷ್ಣಾಜಿ, ವೆಂಕಟೇಶರನ್ನು ಬೆಳಗಾವಿಗೆ ಕರೆದುಕೊಂಡು ಬಂದು ಉಪಜೀವನಕ್ಕಾಗಿ ಖಾನಾವಳಿಯನ್ನು ಪ್ರಾರಂಭಿಸಿದರು.[೫] ಈ ಖಾನಾವಳಿಯು ಬಹುಬೇಗನೆ ಬೆಳಗಾವಿಯಲ್ಲಿ ಪ್ರಸಿದ್ಧಿಯನ್ನು ಪಡೆಯಿತು. 'ಆಯಿ ಖಾನಾವಳಿ'ಯೆಂದೇ ಕರೆಯಲ್ಪಡುವ ಇಲ್ಲಿ ಊಟ ಮಾಡಲು ಹೊರಗಡೆ ಜನ ಕಾಯುತ್ತ ಕುಳಿತಿರುತ್ತಿದ್ದರು.

ಕುಲಗೋಡ ತಮ್ಮಣ್ಣನ ಗರಡಿಯಲ್ಲಿ ಬೆಳೆದ ಕೌಜಲಗಿ ನಿಂಗವ್ವ ಗಂಡಸರಿಗೂ ಅಸಾಧ್ಯವೆನ್ನುವ ರೀತಿಯಲ್ಲಿ ಸುಮಾರು ಎಪ್ಪತ್ತು ವರ್ಷಗಳ ಕಾಲ ದುಡಿದು ಈ ರಂಗಭೂಮಿಯನ್ನು ಶ್ರೀಮಂತಗೊಳಿಸಿದಳು. ಪ್ರಪ್ರಥಮ ಬಾರಿಗೆ ಸ್ತ್ರೀ ಪಾತ್ರಕ್ಕಾಗಿ ಹೆಣ್ಣೊಬ್ಬಳು ಅಟ್ಟ ಹತ್ತಿದ್ದು ಒಂದು ಐತಿಹಾಸಿಕ ದಾಖಲೆಯಾಯಿತು.

ಕುಲಗೋಡ ತಮ್ಮಣ್ಣನ ನಂತರ ಪ್ರಥಮ ಹಾಗೂ ಏಕೈಕ ಪಾರಿಜಾತ ತಂಡವೆನಿಸಿದ್ದ ಕುಲಗೋಡ ಕಂಪನಿಯ ಕಲಾವಿದರೆಲ್ಲ ಚದುರಿ ಹೋದರು. ಆಗ ಅನಿವಾರ್ಯವಾಗಿ ತನ್ನ ಹುಟ್ಟೂರು ಕೌಜಲಗಿಯಲ್ಲಿ ತನ್ನದೇ ಕಂಪನಿ ಕಟ್ಟಿ ಹೆಸರಾಂತ ಕಲಾವಿದರನ್ನೆಲ್ಲ ಗೌರವಾದರಗಳೊಂದಿಗೆ ತನ್ನ ತಂಡದಲ್ಲಿದ್ದುಕೊಂಡು ಅವಿರತ ಸುಮಾರು ೬೦-೬೫ ವರ್ಷಕ್ಕೂ ಮಿಕ್ಕಿದ ಸುದೀರ್ಘ ಕಾಲ ರಂಗಭೂಮಿಗೆ ಸೇವೆ ಸಲ್ಲಿಸಿ ಪಾರಿಜಾತದ ಬಹುದೊಡ್ಡ ಶಕ್ತಿಯಾಗಿ 'ಪಾರಿಜಾತವೆಂದರೆ ನಿಂಗಮ್ಮ, ನಿಂಗಮ್ಮ ಎಂದರೆ ಪಾರಿಜಾತ' ಎನ್ನುವಷ್ಟರ ಮಟ್ಟಿಗೆ ಬೆಳೆದರು.

ಕೌಜಲಗಿ ನಿಂಗಮ್ಮನಿಗೆ ಬೆಳಗಾವಿಯೂ ತನ್ನ ಕಲೆಯನ್ನು ಪ್ರದರ್ಶಿಸುವ ಪ್ರಮುಖ ನೆಲೆಯಾಗಿತ್ತು. ಹಲವಾರು ಸಂದರ್ಭಗಳಲ್ಲಿ ಬೆಳಗಾವಿಯಲ್ಲಿ ತಂಡವನ್ನು ಕಟ್ಟಿಕೊಂಡು ಪಾರಿಜಾತದ ಪ್ರದರ್ಶನವನ್ನು ನೀಡಿದ್ದಾಳೆ.[೬] ಅಲ್ಲದೆ ಬೆಳಗಾವಿಯೇ ಅವಳ ಗಂಡನ ಮನೆಯಾಗಿತ್ತು ಎನ್ನುವ ವಿಷಯವು ಚರ್ಚೆಯಲ್ಲಿದೆ. ನಿಂಗವ್ವನ ಸಮಕಾಲೀನನಾದ

ರಾಮಣ್ಣ ಎನ್ನುವ ಕಲಾವಿದನು ನಿಂಗವ್ವನ ಮದುವೆಯು ಬೆಳಗಾವಿಯ ವಕೀಲರೊಬ್ಬರೊಡನೆ ಆಗಿ ಅದು ಆರು ತಿಂಗಳಲ್ಲಿ ಮುರುಗಡೆಹೊಂದಿತ್ತು ಎಂದು ಹೇಳಿರುವುದನ್ನು ಡಾ. ಶ್ರೀರಾಮ ಇಟ್ಟಣ್ಣವರ ಉಲ್ಲೇಖಿಸಿದ್ದಾರೆ.[೭] ಕನ್ನಡದ ಜನಪದ ರಂಗಭೂಮಿಯು ಹಲವಾರು ದೃಷ್ಟಿಕೋನಗಳಿಂದ ಮಹತ್ವವನ್ನು ಪಡೆದುಕೊಂಡಿದೆ. ಜನರಲ್ಲಿ ಕಲೆ, ಸಾಹಿತ್ಯ, ಸಂಸ್ಕೃತಿ, ಧರ್ಮ ಭಾಷೆಯ ಬಗೆಗೆ ಅಭಿಮಾನವನ್ನು ಮೂಡಿಸುವುದರ ಜೊತೆಗೆ ಜಾತಿ, ಮತಗಳಲ್ಲಿ ಸಾಮರಸ್ಯವನ್ನುಂಟು ಮಾಡಿದೆ. ಬೆಳಗಾವಿಯಂತಹ ವಿಭಿನ್ನ ಸಂಸ್ಕೃತಿ, ಭಾಷೆಯ ಪ್ರದೇಶದಲ್ಲಿ ಎಲ್ಲರನ್ನು ಒಂದುಗೂಡಿಸಿದೆ. ಕಲೆಗೆ ಯಾವುದೇ ಜಾತಿ, ಮತ, ಭಾಷೆಗಳ ಭೇದವಿರದು ಎನ್ನುವುದನ್ನು ಬೆಳಗಾವಿ ಸಾಧಿಸಿತೋರಿಸಿದೆ. ಅಂತೆಯೇ ಬೆಳಗಾವಿ ನೆಲದ ಪ್ರೇರಣೆ ಪ್ರಭಾವಗಳಿಂದಲೇ ಮಹಾರಾಷ್ಟ್ರದ ರಂಗಭೂಮಿ ವೈಭವವನ್ನು ಪಡೆದುಕೊಂಡಿದೆ. ಇದಕ್ಕೆ ಕಾರಣ ಬೆಳಗಾವಿಯಲ್ಲಿ ಬೆಳೆದ ಕನ್ನಡಿಗನ್ನೊಬ್ಬನು ಎನ್ನುವುದು ಅಭಿಮಾನದ ಸಂಗತಿಯಾಗಿದೆ. ಅವರೇ ಅಣ್ಣಾಸಾಹೇಬ ಕಿರ್ಲೋಸ್ಕರ.

ಕಿರ್ಲೋಸ್ಕರ ಮರಾಠಿ ರಂಗಭೂಮಿಗೆ ಮಹತ್ವದ ನೆಲೆಯನ್ನು ಒದಗಿಸಿದವರು. ಇವರಿಂದಲೇ ಮರಾಠಿಯ ನಾಟಕಗಳಿಗೆ ಸಂಗೀತ ಪರಂಪರೆ ಒದಗಿಬಂದಿತು. ಮರಾಠಿ ರಂಗಭೂಮಿಯಲ್ಲಿ ಪಾತ್ರಧಾರಿಗಳು ಸ್ವತಃ ಹಾಡುವಂತಾದುದು, ಸ್ತ್ರೀಯರಿಗೆ ಪಾತ್ರ ಧರಿಸಲು ಅವಕಾಶ ದೊರೆತದ್ದು, ಅಣ್ಣಾಸಾಹೇಬ ಕಿರ್ಲೋಸ್ಕರ ಅವರಿಂದ ಎನ್ನುವುದನ್ನು ಬಹುಪಾಲು ಮರಾಠಿ ವಿದ್ವಾಂಸರು ಒಪ್ಪಿಕೊಂಡಿದ್ದಾರೆ.

ಕೀರ್ಲೋಸ್ಕರರು ಹುಟ್ಟಿದ್ದು ಬೆಳಗಾವಿ ಜಿಲ್ಲೆಯ ಗುರ್ಲಹೊಸೂರಿನಲ್ಲಿ. ಆದರೆ ಇವರು ತಮ್ಮ ತಾರುಣ್ಯದ ದಿನಗಳನ್ನು ಕಳೆದಿದ್ದು ಬೆಳಗಾವಿಯಲ್ಲಿ. ೧೮೬೭ ರಿಂದ ೧೮೮೦ರ ವರೆಗೆ ೧೩ ವರ್ಷಗಳ ಕಾಲ ಬೆಳಗಾವಿಯ ಸರ್ದಾರ ಹೈಸ್ಕೂಲಿನಲ್ಲಿ ಶಿಕ್ಷಕರೆಂದೂ ಪೋಲೀಸ್ ಖಾತೆಯಲ್ಲಿ ಜಮಾದಾರರೆಂದೂ ರೆವನ್ಯೂ ಖಾತೆಯ ಕಾರಕೂನರೆಂದೂ ಕೆಸಲ ಮಾಡಿರುವುದನ್ನು ಪ್ರಹ್ಲಾದ ಮುದ್ಗಲ್ ಅವರು ಹೇಳಿದ್ದಾರೆ. ಬೆಳಗಾವಿಯಲ್ಲಿ ವಾಸವಾಗಿದ್ದ ಈ ಅವಧಿಯಲ್ಲಿಯೇ ಪಾರಿಜಾತವನ್ನು ಬೆಳಗಾವಿಯಲ್ಲಿ ಕಿರ್ಲೋಸ್ಕರ ನೋಡಿದರು. ತಾವು ಮರಾಠಿಯಲ್ಲಿ ಒಂದು ಪಾರಿಜಾತವನ್ನು ರಚಿಸಿ ರಂಗಪ್ರಯೋಗಕ್ಕೆ ಅಳವಡಿಸಬೇಕು ಎನ್ನುವ ಮಟ್ಟಿಗೆ ಪಾರಿಜಾತ ಸವಿ ಅವರನ್ನು ತಣಿಸಿತು.[೮] ಅಣ್ಣಾ ಕಿರ್ಲೋಸ್ಕರರನ್ನು ಬಹಳ ಆಕರ್ಷಿಸಿದ್ದು ಪಾರಿಜಾತದ ಸಂಗೀತ. ಅವರು ಅನುವಾದಿಸಿದ ಪಾರಿಜಾರದಲ್ಲಂತೂ ಸರಿಯೇ, ತಮ್ಮ 'ಶಾರದಾ' 'ಸುಭದ್ರಾ' ನಾಟಕಗಳಿಗೂ ಪಾರಿಜಾತದ ಹಾಡಿನ ಮಟ್ಟಗಳನ್ನು ಬಳಸಿಕೊಂಡಿರುವುದನ್ನು ಡಾ. ರಾ. ಯ. ಧಾರವಾಡಕರ, ಡಾ. ಬೆಟಗೇರಿ ಕೃಷ್ಣಶರ್ಮರಂಥ ಹಿರಿಯರು ಹೇಳಿದ್ದಾರೆ.[೯] ಬೆಳಗಾವಿಯಲ್ಲಿದ್ದ ದಿನಗಳಲ್ಲಿ ಕನ್ನಡ ಜನಪದ ರಂಗಭೂಮಿಯ ಬಯಲಾಟಗಳು ಹೆಚ್ಚು ಪ್ರಸಿದ್ಧಿಯನ್ನು ಪಡೆದುಕೊಂಡಿದ್ದವು. ಆ ಕಾಲದಲ್ಲಿ ಜನಪ್ರಿಯವಾಗಿದ್ದ 'ಪಾರಿಜಾತ' ಆಟವನ್ನು ನೋಡಿ ಪ್ರಭಾವಿತರಾಗಿ ಕನ್ನಡ ಪಾರಿಜಾತದಂತೆ 'ಮರಾಠಿ ಪಾರಿಜಾತ'ವನ್ನು ಬರೆದರು. ಅದನ್ನು ರಂಗಕ್ಕೆ ತರುವ ತಯಾರಿಯಲ್ಲಿದ್ದಾಗ ಸ್ತ್ರೀ ಪಾತ್ರ

ದೊರೆಯದ ಕಾರಣ ಅದನ್ನು ಸಾಂಗಲಿ ನಾಟಕ ಮಂಡಳಿಯಿಂದ ಆಡಿಸಿದರೆಂದು ಡಾ. ಮರಾಠೆಯವರು ಉಲ್ಲೇಖಿಸಿದ್ದಾರೆ.[೧೦]

**ಸಣ್ಣಾಟ (ಡಪ್ಪಿನಾಟ) :** ಡಪ್ಪಿನಾಟ ಪರಂಪರೆ ಬೆಳಗಾವಿ ಜಿಲ್ಲೆಯ ಪ್ರಮುಖ ವೈಶಿಷ್ಟ್ಯವಾಗಿದೆ. ಭರ್ಜರಿ ರಂಗಪ್ರದರ್ಶನದ ಮೂಡಲಪಾಯವನ್ನು ದೊಡ್ಡಾಟವೆಂದು ಕರೆದರೆ ಸರಳ ರಂಗ ಪ್ರದರ್ಶನದ ಡಪ್ಪಿನಾಟವನ್ನು ಸಣ್ಣಾಟವೆಂದು ಕರೆಯಲಾಗುತ್ತದೆ. ನಮ್ಮ ಜನಪದ ಕಲಾವಿದರು ಯಾವಾಗಲೂ ಅಷ್ಟೇ, ಅವರಿಗೆ ಭಾಷೆ, ಗಡಿಗಳ ತೊಂದರೆಯಾವಾಗಲೂ ಇಲ್ಲ. ತಮಗೆ ಚಂದ ಅನಿಸಿದ್ದನ್ನೆಲ್ಲ ಸ್ವೀಕರಿಸುತ್ತಾರೆ. ಪಾರಿಜಾತದ ಹಾಡಿನ ಮಧುರ ಮಟ್ಟುಗಳು ಮರಾಠಿಗರ ಆಕರ್ಷಿಸಿದಂತೆ ಮಹಾರಾಷ್ಟ್ರದ ತಮಾಷಾ ಕನ್ನಡಿಗರನ್ನು ಆಕರ್ಷಿಸಿತು. ಸಣ್ಣಾಟ ರೂಪತಾಳುವಲ್ಲಿ ತಮಾಷಾ ಕೈ ಜೋಡಿಸಿರುವುದನ್ನು ನಾವು ಸ್ಪಷ್ಟವಾಗಿ ಗುರುತಿಸಬಹುದು. ಡಪ್ಪಿನಾಟದ ಉದಯಕ್ಕೆ ಪಕ್ಕದ ಮಹರಾಷ್ಟ್ರದ ತಮಾಷಾ ಮತ್ತು ಈ ನಾಡಿನ ದಾಸರಾಟಗಳು ಪ್ರೇರಣೆ ನೀಡಿವೆ ಎಂಬ ಡಾ. ಬಸವರಾಜ ಮಲಶೆಟ್ಟಿಯವರ ಮಾತು ಯಥಾಯೋಗ್ಯವಾಗಿದೆ.[೧೧]

ಸಂಗ್ಯಾ–ಬಾಳ್ಯಾ: ಕರ್ನಾಟಕದ ಪ್ರಥಮ ಸಣ್ಣಾಟವೆಂದು ಗುರುತಿಸಲಾಗಿರುವ ಸಂಗ್ಯಾ–ಬಾಳ್ಯಾ ನಾಟಕವು ಹುಟ್ಟಿದ್ದು ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲೂಕಿನ ಬೈಲವಾಡದಲ್ಲಿ ರಾಯಪ್ಪ ಪತ್ತಾರ ಮಾಸ್ತರ ಎಂಬುವವರು ಸಂಗ್ಯಾ–ಬಾಳ್ಯಾ ನಾಟಕವನ್ನು ರಚಿಸಿದರು.

ಈ ಸಾಮಾಜಿಕ ಬಯಲಾಟ ಹಳ್ಳಿಯ ಆಟಗಳ ಪರಂಪರೆಯಲ್ಲಿ ಒಂದು ಹೊಸ ಕ್ರಾಂತಿಯನ್ನೇ ಮಾಡಿತು. ಕವಿ ಈ ಕಥೆಯನ್ನು ಬಯಲಾಟಕ್ಕೆ ಅಳವಡಿಸುವಾಗ ತುಂಬ ಕಲಾವಂತಿಕೆಯನ್ನು ಮೆರೆದಿದ್ದಾನೆ. ಜನಪದ ವಸ್ತುವಿನ ಜೊತೆಗೆ ರಂಗದ ಮೇಲೆ ಪ್ರತ್ಯಕ್ಷಗೊಳ್ಳುವ ಸಂಗೀತ, ಲಯಬದ್ಧ ಕುಣಿತ, ಮಾತುಗಾರಿಕೆಯಲ್ಲಿ ಜನಪದದ ಸೊಗಡು ತುಂಬಿಕೊಂಡಿರುವುದರಿಂದ ಈ ಬಯಲಾಟ ಹೆಚ್ಚು ಆಕರ್ಷಣೀಯವಾಯಿತು. ಹಳ್ಳಿಯ ಮಣ್ಣಿನಿಂದ ಮೂಡಿನಿಂತ ಇಲ್ಲಿಯ ಪಾತ್ರಗಳು ಪ್ರೇಕ್ಷಕರನ್ನು ರಂಜಿಸುವ ಜೊತೆಗೆ ನೈತಿಕ ಎಚ್ಚರವನ್ನು ಮೂಡಿಸುವ ರೀತಿ ಕೂಡ ಕಲಾತ್ಮಕವಾಗಿದೆ.

ರಾಧಾನಾಟ : ಸಣ್ಣಾಟಗಳ ಪರಂಪರೆಯಲ್ಲಿ ಮೂಡಿಬಂದ 'ರಾಧಾನಾಟ' ಬೆಳಗಾವಿ ಭಾಗದ ಮತ್ತೊಂದು ಮಹತ್ವದ ಜಾನಪದ ನಾಟಕ. ಮಹಾರಾಷ್ಟ್ರದ ತಮಾಶಾದ ಕನ್ನಡ ಆವೃತ್ತಿಯೆನಿಸಿರುವ ರಾಧಾನಾಟ ಎರಡು ಸಂಸ್ಕೃತಿಗಳ ಅಂಶಗಳನ್ನು ಸಮೀಕರಿಸಿಕೊಂಡಿದೆ. ರಾಧಾ ನಾಟಕ ಕಥಾನಾಯಕಿ ಚಿಮಣಾ; ಕಥಾನಾಯಕ ಗಲ್ಲಪೋಜ. ನಾಯಕನ ಸ್ನೇಹಿತ ಮತ್ತು ಹಾಸ್ಯಗಾರ ಸಖಾರಾಮ ತಾತ್ಯಾ. ಈ ಹೆಸರುಗಳೆಲ್ಲ ಕಥೆಯೊಂದಿಗೆ ನೇರವಾಗಿ ಮರಾಠಿಯ ತಮಾಶಾದಿಂದ ಬಂದಿರುವಂಥವು. ಸಂಗ್ಯಾ ಬಾಳ್ಯಾ ಮತ್ತು ರಾಧಾನಟಗಳು ಬೇರೆ ಊರುಗಳಲ್ಲಿ ಜನ್ಮತಾಳಿದ್ದರೂ ಇವುಗಳ ಹಲವಾರು ಪ್ರಯೋಗಗಳು ಬೆಳಗಾವಿಯಲ್ಲಿ ಜರುಗಿವೆ ಎಂಬುದನ್ನು ಇಲ್ಲಿಯ ಹಿರಿಯರು ಸ್ಮರಿಸಿಕೊಳ್ಳುತ್ತಾರೆ.

೨. ವೃತ್ತಿರಂಗಭೂಮಿ:

ವೃತ್ತಿರಂಗಭೂಮಿಯ ಬೇರುಗಳೆಲ್ಲಾ ಜಾನಪದ ರಂಗಭೂಮಿಯಲ್ಲಿ ಅಡಗಿವೆ. ಗೊಂಬೆಯಾಟ, ಸಣ್ಣಾಟ, ದೊಡ್ಡಾಟ, ಪಾರಿಜಾತಗಳಿಂದ ಅಭಿವೃದ್ಧಿಗೊಂಡ ಜನಪದ ರಂಗಭೂಮಿ ಜನರಿಗೆ ಮನರಂಜನೆಯನ್ನೊದಗಿಸುವ ಒಂದು ಸಾಧನವಾಗಿ ಬೆಳೆದು ಬಂದು ಕಾಲಾಂತರದಲ್ಲಿ ಕಲಾವಿದರ ಗುಂಪುಗಳು ವೃತ್ತಿನಾಟಕಗಳ ಉದಯಕ್ಕೆ ಕಾರಣವಾದವು. ನಾಟ್ಯಭೂಷಣ ಏಣಗಿ ಬಾಳಪ್ಪನವರು ವೃತ್ತಿನಾಟಕ ರಂಗದ ಉದಯಕ್ಕೆ ಕಾರಣವನ್ನು ಹೇಳುತ್ತ; ಜನಪದ ರಂಗಭೂಮಿಯ ಕಲಾತಂಡಗಳು ಪೌರಾಣಿಕ ನಾಟಕಗಳಿಗೆ ಶ್ರೀಕಾರ ಹೇಳಿ ವೃತ್ತಿ ನಾಟಕ ತಂಡಗಳನ್ನು ಕಟ್ಟಿದವು ಎನ್ನುತ್ತಾರೆ.[೨]

ಹತ್ತೊಂಬತ್ತನೆಯ ಶತಮಾನದ ಪ್ರಾರಂಭದಲ್ಲಿ ಬೆಳಗಾವಿಯಲ್ಲಿ ಮರಾಠಿ ನಾಟಕಗಳೇ ಪ್ರಭುತ್ವವನ್ನು ಪಡೆದುಕೊಂಡಿದ್ದವು. ಎಲ್ಲಿ ನೋಡಿದಲ್ಲೆಲ್ಲ ಮರಾಠಿ ನಾಟಕಗಳೇ ರಾರಾಜಿಸುತ್ತಿದ್ದವು. ಕನ್ನಡಿಗರೂ ಮರಾಠಿ ನಾಟಕಗಳಿಗೆ ಮುಗಿಬೀಳುತ್ತಿದ್ದರು. ಶಿವಾಜಿ ಜಯಂತಿ, ದೀಪಾವಳಿ, ವಿಜಯದಶಮಿ ಮುಂತಾದ ಸಂದರ್ಭಗಳಲ್ಲಿ ಮರಾಠಿ ನಾಟಕಗಳ ಭರಾಟೆ ಹೆಚ್ಚಿರುತ್ತಿತ್ತು. ಬೆಳಗಾವಿಯಲ್ಲಿ ವಿಶೇಷವಾಗಿ ಆಚರಿಸುವ ಗಣೇಶೋತ್ಸವದ ಸಂದರ್ಭದಲ್ಲಿ ಬೀದಿ ಬೀದಿಗಳಲ್ಲಿ ಮರಾಠಿ ನಾಟಕಗಳು ಪ್ರದರ್ಶನಗೊಳ್ಳುತ್ತಿದ್ದವು. ಹೀಗಾಗಿ ಮರಾಠಿ ನಾಟಕಗಳ ನಡುವೆ ಕನ್ನಡ ನಾಟಕಗಳನ್ನು ಆಡುವವರು, ನೋಡುವವರು ಇಲ್ಲದಂತಾಗಿದ್ದರು.

ಅಂದಿನ ಮರಾಠಿಗರ ಪ್ರಭಾವವನ್ನು ಶಾಂತಕವಿಗಳು ನಾಟಕಾವಲೋಕನ ಸಮಾರಂಭದಲ್ಲಿ ಈ ರೀತಿ ಚಿತ್ರಿಸಿದ್ದಾರೆ.

ಎಲ್ಲಿ ನೋಡಲು ಮರಾಠಿಯರ ನಾಟಕಕೀರ್ತಿ

ಯೆಲ್ಲಿ ನೋಡಲು ಮರಾಠಿಯರ ನಾಟಕವರ್ಥಿ

ಯೆಲ್ಲಿ ನೋಡಲು ಮರಾಠಿಯರ ನಾಟಕ ನಟರ ಮೂರ್ತಿಗಳ ಸಂಚಾರವು

ಎಲ್ಲಿ ನೋಡಲು ಮರಾಠಿಯರ ನಾಟಕದಾಟ

ವೆಲ್ಲಿ ನೋಡಲು ಮರಾಠಿಯರ ನಾಟಕದೂಟ

ವೆಲ್ಲಿ ನೋಡಲು ಮರಾಠಿಯರ ನಾಟಕಮಯಂ ತಾನಾಯ್ತು ಕರ್ನಾಟಕಂ[೧೩]

ಇಂತಹ ಸಂದರ್ಭದಲ್ಲಿ ಕನ್ನಡಕ್ಕೆ ಕನ್ನಡದ್ದೆ ಆದ ನಾಟಕದ ಅವಶ್ಯಕತೆ ಇತ್ತು. ಕನ್ನಡ ಭಾಷೆ, ಸಂಸ್ಕೃತಿಯನ್ನು ಅಭಿವ್ಯಕ್ತಗೊಳಿಸುವ ನಾಟಕಗಳಿಂದ ಕನ್ನಡವನ್ನು ಉಳಿಸಬಹುದುದೆಂಬುದನ್ನು ಶಾಂತಕವಿಗಳು ಅರಿತುಕೊಂಡರು. ಅದಕ್ಕಾಗಿಯೇ ಅವರು ನಾಟಕರಂಗವನ್ನು ಆಯ್ಕೆ ಮಾಡಿಕೊಂಡರು.

ಹೀಗೆ ಶಾಂತಕವಿಗಳ ಒತ್ತಾಸೆ, ಅಭಿಮಾನ, ಸ್ಫೂರ್ತಿಗಳಿಂದಾಗಿ ಕ್ರಿ.ಶ. ೧೮೭೭ರಲ್ಲಿ ಗದಗಿನಲ್ಲಿ 'ಶ್ರೀ ವೀರನಾರಾಯಣ ಪ್ರಾಸಾದಿಕ ಕೃತಪುರ ನಾಟಕ ಮಂಡಳಿ' ಎಂಬ ಹೆಸರಿನಲ್ಲಿ ನಾಟಕ ತಂಡ ರಚನೆಯಾಯಿತು. ಇದೇ ಉತ್ತರ ಕರ್ನಾಟಕದ ಪ್ರಥಮ ನಾಟಕಮಂಡಳಿ.[೧೪] ಇದರಿಂದಾಗಿ ಶಾಂತಕವಿಗಳನ್ನು 'ಕರ್ನಾಟಕ ನಾಟಕದ ಪಿತಾಮಹ' ಎಂದು ಕರೆಯಲಾಗುತ್ತದೆ. ಪ್ರಥಮದಲ್ಲಿ 'ಉಷಾಹರಣ' ಎಂಬ ನಾಟಕವನ್ನು ರಚಿಸಿ ಅದನ್ನು ತಾವೇ ನಿರ್ದೇಶಿಸಿ ಕನ್ನಡ ನಾಟಕದ ಪ್ರಥಮ ಗುರು ಎನಿಸಿಕೊಂಡರು. 'ಉಷಾಹರಣ' ನಾಟಕ ಪ್ರಥಮ ನಾಟಕವೆನಿಸಿತು.

ಬೆಳಗಾವಿ ಸ್ಫೂರ್ತಿ: ಶಾಂತಕವಿಗಳಲ್ಲಿ ಕಾವ್ಯಾಸಕ್ತಿಯನ್ನು ಬೆಳೆಸಿದ ನೆಲ ಬೆಳಗಾವಿ. ವಿದ್ಯಾರ್ಥಿಯಾಗಿದ್ದಾಗಲೇ ಅವರಲ್ಲಿಯ ಕಾವ್ಯಶಕ್ತಿಗೆ ಉತ್ತಮವಾದ ವೇದಿಕೆ ಬೆಳಗಾವಿ ನಗರದಲ್ಲಿ ಒದಗಿಬಂದಿತು. ಶಾಂತಕವಿಗಳು ಶಿಕ್ಷಕರ ತರಬೇತಿಯನ್ನು ಬೆಳಗಾವಿಯ ಶಿಕ್ಷಕರ ತರಬೇತಿ ವಿದ್ಯಾಲಯದಲ್ಲಿ ಪಡೆದರು.[೧೫] ಆಗ ಅಲ್ಲಿ ಕನ್ನಡ ಪಂಡಿತರಾಗಿದ್ದ ಶಾಂತವೀರ ರಾಚಿದೇವ ಕಿತ್ತೂರರ ಸಂಪರ್ಕದಿಂದ ಉತ್ತಮವಾದ ತರಬೇತಿಯನ್ನು ಪಡೆದರು. ವಿದ್ಯಾಲಯದಲ್ಲಿಯ ಸಮಾರಂಭ, ಸ್ವಾಗತ, ಸನ್ಮಾನಗಳಲ್ಲಿ ಕವಿತೆಗಳನ್ನು ರಚಿಸುವುದು, ಹಾಡುವುದು ಅಂದಿನ ಬಹುಮುಖ್ಯ ಹವ್ಯಾಸ ಮತ್ತು ಅಗತ್ಯಗಳಾಗಿರುತ್ತಿದ್ದವು. ಗ್ರಾಮೀಣ ಭಾಗದ ಶಾಲೆಗಳಲ್ಲಿ ಅದು ಇಂದಿಗೂ ನಡೆದುಕೊಂಡು ಬಂದಿದೆ. ಸಮಾರಂಭಗಳಲ್ಲಿ ಪಾಲ್ಗೊಳ್ಳುವ ಅತಿಥಿ, ಅಭ್ಯಾಗತರು, ಅಧ್ಯಕ್ಷರ ಹೆಸರುಗಳನ್ನು ಪವಣಿಸಿ ರಚಿಸಿದ ಸ್ವಾಗತ ಗೀತೆಗಳನ್ನು ಹಾಡುವುದನ್ನು ರೂಢಿಸಿಕೊಂಡ ಶಾಂತಕವಿಗಳಲ್ಲಿಯ ಪ್ರತಿಭೆ ಗಟ್ಟಿಗೊಳ್ಳುತ್ತ ಸಾಗಿತು. ಶಾಂತವೀರ ರಾಚಿದೇವ ಕಿತ್ತೂರರು ಶಾಂತಕವಿಗಳಿಗೆ ಸ್ವಾಗತ ಗೀತೆಯನ್ನು ಬರೆಯುವಂತೆ ಪ್ರೋತ್ಸಾಹಿಸಿದರು.[೧೬] ಸಂಸ್ಕೃತದ ಅಭ್ಯಾಸ, ದಾಸರ ಪದಗಳ ಪ್ರಭಾವದಿಂದಾಗಿ ಬಾಳಾಚಾರ್ಯರು (ಶಾಂತಕವಿಗಳು) ಕವಿತೆಗಳನ್ನು ಬರೆಯಲು ಪ್ರಯತ್ನಿಸಿ ತಮಗೂ ಕವಿತೆಗಳನ್ನು ಬರೆಯಲು ಬರುತ್ತದೆ ಎಂಬುದನ್ನು ಕಂಡುಕೊಂಡರು. ಮುಂದೆ ಗದುಗಿನಲ್ಲಿದ್ದಾಗ ಅವರ ಪ್ರತಿಭೆಗೆ ಅವಕಾಶ ದೊರೆಯಿತು.

ಬೆಳಗಾವಿಯಲ್ಲಿದ್ದಾಗ ಕನ್ನಡದ ದುಃಸ್ಥಿತಿಯನ್ನು ಕಣ್ಣಾರೆ ಕಂಡಿದ್ದರು. ಇಲ್ಲಿ ಪ್ರಯೋಗಗೊಳ್ಳುತ್ತಿದ್ದ ನಾಟಕಗಳೆಲ್ಲವೂ ಮರಾಠಿಯ ನಾಟಕಗಳಾದ್ದರಿಂದ ಕನ್ನಡದಲ್ಲಿಯೂ ಇಂತಹ ನಾಟಕಗಳು ಏಕಿಲ್ಲ ಎನ್ನುವ ನೋವು ಅವರ ಅಂತರಂಗವನ್ನು ಕೆಣಕಿದ್ದವು. ಇದಕ್ಕೆ ಗದಗಿನಲ್ಲಿದ್ದ ಸಂದರ್ಭಕೂಡಿ ಬಂದು ಮೊಟ್ಟಮೊದಲ ಬಾರಿಗೆ ಕನ್ನಡದಲ್ಲಿ ಕೀರ್ತನೆಗಳನ್ನು ಬರೆದರು. 'ಮುಕುಂದ ನಾಮಾಮೃತ', 'ಗಜೇಂದ್ರ ಮೋಕ್ಷ', 'ವಿದ್ಯಾರಣ್ಯ ವಿಜಯ' ಮೊದಲಾದ ಕೀರ್ತನೆಯನ್ನು ರಚಿಸಿದರಲ್ಲದೆ ಕೀರ್ತನೆಗಳ ಮೂಲಕ ಕನ್ನಡಿಗರ ಇತಿಹಾಸ ಹೇಳುವ ಪ್ರಯತ್ನವನ್ನು ಮಾಡಿದ ಮೊದಲಿಗರಾದರು. ಇದೇ ಅವರ ಮುಂದಿನ ನಾಟಕಗಳ ರಚನೆಗೂ ನಾಂದಿಯಾಯಿತು.

ಗದುಗನಲ್ಲಿದ್ದ ಶಾಂತಕವಿಗಳು ೧೮೭೭ರಲ್ಲಿ ಉಷಾಹರಣ ಎಂಬ ನಾಟಕವನ್ನು ಬರೆದು ಅದನ್ನು ರಂಗದ ಮೇಲೆ ತಂದರು. ಈ ವಿಷಯವನ್ನು ಶಾಂತಕವಿಗಳು ಸಂತೃಪ್ತಿಯಿಂದ ಹೀಗೆ ವ್ಯಕ್ತಮಾಡಿದ್ದಾರೆ:

ಇದೆ ಮೊದಲಿನದು ನಮ್ಮ ಕನ್ನಡ ನಾಡಿನೊಳೆ

ಗುದಯಿಸಿದ ಕನ್ನಡದ ನಾಟಕ ಮೇಳ ವಾ

ದುದರಿಂದೆ ಕರ್ಣಾಟ ನಾಟಕ ಪ್ರಥಮಗುರುವೆಂದೆಂಬದೆ ಮಗಿಂದಿಗಂ[೧೭]

ಕೃತಪುರ ನಾಟಕ ಮಂಡಳಿಯಿಂದ ಕರ್ನಾಟಕ ವೃತ್ತಿರಂಗಭೂಮಿ ಉದ್ಘಾಟನೆಯಾಯಿತೆಂದು ಜನ ಶಾಂತಕವಿಗಳಿಗೆ 'ಕರ್ನಾಟಕ ನಾಟಕ ಪ್ರಥಮ ಗುರು' ಎಂದು ಅಭಿಮಾನದಿಂದ ಕರೆದಿರುವುದು ಸೂಕ್ತವಾಗಿದೆ.

'ಉಷಾಹರಣ' ನಾಟಕದ ನಂತರ ಶಾಂತಕವಿಗಳು 'ಶ್ರೀಯಾಳ ಸತ್ವ ಪರೀಕ್ಷೆ', 'ಕೀಚಕ ವಧೆ' ಮುಂತಾದ ನಾಟಕಗಳನ್ನು ಬರೆದು ರಂಗದ ಮೇಲೆ ತಂದರು. ತಮ್ಮ ಕೃತಪುರ ನಾಟಕ ಮಂಡಳಿಯನ್ನು ಗದುಗಿನಿಂದ ಶಿರಹಟ್ಟಿ, ಹುಬ್ಬಳ್ಳಿ, ಧಾರವಾಡ, ಬೆಳಗಾವಿ ಹಾಗೂ ಕಲಾದಗಿ ಮುಂತಾದ ಊರುಗಳಲ್ಲಿ ಈ ನಾಟಕಗಳನ್ನು ಪ್ರದರ್ಶಿಸಿದರು.

ಶಾಂತಕವಿಗಳ ನಾಟಕಗಳ ಜನಪ್ರಿಯತೆ ತುಸುವೆ ಸಮಯದಲ್ಲಿ ಎಲ್ಲ ಕಡೆಗೂ ಪಸರಿಸಿತು. ಉಷಾಹರಣದ ಜಯಭೇರಿಯಿಂದ ನಾಟ್ಯ ಕಲೆಯಲ್ಲಿ ಅಭಿರುಚಿಯಿರುವ ತರುಣರು ಉತ್ಸಾಹದಿಂದ ಅಲ್ಲಲ್ಲಿ ನಾಟಕ ಕಂಪನಿಗಳನ್ನು ಕಟ್ಟಿಕೊಂಡರು.

ಬೆಳಗಾವಿಯಲ್ಲಿ ಕೃತಪುರ ನಾಟಕ ಮಂಡಳಿಯ ನಾಟಕಗಳ ಪ್ರದರ್ಶನ ೧೮೮೧ರಲ್ಲಿ ಆಯಿತು. ಅವರು 'ಉಷಾಹರಣ' ನಾಟಕ ಬೆಳಗಾವಿಯಲ್ಲಿ ಪ್ರದರ್ಶನಗೊಂಡು ಅಪಾರವಾದ ಜನ ಮೆಚ್ಚುಗೆಯನ್ನು ಪಡೆದುಕೊಂಡಿತು. ಅದುವರೆಗೆ ಮರಾಠಿ ರಂಗಭೂಮಿಯಿಂದ ಸಮ್ಮೋಹಿತರಾದ ರಸಿಕರು ಶಾಂತಕವಿಗಳ ನಾಟಕಗಳಿಗೆ ಮುಗ್ಧರಾದರು. ಕೇವಲ ಕನ್ನಡಿಗರಷ್ಟೇ ಅಲ್ಲದೆ ಬೆಳಗಾವಿಯ ಮರಾಠಿಗರಿಗೂ ಶಾಂತಕವಿಗಳ ನಾಟಕಗಳು ಅತ್ಯಂತ ಮೆಚ್ಚುಗೆಯಾದವು. ಮರಾಠಿ ರಂಗಭೂಮಿಯ ರಸಿಕರು ತಪ್ಪದೆ ಕನ್ನಡ ನಾಟಕಗಳನ್ನು ನೋಡತೊಡಗಿದರು.

ಬೆಳಗಾವಿಯ ಕನ್ನಡಿಗರು ಶಾಂತಕವಿಗಳ ನಾಟಕಗಳಿಂದ ಪ್ರಭಾವಿತರಾಗಿ ಶಾಂತಕವಿಗಳಿಗೆ ನಾಟಕ ರಂಗಸ್ಥಳದ ಮೇಲೆಯೇ ಅದ್ದೂರಿಯಾದ ಸತ್ಕಾರ ಸಮಾರಂಭವನ್ನು ಏರ್ಪಡಿಸಿದರು. ಸಾರ್ವಜನಿಕರಿಂದ ಸನ್ಮಾನವನ್ನು ನೀಡುವ ಸಂದರ್ಭದಲ್ಲಿ ಅಭಿಮಾನಿಗಳು ಶಾಂತಕವಿಗಳನ್ನು ಅಪ್ಪಿಕೊಂಡರಂತೆ.[೧೮] ಅಂದು ಅವರಿಗೆ ಜರದ ರುಮಾಲು ಶಾಲುಗಳನ್ನು ಅರ್ಪಿಸಿ ತಮ್ಮ ಗೌರವ ಆದರ್ಶಗಳನ್ನು ಸಲ್ಲಿಸಿದರು. ಅಲ್ಲದೆ ಪ್ರತ್ಯೇಕವಾಗಿ ಇಬ್ಬರು ಅಭಿಮಾನಿಗಳು ಜರದ ಟೋಪ್ಪಿಗೆ, ಬೆಲೆವಾಳುವ ಜರದ ರುಮಾಲು ಕೊಟ್ಟುದಲ್ಲದೆ ನಾನಾ ಬಗೆಯ ಉಡುಗೂರೆಗಳು ಶಾಂತಕವಿಗಳಿಗೆ ಹರಿದು ಬಂದವು.[೧೯] ಬೆಳಗಾವಿ ಕನ್ನಡಿಗರು ತಮಗೆ ಉಂಟಾದ ಸಂತೋಷವನ್ನು ಈ ರೀತಿಯಾಗಿ ಉಡುಗೂರೆ ನೀಡುವುದರ ಮೂಲಕ ವ್ಯಕ್ತಪಡಿಸಿಕೊಂಡರು.

ಬೆಳಗಾವಿಯ ಜನರು ವೃತ್ತಿರಂಗಭೂಮಿಯ ನಾಟಕ ಕಂಪನಿಗೆ ನೀಡಿದ ಸ್ವಾಗತ ಬೆಳಗಾವಿಯಲ್ಲಿ ಕನ್ನಡ ನಾಟಕ, ನಾಟಕ ಕಂಪನಿಗಳ ಪ್ರಚಾರ, ಬೆಳವಣಿಗೆಗೆ ನಾಂದಿಯಾಯಿತು. ಪ್ರಾರಂಭದಲ್ಲಿ ಬೆಳಗಾವಿಯ ಜನರು ನೀಡಿದ ಪ್ರೋತ್ಸಾಹ, ಪ್ರೀತಿ ಆದರಗಳಿಂದಲೇ ಉತ್ತರ ಕರ್ನಾಟಕದಲ್ಲಿ ವೃತ್ತಿರಂಗಭೂಮಿ ಬೆಳವಣಿಗೆಯನ್ನು ಕಾಣತೊಡಗಿತು. ನಾಟಕ ಕಂಪನಿಗಳಿಗೆ ಬೆಳಗಾವಿ ಎಂದರೆ ಅತ್ಯಂತ ಗೌರವದ ನೆಲೆಯಾಗಿ ಕಂಡುಬಂದಿತು. ಹೀಗಾಗಿ ಮುಂದಿನ ದಿನಗಳಲ್ಲಿ ಹತ್ತಾರು ನಾಟಕ ಕಂಪನಿಗಳು ನಿರಂತರವಾಗಿ ಬೆಳಗಾವಿಯಲ್ಲಿ ನಾಟಕಗಳ ಪ್ರದರ್ಶನವನ್ನು ನೀಡತೊಡಗಿದವು.

ಕೃತಪುರ ನಾಟಕ ಮಂಡಳಿಯವರು ಶಾಂತಕವಿಗಳ ನಾಟಕಗಳನ್ನು ಬೆಳಗಾವಿಯಲ್ಲಿ ಆಡುತ್ತಿರುವ ಸಂದರ್ಭದಲ್ಲಿಯೇ ನರಗುಂದದ ನಾಟಕ ಕಂಪನಿಯವರು ಶಾಂತಕವಿಗಳ ನಾಟಕಗಳ ಪ್ರದರ್ಶನವನ್ನು ಬೆಳಗಾವಿಯಲ್ಲಿ ಹಮ್ಮಿಕೊಂಡಿದ್ದರು.[೨೦]

ಶಾಂತಕವಿಗಳಿಗೆ ಬೆಳಗಾವಿ ಎಂದರೆ ಎಲ್ಲಿಲ್ಲದ ಪ್ರೀತಿ, ಅಭಿಮಾನ. ವಿದ್ಯಾರ್ಥಿಯಾಗಿದ್ದಾಗ ತಮ್ಮನ್ನು ರೂಪಿಸಿದ ಬೆಳಗಾವಿಯಲ್ಲಿ ನಾಟಕಗಳನ್ನು ಪ್ರದರ್ಶಿಸಿ ತಮ್ಮ ಬಹುದಿನದ ಕನಸನ್ನು ಸಾಕಾರಗೊಳಿಸಿಕೊಂಡರು. ಮರಾಠಿ ಭಾಷೆಯ ಜನರನ್ನೂ ಶಾಂತಕವಿಗಳ ನಾಟಕಗಳು ಆಕರ್ಷಿಸಿದವು. ಮರಾಠಿ ಪತ್ರಿಕೆ 'ಜ್ಞಾನ ಬೋಧಕ' ಶಾಂತಕವಿಗಳ ನಾಟಕಗಳ ಬಗೆಗೆ ನಟರ ಬಗೆಗೆ ಮೆಚ್ಚುಗೆಯ ಮಾತುಗಳನ್ನಾಡಿ ಕನ್ನಡ ನಾಟಕಗಳಿಗೆ ಪ್ರೋತ್ಸಾಹವನ್ನು ನೀಡಿತು.[೨೧]

ಹತ್ತೊಂಬತ್ತನೆಯ ಶತಮಾನದ ಕೊನೆಯ ಘಟ್ಟದಲ್ಲಿ ಆಧುನಿಕ ರಂಗಭೂಮಿಯ ಮಹತ್ವದ ಭಾಗವೆನಿಸಿದ ವೃತ್ತಿರಂಗಭೂಮಿಯ ಚಟುವಟಿಕೆಗಳು ಮೊದಲು ಕಾಣಿಸಿಕೊಂಡದ್ದು ಉತ್ತರ ಕರ್ನಾಟಕದಲ್ಲಿಯೇ. ಇದಕ್ಕೆ ಮೂಲ ಕಾರಣ ೧೮೮೫ರಲ್ಲಿ ಈ ಭಾಗದಲ್ಲಿ ರೈಲು ಸಂಚಾರ ಆರಂಭಗೊಂಡದ್ದು. ಇದರಿಂದ ಮುಂಬೈ ಜೊತೆಗೆ ಸಂಪರ್ಕ ಏರ್ಪಟ್ಟಿತು. ಕಂಪನಿ ನಾಟಕಗಳ ಕೇಂದ್ರ ಸ್ಥಳವಾಗಿದ್ದ ಮುಂಬೈಯಿಂದ ಮನರಂಜನೆಯ ಸರಕು ಈ ಭಾಗಕ್ಕೆ ಹರಿದು ಬರಲು ಸುಲಭವಾಯಿತು. ಮುಂಬೈಯಲ್ಲಿ ಪಾರಸಿ ಮತ್ತು ಮರಾಠಿ ನಾಟಕಗಳು ಹೆಚ್ಚು ಪ್ರಚಾರಗೊಂಡಿದ್ದವು. ಇದು ಕನ್ನಡ ನಾಟಕಗಳ ರಚನೆಗೆ ಮತ್ತು ಪ್ರದರ್ಶನಕ್ಕೆ ಮುಖ್ಯವಾದ ಪ್ರೇರಣೆಯಾಯಿತು.

ಕೃತಪುರ ನಾಟಕ ಮಂಡಳಿಯು ಹುಟ್ಟುವುದಕ್ಕಿಂತ ಪೂರ್ವದಲ್ಲಿಯೇ ಬೆಳಗಾವಿ ಸಮೀಪದ ಹಲಸಿ ಗ್ರಾಮದಲ್ಲಿ ಸುಮಾರು ೧೯೬೯ ರ ಸುಮಾರಿಗೆ 'ಬ್ರಹ್ಮ ವಿದ್ಯಾಮಂಡಳ'ದ ಮೂಲಕ ಆಧುನಿಕ ನಾಟಕಗಳನ್ನಾಡುವ ಪ್ರಯತ್ನಗಳು ನಡೆದವು.[೨೨] ಹಲಸಿಯ ಪಾಂಪ್ರಿ ಆಚಾರ್ಯರು ಬ್ರಹ್ಮವಿದ್ಯಾ ಮಂಡಳ ಹೆಸರಿನ ವಿದ್ಯಾಕೇಂದ್ರದ ಮೂಲಕ ವಿದ್ಯಾರ್ಥಿಗಳಿಗೆ ವೇದಾಧ್ಯಯನ ಕಲಿಸುತ್ತಿದ್ದರು. ಪಾಠದ ಜೊತೆಗೆ ಬಿಡುವಿನ ವೇಳೆಯಲ್ಲಿ ಮನರಂಜನೆಗಾಗಿ ನಾಟಕ ತಂಡವನ್ನು ವಿದ್ಯಾರ್ಥಿಗಳಿಂದಲೇ ರಚಿಸಿದರು. ನಾಟಕಗಳನ್ನು ಕಿತ್ತೂರಿನ ವೆಂಕಣ್ಣಾಚಾರ್ಯ ಅಗಳಗಟ್ಟಿ

ಎನ್ನುವವರು ಬರೆದುಕೊಡುತ್ತಿದ್ದರು. 'ವಿರಾಟಪರ್ವ' 'ಶ್ರೀಮತಿ ಪರಿಣಯ', 'ಮದಲಸಾ ಪರಿಣಯ', 'ರುಕ್ಮೀಣಿ ಸ್ವಯಂವರ', 'ಸೀತಾ ಸ್ವಯಂವರ', 'ದ್ರೌಪದಿ ವಸ್ತ್ರಾಪಹರಣ' ಮುಂತಾದ ನಾಟಕಗಳು ಬ್ರಹ್ಮವಿದ್ಯಾಮಂಡಳಿಯ ವಿದ್ಯಾರ್ಥಿಗಳಿಂದ ಪ್ರದರ್ಶನಗೊಂಡಿತು.

ನಾಟಕಗಳನ್ನು ಬರೆದು ಅವುಗಳನ್ನು ರಂಗದ ಮೇಲೆ ನಿರ್ದೇಶಿಸುವ ಜವಾಬ್ದಾರಿಯನ್ನು ವೆಂಕಣ್ಣಾಚಾರ್ಯ ಅಗಳಗಟ್ಟಿಯವರು ಯಶಸ್ವಿಯಾಗಿ ನಿರ್ವಹಿಸಿದರು. ಇವರ ನಾಟಕದ ಸ್ಫೂರ್ತಿಗೆ ಮೂಲ ಪ್ರೇರಣೆಯನ್ನು ಬೆಳಗಾವಿ ಒದಗಿಸಿತು. ಅಂದು ಬೆಳಗಾವಿಯಲ್ಲಿ ಮರಾಠಿಯ ಕಂಪನಿ ನಾಟಕಗಳು ಅತ್ಯಂತ ಜನಪ್ರಿಯವಾಗಿದ್ದವು. ಒಂದಿಲ್ಲೊಂದು ಸಂದರ್ಭದಲ್ಲಿ ನಿರಂತರವಾಗಿ ನಾಟಕಗಳು ಬೆಳಗಾವಿಯಲ್ಲಿ ನಡೆಯುತ್ತಲೇ ಇದ್ದವು. ಇವುಗಳನ್ನು ನೋಡಿದ ವೆಂಕಣ್ಣಾಚಾರ್ಯರಿಗೆ ಅವುಗಳಂತೆಯೇ ಕನ್ನಡದಲ್ಲಿಯೂ ನಾಟಕಗಳನ್ನು ಬರೆಯಬೇಕೆಂದು ನಿರ್ಧರಿಸಿ ರಾಮಾಯಣ–ಮಹಾಭಾರತದ ವಸ್ತುಗಳನ್ನೊಳಗೊಂಡ ನಾಟಕಗಳನ್ನು ರಚಿಸಿ ಅವುಗಳನ್ನು ಪ್ರದರ್ಶಿಸಿದರು.

'ಬ್ರಹ್ಮ ವಿದ್ಯಾ ಮಂಡಲ'ದ ವಿದ್ಯಾರ್ಥಿಗಳು ಬೇಸಿಗೆಯ ರಜೆ ಬಂದಿತೆಂದರೆ ತಂಡವನ್ನು ಕಟ್ಟಿಕೊಂಡು (ಕಂಪನಿ) ಊರಿಂದೂರಿಗೆ ಸಂಚರಿಸುತ್ತಿದ್ದರು. ಊರಿನ ಯಾವುದಾದರೂ ಮಠ ಅಥವಾ ದೇವಾಲಯದೊಳಿಗೆ ಉಳಿದ ಅಧ್ಯಯನದ ಜೊತೆಗೆ ಊರ ಜನರಿಗೆ ಪುರಾಣ ಪ್ರವಚನಗಳನ್ನು ಹೇಳುತ್ತ ನಾಟಕಗಳನ್ನು ಆಡಿ ರಂಜಿಸುತ್ತಿದ್ದರು. ಹೀಗಾಗಿ ಹಲಸಿ ನಾಟಕ ಕಂಪನಿಯ ಪುರಾಣ, ಪ್ರವಚನದಂತಹ ಕಾರ್ಯಗಳು ಆ ಕಂಪನಿಯನ್ನು ವಿಶಿಷ್ಟವಾಗಿ ಗುರುತಿಸುವಂತಾಗಿದೆ. ಈ ಕಂಪನಿಯು ನಾಡಿನಾದ್ಯಂತ ಸಂಚರಿಸಿ ಬೆಳಗಾವಿಯ ಕೀರ್ತಿಯನ್ನು ಹರಡಿತು.

ಕ್ರಿ. ಶ. ೧೮೯೯ರಲ್ಲಿ ಸ್ಥಾಪನೆಗೊಂಡ ಕೊಣ್ಣೂರ ನಾಟಕ ಕಂಪನಿ ಕರ್ನಾಟಕ ಕಂಡ ಮೊದಲ ಸುಸಜ್ಜಿತ ಹಾಗೂ ವೈಭವಯುತವಾದ ನಾಟಕ ಕಂಪನಿಯಾಗಿದೆ. ಬೆಳಗಾವಿ ಜಿಲ್ಲೆಯ ಗೋಕಾಕ ತಾಲೂಕಿನ ಕೊಣ್ಣೂರಿನಲ್ಲಿ ಈ ನಾಟಕ ಕಂಪನಿಯನ್ನು ಹುಟ್ಟು ಹಾಕಿದವರು ಬೆಳಗಾವಿಯ ಕಣಬುರ್ಗಿಯವರಾದ ಶ್ರೀ ಶಿವಮೂರ್ತಿಸ್ವಾಮಿ ಕಣಬರಗಿಮಠರು.

ಬೆಳಗಾವಿಯಲ್ಲಿ ತಮ್ಮ ಬಾಲ್ಯದ ದಿನಗಳನ್ನು ಕಳೆದ ಶಿವಮೂರ್ತಿಸ್ವಾಮಿಗಳು ಇಲ್ಲಿಯ ಮಣ್ಣಿನ ಸತ್ವವನ್ನು ಉಂಡವರು. ಬೆಳಗಾವಿಯಲ್ಲಿ ಪ್ರಾಥಮಿಕ ಶಿಕ್ಷಣವನ್ನು ಮುಗಿಸಿ ನಿರುದ್ಯೋಗಿಯಾಗಿ ಅಲೆದು ಏನಾದರೂ ಸಾಧನೆ ಮಾಡಬೇಕೆಂಬ ಛಲದೊಂದಿಗೆ ಮನೆ ತೊರೆದು ಗೋಕಾಕ ಸೇರಿ ಕನ್ನಡ ನಾಟಕ ರಂಗಭೂಮಿಯಲ್ಲಿ ಮಹತ್ ಸಾಧನೆಯನ್ನು ಮಾಡಿದರು.

ಇವರು ಸ್ಥಾಪಿಸಿದ ಕಾಡಸಿದ್ಧೇಶ್ವರ ಸಂಗೀತ ನಾಟಕ ಮಂಡಳಿಯು ಕನ್ನಡ ರಂಗಭೂಮಿಗೆ ಭದ್ರ ಅಡಿಪಾಯವನ್ನು ಒದಗಿಸಿತು. ಇಪ್ಪತ್ತು ವರ್ಷ ವಿಜೃಂಭಿಸಿದ ನಾಟಕ ಕಂಪನಿ ರಂಗಭೂಮಿಯಲ್ಲಿ ಸಂಚಲನವನ್ನುಂಟು

ಮಾಡಿತು. ಪ್ರಥಮವಾಗಿ ಚಲಿಸುವ ರಂಗಮಂಚವನ್ನು ಅಳವಡಿಸಿ, ಪ್ರಥಮವಾಗಿ ವಿದ್ಯುದ್ದೀಪಗಳನ್ನು ಅಳವಡಿಸಿ ಪ್ರಥಮವಾಗಿ ಸ್ತ್ರೀಯರನ್ನು ರಂಗಮಂಚದ ಮೇಲೆ ತಂದು ಒಂದರ್ಥದಲ್ಲಿ ಕನ್ನಡದ ಪ್ರಥಮ ವೃತ್ತಿಪರ ಕಂಪನಿಯಾಗಿ ರೂಪಗೊಂಡಿತು.

ಶಿವಮೂರ್ತಿಸ್ವಾಮಿಗಳು ಕೇವಲ ಬಣ್ಣವನ್ನು ಬಳಿದುಕೊಂಡು ನಾಟಕಗಳನ್ನಷ್ಟೇ ಮಾಡುತ್ತಿರಲಿಲ್ಲ. ಒಬ್ಬ ದಿಟ್ಟ ವಾಗ್ಮಿಯಾಗಿದ್ದರು. ನಾಟಕಕ್ಕೆ ಏನಾದರೂ ಕುಂದು ಬಂದರೆ ಅದನ್ನು ಧೈರ್ಯದಿಂದ ಎದುರಿಸುತ್ತಿದ್ದರು. ಇಂತಹ ಒಂದು ಪ್ರಸಂಗ ಬೆಳಗಾವಿಯಲ್ಲಿ ನಡೆಯಿತು. ಬೆಳಗಾವಿಯಲ್ಲಿ ಇವರ ಕಂಪನಿ ನಾಟಕಗಳನ್ನು ಆಡುವ ಸಂದರ್ಭದಲ್ಲಿ ಸಾಮಾಜಿಕವಾದ ಪ್ರತಿರೋಧ ಬಂದಿತು. ಕಂಪನಿಯ ಮುಖ್ಯವಾದ ನಾಟಕ 'ಬಸವೇಶ್ವರ' ಬೆಳಗಾವಿಯಲ್ಲಿ ವೈಭವದಿಂದ ನಡೆದಿತ್ತು. ಪ್ರತಿದಿನವೂ ಕೈತುಂಬ ಉತ್ಪನವಾಗುತ್ತಿತ್ತು. ದೂರದ ಹಳ್ಳಿಗಳಿಂದಲೂ ನಾಟಕಗಳನ್ನು ನೋಡಲು ಜನರು ಧಾವಿಸಿ ಬರತೊಡಗಿದ್ದರು. ಈ ಸಂದರ್ಭದಲ್ಲಿ ಬ್ರಾಹ್ಮಣ ಸಮುದಾಯದ ಜನರು ಈ ನಾಟಕದಲ್ಲಿ ನಮ್ಮ ಸಮಾಜದ ಅವಹೇಳನವನ್ನು ಮಾಡಲಾಗಿದೆ. ಅದಕ್ಕಾಗಿ ಈ ನಾಟಕವನ್ನು ನಿಷೇಧಿಸಬೇಕೆಂದು ಇಲ್ಲದಿದ್ದರೆ ಬೆಳಗಾವಿಯಲ್ಲಿ ಮತೀಯ ಗಲಭೆಯಾಗತ್ತವೆ ಎಂದು ಆಗಿನ ಬೆಳಗಾವಿ ಕಲೆಕ್ಟರಾದ ಬ್ರೆಂಡನ್ ಎಂಬುವವರಿಗೆ ದೂರು ಕೊಟ್ಟರು. ಆಗ ಕಲೆಕ್ಟರರ ಆಪ್ತ ಸಹಾಯಕ ಬ್ರಾಹ್ಮಣನಾಗಿದ್ದನು. ಇದರಿಂದ ನಾಟಕದ ಮೇಲೆ ನಿರ್ಬಂಧ ಹೇರಲಾಯಿತು. ನಾಟಕ ಕಂಪನಿಗೆ ಮೂಲ ಆದಾಯವನ್ನು ನೀಡುವ ಬಸವೇಶ್ವರ ಮತ್ತು 'ಶನಿಪ್ರಭಾವ' ಈ ಎರಡೂ ನಾಟಕಗಳು ಪ್ರಯೋಗಕ್ಕೆ ರದ್ದಾದವು. ಇದರಿಂದ ಕಂಪನಿಗೆ ಆರ್ಥಿಕವಾಗಿ ತೊಂದರೆ ಉಂಟಾಗತೊಡಗಿತು. ಆಗ ಶಿವಮೂರ್ತಿಸ್ವಾಮಿಗಳು ನೇರವಾಗಿ ಧಾರವಾಡ ಕಲೆಕ್ಟರರಿಗೆ ಅರ್ಜಿಯನ್ನು ಸಲ್ಲಿಸಿ ಸ್ವತಃ ತಾವೇ ವಾದವನ್ನು ಮಾಡಿದರು. ಇವರ ವಾದವನ್ನು ಕೇಳಿ ಆಶ್ಚರ್ಯಗೊಂಡ ವೇಲ್ಸ ಕಲೆಕ್ಟರರು ಒಂದು ಪರಿಹಾರವನ್ನು ನೀಡಿದರು. ಅದೆಂದರೆ ನಾಟಕದ ಹೆಸರನ್ನು ಬದಲಾಯಿಸಿ ನಾಟಕವನ್ನು ಮುಂದುವರಿಸಲು ಅನುಮತಿ ಕೊಟ್ಟರು. ಇಷ್ಟಕ್ಕೆ ಸಮಾಧಾನಗೊಳ್ಳದ ಸ್ವಾಮಿಗಳು ಮುಂಬೈಗೆ ಹೋಗಿ ಅಲ್ಲಿಯ ಗವ್ಹರ್ನರರನ್ನು ಕಂಡು ಇದ್ದ ಪರಿಸ್ಥಿತಿಯನ್ನು ವಿವರಿಸಿದರು. ಆಗ ಗವ್ಹರ್ನರರು ಕಲೆಕ್ಟರನ ಆಜ್ಞೆಯನ್ನು ರದ್ದುಪಡಿಸಿದರಲ್ಲದೆ ಬೆಳಗಾವಿ ಕಲೆಕ್ಟರ ಕಚೇರಿಗೆ ಯಾವಾಗಲೂ ಈ ಜಾತಿಯ ಆಪ್ತ ಸಹಾಯಕರನ್ನು ಅಧಿಕಾರಿಯನ್ನು ಇಡಬಾರದೆಂದೂ ಆಜ್ಞೆ ಮಾಡಿದರು.[೨೨] ಇವರಿಂದ ಬೆಳಗಾವಿಯಲ್ಲಿ ಅವರ ಆಟಗಳು ಸುಗಮವಾಗಿ ಸಾಗಿದವು.

ಕ್ರಿ. ಶ. ೧೯೧೦ಳ ಜೂನ್ ತಿಂಗಳಲ್ಲಿ ಕೊಣ್ಣೂರು ನಾಟಕ ಕಂಪನಿ ಮತ್ತೆ ಬೆಳಗಾವಿಗೆ ಆಗಮಿಸಿತು. ಬೆಳಗಾವಿಯ ನಿಳುಬಾನ ಥೇಟರದಲ್ಲಿ ನಾಟಕಗಳ ಪ್ರದರ್ಶನ ಏರ್ಪಟ್ಟಿತು. ಆಗ 'ಹರಿಶ್ಚಂದ್ರ' ನಾಟಕ ತುಂಬ ಪ್ರಸಿದ್ಧಿಯನ್ನು ಪಡೆದುಕೊಂಡಿತ್ತು. ಬೆಳಗಾವಿಯ ಎಲ್ಲ ಭಾಷಿಕ, ಧರ್ಮದ ಜನರು ನಾಟಕ ನೋಡಲು ಆಗಮಿಸತೊಡಗಿದರು. ನಗರದ ಪ್ರತಿಷ್ಠಿತರೆಲ್ಲ ನಾಟಕ ನೋಡಿ ಮೆಚ್ಚಿಕೊಂಡರು. ಈ ಸಂದರ್ಭದಲ್ಲಿ ರಾವಸಾಹೇಬ

ರುದ್ರಗೌಡರು, ಶಿರಸಂಗೀಕರ್, ವಂಟಮುರಿಕರ್, ಬಾಂದೇವಾಡ ದೇಸಾಯರು, ತಲ್ಲೂರಕರ್ ಮೊದಲಾದ ಗಣ್ಯರೆಲ್ಲ ಹರಿಶ್ಚಂದ್ರ ನಾಟಕವನ್ನು ನೋಡಿ ಪ್ರಶಂಸಿಸಿದರು.[೨೪] ಅಂದಿನ ದಿನದ ಪ್ರಾಪ್ತಿ ೮೦ ರೂಪಾಯಿಗಳಾಗಿತ್ತು.

ಬೆಳಗಾವಿಯಲ್ಲಿ ಹಲವಾರು ಬಾರಿ ಕ್ಯಾಂಪ್ ಹೂಡಿದ ಕೊಣ್ಣೂರ ನಾಟಕ ಮಂಡಳಿಯು 'ಹರಿಶ್ಚಂದ್ರ', 'ವಿರಾಟ ಪರ್ವ' 'ಚಂದ್ರಹಾಸ', 'ಮದನ ಮೋಹನ', 'ಸೌಭದ್ರ', 'ಶಾರದಾ', 'ಮಹಾತ್ಮಾ ಬಸವೇಶ್ವರ', 'ಶನಿಪ್ರಭಾವ','ತುಕಾರಾಮ', 'ಮೃಚ್ಛಕಟಕ', 'ಪದ್ಮಾವತಿ','ಭಕ್ತ ಪ್ರಲ್ಹಾದ' ಮುಂತಾದ ನಾಟಕಗಳು ಪ್ರದರ್ಶನಗೊಂಡವು.

'ಸೌಭದ್ರ' ಮತ್ತು 'ಶಾರದಾ' ನಾಟಕಗಳು ಮರಾಠಿ ನಾಟಕದ ಭಾಷಾಂತರಗಳಾಗಿದ್ದವು. ಈ ನಾಟಕಗಳಲ್ಲಿ ಮೂಲ ನಾಟಕದ ಪದ್ಯಗಳ ಚಾಲಿಗಳನ್ನೆ (ಸ್ವರ ರಚನೆ) ಅನುಕರಿಸಿ ಹಾಡುತ್ತಿದ್ದರಿಂದ ಬೆಳಗಾವಿಯ ಮರಾಠಿಗರನ್ನು ಈ ಎರಡು ನಾಟಕಗಳು ಹೆಚ್ಚು ಆಕರ್ಷಿಸಿದವು.

ಶಿವಮೂರ್ತಿಸ್ವಾಮಿ ಕಣಬರ್ಗಿಮಠರು ದಿಟ್ಟ ಧೈರ್ಯಶಾಲಿಯಾಗಿದ್ದರು. ಬೆಳಗಾವಿಯಲ್ಲಿ ನಾಟಕಗಳ ಪ್ರದರ್ಶನಕ್ಕೆ ಅಡ್ಡಿ ಮಾಡುವ ಮರಾಠಿಗರಿಗೆ ಅವರೆಂದೂ ಹೆದರಲಿಲ್ಲ. ಎದುರಿಸಿದರು. ಇಂತಹ ಘಟನೆ ೧೯೩೦ರ ಸುಮಾರಿನಲ್ಲಿ ಬೆಳಗಾವಿಯಲ್ಲಿ ನಡೆಯಿತು. ಬೆಳಗಾವಿಯ ಶಿವಾನಂದ ಥೇಯಟೀರಿನಲ್ಲಿ ವಾಣಿವಿಲಾಸ ನಾಟಕ ಕಂಪನಿಯ ನಾಟಕಗಳ ಪ್ರದರ್ಶನವಿತ್ತು. ಆಗ ಕೊಣ್ಣೂರ ನಾಟಕ ಕಂಪನಿಯ ಒಡೆಯರಾಗಿದ್ದ ಕಣಬರ್ಗಿಮಠರು ನಾಟಕ ನೋಡಲು ಪ್ರೇಕ್ಷಕರಾಗಿ ಬಂದಿದ್ದರು. ನಾಟಕ ಪ್ರಾರಂಭಗೊಳಿಸಲು ಪರದೆ ಎತ್ತುವ ಹೊತ್ತಿಗೆ ಯಾರೋ ಕಿಡಿಗೇಡಿಗಳು ಪರದೆಗೆ ಬೆಂಕಿ ಹಚ್ಚಿದರು. ಆ ಸಮಯದಲ್ಲಿ ಮುಂದೆ ಕುಳಿತಿದ್ದ ಕಣಬರ್ಗಿಮಠರು ಒಮ್ಮೆಲೆ ಪರದೆಯ ಹತ್ತಿರ ಜಿಗಿದು ವಿಂಗ್ ಮೇಲೆ ಹತ್ತಿ ಅಂಕಪರದೆಯ ಹಗ್ಗವನ್ನು ತುಂಡರಿಸಿದರು. ಇದರಿಂದ ಬೆಂಕಿಗೆ ಲಕ್ಷಾಂತರ ರೂಪಾಯಿ ಹಾನಿಯಾಗುವುದು ತಪ್ಪಿತು. ಇದರಿಂದ ವಾಣಿವಿಲಾಸ ಕಂಪನಿಯವರು ಹೆದರಿ ನಾಟಕ ನಿಲ್ಲಿಸಿ ಬೆಳಗಾವಿಯಿಂದ ಬೇರೆ ಕಡೆಗೆ ಕ್ಯಾಂಪ ಬದಲಾಯಿಸಬೇಕೆಂದು ನಿರ್ಧರಿಸಿದರು. ಆಗ ಕಣಬರ್ಗಿಮಠರು ಎಲ್ಲರಿಗೂ ಧೈರ್ಯ ತುಂಬಿ ನಾಟಕ ಪ್ರದರ್ಶಿಸುವಂತೆ ಹೇಳಿದರು. ಆಗ ನಾಟಕ ಪ್ರಾರಂಭಗೊಂಡಿತು.[೨೫] ಮುಂದೆ ಎರಡು ತಿಂಗಳುಗಳವರೆಗೆ ಬೆಳಗಾವಿಯಲ್ಲಿಯೇ ವಾಣಿವಿಲಾಸ ಕಂಪನಿಯು ಅಭೂತಪೂರ್ಣ ಯಶಸ್ಸನ್ನು ಪಡೆಯಿತು. ಎರಡೇ ನಾಟಕಗಳು ಸತತವಾಗಿ ಎರಡು ತಿಂಗಳುಗಳವರೆಗೆ ಪ್ರದರ್ಶನಗೊಂಡವು.

ಬೆಳಗಾವಿಯಲ್ಲಿ ಕೊಣ್ಣೂರ ಕಂಪನಿಯ ಕೊನೆಯ ಪ್ರದರ್ಶನ: ಬೆಳಗಾವಿಯ ಶಿವಾನಂದ ಥೇಟರ್‌ನಲ್ಲಿ ದಿನಾಂಕ ೧೮ ಜುಲೈ ೧೯೨೦ ರಿಂದ ಕೊಣ್ಣೂರ ಕಂಪನಿಯ ನಾಟಕಗಳ ಪ್ರದರ್ಶನ ಪ್ರಾರಂಭವಾಯಿತು. ಶನಿಪ್ರಭಾವ, ಬಸವ ವಿಜಯ, ಮನೋವಿಜಯ ಮುಂತಾದ ನಾಟಕಗಳು ಪ್ರದರ್ಶನಗೊಂಡವು. ಅಗಸ್ಟ ೯ ರಂದು ಕಂಪನಿ ಮುಚ್ಚುವ ವಿಚಾರವನ್ನು ಕಣಬರ್ಗಿಮಠರು ಪ್ರಸ್ತಾಪಿಸಿದರು. ಅಗಸ್ಟ ೧೪ ರಂದು ಕಂಪನಿಯ ಹಿರಿಯ ನಟ ರಾಚಯ್ಯಸ್ವಾಮಿ ಬೆಳವಿ ಅವರಿಗೆ ಬೆಳಗಾವಿ ನಾಗರಿಕರ ಪರವಾಗಿ ಸತ್ಕರಿಸುವ ಕಾರ್ಯಕ್ರಮವನ್ನು ಹಮ್ಮಿಕೊಂಡರು.

ಆಗ ಬೆಳಗಾವಿಯ ಗಣ್ಯನಾಗರಿಕ ಕೆ. ಬಿ. ಅದ್ರೀಶರ ಅವರ ಹಸ್ತದಿಂದ 'ಭಾರತ ಗಂಧರ್ವ' ಬಿರುದನ್ನು ಹಾಗೂ ಬಂಗಾರದ ಪದಕವನ್ನು ಕೊಟ್ಟು ಗೌರವಿಸಿದರು. ದಿನಾಂಕ ೧೬-೮-೧೯೭೦ ರಂದು ಕಂಪನಿಯ ಕೊನೆಯ ಪ್ರಯೋಗ 'ಮೃಚ್ಛಕಟಿಕ' ನಾಟಕದೊಂದಿಗಾಯಿತು. ನಾಟಕದ ಕೊನೆಯ ಸನ್ನಿವೇಶಕ್ಕೆ ಮೊದಲು ಸ್ವಾಮಿಗಳು ವೇದಿಕೆಗೆ ಬಂದು ಇಲ್ಲಿಗೆ ಕಂಪನಿಯ ರಂಗಸೇವೆ ನಿಂತಿತು ಎಂದು ಹೇಳಿ ಕಂಪನಿಗೆ ನಾಡಿನ ಜನರು ಕೊಟ್ಟ ಸಹಕಾರವನ್ನು ಸ್ಮರಿಸಿ ಕೃತಜ್ಞತೆಗಳನ್ನು ಅರ್ಪಿಸಿದರು. ಬೆಳಗಾವಿಯ ನೆಲದಲ್ಲಿ ಹುಟ್ಟಿದ ಶಿವಮೂರ್ತಿಸ್ವಾಮಿಗಳು ವೃತ್ತಿನಾಟಕ ರಂಗಭೂಮಿಯಲ್ಲಿ ದಾಖಲೆಗಳನ್ನು ನಿರ್ಮಿಸಿ ಸ್ಮರಣೀಯ ಸೇವೆಯನ್ನು ಸಲ್ಲಿಸಿ ಕೊನೆಗೆ ಬೆಳಗಾವಿಯಲ್ಲಿಯೇ ತಮ್ಮ ಕಂಪನಿಯ ಕೊನೆಯ ನಾಟಕವನ್ನು ಪ್ರದರ್ಶಿಸಿದರು. ಶಿವಮೂರ್ತಿಸ್ವಾಮಿಗಳು ನಾಟಕ ಕಂಪನಿಯ ಜೊತೆಗೆ ಉದ್ಯೋಗವನ್ನು ಸಾಮಾಜಿಕ ಕಾರ್ಯಗಳನ್ನು, ಶೈಕ್ಷಣಿಕ ಯೋಜನೆಗಳನ್ನು ಹೀಗೆ ಹಲವಾರು ವಲಯದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಬೆಳಗಾವಿಯ ಶೈಕ್ಷಣಿಕ ವಲಯದಲ್ಲಿ ಕ್ರಾಂತಿ ಮಾಡಿ ಇಂದು ಜಗತ್ತಿನ ತುಂಬ ವಿಸ್ತರಿಸಲ್ಪಟ್ಟ ಪ್ರತಿಷ್ಠಿತ ಕೆ.ಎಲ್.ಇ. ಸಂಸ್ಥೆಯ ಹುಟ್ಟಿಗೆ ಶಿವಮೂರ್ತಿಸ್ವಾಮಿಗಳು ಮೂಲ ಪ್ರೇರಣೆಯಾಗಿದ್ದರು.[೨೫] ವಿದ್ಯಾರ್ಥಿಗಳಿಗೆ ಬಹುಮಾನಗಳನ್ನು ನೀಡಿ ಪ್ರೋತ್ಸಾಹ ನೀಡುತ್ತಿದ್ದರು. ಹಲವಾರು ಸಂಘ ಸಂಸ್ಥೆಗಳಿಗೆ ದೇಣಿಗೆಯನ್ನು ನೀಡಿ ಸಾಮಾಜಿಕ ಕಾರ್ಯಗಳಲ್ಲಿ ತೊಡಗಿಸಿಕೊಂಡಿದ್ದರು.

ಕೊಣ್ಣೂರ ಕಂಪನಿಯ ಸಮಕಾಲೀನ ನಾಟಕ ಸಂಘಗಳಲ್ಲಿ ಚಿಕ್ಕೋಡಿ ಶಿವಲಿಂಗ ಸ್ವಾಮಿಗಳ ಶಿವಲಿಂಗೇಶ್ವರ ಪ್ರಾಸಾದಿಕ ನಾಟ್ಯ ಸಂಘವು ಬೆಳಗಾವಿ ಪರಿಸರದ ಮೇಲೆ ಮಹತ್ವದ ಪ್ರಭಾವವನ್ನು ಬೀರಿದೆ. ಶಿವಲಿಂಗ ಸ್ವಾಮಿಗಳು ಬೆಳಗಾವಿಯಲ್ಲಿ ಕನ್ನಡ ಭಾಷೆ, ಸಂಸ್ಕೃತಿಯ ಪ್ರಸಾರಕ್ಕೆ ಬೆಳಗಣಿಗೆಗೆ ನಾಟಕಗಳ ಮೂಲಕ ಪ್ರೇರಣೆ, ಸ್ಫೂರ್ತಿಯಾದರು. ಬೆಳಗಾವಿ ಸ್ವಾತಂತ್ರ್ಯ ಹೋರಾಟಗಾರರಲ್ಲಿ ಸ್ಫೂರ್ತಿ ನೀಡುವ ನಾಟಕಗಳನ್ನು ರಚಿಸಿ ಪ್ರದರ್ಶನಗೊಳಿಸಿದರು.

ಬಾಲ್ಯದಲ್ಲಿಯೇ ಶಿವಲಿಂಗಸ್ವಾಮಿಗಳು ಅಂದಿನ ಸುವಿಖ್ಯಾತ ನಾಟಕ ಕಂಪನಿಯಾಗಿದ್ದ ಕೊಣ್ಣೂರ ನಾಟಕ ಮಂಡಳಿಯಲ್ಲಿ ವಿವಿಧ ಭಾಗಗಳಲ್ಲಿ ದುಡಿದರಲ್ಲದೆ 'ಚಂದ್ರಮತಿ' ನಾಟಕದಲ್ಲಿ ಚಂದ್ರಮತಿಯ ಪಾತ್ರವನ್ನು ಉತ್ಕೃಷ್ಟ ರೀತಿಯಲ್ಲಿ ಅಭಿನಯಿಸಿ ಕಂಪನಿಯ ಮಾಲೀಕರಾದ ಶಿವಮೂರ್ತಿಸ್ವಾಮಿ ಕಣಬರ್ಗಿಮಠರ ಮೆಚ್ಚುಗೆ ಗಳಿಸಿದರು. ಕೊಣ್ಣೂರು ಕಂಪನಿಯಲ್ಲಿ ಸಾಕಷ್ಟು ಅನುಭವ ಪಡೆದು ೧೯೦೮ ರಲ್ಲಿ ಶಿವಲಿಂಗಸ್ವಾಮಿಗಳು ತಮ್ಮದೇ ಆದ ಸ್ವಂತ ನಾಟಕ ಕಂಪನಿಯನ್ನು ಸೋದರಳಿಯ ಬಾಬಯ್ಯ ಹಿರೇಮಠರ ಜೊತೆಗೂಡಿ ಸ್ಥಾಪಿಸಿದರು. ಬಾಬಯ್ಯ ಕಲಾಪ್ರೇಮಿಗಳಾಗಿದ್ದರಲ್ಲದೆ ಉತ್ತಮ ಹಾರ್ಮೋನಿಯಂ ವಾದಕರೂ ಆಗಿದ್ದರು. ಬಾಬಯ್ಯನವರು ತಮ್ಮ ಎಲ್ಲ ಆಸ್ತಿಪಾಸ್ತಿಗಳನ್ನು ಮಾರಾಟ ಮಾಡಿ ಬಂದ ಹಣವನ್ನೇ ನಾಟಕ ಕಂಪನಿಗಾಗಿ ತೊಡಗಿಸಿದರು. ಈ ಕಂಪನಿ ಭಕ್ತಗುಂಡಮಾರಯ್ಯ 'ಸೌಭದ್ರ' ನಾಟಕಗಳನ್ನು ಪ್ರದರ್ಶಿಸಿತೊಡಗಿತು. ಸೌಭದ್ರ ನಾಟಕದಲ್ಲಿ ಶಿವಲಿಂಗಸ್ವಾಮಿಗಳು ಶ್ರೀಕೃಷ್ಣನ ಪಾತ್ರವನ್ನು ಅಮೋಘವಾಗಿ ಅಭಿನಯಿಸಿ ಜನ ಮೆಚ್ಚುಗೆಯನ್ನು ಪಡೆದುಕೊಂಡರು.

ಬೆಳಗಾವಿಯಲ್ಲಿ 'ಪವಿತ್ರ ಖಾದಿ' ಪ್ರದರ್ಶನ : ಆರ್ಥಿಕ ಮುಗ್ಗಟ್ಟಿನಿಂದಾಗಿ ಶಿವಲಿಂಗಸ್ವಾಮಿಗಳು ತಮ್ಮ ನಾಟಕ ಕಂಪನಿಯನ್ನು ಕೆಲವು ವರ್ಷಗಳವರೆಗೆ ಮುಚ್ಚಿದರು. ಮುಂದೆ ೧೯೨೨-೨೩ ರ ಸುಮಾರಿಗೆ ಮತ್ತೆ ಕೆಲವು ಕಲಾಸಕ್ತ ಸ್ನೇಹಿತರ ಜೊತೆ ಸೇರಿ ಕಂಪನಿ ಪ್ರಾರಂಭಿಸಿ 'ಪವಿತ್ರ ಖಾದಿ' ಎಂಬ ನಾಟಕ ಬರೆದು ಸಿದ್ಧಗೊಳಿಸಿದರು. ೧೯೨೪ ರಲ್ಲಿ ಬೆಳಗಾವಿಯಲ್ಲಿ ಮಹಾತ್ಮಾ ಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನದಲ್ಲಿ 'ಪವಿತ್ರ ಖಾದಿ' ನಾಟಕವನ್ನು ಪ್ರದರ್ಶಿಸಲು ಅನುಮತಿಯನ್ನು ಕೇಳಿದರು. ಆದರೆ ಅಧಿವೇಶನದ ಸಂಘಟಕರು ಇವರ ಮನವಿಯನ್ನು ನಿರಾಕರಿಸಿ ಅಂದು ಮರಾಠಿ ನಾಟಕದ ಪ್ರದರ್ಶನಕ್ಕೆ ಅನುಮತಿಯನ್ನು ನೀಡಿದರು. ಇದರಿಂದ ಕುಪಿತಗೊಂಡ ಶ್ರೀ ಶಿವಲಿಂಗಸ್ವಾಮಿಗಳು ಅದೇ ನಾಟಕವನ್ನು ಶಿವಾನಂದ ಥಿಯೇಟರಿನಲ್ಲಿ ಪ್ರಯೋಗಿಸಿ ತಮ್ಮ ಛಲ ತೀರಿಸಿಕೊಂಡರು. ಆದರೆ ಕಂಪನಿ ಸಾಕಷ್ಟು ಆರ್ಥಿಕ ತೊಂದರೆಗೆ ಸಿಲುಕಿತು. ಇದರಿಂದ ಮಾನಸಿಕವಾಗಿ ನೊಂದುಕೊಂಡ ಶಿವಲಿಂಗಸ್ವಾಮಿಗಳು ಅದುವರೆಗೆ ತಾವು ತೊಟ್ಟುಕೊಳ್ಳುತ್ತಿದ್ದ ಖಾದಿಯನ್ನು ತ್ಯಜಿಸಿ ಅಂದಿನಿಂದ ಪರದೇಶಿ ಬಟ್ಟೆಯನ್ನು ಉಪಯೋಗಿಸತೊಡಗಿದರು.[೨೬]

'ಪವಿತ್ರ ಖಾದಿ' ಎನ್ನುವ ನಾಟಕ ಒಬ್ಬ ದೇಶಭಕ್ತನ ಮನಸ್ಸನ್ನು ಬದಲಾಯಿಸಿತು. ಖಾದಿಯು ದೇಶದ ಸ್ವಾತಂತ್ರ್ಯದ ಸಂಕೇತವಾಗಿತ್ತು. ಗಾಂಧೀಜಿಯವರು ಖಾದಿಯನ್ನು ದೇಶದ ತುಂಬೆಲ್ಲಾ ಪ್ರಚಾರಮಾಡಿದ್ದರು. ಅಂತವರ ಎದುರುಗಡೆ ಖಾದಿ ನಾಟಕವನ್ನು ಪ್ರಯೋಗಿಸಲು ಸಾಧ್ಯವಾಗದೆ ಖಾದಿಯನ್ನೇ ಸಂಪೂರ್ಣವಾಗಿ ತೊರೆಯುವಂತೆ ಮಾಡಲು ಬೆಳಗಾವಿಯ ಕಾಂಗ್ರೆಸ್ ಅಧಿವೇಶನ ಕಾರಣವಾಯಿತು.

ಶಿವಲಿಂಗ ಸ್ವಾಮಿಗಳು ಅಂದು ಕ್ರಾಂತಿಕಾರಿ ನಾಟಕಕಾರರೆಂದು ಹೆಸರಾಗಿದ್ದರು. ಅವರು ಲಾಭ-ಹಾನಿಯ ದೃಷ್ಟಿಯಿಂದ ಎಂದೂ ನಾಟಕಗಳನ್ನು ಬರೆಯಲಿಲ್ಲ. ರಾಷ್ಟ್ರೀಯ ಉದ್ದೇಶಕ್ಕಾಗಿ ಕಲಾಪ್ರೇಮಕ್ಕಾಗಿ, ಸಾಮಾಜಿಕ ಬದಲಾವಣೆಗಾಗಿ ನಾಟಕಗಳನ್ನು ಬರೆದರು, ನಿರ್ದೇಶಿಸಿದರು, ನಟಿಸಿದರು. ಹೀಗಾಗಿ ಅವರ ನಾಟಕಗಳು ಹೆಚ್ಚು ಪರಿಣಾಮಕಾರಿಯಾಗಿ ಮೂಡಿಬರುತ್ತಿದ್ದವು.

**ಸ್ವಾತಂತ್ರ್ಯ ಹೋರಾಟಗಾರರಿಗೆ ಸ್ಫೂರ್ತಿ ನೀಡಿದ ರಂಗಭೂಮಿ :** ರಾಷ್ಟ್ರಾಭಿಮಾನವನ್ನು ಪ್ರಜ್ವಲಿಸುವ ಶಿವಲಿಂಗಸ್ವಾಮಿಗಳ 'ಕಿತ್ತೂರ ಚನ್ನಮ್ಮ' ನಾಟಕ ರಂಗಭೂಮಿಯ ಮೇಲೆ ಕ್ರಾಂತಿಯನ್ನೇ ಮಾಡಿತು. ಚನ್ನಮ್ಮನನ್ನು ಕುರಿತು ರಚನೆಗೊಂಡ ಮೊದಲ ನಾಟಕ ಇದಾಗಿತ್ತು. ಬೆಳಗಾವಿ ಪ್ರದೇಶದಲ್ಲಂತೂ ಕಿತ್ತೂರ ಚನ್ನಮ್ಮ ನಾಟಕವು ಸ್ವಾತಂತ್ರ್ಯ ಹೋರಾಟಗಾರರಿಗೆ ಸ್ಫೂರ್ತಿ ನೀಡಿತು. ಆಗ ಬೆಳಗಾವಿಯು ಸ್ವಾತಂತ್ರ್ಯ ಹೋರಾಟದಲ್ಲಿ ಚಳುವಳಿಯಲ್ಲಿ ದೇಶದಲ್ಲಿಯೇ ಮಂಚೂಣಿಯಲ್ಲಿತ್ತು. ಹೀಗಾಗಿ ಈ ನಾಟಕದ ಪ್ರದರ್ಶನದಿಂದ ಹೋರಾಟ ಮತ್ತಷ್ಟು ತೀವ್ರವಾಗತೊಡಗಿತು. ನಾಟಕವನ್ನು ನೋಡಿದ ಜನರು ಪರದೇಶಿ ಬಟ್ಟೆಗಳನ್ನು ಸುಟ್ಟು ಹಾಕಿ ಗಾಂಧೀಜಿಯವರ ಸ್ವರಾಜ್ಯ ಚಳುವಳಿಗೆ ಧುಮುಕಿದರು. ಹೀಗಾಗಿ 'ಶಿವಲಿಂಗೇಶ್ವರ ನಾಟ್ಯ ಸಂಘ' ಬ್ರಿಟಿಷ ಸರಕಾರಕ್ಕೆ ಸಿಂಹಸ್ವಪ್ನವಾಗಿತ್ತು.

ಜಿಲ್ಲೆಯಾದ್ಯಂತ ಪ್ರದರ್ಶನಗೊಳ್ಳುತ್ತಿದ್ದ ಈ ನಾಟಕವು ಸ್ವಾತಂತ್ರ್ಯ ಚಳುವಳಿಯಲ್ಲಿ ದೊಡ್ಡ ಅಲೆಯನ್ನೇ ಎಬ್ಬಿಸಿತು. ನಾಟಕವನ್ನು ನೋಡಿ ಮನೆಗೆ ಹೋಗುವಾಗ ವಿದೇಶಿ ಬಟ್ಟೆಗಳನ್ನು ಸುಡುವುದು ಪೊಲೀಸ ಠಾಣೆಗಳಿಗೆ ಮುತ್ತಿಗೆ ಹಾಕುವುದು ಹಾದಿಯಲ್ಲಿದ್ದ ಸಿಂದಿ ಗಿಡಗಳನ್ನು ಕಡಿಯುವುದು ಹೀಗೆ ಉಂತಾದ ಉಗ್ರ ಚಟುವಟಿಕೆಗಳ ಹಿಂದಿರುವ ನಾಟಕದ ಪರಿಣಾಮವನ್ನು ಗುರುತಿಸಿದ ಸರಕಾರವು ಈ ನಾಟಕದ ಪ್ರಯೋಗವನ್ನೇ ರದ್ದು ಪಡಿಸಿತು. ಅಷ್ಟೇಅಲ್ಲದೆ ಐತಿಹಾಸಿಕ ವ್ಯಕ್ತಿಗಳ ಕುರಿತು ನಾಟಕಗಳನ್ನು ಆಡಬಾರದೆಂದು ಆಜ್ಞೆ ಹೊರಡಿಸಿತು. ಇದರಿಂದಾಗಿ ಹಲವಾರು ನಾಟಕ ಕಂಪನಿಗಳು ಆರ್ಥಿಕವಾಗಿ ಸಂಕಷ್ಟಕ್ಕೆ ಒಳಗಾದವು. 'ಸಂಗೊಳ್ಳಿ ರಾಯಣ್ಣ' ನಾಟಕವನ್ನು ಆಡುತ್ತಿದ್ದ ಸಂಪಗಾವಿಯ ಲೋಕಸೇವಾ ಸಂಗೀತ ನಾಟಕ ಮಂಡಳಿ, 'ನರಗುಂದ ಮುತ್ತಿಗೆ' ನಾಟಕವನ್ನು ಆಡುತ್ತಿದ್ದ ಭಾಗ್ಯೋದಯ ಕಂಪನಿ. 'ಕಿತ್ತೂರ ಚನ್ನಮ್ಮ' ನಾಟಕವನ್ನು ಆಡುತ್ತಿದ್ದ ವೈಭವ ಶಾಲಿ ಕಂಪನಿ, 'ರಾಜದ್ರೋಹ' ನಾಟಕವನ್ನು ಆಡುತ್ತಿದ್ದ ಶಾರದಾ ಸಂಗೀತ ನಾಟಕ ಮಂಡಳಿ ಮುಂತಾದ ಕಂಪನಿಗಳು ಬ್ರಿಟಿಷರ ದಮನ ನೀತಿಯನ್ನು ಎದುರಿಸಿ ತಮ್ಮ ಅಸ್ತಿತ್ವ ಉಳಿಸಿಕೊಳ್ಳಲು ಪರದಾಡಬೇಕಾಯಿತು.

ಈ ಸಂದರ್ಭದಲ್ಲಿ ಕೆಲವು ನಾಟಕ ಕಂಪನಿಗಳು ಅಂಥ ನಾಟಕಗಳ ಹೆಸರು ಬದಲಿಸಿ ಆಡತೊಡಗಿದರು. ನರಗುಂದ ಮುತ್ತಿಗೆ ನಾಟಕವು 'ಮಾಲಕಮ್ ವಿಜಯ' ನಾಟಕವೆಂಬ ಹೆಸರು ಪಡೆದು ಕೆಲವೊಂದು ಸನ್ನಿವೇಶಗಳನ್ನು ಕೈಬಿಟ್ಟರು.

ಚಲೇಜಾವ್ ಚಳುವಳಿಯಲ್ಲಿ ಭಾಗವಹಿಸಿದ್ದ ಬೆಳಗಾವಿಯ ಭೂಗತ ಚಳುವಳಿಗಾರರಿಗೆ ನಾಟಕ ಕಂಪನಿಗಳು ಆಸರೆಯ ತಾಣಗಳಾಗಿದ್ದವು. ಚಳುವಳಿಗಾರರು ಜೈಲು ಸೇರಿದಾಗ ಅವರ ಕುಟುಂಬಗಳಿಗೆ ಆರ್ಥಿಕ ಸಹಾಯವನ್ನೂ ನೀಡುತ್ತಿದ್ದರು. ಚಳುವಳಿಗಾರರ ಸುಳಿವು ಗೊತ್ತಾಗಿ ಪೊಲೀಸರು ಕಂಪನಿಗೆ ಬಂದರೆ ಆಗ ಚಳುವಳಿಗಾರರೆಂದು ಗೊತ್ತಾಗದಂತೆ ಅವರ ಮುಖಕ್ಕೆ ಬಣ್ಣವನ್ನು ಬಳೆಯುತ್ತಿದ್ದರು. ಪೋಲಿಸರು ಅವರನ್ನು ನಾಟಕ ತಂಡದವರು ಎಂದು ತಿಳಿದು ಹೋಗುತ್ತಿದ್ದರು. ಒಂದು ವೇಳೆ ಪೊಲೀಸರಿಗೆ ಸಂಶಯ ಬಂದು ಅಲ್ಲಿಯೇ ಉಳಿದರೆ ಚಳುವಳಿಗಾರರಿಗೆ ಬೇರೆ ಬೇರೆ ವೇಷದ ಮೇಕಪ್ ಮಾಡಿ, ಪ್ರೇಕ್ಷಕರಲ್ಲಿ ಸೇರಿಸಿಬಿಡುತ್ತಿದ್ದರು. ಪ್ರಸಂಗ ಬಂದರೆ ರಂಗಭೂಮಿಯಲ್ಲಿ ಚಿಕ್ಕ ಪುಟ್ಟ ಪಾತ್ರಗಳನ್ನು ಕೊಡುತ್ತಿದ್ದರು. ಚಳುವಳಿಗಾರರಿಂದಾಗಿ ಕಂಪನಿಯ ಲೈಸನ್ಸ್ ರದ್ದಾಗುತ್ತಿತ್ತು. ಆದರೂ ಸ್ವಲ್ಪವೂ ಹೆದರದೆ, ಚಳುವಳಿಗಾರರಿಗೆ ಸಹಾಯ ಮಾಡುತ್ತಿದ್ದರು. ಈ ಕಂಪನಿಗಳ ಸಹಾಯದಿಂದಲೇ ಬೆಳಗಾವಿಯು ಹೋರಾಟದ ಕೇಂದ್ರವಾಗಿ ರೂಪಗೊಳ್ಳಲು ಸಹಾಯವಾಯಿತು. ಬೆಳಗಾವಿಯಲ್ಲಿ ಪ್ರಯೋಗಗೊಂಡ ನಾಟಕ ಕಂಪನಿಗಳಲ್ಲಿ ಗರುಡ ಸದಾಶಿವರಾಯರ 'ದತ್ತಾತ್ರೇಯ ಸಂಗೀತ ನಾಟಕ ಮಂಡಳಿ' ಮಹತ್ವದ್ದಾಗಿದೆ. ಕನ್ನಡ ಭಾಷೆ, ಸಂಸ್ಕೃತಿ, ಇತಿಹಾಸ, ಪರಂಪರೆಯನ್ನು ತಿಳಿಸಿಕೊಡುವ ಮಹತ್ವದ ನಾಟಕಗಳನ್ನು ಪ್ರದರ್ಶಿಸಿ ಮರಾಠಿ ರಂಗಭೂಮಿಯ ಹೆಸರಾಂತ ನಾಟಕಕಾರರು ಅಚ್ಚರಿಪಡುವಂತಹ ಅಭಿನಯವನ್ನು ನೀಡಿದ್ದಾರೆ.

ಗರುಡ ಸದಾಶಿವರಾಯರು ಮೂರು ನಾಲ್ಕು ಬಾರಿ ತಮ್ಮ ತಂಡವನ್ನು ಕಟ್ಟಿಕೊಂಡು ಬೆಳಗಾವಿಗೆ ಬಂದಿದ್ದರು. ಬೆಳಗಾವಿಯ ಶಿವಾನಂದ ಥೇಟರಿನಲ್ಲಿ 'ಚವತಿಯ ಚಂದ್ರ' ಎಂಬ ನಾಟಕದ ಪ್ರದರ್ಶನ ಸಂದರ್ಭದಲ್ಲಿ ಮರಾಠಿಯ ಸುಪ್ರಸಿದ್ಧ ನಾಟಕಕಾರ ನರಸಿಂಹ ಚಿಂತಾಮಣಿ ಕೇಳ್ಕರ್ ನಾಟಕ ನೋಡಲು ಆಗಮಿಸಿದ್ದರು. ನಾಟಕವನ್ನುನೋಡಿದ ಕೇಳ್ಕರರು ಕನ್ನಡ ರಂಗಭೂಮಿಯ ಪ್ರಗತಿಯನ್ನು ಕಂಡು ಸಂತುಷ್ಟರಾದರು. ಅಲ್ಲದೆ ತಮ್ಮ ಉಪನ್ಯಾಸದಲ್ಲಿ "ನನಗೆ ಕನ್ನಡ ಅಷ್ಟಾಗಿ ತಿಳಿಯುವುದಿಲ್ಲ, ಆದರೆ ಭಾಷೆಯನ್ನು ಮೀರಿದ ನಟರ ಅಭಿನಯ ನಾಟಕವನ್ನು ಪ್ರಭಾವಶಾಲಿಯಾಗಿ ನನಗೆ ಅರ್ಥೈಸಿಕೊಟ್ಟಿತು. ನಾಟಕ ಪ್ರಯೋಗದಲ್ಲಿ ಅಭಿನಯದ ಪಾತ್ರ ಎಂಥ ಪ್ರಭಾವಕಾರಿಯಾದದ್ದು ಎಂಬುದು, ನಾಟಕವೆಂದರೆ ಕೇವಲ ಸಂಭಾಷಣೆಯಲ್ಲ ಅಭಿನಯ ಎಂಬುದು ಗರುಡರ ನಾಟಕದಿಂದ ನನಗಿಂದು ಮನದಟ್ಟಾಗುವಂತಾಯಿತು ಎಂದು ಹೇಳಿದರಲ್ಲದೆ ಗರುಡ ಸದಾಶಿವರಾಯರನ್ನು 'ಕರ್ನಾಟಕದ ಸವ್ಯಸಾಚಿಯಾದ ವ್ಯಕ್ತಿ' ಎಂದೂ ಹೃದಯ ತುಂಬಿ ಹೊಗಳಿದರು.[೨೨] ಮಂಡಳಿಯನ್ನು ತೆಗೆದುಕೊಂಡು ಪುಣಾ ನಗರಕ್ಕೊಮ್ಮೆ ಭೆಟ್ಟಿ ಕೊಡುವಂತೆ ಗರುಡರನ್ನು ವಿನಂತಿಸಿದರು. ಕನ್ನಡ ಕಲೆಯ ಮಹತ್ವವನ್ನು ಮರಾಠಿಗರು ನೋಡಿ ಸಂತುಷ್ಟರಾಗುವುದರಲ್ಲಿ ಸಂಶಯವಿಲ್ಲವೆಂದೂ ಹೇಳಿದರು. ಈ ಸಂದರ್ಭದಲ್ಲಿ ಬೆಳಗಾವಿಯ ಸ್ವಾತಂತ್ರ್ಯ ಗಂಗಾಧರರಾವ್ ದೇಶಪಾಂಡೆಯವರೂ ಹಾಜರಿದ್ದರು. ಅವರೂ ಗರುಡರ ನಾಟಕವನ್ನು ಅಭಿನಯವನ್ನು ಮೆಚ್ಚಿಕೊಂಡರು.ಬೆಳಗಾವಿಯಲ್ಲಿ ೧೯೨೪ ರ ನವೆಂಬರ್ ೧೬ ರಂದು ತಮ್ಮ ನಾಟಕ ಮಂಡಳಿಯ ಐದನೆಯ ವಾರ್ಷಿಕೋತ್ಸವವನ್ನು ಅತ್ಯಂತ ವೈಭವದಿಂದ ಆಚರಿಸಿಕೊಂಡರು. ಈ ಸಂದರ್ಭದಲ್ಲಿ ಬೆಳಗಾವಿಯ ಜನರ ಪ್ರೀತಿ ಆದರಗಳನ್ನು ಸ್ಮರಿಸಿಕೊಂಡರು.

೧೧ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಸಂದರ್ಭದಲ್ಲಿ ಗರುಡ ಸದಾಶಿವರಾಯರಿಗೆ ಅದ್ದೂರಿಯಾದ ಸನ್ಮಾನವನ್ನು ನೀಡಿ 'ಕರ್ನಾಟಕ ನಾಟಕಾಲಂಕಾರ' ಎಂಬ ಪ್ರಶಸ್ತಿಯನ್ನು ನೀಡಿ ಗೌರವಿಸಲಾಯಿತು.

ಬೆಳಗಾವಿಯಲ್ಲಿ ಗರುಡರ ಹಲವಾರು ನಾಟಕಗಳು ಯಶಸ್ವಿಯಾಗಿ ಪ್ರಯೋಗಗೊಂಡವು. ಚವತಿಯ ಚಂದ್ರ, ಅಜ್ಞಾತವಾಸ, ಅನಸೂಯಾ, ದ್ರೌಪದಿ ಸ್ವಯಂವರ, ಮಾಜಾ ಬಜಾರ, ಸತ್ಯ ಹರಿಶ್ಚಂದ್ರ, ಸಿರಸಂಗಿ ದೇಸಾಯರು, ವಿಷಮ ವಿವಾಹ, ಪ್ರಭಾವತಿ, ಅಕ್ಕಮಹಾದೇವಿ, ತುಕಾರಾಮ, ಮಹಾವಿಭೂತಿ ಬಸವಣ್ಣ ಹೀಗೆ ಪೌರಾಣಿಕ, ಐತಿಹಾಸಿಕ, ಸಾಮಾಜಿಕ ನಾಟಕಗಳನ್ನು ಪ್ರದರ್ಶಿಸಿದರು. ಬೆಳಗಾವಿಯಲ್ಲಿ ಅಂದು ಪೌರಾಣಿಕ ನಾಟಕಗಳಿಗೇ ಹೆಚ್ಚು ಜನರು ಆಕರ್ಷಿತರಾಗಿದ್ದರು. ಮಹಿಳೆಯರು ಈ ನಾಟಕಗಳಿಗೆ ಮಾತ್ರ ಬರುತ್ತಿದ್ದರು.

ಕರ್ನಾಟಕದ ವೃತ್ತಿರಂಗಭೂಮಿಯಲ್ಲಿ ನಾಟ್ಯಭೂಷಣ ಏಣಗಿ ಬಾಳಪ್ಪನವರದು ದೊಡ್ಡ ಹೆಸರು. ಚಿಕ್ಕೋಡಿ ಶಿವಲಿಂಗಸ್ವಾಮಿಗಳ ಗರಡಿಯಲ್ಲಿ ಬೆಳೆದು ಗರುಡ ಸದಾಶಿವರಾಯರ ಸಾಹಿತ್ಯ, ಅಭಿನಯಗಳಿಂದ ಪ್ರೇರಿತರಾಗಿ ಕಲಾವೈಭವ ನಾಟ್ಯ ಸಂಘವನ್ನು ಸ್ಥಾಪಿಸಿ ಕನ್ನಡಿಗರ ಮನಸೂರೆ ಮಾಡಿದರು.

ಏಣಗಿ ಬಾಳಪ್ಪನವರು ಬೆಳಗಾವಿಯ ಬಗೆಗೆ ವಿಶೇಷವಾದ ಆಕರ್ಷಣೆ ಹೊಂದಿದ್ದರು. ಹೀಗಾಗಿಯೇ ಅವರ ನಾಟಕಗಳಿಗೆ ಬೆಳಗಾವಿಯಲ್ಲಿ ವಿಶೇಷವಾದ ಸ್ಥಾನಮಾನಗಳು ದೊರೆತಿವೆ. ಅತ್ಯಂತ ಪ್ರೀತಿ ಆದರ, ಭಕ್ತಿ ಅಭಿಮಾನದಿಂದ ಬೆಳಗಾವಿಯ ಕನ್ನಡಿಗರು ಏಣಗಿ ಬಾಳಪ್ಪನವರನ್ನು ಕಂಡಿದ್ದಾರೆ. ಹೀಗಾಗಿಯೇ ತಮ್ಮ ನಿವೃತ್ತಿಯ ದಿನಗಳನ್ನು ಬೆಳಗಾವಿಯಲ್ಲಿಯೇ ಕಳೆಯುತ್ತಿದ್ದಾರೆ. ಅವರು ಬೆಳಗಾವಿಯಲ್ಲಿ ವಾಸ್ತವ್ಯವಿರುವುದರಿಂದಲೇ ಬೆಳಗಾವಿಯ ನಾಟಕ ರಂಗಕ್ಕೆ ಕ್ರಿಯಾಶೀಲತೆ ಬಂದಿದೆ. ದಿನನಿತ್ಯ ಒಂದಿಲ್ಲೊಂದು ನಾಟಕದ ಚಟುವಟಿಕೆಗಳು ಬೆಳಗಾವಿಯಲ್ಲಿ ನಡೆಯುತ್ತಲೇ ಇರುತ್ತವೆ.

ಬೆಳಗಾವಿಯಲ್ಲಿ ಏಣಗಿ ಬಾಳಪ್ಪನವರ ನಾಟಕಗಳು ಮಹತ್ವದ ಪರಿಣಾಮಗಳನ್ನುಂಡು ಮಾಡಿವೆ. 'ಕಿತ್ತೂರ ಚೆನ್ನಮ್ಮ', 'ಜಗಜ್ಯೋತಿ ಬಸವೇಶ್ವರ', 'ಶಾಲಾ ಮಾಸ್ತರ', 'ಕುಂಕುಮ', 'ದೇವರ ಮಗು', 'ಮಾವ ಬಂದ್ನಪೋ ಮಾವ', 'ಕರ್ನಾಟಕ ಏಕೀಕರಣ', 'ಗೋರಾಕುಂಬಾರ', 'ತಾಯಿ ಕರಳು', 'ಅಕ್ಕಮಹಾದೇವಿ 'ಮುಂತಾದ ನಾಟಕಗಳು ಬೆಳಗಾವಿಯಲ್ಲಿ ಪ್ರದರ್ಶನಗೊಂಡು ಜನರ ಮೆಚ್ಚುಗೆಗೆ ಪಾತ್ರವಾಗಿವೆ.

೧೯೪೧ ರಲ್ಲಿ ಕಟಕೋಳದಲ್ಲಿ 'ವೈಭವಶಾಲಿ ನಾಟಕ ಸಂಘ'ವನ್ನು ಖ್ಯಾತ ನಾಟಕಕಾರ ಎಲ್.ಎಸ್. ಇನಾಮದಾರರವರ ಜೊತೆಗೆ ಕೂಡಿಕೊಂಡು ಪ್ರಾರಂಭಿಸಿದರು. ಮುಂದೆ ೧೯೪೭ ರಲ್ಲಿ ಕಲಾವೈಭವ ನಾಟ್ಯ ಸಂಘ ಬೆಳಗಾವಿ (ಕರ್ನಾಟಕ) ಎಂಬ ಹೆಸರಿನಲ್ಲಿ ಸ್ವತಂತ್ರ ಮಂಡಳಿಯನ್ನು ಕಟ್ಟಿದರು. ಅನುಭವಿ ಕಲಾವಿದರನ್ನು ಕಟ್ಟಿಕೊಂಡು ಅಭಿನಯ ಪ್ರಧಾನ ನಾಟಕಗಳನ್ನು ಕಲಾವೈಭವದ ಮೂಲಕ ಪ್ರದರ್ಶಿಸಿದ ಬಾಳಪ್ಪನವರು ಬಹು ಬೇಗನೆ ಕರ್ನಾಟಕದ ತುಂಬೆಲ್ಲಾ ಪ್ರಸಿದ್ಧಿ ಹೊಂದಿದರು. ಬೆಳಗಾವಿಯಲ್ಲಿ ಗಡಿ ಸಮಸ್ಯೆ ಪ್ರಬಲವಾಗಿದ್ದ ಕಾಲದಲ್ಲಿ ಬೆಳಗಾವಿಯಲ್ಲಿ ಕನ್ನಡ ನಾಟಕಗಳನ್ನು ಧೈರ್ಯದಿಂದ ಪ್ರದರ್ಶಿಸಿದರು.[೨] ಬಾಳಪ್ಪನವರು ಕರ್ನಾಟಕದ ರಾಜ್ಯೋತ್ಸವದ ಸಂದರ್ಭದಲ್ಲಿಯೂ (ನವಂಬರ ೧ ರಂದು) ಧೈರ್ಯದಿಂದ ನಾಟಕಗಳನ್ನು ಆಡುತ್ತಿದ್ದರು. ನವಂಬರ ಒಂದರಂದು ಬೆಳಗಾವಿಯಲ್ಲಿ ಕರಾಳ ದಿನವನ್ನು ಆಚರಿಸುತ್ತಾರೆ. ಇಂತಹ ವಾತಾವರಣದಲ್ಲಿ ಬೆಳಗಾವಿ ಕನ್ನಡಿಗರಿಗೆ ಏಣಗಿ ಬಾಳಪ್ಪನವರ ನಾಟಕಗಳು ಆತ್ಮಸ್ಥೈರ್ಯವನ್ನು ತುಂಬುತ್ತ ಬಂದಿವೆ. ಕನ್ನಡಿಗರಲ್ಲಿ ಅಭಿಮಾನ ಮೂಡಿ ಬರುವಂತೆ ಪ್ರೇರಣೆ ನೀಡಿವೆ.

ಬಾಳಪ್ಪನವರ ನಾಟಕಗಳ ಪ್ರಭಾವ ದೊಡ್ಡದು. ಬಾಳಪ್ಪನವರು ಅಭಿನಯಿಸಿದ 'ಕಿತ್ತೂರ ಚನ್ನಮ್ಮ' ನಾಟಕವನ್ನು ನೋಡಿದ ನಾಗನೂರು ಊರಿನ ಮಹಿಳೆಯೊಬ್ಬಳು ಬ್ರಿಟಿಷ ಕಲೆಕ್ಟರನನ್ನು ತನ್ನ ಪಾದರಕ್ಷೆಯಿಂದ ಹೊಡೆದಳು.[೩] ಚನ್ನಮ್ಮನ ನಾಡಿನವಳಾದ ಆ ಮಹಿಳೆಯ ಮನಸ್ಸಿನ ಮೇಲೆ ಬ್ರಿಟಿಷರ ದೌರ್ಜನ್ಯ ಮನಸ್ಸಿಗೆ ನೋವನ್ನುಂಟು ಮಾಡಿತ್ತು. ಅವಳಲ್ಲಿ ದೇಶದ ಬಗೆಗೆ ಅಭಿಮಾನ ಮೂಡಿತ್ತು. ನಾಟಕ ಎನ್ನುವ ಮಾಧ್ಯಮ ಸಾಮಾನ್ಯ ಜನರಲ್ಲಿ ಅರಿವನ್ನು ಮೂಡಿಸುತ್ತದೆ ಎನ್ನುವುದಕ್ಕೆ ಈ ಘಟನೆ ಸಾಕ್ಷಿಯಾಗಿದೆ.

ಬೆಳಗಾವಿಯಲ್ಲಿ ನಾಟಕ ಪ್ರದರ್ಶನಕ್ಕೆ ದೊಡ್ಡದಾದ ಪೈಪೋಟಿಯೇ ಏರ್ಪಟ್ಟ ಪ್ರಸಂಗಗಳೂ ನಡೆದಿವೆ. ಏಕಕಾಲಕ್ಕೆ ಎರಡೆರಡು ಕಂಪನಿಗಳು ಬೆಳಗಾವಿಯಲ್ಲಿ ನಾಟಕಗಳ ಪ್ರದರ್ಶನ ಕೈಗೊಂಡು ಪ್ರೇಕ್ಷಕರನ್ನು ಆಕರ್ಷಿಸಲು ಹಲವಾರು ತಂತ್ರಗಳನ್ನು ರೂಪಿಸುತ್ತಿದ್ದರು. ಊರಲ್ಲೆಲ್ಲಾ ಪ್ರಚಾರ, ಗಣ್ಯವ್ಯಕ್ತಿಗಳಿಗೆ ಗೌರವದ ಆತಿಥ್ಯ–ಹೀಗೆ ತಮ್ಮ ನಾಟಕಗಳಿಗೆ ಜನರನ್ನು ಆಕರ್ಷಿಸುತ್ತಿದ್ದರು. ಕೆಲವು ಸಲ ಪ್ರವೇಶ ದರದಲ್ಲಿ ಕಡಿಮೆ ಮಾಡಿ ಜನರನ್ನು ಸೆಳೆಯುತ್ತಿದ್ದರು. ಚಿಕ್ಕೋಡಿ ಶಿವಲಿಂಗಸ್ವಾಮಿಗಳ ನಾಟಕ ಕಂಪನಿ ಬೆಳಗಾವಿಗೆ ಬಂದು ಶಿವಾನಂದ ರಂಗಮಂದಿರದಲ್ಲಿ ನಾಟಕಗಳನ್ನು ಆಡುತ್ತಿತ್ತು. ಇದೇ ಸಂದರ್ಭದಲ್ಲಿ ಹಲಗೇರಿ ನಾಟಕ ಕಂಪನಿ ಬೆಳಗಾವಿಗೆ ಬಂದಿತು. ಆಗ ಶಿವಾನಂದ ರಂಗಮಂದಿರದ ಮಾಲೀಕರಿಗೆ ಹೆಚ್ಚಿನ ಬಾಡಿಗೆಯನ್ನು ಕೊಡುವುದಾಗಿ ಹಲಗೇರಿ ಕಂಪನಿ ಮಾಲಿಕರು ತಿಳಿಸಿದಾಗ ಶಿವಲಿಂಗಸ್ವಾಮಿಗಳಿಗೆ ಬಿಡುಗಡೆಯ ನೋಟಿಸು ನೀಡಿದರು.[೫] ಹೀಗಾಗಿ ಅನಿವಾರ್ಯವಾಗಿ ಶಿವಲಿಂಗಸ್ವಾಮಿಗಳು ನಗರದ ಮಧ್ಯದಲ್ಲಿದ್ದ ಲಕ್ಷ್ಮೀ ನಾಟಕ ಮಂದಿರಕ್ಕೆ (ಈಗ 'ಹಂಸ' ಚಿತ್ರ ಮಂದಿರವಾಗಿದೆ) ಸ್ಥಳಾಂತರಗೊಂಡರು. ಇದರಿಂದ ಸ್ವಾಭಿಮಾನ ಕೆರಳಿದ ಸ್ವಾಮಿಗಳು ಪ್ರವೇಶ ದರದಲ್ಲಿ ಹೂಡಿದ ಸ್ಪರ್ಧೆಗೆ ಹಲಗೇರಿ ಕಂಪನಿ ಸೋಲಬೇಕಾಯಿತು. ಹಲಗೇರಿ ಕಂಪನಿಯಲ್ಲಿ ನೆಲ ೮ ಆಣೆಯಾದರೆ ಶಿವಲಿಂಗ ಸ್ವಾಮಿಗಳ ಕಂಪನಿಯಲ್ಲಿ ಎರಡು ಆಣೆ. ಇದರಿಂದ ಹಲಗೇರಿ ಕಂಪನಿಗೆ ಯಾರೂ ಹೋಗದಾದರು. ಇದರಿಂದ ಬೆಳಗಾವಿಯಿಂದ ನಿರ್ಗಮಿಸಬೇಕಾಯಿತು. ದರ ಕಡಿಮೆ ಇದ್ದುದರಿಂದ ಶಿವಲಿಂಗಸ್ವಾಮಿಗಳ ಎಲ್ಲ ನಾಟಕಗಳು ಬೆಳಗಾವಿಯಲ್ಲಿ ಜನಪ್ರಿಯವಾದವು.

'ಕಲಾ ವೈಭವ ನಾಟ್ಯ ಸಂಘ' ಬೆಳಗಾವಿ (ಕರ್ನಾಟಕ) ಎಂಬ ಹೆಸರು ಬೆಳಗಾವಿ ಭಾಗದಲ್ಲಿ ಸಾಕಷ್ಟು ಗದ್ದಲವನ್ನುಂಟು ಮಾಡಿತ್ತು. ಇನ್ನೂ ಕರ್ನಾಟಕ ಏಕೀಕರಣವಾಗಿರದ ದಿನಗಳಲ್ಲಿ ಅಖಂಡ ಕರ್ನಾಟಕದ ಕನಸನ್ನು ಕಂಡಿದ್ದ ಏಣಗಿ ಬಾಳಪ್ಪನವರು ಎಷ್ಟೇ ಬೆದರಿಕೆ, ತೊಂದರೆಗಳು ಬಂದರೂ ಈ ಹೆಸರನ್ನು ಬದಲಾಯಿಸಲಿಲ್ಲ. ಬೆಳಗಾವಿ ಕರ್ನಾಟಕ ಎನ್ನುವ ಶಬ್ದಗಳು ಮರಾಠಿಗರನ್ನು ಕೆರಳಿಸಿದ್ದವು. ಬೆಳಗಾವಿಯ ಮೇಲೆ ಹತೋಟಿಯನ್ನಿಟ್ಟುಕೊಳ್ಳಲು ಹಾತೊರೆಯುತ್ತಿದ್ದ ಮರಾಠಿಗರಿಗೆ ಈ ಹೆಸರು ಅಪಥ್ಯವಾಯಿತು. ಖಾನಾಪುರದಲ್ಲಿ ಕೆಲವು ಮರಾಠಿಗರು ಬಾಳಪ್ಪನವರಲ್ಲಿ ಬಂದು ಜಾಹಿರಾತು ಹಲಗೆಗಳ ಮೇಲೆ ಮರಾಠಿಯಲ್ಲಿ ಬರೆದಿಡುವಂತೆ ಒತ್ತಾಯಿಸಿದರು. ಕೆಲವರು ಕರ್ನಾಟಕ ಶಬ್ದವನ್ನು ತೆಗೆದು ಹಾಕುವಂತೆ ಒತ್ತಾಯ ಮಾಡಿದರು. ಬೆದರಿಕೆ ಹಾಕಿದರು. ಇದ್ಯಾವುದಕ್ಕೂ ಏಣಗಿ ಬಾಳಪ್ಪನವರು ಒಪ್ಪದಿದ್ದಾಗ ಮರುದಿನ ಕೈಯಲ್ಲಿ ಆಯುಧಗಳನ್ನು ಹಿಡಿದುಕೊಂಡು ನಾಟಕ ನೋಡಲು ಬಂದರೆ ಕೈಕಾಲು ಮುರಿಯುವುದಾಗಿ ಹೇಳಿ ಜನರನ್ನು ತಡೆಯಲು ನಾಟಕ ರಂಗದ ಸುತ್ತಲೂ ನಿಂತರು. ಆದರೆ ಬಾಳಪ್ಪನವರು ಹೆದರದೆ ಕೆಲವೇ ಕೆಲವು ಜನ ಬಂದಿದ್ದರೂ ನಾಟಕವನ್ನು ಪೂರ್ತಿಯಾಗಿ ಆಡಿದರು. 'ಕರ್ನಾಟಕ ಏಕೀಕರಣ' ನಾಟಕವನ್ನು ಆಡುವ ಸಂದರ್ಭದಲ್ಲಿಯೂ ಬಾಳಪ್ಪನವರು ಬೆಳಗಾವಿ ಭಾಗದಲ್ಲಿ ಮರಾಠಿಗರಿಂದ ಬೆದರಿಕೆಯನ್ನು ಎದುರಿಸಬೇಕಾಯಿತು. ಹಲವಾರು ಬೆದರಿಕೆ ಪತ್ರಗಳು ಬಂದವು. ನೀವು ನಾಟಕವನ್ನು ನಿಲ್ಲಿಸಬೇಕು, ನಾಮಫಲಕದ

ಮೇಲಿನ 'ಕರ್ನಾಟಕ' ಎಂಬ ಹೆಸರನ್ನು ತೆಗೆಯಬೇಕು ಇಲ್ಲದಿದ್ದರೆ ನಿಮಗೆ ಅಪಾಯವನ್ನು ಮಾಡುತ್ತೇವೆ ಎಂಬ ಪತ್ರಗಳು ಬಂದವು. ಆದರೆ ಇದ್ಯಾವುದಕ್ಕೂ ಹೆದರದೆ ಬಾಳಪ್ಪನವರು ಧೈರ್ಯದಿಂದ ನಾಟಕಗಳನ್ನು ಆಡುತ್ತಿದ್ದರು. ಮರಾಠಿಗರು ನಾಟಕ ಪ್ರದರ್ಶನಕ್ಕೆ ಹೆಚ್ಚೆಚ್ಚು ತೊಂದರೆಗಳನ್ನು ಕೊಟ್ಟಷ್ಟು ನನ್ನಲ್ಲಿ ಹೆಚ್ಚೆಚ್ಚು ಕನ್ನಡದ ಅಭಿಮಾನ ಮೂಡುತ್ತಿತ್ತು ಎಂದು ಬಾಳಪ್ಪನವರು (ಸಂದರ್ಶನ ೨೦-೦೫-೨೦೧೦) ಅಭಿಮಾನದಿಂದ ಹೇಳುತ್ತಾರೆ.

ಬೆಳಗಾವಿಯಲ್ಲಿ ಜರಗುವ ಕರ್ನಾಟಕ ರಾಜ್ಯೋತ್ಸವವು ವಿಶೇಷವಾದದ್ದು. ರಾಜ್ಯೋತ್ಸವದ ಸಂದರ್ಭದಲ್ಲಿ ಲಕ್ಷಾಂತರ ಕನ್ನಡಿಗರು ಪಾಲ್ಗೊಂಡು ಉತ್ಸಾಹದಿಂದ ಮೆರವಣಿಗೆಯ ಮೂಲಕ ನಗರದ ತುಂಬೆಲ್ಲಾ ಕುಣಿಯುತ್ತ ಉತ್ಸಾಹದಿಂದ ಆಚರಿಸುತ್ತಾರೆ. ಈ ದಿವಸ ಕನ್ನಡಿಗರಿಗೆ ಶುಭ ದಿನವಾದರೆ, ಬೆಳಗಾವಿಯ ಕೆಲ ಮರಾಠಿಗರಿಗೆ ಅದು ಕರಾಳದಿನ. ಏಣಗಿ ಬಾಳಪ್ಪನವರು ಕರ್ನಾಟಕ ರಾಜ್ಯೋತ್ಸವದ ದಿನದಂದೇ ಬೆಳಗಾವಿಯಲ್ಲಿ ನಾಟಕಗಳನ್ನು ಆಡಿ ಇತಿಹಾಸ ಸೃಷ್ಟಿಸಿದ್ದಾರೆ. ಕಂಪನಿಗೆ ಹಾನಿಯಾಗುತ್ತದೆ ಎನ್ನುವ ಅಂಜಿಕೆಯಿಂದಲೇ ಕಂಪನಿಯ ಮಾಲಿಕರು ಆದಿನ ನಾಟಕವನ್ನು ರದ್ದುಗೊಳಿಸುತ್ತ ಬಂದಿದ್ದರು. ಬಾಳಪ್ಪನವರ ಕಂಪನಿಯು ಬೆಳಗಾವಿಯಲ್ಲಿ ವಾಸ್ತವ್ಯವಿದ್ದ ಸಂದರ್ಭದಲ್ಲಿ ರಾಜ್ಯೋತ್ಸವದ ದಿನದಂದು ನಾಟಕವನ್ನಾಡಿದರು. ಈ ದಿವಸ ನಾಟಕವನ್ನು ಆಡಲೇಬೇಕು ಎನ್ನುವ ಹಟಕ್ಕೆ ಬಿದ್ದು ನಾಟಕದ ಪ್ರಚಾರ ಮಾಡಿದರು. ಬಾಳಪ್ಪನವರಿಗೆ ಬೆಂಬಲವಾಗಿ ಸ್ವಾತಂತ್ರ್ಯ ಹೋರಾಟಗಾರ 'ಅಣ್ಣಾ ಗುರೂಜಿ' ನಿಂತರು. "ಇಂದು ಬೆಳಗಾವಿಯಲ್ಲಿ ನಾಟಕ ಆಡಲಿಲ್ಲವೆಂದರೆ ಹೇಗೆ? ನಾ ಪ್ರಾಣ ಕೊಟ್ಟಾದರೂ ನಿಮ್ಮ ನಾಟಕ ನಡಿಯೋ ಹಾಗೆ ನೋಡಿಕೊಳ್ಳುತ್ತೇನೆ ಎಂದು ಹೇಳಿ ಶಿವಾನಂದ ಥೇಟರ್‌ನ ಪ್ರವೇಶದ್ವಾರದಲ್ಲಿ ಎದೆಗೆ ಕೈಕಟ್ಟಿಕೊಂಡು ಗಂಭೀರವಾಗಿ ನಿಂತರು. ರಾತ್ರಿ ೯-೩೦ ರ ಸುಮಾರಿಗೆ 'ಜಗಜ್ಯೋತಿ ಬಸವೇಶ್ವರ' ನಾಟಕ ಪ್ರಾರಂಭವಾಯಿತು. ದಿಟ್ಟ ಅಣ್ಣಾ ಗುರುಜಿಯವರು ನಿಂತದನ್ನು ನೋಡಿ ಕೆಲವು ಕಿಡಗೇಡಿ ಮರಾಠಿಗರು ಅವರಿಗೆ ಹೆದರಿ ಸುಮ್ಮನೆ ಹೋದರು. ಅಂದು ಹರತಾಳಕ್ಕೆ ಮಣಿಯದೆ ಬೆಳಗಾವಿ ನಗರದಲ್ಲಿ ಕಾರ್ಯಕ್ರಮ ನಡೆದದ್ದೆಂದರೆ ಬಾಳಪ್ಪನವರ ನಾಟಕ ಮಾತ್ರ.[೩೦]

ರಾಜ್ಯೋತ್ಸವದ ದಿನದಂದು ಬೆಳಗಾವಿಯಲ್ಲಿ ನಾಟಕ ನಿರಾತಂಕವಾಗಿ ನಡೆದಿದ್ದರಿಂದ ಕನ್ನಡಿಗರಲ್ಲಿ ಧೈರ್ಯ ಮೂಡಿತು. ಬೆಳಗಾವಿಯಲ್ಲಿ ಕನ್ನಡ ವಾತಾವರಣದ ನಿರ್ಮಾಣಕ್ಕೆ ಇದು ತುಂಬ ಸಹಕಾರಿಯಾಯಿತು. ಮರಾಠಿಗರ ಉಪಟಳಕ್ಕೆ ಸುಮ್ಮನಾಗಿದ್ದ ಕನ್ನಡಿಗರು ಧೈರ್ಯದಿಂದ ಎಲ್ಲವನ್ನೂ ಎದುರಿಸುವಂತಾಯಿತು.

ಬೆಳಗಾವಿಯಲ್ಲಿ ಸತತ ಒಂದು ವರ್ಷದವರೆಗೆ ನಾಟಕಗಳ ಪ್ರದರ್ಶನ : ಏಣಗಿ ಬಾಳಪ್ಪನವರ 'ಕಲಾವೈಭವ ನಾಟ್ಯ ಸಂಘ'ವು ಬೆಳಗಾವಿಯಲ್ಲಿ ಕನ್ನಡ ಜಾಗ್ರತಿಯನ್ನು ಉಂಟುಮಾಡುವುದಕ್ಕಾಗಿಯೇ ಮೇಲಿಂದ ಮೇಲೆ ಬೆಳಗಾವಿಗೆ ಆಗಮಿಸಿ ನಾಟಕಗಳನ್ನು ಪ್ರದರ್ಶಿಸುತ್ತಿತ್ತು. ಒಮ್ಮೆ ಮಹಾರಾಷ್ಟ್ರದ ಇಂಚಲಕರಂಜಿಯಲ್ಲಿ ಸತತವಾಗಿ ಎಂಟು ತಿಂಗಳುಗಳವರೆಗೆ ಕನ್ನಡ ನಾಟಕಗಳನ್ನು ಪ್ರದರ್ಶಿಸಿ ದಾಖಲೆ ನಿರ್ಮಿಸಿ ನೇರವಾಗಿ ಬೆಳಗಾವಿಗೆ ಬಂದು

ಕ್ಯಾಂಪ ಹೂಡಿದರು. ದಿನಾಂಕ ೫-೩-೧೯೬೬ ರಿಂದ ಸರಿಯಾಗಿ ೫-೩-೧೯೬೭ ರವರೆಗೆ ಸತತವಾಗಿ ಒಂದು ವರ್ಷದವರೆಗೆ ಬೆಳಗಾವಿಯಲ್ಲಿ ನಾಟಕಗಳ ಪ್ರದರ್ಶನವನ್ನು ಏರ್ಪಡಿಸಿದರು.[೩೧] ಇಲ್ಲಿಯವರೆಗೆ ಬೇರೆ ಯಾವ ಕನ್ನಡ ನಾಟಕ ಸಂಘಗಳು ಇಷ್ಟು ದೀರ್ಘಾವಧಿಯಾಗಿ ಬೆಳಗಾವಿಯಲ್ಲಿ ನಾಟಕಗಳನ್ನು ಆಡಿರಲಿಲ್ಲ. ಬೆಳಗಾವಿಯ ಕನ್ನಡಿಗರು ನಾಟಕ ಕಲೆಯನ್ನು ಎಷ್ಟೊಂದು ಗೌರವಿಸುತ್ತಿದ್ದರು ಎನ್ನುವುದಕ್ಕೆ ಎಂದು ಸಾಕ್ಷಿಯಾಗಿದೆ.

ಈ ಸಾರಿ 'ಕಿತ್ತೂರ ಚನ್ನಮ್ಮ' ನಾಟಕವು ಬೆಳಗಾವಿಯಲ್ಲಿ ರಾಜ್ಯೋತ್ಸವದಂದು ಪ್ರಾರಂಭಗೊಂಡಿತು. ಮರಾಠಿಗರು ಎಂದಿನಂತೆ ನವಂಬರ ಒಂದರಂದು ಶೋಕ ದಿನ ಆಚರಿಸಿದರು. ಭಾಷಾ ಗೊಂದಲ ಮೊದಲಿಗಿಂತಲೂ ಹೆಚ್ಚಾಗಿತ್ತು. ನಗರದ ಚಲನಚಿತ್ರ ಮಂದಿರಗಳೆಲ್ಲಾ ಮುಚ್ಚಿದ್ದವು. ಎಲ್ಲರಲ್ಲಿಯೂ ಭಯದ ವಾತಾವರಣವಿತ್ತು. ಇಂತಹ ಪರಿಸ್ಥಿತಿಯಲ್ಲಿಯೇ ಏಣಗಿ ಬಾಳಪ್ಪನವರು 'ಕಿತ್ತೂರ ಚನ್ನಮ್ಮ' ನಾಟಕವನ್ನು ಆಡಲು ನಿರ್ಧರಿಸಿದರು. ನಾಟಕ ಪ್ರಾರಂಭವಾಗುವ ಹೊತ್ತಿಗೆ ಬೇಕಂತಲೇ ವಿದ್ಯುತ್ತನ್ನು ತೆಗೆಯಲಾಯಿತು. ವಿದ್ಯುತ್ ಕಚೇರಿಗೆ ಹೋಗಿ ಬೇಡಿಕೊಂಡರೂ ಏನೂ ಪ್ರಯೋಜನವಾಗಲಿಲ್ಲ. ಆದರೆ ಬಾಳಪ್ಪನವರು ಸ್ವಲ್ಪವೂ ಖಿನ್ನರಾಗದೆ ತಮ್ಮ ಹಳೆಯ ಡೈನಮೋ ಎಂಜಿನನ್ನು ಸುರು ಮಾಡಿದರು. ಇದೆಲ್ಲ ಮುಗಿಯಬೇಕಾದರೆ ಮಧ್ಯರಾತ್ರಿ ಮೀರಿತ್ತು ರಂಗಮಂದಿರವು ಕಿಕ್ಕಿರಿದು ತುಂಬಿತ್ತು. ಆದರೂ ಒಬ್ಬರೂ ಅಭಿಮಾನಿಗಳು ಗದ್ದಲ ಮಾಡುವುದಾಗಲಿ, ಕದಡುವದಾಗಲಿ ಮಾಡಿರಲಿಲ್ಲ. ನಾಟಕದ ಪ್ರಾರಂಭವನ್ನು ಕಾಯುತ್ತಲೇ ಕುಳಿತಿದ್ದರು. ಏನೇ ಆದರೂ, ಎಷ್ಟೇ ಹೊತ್ತಾದರೂ ನಾಟಕವನ್ನು ನೋಡಿಯೇ ಹೋಗುವುದು ಎನ್ನುವ ಹಟ ಅವರಲ್ಲಿತ್ತು. ನಾಟಕ ಪ್ರಾರಂಭವಾದಾಗ ರಾತ್ರಿ ಒಂದು ಗಂಟೆಯ ಸಮಯವಾಗಿತ್ತು. ಸಾಮಾನ್ಯವಾಗಿ ಅದು ನಾಟಕ ಮುಗಿಯುವ ಹೊತ್ತಾಗಿತ್ತು. ಒಂದು ಗಂಟೆಗೆ ಪ್ರಾರಂಭವಾದ ನಾಟಕವು ಮುಗಿಯಬೇಕಾದರೆ ಬೆಳಕು ಹರಿಯುತ್ತಿತ್ತು.

ಬೆಳಗಾವಿಯ ರಂಗಭೂಮಿಯಲ್ಲಿ ನಾಟಕ ಪ್ರದರ್ಶಿಸಿದ ಮತ್ತೊಂದು ಮಹತ್ವದ ಕಂಪನಿಯೆಂದರೆ **ಕೆ. ಬಿ. ಆರ್ ನಾಟಕ ಕಂಪನಿ**. ಎಂಬತ್ತರ ದಶಕದಲ್ಲಿ ಬೆಳಗಾವಿಗೆ ತಮ್ಮ ನಾಟಕವಾಡಲು ಬಂದ **ಚಿಂದೋಡಿ ಲೀಲಾ** ಶಾಶ್ವತವಾಗಿ ಬೆಳಗಾವಿಯಲ್ಲಿಯೇ ಉಳಿದು ಬೆಳಗಾವಿಯ ಸಾಂಸ್ಕೃತಿಕ, ರಾಜಕೀಯ ಹಾಗೂ ಸಾಮಾಜಿಕ ವಲಯದ ಮೇಲೆ ಮಹತ್ವದ ಬದಲಾವಣೆಗಳನ್ನುಂಟು ಮಾಡಿದರು. ಮರಾಠಿ ಪರಿಸರದಲ್ಲಿ ಕೆಚ್ಚೆದೆಯಿಂದ ನಾಟಕ ಪ್ರದರ್ಶಿಸಿ ಕನ್ನಡ ವಾತಾವರಣವನ್ನು ಸೃಷ್ಟಿಸಿದರು. ಚಿಂದೋಡಿ ಲೀಲಾರ ನಾಟಕ ಕಂಪನಿಯು ಬೆಳಗಾವಿಯ ರಂಗಭೂಮಿಯಲ್ಲಿ ಮಹತ್ವದ ದಾಖಲೆಗಳನ್ನು ನಿರ್ಮಿಸಿದೆ. ನಿರಂತರವಾಗಿ ೨೫ ವರ್ಷಗಳವರೆಗೆ ನಾಟಕಗಳನ್ನು ಪ್ರದರ್ಶಿಸುತ್ತಾ ಬೆಳಗಾವಿ ಪ್ರದೇಶದಲ್ಲಿ ರಂಗಕಲೆಯನ್ನು ಜೀವಂತವಾಗಿರಿಸಿದೆ. ಇವರ 'ಹಳ್ಳಿ ಹುಡುಗ' 'ಪೋಲಿಸನ ಮಗಳು' ನಾಟಕಗಳು ಬೆಳಗಾವಿಯಲ್ಲಿ ನಿರಂತರವಾಗಿ ನಡೆಯುತ್ತಿದ್ದವು. ಚಿಂದೋಡಿ ಲೀಲಾ ಅವರು ತಮ್ಮ ಮನೋಜ್ಞ ಅಭಿನಯದಿಂದ ಪ್ರೇಕ್ಷಕರನ್ನು ರಂಜಿಸುತ್ತಾ ತಮ್ಮದೇ ಆದ ಪ್ರೇಕ್ಷಕವರ್ಗವನ್ನು ಅಭಿಮಾನಿಗಳನ್ನು ಹೊಂದಿದ್ದರು.

ಚಿಂದೋಡಿ ಲೀಲಾ ಎಲ್ಲರಂತೆ ಒಂದಷ್ಟು ದಿನ ನಾಟಕವಾಡಿ ಹಣ ಮಾಡಿಕೊಂಡು ಹೋಗಬೇಕೆಂಬ ಉದ್ದೇಶದಿಂದ ಬೆಳಗಾವಿಗೆ ಬಂದಿದ್ದರು. ಆದರೆ ಆರು ತಿಂಗಳಾದರೂ ಅವರ ನಾಟಕಗಳು ದಿನನಿತ್ಯ ಜನಪಟ್ಟನೆಯಲ್ಲಿ ನಡೆಯುತ್ತಿದ್ದವು. ಹೀಗಾಗಿ ಮತ್ತೆ ಆರು ತಿಂಗಳು ಶಿವಾನಂದ ಥೇಟರನ್ನು ಬಾಡಿಗೆ ಮುಂದುವರಿಸಲು ಕೇಳಿಕೊಂಡರು. ಆದರೆ ಆಗಲೇ ಬೇರೆ ನಾಟಕ ಮಂಡಳಿಯವರು ಬುಕ್ ಮಾಡಿದ್ದರಿಂದ ಇವರು ಶಿವಾನಂದ ಥೇಟರನ್ನು ಬಿಟ್ಟು ನಗರಸಭೆಯ ವ್ಯಾಪ್ತಿಯಲ್ಲಿದ್ದ ಕಪಿಲೇಶ್ವರ ಮಂದಿರದ ಪಕ್ಕದಲ್ಲಿ (ಶಹಪೂರ) ಲೀಜ್ ಮೇಲೆ ಸ್ಥಳವನ್ನು ತೆಗೆದುಕೊಂಡು ಸ್ವಂತ ರಂಗಮಂದಿರವನ್ನು ನಿರ್ಮಿಸಿದರು. ಅಂದು ಸಾಂಗಲಿ ಸಂಸ್ಥಾನದ ಆಡಳಿತಕ್ಕೆ ಒಳಪಟ್ಟಿದ್ದ ಈ ಶಹಪೂರ ಭಾಗವೆಲ್ಲ ಮರಾಠಿಮಯವಾಗಿತ್ತು. ಬೆಳಗಾವಿಯಲ್ಲಿ ಕನ್ನಡ ಕಾರ್ಯಕ್ರಮಗಳು ನಡೆದರೆ ಅವುಗಳಿಗೆ ತೊಂದರೆ ಕೊಡುವುದನ್ನು ಒಂದು ಹವ್ಯಾಸವನ್ನಾಗಿ ರೂಢಿಸಿಕೊಂಡಿದ್ದ ಕೆಲವು ಮರಾಠಿಗರು ಚಿಂದೋಡಿ ಲೀಲಾ ನಾಟಕ ಕಂಪನಿಗೂ ತೊಂದರೆಗಳನ್ನು ನೀಡತೊಡಗಿದರು.[೩೨] ಕಲ್ಲು ಎಸೆಯುವುದು, ಬೆಂಕಿ ಹಚ್ಚುವುದು ಗಲಾಟೆ ಮಾಡುವುದು, ವಿದ್ಯುತ್ ತಂತಿ ಕತ್ತರಿಸುವುದು ಹೀಗೆ ಒಂದಿಲ್ಲೊಂದು ತೊಂದರೆಗಳನ್ನು ನೀಡತೊಡಗಿದರು. ಆದರೆ ಚಿಂದೋಡಿ ಲೀಲಾ ಇದ್ಯಾವುದಕ್ಕೂ ಧೈರ್ಯಗೆಡದೆ ನಿರಂತರವಾಗಿ ನಾಟಕಗಳನ್ನು ಪ್ರದರ್ಶಿಸತೊಡಗಿದರು. ಆದರೆ ಮರಾಠಿಗರು ಇಷ್ಟಕ್ಕೆ ಸುಮ್ಮನಿರದೆ ಕೋರ್ಟ ಕಟ್ಟೆ ಹತ್ತಿದರು. ಕಪಿಲೇಶ್ವರ ದೇವಾಲಯದ ಪಕ್ಕದಲ್ಲಿರುವ ನಾಟಕ ಕಂಪನಿಯಿಂದ ದೇವಾಲಯದ ಪಾವಿತ್ರ್ಯ ಹಾಳಾಗುತ್ತದೆ ಅದಕ್ಕಾಗಿ ನಾಟಕ ಮಂದಿರವನ್ನು ರದ್ದು ಗೊಳಿಸಬೇಕು ಎಂದು ನ್ಯಾಯಾಲಯದಲ್ಲಿ ದಾವೆ ಹೂಡಿದರು.[೩೩] ನ್ಯಾಯಾಲಯ್ಲುದಲಿಯೂ ಚಿಂದೋಡಿ ಲೀಲಾಗೆ ಜಯ ಲಭಿಸಿ ಮತ್ತೆ ಕನ್ನಡ ನಾಟಕಗಳು ನಡೆಯತೊಡಗಿದವು. ಒಂದು ಸಲ ಪೂರ್ತಿ ರಂಗ ಮಂಟಪವೇ ಬೆಂಕಿಗೆ ಆಹುತಿಯಾಯಿತು. ಮತ್ತೆ ಕೆಲವೇ ದಿನಗಳಲ್ಲಿ ಲಕ್ಷಾಂತರ ರೂಪಾಯಿ ಖರ್ಚು ಮಾಡಿ ರಂಗ ಮಂಟಪವನ್ನು ಸುಸಜ್ಜಿತಗೊಳಿಸಿ ನಾಟಕಗಳನ್ನು ಪ್ರದರ್ಶಿಸಿದರು. ಇಂತಹ ಸಂದರ್ಭದಲ್ಲಿ ಮರಾಠಿಗರ ಮನ ಪರಿವರ್ತನೆಗಾಗಿ 'ಶಿವಾಜಿ' ನಾಟಕವನ್ನು ಪ್ರದರ್ಶಿಸಿದರು. ಈಗ ಮರಾಠಿಗರಿಗೆ ಏನೂ ಮಾಡಲು ಬಾರದಂತಾಯಿತು. ಏನೇ ಆದರೂ ಕನ್ನಡ ನಾಟಕಗಳನ್ನು ಆಡಲು ಬಿಡುವುದಿಲ್ಲ ಎಂದು ಪ್ರತಿಜ್ಞೆ ಮಾಡಿದ ಮರಾಠಿಗರಿಗೆ 'ಶಿವಾಜಿ' ನಾಟಕ ಬಿಸಿ ತುಪ್ಪವಾಯಿತು. ಮುಂದೆ ಚಿಂದೋಡಿ ಲೀಲಾ ಅವರು ಇದೇ ರೀತಿಯ ಚಾಣಾಕ್ಷ ತಂತ್ರಗಳಿಂದ ಮರಾಠಿಗರನ್ನು ಎದುರಿಸುತ್ತಾ ಹೋದರು.[೩೪]

ಬೆಳಗಾವಿಯಲ್ಲಿ ತಮ್ಮ ನಾಟಕ ಕಂಪನಿಯ ಮೂಲಕ ಕನ್ನಡ ಸಂಸ್ಕೃತಿಯನ್ನು ನಿರ್ಮಿಸುವುದರ ಜೊತೆಗೆ ಹಲವಾರು ಕನ್ನಡ ಪರ ಕಾರ್ಯಗಳನ್ನು ಚಿಂದೋಡಿ ಲೀಲಾ ಕೈಕೊಂಡರು. ಅವುಗಳಲ್ಲಿ ಮುಖ್ಯವಾದವುಗಳೆಂದರೆ, ಬೆಳಗಾವಿಯ ಕನ್ನಡ ಪತ್ರಿಕೆಗಳಿಗೆ ಕನ್ನಡಿಗರೆಲ್ಲರು ಅಜೀವ ಸದಸ್ಯರಾಗಬೇಕೆಂದು ಮನೆ ಮನೆಗೆ ಹೋಗಿ ಚಂದಾದಾರರನ್ನಾಗಿ ಮಾಡಿದರು. ಕನ್ನಡ ಕಾರ್ಯಕ್ರಮಗಳಿಗೆ ತಮ್ಮ ಥೇಟರನ್ನು ಉಚಿತವಾಗಿ ಬಳಸಿಕೊಳ್ಳಲು ನೀಡಿದರು. ಬೆಳಗಾವಿಯಲ್ಲಿಯ ಸಭೆ-ಸಮಾರಂಭಗಳಿಗೆ ತಪ್ಪದೆ ಹಾಜರಿದ್ದು ಸ್ಫೂರ್ತಿ ತುಂಬ ತೊಡಗಿದರು. ಹೀಗೆ ನಾಟಕದ ಜೊತೆಗೆ ಸಾಮಾಜಿಕ ರಂಗದಲ್ಲಿಯೂ ತಮ್ಮನ್ನು ತೊಡಗಿಸಿಕೊಂಡರು. ಕನ್ನಡಿಗರ ಮನವನ್ನು ಗೆದ್ದರು.

ನಗರಸಭೆಗೆ ಆಯ್ಕೆ : ನಗರ ಸಭೆಯ ಕೆಲವು ಮರಾಠಿ ಚುನಾಯಿತ ಸದಸ್ಯರು ಚಿಂದೋಡಿ ಲೀಲಾ ಅವರಿಗೆ ಮೇಲಿಂದ ಮೇಲೆ ತೊಂದರೆಗಳನ್ನು ಕೊಡುತ್ತಲೇ ಇದ್ದರು. ಕೆಲವು ಕನ್ನಡ ಸದಸ್ಯರು ಹಾಗೂ ಕನ್ನಡ ಧುರೀಣರು ಸಹ ಇವರಿಗೆ ತೊಂದರೆ ಕೊಟ್ಟು ಹಣ ಕೀಳುತ್ತಿದ್ದರು.[೩೫] ಇದರಿಂದ ಬೇಸತ್ತು ಹೀಗೆಲ್ಲ ಹಣಕೊಡುವ ಬದಲು ನಾನೇ ಮಹಾಸಭೆಗೆ ಆರಿಸಿಬರುವುದು ಒಳಿತೆಂದು ರಾಜಕೀಯ ಸೇರಲು ನಿರ್ಧರಿಸಿದರು. ಈಗಾಗಲೇ ತಮ್ಮ ಕಾರ್ಯ ಚಟುವಟಿಕೆಗಳಿಂದ ಜನರ ಮನಸ್ಸನ್ನು ಗೆದ್ದಿದ್ದ ಚಿಂದೋಡಿ ಲೀಲಾ ಚುನಾವಣೆಯಲ್ಲಿ ಸುಲಭವಾಗಿ ಆರಿಸಿ ಬಂದರು. ಮಹಾನಗರಸಭೆಯಲ್ಲಿ ಕನ್ನಡ ಭಾಷೆ, ಜನರಿಗೆ ಆಗುತ್ತಿದ್ದ ಅನ್ಯಾಯವನ್ನು ಸರಿಪಡಿಸಲು ಪ್ರಯತ್ನಿಸಿದರು. ತಾವು ಸ್ಪರ್ಧಿಸಿದ್ದ ಖಾಸಭಾಗದ ೧೫ನೆಯ ವಾರ್ಡಿನ ಸಮಸ್ಯೆಗಳನ್ನು ಪರಿಹರಿಸಿದರು. ಹೀಗೆ ಬೆಳಗಾವಿಯ ಕನ್ನಡಿಗರಲ್ಲಿ ತಾವೂ ಒಬ್ಬರಾಗಿ ವಿಭಿನ್ನ ಕ್ಷೇತ್ರಗಳಲ್ಲಿ ದೃಷ್ಟಿ ಹರಿಸಿ ಬೆಳಗಾವಿಯ ಸಾಂಸ್ಕೃತಿಕ ವಿಕಾಸದಲ್ಲಿ ಪ್ರಮುಖ ಪಾತ್ರವಹಿಸಿದರು.

ಮುಂದೆ ಕರ್ನಾಟಕ ನಾಟಕ ಅಕಾಡೆಮಿಯ ಅಧ್ಯಕ್ಷರಾದಾಗಲೂ ಬೆಳಗಾವಿಯ ಬಗೆಗೆ ವಿಶೇಷ ಗೌರವ ಪ್ರೀತಿಯನ್ನಿಟ್ಟುಕೊಂಡು ಅಕೆಡೆಮಿಯ ಪ್ರಶಸ್ತಿ ಪ್ರಧಾನ ಸಮಾರಂಭವನ್ನು ಬೆಳಗಾವಿಯಲ್ಲಿಯೇ ಇಟ್ಟುಕೊಂಡರು. ಈ ಕಾರ್ಯಕ್ರಮಕ್ಕೆ ವರನಟ ರಾಜಕುಮಾರ ಹಾಗೂ ಮುಖ್ಯಮಂತ್ರಿಗಳನ್ನು ಆಹ್ವಾನಿಸಿ ಬೆಳಗಾವಿ ಕನ್ನಡಿಗರಲ್ಲಿ ಸಂಚಲನವನ್ನುಂಟು ಮಾಡಿದರು. ಈ ಸಂದರ್ಭದಲ್ಲಿಯೇ ಡಾ. ರಾಜಕುಮಾರರಿಗೆ 'ಕಲಾ ಕೌಸ್ತುಭ' ಪ್ರಶಸ್ತಿಯನ್ನು ನೀಡಿ ಗೌರವಿಸಿದರು. ನಾಟಕ ರಂಗದ ನಿವೃತ್ತಿಯ ನಂತರವೂ ಬೆಳಗಾವಿಯಲ್ಲಿ ಮಹತ್ವದ ಕಾರ್ಯಗಳನ್ನು ಹಮ್ಮಿಕೊಂಡರು. ಅವುಗಳಲ್ಲಿ ಮುಖ್ಯವಾದುದೆಂದರೆ ಕೆ.ಬಿ. ಆರ್ ಕಲಾ ಸಂಸ್ಕೃತಿ ಕೇಂದ್ರವನ್ನು ಸ್ಥಾಪಿಸಿ ಬೆಳಗಾವಿಯಲ್ಲಿ ನಿರಂತರವಾಗಿ ರಂಗಚಟುವಟಿಕೆಗಳು ಸಾಗುವಂತೆ ಮಾಡಿದರು. ಈ ಕಲಾ ಸಂಸ್ಕೃತಿ ಕೇಂದ್ರದಲ್ಲಿ ಇದುವರೆಗೆ ನೂರಾರು ನಾಟಕಗಳು ಪ್ರದರ್ಶನಗೊಂಡಿವೆ. ಹಲವಾರು ಸಾಂಸ್ಕೃತಿಕ ಕಾರ್ಯಕ್ರಮಗಳು ಈ ರಂಗಮಂದಿರದಲ್ಲಿ ಇಂದಿಗೂ ನಡೆಯುತ್ತಲೇ ಇವೆ.

ಹೀಗೆ ಬೆಳಗಾವಿಯು ನಾಟಕ ನೋಡುವವರಿಗೆ, ನಾಟಕ ಆಡುವವರಿಗೆ ಮೊದಲಿನಿಂದಲೂ ಸ್ಫೂರ್ತಿಯ ನೆಲೆಯಾಗಿದೆ. ಅಭಿಮಾನದ ಭೂಮಿಯಾಗಿದೆ. ಇದರಿಂದಾಗಿಯೇ ಬೆಳಗಾವಿಯ ರಂಗಭೂಮಿಗೆ ವಿಶಿಷ್ಟವಾದ ಮಹತ್ವ ಒದಗಿಬಂದಿತು. ಒಂದೊಂದು ಸಂದರ್ಭದಲ್ಲಿ ಭಾಷಾ ಸಮಸ್ಯೆ ನಾಟಕ ರಂಗಕ್ಕೂ ಅಂಟಿಕೊಂಡಿದ್ದರೂ ಕಲೆಯು ಭಾಷೆ, ದೇಶ, ಜಾತಿ, ಧರ್ಮವನ್ನು ಮೀರಿ ಬೆಳೆದದ್ದು ಎನ್ನುವುದನ್ನು ಬೆಳಗಾವಿಯ ರಂಗಭೂಮಿ ಸಾಧಿಸಿತೋರಿಸಿದೆ. ಸಾಮಾಜಿಕವಾದ ಜಾಗೃತಿ, ದೇಶಾಭಿಮಾನ, ನಾಡು, ನುಡಿಯ ಬಗೆಗೆ ಅಭಿಮಾನವನ್ನು ಮೂಡಿಸುವಲ್ಲಿ ಬೆಳಗಾವಿ ರಂಗಭೂಮಿ ಯಶಸ್ವಿಯಾಗಿದೆ. ರಂಗಭೂಮಿಯ ಈ ಕೊಡುಗೆಯಿಂದಲೇ ಬೆಳಗಾವಿಯ ಸಂಸ್ಕೃತಿ ತನ್ನ ವೈಶಿಷ್ಟ್ಯವನ್ನು ಬೆಳೆಸಿಕೊಂಡಿದೆ. ಅದು ಇಂದಿಗೂ ಉಳಿದುಕೊಂಡು ಬಂದಿದೆ. ಕನ್ನಡ ಮರಾಠಿ

ಎರಡೂ ಭಾಷೆಗಳ ನಾಟಕಗಳು ಈ ನೆಲದಲ್ಲಿ ನಡೆದಿವೆ. ಕೆಲವು ವಿಕೃತ ಮನಸ್ಸಿನವರಿಂದ ತೊಂದರೆ ಉಂಟಾಗಿದ್ದರೂ ಅದು ಅಂದಿನ ದಿನದ ಮಟ್ಟಿಗೆ ಮಾತ್ರ. ಮತ್ತೆ ಮರುದಿನ ಅದೇ ಸಾಮರಸ್ಯದ ಬಾಂಧವ್ಯ ಸಾಗುತ್ತದೆ. ಇದೇ ಬೆಳಗಾವಿ ಸಂಸ್ಕೃತಿಯ ವೈಶಿಷ್ಟ್ಯ. ರಂಗಕಲೆಗೆ ಪಾವಿತ್ರ್ಯತೆಯನ್ನು ಒದಗಿಸಿಕೊಡುವಲ್ಲಿ ಬೆಳಗಾವಿ ನಗರ, ಜಿಲ್ಲೆಯ ನಾಟಕ ಕಂಪನಿಗಳು, ಕಲಾವಿದರು, ಸಂಗೀತಗಾರರು, ನಾಟಕ ರಚನಾಕಾರರು ಹಾಗೂ ಪ್ರೇಕ್ಷಕರು ಕಾರಣರಾಗಿದ್ದಾರೆ.

ಮೂವತ್ತರ ದಶಕದಲ್ಲಿ ಬೆಳಗಾವಿ ನಗರದಲ್ಲಿ ನಾಟಕಗಳ ಬರಾಟೆ ನಡೆದಿತ್ತು. ಪ್ರತಿದಿನವೂ ಒಂದೊಂದು ನಾಟಕವನ್ನು ನೋಡುವವರು ಇದ್ದರು. ಒಂದೇ ನಾಟಕವನ್ನು ಹತ್ತಾರು ಬಾರಿ ನೋಡುವ ಕಲಾಭಿಮಾನಿಗಳು ಇದ್ದರು. ಬೆಳಗಾವಿ ಜನರಲ್ಲಿ ನಾಟಕದ ಈ ಹುಚ್ಚನ್ನು ಹಿಡಿಸಿದವರು **ಗುಬ್ಬಿ ನಾಟಕ ಕಂಪನಿಯವರು**. ಮಹಾಭಾರತದ ಅನೇಕ ನಾಟಕಗಳನ್ನು ಶಿವಾನಂದ ರಂಗಮಂದಿರದಲ್ಲಿ ಪ್ರಯೋಗಿಸಿದರು. ಈ ಕಂಪನಿಗೆ ರಂಗಸ್ಥಳ ಚಿಕ್ಕದಾಗಿದ್ದರೂ ತಮ್ಮ ಅಭಿನಯದ ಮೂಲಕ. ನಾಟಕಕ್ಕೆ ಕಳೆ ತಂದರು. 'ಸದಾರಮೆ' ಎನ್ನುವ ಸಾಮಾಜಿಕ ನಾಟಕವೂ ಬೆಳಗಾವಿ ಜನರಲ್ಲಿ ಸಂಚಲನವನ್ನುಂಟು ಮಾಡಿತು. ಈ ಎರಡೂ ನಾಟಕಗಳನ್ನು ಮರಾಠಿಗರೂ ಮೆಚ್ಚಿಕೊಂಡಿದ್ದರು.

ಗುಬ್ಬಿ ನಾಟಕ ಕಂಪನಿಯ ನಂತರ **ಎಚ್. ಎಲ್. ಎನ್ ಸಿಂಹ ಅವರ ನಾಟಕ ಕಂಪನಿ** ಸಾಮಾಜಿಕ ನಾಟಕಗಳಿಗೆ ಹೆಚ್ಚು ಒತ್ತು ಕೊಟ್ಟಿತು. ಅವರ 'ಸಂಸಾರನೌಕೆ' ಎಂಬ ನಾಟಕವು ನಗರದಲ್ಲೆಲ್ಲ ಅಂದು ಮನೆ ಮಾತಾಗಿದ್ದಿತು. ನಾಟಕದಲ್ಲಿ ಮಹಮ್ಮದ ಪೀರ, ಡಿಕ್ಕಿ ಮಾಧವರಾವ್, ಸಿಂಹ ಇವರ ಅಭಿನಯವನ್ನು ನೋಡಲು ಜನರು ಮುಗಿಬೀಳುತ್ತಿದ್ದರು. "ಪೀರ ನಾಟಕದಲ್ಲಿ ಅಭಿನಯಿಸತೊಡಗಿದಾಗ ತೆರೆಯ ಹಿಂದೆ ಇದ್ದಾಗಲೂ ಪಾತ್ರದಲ್ಲಿ ತನ್ಮರಾಗುತ್ತಿದ್ದರಂತೆ. ಮಹಮ್ಮದ ಪೀರ ಅಭಿನಯಿಸಿದ ಆನಂದನ ಪಾತ್ರವು ಅದ್ವಿತೀಯ ಎನ್ನುವಂತಿತ್ತು. ಆನಂದನ ಬಡತನದ ಸಂದರ್ಭದಲ್ಲಿ ವಿಂಗಿನಲ್ಲಿಯೂ ಅವರು ಕಣ್ಣೀರು ಸುರಿಸುತ್ತಿದ್ದರಂತೆ."[೩೬]

ಮುಂದೆ ನಾಲ್ವತ್ತರ ದಶಕದಲ್ಲಿ **ಸುಬ್ಬಯ್ಯನಾಯ್ಡು** ಅವರ ನಾಟಕ ಕಂಪನಿ ಬೆಳಗಾವಿಗೆ ಬಂದಿತು. ಅವರು ತಮ್ಮ ಸ್ವಂತದ್ದೇ ಆದ ರಂಗಮಂದಿರವನ್ನು ನಿರ್ಮಿಸುತ್ತಿದ್ದರು. ಬೆಳಗಾವಿಯ ಕಪಿಲೇಶ್ವರದಿಂದ ಶಹಾಪುರದ ಕಡೆಗೆ ಹೋಗುವ ರಸ್ತೆಯ ಬಲಗಡೆಯ ಗದ್ದೆಯಲ್ಲಿ ಅವರು ರಂಗಮಂದಿರವನ್ನು ನಿರ್ಮಿಸುತ್ತಿದ್ದರು. 'ಭಕ್ತ ಪ್ರಹ್ಲಾದ' 'ಭಕ್ತ ಅಂಬರೀಷ' 'ಸತ್ಯ ಹರಿಶ್ಚಂದ್ರ' ಮೊದಲಾದ ಪೌರಾಣಿಕ ನಾಟಕಗಳು ಪ್ರಸಿದ್ಧಿಯನ್ನು ಪಡೆದುಕೊಂಡಿದ್ದವು. ಸುಬ್ಬಯ್ಯ ನಾಯ್ಡು, ಪಂಢರಿಬಾಯಿ, ಆರ್ ನಾಗೇಂದ್ರರಾವ್ ಮುಂತಾದ ಸುಪ್ರಸಿದ್ಧ ನಟರು ಅಭಿನಯಿಸುತ್ತಿದ್ದರು. ಇವರ ನಾಟಕಗಳು, ಅಭಿನಯಗಳು ಬೆಳಗಾವಿ ನಗರದಲ್ಲಿ ಭಕ್ತಿಯ ವಾತಾವರಣವನ್ನು ನಿರ್ಮಿಸುತ್ತಿದ್ದವು. ಬೆಳಗಾವಿ ನಗರದ ರಿಝ್ ಸನಿಮಾ ಗೃಹದಲ್ಲಿಯೂ ಕಂಪನಿ ನಾಟಕಗಳು ನಡೆಯುತ್ತಿದ್ದವು. ಮಾಸ್ಟರ ಹಿರಣ್ಣಯ್ಯ ಅವರ ತಂದೆಯು ಒಳ್ಳೆಯ ಕಲಾವಿದರಾಗಿದ್ದರು. ಅವರ ನಾಟಕ ತಂಡ ಬೆಳಗಾವಿಯಲ್ಲಿ ಹಲವಾರು ನಾಟಕಗಳನ್ನು ಪ್ರದರ್ಶಿಸಿದೆ. ಹಿರಣ್ಣಯ್ಯನವರ ಅದ್ಭುತ ಅಭಿನಯ ಬೆಳಗಾವಿ ಜನರನ್ನು ಸೂರೆಗೊಂಡಿತ್ತು.

ಉತ್ತರ ಕರ್ನಾಟಕದ ಭಾಗದಲ್ಲಿದ್ದ ಬಹಳಷ್ಟು ನಾಟಕ ಕಂಪನಿಗಳು ನಗರ ಪ್ರದೇಶಗಳಿಗೆ ಹೋಗಿ ನಾಟಕ ಪ್ರದರ್ಶಿಸಲು ಹಿಂಜರಿಯುತ್ತಿದ್ದವು. ಇದಕ್ಕೆ ಮುಖ್ಯ ಕಾರಣ ನಗರಗಳಲ್ಲಿ ದೀರ್ಘಕಾಲ ಉಳಿಯಲು ಬೇಕಾದ ಆರ್ಥಿಕ ಬೆಂಬಲ ಇಲ್ಲದಿರುವುದು. ಹೀಗಾಗಿ ಈ ನಾಟಕ ಕಂಪನಿಗಳು ಹೆಚ್ಚಾಗಿ ಹಳ್ಳಿಗಳಲ್ಲಿ ನಡೆಯುವ ಜಾತ್ರೆಗಳಲ್ಲಿ ಪ್ರದರ್ಶನಗೊಳ್ಳುತ್ತಿದ್ದವು. ಒಂದೂರಿನ ಜಾತ್ರೆ ಮುಗಿದ ತಕ್ಷಣ ಮತ್ತೊಂದು ಜಾತ್ರೆಗೆ ಹೋಗುವುದು–ಹೀಗೆ ಮುಖ್ಯವಾಗಿ ಜಾತ್ರೆಗಳನ್ನು ಗುರಿಯಾಗಿಟ್ಟುಕೊಂಡು ನಾಟಕವಾಡುತ್ತಿದ್ದರು. ಆದರೂ ಹಲವಾರು ನಾಟಕ ಕಂಪನಿಗಳು ಬೆಳಗಾವಿ ನಗರದ ಶಿವಾನಂದ ರಂಗಮಂದಿರದಲ್ಲಿ ನಾಟಕಗಳನ್ನಾಡಿವೆ. 'ಹುಕ್ಕೇರಿಯ ಬಸವ ಪ್ರಭು ನಾಯಕರ ಕಂಪನಿ', 'ಕಿತ್ತೂರಿನ ಮಾರೀಹಾಲ ಗುರಪ್ಪನವರ ಕಂಪನಿ', 'ದುರ್ಗಾದೇವಿ ನಾಟಕ ಮಂಡಳಿ', 'ಸುಜ್ಞಾನೋದ್ಭವ ನಾಟ್ಯ ಸಂಘ', 'ಬೆಲ್ಲದ ಬಾಗೇವಾಡಿಯ ಜಡಿಸಿದ್ಧೇಶ್ವರ ನಾಟ್ಯ ಸಂಘ', 'ಅಂಕಲಿಯ ಸಿದ್ಧೇಶ್ವರ ನಾಟ್ಯ ಸಂಘ', 'ಅಮ್ಮಣಗಿಯವರ ಮಲ್ಲಿಕಾರ್ಜುನ ನಾಟ್ಯ ಸಂಘ', 'ಹುಕ್ಕೇರಿ ಕಂಪನಿ', 'ಚಿಂಚಣಿಯ ಕಲ್ಮೇಶ್ವರ ನಾಟ್ಯ ಸಂಘ', 'ಶಂಕ್ರಪ್ಪ ಉಡಿಕೇರಿಯವರ ದುರ್ಗಾದೇವಿ ನಾಟಕ ಮಂಡಳಿ', 'ತೋಲಗಿ ರಾಮನಗೌಡರ ಕಂಪನಿ', 'ಶ್ರೀಮತಿ ಇಂಗಳಗಿ ದೇಸಾಯರ ಆಶ್ರಯದ ಲಿಂಗಯ್ಯಸ್ವಾಮಿ ದೊಡ್ಡವಾಡರ ಕಂಪನಿ', 'ಶ್ರೀಮತಿ ರೇಣಮ್ಮ ಮುರಗೋಡರ ಕಂಪನಿ', 'ಒಕ್ಕುಂದ ಮಲ್ಲನಗೌಡರ 'ವಿಶ್ವರಂಜನ ನಾಟ್ಯ ಸಂಘ', ಮೊದಲಾದ ಬೆಳಗಾವಿ ಜಿಲ್ಲೆಯ ನಾಟಕ ಕಂಪನಿಗಳು ಬೆಳಗಾವಿಯಲ್ಲಿ ನಾಟಕಗಳನ್ನು ಪ್ರದರ್ಶಿಸಿ ಬೆಳಗಾವಿಯ ರಂಗಭೂಮಿಯನ್ನು ಗಟ್ಟಿಗೊಳಿಸಿವೆ.

ನಲ್ವತ್ತರ ದಶಕದಲ್ಲಿ ಬೆಳಗಾವಿಯಲ್ಲಿ ಹಿಂದಿ ನಾಟಕಗಳೂ ಪ್ರದರ್ಶನಗೊಂಡವು. ಪೃಥ್ವಿರಾಜ ಕಪೂರರು ತಮ್ಮ ಪೃಥ್ವಿ ಥಿಯೇಟರ್ಸ್ ಹೆಸರಿನಡಿ ಮೂರು ನಾಟಕಗಳನ್ನು ಆಗಿನ ರಿಝ್ ಥಿಯೆಟರಿನಲ್ಲಿ (ಈಗ ಮಂಗಳ ಕಾರ್ಯಾಲಯವಾಗಿದೆ) ತಮ್ಮ ನಾಟಕಗಳನ್ನು ಪ್ರದರ್ಶಿಸಿದರು. ರಂಗ ಸಜ್ಜಿಕೆ, ಧ್ವನಿ ಸಂಯೋಜನೆ, ದೀಪ ವ್ಯವಸ್ಥೆ ಎಲ್ಲದರಲ್ಲಿಯೂ ನಾವೀನ್ಯವನ್ನು ತೋರಿದ ಅವರ ನಾಟಕಗಳು ಅದ್ಭುತ ಪರಿಣಾಮವನ್ನು ಬೀರಿದವು. 'ದೀವಾರ' ಎನ್ನುವ ನಾಟಕವಂತೂ ಭಾರತೀಯರ ಹೃದಯವನ್ನು ಕಲುಕುವಂಥದಾಗಿತ್ತು. ಅದೇ ಸ್ವಾತಂತ್ರ ದೊರೆತು ಭಾರತವು ಇಬ್ಭಾಗವಾಗಿ, ಎರಡು ದೇಶವಾಗಿ ನಡುವೆ ಗೋಡೆ ನಿರ್ಮಾಣವಾದ ಹಿನ್ನೆಲೆಯ ಈ ದೀವಾರ (ಗೋಡೆ) ನಾಟಕ ಅತ್ಯಂತ ಪ್ರಭಾವಶಾಲಿಯಾದ ನಾಟಕವಾಗಿತ್ತು. ಈ ನಾಟಕದ ಪ್ರದರ್ಶನ ಬೆಳಗಾವಿಯ ಕನ್ನಡ, ಮರಾಠಿ, ಉರ್ದು ಭಾಷಿಕರ ಮೆಚ್ಚುಗೆಯನ್ನು ಪಡೆಯಿತು.

**೩. ಹವ್ಯಾಸಿ ರಂಗಭೂಮಿ :**

ಕನ್ನಡ ರಂಗಭೂಮಿ ಪ್ರಮುಖವಾಗಿ ಜಾನಪದ ವೃತ್ತಿ ಹಾಗೂ ಹವ್ಯಾಸಿ ರಂಗಭೂಮಿಗಳಾಗಿ ಗುರುತಿಸಲ್ಪಡುತ್ತದೆ. ಜಾನಪದದ ಬೇರುಗಳು ಗ್ರಾಮೀಣ ಪ್ರದೇಶದಲ್ಲಿ ಅಷ್ಟಿಷ್ಟು ಉಳಿದುಕೊಂಡಿವೆ. ವೃತ್ತಿ ರಂಗಭೂಮಿ ಶಿಥಿಲಗೊಂಡಿದೆ. ಹವ್ಯಾಸಿ ರಂಗಭೂಮಿ ಇನ್ನೂ ಪ್ರಯೋಗಶೀಲವಾಗಿಯೇ ಉಳಿದುಕೊಂಡಿದೆ.

ಪ್ರಾರಂಭದಲ್ಲಿ ಉತ್ತರ ಕರ್ನಾಟಕದಲ್ಲಿ ಹವ್ಯಾಸಿ ರಂಗಭೂಮಿ ನೆಲೆಗೊಳ್ಳಲು ಬೆಳಗಾವಿ ಜಿಲ್ಲೆಯ ಗುರ್ಲಹೊಸೂರಿನ ಚುರಮುರಿ ಶೇಷಗಿರಿರಾಯರು ಅನುವಾದಿಸಿದ 'ಶಾಕುಂತಲ' ನಾಟಕವು ಕಾರಣವೆಂಬುದನ್ನು ಕೆಲವು ವಿದ್ವಾಂಸರು ತಿಳಿಸುತ್ತಾರೆ. ಈ ನಾಟಕವನ್ನು ಪ್ರದರ್ಶಿಸುವುದಕ್ಕಾಗಿಯೇ ಮುದುವೀಡು ಕೃಷ್ಣರಾಯರು ೧೯೦೫ರಲ್ಲಿ 'ಭರತ ಕಲೋತ್ತೇಜಕ ಸಂಗೀತ ಸಂಸ್ಥೆ'ಯನ್ನು ಹುಟ್ಟು ಹಾಕಿದರು. ಈ ಮಂಡಳಿಯಿಂದಲೇ ವಿಲಾಸಿ ರಂಗಭೂಮಿಯ ನಿಚ್ಚಳ ಇತಿಹಾಸ ಪ್ರಾರಂಭವಾಗುವುದು.

ಬೆಳಗಾವಿಯಲ್ಲಿ ಹವ್ಯಾಸಿ ರಂಗಭೂಮಿಯ ಚಟುವಟಿಕೆಗಳು ಶ್ರೀರಂಗರ ಹೊಸ ಅಲೆಯ ನಾಟಕಗಳಿಂದ ೧೯೩೪ರಲ್ಲಿ ಆರಂಭಗೊಂಡವು. ಧಾರವಾಡದ 'ಕನ್ನಡ ನಾಟ್ಯ ವಿಲಾಸಿಗಳ ಸಂಘ' ಮತ್ತು 'ಕಲೋಪಾಸಕ ಮಂಡಳಿ' ಕೆಲವು ಬಾರಿ ಬೆಳಗಾವಿಗೆ ಭೆಟ್ಟಿ ನೀಡಿ ನಾಟಕಗಳನ್ನಾಡಿದರು. ಇದರಿಂದ ಇಲ್ಲಿಯ ರಂಗ ಕಲಾಸಕ್ತರಿಗೆ ಹವ್ಯಾಸಿ ರಂಗಭೂಮಿ ಮೇಲೆ ಪ್ರೇರಣೆ ಒದಗಿತು. ಮೊದಲ ಹಂತವಾಗಿ ನಾಟ್ಯ ವಿಲಾಸಿ ತಂಡ, 'ಕರ್ನಾಟಕ ಸಂಘ' ಬೆನನ್ ಸ್ಮಿಥ್ ಹಾಯಸ್ಕೂಲ್ ವಿದ್ಯಾರ್ಥಿ ಕೂಟಗಳಿಂದ ಶ್ರೀರಂಗರ ಕೆಲ ರಚನೆಗಳು ಬೆಳಕು ಕಂಡವು. ಅನಂತರದ ಬೆಳವಣಿಗೆಯಲ್ಲಿ 'ಪಿ ಡಬ್ಲ್ಯೂಡಿ ನಾಟ್ಯ ಸಂಘ', 'ಕನ್ನಡ ಭಾರತಿ' ಮಿಲಿಟರಿ ಅಕೌಂಟ್ಸ ಕಲಾ ಸಂಘಗಳು ರೂಪಗೊಂಡು ಹೊಸ ಪ್ರಯೋಗಗಳಲ್ಲಿ ನಿರತವಾದವು. ಮುಂದೆ ಈ ತಂಡದಲ್ಲಿದ್ದ ಉತ್ತಮ ಕಲಾವಿದರೆಲ್ಲ ಒಂದೆಡೆ ಸೇರಿ 'ನಟ ಸಂಪದ' ಕಟ್ಟಿಕೊಂಡರು. ಈ ತಂಡದ 'ಜೈಸಿದ ನಾಯ್ಕ' ಉತ್ತಮ ನಾಟಕವಾಗಿತ್ತು.

೧೯೩೪ರಲ್ಲಿ 'ಆಧುನಿಕ'ವೆನ್ನಿಸಿದ ವಿಲಾಸಿ ರಂಗಭೂಮಿಯು ವಿಶಿಷ್ಟವಾದ ಪ್ರೇಕ್ಷಕವೃಂದವನ್ನು ನಿರ್ಮಿಸಿಕೊಂಡಿದೆ. ಇಲ್ಲಿ ವೇಷಭೂಷಣ, ಅಲಂಕಾರಗಳು ನೈಜತೆಯನ್ನು ಹೊಂದಿದವು. ಹೀಗಾಗಿ ರಂಗಭೂಮಿಯು ಸುಶಿಕ್ಷಿತ ರಂಗಭೂಮಿ ಎನಿಸಿಕೊಂಡಿತು. 'ರಂಗಭೂಮಿ ಕೇವಲ ವ್ಯಾಪಾರಿ ಕ್ಷೇತ್ರವಲ್ಲ; ಕಲಾಭಿವೃದ್ಧಿಯ ಸಾಧನರಂಗ' ಎಂಬ ವಿಲಾಸಿ ರಂಗದ ತತ್ವವು ಹೆಚ್ಚು ಜನರಿಗೆ ಒಪ್ಪಿಗೆಯಾಯಿತು. ನಾಟಕಕಾರನಿಗಿಂತ ನಾಟಕದ ನಿರ್ದೇಶಕ ಢಾಳವಾಗಿ ಮಿಂಚತೊಡಗಿದ. ರಂಗ ಶಿಬಿರಗಳು ವಿಪುಲ ಸಂಖ್ಯೆಯಲ್ಲಿ ನಡೆದು ರಂಗಶಾಸ್ತ್ರದ ಹರವನ್ನು ವಿಸ್ತರಿಸಿದವು. ನಾಟಕೋತ್ಸವಗಳ ಪರಂಪರೆ ಪ್ರಾರಂಭವಾಯಿತು.

ಬೆಳಗಾವಿಯಲ್ಲಿ ೧೯೨೦-೩೦ರ ದಶಕದಲ್ಲಿಯೇ ಹವ್ಯಾಸಿ ರಂಗಭೂಮಿ ಸ್ಪಷ್ಟವಾಗಿ ರೂಪತಾಳಿದುದನ್ನು ಕಾಣಬಹುದು. ಬೆಳಗಾವಿಯ ಶಿಕ್ಷಕರಾಗಿದ್ದ ಶ್ರೀ ಕೃಷ್ಣ ಪಾಟೀಲ ಸೃಜನಶೀಲ ಸಾಹಿತ್ಯ ನಿರ್ಮಿತಿಯ ಶಕ್ತಿ ಪಡೆದಿದ್ದರು. ಅವರು ಸಣ್ಣ ನಾಟಕಗಳನ್ನು ಬರೆಯುತ್ತಿದ್ದರು. ಅಲ್ಲದೆ ಅವುಗಳನ್ನು ಬೆಳಗಾವಿಯ ಖಡೇಬಜಾರದಲ್ಲಿದ್ದ ಶಿವಾನಂದ ನಾಟಕ ಮಂದಿರ ಮತ್ತು ಕೋನವಾಳಗಲ್ಲಿಯಲ್ಲಿದ್ದ ರಿಝು ಥಿಯೇಟರದಲ್ಲಿ ಆಡುತ್ತಿದ್ದರು.[೨೭] ಅವರು ರಂಗಕ್ಕೆ ತಂದ ನಾಟಕಗಳಲ್ಲಿ ಅವರ ತಮ್ಮಂದಿರು, ಅವರ ಬಳಗದವರಲ್ಲದೆ ಸುಶಿಕ್ಷಿತ ವರ್ಗದ ಮನೆತನಗಳ ಹೆಣ್ಣು ಮಕ್ಕಳೂ ಪಾಲುಗೊಳ್ಳುತ್ತಿದ್ದರು. ಅನಂತಶಯನ ಗಲ್ಲಿಯ ಕದಡಿ ಎನ್ನುವ ಮನೆತನದ ಬಾಲಕಿಯೊಬ್ಬಳು ನಾಟಕಗಳಲ್ಲಿ

ಚೆನ್ನಾಗಿ ಅಭಿನಯಿಸುತ್ತಿದ್ದಳು. ಈ ನಾಟಕಗಳು ಆಗ ಬೆಳಗಾವಿಯಲ್ಲಿದ್ದ ಕನ್ನಡ ಸಂಘಟನೆಗಳಾದ 'ಕರ್ನಾಟಕ ಸಂಘ', 'ತುಂಟರ ಸಂಘ', 'ನಾಡ ನರಿಗಳ ಸಂಘ' ಈ ಸಂಘಗಳ ಬೆಂಬಲದಿಂದ ನಡೆಯುತ್ತಿದ್ದವು. ಬೆಳಗಾವಿ ನಗರದ ಕಲಾ ಪ್ರೇಮಿಗಳೆಲ್ಲ ಈ ನಾಟಕಗಳನ್ನು ನೋಡಲು ಹೋಗುತ್ತಿದ್ದರು. ಹವ್ಯಾಸಿ ರಂಗಭೂಮಿಯು ಬೆಳಗಾವಿಯಲ್ಲಿ ಹೆಚ್ಚು ಪ್ರಚಾರವನ್ನು ಪಡೆದುಕೊಳ್ಳುತ್ತಿದ್ದ ಕಾಲದಲ್ಲಿ ಈ ನಾಟಕಗಳು ಮಹತ್ವದ್ದೆನಿಸುತ್ತವೆ.

೧೯೨೯ರಲ್ಲಿ ಬೆಳಗಾವಿಯಲ್ಲಿ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನವು ಜರುಗಿದ ಸಂದರ್ಭದಲ್ಲಿ ಸಮ್ಮೇಳನದ ಅಂಗವಾಗಿ ಹಲವಾರು ನಾಟಕಗಳು ಪ್ರಯೋಗಗೊಂಡವು. ಅದರಲ್ಲಿ ಪ್ರಮುಖವಾಗಿ ತೋರಿದ್ದ ಬಿ. ಎಂ. ಶ್ರೀಯವರ 'ಗದಾಯುದ್ಧ ನಾಟಕಂ'. ಬೆಳಗಾವಿಯ ಲಿಂಗರಾಜ ಮಹಾವಿದ್ಯಾಲಯದ ಕನ್ನಡ ಉಪನ್ಯಾಸಕರಾಗಿದ್ದ ಪ್ರೊ. ವಿ.ಜಿ. ಕುಲಕರ್ಣಿಯವರು ಅದನ್ನು ರಂಗದ ಮೇಲೆ ಅಳವಡಿಸಿದ್ದರು. ದುರ್ಯೋಧನನ ಮುಖ್ಯ ಪಾತ್ರವನ್ನು ತಾವೇ ವಹಿಸಿಕೊಂಡಿದ್ದರು. ಹಲವಾರು ಜನ ಕಾಲೇಜಿನ ವಿದ್ಯಾರ್ಥಿಗಳು ಸಣ್ಣ ಪುಟ್ಟ ಪಾತ್ರಗಳಲ್ಲಿದ್ದರು. ಅತ್ಯಂತ ಅದ್ಭುತವಾಗಿ ಮೂಡಿ ಬಂದ ಈ ನಾಟಕವು ಹವ್ಯಾಸಿ ಕಲಾವಿದರ ಉತ್ತಮಕೊಡುಗೆಯಾಗಿದೆ. ಅಂದು ಸ್ವತಃ ಬಿ. ಎಂ. ಶ್ರೀಯವರೇ ನಾಟಕವನ್ನು ನೋಡಲು ಕುಳಿತಿದ್ದರು. ದುರ್ಯೋಧನನ ಪಾತ್ರವನ್ನು ಮಾಡಿದ ಪ್ರೊ. ವಿ.ಜಿ.ಕುಲಕರ್ಣಿಯವರನ್ನು ಬಿ. ಎಂ. ಶ್ರೀಯವರು ವೇದಿಕೆಯ ಮೇಲೆಯೇ ಹೋಗಿ ಅಪ್ಪಿಕೊಂಡರು.[೫೮] ವಿ.ಜಿ.ಯವರು ಅಷ್ಟೊಂದು ರಸವತ್ತಾಗಿ ಆ ಪಾತ್ರವನ್ನು ನಿರ್ವಹಿಸಿದ್ದರು. ಬಿ.ಎಂ. ಶ್ರೀಯವರ ಕಣ್ಣಲ್ಲೂ ನೀರು ಚಿಮ್ಮಿದ ದೃಶ್ಯವನ್ನು ಕಂಡು ಪ್ರೇಕ್ಷಕರು ಭಾವಪರವಶರಾದರು.

ಹವ್ಯಾಸಿ ರಂಗಭೂಮಿ ಇನ್ನೂ ಬೆಳವಣಿಗೆಯ ಹಂತದಲ್ಲಿದ್ದ ಸಮಯ. ಇಂದಿನಂತೆ ದೀಪದ ಯೋಜನೆಗಳಿರಲಿಲ್ಲ. ಬೆಳಕು ಕತ್ತಲೆಗಳ ಜೀವಂತ ಯೋಜನೆ, ಧ್ವನಿವರ್ಧಕದ ವ್ಯವಸ್ಥೆ ಇಲ್ಲದ ಕಾಲದಲ್ಲಿ ಪಾತ್ರಧಾರಿಗಳು ತಮ್ಮ ಧ್ವನಿಯಲ್ಲಿ, ಭಾವತೀವ್ರತೆ, ಅಭಿನಯ ಇವುಗಳಿಂದಲೇ ನಾಟಕಕ್ಕೆ ಜೀವ ತುಂಬಬೇಕಾಗುತ್ತಿತ್ತು. ಪ್ರೊ. ವಿ.ಜಿ. ಕುಲಕರ್ಣಿಯವರು ತಮ್ಮ ತಂಡದೊಂದಿಗೆ ಇದನ್ನು ಅತ್ಯಂತ ಅಚ್ಚುಕಟ್ಟುತನದಿಂದ ನಿರ್ವಹಿಸಿದರು.

೧೯೪೮-೪೯ರಲ್ಲಿ ಬೆಳಗಾವಿಯಲ್ಲಿ ಕೆ.ಎಸ್.ಎಸ್. ಶಿಕ್ಷಕ ತರಬೇತಿ ಸಂಸ್ಥೆಯ ಸಹಾಯಾರ್ಥವೆಂದು ಧಾರವಾಡದ ಕಲಾವಿಲಾಸಿಗಳ ತಂಡವು ಎರಡು ನಾಟಕಗಳನ್ನು ಪ್ರದರ್ಶಿಸಿದರು. 'ಭಾಗ್ಯಶ್ರೀ' ಮತ್ತು 'ಪರಿವರ್ತನ' ಎಂಬ ಎರಡು ನಾಟಕಗಳು ಪ್ರದರ್ಶನಗೊಂಡವು. ಈ ನಾಟಕದ ಮಹತ್ವವೆಂದರೆ ಎರಡೂ ನಾಟಕಗಳಲ್ಲಿ ಪಂಡಿತ ಭೀಮಸೇನ ಜೋಶಿಯವರು ಪ್ರಧಾನ ಪಾತ್ರಧಾರಿಗಳಾಗಿದ್ದರು. ಅಲ್ಲದೆ ಮುಂದೆ ಅವರ ಸಹಧರ್ಮಿಣಿಯಾಗಲಿದ್ದ ಕು. ವತ್ಸಲಾ ಅವರು ನಾಯಕಿಯ ಪಾತ್ರವಹಿಸಿದ್ದರು. ನಾಟಕ ರಚನೆ ಬೇಂದ್ರೆ ಲಕ್ಷ್ಮಣರಾಯರದು. ನಾಟಕ ಗೀತೆಗಳನ್ನು ಬರೆದವರು ಬೆಟಗೇರಿ ಕೃಷ್ಣಶರ್ಮರು. ಸಂಘ ಕಟ್ಟಿ ಯೋಜಕರಾಗಿ ನಿಂತವರು ಸ್ವತಃ ನಾಟಕಕಾರರೇ ಆದ ಶ್ರೀ ಜಿ.ಬಿ. ಜೋಶಿಯವರು. ಕಲಾವಿಲಾಸಿಗಳೂ ಸಂಗೀತ ಪ್ರಧಾನವಾದ ನಾಟಕಗಳನ್ನು ಯಶಸ್ವಿಯಾಗಿ

ಅಭಿನಯಿಸಬಲ್ಲರೆಂಬುದಕ್ಕೆ ಆ ಎರಡೂ ನಾಟಕಗಳು ನಿದರ್ಶನವಾಗಿದ್ದವು. ಸುಶಿಕ್ಷಿತ ಸಮಾಜದ ಚಿತ್ರಣವನ್ನು ಚಿತ್ರಿಸುವ ನಾಟಕವನ್ನು ಅಭಿನಯಿಸಿದವರು ಸುಶಿಕ್ಷಿತರೇ ಆಗಿದ್ದರು. ಪ್ರೇಕ್ಷಕರ ವರ್ಗವೂ ಸುಶಿಕ್ಷಿತ ವರ್ಗವೇ ಆಗಿತ್ತು.

ಬೆಳಗಾವಿಯ 'ಕರ್ನಾಟಕ ಸಂಘ'ವು ಕರ್ನಾಟಕದಲ್ಲಿ ಮೊದಲಿಗೆ ಪ್ರಾರಂಭಗೊಂಡ ಸಂಘಗಳಲ್ಲಿ ಪ್ರಮುಖವಾದದ್ದು. ಈ ಸಂಘವು ತನ್ನ ಕಾರ್ಯಕ್ರಮಗಳಲ್ಲಿ ವೈವಿಧ್ಯತೆಯನ್ನು ತರುವ ನಿಟ್ಟಿನಲ್ಲಿ ನಾಟಕಗಳನ್ನು ಪ್ರದರ್ಶಿಸ ತೊಡಗಿತು. ಶ್ರೀರಂಗರ 'ಪ್ರಪಂಚ ಪಾಣಿಪತ್ತು', 'ಸಂಧ್ಯಾಕಾಲ' ಮೊದಲಾದ ನಾಟಕಗಳನ್ನು ಉತ್ಸಾಹದಿಂದ ರಂಗಭೂಮಿಗೆ ತಂದರು.[೩೯] ಎಚ್.ಜಿ. ಲೋಕೂರ, ಧ್ರುವರಾಜ ಮುತಾಲಿಕ, ತಾವಿಲದಾರ, ಹೇಮಂತ ಧರ್ಮಟ್ಟಿ ಮೊದಲಾದವರು ತಮ್ಮ ಅಭಿನಯದಿಂದ ಗಮನಸೆಳೆದಿದ್ದರು. ಬೆಳಗಾವಿಯ ಚಿಂತಾಮಣಿ ಪೇಟಕರ ಎನ್ನುವವರ ಮಗಳು ಈ ನಾಟಕಗಳಲ್ಲಿ ಸ್ತ್ರೀ ಪಾತ್ರವನ್ನು ಯಶಸ್ವಿಯಾಗಿ ನಿರ್ವಹಿಸುತ್ತಿದ್ದಳು. ಶಹಪೂರಕರರ ಪತ್ನಿ ಶ್ರೀಮತಿ ಕಮಲಾ ಒಂದೆರಡು ನಾಟಕಗಳಲ್ಲಿ ಪಾತ್ರವಹಿಸಿದ್ದಳು. ಅಲ್ಲದೆ ಮರಾಠಿಯವರಾದ ನಾಡಗೌಡ ಸೋದರಿಯರು ಈ ನಾಟಕಗಳಲ್ಲಿ ಅಭಿನಯಿಸಿದರು.

ಬೆಳಗಾವಿಯ ಬಿ. ಕೆ. ಮಾಡೆಲ್ ಶಿಕ್ಷಣ ಸಂಸ್ಥೆಯ ಹಾಯಸ್ಕೂಲಿನ ಹಳೆಯ ವಿದ್ಯಾರ್ಥಿ ಸಂಘವು ಒಂದು ಮರಾಠಿ, ಒಂದು ಕನ್ನಡ ಹೀಗೆ ಎರಡು ನಾಟಕಗಳನ್ನು ಪ್ರಕಾಶ ಟಾಕೀಜಿನಲ್ಲಿ ಅಭಿನಯಿಸಿದರು. ಎರಡೂ ನಾಟಕಗಳು ತುಂಬ ಯಶಸ್ವಿಯಾಗಿ ಪ್ರದರ್ಶನಗೊಂಡವು.

ಹೀಗೆ ಹವ್ಯಾಸಿ ರಂಗಭೂಮಿಯು ಬೆಳಗಾವಿಯಲ್ಲಿ ನಿರಂತರವಾಗಿ ಚಟುವಟಿಕೆಯಿಂದಲೇ ಸಾಗಿ ಬಂದಿದೆ. ಕಲೆಗೆ ಭಾಷೆ, ಧರ್ಮ, ಜಾತಿಗಳು ಅಡ್ಡ ಬರಲಾರವು ಎನ್ನುವುದು ಬೆಳಗಾವಿ ರಂಗಭೂಮಿಯಲ್ಲಿ ಮೊದಲಿನಿಂದಲೂ ಪ್ರಯೋಗಗೊಳ್ಳುತ್ತಲೆ ಬಂದಿದೆ. ಬೆಳಗಾವಿಯ ಬೀದಿಗಳಲ್ಲಿ ಕನ್ನಡ–ಮರಾಠಿಗರು ಬಡಿದಾಡುತ್ತಿದ್ದರೆ ಒಂದೇ ರಂಗಮಂದಿರದೊಳಗೆ ಕನ್ನಡ–ಮರಾಠಿ ಎರಡೂ ನಾಟಕಗಳು ನಡೆಯುತ್ತಿದ್ದವು. ಇದೇ ಕಲೆಯ ಶಕ್ತಿ.

ಬೆಳಗಾವಿಯಲ್ಲಿ ನಡೆಯುವ ನಾಡಹಬ್ಬ ಉತ್ಸವವು ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿದೆ. ಬೆಳಗಾವಿಯಲ್ಲಿ ಕನ್ನಡಭಾಷೆ ಸಂಸ್ಕೃತಿಯನ್ನು ಉಳಿಸಿ ಬೆಳೆಸುವಲ್ಲಿ ಮಹತ್ವದ ಪಾತ್ರವನ್ನು ವಹಿಸಿದೆ. ಈ ಸಂದರ್ಭದಲ್ಲಿ ಹಲವಾರು ಮಹತ್ವದ ನಾಟಕಗಳು ಹವ್ಯಾಸಿ ತಂಡಗಳಿಂದ ನಿರಂತರವಾಗಿ ಸಾಗಿಕೊಂಡು ಬಂದಿವೆ. ಬೆಳಗಾವಿಯ ಕರ್ನಾಟಕ ಸಂಘದ ಗೌರವ ಕಾರ್ಯದರ್ಶಿಯಾಗಿದ್ದ ಶ್ರೀ ಧ್ರುವರಾಜ ಮುತಾಲಿಕರು ಕೆಲವು ಮಿತ್ರರನ್ನು ಸಂಘಟಿಸಿ ನಾಡಹಬ್ಬದ ಸಂದರ್ಭದಲ್ಲಿ ಶ್ರೀರಂಗರ 'ಶೋಕ ಚಕ್ರ' ನಾಟಕವನ್ನು ಯಶಸ್ವಿಯಾಗಿ ಪ್ರಯೋಗಿಸುತ್ತಿದ್ದರು.

ಶ್ರೀ.ಜಿ. ಜಿ. ಪುರಾಣಿಕ ಎನ್ನುವವರು ವಾಣಿಜ್ಯ ತೆರಿಗೆ ಅಧಿಕಾರಿಗಳಾಗಿ ಬೆಳಗಾವಿಗೆ ಬಂದರು. ಹವ್ಯಾಸಿ ನಾಟಕಗಳನ್ನು ಅಭಿನಯಿಸುವುದರಲ್ಲಿ ಇವರಿಗೆ ಆಸಕ್ತಿ ಇತ್ತು. ಶ್ರೀರಂಗರ ಹಲವಾರು ನಾಟಕಗಳಲ್ಲಿ ಅಭಿನಯಿಸಿ

ಅನುಭವ ಪಡೆದುಕೊಂಡಿದ್ದರು. ಇವರ ಜೊತೆಗೆ ಅವರ ಶ್ರೀಮತಿ ಇಂದೂತಾಯಿಯವರು ಅಭಿನಯಿಸುತ್ತಿದ್ದರು. ಅವರು ಪುಣೆಯಲ್ಲಿದ್ದಾಗ ಶ್ರೀಮತಿ ಮಾಲತಿ ದೀಕ್ಷಿತರ 'ಜುಗಾರ' ಮರಾಠಿ ನಾಟಕದ ಕನ್ನಡ ಅನುವಾದವನ್ನು ಪುಣೆಯ ಕರ್ನಾಟಕ ಸಂಘದ ಆಶ್ರಯದಲ್ಲಿ ಯಶಸ್ವಿಯಾಗಿ ಆಡಿದ್ದರು. ಅದೇ ನಾಟಕವನ್ನು ಬೆಳಗಾವಿಯಲ್ಲಿ ಪ್ರದರ್ಶಿಸಿದರು. ನಾಟಕದಲ್ಲಿ ಪುರಾಣಿಕರೇ ನಾಟಕದ ರಾಯರಾಗಿ, ಅವರ ಪತ್ನಿ ಇಂದೂತಾಯಿಯವರು ಎರಡನೆಯ ಹೆಂಡತಿಯಾಗಿ, ಅಳಿಯನ ಪಾತ್ರದಲ್ಲಿ ಧ್ರುವರಾಜ ಮುತಾಲಿಕ ದೇಸಾಯಿ, ಮಕ್ಕಳಾಗಿ ಜಯದೇವರಾವ ಕುಲಕರ್ಣಿಯವರ ಮಕ್ಕಳು ಪಾತ್ರವಹಿಸಿದರು. ನಾಟಕವು ಅತ್ಯಂತ ಯಶಸ್ಸನ್ನು ಗಳಿಸಿತು. ಮರಾಠಿ ಕಲಾಪ್ರೇಮಿಗಳು ನಾಟಕವನ್ನು ವೀಕ್ಷಿಸಿದರು. ನಾಟಕಕ್ಕೆ ಮುಖ್ಯ ಅತಿಥಿಗಳಾಗಿ ದ.ರಾ.ಬೇಂದ್ರೆಯವರು ಬಂದಿದ್ದರು. ಕನ್ನಡಕ್ಕೆ ಅನುವಾದಗೊಳಿಸಿದ ಲಕ್ಷ್ಮಣರಾವ ಬೇಂದ್ರೆ ಹಾಗೂ ಧಾರವಾಡದ ನಾಟಕ ಪ್ರಿಯರು ಬಂದಿದ್ದರು. ಎಲ್ಲರೂ ನಾಟಕ, ಅಭಿನಯ ಎಲ್ಲವನ್ನು ಮೆಚ್ಚಿಕೊಂಡರು. ರಾಯರ ಹೆಂಡತಿಯ ಮಗಳ ಸಾಕು ತಂದೆಯ ಪಾತ್ರದಲ್ಲಿ ಶ್ರೀ ವೆಂಕಣ್ಣ ಸಾಂಗಲಿಯವರ ಅಭಿನಯವನ್ನು ಎಲ್ಲರೂ ಕೊಂಡಾಡಿದರು. ಮುಂದೆ ಈ ನಾಟಕ ರಾಜ್ಯಾದ್ಯಂತ ಹಲವಾರು ಸ್ಥಳಗಳಲ್ಲಿ ಯಶಸ್ವಿಯಾಗಿ ಪ್ರಯೋಗಗೊಂಡಿತು.

೧೯೮೦ರಲ್ಲಿ ಬೆಳಗಾವಿಯಲ್ಲಿ ಜನ್ಮ ತಾಳಿದ 'ರಂಗ ಸಂಪದ'ವು ರಂಗ ಚಟುವಟಿಕೆಗಳನ್ನು ತುಂಬ ಆಸ್ಥೆಯಿಂದ ನಡೆಸಿಕೊಂಡು ಬರುತ್ತಿದೆ. ವರುಷ ವರುಷವೂ ನಾಟಕೋತ್ಸವವನ್ನು ಏರ್ಪಡಿಸುವುದರ ಜೊತೆಗೆ ಹೊಸ ಹೊಸ ನಾಟಕಗಳನ್ನು ನೀಡುತ್ತಿದೆ. ಶ್ರೀ ಎಸ್. ಎಂ. ಕುಲಕರ್ಣಿ, ಶ್ರೀಪತಿ ಮಂಜನಬೈಲು ಅವರ ಸಂಚಾಲಕತ್ವದಲ್ಲಿ ನಿರಂತರ ಚಟುವಟಿಕೆಯಲ್ಲಿದೆ. ಪ್ರಜಾಪ್ರಭುತ್ವ, ಗರ್ಭಗುಡಿ, ಕದಡಿದ ನೀರು, ಸತ್ತವರ ನೆರಳು, ನಿರುದ್ಯೋಗ ಪರ್ವ, ಕ್ರಾಂತಿ ಬಂತು ಕ್ರಾಂತಿ, 'ಹಿಂಗೊಂದೂ ರಾಗ' ಮುಂತಾದ ನಾಟಕಗಳು ಬೆಳಗಾವಿ ಕಲಾಸಕ್ತರ ಗಮನವನ್ನು ಸೆಳೆದಿವೆ. ನಾಟಕಕಾರರಾದ ಚಂದ್ರಕಾಂತ ಕುಸನೂರರ ಮಾರ್ಗದರ್ಶನದಲ್ಲಿ ಬೆಳಗಾವಿಯ ಹವ್ಯಾಸಿ ರಂಗಭೂಮಿಯಲ್ಲಿ ವೈವಿಧ್ಯತೆ ಮೂಡಿ ಬರುತ್ತಿದೆ. ಪ್ರೊ.ಡಿ. ಎಸ್. ಚೌಗಲೆ ಹಾಗೂ ಶಿರೀಷ ಜೋಶಿಯವರ ಕ್ರೀಯಾಶೀಲ ಚಟುವಟಿಕೆಗಳು ರಂಗ ಸಂಪದಕ್ಕೆ ಜೀವ ತುಂಬಿವೆ. ಚೌಗಲೆಯವರ ಹಲವಾರು ನಾಟಕಗಳು ಜನಮನವನ್ನು ಸೆಳೆದಿವೆ. ದಿಶಾಂತರ, 'ಗಾಂಧಿ ವಿರುದ್ಧ ಗಾಂಧಿ' ಮುಂತಾದ ನಾಟಕಗಳು ಬೆಳಗಾವಿಯಲ್ಲಿ ಹಲವಾರು ಬಾರಿ ಪ್ರದರ್ಶನಗೊಂಡಿವೆ. ರಾ. ಕ. ನಾಯಕ, ಶಿರೀಷ ಜೋಶಿ, ರಾಮಕೃಷ್ಣ ಮರಾಠೆ, ಸರಜೂ ಕಾಟ್ಕರ್ ಮುಂತಾದ ಹೊಸ ಪೀಳಿಗೆಯ ನಾಟಕಕಾರರು, ನಟರು, ಬೆಳಗಾವಿಯಲ್ಲಿ ಹವ್ಯಾಸಿ ರಂಗಭೂಮಿಯ ಬೆಳವಣಿಗೆಯಲ್ಲಿ ಮಹತ್ವದ ಪಾತ್ರವಹಿಸುತ್ತಿದ್ದಾರೆ.



**ಸಂದರ್ಭ ಸೂಚಿ:**


೧. ಹೆಚ್. ಕೆ. ರಂಗನಾಥ, ಕರ್ನಾಟಕ ರಂಗಭೂಮಿ, ಪುಟ. ೭೪

೨. ಅದೇ.

೩. ಸಂದರ್ಶನ, ಪರಶುರಾಮ ಹಿತ್ತಲಮನಿ, ವಯಸ್ಸು ೮೦, ವಿಳಾಸ : ವಡಗಾಂವ, ದಿನಾಂಕ. ೩-೧೧-೨೦೧೦.

೪. ಡಾ. ಶ್ರೀರಾಮ. ಇಟ್ಟಣ್ಣವರ, ಶ್ರೀ. ಕುಲಗೋಡ ತಮ್ಮಣ್ಣ, 'ಬೆಳಗಾವಿ ಬೆಳಕು', ಸಂಸ್ಕರಣ ಸಂಪುಟ, ಪುಟ. ೪೪೧.

೫. ಅದೇ. ಪುಟ. ೪೪೨.

೬ ಸಂದರ್ಶನ, ಶ್ರೀ ಬಸವಣ್ಣೆಯ್ಯ ಪೂಜಾರ, ವಯಸ್ಸು : ೮೪, ವೀರಭದ್ರನಗರ ಬೆಳಗಾವಿ, ಸಂದರ್ಶನ ೧-೧೦-೨೦೧೦.

೭ ಡಾ. ಶ್ರೀರಾಮ ಇಟ್ಟಣ್ಣವರ : ಶ್ರೀಕೃಷ್ಣ ಪಾರಿಜಾತ: ಒಂದು ಅಧ್ಯಯನ, ಪುಟ. ೩೫೦.

೮. ಅದೇ. ಪುಟ. ೩೪೪.

೯. ಅದೇ. ಪುಟ. ೨೦೮, ೨೦೯.

೧೦. ಡಾ. ರಾಮಕೃಷ್ಣ ಮರಾಠೆ: ಕನ್ನಡ-ಮರಾಠಿ ರಂಗಭೂಮಿ ಸಂಬಂಧ, 'ಬೆಳಗಾವಿ ಬೆಡಗು', ಸ್ಮರಣ ಸಂಚಿಕೆ, ಪು. ೫೫.

೧೧. ಬಸವರಾಜ ಮಲಶೆಟ್ಟಿ: ಉತ್ತರ ಕರ್ನಾಟಕದ ಬಯಲಾಟಗಳು, ಪುಟ. ೧೧೧.

೧೨. ಬೆಳಗಾವಿ ಜಿಲ್ಲೆಯಲ್ಲಿ ವೃತ್ತಿ ರಂಗಭೂಮಿ, ಬಾಳಪ್ಪ ಏಣಿಗಿ ಬೆಳೆದ ಬಗೆ ಹಾಗೂ ವೈಖರಿ, ವೇಣುನಾದ ವಿಶೇಷ ಸಂಪುಟ, ಪುಟ. ೬೦.

೧೩. ಡಾ. ರಾ. ಯ. ಧಾರವಾಡಕರ: ಹೊಸಗನ್ನಡ ಸಾಹಿತ್ಯದ ಉದಯಕಾಲ, ಪುಟ. ೨೯೦.

೧೪. ಡಾ. ಎಚ್. ಕೆ. ರಂಗನಾಥ: ಕರ್ನಾಟಕ ರಂಗಭೂಮಿ, ಪುಟ. ೧೨೧.

೧೫. ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ: ಅಖಂಡ ಕರ್ನಾಟಕದ ಹೆಜ್ಜೆಗಳು. ಪು.೯೬

೧೬ ಅದೇ ಪುಟ. ೯೨.

೧೭. ಡಾ. ರಾ.ಯ. ಧಾರವಾಡಕರ: ಹೊಸಗನ್ನಡ ಸಾಹಿತ್ಯದ ಉದಯಕಾಲ, ಪುಟ. ೩೦೪.

೧೮. ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ: ಅಖಂಡ ಕರ್ನಾಟಕದ ಹೆಜ್ಜೆಗಳು, ಪುಟ. ೯೬.

೧೯. ಡಾ. ರಾ.ಯ. ಧಾರವಾಡಕರ: ಹೊಸಗನ್ನಡ ಸಾಹಿತ್ಯದ ಉದಯಕಾಲ, ಪುಟ. ೩೦೭.

೨೦. ಅದೇ. ಪುಟ. ೩೦೭.

೨೧. ಡಾ. ರಾಮಕೃಷ್ಣ ಮರಾಠೆ: 'ರಂಗಭೂಮಿ', ಪುಟ. ೪೭.

೨೨. ಡಾ. ರಾ. ಯ. ಧಾರವಾಡಕರ: ಹೊಸಗನ್ನಡ ಸಾಹಿತ್ಯದ ಉದಯಕಾಲ, ಪುಟ. ೩೦೫.

೨೩. ಬಾಬುರಾವ ದೇಸಾಯಿ: ರಾವಸಾಹೇಬ ಶಿವಮೂರ್ತಿಸ್ವಾಮಿ ಕಣಬರಗಿಮಠರು. ಪುಟ. ೯೦

೨೪. ಡಾ. ರಾಮಕೃಷ್ಣ ಮರಾಠೆ: ಕೊಣ್ಣೂರು ನಾಟಕ ಕಂಪನಿ. ಪುಟ. ೨೪.

೨೫. ಬಾಬುರಾವ ದೇಸಾಯಿ: ರಾವಸಾಹೇಬ ಶಿವಮೂರ್ತಿಸ್ವಾಮಿ ಕಣಬರಗಿಮಠರು. ಪುಟ. ೯೩.

೨೬ ಬೆಳಗಾವಿ ಜಿಲ್ಲೆಯಲ್ಲಿ ವೃತ್ತಿ ರಂಗಭೂಮಿ, ಬಾಳಪ್ಪ ಏಣಿಗಿ ಬೆಳೆದ ಬಗೆ ಹಾಗೂ ವೈಖರಿ, ವೇಣುನಾದ ವಿಶೇಷ ಸಂಪುಟ, ಪುಟ. ೬೩.

೨೭ ಏಣಗಿ ಬಾಳಪ್ಪ: ನಾನು ನಡೆದು ಬಂದ ದಾರಿ. ನಾಟ್ಯ ಭೂಷಣ, ಪುಟ. ೧೭.

೨೮. ದು.ನಿಂ. ಬೆಳಗಲಿ(ಸಂ): ನನ್ನ ಬಣ್ಣದ ಬದುಕು. ಪುಟ. ೯.

೨೯. ಅದೇ ಪುಟ. ೩೦.

೩೦. ಅದೇ ಪುಟ. ೭೬.

೩೧. ಅದೇ ಪುಟ. ೮೬.

೩೨. ರಾಘವೇಂದ್ರ ಜೋಶಿ: ಚೆನ್ನಮ್ಮಳಾದ ಚಿಂದೋಡಿ, ಬೆಳಗಾವಿ: ಕನ್ನಡ ಹೋರಾಟದ ಕೆಲವು ಪುಟಗಳು, ಪುಟ.೧೧೨.

೩೩. ಅದೇ ಪುಟ. ೧೧೩.

೩೪. ಅದೇ ಪುಟ. ೧೧೪.

೩೫. ರಾಘವೇಂದ್ರ ಜೋಶಿ: ಬೆಳಗಾವಿ ಕನ್ನಡ ಹೋರಾಟದ ಕೆಲವು ಪುಟಗಳು. ಪುಟ. ೧೧೫.

೩೬. ಪಿ.ಕೆ. ಬಾಗೋಜಿ: ನಮ್ಮ ಬೆಳಗಾವಿ. ಪುಟ. ೭೮.

೩೭ ಪಿ.ಕೆ. ಬಾಗೋಜಿ: ನಮ್ಮ ಬೆಳಗಾವಿ. ಪು೧. ೨೯.

೩೮. ಅದೇ. ಪುಟ. ೪೦.

೩೯. ಅದೇ. ಪುಟ. ೧೦೧.

❖❖

## ಅಧ್ಯಾಯ : ಹನ್ನೊಂದು

# ಸಮಾರೋಪ

ಬೆಳಗಾವಿ ನಗರಕ್ಕೆ ಕ್ರಿಶ. ದ ಆರಂಭದಿಂದಲೂ ಭವ್ಯ ಇತಿಹಾಸವಿದೆ. ರಾಜಕೀಯವಾಗಿ ಸಾಂಸ್ಕೃತಿಕವಾಗಿ ಬೆಳೆದ ಈ ನಗರ ಭಾವ ಸಾಮರಸ್ಯದ, ಸಂಸ್ಕೃತಿ ಸಾಮರಸ್ಯದ ಕೇಂದ್ರವಾಗಿ ಬೆಳೆಯುತ್ತ ಬಂದಿದೆ. ಹಿತಕರವಾದ ಹವಾಮಾನ, ಸುಂದರ ಪರಿಸರ ಹಾಗೂ ಆಯಕಟ್ಟಿನ ಭೌಗೋಲಿಕ ನೆಲೆ ಇವೆಲ್ಲ ಇಲ್ಲಿಯ ಬದುಕಿನ ಬೆಳವಣಿಗೆಗೆ ಅನುಕೂಲವೆನಿಸಿವೆ. ರಾಜಕೀಯ ಪ್ರೇರಣೆಯಿಂದ ಕನ್ನಡ ಮರಾಠಿ ಭಾಷೆಗಳ ಮಧ್ಯದಲ್ಲಿ ಗಡಿಸಮಸ್ಯೆಯ ಗದ್ದಲ ಮೇಲಿಂದ ಮೇಲೆ ಹೊರನೋಟಕ್ಕೆ ಕಂಡುಬಂದರೂ ಭಾವನಾತ್ಮಕವಾಗಿ ಬೆಳಗಾವಿ ಜನರು ತಾವು ಬೆಳಗಾವಿಯವರು ಎನ್ನುವ ಭಾವನೆಯಲ್ಲಿಯೇ ಸಾಮರಸ್ಯದಿಂದ ಬದುಕುತ್ತಿದ್ದಾರೆ. ಇದರಿಂದಾಗಿಯೇ ಬೆಳಗಾವಿ ಬೆಳೆಯಲು ಕಾರಣವಾಯಿತು. ಅಂತೆಯೇ ಇದನ್ನು ವಿಶಿಷ್ಟ ಸಾಂಸ್ಕೃತಿಕ ನಗರವಾಗಿ ಪ್ರತ್ಯೇಕವಾಗಿ ಗುರುತಿಸಲು ಸಾಧ್ಯವಾಯಿತು.

ಬೆಳಗಾವಿ, ಪ್ರಾಗೈತಿಹಾಸಿಕ ಸಂಸ್ಕೃತಿ ನೆಲೆಗಳಲ್ಲಿ ಒಂದಾಗಿ ಶಾತವಾಹನರ ಕಾಲದಲ್ಲಿ ಪ್ರಮುಖ ವ್ಯಾಪಾರ ಕೇಂದ್ರವಾಗಿ ವೈದಿಕ, ಬೌದ್ಧ, ಶೈವ ಮುಂತಾದ ಧರ್ಮಗಳನ್ನು ಒಳಗೊಂಡು ಪ್ರಸಿದ್ಧಿಯನ್ನು ಪಡೆದುಕೊಂಡಿರುವುದನ್ನು ಅ. ಸುಂದರ, ಪಂಚಮುಖಿ ಮುಂತಾದವರ ಉತ್ಖನನ, ಸಂಶೋಧನೆಯ ಮೂಲಕ ಸ್ಪಷ್ಟಪಡಿಸಿದ್ದಾರೆ. ಇಲ್ಲಿ ದೊರೆತ ಹಲವಾರು ಸ್ಮಾರಕ, ಶಾಸನ, ಮುಂತಾದವುಗಳು ಬೆಳಗಾವಿಯ ಪ್ರಾಚೀನ ಇತಿಹಾಸವನ್ನು ಸ್ಪಷ್ಟಪಡಿಸುತ್ತವೆ. ಇದರಿಂದ ಕ್ರಿ.ಪೂ.೧-೨ನೆಯ ಶತಮಾನದಿಂದಲೇ ಬೆಳಗಾವಿ ಅಸ್ತಿತ್ವದಲ್ಲಿರುವುದು ದೃಢಪಟ್ಟಿರುತ್ತದೆ. ಅಂದಿನಿಂದ ಬೆಳಗಾವಿಯ ಹೆಸರಿನಲ್ಲಿಯೂ ಹಲವಾರು ಬದಲಾವಣೆಗಳುಂಟಾದದ್ದು ವಿಶೇಷವಾಗಿದೆ. ಯದುಗ್ರಾಮ, ವೇಣುಗ್ರಾಮ, ಇಕ್ಷುಗ್ರಾಮ, ಬಳ್ಳಗ್ರಾಮ, ಬೆಳಗಾವಿ, ಮುಸ್ತಫಾಬಾದ್, ಅಜಂನಗರ, ಬೆಳಗಾವಿ, ಬೆಳಗಾಂವ, ಬೆಲ್ಗಮ್ ಹೀಗೆ

ವಿವಿಧ ಕಾಲ ಘಟ್ಟದಲ್ಲಿ ಬೇರೆ ಬೇರೆ ಕಾರಣಗಳಿಂದ ಬೆಳಗಾವಿಯ ಹೆಸರಿನಲ್ಲಿ ಬದಲಾವಣೆಗಳೂ ಉಂಟಾಗಿವೆ. ಬೆಳಗಾವಿಯ ಪ್ರಾಚೀನ ಇತಿಹಾಸದಲ್ಲಿ ಮೌರ್ಯರು, ಶಾತವಾಹನರು, ರಾಷ್ಟ್ರಕೂಟರು, ಕಲ್ಯಾಣ ಚಾಳುಕ್ಯರು, ಗೋವೆಯ ಕದಂಬರು, ರಟ್ಟರು ಮುಂತಾದ ಅರಸುಮನೆತನಗಳ ಆಡಳಿತವು ನಡೆದು ಇದರಲ್ಲಿ ಶಾತವಾಹನ ಹಾಗೂ ರಟ್ಟರ ಆಡಳಿತವು ಪ್ರಾಮುಖ್ಯತೆಯನ್ನು ಪಡೆದುಕೊಂಡಿರುತ್ತದೆ. ಶಾತವಾಹನರ ಕಾಲದಲ್ಲಿ ಬೆಳಗಾವಿಯು ದೇಶ ವಿದೇಶಗಳ ಜೊತೆಗೆ ವ್ಯಾಪಾರ ಸಂಬಂಧವನ್ನು ಹೊಂದಿ ಅಂದಿನ ಕಾಲದಲ್ಲಿ ಪ್ರಮುಖ ವ್ಯಾಪಾರಕೇಂದ್ರವಾಗಿ, ದಕ್ಷಿಣ ಭಾರತದಲ್ಲಿಯೇ ಅತ್ಯಂತ ಸುಸಜ್ಜಿತ ನಗರವಾಗಿ ರೂಪಗೊಂಡಿದ್ದು ಸಂಶೋಧನೆಗಳಿಂದ ದೃಢಪಟ್ಟಿದೆ. ಅಲ್ಲದೆ ಬೌದ್ಧ ಧರ್ಮವು ಪ್ರಚಾರದಲ್ಲಿರುವುದನ್ನು ಡಾ. ಎಂ.ಬಿ.ನೇಗಿನಹಾಳ, ಅ. ಸುಂದರ ಮುಂತಾದವರು ಗುರುತಿಸಿದ್ದಾರೆ. ಈ ಎಲ್ಲ ಹಿನ್ನೆಲೆಯಲ್ಲಿ ಪ್ರಾಚೀನ ಕರ್ನಾಟಕದ ಇತಿಹಾಸದ ಅಧ್ಯಯನಕ್ಕೆ ಬೆಳಗಾವಿ ಹೊಸ ಬೆಳಕನ್ನು ಚೆಲ್ಲುತ್ತದೆ. ರಟ್ಟರ ಆಳ್ವಿಕೆಯಲ್ಲಿ ಬೆಳಗಾವಿ ರಾಜಧಾನಿಯ ಪಟ್ಟವನ್ನು ಪಡೆದುಕೊಂಡು ಕಲೆ, ಶಿಕ್ಷಣ, ಸಾಹಿತ್ಯ ಕ್ಷೇತ್ರದಲ್ಲಿ ಮಹತ್ವದ ಬೆಳವಣಿಗೆಯನ್ನು ಹೊಂದಿ ಸಾಂಸ್ಕೃತಿಕವಾಗಿ ವಿಕಾಸಗೊಂಡಿತು. ಇವರ ಆಡಳಿತದ ಅವಧಿಯಲ್ಲಿ ಜೈನಧರ್ಮವು ಗಟ್ಟಿಯಾಗಿ ನೆಲೆಗೊಂಡಿತು. ಕರ್ನಾಟಕದ ಶ್ರೇಷ್ಠ ಶಿಲ್ಪಕಲಾಕೃತಿಗಳ ಸಾಲಿನಲ್ಲಿ ರಟ್ಟರ ನಿರ್ಮಾಣದ ಕಮಲ ಬಸದಿಯು ಸೇರಿದೆ. ನಾಡಿನ ಶ್ರೇಷ್ಠ ಕವಿಗಳಿಗೆ ಆಶ್ರಯ ನೀಡಿದ ನಾಲ್ಕನೆಯ ಕಾರ್ತವೀರ್ಯನ ಕಾಲದಲ್ಲಿ ಮಹತ್ವದ ಕೃತಿಗಳೂ ಮೂಡಿ ಬಂದವು.

ರಾಷ್ಟ್ರಕೂಟರ ಕಾಲದಲ್ಲಿ ಬೆಳಗಾವಿ ಇಕ್ಷುಗ್ರಾಮವೆಂದು ಕರೆಯಲ್ಪಟ್ಟು ಮುಂದೆ ಕಲ್ಯಾಣ ಚಾಳುಕ್ಯರ ಕಾಲದಲ್ಲಿ ವೇಣು ಗ್ರಾಮ-೭೦ ರ ವಿಭಾಗವಾಗಿ ನಂತರ ವೇಣುಗ್ರಾಮ-೨೦ ಎಂಬ ಉಪವಿಭಾಗವಾಗಿ ಆಳಲ್ಪಟ್ಟು, ಗೋವೆಯ ಕದಂಬರ ಇಮ್ಮಡಿ ಜಯಕೇಶಿಯ ಕಾಲದಲ್ಲಿ ರಾಣಿಯಾದ ಮೈಳಲದೇವಿಯು ರಾಜನಿಗೆ ಸಹಾಯಕಳಾಗಿ ಬೆಳಗಾವಿ ಪ್ರದೇಶವನ್ನು ನೋಡಿಕೊಳ್ಳುತ್ತಿದ್ದುದು ವಿಶೇಷವಾಗಿದೆ. ಮಧ್ಯಕಾಲೀನ ಇತಿಹಾಸದಲ್ಲಿ ಬೆಳಗಾವಿ ಬೇರೆ ಬೇರೆ ರಾಜರ ಆಳ್ವಿಕೆಗೆ ಒಳಪಟ್ಟು ಒಂದು ನಿಶ್ಚಿತವಾದ ಆಡಳಿತವನ್ನು ಹೊಂದದೆ ಸಂದಿಗ್ಧ ಸ್ಥಿತಿಯನ್ನು ಎದುರಿಸಿತು. ಈ ಅವಧಿಯಲ್ಲಿ ಬೆಳಗಾವಿಯು ಮೇಲಿಂದ ಮೇಲೆ ದಾಳಿಗಳನ್ನು ಎದುರಿಸಿತು. ದೇವಗಿರಿಯ ಯಾದವರು, ವಿಜಯನಗರದ ಅರಸರು, ಬಹಮನಿ ಸುಲ್ತಾನರು, ವಿಜಾಪುರದ ಆದಿಲಶಾಹರು, ಮೊಘಲರು, ಮರಾಠರು, ಸವಣೂರಿನ ನವಾಬರು, ಪೇಶ್ವೆಗಳು ಹೀಗೆ ಹಲವಾರು ರಾಜಮನೆತನಗಳು ಬೆಳಗಾವಿಯ ಮೇಲೆ ಆಡಳಿತವನ್ನು ನಡೆಸಿದ್ದರಿಂದ ಬೆಳಗಾವಿಯಲ್ಲಿ ವೈವಿಧ್ಯಮಯವಾದ ಸಂಸ್ಕೃತಿ ನಿರ್ಮಾಣಗೊಳ್ಳುವಂತಾಯಿತು.

ವಿಜಾಪುರದ ಸುಲ್ತಾನರ ಕಾಲದಲ್ಲಿ ಬೆಳಗಾವಿಯಲ್ಲಿ ಇಸ್ಲಾಂ ಸಂಸ್ಕೃತಿಯು ಹೆಚ್ಚು ಪ್ರಸಾರವನ್ನು ಪಡೆಯಿತು. ಮಸಿದೀಗಳು, ದರ್ಗಾಗಳು ತಲೆ ಎತ್ತಿದವು. ಅಸದಖಾನ ಎನ್ನುವ ಅಧಿಕಾರಿಯನ್ನು ನೇಮಿಸಿ ಆಡಳಿತವನ್ನು ನಡೆಸಿದರು. ಅಸದಖಾನನು ಸುಮಾರು ೩೬ ವರ್ಷಗಳವರೆಗೆ ಬೆಳಗಾವಿಯಲ್ಲಿ ಉತ್ತಮವಾದ ಆಡಳಿತವನ್ನು ನಡೆಸಿದನು. ಮುಂದೆ ಪೇಶ್ವೆಗಳ ಆಡಳಿತದಲ್ಲಿ ಬೆಳಗಾವಿಯು ಮರಾಠಿ ಸಂಸ್ಕೃತಿಯ ಪ್ರಭಾವಕ್ಕೆ ಒಳಪಟ್ಟಿತು. ಅಲ್ಲದೆ

ವ್ಯಾಪಾರಕೇಂದ್ರವಾಗಿ ದೇಶವಿದೇಶಗಳಲ್ಲಿ ಪ್ರಸಿದ್ಧಿಯನ್ನು ಹೊಂದಿತು. ಇಲ್ಲಿಯ ಚಿನ್ನಾಭರಣಗಳೂ, ಕುಸುರಿನ ಆಭರಣಗಳೂ ಪ್ರಸಿದ್ಧಿಯನ್ನು ಪಡೆದಿದ್ದವು. ಆಡಳಿತ, ಧರ್ಮ, ಸಮಾಜ, ಭಾಷೆಯ ಮೇಲೆ ಗಾಢವಾದ ಪ್ರಭಾವನ್ನು ಬೀರಿತು. ಮೂಲ ಕನ್ನಡ ಸಂಸ್ಕೃತಿಯ ಜೊತೆಗೆ ಮರಾಠಿ ಸಂಸ್ಕೃತಿಯು ಸೇರಿಕೊಂಡು ವೈವಿಧ್ಯಮಯವಾದ ಸಾಂಸ್ಕೃತಿಕ ವಾತಾವರಣ ಬೆಳೆಯಿತು.

ಆಧುನಿಕ ಇತಿಹಾಸದಲ್ಲಿ ಬೆಳಗಾವಿಯು ಬ್ರಿಟಿಷರ ಅಧಿಪತ್ಯಕ್ಕೆ ಒಳಪಟ್ಟು, ಚಾರಿತ್ರಿಕ ಮಹತ್ವವನ್ನು ಪಡೆದುಕೊಂಡಿತು. ಈ ಸಂದರ್ಭದಲ್ಲಿ ಜರುಗಿದ ಹಲವಾರು ಘಟನೆಗಳು ದೇಶದ ಗಮನವನ್ನು ಸೆಳೆದವು. ಪೇಶ್ವೆಗಳ ಅವಸಾನ, ಕಿತ್ತೂರ ಸಂಸ್ಥಾನದ ಸ್ವಾತಂತ್ರ್ಯ ಹೋರಾಟ, ಮುಂತಾದ ಘಟನೆಗಳಲ್ಲಿ ಬೆಳಗಾವಿ ಪ್ರಮುಖ ಪಾತ್ರವನ್ನು ವಹಿಸಿತು. ಅಲ್ಲದೆ ಬ್ರಿಟಿಷರ ಆಡಳಿತವು ಬೆಳಗಾವಿಯ ಶೈಕ್ಷಣಿಕ, ಆರ್ಥಿಕ, ಸಾಮಾಜಿಕ ವಲಯದ ಮೇಲೆ ಮಹತ್ವದ ಪರಿಣಾಮವನ್ನು ಬೀರಿತು. ಬೆಳಗಾವಿ ಜಿಲ್ಲೆಯು ಉದಯಗೊಂಡು ಸುಧಾರಣೆಗಳೂ ಉಂಟಾಗತೊಡಗಿದವು. ಇವರ ಕಾಲದಲ್ಲಿಯೇ ದೇಶದ ಸ್ವಾತಂತ್ರ್ಯ ಹೋರಾಟವು ದೇಶವ್ಯಾಪಿಯಾಗಿ ನಡೆದು ಅದು ಬೆಳಗಾವಿಗೂ ಪ್ರಭಾವ ಬೀರಿತು. ಅಂದಿನ ಮುಂಬೈ ಕರ್ನಾಟಕದ ಭಾಗದಲ್ಲಿ ಪುಣೆಯ ನಂತರ ಬೆಳಗಾವಿಯೇ ಸ್ವಾತಂತ್ರ್ಯ ಹೋರಾಟದ ಪ್ರಮುಖ ಕೇಂದ್ರವಾಗಿ ರೂಪಗೊಂಡಿತ್ತು. ಲೋಕಮಾನ್ಯ ಟಿಳಕ, ಮಹಾತ್ಮಾ ಗಾಂಧೀಜಿಯವರ ಪ್ರಭಾವದಲ್ಲಿ ಬೆಳಗಾವಿಯನ್ನು ಕೇಂದ್ರವಾಗಿಟ್ಟುಕೊಂಡು ಉತ್ತರಕರ್ನಾಟಕದ ಪ್ರದೇಶವೆಲ್ಲ ಸ್ವಾತಂತ್ರ್ಯ ಹೋರಾಟದಲ್ಲಿ ಪ್ರಬಲವಾಗಿ ಪಾಲ್ಗೊಂಡಿತ್ತು. ಅದರಲ್ಲಿಯೂ ೧೯೨೪ ರಲ್ಲಿ ಬೆಳಗಾವಿಯಲ್ಲಿ ಜರುಗಿದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನವು ಬೆಳಗಾವಿಗೆ ಚಾರಿತ್ರಿಕ ಮಹತ್ವವನ್ನು ದೊರಕಿಸಿಕೊಟ್ಟಿತು. ಮಹಾತ್ಮಾಗಾಂಧೀಜಿಯವರು ತಮ್ಮ ಜೀವಮಾನದಲ್ಲಿ ಒಮ್ಮೆ ಮಾತ್ರ ಅಧ್ಯಕ್ಷ ಸ್ಥಾನವನ್ನು ಬೆಳಗಾವಿಯ ವೇದಿಕೆಯ ಮೂಲಕ ಅಲಂಕರಿಸಿದ್ದು ಬೆಳಗಾವಿಗೆ ಅತ್ಯಂತ ಗೌರವದ, ಸ್ಮರಣೀಯ ವಿಷಯವಾಗಿದೆ. ಹಲವಾರು ಪ್ರಮುಖ ನಿರ್ಣಯಗಳಿಗೆ ಬದಲಾವಣೆಗಳಿಗೆ ಈ ಅಧಿವೇಶನವು ಸಾಕ್ಷಿಯಾಯಿತು. ಈ ಅಧಿವೇಶನದಿಂದಲೇ ಕರ್ನಾಟಕದಲ್ಲಿ ಸ್ವಾತಂತ್ರ್ಯ ಹೋರಾಟ ತೀವ್ರಗೊಂಡಿತು. ಅಲ್ಲದೆ ಬೆಳಗಾವಿಯ ಸಾಂಸ್ಕೃತಿಕ ವಲಯದ ಮೇಲೂ ಮಹತ್ವದ ಪ್ರಭಾವವನ್ನು ಬೀರಿತು. ಸ್ವಾತಂತ್ರ್ಯ ಹೋರಾಟದ ಜೊತೆಜೊತೆಯಲ್ಲಿಯೇ ನಾಡಿನ ಏಕೀಕರಣ ಚಳುವಳಿ ಕಾಂಗ್ರೆಸ್ ಅಧಿವೇಶನದ ಮೂಲಕವೇ ಆರಂಭಗೊಂಡದ್ದು ಮತ್ತೊಂದು ವೈಶಿಷ್ಟ್ಯ. ಅಖಿಲ ಕರ್ನಾಟಕ ಏಕೀಕರಣ ಸಂಘವು ಈ ಅಧಿವೇಶನದಲ್ಲಿ ಸ್ಥಾಪನೆಗೊಂಡು ದೇಶದ ಸ್ವಾತಂತ್ರ್ಯ ಮತ್ತು ನಾಡಿನ ಏಕೀಕರಣ ಎಂಬ ಎರಡು ಉನ್ನತ ಧ್ಯೇಯಗಳನ್ನು ಸಾಧಿಸಲು ಬೆಳಗಾವಿ ವೇದಿಕೆಯಾಗಿ ರೂಪಗೊಂಡಿತು.

ಬೆಳಗಾವಿ ರಾಷ್ಟ್ರ, ಅಂತರಾಷ್ಟ್ರೀಯ ಮಟ್ಟದಲ್ಲಿ ಗುರುತಿಸುವಂತದ್ದು ಇಲ್ಲಿ ನೆಲೆಗೊಂಡಿರುವ ಮಿಲಿಟರಿ ನೆಲೆಯಿಂದಾಗಿ. ಬ್ರಿಟಿಷರ ಕಾಲದಲ್ಲಿಯೇ ಬೆಳಗಾವಿ ಪ್ರಮುಖ ಸೈನಿಕ ನೆಲೆಯಾಗಿ ರೂಪಗೊಂಡಿತು. ಬೆಳಗಾವಿಯು

ರಕ್ಷಣೆಯ ದೃಷ್ಟಿಯಿಂದ ಅತ್ಯಂತ ಆಯಕಟ್ಟಿನ ನೆಲೆಗಳನ್ನು ಒಳಗೊಂಡಿದ್ದು ಇಲ್ಲಿ ಮಿಲಿಟರಿ ನೆಲೆಗೊಳ್ಳಲು ಪ್ರಮುಖ ಕಾರಣ. ಹೀಗಾಗಿ ಬ್ರಿಟಿಷರು ಇಲ್ಲಿ ಸ್ಥಳೀಯ ಜನರನ್ನು ಸೇರಿಸಿ ಮರಾಠಾ ಲೈಟ್ ಇನ್‌ಫೆಂಟ್ರಿ ಎಂಬ ಸೈನ್ಯವನ್ನು ಕಟ್ಟಿದರು. ಇದು ಬ್ರಿಟಿಷರ ಪರವಾಗಿ ಹಲವಾರು ಯುದ್ಧಗಳಲ್ಲಿ ಪಾಲ್ಗೊಂಡು ಶೌರ್ಯ, ಸಾಹಸಗಳಿಂದ ಹೋರಾಡಿ ಜಯವನ್ನು ತಂದುಕೊಟ್ಟಿದೆ. ಈಗಲೂ ದೇಶದ ಅತ್ಯುನ್ನತ ಸ್ಥಾನವನ್ನು ಈ ಸೈನ್ಯ ಪಡೆಯು ಹೊಂದಿದೆ.

ಬೆಳಗಾವಿಯು ಕರ್ನಾಟಕದ ಸಾಂಸ್ಕೃತಿಕ, ಐತಿಹಾಸಿಕ ಮಹತ್ವವುಳ್ಳ ಕೆಲವೇ ಕೆಲವು ನಗರಗಳಲ್ಲಿ ಒಂದಾಗಿದೆ. ಇಂದು ರಾಜ್ಯ ಐದನೆಯ ದೊಡ್ಡ ನಗರವಾಗಿ ರೂಪಗೊಂಡಿರುವ ಬೆಳಗಾವಿಯು ಹಂತಹಂತವಾಗಿ ಬೆಳವಣಿಗೆಯನ್ನು ಕಂಡಿದೆ. ಈ ಬೆಳವಣಿಗೆಯ ಹಂತಗಳನ್ನು ಖ್ಯಾತ ಸಂಶೋಧಕರಾದ ಡಾ. ಎಂ.ಬಿ.ನೇಗಿನಹಾಳರು ಗುರುತಿಸಿ ಮೂರು ಪಟ್ಟಣಗಳು, ಹಾಗೂ ಹದಿನಾರು ಹಳ್ಳಿಗಳು ಬೆಳಗಾವಿ ಮಹಾನಗರದಲ್ಲಿ ಸೇರಿಕೊಂಡಿರುವುದನ್ನು ಸ್ಪಷ್ಟಪಡಿಸಿದ್ದಾರೆ. ಈ ಹಂತಗಳನ್ನು ಗಮನಿಸಿದಾಗ ಇವುಗಳ ಪ್ರತ್ಯೇಕ ಅಸ್ತಿತ್ವದ ಒಳ ಸುಳಿವುಗಳು ನಿಖರವಾಗಿ ಕಂಡುಬರುತ್ತವೆ. ಶಹಪೂರ, ವಡಗಾವಿ, ಆನಿಗೋಳ, ಖಾಸಭಾಗ ಮುಂತಾದ ಪ್ರದೇಶಗಳು ಒಂದು ಕಾಲದಲ್ಲಿ ಪ್ರತ್ಯೇಕ ನಗರಗಳಾಗಿಯೇ ಬೇರೆ ಬೇರೆ ರಾಜರ ಆಡಳಿತಕ್ಕೆ ಒಳಪಟ್ಟಿರುವುದು ಇತಿಹಾಸದಿಂದ ತಿಳಿದುಬರುತ್ತದೆ. ಅಲ್ಲದೆ ಚವ್ಹಾಟ ಗಲ್ಲಿ, ಹೊಸೂರು, ಕಂಗ್ರಾಳಗಲ್ಲಿ ಬಾಂಧೂರಗಲ್ಲಿ ಹೊಸೂರು ಮುಂತಾದ ಪ್ರದೇಶಗಳಲ್ಲಿ ಹರಿಜನ ಕೇರಿಗಳು ಕಂಡುಬರುವುದರಿಂದ ಇವು ಒಂದೊಂದು ಹಳ್ಳಿಗಳಾಗಿಯೇ ಅಸ್ತಿತ್ವದಲ್ಲಿದ್ದದ್ದು ಸ್ಪಷ್ಟಗೊಳ್ಳುತ್ತದೆ. ಅಲ್ಲದೆ ಈ ಪ್ರತಿಯೊಂದು ಪ್ರದೇಶಗಳಲ್ಲಿಯ ಸಂಪ್ರದಾಯ ಆಚರಣೆ, ಧರ್ಮ, ಸಮಾಜ ಮುಂತಾದವುಗಳು ಭಿನ್ನಭಿನ್ನವಾಗಿಯೇ ಇರುತ್ತವೆ. ಈ ಎಲ್ಲ ವಿಷಯಗಳ ಅಧ್ಯಯನದ ಮೂಲಕ ಬೆಳಗಾವಿ ಮಹಾನಗರದ ಸ್ವರೂಪ ಸ್ಪಷ್ಟಗೊಳ್ಳುತ್ತದೆ. ಬೆಳಗಾವಿಯಲ್ಲಿ ಗಲ್ಲಿಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತವೆ. ಹೀಗಾಗಿ ಬೆಳಗಾವಿಗೆ ಗಲ್ಲಿಗಳ ನಗರವೆಂದು ಪರ್ಯಾಯ ಹೆಸರು ಬಂದಿದೆ. ಇಲ್ಲಿಯ ಒಂದೊಂದು ಗಲ್ಲಿಗಳು ಒಂದೊಂದು ವಿಶಿಷ್ಟವಾದ ಹಿನ್ನೆಲೆಯನ್ನು ಹೊಂದಿವೆ. ಚವ್ಹಾಟಗಲ್ಲಿ, ಗೊಂದಳಿಗಲ್ಲಿ, ದಂಬಾರಗಲ್ಲಿ, ತಹಸೀಲ್‌ದಾರ ಗಲ್ಲಿ, ರಿಸಲ್ದಾರಗಲ್ಲಿ, ಬೆಂಡಿಬಜಾರ, ಅನಂತಶಯನಗಲ್ಲಿ, ಗಣಪತಿಗಲ್ಲಿ, ಮಾರುತಿಗಲ್ಲಿ ಮುಂತಾದವುಗಳು ವಿಭಿನ್ನ ಸಂಸ್ಕೃತಿಯನ್ನು ಹೊಂದಿದವುಗಳಾಗಿವೆ.

ಬೆಳಗಾವಿಯು ವಿಶಿಷ್ಟವಾದ ಧಾರ್ಮಿಕ ಪರಂಪರೆಯನ್ನು ಹೊಂದಿದೆ. ಬೇರೆ ಬೇರೆ ಕಾರಣಗಳಿಂದ ಬೆಳಗಾವಿಗೆ ಬಂದು ನೆಲೆಸಿದ ವಿವಿಧ ಧರ್ಮ, ಜಾತಿ, ವರ್ಗ, ಪಂಗಡದ ಜನರು ಬೆಳಗಾವಿಯ ಮೂಲ ನಿವಾಸಿಗಳ ಜೊತೆಗೆ ಸೇರಿಕೊಂಡು ಬೆಳಗಾವಿಯವರೇ ಆಗಿದ್ದಾರೆ. ಮೂಲನಿವಾಸಿಗಳಾದ, ಬ್ರಾಹ್ಮಣ, ವೈಷ್ಣವ, ಶೈವ, ವೀರಶೈವ, ಜೈನ, ಹರಿಜನ, ಬಡಿಗ, ಕುಂಬಾರ, ಅಕ್ಕಸಾಲಿಗ, ಮೇದಾರ ಮುಂತಾದ ಜಾತಿ ಜನಾಂಗದ ಜನರು ಹಾಗೂ ಬೇರೆ ಬೇರೆ ಕಡೆಗಳಿಂದ ಬಂದು ನೆಲೆಸಿದ ಮರಾಠ, ಮುಸ್ಲಿಂ, ಕ್ರೈಸ್ತ, ಪಾರ್ಶಿ, ಮಾರವಾಡಿ ಮುಂತಾದ ಧರ್ಮ, ಜಾತಿಯ ಜನರು ಬೆಳಗಾವಿಯಲ್ಲಿ ಕಂಡುಬರುತ್ತಾರೆ. ಇವರೆಲ್ಲರ ಮಧ್ಯದಲ್ಲಿ ಸಾಮರಸ್ಯದ ಬದುಕು ಸಾಗಿ ಬಂದದ್ದು ಬೆಳಗಾವಿಯ ವೈಶಿಷ್ಟ್ಯವೆಂದೇ ಹೇಳಬಹುದಾಗಿದೆ. ಇಲ್ಲಿ ಎಂದೂ ಯಾವ ಕಾರಣಕ್ಕೂ ಜಾತಿ ಕಲಹಗಳು ನಡೆದದ್ದು ಕಂಡುಬಂದಿಲ್ಲ. ಈ ಎಲ್ಲ ಧರ್ಮ, ಜಾತಿ, ಜನಾಂಗಗಳಿಂದಾಗಿ ಬೆಳಗಾವಿಯಲ್ಲಿ

ವಿಶಿಷ್ಟವಾದ ಧಾರ್ಮಿಕ ವಾತಾವರಣ ನಿರ್ಮಾಣಗೊಂಡಿತು. ದೇವಾಲಯಗಳು, ಮಠ, ಬಸದಿ, ಮಸೀದಿ, ಚರ್ಚ್‌ಗಳು ನಿರ್ಮಾಣಗೊಂಡು ಬೆಳಗಾವಿಯನ್ನು ಧಾರ್ಮಿಕ ನೆಲೆಯನ್ನಾಗಿಸಿರುತ್ತವೆ.

ಬೆಳಗಾವಿಯಲ್ಲಿ ವಿಶಿಷ್ಟವಾದ ದೇವಾಲಯಗಳು ಇಲ್ಲಿಯ ಧಾರ್ಮಿಕ ಶ್ರದ್ಧೆ, ಭಕ್ತಿಯನ್ನು ತಿಳಿಸಿಕೊಡುತ್ತವೆ. ಬ್ರಹ್ಮವಿಷ್ಣು, ಶಿವ, ಕಾಮಣ್ಣ, ಶನಿದೇವರು, ಶ್ರೀರಾಮ, ಕುಂತಿದೇವಿ, ಅಶ್ವತ್ಥಾಮ, ಸೂರ್ಯ, ಮುಂತಾದ ದೇವಾಲಯಗಳು ವಿಶೇಷವಾದ ಗಮನವನ್ನು ಸೆಳೆಯುತ್ತವೆ. ಹೆಚ್ಚಾಗಿ ಗಣಪತಿ, ಮಾರುತಿ, ಶಿವದೇವಾಲಯಗಳು ಕಂಡುಬರುತ್ತವೆ. ಮಿಲಿಟರಿ ಮಹಾದೇವ, ಬಿಸ್ಕಿಟ್ ಮಹಾದೇವ ಮುಂತಾದ ಹೆಸರುಗಳು ಪ್ರಾದೇಶಿಕವಾಗಿ ರೂಢಿಯೊಳಗೆ ಬಂದಿವೆ. ಕಪಿಲೇಶ್ವರ ದೇವಾಲಯವು ವಿಶಿಷ್ಟವಾದ ದೇವಾಲಯವಾಗಿದೆ. ವೀರಶೈವ ಮಠಗಳು ಬೆಳಗಾವಿಯ ಸಾಂಸ್ಕೃತಿಕ ವಿಕಾಸದಲ್ಲಿ ಮಹತ್ವದ ಪಾತ್ರವನ್ನುವಹಿಸಿವೆ. ನಾಗನೂರು ರುದ್ರಾಕ್ಷಿಮಠವು ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ, ಭಾಷಿಕ ವಲಯದಲ್ಲಿ ಪರಿಣಾಮಕಾರಿಯಾದ ಕಾರ್ಯಗಳನ್ನು ಮಾಡಿದೆ.ಈ ಮಠವು ದೇಶದ ಸ್ವಾತಂತ್ರ್ಯ ಹೋರಾಟ, ಏಕೀಕರಣ ಹೋರಾಟದಲ್ಲಿ ಸ್ಫೂರ್ತಿಯನ್ನು ತುಂಬಿ ಹೋರಾಟಗಾರರಿಗೆ ಆಶ್ರಯ ತಾಣವಾಗಿ ರೂಪಗೊಂಡಿದ್ದು ವಿಶಿಷ್ಟವಾಗಿದೆ. ಅದರಂತೆ ಜೈನ ಬಸದಿಗಳು ಜೈನ ಮಠಗಳು ಪ್ರಾಚೀನ ಕಾಲದಿಂದಲೂ ಮಹತ್ವದ ಧಾರ್ಮಿಕ ಕೇಂದ್ರಗಳಾಗಿ ಬೆಳಗಾವಿಯ ಧಾರ್ಮಿಕ ಕ್ಷೇತ್ರವನ್ನು ಗಟ್ಟಿಗೊಳಿಸಿವೆ. ಮುಸ್ಲಿಂ ಧರ್ಮದ ಮಸೀದಿಗಳು ಮೊಘಲರ, ಆದಿಲ್ ಶಾಹಿಗಳ ಕಾಲದಲ್ಲಿ ನಿರ್ಮಾಣಗೊಂಡು ಇಸ್ಲಾಂ ಧರ್ಮದ ಪ್ರಮುಖ ಧಾರ್ಮಿಕ ಕೇಂದ್ರಗಳಾಗಿವೆ. ಕ್ರೈಸ್ತರ ಚರ್ಚ್‌ಗಳು ಬೆಳಗಾವಿಯ ವಿಶಿಷ್ಟ ಆಕರ್ಷಣೀಯ ಸ್ಮಾರಕಗಳಾಗಿವೆ. ಬೆಳಗಾವಿಯಲ್ಲಿ ಆಧುನಿಕತೆಯ ವಾತಾವರಣವನ್ನು ಹಾಗೂ ಸಾಮರಸ್ಯದ ಬದುಕನ್ನು ನಿರ್ಮಾಣಗೊಳಿಸುವಲ್ಲಿ ಈ ಚರ್ಚ್‌ಗಳು ಪ್ರಮುಖವಾದ ಪಾತ್ರವನ್ನು ವಹಿಸಿವೆ. ಹೊಸ ವರ್ಷಾಚರಣೆ, ಕ್ರಿಸಮಸ್ ಹಬ್ಬದ ಆಚರಣೆಗಳು ಪಾಶ್ಚಾತ್ಯ ಸಂಸ್ಕೃತಿಯ ದಟ್ಟವಾದ ಛಾಯೆಯನ್ನು ಹೊಂದಿವೆ. ಎಲ್ಲ ಧರ್ಮ, ಜಾತಿ, ಜನಾಂಗದವರು ಇದರಲ್ಲಿ ಪಾಲ್ಗೊಳ್ಳುವುದು ವಿಶೇಷವಾಗಿದೆ.

ಬೆಳಗಾವಿ ಎಲ್ಲ ನಗರಗಳಿಂದ ಪ್ರತ್ಯೇಕವಾಗಿ ಗುರುತಿಸಲ್ಪಡುವುದು ಇಲ್ಲಿಯ ಸಂಪ್ರದಾಯ ಆಚರಣೆಗಳಿಂದ. ಇವುಗಳ ಮೂಲಕ ಸಾಂಸ್ಕೃತಿಕ ಭಾವೈಕ್ಯತೆ ಮೂಡಿ ಸಾಮರಸ್ಯದ ಬದುಕು ನಿರ್ಮಾಣಗೊಂಡಿದೆ. ಇಲ್ಲಿಯ ಆಚರಣೆಗಳು ಕನ್ನಡ–ಮರಾಠಿ ಎರಡೂ ಸಂಸ್ಕೃತಿಗಳ ಸಮ್ಮಿಳನದಿಂದ ನಡೆದು ವಿಶೇಷವಾದ ಆಕರ್ಷಣೆಯನ್ನು ಹೊಂದಿರುತ್ತವೆ. ಸಂಕ್ರಾಂತಿ, ಶಿವರಾತ್ರಿ, ಹೋಳಿ, ಯುಗಾದಿ, ನಾಗಪಂಚಮಿ, ಗಣೇಶೋತ್ಸವ, ನವರಾತ್ರಿ, ದೀಪಾವಳಿ, ಕಾರಹುಣ್ಣಿಮೆ ಆಚರಣೆ, ಮುಂತಾದ ಆಚರಣೆಗಳಲ್ಲಿ ಕಂಡುಬರುವ ವೈವಿದ್ಯತೆ ವಿಶಿಷ್ಟವಾಗಿದೆ. ಜಾತ್ರೆ–ಮಹೋತ್ಸವಗಳೂ ವಿಶೇಷವಾದ ಆಕರ್ಷಣೆಯನ್ನು ಹೊಂದಿವೆ. ವಡಗಾವಿಯ ಗ್ರಾಮದೇವತೆ ಮಾಂಗಾಯಿದೇವಿಯ ಜಾತ್ರೆ ಬಸವಣ್ಣಗಲ್ಲಿಯ ಬಸವಣ್ಣದೇವರ ಜಾತ್ರೆ ಮುಂತಾದವುಗಳಲ್ಲಿ ಕಂಡು ಬರುವ ಹಳೆಯ ಸಂಪ್ರದಾಯಗಳು ಇಂದಿಗೂ ಮುಂದುವರೆದಿವೆ. ಪ್ರಾಣಿಬಲಿ, ಅಂಬಲಿ ಬಂಡಿ, ಕಿಚ್ಚ ಹಾಯುವುದು, ರಥೋತ್ಸವ ಮುಂತಾದ ಆಚರಣೆಗಳು ವಿಶೇಷವಾಗಿ ಗುರುತಿಸಲ್ಪಡುತ್ತವೆ.

ಬೆಳಗಾವಿಯ ಸಾಮಾಜಿಕ ಜೀವನವು ವಿಶಿಷ್ಟವಾಗಿದೆ. ಇಲ್ಲಿಯ ಮನೆಗಳಿಗೆ ಐತಿಹಾಸಿಕ ಮಹತ್ವವಿದೆ. ಶಾತವಾಹನರ ಕಾಲದ ಮನೆಗಳ ಕುರುಹುಗಳು ವಡಗಾವಿ-ಮಾಧವಪುರ ಪ್ರದೇಶದಲ್ಲಿ ಕಂಡುಬಂದಿವೆ. ಸುಮಾರು ಒಂದನೆಯ ಶತಮಾನದಲ್ಲಿಯೇ ಮಹಾನಗರವಾಗಿ ಬೆಳಗಾವಿ ರೂಪಗೊಂಡಿದ್ದರ ಬಗೆಗೆ ಪ್ರಮುಖ ಅವಶೇಷಗಳು ದೊರೆತಿವೆ. ಸಾರ್ವಜನಿಕ ಬೀದಿ, ರಾಜಬೀದಿ, ವ್ಯಾಪಾರಸ್ಥರ ಬೀದಿ, ಹೀಗೆ ಸುವ್ಯವಸ್ಥಿತವಾದ ನಗರ ರಚನೆಯ ಲಕ್ಷಣಗಳು ಸ್ಪಷ್ಟವಾಗಿ ಕಂಡುಬಂದಿವೆ. ಪೇಶ್ವೆಗಳ ಕಾಲದ, ಬ್ರಿಟಿಷರ ಕಾಲದ ಮನೆಗಳು ಇಂದಿಗೂ ಸುಸ್ಥಿತಿಯಲ್ಲಿವೆ. ಬೆಳಗಾವಿಯ ಮನೆಗಳಲ್ಲಿ ಕಂಡುಬರುವ ಒಂದು ಮುಖ್ಯವಾದ ವಿಶೇಷವೆಂದರೆ ಇಲ್ಲಿಯ ಬಡಾವಣೆಗಳಿಗನುಸಾರವಾಗಿ ಭಿನ್ನತೆಯನ್ನು ಹೊಂದಿದ ಮನೆಗಳು ಕಂಡುಬರುತ್ತವೆ. ಈ ಮನೆಗಳ ಮೇಲಿಂದಲೇ ಬೆಳಗಾವಿ ನಗರ ರಚನೆಯ ಸ್ಪಷ್ಟವಾದ ಚಿತ್ರಣ ದೊರೆಯುತ್ತದೆ. ಧರ್ಮ, ಜಾತಿಗನುಗುಣವಾದ ವಿಭಿನ್ನ ಮನೆಗಳು ಬೆಳಗಾವಿಯ ಮತ್ತೊಂದು ವೈಶಿಷ್ಟ್ಯವಾಗಿದೆ. ಕೆಲವು ವಾಡೆಗಳು ಬೆಳಗಾವಿಯ ಆಕರ್ಷಣೀಯ ಮನೆಗಳಾಗಿವೆ. ಲಿಂಗರಾಜರ ವಾಡೆ, ವಂಟಮೂರಿ ದೇಸಾಯರ ವಾಡೆ, ಕುರುಂದವಾಡ ರಾಜವಾಡೆ, ಜಮಖಂಡಿ ಸಂಸ್ಥಾನಿಕರ ವಾಡೆ, ಶಾಹು ಮಹಾರಾಜರ ವಾಡೆ ಮುಂತಾದ ವಾಡೆಗಳು ಗತಕಾಲದ ಇತಿಹಾಸ ಸಂಸ್ಕೃತಿಯನ್ನು ಪರಿಚಯಿಸುವ ಸ್ಮಾರಕಗಳಾಗಿವೆ.

ಬೆಳಗಾವಿಯ ಸಂಸ್ಕೃತಿ ವಿಶಿಷ್ಟವಾಗಿ ಗುರುತಿಸಲ್ಪಡುವುದು ಇಲ್ಲಿಯ ಜನರ ವೇಭೂಷಣ ಹಾಗೂ ಊಟ-ಉಪಚಾರಗಳ ಮೇಲಿಂದ. ವಿವಿಧ ಸಂಸ್ಕೃತಿಗಳ ಜನರು ಇಲ್ಲಿ ನೆಲೆಸಿರುವದರಿಂದ ಅವರವರ ಧರ್ಮ-ಜಾತಿ, ಸಂಪ್ರದಾಯಗಳಿಗನುಸಾರವಾಗಿ ವೇಷ-ಭೂಷಣಗಳು ಊಟಉಪಚಾರಗಳು ಕಾಣಬರುತ್ತವೆ. ಮರಾಠಾ, ಬಂಗಾಲಿ, ಗುಜರಾತಿ, ಪಂಜಾಬಿ, ಪಾರ್ಸಿ, ಕೊಂಕಣಿ ಹೀಗೆ ಜನಾಂಗದಿಂದ ಜನಾಂಗಕ್ಕೆ ವೇಷಭೂಷಣಗಳಲ್ಲಿ ವೈವಿಧ್ಯತೆಯಿರುವುದರಿಂದ ಅದು ಬೆಳಗಾವಿಯಲ್ಲಿಯ ಜನರಲ್ಲಿಯೂ ಕಂಡುಬರುತ್ತದೆ. ಗ್ರಾಮೀಣ ಪರಿಸರದ ಸಂಪ್ರದಾಯಬದ್ಧವಾದ ಉಡಿಗೆ ತೊಡಿಗೆಗಳು, ಆಧುನಿಕ ಫ್ಯಾಶನ್ ಪ್ರಭಾವದ ಉಡುಗೆ ತೊಡುಗೆಗಳೆರಡೂ ಬೆಳಗಾವಿ ಜನರಲ್ಲಿ ಕಂಡುಬರುತ್ತವೆ.

ಬೆಳಗಾವಿಯ ಊಟ ಉಪಚಾರವೂ ಬಹು ಸಂಸ್ಕೃತಿಯ ಸಂಗಮವನ್ನು ಪ್ರತಿನಿಧಿಸುತ್ತದೆ. ಮಹಾರಾಷ್ಟ್ರ, ಗೋವಾ, ಗುಜರಾತ, ಮುಂತಾದ ಹೊರರಾಜ್ಯಗಳ ಹಾಗೂ ಕರ್ನಾಟಕದ ಕರಾವಳಿ ಪ್ರದೇಶ, ಮಲೆನಾಡು, ಬಯಲು ನಾಡಿನ ಪ್ರದೇಶದ ಜನರು ಬೆಳಗಾವಿಯಲ್ಲಿ ನೆಲೆಸಿದ್ದರಿಂದ ಅಡುಗೆಯಲ್ಲಿ ವೈವಿಧ್ಯತೆ ಸಹಜವಾಗಿ ಕಂಡುಬರುತ್ತದೆ. ಅಲ್ಲದೆ ಬೆಳಗಾವಿಯ ಮಣ್ಣು, ನೀರು, ಹವಾಮಾನದ ಪರಿಣಾಮದಿಂದ ಇಲ್ಲಿಯ ಅಡಿಗೆಗೆ ವಿಶಿಷ್ಟವಾದ ರುಚಿ ಕಂಡುಬರುತ್ತದೆ. ಶಿರಾ, ಉಪ್ಪಿಟ್ಟು, ಮಿಸಳ, ಬಡಂಗ ಮುಂತಾದ ತಿಂಡಿ ತಿನಸುಗಳು, ರೊಟ್ಟಿ, ಚಪಾತಿ, ಚಟ್ನಿ, ನುಚ್ಚು ಅನ್ನ ಮುಂತಾದ ದಿನನಿತ್ಯದ ಊಟದ ಶಾವಿಗೆ, ಪಾಯಸ, ಮಂಡಿಗೆ, ಹೋಳಿಗೆ ಮುಂತಾದ ವಿಶೇಷ ಸಂದರ್ಭದ ಊಟವು ಬೆಳಗಾವಿಯಲ್ಲಿ ಕಂಡುಬರುತ್ತದೆ. ವಾಣಿಜ್ಯ ಕ್ಷೇತ್ರದಲ್ಲಿ ಪ್ರಮುಖವಾಗಿ

ಶಹಪೂರ ಸೀರೆ, ವಾಹನಗಳಿಗೆ ಕವಚ ನಿರ್ಮಾಣ, ಪೌಂಡ್ರಿ, ಹೆಲ್ಮೆಟ್, ಕುಂದಾ, ಉಪ್ಪಿನಕಾಯಿ ಮುಂತಾದವುಗಳು ಬೆಳಗಾವಿಗೆ ಆದಾಯವನ್ನು ಹೆಸರನ್ನು ತಂದುಕೊಟ್ಟಿವೆ.

ಇವೆಲ್ಲದರ ಪರಿಣಾಮವಾಗಿ ಬೆಳಗಾವಿಯಲ್ಲಿ ನಿರ್ಮಾಣಗೊಂಡ ಸಂಸ್ಕೃತಿಯು ವಿಶಿಷ್ಟವಾಗಿದೆ. ವಿಭಿನ್ನ ಸಂಸ್ಕೃತಿಗಳು ಬೆಳಗಾವಿಯಲ್ಲಿ ಸಂಕರಗೊಂಡಿವೆ. ಮೂಲತಃ ಗ್ರಾಮೀಣ ಸಂಸ್ಕೃತಿಯು ಬೆಳಗಾವಿಯ ಆಧುನಿಕತೆಯ ಪ್ರಭಾವಕ್ಕೊಳಗಾಗಿ ನಗರ ಸಂಸ್ಕೃತಿಯನ್ನು ಪಡೆದುಕೊಂಡಿದ್ದರೂ ಮೂಲ ಸಂಸ್ಕೃತಿಯು ಮುಂದುವರೆದುಕೊಂಡು ಸಾಗಿದೆ. ಇದು ನಗರದೊಳಗಿನ ಜನಪದದ ರೂಪದಲ್ಲಿ ಸಾಗುತ್ತಿದೆ.

ಬೆಳಗಾವಿಯ ಭಾಷೆ ವಿಶಿಷ್ಟವಾಗಿದೆ. ಇದರಿಂದ ಸಾಮರಸ್ಯ, ಸಮಸ್ಯೆ ಎರಡೂ ಉಂಟಾಗಿದೆ. ಗಡಿಭಾಗವಾದ ಬೆಳಗಾವಿಯ ಭಾಷೆಯಲ್ಲಿ ಕನ್ನಡ, ಮರಾಠಿ, ಕೊಂಕಣಿ, ಉರ್ದು ಮತ್ತು ಇಂಗ್ಲಿಷ್ ಭಾಷೆಗಳು ಪ್ರಭಾವ ಬೀರಿ ಇಲ್ಲಿಯ ಜನರ ಆಡುಮಾತುಗಳಲ್ಲಿ ವಿಶಿಷ್ಟವಾಗಿ ಬಳಕೆಯಾಗುವುದು ಕಂಡುಬರುತ್ತದೆ. ಇಲ್ಲಿಯ ವ್ಯಾಪಾರ, ಶಿಕ್ಷಣ, ಸಾಹಿತ್ಯದಲ್ಲಿ ಈ ವಿಶಿಷ್ಟ ಭಾಷೆಯ ಪ್ರಯೋಗ ದಿನನಿತ್ಯ ನಡೆಯುತ್ತಿರುತ್ತದೆ. ಬೇರೆ ಭಾಗದಿಂದ ಬಂದವರಿಗೆ ಬೆಳಗಾವಿಯ ಭಾಷೆ ಅರ್ಥವಾಗಲು ಕಷ್ಟವಾಗುತ್ತದೆ.

ಸಾಹಿತ್ಯ ವಲಯದಲ್ಲಿಯೂ ಬೆಳಗಾವಿ ಪ್ರಾಚೀನ ಕಾಲದಿಂದಲೂ ಗುರುತಿಸಲ್ಪಟ್ಟಿದೆ. ರಟ್ಟರ ಕಾಲದಲ್ಲಿ ಮಹತ್ವದ ಕಾವ್ಯ ಕೃತಿಗಳು ಬೆಳಗಾವಿ ನೆಲದಿಂದ ಹುಟ್ಟಿ ಬಂದವುಗಳಾಗಿವೆ. ನೇಮಿಚಂದ್ರ, ಪಾರ್ಶ್ವಪಂಡಿತ, ಬಾಳಚಂದ್ರ, ಎರಡನೆಯ ಗುಣವರ್ಮ, ಮುನಿಚಂದ್ರ, ವಾದಿರಾಜ ಮುಂತಾದ ಕವಿಗಳು ಬೆಳಗಾವಿಯಲ್ಲಿ ನೆಲೆ ನಿಂತು ಮಹತ್ವದ ಕಾವ್ಯಗಳನ್ನು ಶಾಸನಗಳನ್ನು ರಚಿಸಿರುವುದು ದಾಖಲೆಗಳಿಂದ ದೃಢಪಟ್ಟಿದೆ. ಹೊಸಗನ್ನಡ ಸಾಹಿತ್ಯದ ಸಂದರ್ಭದಲ್ಲಿಯೂ ಬೆಳಗಾವಿ ಮಹತ್ವದ ಸ್ಥಾನವನ್ನು ಹೊಂದಿತ್ತು. ಅರುಣೋದಯದ ಸಂದರ್ಭದಲ್ಲಿ ಬೆಳಗಾವಿ ಕವಿಗಳಿಗೆ ಸ್ಫೂರ್ತಿಯ ನೆಲೆಯಾಗಿತ್ತು. ಎಸ್. ಡಿ. ಇಂಚಲ, ಡಿ.ಎಸ್.ಕರ್ಕಿ, ಪ್ರ.ಗೋ. ಕುಲಕರಣಿ, ಮುಂತಾದವರಿಂದ ಬೆಳಗಾವಿಯ ಸಾಹಿತ್ಯ ಗಟ್ಟಿಗೊಂಡಿದೆ. ಇಂದಿಗೂ ಈ ಪರಂಪರೆ ಮುಂದುವರೆದುಕೊಂಡು ಬಂದು ಪ್ರಮುಖ ಕವಿಗಳು, ಕೃತಿಗಳು ಬೆಳಗಾವಿಯಿಂದ ಹೊರಹೊಮ್ಮಿವೆ. ಭಾಷೆಯನ್ನು ಸಂವಹನಗೊಳಿಸುವ ಕ್ರಿಯೆಯಲ್ಲಿ ಬೆಳಗಾವಿಯ ಮುದ್ರಣಾಲಯಗಳು ಪ್ರಕಾಶನ ಸಂಸ್ಥೆಗಳು, ಪತ್ರಿಕೆಗಳು, ಸಂಘಸಂಸ್ಥೆಗಳು ಹಾಗೂ ಸಾಹಿತ್ಯ ಸಮ್ಮೇಳನಗಳು ವಿಶಿಷ್ಟವಾಗಿವೆ.

ಮುದ್ರಣಾಲಯಗಳ ಪ್ರಾರಂಭದ ಹಂತದಲ್ಲಿಯೇ ಬೆಳಗಾವಿಯಲ್ಲಿ ಮುದ್ರಣ ಕಾರ್ಯವು ನಡೆದು, ಮುದ್ರಣ ಮೊಳೆಗಳ ಉತ್ಪಾದನಾ ಕೇಂದ್ರವಾಗಿ ಬೆಳೆದು ಮಹತ್ವದ ಕಾರ್ಯ ನಡೆದಿದೆ. ಬೆಳಗಾವಿ ಸಮಾಚಾರ ಮುದ್ರಣಾಲಯದ ಮೂಲಕ ಮಹತ್ವದ ಮುದ್ರಣ ಕಾರ್ಯ ನಡೆದದ್ದು ಗಮನಾರ್ಹವಾಗಿದೆ. ಬೆಳಗಾವಿಯ ಪುಸ್ತಕ ಪ್ರಕಾಶನ ಸಂಸ್ಥೆಗಳ

ಕಾರ್ಯವೂ ಗುರುತರವಾಗಿದೆ. ರಾಮತತ್ವ ಪ್ರಕಾಶನ, ಶರದ ಪ್ರಕಾಶನ ಮುಂತಾದ ಪ್ರಕಾಶನ ಸಂಸ್ಥೆಗಳ ಮೂಲಕ ನೂರಾರು ಕೃತಿಗಳು ಪ್ರಕಟಗೊಂಡಿರುತ್ತವೆ. ಬೆಳಗಾವಿಯ ಪತ್ರಿಕೋದ್ಯಮಕ್ಕೆ ಮಹತ್ವದ ಇತಿಹಾಸವಿದೆ. ಮಂಗಳೂರು ಸಮಾಚಾರ ಪತ್ರಿಕೆ ಪ್ರಾರಂಭಗೊಂಡ ಏಳು ವರ್ಷಗಳ ಅಂತರದಲ್ಲಿ ಬೆಳಗಾವಿಯಲ್ಲಿ ಸುಬುದ್ಧಿ ಪ್ರಕಾಶ ಎಂಬ ಪತ್ರಿಕೆ ಹುಟ್ಟಿ ಮರಾಠಿ–ಕನ್ನಡ ಎರಡೂ ಭಾಷೆಗಳಲ್ಲಿ ಪ್ರಸಾರಗೊಳ್ಳುತ್ತಿದ್ದುದು ವಿಶೇಷವಾಗಿದೆ. ಮಠ ಪತ್ರಿಕೆ ಕರ್ನಾಟಕವನ್ನು ಶೈಕ್ಷಣಿಕವಾಗಿ, ಸಾಂಸ್ಕೃತಿಕವಾಗಿ ಅಧ್ಯಯನ ಕೈಕೊಳ್ಳುವಲ್ಲಿ ಪ್ರಮುಖವಾದ ದಾಖಲೆಯನ್ನು ಒದಗಿಸುತ್ತದೆ. ಉತ್ತರ ಕರ್ನಾಟಕ ಶೈಕ್ಷಣಿಕ ಬೆಳವಣಿಗೆಗೆ ಈ ಪತ್ರಿಕೆಯ ಕೊಡುಗೆ ವಿಶಿಷ್ಟವಾಗಿದೆ. ಸಂಯುಕ್ತ ಕರ್ನಾಟಕ ಪತ್ರಿಕೆ ಬೆಳಗಾವಿ ನೆಲದಲ್ಲಿ ಹುಟ್ಟಿ ಪ್ರಾರಂಭದ ದಿನಗಳನ್ನು ಕಳೆದಿದೆ. ಕನ್ನಡ ಮರಾಠಿ ಎರಡೂ ಭಾಷೆಯ ಪತ್ರಿಕೆಗಳು ಇಂದು ಬೆಳಗಾವಿಯ ಸಾಂಸ್ಕೃತಿಕ ವಿಕಾಸದಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತಿವೆ. ಬೆಳಗಾವಿಯ ಸಾಂಸ್ಕೃತಿಕ ವಿಕಾಸದಲ್ಲಿ ಇಲ್ಲಿಯ ಸಂಘ ಸಂಸ್ಥೆಗಳು ವಿಶಿಷ್ಟವಾದ ಕೆಲಸಕಾರ್ಯಗಳನ್ನು ಮಾಡಿವೆ, ಕಲೆ, ಸಾಹಿತ್ಯ, ಸಂಗೀತ, ಸಂಸ್ಕೃತಿ, ನಾಡು–ನುಡಿಯ ಬೆಳವಣಿಗೆಯಲ್ಲಿ ಹಲವಾರು ಸಂಘ ಸಂಸ್ಥೆಗಳು ಗುರುತರ ಕಾರ್ಯವನ್ನು ಕೈಕೊಂಡಿವೆ. ಕರ್ನಾಟಕ ಸಂಘ, ನಾಡ ಹಬ್ಬ ಉತ್ಸವ ಸಮಿತಿ, ಕನ್ನಡ ಬಳಗ ಕನ್ನಡ ಚಳುವಳಿಗಾರರ ಸಂಘ, ವಾಙ್ಮಯ ಚರ್ಚಾಮಂಡಳ, ವ್ಯಾಖ್ಯಾನ ಮಾಲಾ, ಮುಂತಾದ ಕನ್ನಡ–ಮರಾಠಿ ಸಂಘಸಂಸ್ಥೆಗಳು ಪ್ರಮುಖವಾಗಿವೆ.

ಬೆಳಗಾವಿಯ ಸಾಹಿತ್ಯ ಸಮ್ಮೇಳನಕ್ಕೆ ವಿಶಿಷ್ಟವಾದ ಪರಂಪರೆ ಇದೆ. ಬೇರೆಲ್ಲ ಪ್ರದೇಶಗಳಿಗಿಂತ ತೀರ ಭಿನ್ನವಾಗಿ ಇಲ್ಲಿ ಸಮ್ಮೇಳನಗಳು ಜರುಗುತ್ತಿವೆ. ಅಖಿಲಭಾರತ ಸಾಹಿತ್ಯ ಸಮ್ಮೇಳನಗಳು, ಒಟ್ಟು ಐದು ಬಾರಿ ಜರುಗಿ ರಾಜ್ಯದಲ್ಲಿಯೇ ಅತೀ ಹೆಚ್ಚು ಸಾಹಿತ್ಯ ಸಮ್ಮೇಳನಗಳನ್ನು ನಡೆಸಿದ ನಗರವಾಗಿ ಬೆಳಗಾವಿ ಗುರುತಿಸಲ್ಪಡುತ್ತಿದೆ. ಚುಟುಕು ಸಾಹಿತ್ಯ ಸಮ್ಮೇಳನ, ಯಕ್ಷಗಾನ ಬಯಲಾಟ ಸಮ್ಮೇಳನ, ವಿಶ್ವಕನ್ನಡ ಸಮ್ಮೇಳನ ಹೀಗೆ ಹಲವಾರು ಸಮ್ಮೇಳನಗಳು ಬೆಳಗಾವಿಯಲ್ಲಿ ಜರುಗಿ ಬೆಳಗಾವಿಯನ್ನು ಸಾಂಸ್ಕೃತಿಕವಾಗಿ ನಿರ್ಮಿಸಿವೆ.

ಶೈಕ್ಷಣಿಕ ಕ್ಷೇತ್ರದಲ್ಲಿಯೂ ಬೆಳಗಾವಿ ಜಾಗತಿಕ ಮನ್ನಣೆಗೆ ಪಾತ್ರವಾಗಿದೆ. ಕರ್ನಾಟಕದ ಪ್ರಮುಖ ಶಿಕ್ಷಣ ಕೇಂದ್ರವಾಗಿ ರೂಪಗೊಳ್ಳುತ್ತಿದೆ. ಪ್ರಾಚೀನ ಕಾಲದಿಂದಲೂ ಇಲ್ಲಿಯ ಜನರು ಶಿಕ್ಷಣವನ್ನು ಹೊಂದಿದ್ದರು ಎನ್ನುವುದು ದಾಖಲೆಗಳ ಮೂಲಕ ತಿಳಿದು ಬರುತ್ತದೆ. ರಟ್ಟರ ಕಾಲದಲ್ಲಿ ಕಲೆ, ಸಂಗೀತಗಳು ಶಿಕ್ಷಣದ ಪ್ರಮುಖ ಅಂಗಗಳಾಗಿದ್ದವು. ಆಧುನಿಕ ಶಿಕ್ಷಣ ಪದ್ಧತಿಯ ಪ್ರಾರಂಭದ ಹಂತದ ಬ್ರಿಟಿಷರ ಕಾಲದಲ್ಲಿ ಬೆಳಗಾವಿಯು ಶೈಕ್ಷಣಿಕವಾಗಿ ಮಹತ್ವವನ್ನು ಪಡೆದುಕೊಂಡಿತು. ಸರದಾರ ಹೈಸ್ಕೂಲ್, ಬೆನನ್‌ಸ್ಮಿತ್ ಹಾಯಸ್ಕೂಲ್, ಟ್ರೇನಿಂಗ್ ಕಾಲೇಜುಗಳು ಸ್ಥಾಪನೆಗೊಂಡವು. ಮುಂದೆ ಕೆ.ಎಲ್.ಇ. ಸಂಸ್ಥೆಯ ಉದಯದೊಂದಿಗೆ ಬೆಳಗಾವಿ ಶೈಕ್ಷಣಿಕ ಪ್ರಗತಿಯನ್ನು ಹೊಂದಿತು. ಬೆಳಗಾವಿಯನ್ನು ಕೇಂದ್ರವಾಗಿಟ್ಟುಕೊಂಡು ಸ್ಥಾಪನೆಗೊಂಡ ಈ ಸಂಸ್ಥೆಯು ಉತ್ತರ ಕರ್ನಾಟಕದ ಶೈಕ್ಷಣಿಕ ವಿಕಾಸಕ್ಕೆ ಕಾರಣವಾಯಿತು. ಜಿ. ಎ. ಹೈಸ್ಕೂಲ್, ಲಿಂಗರಾಜ ಮಹಾವಿದ್ಯಾಲಯ, ವೈದ್ಯಕೀಯ, ಇಂಜನೀಯರಿಂಗ್ ಹೀಗೆ ಎಲ್ಲ ವಿವಿಧ

ಶಿಕ್ಷಣವನ್ನು ನೀಡಿ ಬೆಳಗಾವಿಯ ಸರ್ವತೋಮುಖ ಅಭಿವೃದ್ಧಿಗೆ ಕಾರಣವಾಯಿತು. ಇದರೊಂದಿಗೆ ಬೇರೆ ಬೇರೆ ಶಿಕ್ಷಣ ಸಂಸ್ಥೆಗಳು ಮಹಾವಿದ್ಯಾಲಯಗಳೂ ಸ್ಥಾಪನೆಗೊಂಡವು. ಮರಾಠಾ ಮಂಡಳ, ಕರ್ನಾಟಕ ಶಿಕ್ಷಣ ಸಂಸ್ಥೆ, ಜೈನ್ ಶಿಕ್ಷಣ ಸಂಸ್ಥೆ, ಅಂಜುಮನ್ ಶಿಕ್ಷಣ ಸಂಸ್ಥೆ, ಶೇಖ ಶಿಕ್ಷಣ ಸಂಸ್ಥೆ, ಜನತಾ ಶಿಕ್ಷಣ ಸಂಸ್ಥೆ ಹೀಗೆ ಹತ್ತಾರು ಶಿಕ್ಷಣ ಸಂಸ್ಥೆಗಳ ಮೂಲಕ ಇಂದು ನೂರಾರು ಶಾಲೆ–ಕಾಲೇಜುಗಳು ಬೆಳಗಾವಿಯಲ್ಲಿ ಪ್ರಾರಂಭಗೊಂಡಿವೆ. ಈ ಸಂದರ್ಭದಲ್ಲಿ ನಾಗನೂರು ರುದ್ರಾಕ್ಷಿ ಮಠದ ಕಾರ್ಯ ಶ್ಲಾಘನೀಯವಾಗಿದೆ. ಉಚಿತ ಪ್ರಸಾದ ನಿಲಯವನ್ನು ಸ್ಥಾಪಿಸುವುದರ ಮೂಲಕ ಬಡ ವಿದ್ಯಾರ್ಥಿಗಳಿಗೆ ಆಶ್ರಯವನ್ನು ನೀಡಿತು. ಇಂದು ಬೆಳಗಾವಿಯಲ್ಲಿ ಐದು ಇಂಜನೀಯರಿಂಗ ಕಾಲೇಜುಗಳು ಎರಡು ವೈದ್ಯಕೀಯ ಕಾಲೇಜುಗಳು, ಮೂರು ದಂತ ವೈದ್ಯ, ಐದು ತಾಂತ್ರಿಕ ವಿದ್ಯಾಲಯಗಳು, ಏಳು ಪದವಿ ಮಹಾವಿದ್ಯಾಲಯಗಳಿವೆ. ಮೂರು ವಿಶ್ವವಿದ್ಯಾಲಯಗಳು ಬೆಳಗಾವಿಯಲ್ಲಿ ಸ್ಥಾಪನೆಗೊಂಡಿವೆ. ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯವು ದೇಶದಲ್ಲಿಯೇ ಶ್ರೇಷ್ಠ ವಿಶ್ವವಿದ್ಯಾಲಯಗಳಲ್ಲಿ ಒಂದಾಗಿ ಬೆಳೆಯುತ್ತಿದೆ.

ಕಲೆ–ವಾಸ್ತುಶಿಲ್ಪ–ಚಿತ್ರಕಲೆ–ಸಂಗೀತವು ಬೆಳಗಾವಿಯಲ್ಲಿ ಆಡಳಿತ ನಡೆಸಿದ ಅರಸರ ಪ್ರಮುಖ ಕೊಡುಗೆಗಳಾಗಿವೆ. ಇವು ಬೆಳಗಾವಿ ಸಂಸ್ಕೃತಿಯನ್ನು ಅರಿಯಲು ಪೂರಕವಾಗಿವೆ. ರಂಗಭೂಮಿ, ಕ್ಷೇತ್ರದಲ್ಲಿಯೂ ಬೆಳಗಾವಿ ವಿಶಿಷ್ಟವಾಗಿ ಗುರುತಿಸಲ್ಪಡುತ್ತದೆ. ಇಲ್ಲಿಯ ಜಾನಪದ ರಂಗಭೂಮಿಯು ವಿಶಿಷ್ಟವಾಗಿ ಬೆಳೆದು ಬಂದಿದೆ. ತೊಗಲು ಗೊಂಬೆಯಾಟ, ಯಕ್ಷಗಾನ, ಬಯಲಾಟ, ಮುಂತಾದ ಜಾನಪದ ಕಲೆ, ನಾಟಕಗಳು ಪ್ರದರ್ಶನಗೊಂಡಿವೆ. ವೃತ್ತಿರಂಗಭೂಮಿಯಲ್ಲಿಯೂ ಬೆಳಗಾವಿ ಗಮನಸೆಳೆದಿದೆ. ನಾಡಿನ ಹೆಸರಾಂತ ನಾಟಕ ಮಂಡಳಿಗಳು ಬೆಳಗಾವಿಯಲ್ಲಿ ನೆಲೆ ನಿಂತು ನಿರಂತರವಾಗಿ ವರ್ಷಾನುಗಟ್ಟಲೆ ನಾಟಕ ಪ್ರದರ್ಶನಗಳನ್ನು ನಡೆಸಿದ್ದು ದಾಖಲೆಗೊಂಡಿದೆ. ಮಹಾರಾಷ್ಟ್ರದ ಪ್ರಭಾವದಲ್ಲಿ ಇಲ್ಲಿಯ ಜನರು ನಾಟಕದಲ್ಲಿ ಆಸಕ್ತಿಯನ್ನು ತಾಳಿದರು. ಭಾಷಾ ಸಮಸ್ಯೆಯಿಂದಾಗಿ ಆಗಾಗ ತೊಂದರೆಗಳನ್ನು ಎದುರಿಸಿಯೂ ಯಶಸ್ವಿಯಾಗಿ ಪ್ರದರ್ಶನಗಳನ್ನು ನಡೆಸಿ ಕನ್ನಡಿಗರಲ್ಲಿ ಭಾಷೆ, ಕಲೆ, ಸಂಸ್ಕೃತಿಗಳ ಬಗೆಗೆ ಅಭಿಮಾನವನ್ನು ಬಿತ್ತಿವೆ. ಬೆಳಗಾವಿಯ ರಂಗಭೂಮಿಯ ಮೇಲೆ ಏಣಗಿ ಬಾಳಪ್ಪನವರ ಪ್ರಭಾವ ಹೆಚ್ಚಾಗಿ ಕಂಡುಬರುತ್ತದೆ. ನಾಟಕಗಳ ಮೂಲಕ ಬೆಳಗಾವಿಯ ಸಾಂಸ್ಕೃತಿಕ ವಲಯದ ಮೇಲೆ ಪರಿಣಾಮವನ್ನು ಬೀರಿದ್ದಾರೆ. ಆಧುನಿಕ ಹವ್ಯಾಸಿ ರಂಗಭೂಮಿಯ ನಾಟಕಗಳೂ ಬೆಳಗಾವಿಯಲ್ಲಿ ನಿರಂತರವಾಗಿ ಸಾಗಿಕೊಂಡು ಬರುತ್ತಿವೆ. ನಾಡಿನ ವಿವಿಧ ಕಲಾ ತಂಡಗಳ ನಾಟಕಗಳು ಮೇಲಿಂದ ಮೇಲೆ ಪ್ರದರ್ಶನಗೊಳ್ಳುತ್ತಿವೆ.

ಇಂದು ಬೆಳಗಾವಿಯು ನಾಡಿನ ಉಪರಾಜಧಾನಿಯಾಗುವ ನಿಟ್ಟಿನಲ್ಲಿ ಸಾಗುತ್ತಿದೆ. ವಿಧಾನ ಮಂಡಳದ ಅಧಿವೇಶನ, ಸುವರ್ಣ ವಿಧಾನಸೌಧದ ನಿರ್ಮಾಣ, ಇವು ಬೆಳಗಾವಿಗೆ ವಿಶೇಷವಾದ ಸ್ಥಾನಮಾನಗಳನ್ನು ಒದಗಿಸಿವೆ. ಇದರಿಂದ ಬೆಳಗಾವಿಯ ಸ್ವರೂಪ ಬದಲಾಗಿದೆ. ಒಂದು ಶತಮಾನದ ಹಿಂದೆ ಹಳ್ಳಿಯ ಸ್ವರೂಪದಲ್ಲಿದ್ದ ಬೆಳಗಾವಿಯು ಇಂದು ಮಹಾನಗರವಾಗಿ ಬೆಳವಣಿಗೆಯನ್ನು ಹೊಂದಿದೆ. ಶಿಕ್ಷಣ, ವಾಣಿಜ್ಯ, ಕೈಗಾರಿಕೆ ಮುಂತಾದ ವಲಯದಲ್ಲಿ ಮಹತ್ವದ ಬದಲಾವಣೆಗಳುಂಟಾಗಿವೆ. ಇದರಿಂದಾಗಿಯೇ ಬೆಳಗಾವಿಯು ಸಾಂಸ್ಕೃತಿಕವಾಗಿ ಬದಲಾಗಿದೆ.

ಒಟ್ಟಿನಲ್ಲಿ ಬೆಳಗಾವಿಯ ಸಾಂಸ್ಕೃತಿಕ ಅಧ್ಯಯನವನ್ನು ಸಂಶೋಧನೆಗೆ ಒಳಪಡಿಸಿದಾಗ ಸುಮಾರು ಎರಡು ಸಾವಿರ ವರ್ಷಗಳ ಹಿಂದಿನಿಂದಲೂ ಬೆಳಗಾವಿಯ ಇತಿಹಾಸ, ಸಂಸ್ಕೃತಿ ಸ್ಫುಟವಾಗಿ ಈ ಮಹಾಪ್ರಬಂಧದ ಮೂಲಕ ಸ್ಪಷ್ಟವಾಗುತ್ತದೆ. ಈ ಪ್ರದೇಶದಲ್ಲಿ ಇನ್ನೂ ಹೆಚ್ಚಿನ ಅಧ್ಯಯನಕ್ಕೆ ಅವಕಾಶಗಳಿವೆ. ಬೆಳಗಾವಿಯ ಪ್ರಾಚೀನ ಇತಿಹಾಸ, ಧರ್ಮ, ಸಮಾಜ, ದೇವಾಲಯಗಳು, ಸಾಹಿತ್ಯ, ಮುದ್ರಣಾಲಯಗಳು, ಪತ್ರಿಕೆಗಳು, ಬೆಳಗಾವಿಯ ಗಲ್ಲಿಗಳು, ರಂಗಭೂಮಿ ಮುಂತಾದವು ಬೆಳಗಾವಿ ನಗರ ಪ್ರದೇಶದ ವ್ಯಾಪ್ತಿಯಲ್ಲಿ ಹೆಚ್ಚಿನ ಅಧ್ಯಯನವನ್ನು ಬಯಸುವ ವಿಷಯಗಳಾಗಿವೆ.

ಬೆಳಗಾವಿ ನಗರವು ಸಾಂಸ್ಕೃತಿಕವಾಗಿ ರೂಪುಗೊಳ್ಳುವಲ್ಲಿ ಅನೇಕ ಹಂತಗಳನ್ನು ದಾಟಿ ಬಂದಿದೆ. ಇಂತಹ ಹಂತಗಳ ಅಧ್ಯಯನದಲ್ಲಿ ಕೇವಲ ಊಹೆಗಳನ್ನು ಆಧರಿಸಿ ಹೊರಟಿಲ್ಲ. ಅದರಲ್ಲಿಯೂ ವಿಶೇಷವಾಗಿ ಬೆಳಗಾವಿಯ ಇತಿಹಾಸಾಧ್ಯಯನದಲ್ಲಿ ಖ್ಯಾತ ಸಂಶೋಧಕರಾದ ಡಾ. ಅ.ಸುಂದರ ಮತ್ತು ಡಾ. ಎಂ. ಬಿ. ನೇಗಿನಹಾಳ ಅವವರ ಬರವಣಿಗೆಗಳು ಸಾಕಷ್ಟು ನೆರವಾಗಿವೆ. ಲಿಖಿತ ಆಧಾರಗಳಲ್ಲದೆ ಮೌಖಿಕ ಪರಂಪರೆಯ ಹೇಳಿಕೆಯನ್ನು ಇಲ್ಲಿ ಉಪಯೋಗಿಸಿಕೊಳ್ಳಲಾಗಿದೆ. ಅದಕ್ಕಾಗಿ ಅನೇಕ ವಕ್ತೃಗಳನ್ನು ಭೆಟ್ಟಿಯಾಗಿ ಅವರ ಸಂದರ್ಶನಗಳನ್ನು ತೆಗೆದುಕೊಂಡು ಸೂಕ್ತ ಸಂದರ್ಭಗಳಲ್ಲಿ ಬಳಸಿಕೊಳ್ಳಲಾಗಿದೆ.

ಸಂಸ್ಕೃತಿಯೆಂಬುದು ನಿತ್ಯ ಪರಿವರ್ತನಶೀಲವಾದುದು. ಹಿಂದಿನ ಬೆಳಗಾವಿಯ ಎಷ್ಟೋ ಚರ್ಯೆಗಳು ಇಂದು ಬದಲಾಗಿವೆ. ಇಂಧಿನವು ಮತ್ತೆ ಬೇರೆ ಸ್ವರೂಪ ಪಡೆಯಬಹುದು. ಹೀಗಾಗಿ ಆಯಾ ಕಾಲಘಟ್ಟದ ಸ್ಮರಣಿಕೆಗಳು ಉಳಿಯಬೇಕೆಂಬ ಉದ್ದೇಶದಿಂದ ಅನೇಕ ಛಾಯಾಚಿತ್ರಗಳನ್ನು ಕಲೆಹಾಕಿ ನಕ್ಷೆಗಳನ್ನು ಬರೆಯಿಸಿ ಅವುಗಳನ್ನು ಸೇರಿಸಲಾಗಿದೆ. ಒಟ್ಟಾರೆ ಬೆಳಗಾವಿಯ ಅಂದು-ಇಂದಿನ ಸಂಸ್ಕೃತಿಯನ್ನು ಕಟ್ಟಿಕೊಡುವಲ್ಲಿ ಎಲ್ಲಾ ನೆಲೆಗಳ ಮೂಲಕ ಪ್ರಯತ್ನಿಸಲಾಗಿದೆ. ಅಂಥದೊಂದು ತೃಪ್ತಿಯನ್ನು ಪ್ರಸ್ತುತ ಲೇಖಕನು ಅನುಭವಿಸಿದ್ದಾನೆ.



# ಅನುಬಂಧ

೧. ಛಾಯಾಚಿತ್ರಗಳು

೨. ನಕ್ಷೆಗಳು

೩. ವಕ್ರಗಳು

೪. ಗ್ರಂಥಋಣ

# ೧. ಛಾಯಾಚಿತ್ರಗಳು

## ವಡಗಾಂವ-ಮಾಧವಪುರ ಉತ್ಖನನದಲ್ಲಿ ದೊರೆತ ಮೃತ್ಪಾತ್ರೆಗಳ ಮೇಲಿನ ಉರುಳು ಮುದ್ರೆ ಚಿತ್ರಗಳು







ವಡಗಾಂವ ಮಾಧವಪುರ ಉತ್ಖನನ (೧೯೮೭-೮೮) : ಮೃತ್ಪಾತ್ರೆಗಳ ಮೇಲಿನ ಉರುಳುಮುದ್ರೆ ಚಿತ್ರಗಳು







ತಾಮ್ರ ಸಿಂಹ ಗಟ್ಟಿಗೊಂಬೆ: ೧) ಎಡ ಪಾರ್ಶ್ವ ನೋಟ ೨) ಮುಂಬದಿ ನೋಟ ೩) ಬಲ ಪಾರ್ಶ್ವ ನೋಟ







ತಾಮ್ರ ಸಿಂಹ ಗಟ್ಟಿಗೊಂಬೆ ೪) ತಲೆಯ ಭಾಗ ೫) ಹಿಂಬದಿ ನೋಟ ೬) ಗೊಂಬೆ ತಳಭಾಗ

# ಉತ್ಖನನದಲ್ಲಿ ದೊರೆತ ಅವಶೇಷಗಳು



ಗಡಿಗೆ ಕಂಟದಲ್ಲಿ ಮುದ್ರಿತವಾದ ಆನೆಗಳ ಚಿತ್ರಗಳು



ಬಾವಿಗಳ ಕಟ್ಟಡ



ವೃತ್ತಾಕಾರದ ಇಟ್ಟಿಗೆ ಬಾವಿಗಳು



ಶಿವನು ಕಾರ್ತಿಕೇಯನ ಪ್ರಾಣವನ್ನು ರಕ್ಷಿಸಲು ಯಮನನ್ನು ಶಿವಕಾಲಿನಿಂದ ಬಡೆಯುವ ದೃಶ್ಯವುಳ್ಳ ಫಲಕ





ಮಣ್ಣಿನ ಗೊಂಬೆಗಳು ೧. ಪ್ರಾಣಿಗಳ ದೃಶ್ಯ. ೨. ಬುದ್ಧ

# ಪುರಾತನ ಬೆಳಗಾವಿ

## (ಕ್ರಿ. ಪೂ. ೨ನೆಯ ಶತಮಾನ)

### ಉತ್ಖನನದಲ್ಲಿ ದೊರೆತ 'ಅವಶೇಷ'ಗಳ ಚಿತ್ರಣವಿದು



ವಾಸದ ಮನೆಯ ಕಟ್ಟಡ



ದಾಳ ಮತ್ತು ಪಗಡೆಕಾಯಿ (ಈಗಲೂ ಬೆಳಗಾವಿಯ ಹಲವೆಡೆ ಪಗಡೆಯಾಟದ ಗಮ್ಮತ್ತಿದೆ ನವರಾತ್ರಿಯಲ್ಲಿ ಮತ್ತೂ ವಿಶೇಷ)



ಇಟ್ಟಿಗೆಯ ವಿಶಿಷ್ಟ ಬಾವಿ. ಒಳಗಿನ ವ್ಯಾಸ ಒಂದು ಮೀಟರ್. ಇಟ್ಟಿಗೆ ಜಂಬಿಟ್ಟಿಗೆಯನ್ನು ನಿರ್ಮಾಣಕ್ಕೆ ಬಳಸಲಾಗಿದೆ. ಬಾವಿ ನೀರು ಕೆಡದಂತೆ ಸುಣ್ಣದ ಕಲ್ಲಿನ ಗಟ್ಟಿ ಹರಳುಗಳನ್ನು ತಾಂತ್ರಿಕವಾಗಿ ತುಂಬಿರುವದು ಕಂಡುಬರುವ ವಿಶೇಷ



ಉಷ್ಣೀಷವುಳ್ಳ ಬುದ್ಧನಂತೆ ಭಾಸವಾಗುವ ಮಣ್ಣಿನ ಟೊಳ್ಳು ಗೊಂಬೆ. (ಕುಶಾನ ಶೈಲಿ.



ಚಲಾವಣೆಯಲ್ಲಿದ್ದ ಮುದ್ರಾಂಕಿತ ನಾಣ್ಯ (ಮೌರ್ಯ- ಶಾತವಾಹನ ಕಾಲ)



ಶಾತವಾಹನ ಅರಸು 'ವಾಸಿರಿ ಪುತ' (ವಾಸಿಷ್ಠಿ ಪುತ್ರ)ನ ನಾಣ್ಯ



ಧಾನ್ಯದ ಕಣಜಗಳು. ಒಂದು ಕಣಜದಲ್ಲಿ ಒಂದು ಕಿಲೋ ಮಾಸಿದ ಬಣ್ಣದ ಅಕ್ಕಿ (?) ದೊರಕಿತ್ತು



ಬಸವಣ್ಣ ದೇವಸ್ಥಾನ



ಮಾರುತಿ ದೇವಸ್ಥಾನ



ಸೂರ್ಯ ದೇವಸ್ಥಾನ



ವೀರಭದ್ರೇಶ್ವರ ದೇವಸ್ಥಾನ




ಜಿಹ್ವೇಶ್ವರ ದೇವಸ್ಥಾನ



ರಾಧಾಕೃಷ್ಣ ಮಂದಿರ



ವಿಷ್ಣು ದೇವಸ್ಥಾನ



ಕುಂತಿ ಮೂರ್ತಿ



ಕಮಲ ಬಸದಿ



ಕಮಲದ ಕೆತ್ತನೆ, ಕಮಲ ಬಸದಿ



ಯಕ್ಷಿಣಿ ಬಸದಿ, ಕೋಟೆ ಆವರಣ

ಚಂದ್ರಪ್ರಭ ಬಸದಿ





ಅಶ್ವತ್ಥಾಮ ದೇವಸ್ಥಾನ



ಶಿವದೇವಾಲಯ, ಕೋಟೆ ಆವರಣ




ಕಾರಂಜಿಮಠ (ನೂತನ ಕಟ್ಟಡ), ಶಿವಬಸವನಗರ



ಶಿವಬಸವಸ್ವಾಮಿಗಳ ಗದ್ದುಗೆ



ಹಜರತ್ ಸಯ್ಯದೀನ್ ಮಸೀದಿ, ಕೋಟೆ ಆವರಣ



ಅಸದಖಾನ ದರ್ಗಾ



ಪೊಲೀಸ್ ಹೆಡ್ ಕ್ವಾಟರ್ಸ್‌ದಲ್ಲಿಯ ಮಸೀದಿ



ಅಸದಖಾನ್ ಮಸೀದಿ



ಲಕ್ಷ್ಮಿ ದೇವಾಲಯ



ಚರ್ಚ, ಕ್ಯಾಂಪ್ ಆವರಣ



ಕ್ಯಾಂಪ್ ಪ್ರದೇಶದ ಚರ್ಚ



ಸಾರ್ವಜನಿಕ ಗ್ರಂಥಾಲಯ



ಮಿಲಟರಿ ಮಹಾದೇವ




ದುರ್ಗಾದೇವಿ ದೇವಸ್ಥಾನ



ಬೆನಸ್ಮಿತ್ ಕಾಲೇಜು



ಸರ್ಕಾರಿ ಬಿ.ಎಡ್. ಕಾಲೇಜು



ಚಿಂತಾಮಣಿರಾವ್ ಕಾಲೇಜು, ಶಹಾಪೂರ



ಜಿ.ಎ. ಪದವಿಪೂರ್ವ ಕಾಲೇಜು



ಜಿಲ್ಲಾ ಆಸ್ಪತ್ರೆ



ರಾಣಿ ಚನ್ನಮ್ಮ ವಿಶ್ವವಿದ್ಯಾಲಯ



ಕುಮಾರ ಗಂಧರ್ವ ಸಭಾಭವನ


ಲಿಂಗರಾಜ ಕಾಲೇಜು


ಆರ್. ಎಲ್.ಎಸ್. ಕಾಲೇಜು


ಆರ್.ಪಿ.ಡಿ. ಕಾಲೇಜು



ಜ್ಯೋತಿ ಕಾಲೇಜು




ಎಸ್. ಜಿ. ಬಾಳೇಕುಂದ್ರಿ ಇಂಜನೀಯರಿಂಗ್ ಕಾಲೇಜು, ನಾಗನೂರು ರುದ್ರಾಕ್ಷಿಮಠ




ಮರಾಠಾಮಂಡಲ ಕಾಲೇಜು



ಬೆಳಗಾವಿ ಕಾಂಗ್ರೆಸ್ ಅಧಿವೇಶನಕ್ಕೆ ಆಗಮಿಸುತ್ತಿರುವ ಗಾಂಧೀಜಿ



ರೈಲು ನಿಲ್ದಾಣದಿಂದ ಬೆಳಗಾವಿ ಅಧಿವೇಶನ ಸ್ಥಳಕ್ಕೆ ಗಾಂಧೀಜಿ ಆಗಮನ



ಬೆಳಗಾವಿ ಅಧಿವೇಶನದಲ್ಲಿ ಅಧ್ಯಕ್ಷೀಯ ಭಾಷಣ ನೀಡುತ್ತಿರುವ ಗಾಂಧೀಜಿ




ಕೆ.ಎಲ್.ಇ. ಸಂಸ್ಥೆಯ ಪ್ರಧಾನ ಕಛೇರಿ




ಮಹಾನಗರ ಪಾಲಿಕೆ ಕಾರ್ಯಾಲಯ (ನೂತನ)



ಗಾಂಧೀ ಸ್ಮಾರಕ, ಶಹಪೂರ



ಪ್ರಾದೇಶಿಕ ಆಯುಕ್ತರ ಕಛೇರಿ



ಚೆನ್ನಮ್ಮ ವೃತ್ತ



ಕೆ.ಎಲ್.ಇ. ಆಸ್ಪತ್ರೆ




ಪ್ರಸಾದ ನಿಲಯದ ವಿದ್ಯಾರ್ಥಿಗಳು (೧೯೪೦)

# ೨. ನಕ್ಷೆಗಳು


BELGAUM CITY MAP
TRUCK TERMINALS
KAKATI
MUTTEHATTI
ALUMINIUM FACT
BASAVANKOLLA
DEFENCE AREA
KANABARGI
RACE COURSE
CANTONMENT BOARD
FORT AREA
MUDACHI
MANDOLI
OLD BELGAUM
ALARWAD
TO BANGALORE
HALAGA
0
2.5
5
Kilometers
District NRDMS Centre,
O/o the Dy. Commissioner,
Belgaum

# ಬ್ರಿಟಿಷ್ ಕರ್ನಾಟಕ ಮತ್ತು ಸಂಸ್ಥಾನಗಳು



## ೩. ವಕ್ತೃಗಳು

೧. ಪೂಜ್ಯ ಶ್ರೀ ಸಿದ್ಧರಾಮ ಸ್ವಾಮಿಗಳು

೨. ನಾಡೋಜ ಏಣಗಿ ಬಾಳಪ್ಪ

೩. ಶ್ರೀ ಸಿದ್ಧನಗೌಡ ಪಾಟೀಲ

೪. ಶ್ರೀ ರಾಮಬಾವು ವಿಜಾಪುರ

೫. ಶ್ರೀ ವ್ಹಿ.ಸಿ. ಮಾಲಗತ್ತಿ

೬. ಡಾ. ಎಸ್. ಆರ್. ಗುಂಜಾಳ

೭. ಪ್ರೊ. ಬಿ.ಎಸ್. ಗವಿಮಠ

೮. ಡಾ. ರಾಮಕೃಷ್ಣ ಮರಾಠೆ

೧೦. ಡಾ. ಎಂ. ಎಸ್. ಇಂಚಲ

೧೧. ಡಾ. ಬಸವರಾಜ ಜಗಜಂಪಿ

೧೨. ಬೆಳಗಾವಿ ದೇವಾಲಯಗಳ ಅರ್ಚಕರು

೧೩. ಮರಾಠಿ ಹಿರಿಯ ನಾಗರಿಕರು

೧೪. ಕನ್ನಡ ಹಿರಿಯ ನಾಗರಿಕರು

೧೫. ಪ್ರಮುಖ ಜ್ಯೋತಿಷ್ಯಗಾರರು

೧೬. ಪ್ರಮುಖ ಕಲಾವಿದರು

೧೭. ಧಾರ್ಮಿಕ ಮುಖಂಡರು

೧೮. ಕನ್ನಡ ಮತ್ತು ಮರಾಠಿ ಸಂಘ-ಸಂಸ್ಥೆಗಳ ಪದಾಧಿಕಾರಿಗಳು

೧೯. ವಿದ್ಯಾಸಂಸ್ಥೆಯ ಪ್ರಾಚಾರ್ಯರು

೨೦. ಹೊಟೇಲ್ ಮಾಲಿಕರು

೨೧. ಶಹಪೂರ, ವಡಗಾವಿ, ಖಾಸಭಾಗ ಪ್ರದೇಶದ ನೇಕಾರರು

೨೨. ಟ್ರಕ್ ಬಾಡಿ ನಿರ್ಮಾಣ ಗ್ಯಾರೇಜಗಳ ಕಾರ್ಮಿಕರು

೨೩. ಸ್ವಿಟ್ ಮಾರ್ಟ ಅಂಗಡಿ ಮಾಲಿಕರು

೨೪. ಪ್ರಮುಖ ವರ್ತಕರು

೨೫. ವಿಠಲ ಹೆಗಡೆ ಹೊಟೇಲ ಉದ್ಯಮಿ

೨೬. ಪಿ. ವಿಜಯ ಕುಮಾರ, ಪತ್ರಕರ್ತ

೨೭. ಬ. ಗಂ. ಎಳುಕೋಟಿ, ಪತ್ರಕರ್ತ

೨೮. ಮಹಾಂತೇಶ ಗದ್ದಿಹಳ್ಳಿಶೆಟ್ಟಿ, ಪತ್ರಕರ್ತ

೨೯. ಆರ್. ಎಲ್. ಚಿಕ್ಕಮಠ, ಪತ್ರಕರ್ತ

೩೦. ಅನಿಲ ಪೋತದಾರ, ಕನ್ನಡ ದುರೀಣರು ಹಾಗೂ ವ್ಯಾಪಾರಿಗಳು

೩೧. ಮಲ್ಲಿಕಾರ್ಜುನ ಹಿಡದುಗ್ಗಿ, ವ್ಯಾಪಾರಸ್ಥರು



